R. N. B. 2554

# ಶಿವಾನುಭವ.

(ಮಾಸಪತ್ರಿಕೆ.)

ಸಂಪುಟ ೫.] [ಸಂಚಿಕೆ ೧.



ಏಪ್ರೀಲ ೧೯೩೦] ವಿಜಾಪುರ. [ಚೈತ್ರ ೧೮೫೨

ವಾ. ಚ. ೪ ರೂ. ೪ ಆ.

# ವಿಷಯಾನುಕ್ರಮಣಿಕೆ.


| ವಿಷಯ | ಲೇಖಕರಹೆಸರು | ಪುಟ |
|---|---|---|
| ೧. ವೀರಶೈವ ವರ್ಣಾಶ್ರಮ ವಿಚಾರವು. | ಶಿವಸುತ | ೧-೧೪ |
| ೨. ಚಿಲ್ಲಿಂಗ ಪೂಜೆ. | ರಾ. ರಾ. ಹಾಲಪ್ಪ | |
| ೩. ಲಿಂಗಪೂಜಾಕ್ರಮ | | ೧೫-೧೭ |
| ೪. ಕೈ. ವಾ. ಚನ್ನಬಸವಪ್ಪ ಬಸಲಿಂಗಪ್ಪ ಧಾರವಾಡ ಇವರ ಚರಿತ್ರೆಯು. | ಸಂಪಾದಕರು | ೯-೨೪ |
| ೫. ಶಿವಾನುಭವಸೂತ್ರ | | ೬೩-೬೪ |


## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಪ್ರಯತ್ನಿಸುವ ಮೋಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪ಆ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಲೇಖಗಳನ್ನು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ತೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

# ಶಿವಾನುಭವ.

ವರ್ಷ ೫ ] ಎಪ್ರೇಲ ೧೯೩೦ [ ಸಂಚಿಕೆ ೧

## ವೀರಶೈವ ವರ್ಣಾಶ್ರಮ ವಿಚಾರವು.

ಲೇಖಕಃ— " ಶಿವಸುತ "

(೧೨ ನೇ ಸಂಚಿಕೆಯಿಂದ ಮುಂದೆ ಸಾಗಿದ್ದು)

ಆರ್ಯರು ನಿರಂತರವೂ ಈ ದೇಶದ ಪೂರ್ವನಿವಾಸಿಗಳೊಡನೆ ಹೋರಾಡುವ ಪ್ರಸಂಗಗಳು ಬರುತ್ತಿದ್ದವಾದಕಾರಣ ಶತ್ರುಗಳನ್ನೆದುರಿಸಲು ಯುದ್ಧಕಲೆಯಲ್ಲಿ ನಿಪುಣತೆಯನ್ನು ಹೊಂದಿದವರು ಬೇಕಾಯಿತು. ಅಂಥವರು ಬೇರೆ ಯಾವ ವ್ಯಾಸಂಗಕ್ಕೆ ಹೋಗದೇ ಶತ್ರುಗಳನ್ನು ಓಡಿಸುವುದೇ ತಮ್ಮ ಕಾಯಕವಾಗಿ ಇಟ್ಟುಕೊಳ್ಳಬೇಕಾಯಿತು. ಇದಲ್ಲದೆ ಆಹಾರ ಸಾಮಗ್ರಿಗಳನ್ನು ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಸಾಗಿಸಲು ಬೇರೊಂದು ಜನಾಂಗವು ಬೇಕಾಯಿತು. ಮನೆಯ ಯಜಮಾನನು ತನ್ನ ಮನೆಯವರ ಪರವಾಗಿ ಆಚರಿಸುತ್ತಲಿದ್ದ ಧರ್ಮಸಂಬಂಧ ಕಾರ್ಯಗಳನ್ನೂ ಇಡೀ ಸಮಾಜದ ಪರವಾಗಿ ಆಚರಿಸಲು ಬೇರೊಂದು ಜನಾಂಗವು ಏರ್ಪಟ್ಟಿತು. ಹೀಗೆ ಸಮಾಜದಲ್ಲಿ ಮೂರು ವರ್ಗಗಳಾದವಾಗಲಿ ಇವುಗಳಲ್ಲಿ ಪರಸ್ಪರ ವಿವಾಹಸಂಬಂಧಗಳು ನಡೆಯುತ್ತಲೇ ಇದ್ದವು. ಈ ಮೂರು ಜನಾಂಗದವರಿಗೂ ದ್ವಿಜರೆಂಬ ನಾಮವು ಈಗಲೂ ವ್ಯವಹರಿಸಲ್ಪಡುತ್ತಿದೆ. ಈ ಮೂರು ವರ್ಗಗಳಲ್ಲಿ ಪರಸ್ಪರ ಭೇದವು ಅಷ್ಟೊಂದು ಒಡೆದುಕಾಣಿಸುವದಿಲ್ಲ. ಆದರೆ ಶೂದ್ರವರ್ಗದವರಿಗೂ ಮೇಲ್ಕಂಡ ಮೂರು ವರ್ಗದವರಿಗೂ ಇರುವ ಭೇದವನ್ನು ನೋಡಿದರೆ ಮತ್ತು ಮೇಲ್ಕಂಡ ಮೂರು ವರ್ಗದವರು ಶೂದ್ರರನ್ನು ಗುಲಾಮರಂತೆ ಕಾಣುತಿದ್ದುದು ವಿಚಾರಿಸಿದರೆ ಶೂದ್ರ ವರ್ಗದವರು ಅನಾರ್ಯ

ಜನಾಂಗಕ್ಕೆ ಸೇರಿದವರಿದ್ದು ಯುದ್ಧದ ಖೈದಿಗಳಾಗಿ ಆರ್ಯರ ಕೈಗಳಲ್ಲಿ ಸಿಲುಕಿದವರೆಂದು ಊಹಿಸುವುದಕ್ಕೆ ಅವಕಾಶವಿರುತ್ತದೆ. ವರ್ಣವಿಭಾಗವು ಮೊಟ್ಟಮೊದಲು ಏರ್ಪಾಟಾಗಿದ್ದು ಕರ್ಮವಿಭಾಗತ್ವವನ್ನನುಸರಿಸಿಯೇ ಎಂದು ಚರಿತ್ರಕಾರರ ಅಭಿಪ್ರಾಯವು. ಈ ವರ್ಣವಿಭಾಗದ ಕಟ್ಟು ಬರಬರುತ್ತಾ ಬ್ರಾಹ್ಮಣಕ ಮತ್ತು ಸ್ಮೃತಿಯುಗಗಳಲ್ಲಿ ಬಿಗಿಯಾಗುತ್ತಾ ಬಂದು ಸ್ಮೃತಿಕಾಲದಲ್ಲಿ ಈಗ ಹಿಂದೂಧರ್ಮಕ್ಕೆ ಯಾವಾಗಲೂ ಹೋಗದ ಜಿಡ್ಡಿನಂತೆ ಹತ್ತಿಕೊಂಡಿರುವ ವರ್ಣಾಶ್ರಮ ವ್ಯವಸ್ಥೆಯು ಏರ್ಪಾಟಾಯಿತು. ಈ ವ್ಯವಸ್ಥೆಗೆ ಮನುಷ್ಯನ ಜನ್ಯಗುಣವಾದ ಸ್ವಾರ್ಥ ಪರಾಯಣತೆಯೇ ಅಸ್ತಿಭಾರವೆಂದು ಬೇರೆ ಹೇಳಬೇಕಾಗಿಲ್ಲ. ಹೀಗೆ ವರ್ಣಾಶ್ರಮ ಧರ್ಮವು ಪೂರ್ತಿಸ್ಮೃತಿಧರ್ಮವಾಗಿರುತ್ತದಾಗಲ ವೇದಧರ್ಮವಿಲ್ಲ. ಸ್ಮೃತಿಗಳು ವೇದಗಳಂತೆ ಸರ್ವ ಮಾನ್ಯಗಳಲ್ಲ ಸ್ಮೃತಿಧರ್ಮವು ಸನಾತನ ಹಿಂದೂಧರ್ಮ ಮಹಾವೃಕ್ಷದಲ್ಲಿ ಒಂದಾನೊಂದು ಶಾಖೆಯಾಗಲಿ ಇಡೀ ವೃಕ್ಷವೇ ಅಲ್ಲಿ ಆದಕಾರಣ ವರ್ಣಾಶ್ರಮ ಧರ್ಮವು ಹಿಂದೂ ಮತದ ಮುಖ್ಯ ಗುರುತಲ್ಲ. ಹಿಂದೂಧರ್ಮದ ಕೆಲವು ಮಾತ್ರ ಅನುಯಾಯಿಗಳು ಆಚರಿಸುವ ಧರ್ಮವು. ಈಗಿನ ಕಾಲದಲ್ಲಿ "ಹಿಂದೂ" ಅಂದರೆ ನೀವು ಯಾವ ವರ್ಣಕ್ಕೆ ಸೇರಿದವರೆಂದು ಕೇಳುವ ರೂಢಿ ಇರುವುದು. ಇದಕ್ಕೆ ಹಿಂದುಗಳೆಂದರೆ ವರ್ಣಾಶ್ರಮ ಧರ್ಮಾವಲಂಬಿಗಳೆಂಬ ಭ್ರಮೆಯೇ ಕಾರಣವಾಗಲಿ ಬೇರೆಯಿಲ್ಲ.

ಹಿಂದೂಗಳೆಂದರೆ ಯಾರು? ಹಿಂದೂ ಶಬ್ದ ನಿರ್ವಚನವು ಇದುವರಿವಿಗೂ ಯಾರಿಂದಲೂ ಸಮರ್ಪಕವಾಗಿ ಮಾಡಲ್ಪಟ್ಟಿಲ್ಲ. ಓರ್ವ ಕ್ರೈಸ್ತ ಅಥವಾ ಮಹಮ್ಮದೀಯ ಅಥವಾ ಬೌದ್ಧ ಇವರ ಬಗ್ಗೆ ಕೆಲವು ಮುಖ್ಯ ಹೆಗ್ಗುರುತುಗಳ ಮೇಲೆ ಜಾತಿನಿರ್ಣಯವನ್ನು ಮಾಡುವುದು ಸಾಧ್ಯ. ಆದರೆ ಹಿಂದುವಿನ ಬಗ್ಗೆ ಸಾಧ್ಯವಿಲ್ಲ. ಮತಾಂತರಹೊಂದಿದವನನ್ನು ಬಹಿಷ್ಕರಿಸುವವನೇ ಹಿಂದೂವೆಂದು ಸರ್ಕಾರ ಶಾಸ್ತ್ರಿಗಳ ಅಭಿಪ್ರಾಯವು. "ಪ್ರಾಪ್ತ ವಯಸ್ಕನಾಗಿದ್ದು ಸಂಸ್ಕೃತದ ವೇದಗಳು ದೋಷಾತೀತವಾದ ಭಗವತ್ಪ್ರಣೀತಜ್ಞಾನವೆಂದು ನಂಬತಕ್ಕವನು ಹಿಂದೂ" ಎಂದು ಸರ್ ಶಂಕರನಾಯರವರು ಪ್ರತಿಪಾದಿಸಿರುತ್ತಾರೆ. "ದೇವರ ಅಸ್ತಿತ್ವವನ್ನು ನಂಬುವವನೂ ಗೋವನ್ನು ಪೂಜಿಸುವವನೂ ಹಿಂದೂವೆಂದು ದೇಶೀಯ ಮುಖಂಡರೊಬ್ಬರು ಅಭಿಪ್ರಾಯಪಡುತ್ತಾರೆ. ಪ್ರೀವಿಕೌನ್ಸಿಲದವರು [ಅಬ್ರಹಾಂ ವಿರುದ್ಧ ಅಬ್ರಹಾಂ] ಎಂಬುವ ಖಟ್ಲೆಯಲ್ಲಿ ಹಿಂದೂ

ಜಾತಿಯಲ್ಲಿ ಹುಟ್ಟಿ ಹಿಂದೂಧರ್ಮವನ್ನವಲಂಬಿಸುವವನೇ ಹಿಂದೂವೆಂದು ಒಂದು ನಿರ್ಣಯವನ್ನು ಕೊಟ್ಟಿರುತ್ತಾರೆ. ಕ್ರಿಶ್ಚಿಯನರಿಗೆ ಬೈಬಲ್ ಮತ್ತು ಮುಸಲ್ಮಾನರಿಗೆ ಖುರಾನ್ ಇವುಗಳು ಮುಖ್ಯ ಗ್ರಂಥಗಳಾಗಿರುವಂತೆ ಹಿಂದೂ ಧರ್ಮಕ್ಕೆಲ್ಲ ಒಂದೇ ಒಂದು ಆಧಾರ ಗ್ರಂಥವೆನ್ನಿಸಿಕೊಳ್ಳುವದು ಇಲ್ಲ. ಹಿಂದೂಶಾಸ್ತ್ರಗಳಲ್ಲಿ ಮುಖ್ಯವಾಗಿ ವೇದಗಳು, ಆಗಮಗಳು, ಉಪನಿಷತ್ತುಗಳು, ಸ್ಮೃತಿಗಳು, ದರ್ಶನಗಳು, ಸೂತ್ರಗಳು, ಭಾಷ್ಯಗಳು, ಪುರಾಣೇತಿಹಾಸಗಳು ಮುಂತಾಗಿ ಹಲವು ಗ್ರಂಥಗಳಿರುವವು. ಈ ಗ್ರಂಥ ರಾಸಿಗೆ ಕೇಂದ್ರಪ್ರಾಯವಾದ ಗ್ರಂಥಗಳಾವವು? ಅಂಥ ಗ್ರಂಥಗಳ ಮೂಲಪಾಠವಾವುದು? ಎಂದು ತಿಳಿಯುವದು ಅಸಾಧ್ಯವಾಗಿದೆ. ಈ ಬಗ್ಗೆ ಶ್ರೀಮ ಅ. ದೊರೆಸ್ವಾಮಿ ಅಯಂಗಾರ ಎಂ. ಎ. ಬಿ. ಎಲ್ ಮೈಸೂರ ಇವರ ಅಭಿಪ್ರಾಯವು ಹೀಗಿರುತ್ತದೆ. ಹಿಂದೂಶಾಸ್ತ್ರವನ್ನು ಮರ್ಯಾದಿಸುವ ಚರ್ಯೆಯು ಅತಿ ಭಿನ್ನವಾಗಿಯೂ ಪರಸ್ಪರ ವಿರುದ್ಧವಾಗಿಯೂ ಸಂದೇಹಕರವಾಗಿಯೂ ತೊಡಕಾಗಿಯೂ ಇರುವದು. ಇದು ಹಿಂದೂತ್ವಕ್ಕೆ ತಕ್ಕ ಆಧಾರ ಲಕ್ಷಣವೆಂದು ಭಾವಿಸುವದು ಸೂಕ್ತವಾಗಿಲ್ಲ.

ಹಿಂದೂಧರ್ಮವು ಅನೇಕ ಶಾಖೋಪಶಾಖೆಗಳನ್ನೊಳಕೊಂಡಿದ್ದು ಅದರ ಮುಖ್ಯ ಲಕ್ಷಣವಿಂಥಾದ್ದೇಯೆಂದು ಹೇಳುವದು ಸಾಧ್ಯವಿಲ್ಲ. ಆದಕಾರಣ ಸ್ಮೃತಿಗೌರವವು ವರ್ಣಾಶ್ರಮ ಧರ್ಮಾವಲಂಬನೆಯು ಇವೆರಡೂ ಪ್ರತಿಯೊಬ್ಬ ಹಿಂದೂವಿಗೆ ಮಾನ್ಯವೆಂದು ತರ್ಕಿಸುವದು ಸಾಧುವಲ್ಲ. ಆಗಮ ವಾಙ್ಮಯದಲ್ಲಿ ಅತ್ಯಂತ ನಿಷ್ಣಾತರೂ ಶೈವಸಿದ್ಧಾಂತದ ಮೇಲೆ ಅನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾದವರೂ ಆದ ಪ್ರೊಫೆಸರ್ ಕೆ. ಸುಬ್ರಹ್ಮಣ್ಯಂ ಎಂ. ಎ. ಎಂ. ಎಲ್, ಟಾಗೂರು ಲಾ. ಪ್ರೊಫೆಸರ್ ಮದರಾಸು ಇವರು ವೀರಶೈವ ಧರ್ಮ ಎಂಬ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುತ್ತಾ ಇದೇ ವಿಷಯವಾಗಿ ಹೀಗೆಂದು ಅಭಿಪ್ರಾಯಪಟ್ಟಿರುತ್ತಾರೆ.

It should be borne in mind that Hinduism is not a single religion but a conglomeration of various creeds of which the Vernashramic creed of the Smritis is one. Saivism, Veerashaivism, Vaishnavism, Smartism and Madhwaism are distinct religions in South India each with its own social organisation. In ignorance of this act

the tendency of the courts of law has been to take into account only the Smartaic view of caste and relegate to the catagory of Shudras members of such of the Hindu cosmopolitan creeds as do not countenance superiority based on birth'

(ಸನಾತನವಾದ ಹಿಂದೂಧರ್ಮವು ಒಂದೇ ಮತವುಳ್ಳದ್ದಲ್ಲವೆಂಬುದನ್ನು ನಾವು ಮರೆಯಬಾರದು. ಅನೇಕ ಮತಗಳನ್ನೊಳಕೊಂಡಿದೆ. ಅನುಗಳ ಪೈಕಿ ಸ್ಮೃತಿಪ್ರತಿಪಾದಿತವಾದ ವರ್ಣಾಶ್ರಮ ಧರ್ಮವೊಂದಾಗಿದೆ ಶೈವ, ವೀರಶೈವ, ಸ್ಮಾರ್ತ, ಮಾಧ್ವ ಮುಂತಾದವುಗಳು ದಕ್ಷಿಣ ಹಿಂದುಸ್ಥಾನದಲ್ಲಿ ಸ್ವತಂತ್ರ ಧರ್ಮಗಳಿರುತ್ತವೆ. ಒಂದೊಂದಕ್ಕೆ ಒಂದೊಂದು ವಿಧವಾದ ಸಾಮಾಜಿಕ ಸಂಘಟನೆಯಿರುತ್ತದೆ. ಇದನ್ನರಿಯದೆ ಕೋರ್ಟುಗಳಲ್ಲಿ ಸ್ಮೃತ್ಯುಕ್ತವಾದ ವರ್ಣಾಶ್ರಮ ಧರ್ಮವನ್ನೇ ಹಿಂದೂಧರ್ಮದ ಹೆಗ್ಗುರುತನ್ನಾಗಿಟ್ಟುಕೊಂಡು ಜನ್ಮದಿಂದಲೇ ಜಾತಿಭೇದವೆಂಬುದನ್ನು ಒಪ್ಪದೇ ಈಗಿನ ಉದಾರಮತದವರನ್ನು ಶೂದ್ರ ವರ್ಣಕ್ಕೆ ಸೇರಿಸುವದು ನಡೆದಿದೆ.) ಇದೇ ಅಭಿಪ್ರಾಯವನ್ನೇ ಆಗಮ ವಾಙ್ಮಯದ ಮೇಲೆ ಅನೇಕಾನೇಕ ಗ್ರಂಥಗಳನ್ನು ಬರೆದು ಪ್ರಸಿದ್ಧರಾಗಿ ಹೋದ ಕೈ. ವಾ. ನಲ್ಲಿಸ್ವಾಮಿ ಎಳ್ಳೆಯವರು ಸಮರ್ಥಿಸಿರುತ್ತಾರೆ.

ವರ್ಣವಿಭಾಗವೂ ಶಿವಾಗಮಗಳೂ :— ಶಿವಾಗಮ ವಾಙ್ಮಯದಲ್ಲಿ ಈಗೀಗ ಅರಾಜಕತ್ವವಿರುತ್ತದೆ. ಯಾರ ಬಾಯಲ್ಲಿ ನೋಡಿದರೂ ಯಾವ ಗ್ರಂಥಗಳಲ್ಲಿ ನೋಡಿದರೂ ಶಿವಾಗಮ ಶ್ಲೋಕಗಳೇ ತುಂಬಿರುತ್ತವೆ. ಆದರೆ ಇವು ನಿಜವಾಗಿ ಆಗಮಶ್ಲೋಕಗಳು ಹೌದೋ ಅಲ್ಲವೋ ಎಂಬುದನ್ನು ನಿರ್ಣಯಿಸುವದು ಕಷ್ಟಸಾಧ್ಯವಾಗಿದೆ. ಇದಕ್ಕೆ ಕಾರಣವೆಂದರೆ ಶಂಕರಾಚಾರ್ಯರ ಕಾಲದಿಂದ ಸ್ಮೃತಿಗಳ ಪ್ರಾಬಲ್ಯವು ಹೆಚ್ಚಾಗಿ ಆಗಮಗಳ ಪ್ರಸಾರವು ಕಡಿಮೆಯಾಗುತ್ತಾ ಬಂದು ಮೂಲ ಆಗಮ ಗ್ರಂಥಗಳು ಸಿಗುವುದೇ ದುರ್ಲಭವಾಗುತ್ತಾ ಬಂದಿತು. ಕಾಲ ಪುರುಷನ ಅವಾಂತರವನ್ನು ಸಹಿಸಿಕೊಂಡು ಇದುವರಿವಿಗೂ ಜೀವ ಹಿಡಿದುಕೊಂಡು ಬಂದ ಗ್ರಂಥಗಳು ಸಹಾ ನಿಶ್ಶೇಷವಾಗಲಿಕ್ಕೆಹತ್ತಿವೆ. ನಮ್ಮಗಳ ಅದೇ ತಕ್ಕ ಇಡೀ ಭರತಖಂಡದ ದೌರ್ಭಾಗ್ಯ ಕಾರಣವಾಗಿ ವೇದಗಳಂತೆ ಸನಾತನವಾದ ಈ ಗ್ರಂಥಗಳನ್ನು ಸಂಗ್ರಹಿಸಿ ಯಥಾರೂಪವಾಗಿ ಮುದ್ರಣಗೊಳಿಸುವ ಪುಣ್ಯವನ್ನು ಯಾರು ಕಟ್ಟಿಕೊಂಡವರಾಗಲಿಲ್ಲ. ಆದ ಕಾರಣ ಎಲ್ಲಾದ

ರೊಂದು ಆಗಮ ಶ್ಲೋಕವೆಂದು ಕೇಳಬಂದರೆ ಅದು ನಿಜವಾಗಿ ಆಗಮೋಕ್ತವು ಹೌದೋ ಅಲ್ಲವೋ ಎಂಬ ಸಂಶಯವು ಜನಿಸುವುದು ಸ್ವಾಭಾವಿಕವು. ಮದ್ರಾಸು ಓರಿಯಂಟಲ್ ಲೈಬ್ರರಿಯಲ್ಲಿ ಶಿಥಿಲವಾದ ಕೆಲ ಆಗಮಗಳ ಮೂಲಪ್ರತಿಗಳಿರುತ್ತವೆ. ಲೇಖಕನು ಹಲವು ಸಲ ಸದ್ಯ ಆಗಮ ಶ್ಲೋಕಗಳೆಂದು ವ್ಯವಹರಿಸಲ್ಪಡುತ್ತಿರುವ ಕೆಲವು ಶ್ಲೋಕಗಳ ಬಗ್ಗೆ ಶೋಧ ಮಾಡಿ ನೋಡಿರುತ್ತಾನೆ. ಮೇಲ್ಕಂಡ ಸಂಶಯವು ಬಲಪಟ್ಟಿರುತ್ತದೆ. ಹೇಗೆ ಇರಲಿ.

ವರ್ಣಾಶ್ರಮ ಪ್ರತಿಪಾದಕ ಸ್ಮೃತಿಗಳಿಗೂ ಶಿವಾಗಮಗಳಿಗೂ ಪೂರ್ವ ಪಶ್ಚಿಮಗಳಿಗಿರುವಷ್ಟು ಅಂತರವಿರುತ್ತದೆಂದು ಧಾರಾಳವಾಗಿ ಹೇಳಬಹುದು :— ಸ್ಮೃತಿಗಳು ಬ್ರಾಹ್ಮಣಕಗಳು ಪ್ರಕೃತಿ ಸಂಬಂಧವಾದ ಉಪಾಧಿಗೆ ಒಳಪಟ್ಟವುಗಳಾಗಿ ಪ್ರಾಕೃತರ ನಿಯಮಗಳಾದ ವರ್ಣಾಶ್ರಮ ಭೇದ ಯಜ್ಞ ಯಾಗಾದಿಗಳು ಷಟ್ಕರ್ಮಗಳು ವ್ರತನಿಯಮೋಪಾಸಗಳು ಇತ್ಯಾದಿಗಳನ್ನು ಪ್ರತಿಪಾದಿಸುತ್ತಾಬಂದಿವೆ ಪ್ರಕೃತಿಯ ಹಂಗನ್ನೇ ತೊರೆದು ಅಪ್ರಾಕೃತ ಸಿದ್ಧಾಂತವನ್ನು ಸಾರುವ ಆಗಮಗಳು ಉಪನಿಷತ್ತುಗಳು ಪ್ರತಿಪಾದಿಸುವ ಧರ್ಮವು ವರ್ಣಾಶ್ರಮ ವಿಭಾಗಕ್ಕೆ ಅತೀತವಾಗಿರುತ್ತದೆ. ಆಗಮಗಳೂ ಉಪನಿಷತ್ತುಗಳೂ ತತ್ವ ದೃಷ್ಟಿಯಿಂದ ಒಂದೇ ವರ್ಗಕ್ಕೆ ಸೇರಿದವುಗಳಾಗಿರುತ್ತವೆ. ಒಂದೇ ವಿಶಾಲ ದೃಷ್ಟಿಯುಳ್ಳವುಗಳಾಗಿರುತ್ತವೆ. ಯಜ್ಞ ಯಾಗಾದಿಗಳನ್ನು ಖಂಡಿಸುವದರಲ್ಲಿ ಒಂದೇ ಬೇರಿನಿನಾದವನ್ನು ದೂಡಿರುತ್ತವೆ. ಬಹುಶಃ ಒಂದೇ ಕಾಲದಲ್ಲಿ ಹುಟ್ಟಿರಬಹುದಾಗಿ ಊಹಿಸಬಹುದು. ಶ್ರೀ ವಿ ವಿ. ರಮಣ ಶಾಸ್ತ್ರಿಗಳು ಪಿ. ಹೆಚ್ ಡಿ ಯವರು ಆಗಮ ವಾಙ್ಮಯದ ವಿಷಯವಾಗಿ ಬರೆಯುತ್ತಾ

The Agamas contend that they constitute the truest exigesis of the Vedas and their origins are certainly as ancient as those of the classical Upanishads
The higher interpretation put upon the sacrificial act in many of the Upanishads are to be found in Agamas
The Agamas have branched out from the same stem of the Vedic tree that produced the earlier Upanishads and were at one time as wide spread in India as the Upanishads themselves."

ಆಗಮಗಳು ತಾವು ವೇದಗಳ ತಿರುಳೆಂದು ವಾದಿಸುತ್ತವೆ. ಅವು ಮುಖ್ಯ ಉಪನಿಷತ್ತುಗಳಷ್ಟೇ ಸನಾತನವಾದವುಗಳು ಉಪನಿಷತ್ತುಗಳಂತೆ ಆಗಮ ಗಳು ಯಜ್ಞಕ್ಕೆ ಪಾರಮಾರ್ಥಿಕ ರೂಪವನ್ನು ಕೊಟ್ಟಿರುತ್ತವೆ. ವೇದ ವೃಕ್ಷದ ಒಂದೇ ಶಾಖೆಯಿಂದ ಪೂರ್ವದ ಉಪನಿಷತ್ತುಗಳು ಆಗಮುಗಳೂ ಹುಟ್ಟಿರುತ್ತವೆ. ಉಪನಿಷತ್ತುಗಳಂತೆ ಆಗಮುಗಳು ಸಹಾ ಒಂದಾನೊಂದು ಕಾಲದಲ್ಲಿ ಭರತಖಂಡದಲ್ಲಿ ಸರ್ವತ್ರ ಪ್ರಚಾರವಾಗಿದ್ದವು ಇತ್ಯಾದಿಯಾಗಿ ಅಭಿಪ್ರಾಯಪಡುತ್ತಾರೆ.

ಪ್ರಕೃತಿಸಂಬಂಧವಾದ ಪಾಶದಿಂದ ಬಿಗಿಯಲ್ಪಟ್ಟ ಪಶುವು ಅದನ್ನು ಕಡಿದೊಗೆದು ಪತಿಯನ್ನು ಸೇರುವ ದೃಶ್ಯವನ್ನು ಚಿತ್ರಿಸುವ ಆಗಮುಗಳು ಪಾಶರೂಪವಾದ ವರ್ಣಾಶ್ರಮ ವ್ಯವಸ್ಥೆಯನ್ನು ಅನುಮೋದಿಸುವುವೆಂಬುದು ಆಗಮಾಂತದ ನಿಜಸ್ವರೂಪವನ್ನರಿಯದವರ ವಾದವು. ಆಗಮುಪ್ರಮುದೋ ದ್ಯಾನದಲ್ಲಿ "ನಾನುಹೆಚ್ಚು ನೀನುಹೆಚ್ಚು" ಇಂಥವರೇ ವೇದಾದಿಗಳನ್ನು ಓದ ಬೇಕು. ಇಂಥವರು ಓದಬಾರದು. ಸ್ತ್ರೀಶೂದ್ರಾದಿಗಳು ಸಂಸ್ಕಾರಕ್ಕೆ ಯೋಗ್ಯ ರಲ್ಲ ಇತ್ಯಾದಿ ಕಲ್ಲು ಮುಳ್ಳುಗಳು ತಗ್ಗು ದಿನ್ನೆಗಳು ಇಲ್ಲ. ಅಲ್ಲಿ ಸರ್ವವೂ ಶಿವಮಯವು. ಶಿವಾನಂದಲಹರಿಯೇ ಅಲ್ಲಿ ಬೋರ್ಗರೆಯುವುದು. ಅಲ್ಲಿ ಯ ವಾತಾವರಣವು ಪ್ರೇಮ, ಶಾಂತಿ, ವಿರತಿಭಾವ ಆನಂದಾದಿಗಳಿಂದ ತುಂಬಿ ತುಳುಕುತ್ತಿರುವುದು. ಅಲ್ಲಿ ಕಿಂಕರತ್ವಭಾವದಿಂದ ಶಂಕರತ್ವವು ತಾನಾಗಿಯೇ ಸಿದ್ಧಿಸುವುದಾಗಲಿ ನಾನು ಬ್ರಾಹ್ಮಣ ನೀನು ಶೂದ್ರಯೆಂಬುವರಿಗೆ ಆ ಪವಿತ್ರ ಕ್ಷೇತ್ರದಲ್ಲಿ ಪ್ರವೇಶವಿರುವುದಿಲ್ಲ. ವಿರತಿ (ಎಂದರೆ ನಾನೆಂಬಭಾವನೆಯನ್ನು ಶಿವನೆಂಬಭಾವನೆಗೆ ಆಹುತಿಯನ್ನಿತ್ತು ಸರ್ವವನ್ನು ಶಿವಾರ್ಪಣ ಬುದ್ಧಿಯಿಂದ ಮಾಡುವುದು ಮತ್ತು ಅನುಭವಿಸುವುದು) ಮತ್ತು ಪ್ರೇಮ ಇವುಗಳೇ ಆಗಮಾಂತದ ಹೆಗ್ಗುರುತುಗಳಾಗಿವೆ. ನಕರ್ಮಣಾನ ಪ್ರಜಿಯಾದನೇನ ತ್ಯಾಗೇ ನೈಕೇ ಅಮೃತತ್ವಮಾನಶುಃ ಎಂಬುವ ಉಪನಿಷತ್ತುಗಳ ಉದ್ಗಾ ರವೇ ಆಗಮುಗಳಲ್ಲಿ ಪ್ರತಿಧ್ವನಿತವಾಗಿರುತ್ತದೆ. ಆಗಮುಗಳ ಮೂಲತತ್ವವೇ ವರ್ಣವಿಭಾಗವನ್ನು ಖಂಡಿಸುವಂಥಾದ್ದಿರುತ್ತದೆ.

ಶಿವಾನುಭವದಲ್ಲಿ ಲೇಖನೆಯನ್ನು ಪ್ರಕಟಿಸಿದವರು ಆಗಮುಗಳು ಚಾತುರ್ವರ್ಣ್ಯಗಳನ್ನು ವಿಶೇಷವಾಗಿ ಪ್ರತಿಪಾದಿಸುತ್ತಿರುವುದರಿಂದ ವೀರ ಶೈವರಿಗೆ ಅತಿವರ್ಣಾಶ್ರಮಿಗಳೆಂಬ ನಾಮವು ರೂಢಿಯಲ್ಲಿ ಬಂದಿದೆಯೆಂದು ಹೇಳುತ್ತಾರೆ. ಆಗಮಾದಿಗಳಲ್ಲಿಯೂ ಕೂಡ "ಉಕ್ತವರ್ಣಾಶ್ರಮಾಚಾರಾಃ

ಪ್ರಾಕೃತಾಃ ಶ್ರುತಿಸಮ್ಮತಾಃ" ಇತ್ಯಾದ್ಯಾಗಮ ಪ್ರಮಾಣವಚನಗಳಿಂದ ಚತುರ್ವರ್ಣ ವ್ಯವಸ್ಥೆಯಿರುವುದು ಎಂದು ಒಟ್ಟರ್ಥದಲ್ಲಿ ಬರೆದಿರುತ್ತಾರೆ. ಈ ಶ್ಲೋಕದಪಾದಕ್ಕೆ ಹಿಂದುಮುಂದು ಕೂಡಾ ಇಲ್ಲ. ಯಾವ ಆಗಮ ಎಷ್ಟನೇ ಪಟಲ ಎಷ್ಟನೇ ಶ್ಲೋಕವೆಂಬುದು ಸಹ ಇಲ್ಲ. ಮೇಲ್ಕಂಡ ಪಾದದ ನಿಜವಾದ ಅರ್ಥವೇನೆಂಬುದು ಸಹ ತಿಳಿಸಲ್ಪಟ್ಟಿಲ್ಲ. ಚತುರ್ವರ್ಣದ ವ್ಯವಸ್ಥೆಯಿರುವದೆಂದು ಆಗಮಗಳು ಹೇಳುತ್ತವೆ. ಆದರೆ ಯಾವ ಜನಾಂಗದಲ್ಲಿರುತ್ತದೆ? ಯಾವ ಭಾಗದಲ್ಲಾದರೂ ಆಗಮಗಳು ಸ್ಮೃತಿಗಳಂತೆ ವರ್ಣಾಶ್ರಮಗಳ ನಿಯಮಗಳನ್ನು ಆಯಾ ವರ್ಣಕ್ಕೆ ಸಂಬಂಧಪಟ್ಟ ಕಟ್ಟಳೆಗಳನ್ನು ಶಾಸನರೂಪವಾಗಿ ನಿರ್ಣಯಿಸಿರುತ್ತವೆಯೋ ಹೇಗೆ? ಹಾಗೆ ನಿರ್ಣಯಿಸಿದ್ದರೆ ಆ ಕಟ್ಟಳೆಗಳೂ, ನಿಯಮಗಳೂ, ಯಾವವು? ಯಾವ ಭಾಗದಲ್ಲಾದರೂ ಆಗಮಗಳು ವೀರಶೈವರಲ್ಲಿ ಇಂಥಿಂಥವರೇ ಬ್ರಾಹ್ಮಣರು ಇಂಥಿಂಥವರೇ ಶೂದ್ರರೆಂದು ಗೆರೆಗಳನ್ನು ಗೀಚಿರುತ್ತವೆಯೋ ಹೇಗೆ? "ಬ್ರಾಹ್ಮಣಾವೀರಶೈವಸ್ಥಾಃ ಶಿಖಾಯಜ್ಞೋಪವಿತೀನಃ ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮ ಸಮಾಶ್ರಿತಾಃ ಎಂಬಂತೆ ಆಗಮಶ್ಲೋಕವಿದ್ದದ್ದೇ ಆದರೆ ಈ ಶ್ಲೋಕದಲ್ಲಿ "ಬ್ರಾಹ್ಮಣಾ ವೀರಶೈವಸ್ಥಾಃ" ಎಂಬ ಶಬ್ದಕ್ಕೆ ಲೇಖಕರು ವೀರಶೈವಾಂತರ್ಗತ ಶುದ್ಧ ಶೈವರು" ಎಂದು ವ್ಯಾಖ್ಯಾನವನ್ನು ಮಾಡಿರುವುದು ಸಮಂಜಸವೇ ಹೇಗೆ? ಶಿಖಾ ಯಜ್ಞೋಪವೀತಿನಃ ಎಂಬುದರ ಅರ್ಥವೇನು? ವೀರಶೈವರಿಗೆ ಯಜ್ಞೋಪವೀತವೆಂಬುದಾವುದು? ವರ್ಣಾಶ್ರಮ ಧರ್ಮದ ಬ್ರಾಹ್ಮಣರು ಧರಿಸಿಕೊಳ್ಳುವ ಜನಿವಾರವೆಂದು ಹೇಳಬೇಕೇ? ಲಿಂಗದ ಜೊತೆಯಲ್ಲಿ ಅದನ್ನು ಧರಿಸಿಕೊಳ್ಳುವುದರಲ್ಲಿ ಅಡಗಿರುವ ತತ್ವವೇನು? ಇವುಗಳೆಲ್ಲವನ್ನೂ ಶಾಸ್ತ್ರಿಗಳು ಚನ್ನಾಗಿ ವಿವರಿಸಬೇಕಾಗಿದ್ದಿತು. ಇನ್ನು ಎರಡನೇ ಶ್ಲೋಕವು ಈ ರೀತಿಯಿರುತ್ತದೆ. "ಮಿಶ್ರಶೈವಾಮಹಾದೇವಿ ಕ್ಷತ್ರಿಯೊ ವೈಶ್ಯ ಶೂದ್ರಜಾಃ" ಎಂಬ ಶ್ಲೋಕಕ್ಕೆ ಲೇಖಕರು ವೀರಶೈವಾಂತರ್ಗತ ಮಿಶ್ರಶೈವರು ಲಿಂಗಧಾರಿ ಕ್ಷತ್ರಿಯಶೂದ್ರರೆಂತ ಅರ್ಥ ಮಾಡಿದ್ದಾರೆ. ವೀರಶೈವರಲ್ಲಿ ಒಳಪಟ್ಟ ಮಿಶ್ರವೀರಶೈವರು ಸಹ ವೀರಶೈವರೆಂದೇ ಶಾಸ್ತ್ರಿಗಳ ವ್ಯಾಖ್ಯಾನವು. ಮೂರನೇ ಶ್ಲೋಕದಲ್ಲಿ "ವೀರಶೈವಾನುವರ್ತಿನಃ" ಎಂಬ ಶಬ್ದಕ್ಕೆ "ವೀರಶೈವಾಂತರ್ಗತ" ಎಂಬ ಅರ್ಥವನ್ನು ಮಾಡಿ ಮಾರ್ಗಶೈವರನ್ನು ಸಹ ವೀರಶೈವರನ್ನಾಗಿ ಮಾಡಿಬಿಟ್ಟಿರುತ್ತಾರೆ. ಅದೇ ರೀತಿ ಅವಾಂತರ ಶೈವರನ್ನು ಸಹ ವೀರಶೈವರಲ್ಲಿ ಸೇರಿಸಿರುತ್ತಾರೆ. ಶಾಸ್ತ್ರಿಗಳ ಅಭಿಪ್ರಾಯದಂತೆ ವೀರಶೈವ

ರಲ್ಲಿ (೧) ಬ್ರಾಹ್ಮಣ ವೀರಶೈವರೆಂದೂ, (೨) ಮಿಶ್ರ ವೀರಶೈವರೆಂದೂ, (೩) ಮಾರ್ಗವೀರಶೈವರೆಂದೂ, (೪) ಅವಾಂತರ ವೀರಶೈವರೆಂದೂ, ೪ ವರ್ಗಗಳಿದ್ದಂತಾಯಿತು. ಮಾರ್ಗವೀರಶೈವರೇ ಲಿಂಗಧಾರಿರಾಜರೆಂದ ಮೇಲೆ ಮಿಶ್ರವೀರಶೈವರಾದ ವೀರಶೈವ ಕ್ಷತ್ರಿಯರಾರೋ ಗೊತ್ತಾಗಲಿಲ್ಲ. ಆದರೆ ಮಿಶ್ರಮಾರ್ಗ ಮತ್ತು ಅವಾಂತರ ಶೈವರಿಗೂ ವೀರಶೈವರಿಗೂ, ಸಂಬಂಧವೇ ಇಲ್ಲ. ಮಿಶ್ರಮಾರ್ಗ ಮತ್ತು ಅವಾಂತರ ಶೈವರು ವೀರ ಶೈವರಲ್ಲ. ಪ್ರಾಕೃತವರ್ಗಕ್ಕೆ ಸೇರಿದವರು ಅಂಥವರನ್ನು ವೀರಶೈವಾಂತ ರ್ಗತರನ್ನಾಗಿ ಮಾಡಿ ವೀರಶೈವರಲ್ಲಿ ವರ್ಣಭೇದವನ್ನು ಕಲ್ಪಿಸುವದು ಸೋಜಿಗವೇ ಸರಿ.

ಆಗಮೋಕ್ತ ಶೈವ ವಿಭಾಗಗಳು :— ಆಗಮಗಳು ಶೈವಧರ್ಮವನ್ನು ಪ್ರತಿಪಾದಿಸುತ್ತದಾಗಲಿ ಬರೀ ವೀರಶೈವವನ್ನೇ ಅಲ್ಲನೆಂಬುದು ನಾವು ಮರೆಯಲಾಗದು. ವೇದಗಳು ಪೂರ್ವಭಾಗದಲ್ಲಿ ಕರ್ಮಕಾಂಡವನ್ನೂ ಉತ್ತ ರಭಾಗದಲ್ಲಿ ಅಂದರೆ ವೇದಾಂತ ಭಾಗವಲ್ಲಿ ಜ್ಞಾನಕಾಂಡವನ್ನು ಪ್ರತಿ ಪಾದಿಸುವಂತೆ ಆಗಮಗಳಾದರೂ ಪೂರ್ವಭಾಗದಲ್ಲಿ ಸ್ಥಾವರಲಿಂಗ ಸ್ಥಾಪಿಸಿ ದೇವತಾ ಪ್ರತಿಷ್ಠಾ, ದೇವಾಲಯ ನಿರ್ಮಾಣ, ಪ್ರಾಕೃತಗಳಾದ ಮಿಶ್ರಮಾ ರ್ಗಶೈವಾದಿಗಳ ಕರ್ಮನಿಯಮಗಳು ಇತ್ಯಾದಿಗಳನ್ನು ಪ್ರತಿಪಾದಿಸುತ್ತಾ ಬಂದು ಆಗಮಾಂತ ಭಾಗದಲ್ಲಿ ಅಂದರೆ ಉತ್ತರಭಾಗದಲ್ಲಿ ಕರ್ಮಗಳಿಂ ದಲೂ ವರ್ಣಾದಿ ಭೇದಗಳಿಂದಲೂ ನಿರ್ಲಿಪ್ತವಾದ ಶುದ್ಧವಾದ ವೀರ ಶೈವ ಸಿದ್ಧಾಂತವನ್ನು ಬೋಧಿಸುತ್ತವೆ. ಆಗಮಗಳಲ್ಲಿ ಸದಾಗಮಗಳೆಂ ತಲೂ ಉಪಾಗಮಗಳೆಂತಲೂ ಎರಡು ವಿಧಗಳು. ಸ್ಪಂದ ಪ್ರತ್ಯಭಿಜ್ಞಾದ ರ್ಶನಗಳಿಗೆ ಉಗಮಸ್ಥಾನಗಳಾದ ೨೮ ಶಿವಾಗಮಗಳೇ ಸದಾಗಮಗಳು. ಸದಾಗಮಗಳು ಶೈವಧರ್ಮವನ್ನು ಪ್ರತಿಪಾದಿಸುತ್ತವೆ. ಶೈವವು ನಾಲ್ಕು ಭಾಗ ವಾಗಿ ಅಂದರೆ.

೧. ವಾಮ }
೨. ದಕ್ಷಿಣ } ಮಾರ್ಗಶೈವ
೩. ಮಿಶ್ರ
೪. ಸಿದ್ಧಾಂತ ಶೈವಸಿದ್ಧಾಂತ

ವಿಭಾಗಿಸಲ್ಪಟ್ಟಿದೆ. ಈ ನಾಲ್ಕು ವರ್ಗಗಳ ಪೈಕಿ ವೀರಶೈವವು ಸಿದ್ಧಾಂತವರ್ಗಕ್ಕೆ ಸೇರಿದೆ. (ಸಿದ್ಧಾಂತಶಿಖಾಮಣಿಯ ಪೀಠಿಕಾ ಪ್ರಕರಣ

ವನ್ನು ನೋಡಿರಿ.) ಹೀಗಿದ್ದ ವೀರಶೈವವನ್ನು ಮಿಶ್ರ ಶೈವವನ್ನು ಮಿಶ್ರ ಗೊಳಿಸುವುದು ಪ್ರಮಾದವು. ಮಿಶ್ರ, ಮಾರ್ಗ, ಅವಾಂತರ ಶೈವಮತ ಗಳು ವೀರಶೈವದಲ್ಲೇ ಸೇರಿರುತ್ತವೆಂದು ಶಾಸ್ತ್ರಿಗಳು ಉದಹರಿಸಿರುವ ಪಾರಮೇಶ್ವರಾಗಮದಲ್ಲೆಲ್ಲಿಯಾದರೂ ಉಕ್ತವಾಗಿದ್ದರೆ ಪಟಲ ಮತ್ತು ಶ್ಲೋಕಗಳ ಸಂಖೆಗಳನ್ನು ತಿಳಿಸಿದಲ್ಲಿ ಲೇಖಕನು ಸಂದೇಹನಿವೃತ್ತಿಗೆ ಪ್ರಯತ್ನ ಪಡಲು ಸಾಧ್ಯವಾಗುತ್ತದೆ.

ಪಾರಮೇಶ್ವರಾಗಮ ಅಭಿಪ್ರಾಯದಂತೆ ಪ್ರಾಚೀನಕಾಲದಿಂದಲೂ ಇಂದಿಗೂ ಕುಲಭೇದಗಳು ಇದ್ದೇಇರುತ್ತವೆಂದು ಶಾಸ್ತ್ರಿಗಳ ಅಭಿಪ್ರಾಯವು. ಪ್ರಾಕೃತರಾದ ಮಿಶ್ರಶೈವಾದಿಗಳಲ್ಲಿರುತ್ತವಾಗಲಿ ಅಪ್ರಕೃತರಾದ ವೀರಶೈವರಲ್ಲಿಲ್ಲ.

ವರ್ಣಾಶ್ರಮಗಳ ಬಗ್ಗೆ ಶಿವಾಗಮಗಳ ಧೋರಣವೇನೆಂಬುದನ್ನು ನಾವು ಕಾಮಿಕಾಗಮದಿಂದ ತಿಳಿದುಕೊಳ್ಳಬಹುದು. ಬ್ರಾಹ್ಮಣನೇ ಆಗಲಿ ಶೂದ್ರನೇ ಆಗಲಿ ಶಿವದೀಕ್ಷಾ ಸಂಪನ್ನನಾದರೆ ಈ ವರ್ಣಾಶ್ರಮ ಧರ್ಮಗಳನ್ನು ಮೀರಿ ಅತಿವರ್ಣಾಶ್ರಮಿಯಾಗುತ್ತಾನೆಂದೂ, ಅವನಿಗೆ ವೇದಾಗ ಮೋಪನಿಷತ್ತುಗಳನ್ನು ಓದಲು ಸರ್ವಅಧಿಕಾರವಿರುತ್ತದೆಂತಲೂ ಆಗಮಗಳ ಮತವು. ವರ್ಣಾಶ್ರಮಗಳ ದೆಸೆಯಿಂದ ಸ್ಮೃತಿಮಾರ್ಗಾವಲಂಬಿಗಳಿಗೂ ಆಗಮಮಾರ್ಗಾವಲಂಗಳಿಗೂ ದೊಡ್ಡ ಹೋರಾಟವೇ ನಡೆದಂತೆ ಕಾಣುತ್ತದೆ. ಈ ಸ್ಪರ್ದೆಯಕಾರಣದಿಂದಲೇ ಸ್ಮೃತಿಮಾರ್ಗವಾದಿಗಳು ಆಗಮಗಳ ಸರ್ವಮಾನ್ಯತೆಯನ್ನು ತಾಳಲಾರದೇ ಅವು ವೇದಗಳನ್ನೋದಲು ಅನರ್ಹರಾದ ಶೂದ್ರರ ಗ್ರಂಥಗಳೆಂದು ಜನಸಮೂಹದಲ್ಲಿ ಭ್ರಾಮಕ ಕಲ್ಪನೆಯನ್ನುಹುಟ್ಟಿಸಿದವು. ಆಗಮಗಳು ಜನರನ್ನು ವೇದಬಾಹ್ಯಮಾರ್ಗಕ್ಕೆ ಕರೆದೊಯ್ಯುವವೆಂದು ಸಾರಹತ್ತಿದವು. ಶಂಕರಾಚಾರ್ಯರು ಆಗಮಗಳ ಪ್ರಾಮಾಣ್ಯವನ್ನು ಮಾನಿಸದೇ ಹೋದರು. ಆದರೆ ದಕ್ಷಿಣಹಿಂದುಸ್ಥಾನದಲ್ಲಿ ಶೈವಸಿದ್ಧಾಂತಿಗಳೂ ಕರ್ನಾಟಕದಲ್ಲಿ ಶ್ರೀ ಬಸವೇಶ್ವರಾದಿಗಳೂ ಆಗಮಗಳ ಸರ್ವಸೌಹಾರ್ದ್ರತತ್ವದ ವಿಜಯುನಿನಾದದಿಂದ ದೇಶವನ್ನೆಲ್ಲಾ ಧಿಮಿ ಧಿಮಿ ಗುಟ್ಟಿಸಿದರು. ಶಿವಧ್ಯಾನ ಶಿವಜ್ಞಾನಗಳೇ ಆಗಮ ಧರ್ಮದ ಮುಖ್ಯಲಕ್ಷಣಗಳು. ಕರ್ಮಮಾರ್ಗಕ್ಕೆ ಪ್ರಾಶಸ್ತ್ಯವು ಕೊಡಲ್ಪಟ್ಟಿಲ್ಲ. ಕಾಮಿಕಾಗಮದ ಅರ್ಚನ ವಿಧಿಪಟಲದಲ್ಲಿ

ಅಗ್ನಿಹೋತ್ರಾಶ್ಚ ವೇದಾಶ್ಚ ಯಜ್ಞಾಶ್ಚ ಬಹುದಕ್ಷಿಣಾಃ ।
ಶಿವಲಿಂಗಾರ್ಚನ ಸ್ಯೈತೇ ಕೋಟ್ಯಂ ಶೋನಾಪಿ ನೋಸಮಃ ॥
ಜಾನೇತೇನಾತ್ಮ ಹೃದಯೇನ ನಾರ್ಚಿತೋ ಭಗವಾನ್ ಶಿವಃ ।
ಸುಚಿರಂ ಸಂಚರತ್ಯ ಸ್ಮಿನ್ ಸಂಸಾರೇ ದುಃಖಸಾಗರೇ ॥
ವರಂ ಪ್ರಾಣ ಪರಿತ್ಯಾಗೋ ಛೇದನಂ ಶಿರಸೋಪಿವಾ ।
ತತ್ವನಭ್ಯರ್ಚ್ಯ ಭುಂಜೀಯಾತ್ಭಗವಂತಂ ತ್ರಿಲೋಚನಂ॥
ಇತಿಜ್ಞಾತ್ವಾ ಪ್ರಯತ್ನೇನ ಪೂಜನೀಯಃ ಸದಾಶಿವಃ ॥

ಇತ್ಯಾದಿಯಾಗಿ ಹೇಳಲ್ಪಟ್ಟಿದೆ. ಸ್ಮೃತಿ ಮತ್ತು ಇತಿಹಾಸಗಳ ಮತದಂತೆ ಶೂದ್ರನು ಸ್ತ್ರೀಯು ಸಂಸ್ಕಾರಕ್ಕೆ ಅರ್ಹರಲ್ಲ. ಜ್ಞಾನ ಮಂದಿರವು ಅವರಿಗೋಸುಗ ಮುಚ್ಚಲ್ಪಟ್ಟಿರುತ್ತದೆ. ಆಗಮಗಳಾದರೊ ವೀರಶೈವೇತರರಲ್ಲಿ ವರ್ಣಾಶ್ರಮ ಧರ್ಮವನ್ನು ಪ್ರತಿಪಾದಿಸುತ್ತವೆಯಾದರೂ ಶೂದ್ರನ ಹದ್ದು ಇಲ್ಲಿಯ ವರಿವಿಗೆ, ಬ್ರಾಹ್ಮಣನ ಹದ್ದು ಇಲ್ಲಿಯ ವರೆಗೆಂದು ಗೀಟುಗಳನ್ನು ಗೀಚಿರುವದಿಲ್ಲ. ಧರ್ಮೋಪದೇಶವನ್ನು ಕೇಳುವುದಕ್ಕೂ ಸಂಸ್ಕಾರವನ್ನು ಹೊಂದುವದಕ್ಕೂ ಶೂದ್ರನಿಗೆ ಸಹಾ ಹಕ್ಕಿರುತ್ತದೆ. ಅವನು ಪಂಚಾಕ್ಷರಿಯನ್ನು ಜಪಿಸಬಹುದು. ಲಿಂಗಸ್ಥಾಪನೆಯನ್ನು ಮಾಡಬಹುದು. (ಕಾರಣಾಗಮ) ಹೀಗೆ ಪರಂಪರೆಯಿಂದ ಅವನು ಹೆಚ್ಚೆಚ್ಚು ಜ್ಞಾನವನ್ನು ಸಂಪಾದಿಸಿಕೊಂಡಂತೆ ತನ್ನ ಜನ್ಮ ಸಂಬಂಧವಾದ ದೋಷಗಳನ್ನು ನೀಗಿಕೊಳ್ಳುತ್ತಾ ಬಂದು ಕಡೆಗೆ ವೀರಶೈವ ದೀಕ್ಷೆಯನ್ನು ಹೊಂದಿದಮೇಲೆ ಜನ್ಮಸಂಬಂಧವಾದ ಎಲ್ಲಾ ದೋಷಗಳನ್ನು ಕಳೆದುಕೊಂಡು ಕುಲಗಳನ್ನು ಮೀರಿದವನಾಗುತ್ತಾನೆ. ಈ ಪ್ರಗತಿಯ ಮಾರ್ಗದ ಅಂತ್ಯಾವಸ್ಥೆಯು ಸೂಕ್ಷ್ಮಾಗಮದ ೫ ನೇ ಪಟಲದಲ್ಲಿ ಈ ರೀತಿ ವರ್ಣಿಸಲ್ಪಟ್ಟಿದೆ.

ಯಸ್ಯೈವ ಶಾಂಭವೀ ದೀಕ್ಷಾಜಾತಾ ಗುರು ಕೃಪಾವಶಾತ್ ।
ಪೂರ್ವ ಜಾತ್ಯಾದಿಕಂ ತಸ್ಯ ನಸ್ಮರೇತ್ ಪ್ರಾಕೃತಂ ಹಿ ತತ್॥
ನೀಚ ವಂಶೋದ್ಭವಶ್ಚಾಪಿಭಕ್ತಶ್ಚೇ ದೀಕ್ಷಿತೇ ತಥಾ ।
ಭಕ್ತಸ್ಯ ಪ್ರಾಕ್ತನಂ ಜನ್ಮನಾಮ ಜಾತ್ಯಾದಿಕಂ ಚಯತ್ ॥
ಪೃಚ್ಛೇದ್ಯಃ ಕಥಯೇದ್ವಾಪಿಸ ವೈಪಾತಕಿನಾಂ ಪರಃ ।
ತಸ್ಮಾತ್ಸರ್ವ ಪ್ರಯತ್ನೇನ ಮಮ ಲಿಂಗಾಂಗ ಸಂಗಿನಾಂ ।
ಮಾಮೇವವಂನುತೇ ಯಸ್ತು ಸೋಪಿ ಮುಚ್ಯೇತ ಬಂಧನಾತ್ ॥

ಈ ರೀತಿ ಪ್ರಗತಿ ಮಾರ್ಗದ ನಿರ್ದಿಷ್ಟ ಸ್ಥಾನವೇ ವೀರಶೈವವು. ಈ ವೀರಶೈವದ ಮೂಲಕವೇ ಮೋಕ್ಷವು. ಈ ನಿರ್ದಿಷ್ಟ ಸ್ಥಾನಕ್ಕೆ ಬಂದ ಮೇಲೆ ಮೇಲು ಕೀಳು ಭಾವನೆಗಳು ಉಳಿಯುವದಿಲ್ಲ. ಈ ಆಗಮತತ್ವವನ್ನೇ ತನ್ನ ಮೂಲಪಾಠವನ್ನಾಗಿಟ್ಟುಕೊಂಡು ಶ್ರೀ ಬಸವೇಶ್ವರನು ಕುಲಭೇದಗಳನ್ನು ಖಂಡಿಸಿದನು. ವೀರಶೈವರಲ್ಲಿ ಜಾತಿಭೇದವನ್ನೆಣಿಸುವುದು ಒಂದು ಮಹಾಪಾತಕವೆಂದು ಗಣಿಸಲ್ಪಟ್ಟಿದೆ.

ಇನ್ನು ಎರಡನೆಯ ವಿಷಯವೆಂದರೆ ವೀರಶೈವರಲ್ಲಿ ವರ್ಣವಿಭಾಗವು ಅನೂಚಿನವಾಗಿ ಬಂದಿದ್ದು ಹಾಲಿ ಪ್ರಚಲಿತವಾಗಿದೆಯೋ ಹೇಗೆಂಬುವ ಪ್ರಶ್ನೆಯು ವ್ಯವಹಾರ ದೃಷ್ಟಿಯಿಂದ ವೀರಶೈವರನ್ನು ಸಾಮಾನ್ಯ ವಿಶೇಷ ನಿರಾಭಾರಿಯೆಂದು ಮೂರು ವರ್ಗಗಳನ್ನಾಗಿ ವಿಭಾಗಿಸುವದುಂಟು. ಮತ್ತು ಶ್ರೀ ನಿಜಗುಣಾರ್ಯಾದಿಗಳು ಈ ವಿಭಜನೆಯ ವಿಷಯವಾಗಿ ಬರೆದಿರುತ್ತಾರೆ. ಆದರೆ ವೀರಶೈವರಲ್ಲಿ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರಿದ್ದರೆಂಬುದಕ್ಕೆ ಸರಿಯಾದ ಆಧಾರಗಳೇ ಇಲ್ಲ. ಹಾಗೆ ಇದ್ದದ್ದೇ ಆದರೆ ವೀರಶೈವರೆಲ್ಲರಿಗೂ ಒಂದೇ ಕಾನೂನು ಹತ್ತುತ್ತಿದ್ದಿಲ್ಲ. ಪ್ರೊ. ಸುಬ್ರಹ್ಮಣ್ಯಂ ಇವರು

" This religion......... does not recognise the caste-system of the Smrities. As such the community professing it has an independent social status deserving of due legal recognition. It is Vuite strange that this community standing outside the pale of thc sectarion Smriti Brahmanism should be put down as a class of Sudras in the eye of law.

ಈ ಧರ್ಮವು ಸ್ಮೃತಿಗಳಲ್ಲಿ ಪ್ರತಿಪಾದಿತವಾದ ವರ್ಣ ವಿಭಾಗವನ್ನು ಅಂಗೀಕರಿಸುವುದಿಲ್ಲ. ಅದರ ಸಮಾಜ ರಚನೆಯು ಬಹು ಅಪೂರ್ವವಾಗಿದ್ದು ಕೋರ್ಟುಗಳು ಅದಕ್ಕೆ ಮಹತ್ತ್ವವನ್ನು ಕೊಡಬೇಕಾಗಿದ್ದಿತು. ಹೀಗಿದ್ದು ಸ್ಮೃತಿ ಮತಕ್ಕೆ ಸಂಬಂಧಿಸದೇ ಇರುವ ಈಸ್ವತಂತ್ರ ಧರ್ಮವನ್ನು ಅವಲಂಬಿಸುವವರನ್ನು ಕೋರ್ಟುಗಳು ಶೂದ್ರ ವರ್ಗಕ್ಕೆ ಸೇರಿಸಿರುವುದು ಬಹಳ ಆಶ್ಚರ್ಯಕರವು. ಹೀಗೆಂದು ಬರೆದಿರುತ್ತಾರೆ.

ವೀರಶೈವರ ಆಚರಣೆಗಳನ್ನು ನೋಡಿದರೆ ವರ್ಣಾಶ್ರಮದಂಥ ಸಂಕುಚಿತತತ್ವಕ್ಕೆ ಈ ಧರ್ಮದಲ್ಲಿ ಸ್ಥಳವೇ ಇಲ್ಲವೆಂಬುದು ಎಂಥವರಿಗಾದರೂ ಒಡೆದ,

ಕಾಣಿಸುತ್ತದೆ. ಅವುಗಳಾವವೆಂದರೆ (೧) ಲಿಂಗಧಾರಣೆ (೨) ಷಟ್‌ಸ್ಥಲಾಚರಣೆ (೩) ಪಾದೋದಕ ಪ್ರಸಾದಸ್ವೀಕಾರ (೪) ಪ್ರತಿಯೊಬ್ಬರೂ ತಮ್ಮ ತಮ್ಮ ಇಷ್ಟ ಲಿಂಗಗಳನ್ನು ತಾವೇ ಪೂಜೆ ಮಾಡಿಕೊಳ್ಳುವಿಕೆ (೫) ಸ್ತ್ರೀಪುರುಷರಲ್ಲಿ ಧರ್ಮದ ವಿಷಯದಲ್ಲಿ ಯಾವ ಭೇದವನ್ನು ಮಾಡದಿರುವಿಕೆ (೬) ಸೂತಕಾದಿಗಳನ್ನು ಪಾಲಿಸದಿರುವಿಕೆ (೭) ವ್ರತನಿಯೋಪವಾಸಗಳನ್ನು ಪಾಲಿಸದಿರುವಿಕೆ (೮) ಶಾಸ್ತ್ರಾಭ್ಯಾಸದ ಹಕ್ಕು ಸರ್ವರಿಗೂಕೊಡಲ್ಪಟ್ಟಿರುವಿಕೆ (೯) ಕಾಯಕ ಗೌರವ ಅಂದರೆ ಹಿಂಸ ಮಾರ್ಗಾದಿಯಿಂದ ದೂರವಾದ ಯಾವ ವೃತ್ತಿಯನ್ನು ಅವಲಂಬಿಸಿವರು ಅದು ವ್ಯಕ್ತಿ ಘನತೆಗೆ ಕುಂದನ್ನುಂಟು ಮಾಡಲಾರದೆಂಬ ತತ್ವವು Dignity of labour (೧೦) ಅಂತ್ಯ ಸಂಸ್ಕಾರವು ಎಲ್ಲರಿಗೂ ಒಂದೇ ವಿಧವಾಗಿರುವಿಕೆ. ಈ ವಿಧವಾದ ಅಂತ್ಯಸಂಸ್ಕಾರವನ್ನು ವರ್ಣಾಶ್ರಮಿಗಳು ಯತಿಯ ದೇಹಕ್ಕೆ ಮಾತ್ರ ಕೊಡುವರು. ಇತ್ಯಾದಿಯಾಗಿ ಅನೇಕಾನೇಕ ಉದಾಹರಣೆಗಳನ್ನು ಕೊಡಬಹುದು. (ಸಶೇಷ)

---

## ಚಿಲ್ಲಿಂಗಪೂಜೆ.

(ಲೇಖಕ:— ರಾ॥ ರಾ॥ ಹಾಲಪ್ಪ ಶಿವಯೋಗಾಶ್ರಮಸ್ಥ-
ಕಪ್ಪನಹಳ್ಳಿ ತಾ॥ ಶಿಕಾರಿಪುರ )

ಶಿರಾಳ ಕೊಪ್ಪದ ಮ॥ ಚನ್ನಮಲ್ಲಪ್ಪ ಕೋರಿಯವರು ಚಿಲ್ಲಿಂಗನೆಂದರೇನು? ಅದನ್ನು ಪೂಜಿಸುವುದು ಹೇಗೆ? ಎಂಬ ವಿಷಯವನ್ನು ಶಿವಾನುಭವದ ಒಂದು ಮಾಸಪತ್ರಿಕೆಯಲ್ಲಿ ಪ್ರಕಟಿಸಿದ್ದು ತಿಳಿಯುತ್ತೇನೆ. ವೀರಶೈವರಲ್ಲಿ ಲಿಂಗಪೂಜೆಯನ್ನು ಮಾಡುವಾಗ ಸಾಮಾನ್ಯವಾಗಿ ಲಿಂಗದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗವುಂಟೆಂದು ಪೂಜಿಸುವುದು ಎಲ್ಲರಿಗೂ ಆವಶ್ಯಕವಾದುದು. ಇಷ್ಟಲಿಂಗವೆಂದರೆ ತನ್ನ ಕಾಯದ ರೂಪಿನಂತಿರುವ ಸ್ಥೂಲಾಕಾರವುಳ್ಳ ಲಿಂಗವು. ಪ್ರಾಣಲಿಂಗವೆಂದರೆ ತನ್ನ ಮನದಲ್ಲಿ ತುಂಬಿಕೊಂಡಿರುವ ಸೂಕ್ಷ್ಮ ಶರೀರವುಳ್ಳ ಸೂಕ್ಷ್ಮಾಕಾರಲಿಂಗವು. ಭಾವಲಿಂಗವೆಂದರೆ ಮನಸ್ಸನ್ನು ಹುಟ್ಟಿಸಲಿಕ್ಕೆ ಕಾರಣವಾಗಿ 'ನಾನು' ಎಂಬ ಪದದಿಂದ ವ್ಯವಹರಿಸುವ ಭಾವವೆಂಬ ತನು (ಕಾರಣತನು) ವನುಳ್ಳ ಕಾರಣರೂಪಿನಲಿಂಗವು. ಈ ಮೂರು ಲಿಂಗಗಳ ಪೂಜೆಯನ್ನು

ಇಷ್ಟಲಿಂಗ ಪೂಜೆಯನ್ನು ಮಾಡುವುದರಲ್ಲಿ ಸಮಾವೇಶಮಾಡಲಿಕ್ಕೆ ಬರುತ್ತದೆ. ಇಷ್ಟಲಿಂಗ ಪೂಜೆಯನ್ನು ಮಾಡುವಾಗ ಅದು ತನ್ನ ದೇಹ (ಕಾಯ) ಕ್ಕೆ ಸಂಬಂಧವಾದುದೆಂದೂ, ಇಂಥಾದ್ದೇ ಒಂದು ಲಿಂಗವು ತನ್ನ ಮನಸ್ಸಿಗೆ ಸಂಬಂಧಪಟ್ಟು ಮನಸ್ಸಿನಲ್ಲಿರುವುದೆಂದೂ, ಮನಸ್ಸನ್ನು ಮನುಷ್ಯನ ಹೊರಗಿನ ಕಣ್ಣುಗಳಿಂದ ನೋಡುವುದಕ್ಕಾಗದೆ ಇರುವುದರಿಂದ, ಮನಸ್ಸಿಗೆ ಸಂಬಂಧಪಟ್ಟ ಲಿಂಗವನ್ನೂ ಹಾಗೆ ನೋಡುವುದಕ್ಕಾಗುವುದಿಲ್ಲವೆಂದೂ, ಮನಸ್ಸಿಗಿಂತ ಸೂಕ್ಷ್ಮವಾದ ತನ್ನ ಭಾವದೊಳಗೂ ಅಂಥಾದ್ದೇ ಒಂದು ಲಿಂಗವಿದ್ದು ಅದು ಪ್ರಾಣಲಿಂಗಕ್ಕಿಂತ ಸೂಕ್ಷ್ಮವಾಗಿ (ಕಾರಣರೂಪಾ ) ಇರುವುದರಿಂದ ಮನಸ್ಸೇಂಬ ಒಳಗಿನ ಕಣ್ಣಿನಿಂದ ಅದನ್ನು ತಿಳಿಯಬೇಕೆಂದೂ ಭಾವಿಸಬೇಕು. ಮತ್ತು ಇದರ ವಿಲೋಮವಾಗಿ ಭಾವಲಿಂಗದಿಂದ ಪ್ರಾಣಲಿಂದ, ಆದರಿಂದ ಇಷ್ಟಲಿಂಗಗಳು ಬಂದಿರುವವೆಂದೂ ಭಾವಿಸಬೇಕು. ಮತ್ತು ಇದರ ವಿಲೋಮವಾಗಿ ಭಾವಲಿಂಗದಿಂದ ಪ್ರಾಣಲಿಂಗವು ಅದರಿಂದ ಇಷ್ಟಲಿಂಗಗಳು ಬಂದಿರುವವೆಂದೂ ಭ ವಿಸಬೇಕು. ಹೀಗೆ ಭಾವಿಸುವದರಿಂದ ಪೂಜಕನು ತಾನೇ ಲಿಂಗರೂಪನಾಗುವನು. ಇದೇ ಶಿವೋಹಂ ಎಂಬ ಶೃತಿಯ ಅನ್ವರ್ಥದಾಚರಣೆಯು.

ಇನ್ನು ವೀರಶೈವರು ಲಿಂಗದಲ್ಲಿ ಆರುಲಿಂಗಗಳನ್ನು ತಿಳಿದು ಪೂಜಿಸುವ ವಿಧಾನವೊಂದಿರುವುದು. ಹೀಗೆ ಪೂಜಿಸುವವರು ಆಚಾರಲಿಂಗ ಗುರುಲಿಂಗಗಳೆರಡೂ ಸೇರಿ ಇಷ್ಟಲಿಂಗವಾಗಿರುವುದೆಂದೂ, ಶಿವಲಿಂಗ, ಜಂಗಮಲಿಂಗಗಳೆರಡೂ ಸೇರಿ ಪ್ರಾಣಲಿಂಗವಾಗಿರುವುದೆಂದೂ, ಪ್ರಸಾದಲಿಂಗ, ಮಹಾಲಿಂಗಗಳೆರಡೂ ಸೇರಿ ಭಾವಲಿಂಗವಾಗಿರುವುದೆಂದೂ ತಿಳಿದು ಇಷ್ಟಲಿಂಗದಲ್ಲಿಯೇ ಈ ಆರುಲಿಂಗಗಳನ್ನೂ ಪೂಜಿಸುವರು.

ಇದಕ್ಕಿಂತಲೂ ವಿಶೇಷವಾಗಿ ಲಿಂಗದಲ್ಲಿ ಒಂಭತ್ತು ಲಿಂಗಗಳನ್ನು ತಿಳಿವ ಪೂಜೆಯೊಂದುಂಟು. ಹೀಗೆ ಪೂಜಿಸುವವರು ಅಂಗದಲ್ಲಿ ಒಂಭತ್ತು ಚಕ್ರಗಳಲ್ಲಿ ಒಂಭತ್ತು ಲಿಂಗಗಳುಂಟೆಂದು ತಿಳಿದು ಪೂಜಿಸುವರು. ಇವುಗಳಲ್ಲಿ ಆರನೆಯದಾದ ಮಹಾಲಿಂಗವು ಭ್ರೂಮಧ್ಯದಲ್ಲಿರುವ ಆಜ್ಞಾ ಚಕ್ರದಲ್ಲಿರುವುದೆಂದೂ ಏಳನೆಯದಾದ ಬ್ರಹ್ಮರಂಧ್ರ ನಡುನೆತ್ತಿ (ಚಿದಂಬರ) ದಲ್ಲಿ ಚಿಲ್ಲಿಂಗವಿರುವುದೆಂದೂ ಹಾಗೆಯೇ ಉಳಿದೆರಡು ಚಕ್ರಗಳಲ್ಲಿ ಇನ್ನೂ ಎರಡು ಲಿಂಗಗಳಿರುವುದೆಂದೂ ಭಾವಿಸುತ್ತಾರೆ. ಹೀಗೆ ಅಂಗ ಲಿಂಗ ಸಾಮರಸ್ಯವು ಶಿವಕೈವಲ್ಯದ ಲಕ್ಷಣವು. ಈ ಒಂಭತ್ತು ಲಿಂಗಗಳನ್ನೂ

ಇಷ್ಟಲಿಂಗದಲ್ಲಿಯೇ ಸಮಾವೇಶ ಮಾಡಿ ಪೂಜಿಸಲಿಕ್ಕೆ ಬರುತ್ತದೆಯೇ ಹೊರತು ಚಿಲ್ಲಿಂಗವೊಂದನ್ನೇ ಬೇರೆ ಪೂಜಿಸಲಿಕ್ಕೆ ಬಾರದು. ಇದೊಂದೆ ಆದರೆ ಧ್ಯಾನ ಸ್ತೋತ್ರಗಳಿಗೆ ಮಾತ್ರ ಸಿಲ್ಕುವುದು. ಹೀಗಿರುವ ಚಿಲ್ಲಿಂಗ ವನ್ನು ಕುರಿತು ಶಿವಯೋಗಿಗಳು ಸ್ತೋತ್ರಮಾಡಿದ ಪದಗಳು ನಮ್ಮವ ರಲ್ಲಿ ಈಗಲೂ ರೂಢಿಯಲ್ಲಿವೆ. ಪ್ರಭುದೇವರು ನಿರೂಪಿಸಿದ ಅನುಭವ ಮುದ್ರೆಯಲ್ಲಿಯೂ ಈ ಚಿಲ್ಲಿಂಗದ ವಿಷಯವು ಬರೆಯಲ್ಪಟ್ಟಿದೆ. ಇವುಗ ಳನ್ನು ನೋಡಿಕೊಂಡು ವೀರಶೈವರು ಧ್ಯಾನಿಸುವವರಾಗಲಿ.

---

## ಲಿಂಗಪೂಜಾಕ್ರಮ

ಸ್ವಾಮಿಃ— ಇಲ್ಲಿ ಕೆಲವು ಸದ್ಭಕ್ತರು ಶ್ರೀ ಮದಿಷ್ಟಲಿಂಗವನ್ನು ವಾಮ ಗೋಮುಖವಾಗುವಂತೆ ಕರಕಮಲದಲ್ಲಿಟ್ಟು ಪೂಜಿಸಬೇಕೆಂದು ಮತ್ತು ಕೆಲ ವರು ಕರಕಮಲಕ್ಕೆ ವಾಮಗೋಮುಖವಾಗಿ ಅಹ್ವಾನಿಸಿ ಪುನಹಾ ಸ್ವಾಭಿ ಮುಖವಾಗಿ (ವಿಪರೀತವಾಗಿ) ಮಾಡಿ ಪೂಜಿಸಬೇಕು, ಹೀಗೆ ಮಾಡದೆ ಇದ್ದರೆ ತನಗೆ ಅಭಿಮುಖವಾಗುವದಿಲ್ಲ, ಪೂಜೆಯು ಘಟಿಸುವದಿಲ್ಲೆಂದು ಸಾಧಿಸುವರು. ಈ ವಿಷಯದಲ್ಲಿ ಸಂದೇಹವು ಬಂದದ್ದರಿಂದ ತಮಗೆ ವಿಜ್ಞಾಪನೆಯನ್ನು ಮಾಡಿಕೊಂಡಿದೆ. ತಾವು ಸಮರ್ಪಕ ಕಂಡಪಕ್ಷ ತಮ್ಮ ಶಿವಾನುಭವದಲ್ಲಿ ಪ್ರಸಿದ್ಧಿಸಿ ತಮ್ಮ ಅಭಿಪ್ರಾಯವನ್ನು ವ್ಯಕ್ತಗೊಳಿಸಬೇ ಕೆಂದು ಕೋರುವಾ.

ತಮ್ಮ

೬—೩—೩೦ **ಬಸವಪ್ಪಾ ಜಾನೇಕಲ್ಲ**

ಮು. ಮಾನ್ವಿ ಜಿ. ರಾಯಚೂರ

ಮೇಲ್ಕಂಡ ಶಂಕೆಯ ಸಮಾಧಾನವನ್ನು "ಚಿಲ್ಲಿಂಗ ಪೂಜೆ" ಈ ವಿಷಯವನ್ನು ಕುರಿತು ರಾ. ರಾ. ಹಾಲಪ್ಪ ಇವರು ಬರೆದ ಹಿಂದಿನ ಲೇಖ ದಲ್ಲಿ ನಿರೂಪಿಸಿದ ಲಿಂಗಪೂಜೆಯ ತತ್ವಗಳ ಮೇಲಿಂದ ಕೆಲಮಟ್ಟಿಗೆ ಕಂಡು ಹಿಡಿಯಬಹುದಾಗಿದೆ. ವೀರಶೈವರು ಮಾಡುವ ಲಿಂಗಪೂಜೆಯ ತತ್ವಗಳು ಇತರ ಶೈವರು ಮಾಡುವ ಪೂಜೆಯ ತತ್ವಗಳಿಂದ ಬಹು ಭಿನ್ನತರವಾಗಿರುತ್ತವೆ. ವೀರಶೈವರು ತಮ್ಮ ಕರಕಮಲದಲ್ಲಿರಿಸುವ ಇಷ್ಟ

ಲಿಂಗವು ಆತ್ಮಲಿಂಗವೆಂದು ಭಾವಿಸಿ ಅದನ್ನು ಪೂಜಿಸುವವರಾಗಿರುತ್ತಾರೆ. ಈ ಇಷ್ಟ ಲಿಂಗವನ್ನು ಹೀಗೆ ಭಾವಿಸಿ, ಆ ಮೂಲಕ ಪ್ರಾಣ ಲಿಂಗವನ್ನೂ ಭಾವ (ಆತ್ಮ) ಲಿಂಗವನ್ನೂ ಪ್ರಜ್ವಲಿಸುವವರಾಗಿದ್ದಾರೆ. ಇದು ವೀರಶೈವರ ಪೂಜೆಯ ತತ್ವವಾಗಿದೆ. ಆದರೆ ಈ ಬಗೆಯ ವಿಚಾರಗಳು ಶೈವ ಮತ್ತು ಇತರ ಹಿಂದೂ ಮತಸ್ತರಲ್ಲಿ ಇರುವದಿಲ್ಲ. ಅವರು ಸ್ಥಾವರ ಲಿಂಗವನ್ನೂ ಇತರ ದೇವತೆಗಳನ್ನೂ ಪೂಜಿಸುವವರಾಗಿದ್ದಾರೆ. ಅವರು ಈ ಸ್ಥಾವರ ದೇವತೆಗಳು ತಮ್ಮಿಂದ ಬೇರೆಯಾಗಿರುತ್ತವೆಂದು ಭಾವಿಸಿ ಅವುಗಳಿಗೋಸ್ಕರ ಆಹ್ವಾನ ವಿಸರ್ಜನೆ ಅರ್ಚನೆ ಪೂಜನೆ ಮುಂತಾದಕ್ರಮಗಳಿಂದ ಪೂಜಾ ಕಾರ್ಯಗಳನ್ನು ನಿರ್ವಹಿಸುವವರಾಗಿರುತ್ತಾರೆ. ಆದರ ವೀರಶೈವರ ಪೂಜೆಯು ಇದಕ್ಕೂ ತೀರ ಭಿನ್ನವಾಗಿರುತ್ತದೆ. ಇವರ ಪೂಜೆಯು ಸಮರಸಾಚಾರವುಳ್ಳದೆಂತಲೂ ಶೈವರ ಪೂಜೆಯು ಭಿನ್ನಾಚಾರವುಳ್ಳದೆಂತಲೂ ಹೇಳಲ್ಪಟ್ಟಿರುತ್ತದೆ.

ಈ ಬಗೆಯ ವಿಚಾರಗಳು ವೀರಶೈವರಲ್ಲಿರುವದರಿಂದ ಅವರ ಲಿಂಗ ಪೂಜಾಕ್ರಮಗಳಲ್ಲಿ ಕೆಲವು ಮಹತ್ವದ ಭೇದಗಳುಂಟಾಗಿರುತ್ತವೆ. ಉದಾ:- ವೀರಶೈವನು ತಾನು ಶಿವನೆಂದು ಭಾವಿಸಿಕೊಂಡು ಪೂಜಾಕ್ರಮದಲ್ಲಿ ತೊಡಗುತ್ತಾನೆ. ಆ ಭಾವನೆಯಿಂದಲೇ ಅವನು ವಿಭೂತಿ, ರುದ್ರಾಕ್ಷಿ ಮೊದಲಾದ ಶಿವಚಿನ್ಹಗಳನ್ನು ಧರಿಸಿಕೊಂಡು ತಾನು ಲಿಂಗವೆಂದು ಭಾವಿಸಿ ತನ್ನ ಪೂಜೆಗೆ ಪ್ರವೃತ್ತನಾಗುತ್ತಾನೆ. ಮತ್ತು ಅದೇ ಭಾವನೆಯಿಂದಲೇ ಅವನು ತನ್ನ ಸರ್ವಾಂಗದಲ್ಲೆಲ್ಲ ಪ್ರಣಮಗಳನ್ನು ಲಿಖಿಸಿಕೊಳ್ಳುತ್ತಾನೆ. ಮತ್ತು ತನ್ನ ಹಸ್ತದಲ್ಲಿದ್ದ ಲಿಂಗವು ತಾನೆಂದು ಭಾವಿಸಿ ಅದರ ಮೇಲೆ ಏಕಾಗ್ರ ಚಿತ್ತದಿಂದ ದೃಷ್ಟಿಯನ್ನಿಟ್ಟು ತನ್ನ ಪ್ರಾಣ ಭಾವಗಳಲ್ಲಿ ಶಿವಚೈತನ್ಯವನ್ನು ಬರಮಾಡಿಕೊಳ್ಳುತ್ತಾನೆ. ಈ ತತ್ವಗಳ ಮೂಲಕ ವೀರಶೈವನಲ್ಲಿ ಲಿಂಗವನ್ನು ಇದಿರಿಟ್ಟು ಪೂಜೆಮಾಡುವ ಕ್ರಮವಿಲ್ಲ. ಆದ್ದರಿಂದ ಅವನು ತನ್ನ ಹಸ್ತದಲ್ಲಿದ್ದ ಲಿಂಗದ ಗೋಮುಖವನ್ನು ತನ್ನ ಬಲಗಡೆಗೆ ಮಾಡಿ ಪೂಜಿಸುವದು ಕ್ರಮವಲ್ಲ. ಅದು ತನ್ನ ಶರೀರಕ್ಕೆ ಅನುಗುಣವಾಗಿಯೇ ಅಂದರೆ ವಾಮ ಗೋಮುಖವಾಗಿ ಅದನ್ನು ಪೂಜಿಸುವದೇ ವೀರಶೈವ ತತ್ವಕ್ಕೆ ಸಮ್ಮತವಾದದ್ದಿರುತ್ತದೆ. ಇದಲ್ಲದೆ ವೀರಶೈವ ಧರ್ಮದ ಪ್ರಕಾರ ಇತರ ಶೈವರಂತೆ ತನ್ನ ಲಿಂಗವನ್ನು ಕುರಿತು ಆಹ್ವಾನ ವಿಸರ್ಜನಗಳಿಲ್ಲ. ಯಾಕಂದರೆ ಗುರುವಿನ ಮೂಲಕ ಶಿಷ್ಯನಲ್ಲಿ ಪ್ರಜ್ವಲವಾದ ಲಿಂಗವು ಅವನ ಪ್ರಾಣ

ಲಿಂಗವೇ ಆಗಿರುವದರಿಂದ ಅದಕ್ಕೋಸ್ಕರ ಆಹ್ವಾನಗಳೂ ವಿಸರ್ಜನೆಗಳೂ ಇರಲಾರವು. ಈ ಲಿಂಗವು ತನ್ನಲ್ಲಿ ಯಾವಾಗಲೂ ಜಾಗ್ರತವಾಗಿಯೇ ಇರುವದು. ವೀರಶೈವನು ತಾನು ಎಚ್ಚರಿರುವಾಗಲೂ ನಿದ್ದೆ ಹೋಗುವಾಗಲೂ ನಿಲ್ಲುವಾಗಲೂ ಮಾತಾಡುವಾಗಲೂ ಕೂತಾಗಲೂ ಲಿಂಗ ಚೈತನ್ಯ ಯುಕ್ತವಾಗಿಯೇ ಆಚರಿಸುವನು. ಇದೇ ಅವನ ಕ್ರಮವಾಗಿರುತ್ತದೆ. ಆದ್ದರಿಂದ ಇಂಥಿಂಥ ಕಾಲದಲ್ಲಿ ಅವನಲ್ಲಿ ಲಿಂಗವಿರುತ್ತದೆ ಇಂಥಿಂಥ ಕಾಲದಲ್ಲಿ ಲಿಂಗವು ಹೋಗುತ್ತದೆ ಎಂದು ತಿಳಿಯುವದು ಅಪದ್ಧವು. ಆದ್ದರಿಂದ ಲಿಂಗವನ್ನು ಕರಕಮಲದಲ್ಲಿಟ್ಟು ಆಹ್ವಾನಿಸುವದೂ ಆಗ ಅದು ಬಂದಿತೆಂತು ತಿಳಿಯುವದೂ ಪೂಜೆ ಮುಗಿದ ಬಳಿಕ ಅದು ಹೋಯಿತೆಂದೂ ಭಾವಿಸುವದೂ ವೀರಶೈವ ಮತಕ್ಕೆ ತೀರ ಹೊರತಾದವುಗಳು. ಆದರೆ ಇತ್ತಿತ್ತ ಕೆಲವು ವೀರಶೈವರು ಷಟ್‌ಸ್ಥಲದ ಮತ್ತು ಅಷ್ಟಾವರಣದ ಮಾರ್ಗವನ್ನರಿಯದೆ ಕೇವಲ ಬ್ರಾಹ್ಮಣ ಪದ್ಧತಿಗಳನ್ನು ಅನುಸರಿಸಿ ಅವುಗಳಂತೆ ತಮ್ಮ ಆಚಾರ ವಿಚಾರಗಳನ್ನು ಮಾರ್ಪಡಿಸುವ ಪ್ರಯತ್ನಗಳನ್ನು ಮಾಡುವುದಾಗಿ ತೋರಿಬರುತ್ತದೆ. ಆದರೆ ಹೀಗೆ ಮಾಡುವದು ಶಿವಶರಣರ ಮತ್ತು ವೀರಶೈವ ಮತಪ್ರವರ್ತಕರ ಆಚರಣೆಗೆ ವಿರೋಧವಾಗಿರುತ್ತದೆ.

ಮೇಲ್ಕಂಡ ವೀರಶೈವ ಮಾರ್ಗದಿಂದ ಲಿಂಗವನ್ನು ಪೂಜಿಸಿದ್ದಾದರೆ, ಇಷ್ಟ ಪ್ರಾಣ ಭಾವಲಿಂಗಗಳು ತನ್ನಲ್ಲಿ ಜಾಗ್ರತವಾಗುವದಲ್ಲದೆ ಅವುಗಳಿಗೆ ಸಂಬಂಧಿಸಿದ ಆರು ಲಿಂಗಸ್ಥಲಗಳೂ ಸಂಬಂಧ ಪಡುವವು. ಈ ಆರು ಲಿಂಗಗಳನ್ನು ಹೀಗೆ ತನ್ನಲ್ಲಿ ಗೋಚರ ಮಾಡಿಕೊಂಡಾಗಲೇ, ಅವನ ಲಿಂಗ ಪೂಜೆಯು ಸಾರ್ಥಕವು. ಇದೇ ಶಿವಯೋಗವೆನಿಸುತ್ತದೆ. ಇದೇ ಷಟ್‌ಸ್ಥಲಾತ್ಮಕ ಲಿಂಗಪೂಜೆಯು. ಇದರ ಪೂರ್ಣ ವಿವರಣೆಯನ್ನು ಶಿವಾನುಭವ ಗ್ರಂಥ ಮಾಲೆಯಲ್ಲಿಯ ಲಿಂಗಪೂಜಾ ತತ್ವಗಳು ಎಂಬ ಗ್ರಂಥದಲ್ಲಿ ವಾಚಕರು ನೋಡಬಹುದು.

---

ಯಲ್ಲಿ ಬಹಳ ದಿವಸವಿರದೆ ಮುಂದೆ ವಿದ್ಯಾಖಾತೆಯನ್ನು ಸೇರಿದರು. ಇವರು ಸನ್ ೧೮೫೬ ನೇ ಇಸ್ವಿಯ ಜಾನ್ಯುವರಿ ತಿಂಗಳಿನಲ್ಲಿ ಬೆಳಗಾ ..ಯಲ್ಲಿದ್ದ ನಾರ್ಮಲ್ ಸ್ಕೂಲಿನ ಪ್ರಿನ್ಸಿಪಾಲರಾಗಿ ನೇಮಿಸಲ್ಪಟ್ಟರು. ..ರ್ಮಲ್ ಸ್ಕೂಲ್' ಅಂದರೆ ಶಿಕ್ಷಣ ಪದ್ಧತಿಯನ್ನು ಕಲಿಸಿ ಶಿಕ್ಷಕ ಸಿದ್ಧಪಡಿಸುವ ಒಂದು ಶಾಲೆಯು. ಈ ನಾರ್ಮಲ್ ಸ್ಕೂಲು ..ಮುಂದೆ ಬೆಳೆಯುತ್ತ ಹೋಗಿ ಧಾರವಾಡ ಟ್ರೇನಿಂಗ ಕಾಲೇಜವಾಯಿತು. ಇಲ್ಲಿ ಕೆಲವು ವರ್ಷ ಕೆಲಸಮಾಡಿದ ಬಳಿಕ ಚನ್ನಬಸಪ್ಪನವರು ೧೮೬೧ನೇ ಇಸವಿಯಲ್ಲಿ ೧೯೦ ರೂಪಾಯಿಗಳ ಮೇಲೆ ಬೆಳಗಾವೀ ಡಿಪುಟಿ ಎಜ್ಯುಕೇಶನಲ್ ಇನ್ಸ್ಪೆಕ್ಟರರಾಗಿ ನೇಮಿಸಲ್ಪಟ್ಟರು. ಅಲ್ಲಿ ಸುಮಾರು ೯ ವರ್ಷ ಕೆಲಸಮಾಡಿದ ಬಳಿಕ ೧೮೭೦ ನೇ ಇಸವಿಯಲ್ಲಿ ಅವರು ೨೦೦ ರೂಪಾಯಿಗಳ ಮೇಲೆ ಧಾರವಾಡ ಡಿಪುಟಿ ಎಜ್ಯುಕೇಶನಲ್ ಇನಸ್ಪೆಕ್ಟರರಾಗಿ ನೇಮಿಸಲ್ಪಟ್ಟರು. ಅದೇ ಉದ್ಯೋಗವನ್ನು ಅವರು ತಮ್ಮ ಮರಣದ ವರೆಗೆ ಅಂದರೆ ೧೮೮೧ ನೇ ಇಸವಿಯ ಜಾನ್ಯೂವರಿ ೪ ನೇ ತಾರೀಖಿನ ವರೆಗೆ ಮಾಡಿದರು. ನಡುವೆ ಒಂದೆರಡು ಸಾರೆ ಮಾತ್ರ ಅವರು ಆ್ಯಕ್ಟಿಂಗ ಎಜ್ಯುಕೇಶನಲ್ಲ ಇನಸ್ಪೆಕ್ಟರರಾಗಿ ನೇಮಿಸಲ್ಪಟ್ಟಿದ್ದರು. ಈ ಪ್ರಕಾರ ಚನ್ನಬಸವಪ್ಪನವರು ಬಹುತರವಾಗಿ ತಮ್ಮ ಆಯುಷ್ಯವನ್ನೆಲ್ಲ ವಿದ್ಯಾಖಾತೆಯಲ್ಲಿಯೇ ಕಳೆದರು. ಈ ಅವಧಿಯಲ್ಲಿ ಅವರು ಸರಕಾರದ ಸೇವೆಯನ್ನು ಮನಃಪೂರ್ವಕವಾಗಿ ಮಾಡಿದ್ದಲ್ಲದೆ, ತಮ್ಮ ದೇಶದ ಬಗ್ಗೆ ಮತ್ತು ಜನರ ಬಗ್ಗೆ ತಾವು ಮಾಡತಕ್ಕ ಕರ್ತವ್ಯಗಳನ್ನು ಮಾಡಿ, ಹೆಸರುವಾಸಿಗಳಾದರು.

ಚನಬಸವಪ್ಪನವರು ತಮ್ಮ ಶಾಳಾ ಸುಧಾರಣೆಯ ಕಾರ್ಯದಲ್ಲಿ ಬಹು ದಕ್ಷರಾಗಿದ್ದರು. ಅವರು ತಮ್ಮ ವೇಳೆಯನ್ನು ಸೋಮಾರಿತನದಲ್ಲಿ ಎಂದೂ ಕಳೆಯಲಿಲ್ಲ. ಮೇಲಿಂದಮೇಲೆ ಶಾಲೆಗಳಿಗೆ ಹೋಗಿ, ಮಾಸ್ತರರು ತಮ್ಮ ಕಾರ್ಯದಲ್ಲಿ ತತ್ಪರರಾಗಿರುವರೋ ಇಲ್ಲವೋ ಎಂಬದನ್ನು ಪರೀಕ್ಷಿಸುತ್ತಿದ್ದರು. ಆದರೆ ಅವರು ತಮ್ಮ ಅಧಿಕಾರದಲ್ಲಿ ಯಾರಿಗೂ ಅಹಿತ ಮಾಡಲಿಲ್ಲ. ಅವರು ಸಿಟ್ಟಿನ ಸ್ವಭಾವದವರೂ ಬಿರಿಸು ಮಾತಿನವರೂ ಆಗಿದ್ದರು. ಆದರೂ ಅವರು ಸ್ವಭಾವತಃ ದಯಾರ್ದ್ರ ಹೃದಯ ಉಳ್ಳವರಾಗಿದ್ದದರಿಂದ, ಮಾಡಿದ ತಪ್ಪುಗಳನ್ನು ಕೂಡಲೇ ಕ್ಷಮಿಸುತ್ತಿದ್ದರು. ಮಾಸ್ತರರಲ್ಲಿ ಯಾರಾದರೂ ಚನ್ನಾಗಿ ಕೆಲಸ ಮಾಡುವವರಿದ್ದರೆ ಅವರು ಅವರನ್ನು ಬಹಳ ಪ್ರೋತ್ಸಾಹಿಸುತ್ತಿದ್ದರು. ಅವರಲ್ಲಿ

ಒಂದು ವೇಳೆ ಗಣಿತ ಬಲ್ಲವರಿದ್ದರಂತೂ ಅವರು ಅವರನ್ನು ಬಹಳ ವಾಗಿ ಪ್ರೀತಿಸುತ್ತಿದ್ದರು. ಈ ಮೇರೆಗೆ ಚನ್ನಬಸವಪ್ಪನವರ ವರ್ತನವಿದ್ದ ವರಿಂದ, ಅವರ ಕೈಕೆಳಗಿನ ಮಾಸ್ತರರು ಅವರ ಬಗ್ಗೆ ಬಹು ಪೂಜ್ಯ ಬುದ್ಧಿಯುಳ್ಳವರಾಗಿದ್ದರು. ಚನ್ನಬಸವಪ್ಪನವರಲ್ಲಿದ್ದ ಶ್ರೇಷ್ಠಗುಣಗಳ್ನು ಕರ್ತವ್ಯ ದಕ್ಷತೆಯನ್ನೂ ಅವರ ವರಿಷ್ಠರಾದ ರಸಲ್ ದೊರೆಗಳು ಸಂಪೂರ್ಣವಾಗಿ ಅರಿತು ಕೊಂಡಿದ್ದರು. ಆದ್ದರಿಂದ ಅವರ ವಿಶ್ವಾಸವು ಅವರ ಮೇಲೆ ತುಂಬಾ ಇತ್ತು. ಈ ಮೇರೆಗೆ ಚನ್ನಬಸವಪ್ಪನವರು ತಮ್ಮ ಕೆಲಸದಲ್ಲಿ ಮೇಲಿನವರಿಗೂ ಕೆಳಗಿನವರಿಗೂ ಬಹು ಪ್ರಿಯರಾಗಿದ್ದರು.

## ಶಿಕ್ಷಣ ಪ್ರಸಾರದ ಬಗ್ಗೆ ಪ್ರಯತ್ನಗಳು.

ಮೇಲ್ಕಂಡ ಗುಣಗಳುಳ್ಳ ಅಧಿಕಾರಿಗಳು ಪ್ರತಿಯೊಂದು ಸರಕಾರೀ ಖಾತೆಯಲ್ಲಿ ಅನೇಕರು ಯಾವಾಗಲೂ ಸಿಗುವದುಂಟು. ಆದರೆ ಚನ್ನಬಸವಪ್ಪನವರ ಹೆಸರು ನಮ್ಮ ಕರ್ನಾಟಕಸ್ಥರ ಮನಸ್ಸಿನಲ್ಲಿ ಹ್ಯಾಗೆ ಶಾಶ್ವತವಾಗಿ ಉಳಿದಿರುತ್ತದೋ ಹಾಗೆ ಅವರ ಹೆಸರುಗಳು ಮಾತ್ರ ನಮ್ಮ ನಾಡಿನಲ್ಲಿ ಉಳಿದಿರುವದಿಲ್ಲ. ಇದಕ್ಕೆ ಕೆಲವು ಕಾರಣಗಳುಂಟು. ಚನ್ನಬಸವಪ್ಪನವರು ಒಂದುವೇಳೆ ತಮ್ಮ ಸರಕಾರೀ ಕೆಲಸವನ್ನು ಬರೇ ಪಗಾರದ ಆಶೆಯಿಂದ ಮಾಡುವವರಾಗಿದ್ದರೆ, ಅವರ ನೆನಪು ಸಹ ನಮ್ಮಲ್ಲಿ ಉಳಿಯುತ್ತಿದ್ದಿಲ್ಲ. ಆದರೆ ಅವರು ತಮ್ಮ ಕಾರ್ಯದಲ್ಲಿ ಒಂದು ಶ್ರೇಷ್ಠ ಗುರಿಯನ್ನು ಹಿಡಿದವರಾಗಿದ್ದರು. ಅವರ ಮನಸ್ಸಿನಲ್ಲಿ ಅಜ್ಞಜನ ಸಮುದಾಯದಲ್ಲಿ ವಿದ್ಯಾಪ್ರಸಾರ ಮಾಡಿ ಕರ್ನಾಟಕ ಪ್ರಾಂತವನ್ನು ಮುಂದಕ್ಕೆ ಒಯ್ಯುವ ಶ್ರೇಷ್ಠ ಆಕಾಂಕ್ಷೆಯು ಪೂರ್ಣವಾಗಿ ತುಂಬಿಕೊಂಡಿತ್ತು. ಮತ್ತು ಅದಕ್ಕನುಗುಣವಾಗಿಯೇ ಅವರು ತಮ್ಮ ಕಾರ್ಯದಲ್ಲಿ ಪ್ರವರ್ತಿಸುತ್ತಿದ್ದರು. ಆದುದರಿಂದಲೇ ಅವರು ಇಷ್ಟು ಲೋಕಪ್ರಿಯರೂ ಇಷ್ಟು ಜನಹಿತ ಕರ್ತೃಗಳೂ ಆಗಲು ಶಕ್ತರಾದರು.

ಚನ್ನಬಸವಪ್ಪನವರು ಡಿಪೂಟಿ ಎಜ್ಯುಕೇಶನಲ್ಲ ಇನಸ್ಪೆಕ್ಟರರಾಗುವ ಪೂರ್ವದಲ್ಲಿ, ನಮ್ಮ ಭಾಗದಲ್ಲಿ ಬಹು ಸ್ವಲ್ಪ ಶಾಲೆಗಳಿದ್ದವು. ಆಕಾಲಕ್ಕೆ ಜನರಲ್ಲಿ ವಿದ್ಯಾಕಾಂಕ್ಷೆಯು ಅತ್ಯಲ್ಪವಾಗಿದ್ದಿತು. ಆದ್ದರಿಂದ ಚನ್ನಬಸವಪ್ಪನವರು ಡಿಪೂಟಿ ಎಜ್ಯುಕೇಶನಲ್ಲ ಇನಸ್ಪೆಕ್ಟರರಾದ ಮೇಲೆ, ಅವರು ಊರೂರಿಗೆ ಹೋಗಿ, ಶಾಲೆಗಳನ್ನು ಸ್ಥಾಪಿಸಲು ಜನರಿಗೆ ಬಹಳ ಉತ್ತೇ

ಜನ ಕೊಡಹತ್ತಿದರು. ಅವರು ಸ್ವಾಭಾವಿಕವಾಗಿ ವಾಕ್ಪ್ರವೀಣರಿದ್ದರು. ಅವರಲ್ಲಿ ಲೋಹಚುಂಬಕದಂತೆ ಜನರ ಮನಸ್ಸನ್ನು ಎಳೆಯುವ ಮೇಲಾದ ಗುಣವಿತ್ತು. ಅವರು ಹಳ್ಳಿಗಳಿಗೆ ಹೋದಾಗ್ಗೆ ಒಬ್ಬ ಉಪದೇಶಕನಂತೆ ತಮ್ಮ ಅಜ್ಞಬಂಧುಗಳನ್ನು ತಮ್ಮ ಸುತ್ತಲು ನೆರೆಯಿಸಿಕೊಂಡು, ವಿದ್ಯೆಯ ಮಹತ್ವವನ್ನೂ ನೀತಿಯಮಾತುಗಳನ್ನೂ ಅವರಿಗೆ ಹೇಳುತ್ತಿದ್ದರು. ಈ ತರದ ಪ್ರಯತ್ನಗಳನ್ನು ಅವರು ಎಡೆಬಿಡದೆ ಸಾಗಿಸಿದ್ದದರಿಂದ, ಹಳ್ಳಿ ಹಳ್ಳಿಗಳಲ್ಲಿ ಶಾಲೆಗಳು ಬಹು ಭರದಿಂದ ಸ್ಥಾಪಿಸಲ್ಪಡಹತ್ತಿದವು. ಇದಲ್ಲದೆ ಅವರ ಮೇಲೆ ಎಜ್ಯುಕೇಶನಲ್ಲ ಇನಸ್ಪೆಕ್ಟರರಾಗಿದ್ದ ಮಿ. ರಸಲ್ ಥೊರೆಗಳಂಥ ಕಾರ್ಯದಕ್ಷರೂ, ಕರ್ನಾಟಕಹಿತಾಪೇಕ್ಷಿಗಳೂ ಆದ ಯುರೋಪಿಯನ್ನ ಅಧಿಕಾರಿಗಳಿದ್ದರು. ಇವರ ಮನಸ್ಸಿನಲ್ಲಾದರೂ ಕನ್ನಡ ನಾಡಿನಲ್ಲಿ ವಿದ್ಯಾಪ್ರಸಾರ ಮಾಡುವ ಆಕಾಂಕ್ಷೆಯು ಸಂಪೂರ್ಣವಾಗಿತ್ತು. ಮತ್ತು ಅವರಿಗೆ ನಮ್ಮ ಕರ್ನಾಟಕದ ಸುದೈವದಿಂದ, ಚನ್ನಬಸವಪ್ಪನವರಂಥ ಕರ್ನಾಟಕದ ಅಭಿಮಾನಿಗಳೂ ಕಾರ್ಯದಕ್ಷರೂ ಆದ ಅಧಿಕಾರಿಗಳು ಸಿಕ್ಕದ್ದರಿಂದ ಇವರಿಬ್ಬರ ವಿಶೇಷ ಸಹಾಯದಿಂದ ನಮ್ಮ ಕರ್ನಾಟಕವಲ್ಲಿ ಬಹು ತೀವ್ರವಾಗಿ ವಿದ್ಯಾಪ್ರಸಾರವಾಗಹತ್ತಿತು. ಇದು ಕೆಳಗೆ ಕಾಣಿಸಿದ ಅಂಕಿಗಳಿಂದ ವಾಚಕರಿಗೆ ಸ್ಪಷ್ಟವಾಗಿ ತಿಳಿದು ಬರುವಂತೆ ಇದೆ.

| ಸಂ | ಜಿಲ್ಹೆ. | ವರ್ಷ. | ಶಾಲೆಗಳು | ವಿದ್ಯಾರ್ಥಿಗಳು. |
|---|---|---|---|---|
| ೧ | ಧಾರವಾಡ | ೧೮೫೫—೫೬ | ೧೨ | ೧೩೪೧ |
| | | ೧೮೬೫—೬೬ | ೪೮ | ೪೧೬೪ |
| | | ೧೮೮೨—೮೩ | ೩೪೧ | ೨೯, ೭೧೧ |
| ೨ | ಬೆಳಗಾವ | ೧೮೫೫—೫೬ | ೧೩ | ೧೪೯೮ |
| | | ೧೮೬೫—೬೬ | ೫೫ | ೪೩೭೪ |
| | | ೧೮೮೨—೮೩ | ೧೭೭ | ೧೫, ೮೧೯ |
| ೨ | ವಿಜಾಪುರ | ೧೮೫೫—೫೬ | ೯ | ೩೯೫ |
| | | ೧೮೬೫—೬೬ | ೪೬ | ೨೮೭೭ |
| | | ೧೮೮೨—೮೩ | ೧೫೦ | ೯೯೬೪ |

ಈ ಅಂಕಿಗಳಿಂದ ೧೮೬೫—೬೬ರಲ್ಲಿ ಮೂರೂ ಕನ್ನಡ ಜಿಲ್ಹೆಗಳಲ್ಲಿ ಬಹುತರವಾಗಿ ಅಷ್ಟೇ ಶಾಲೆಗಳಿದ್ದವು. ಅಂದರೆ ಅವು ೪೫-೫೦ ಮಾತ್ರ

ವಿದ್ದವು ಆದರೆ ಮುಂದೆ ಅವು ಭರದಿಂದ ಹೆಚ್ಚಾಗುತ್ತಹೋದದ್ದು ಕಂಡು ಬರುತ್ತದೆ. ಆದರೆ ಚನ್ನಬಸವಪ್ಪನವರು ಹೆಚ್ಚಾಗಿ ಕಾರ್ಯಮಾಡಿದ ಧಾರವಾಡ ಜಿಲ್ಹೆಯಲ್ಲಿ ಶಾಲೆಗಳು ಬಹು ತೀವ್ರವಾಗಿ ಬೆಳೆದವೆಂಬುದು ವಾಚಕರ ದೃಷ್ಟಿಗೆ ಬೀಳುವಂತೆ ಇದೆ. ಅವರ ಪ್ರಯತ್ನಗಳಿಂದ ಧಾರವಾಡ ಜಿಲ್ಹೆಯಲ್ಲಿ ಪ್ರಾಥಮಿಕ ಶಿಕ್ಷಣವು ಬಹು ಒತ್ಮರದಿಂದ ಸಾಗಿತು. ಈ ಕಾರಣದಿಂದಲೇ ಆ ಜಿಲ್ಹೆಯು ಈಗಲೂ ಕರ್ನಾಟಕದಲ್ಲಿ ವಿದ್ಯೆಯಲ್ಲಿ ಮುಂದಾದ ಜಿಲ್ಹೆಯಾಗಿದೆ.

## ಕನ್ನಡ ಭಾಷೆಗೆ ಉತ್ತೇಜನ.

ಚನ್ನಬಸಪ್ಪನವರು ಕನ್ನಡ ಭಾಷೆಗೆ ಉತ್ತೇಜನಕೊಟ್ಟು ಆ ಭಾಷೆಯ ಶಾಲೆಗಳನ್ನು ಹೆಚ್ಚಿಸಲಿಕ್ಕೆ ಬಹು ಶ್ರಮಪಟ್ಟರು. ಇದು ಅವರು ಮಾಡಿದ ಮತ್ತೊಂದು ಮಹತ್ಕಾರ್ಯವಾಗಿರುತ್ತದೆ. ಅವರು ವಿದ್ಯಾಖಾತೆಗೆ ಸೇರುವ ಮೊದಲು ಬಹುತರವಾಗಿ ಮುಂಬಯಿ ಕರ್ನಾಟಕದಲ್ಲಿ ಮರಾಠಿಯ ಶಾಲೆಗಳೇ ಹೆಚ್ಚಾಗಿದ್ದವು. ಇಂಗ್ಲಿಷ್ ರಾಜ್ಯದ ಪ್ರಾರಂಭದ ಕಾಲಕ್ಕೆ ಇಲ್ಲಿಯ ಮುಖ್ಯಾಧಿಕಾರಿಗಳು ಮಹಾರಾಷ್ಟ್ರೀಯರೇ ಇದ್ದದರಿಂದ, ಮರಾಠೀಭಾಷೆಯು ಸರಕಾರೀ ಕಚೇರಿಗಳಲ್ಲಿ ಪ್ರಚಲಿತವಾದ ಭಾಷೆಯಾಗಿತ್ತು. ಆದ್ದರಿಂದ ವ್ಯಾಪಾರಸ್ತರೂ ಬ್ರಾಹ್ಮಣರೂ ಕೂಡ ತಮ್ಮ ಪತ್ರವ್ಯವಹಾರಗಳನ್ನು ಅದೇ ಭಾಷೆಯಲ್ಲಿ ಇಡುವ ಪರಿಪಾಠವು ಬಿದ್ದಿತ್ತು. ಆದುದರಿಂದ ಜನರಲ್ಲಿ ಕರ್ನಾಟಕ ಭಾಷೆಯ ಬಗ್ಗೆ ಅನಾಸ್ಥೆಯುಂಟಾಗಿ ಎಲ್ಲರೂ ತಮ್ಮ ಮಕ್ಕಳಿಗೆ ಮರಾಠೀ ಭಾಷೆಯನ್ನೇ ಕಲಿಸಲು ಅಪೇಕ್ಷಿಸುತ್ತಿದ್ದರು. ಚನ್ನಬಸವಪ್ಪನವರಾದರೂ ಶಾಲೆಯಲ್ಲಿ ಮರಾಠೀ ಭಾಷೆಯನ್ನೇ ಕಲಿತವರಾಗಿದ್ದರು. ಆ ಭಾಷೆಯಲ್ಲಿ ಮಾತಾಡಲಿಕ್ಕೂ ಬರೆಯಲಿಕ್ಕೂ ಅವರಿಗೆ ಬಹಳ ಚನ್ನಾಗಿ ಬರುತ್ತಿತ್ತು. ಹೀಗಿದ್ದರೂ ಅವರು ತಮ್ಮ ಮಾತೃಭಾಷೆಯನ್ನು ಮರೆತು ಬಿಡಲಿಲ್ಲ. ದೇಶಭಾಷೆಗಳ ಮಹತ್ವವನ್ನು ಅವರು ಪೂರ್ಣವಾಗಿ ತಿಳಿದವರಾಗಿದ್ದರು ಆದ್ದರಿಂದ ಕರ್ನಾಟಕಸ್ಥರಿಗೆ ಕನ್ನಡ ಜ್ಞಾನವೇ ವಿದ್ಯಾಪ್ರಸಾರಕ್ಕೆ ಉಪಯುಕ್ತವಾದುದೆಂದು ತಿಳಿದುಕೊಂಡು, ಅವರು ಆ ಭಾಷೆಯ ಶಾಲೆಗಳಿಗೆ ಬಹು ಪ್ರೋತ್ಸಾಹನ ಕೊಡಹತ್ತಿದರು. ರಸಲ್ ಧೊರೆಗಳಾದವರೂ ಚನ್ನಬಸವಪ್ಪನವರಿಗೆ ಪೂರ್ಣವಾಗಿ ಸಹಾಯ ಮಾಡಹತ್ತಿದರು. ಇದರಿಂದ

ಧಾರವಾಡ ಜಿಲ್ಲೆಯ ಎಲ್ಲ ಹಳ್ಳಿಗಳಲ್ಲಿ ಕನ್ನಡ ಶಾಲೆಗಳು ಬಹು ತೀವ್ರ ವಾಗಿ ಬೆಳೆಯಹತ್ತಿದವು. ಅವು ಬೆಳೆದ ಹಾಗೆ ಜನರಲ್ಲಿಯೂ ಕನ್ನಡ ಭಾಷೆಯ ವಿಷಯವಾಗಿ ಪ್ರೀತಿಯೂ ಆದರವೂ ಮೆಲ್ಲಮೆಲ್ಲಗೆ ಬೆಳೆಯ ಹತ್ತಿದವು. ಈ ಮೇರೆಗೆ ಕರ್ನಾಟಕದಲ್ಲಿ ಶುದ್ಧವಾದ ವಿದ್ಯೆಯ ತಳಹ ದಿಯನ್ನು ಮೊದಲು ಊರಿದವರು ಚನ್ನಬಸವಪ್ಪನವರೇ ಎಂದು ನಿಶ್ಚಯ ಪೂರ್ವಕವಾಗಿ ಹೇಳಬಹುದು.

ಚನ್ನಬಸಪ್ಪನವರು ಕನ್ನಡ ಭಾಷೆಯನ್ನು ಪ್ರೋತ್ಸಾಹಿಸಲಿಕ್ಕೂ ಅದರ ಬಗ್ಗೆ ಜನರಲ್ಲಿ ಅಭಿಮಾನವನ್ನು ಹುಟ್ಟಿಸಲಿಕ್ಕೂ ಅನೇಕ ಉಪಾಯಗ ಳನ್ನು ಕೈಕೊಂಡರು. ತಮ್ಮ ಮಾಸ್ತರ ಜನರಲ್ಲಿ ಯಾರಾದರೂ ಮರಾಠೀ ಭಾಷೆಯನ್ನು ಉಪಯೋಗಿಸುತ್ತಿದ್ದರೆ ಅವರು ಕೂಡಲೇ ತಮ್ಮ ಸ್ವಾಭಾ ವಿಕ ಮರ್ಮೋಕ್ತಿಗಳಿಂದ ಅವರಿಗೆ ಸಿಟ್ಟು ಮಾಡಿ ಹೇಳುತ್ತಿದ್ದರು. ಅನೇಕ ಮಾಸ್ತರರು ಮರಾಠೀ ಮಿಶ್ರವಾದ ಅಶುದ್ಧ ಕನ್ನಡ ಭಾಷೆಯಲ್ಲಿ ತಮ್ಮ ರಿಪೋರ್ಟುಗಳನ್ನು ಬರೆಯುತ್ತಿದ್ದರು. ಅಂಥವುಗಳನ್ನು ಚನ್ನಬಸವಪ್ಪ ನವರು ತಿದ್ದಿ, ಇಂಥ ಕೆಟ್ಟ ಭಾಷೆಯನ್ನು ಉಪಯೋಗಿಸಬಾರದೆಂದು ಅವ ರಿಗೆ ಎಚ್ಚರು ಹೇಳುತ್ತಿದ್ದರು. ಯಾವನಾದರು ಮಾಸ್ತರನು ತನ್ನ ವಿದ್ಯಾ ರ್ಥಿಗಳಿಗೆ ಮರಾಠಿಯಲ್ಲಿ ಮಗ್ಗೀಕಲಿಸುತ್ತಿದ್ದರೆ—"ನೀನು ಕನ್ನಡದಲ್ಲಿ ಮಗ್ಗಿಯನ್ನು ಕಲಿಸಿದ್ದರೆ, ಇಷ್ಟು ದಿವಸಗಳ ವರೆಗೆ ಪಗಾರ ತಿಂದದ್ದು ಸಾರ್ಥಕವಾಗಿ ನಮ್ಮ ಕರ್ನಾಟಕ ದೇಶಕ್ಕೆ ಭೂಷಣ ತರುತ್ತಿದ್ದಿ" ಎಂದು ಕಠಿಣವಾಗಿ ನುಡಿಯುತ್ತಿದ್ದರು. ಅವರು ತಮ್ಮ ಮಾಸ್ತರ ಜನರಿಗೆ ಶುದ್ಧ ಕನ್ನಡವನ್ನು ಉಪಯೋಗಿಸುತ್ತಿರಬೇಕೆಂದು ಸರ್ಕ್ಯುಲರಗಳನ್ನು ಮೇಲಿಂದ ಮೇಲೆ ಪ್ರಸಿದ್ಧಿಸುತ್ತಿದ್ದರು. ಯಾರಾದರು ಮರಾಠಿಯಲ್ಲಿ ಸಹಿ ಮಾಡಿ ದರೆ ಅಥವಾ ಅದೇ ಮೇರೆಗೆ ತಮಗೆ ಮರಾಠೀ ಬರುತ್ತದೆಂಬ ಹೆಮ್ಮೆ ಯಿಂದ ಆ ಭಾಷೆಯಲ್ಲಿ ಮಾತಾಡ ಹೋದರೆ, ಅವರ ತಪ್ಪನ್ನು ಅವರಿಗೆ ತಿಳಿಸಿ, ಕನ್ನಡವನ್ನೇ ಉಪಯೋಗಿಸಬೇಕೆಂದು ಅವರಿಗೆ ಹೇಳುತ್ತಿದ್ದರು. ಅದೇ ಮೇರೆಗೆ ಯಾರಾದರು ತಮ್ಮ ಲೆಖ್ಖವನ್ನು ಇಲ್ಲವೇ ಪತ್ರಗಳನ್ನು ಮರಾಠಿಯಲ್ಲಿ ಬರೆಯುತ್ತಿದ್ದರೆ, ಅವರಿಗೆ ಸ್ವಭಾಷೆಯನ್ನೇ ಉಪಯೋಗಿ ಸತಕ್ಕದ್ದೆಂದು ಸಿಟ್ಟು ಮಾಡಿ ಹೇಳುತ್ತಿದ್ದರು. ಈ ಮೇರೆಗೆ ಚನ್ನಬಸಪ ನವರು ತಾವು ಹೋದ ಹೋದಲ್ಲಿ ಕನ್ನಡ ಭಾಷೆಯ ಮತ್ತು ಕರ್ನಾಟ ಕದ ವಿಷಯವಾಗಿ ಜನರಿಗೆ ತಿಳಿಸಿ ಹೇಳುವ ಯಾವ ಸಂಧಿಯನ್ನು ವ್ಯರ್ಥ

ವಾಗಿ ಕಳೆದುಕೊಳ್ಳುತ್ತಿದ್ದಿಲ್ಲ. ಚನ್ನಬಸಪ್ಪನವರು ಆ ಕಾಲಕ್ಕೆ ಒಬ್ಬ ದೊಡ್ಡ ವಿದ್ಯಾಧಿಕಾರಿಗಳಿದ್ದು, ಅವರು ಈ ವಿಷಯಗಳ ಬಗ್ಗೆ ಮೇಲಿಂದ ಮೇಲೆ ಪ್ರಸ್ತಾಪಿಸಿ ಜನರಲ್ಲಿ ಅವುಗಳನ್ನು ಬಿಂಬಿಸಲು ಸದಾ ತತ್ಪರರೂ ಸಮರ್ಥರೂ ಇದ್ದದರಿಂದ, ಅವರ ಉಪದೇಶದ ಪರಿಣಾಮವು ಜನರ ಮೇಲೆ ಬಹಳವಾಗುತ್ತಿತ್ತು. ಅದರಿಂದಲೇ ಧಾರವಾಡ ಜಿಲ್ಲೆಯು ಈಗ ಸಂಪೂರ್ಣ ಕನ್ನಡ ಜಿಲ್ಲೆಯಾಗಿರುತ್ತದೆ. ಆದರೆ ಆ ಕಾಲಕ್ಕೆ ಹೀಗೆ ಪ್ರಯತ್ನಿಸುವ ಅಧಿಕಾರಿಗಳು ಬೆಳಗಾವ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ಇರದ್ದರಿಂದ, ಆ ಜಿಲ್ಲೆಗಳಲ್ಲಿ ಮೇಲೆ ಕಾಣಿಸಿದಂಥ ನ್ಯೂನತೆಗಳು ಹೆಚ್ಚು ಕಡಿಮೆ ಪ್ರಮಾಣದಿಂದ ಇನ್ನೂ ದೃಗ್ಗೋಚರವಾಗುತ್ತವೆ.

ಪ್ರಥಮದಲ್ಲಿ ಚನ್ನಬಸವಪ್ಪನವರಿಗೆ ಈ ಕೆಲಸದಲ್ಲಿ ಅನೇಕ ತೊಂದರೆಗಳು ತಟ್ಟಿದವು. ಅವರ ದೇಶಬಾಂಧವರೇ ಅವರನ್ನು ಮೊದಲು ಹೀಯಾಳಿಸತೊಡಗಿದರು. ಮತ್ತು ಅನೇಕರಂತು ಅವರಿಗೆ ಹಗೆಗಳಾದರು. ಆದರೆ ಚನ್ನಬಸವಪ್ಪನವರು ಸ್ವಾಭಾವಿಕವಾಗಿ ಬಹಳ ಗಟ್ಟಿಗರೂ ಸಾಹಸಿಗರೂ ಇದ್ದದರಿಂದ, ಅವರು ಯಾವದನ್ನೂ ಲಕ್ಷಿಸುತ್ತಿದ್ದಿಲ್ಲ. ಅವರು ತಮ್ಮ ಕರ್ತವ್ಯಕರ್ಮವನ್ನು ತಿಳಿದವರಾಗಿದ್ದದರಿಂದ, ಅವರು ಅಂಜದೆ ಅದರಲ್ಲಿ ಎಡೆಬಿಡದೆ ತೊಡಗುತ್ತಿದ್ದರು. ಇಂಥ ನಿರಂತರ ಪ್ರಯತ್ನಗಳಿಂದಲೇ ಸುಕಾರ್ಯಗಳ ಸುಖಾವಹ ಪರಿಣಾಮಗಳು ಮೊದಲು ಮೆಲ್ಲಮೆಲ್ಲಗೆ ಜನರಲ್ಲಿ ತಲೆದೋರಹತ್ತುತ್ತವೆ. ಆ ಮೇಲೆ ಸ್ವಲ್ಪಕಾಲದಲ್ಲಿ ಅವು ಹೆಚ್ಚಾಗಿ ಪಸರಿಸಿ, ಅವುಗಳ ಸುಪರಿಣಾಮಗಳು ಸ್ಪಷ್ಟವಾಗಿ ಕಂಗೊಳಿಸಹತ್ತುತ್ತವೆ.

## ವಾಙ್ಮಯ ಪ್ರೋತ್ಸಾಹ.

ಚನ್ನಬಸವಪ್ಪನವರು ಕನ್ನಡ ಭಾಷೆಯ ಬಗ್ಗೆ ಮಾಡಿದ ಈ ಪ್ರಯತ್ನಗಳ ಸುಪರಿಣಾಮಗಳು ಸ್ವಲ್ಪ ದಿವಸಗಳಲ್ಲಿಯೇ ತಲೆದೋರಹತ್ತಿದವು. ಅವರ ಪ್ರಯತ್ನಗಳಿಂದ ಕನ್ನಡ ಶಾಲೆಗಳು ಎಲ್ಲಕಡೆಗೆ ಪಸರಿಸಹತ್ತಿದ ಹಾಗೆ ಕನ್ನಡ ಓದುಬರಹ ಬಲ್ಲವರೂ ಹೆಚ್ಚಾಗಹತ್ತಿದರು. ಧಾರವಾಡ ಜಿಲ್ಹೆಯಲ್ಲಿ ಮೊದಲು ವ್ಯಾಪಾರಸ್ತರು ಮರಾಠಿಯಲ್ಲಿ ತಮ್ಮ ಲೆಖ್ಖಪತ್ರಗಳನ್ನು ಇಡುತ್ತಿದ್ದರು. ಇವರು ಹಿಂದುಗಡೆ ಅವುಗಳನ್ನು ಕನ್ನಡದಲ್ಲಿಯೇ ಇಡಹತ್ತಿದರು. ಅದರಂತೆಯೇ ಕನ್ನಡ ಗ್ರಂಥಕಾರರೂ ಲೇಖಕರೂ

ಮೆಲ್ಲಮೆಲ್ಲಗೆ ಹೊರಬೀಳಹತ್ತಿದರು. ಗ್ರಾಮಗಳಲ್ಲಿ ಇಂಥವರು ಯಾರಾದರೂ ಇದ್ದರೆ ಚನ್ನಬಸಪ್ಪನವರು ಅವರನ್ನು ಬಹಳ ಪ್ರೋತ್ಸಾಹಿಸುತ್ತಿದ್ದರು. ಮತ್ತು ಅವರ ಕೂಡ ಅವರು ಬಹು ಮಿತ್ರತ್ವದಿಂದ ನಡೆಯುತ್ತಿದ್ದರು. ಚನ್ನಬಸವಪ್ಪನವರಾದರೂ ಸ್ವತಃ ಕೆಲವು ಗ್ರಂಥಗಳನ್ನು ಬರೆದರು. ಅವರು ತಮ್ಮ ಪ್ರೀತಿಯವಿಷಯವಾದ ಗಣಿತದಲ್ಲಿ ೨ ಪುಸ್ತಕಗಳನ್ನು ರಚಿಸಿದರು. ಈ ಪುಸ್ತಕಗಳು ಚನ್ನಬಸವಪ್ಪನವರು ತೀರಿದ ಮೇಲೆ ೧೦--೧೫ ವರ್ಷಗಳ ವರೆಗೆ ಕನ್ನಡಶಾಲೆಗಳಲ್ಲಿ ಕ್ರಮಿಕ ಪುಸ್ತಕಗಳಾಗಿ ಉಪಯೋಗಿಸಲ್ಪಡುತ್ತಿದ್ದವು. ಅದೇ ಮೇರೆಗೆ ಅವರು ಶೆಕ್ಸಪೀಯರ್ ಕವಿಯ "ಕಾಮಿಡಿ ಅಫ್ ಎರರ್ಸ" ಮತ್ತು "ವ್ಯಾಕ್ಬೆಥ್" ಎಂಬ ಎರಡು ಇಂಗ್ಲಿಷ ನಾಟಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿದರು. ಇವುಗಳ ಭಾಷೆಯು ಅಷ್ಟು ಮೇಲ್ತರದ್ದಿರದಿದ್ದರೂ, ಇವು ಚನ್ನಬಸವಪ್ಪನವರ ಮನಸ್ಸಿನ ಒಲವನ್ನೂ ಕನ್ನಡಭಾಷೆಯ ಸೇವೆಯನ್ನು ಮಾಡಬೇಕೆಂಬ ಅವರ ಆಕಾಂಕ್ಷೆಯನ್ನೂ ಪ್ರಕಟಿಸುತ್ತವೆ. ಗ್ರಾಮಾಂತರಗಳಲ್ಲಿ ಸರಕಾರೀ ಶಾಲೆಗಳು ಸ್ಥಾಪಿಸಲ್ಪಡಹತ್ತಿದಂದಿನಿಂದ, ಹಳೇ ಪದ್ಧತಿಯ ಅಯ್ಯನವರ ಶಾಲೆಗಳು ಬರಬರುತ್ತ ಕಡಿಮೆಯಾಗಹತ್ತಿದವು. ಈ ಮೇರೆಗೆ ಅಯ್ಯನವರಿಗೆ ಕೆಲಸ ತಪ್ಪಿಹೋಗಲು, ಚನ್ನಬಸವಪ್ಪನವರು ಅಂಥವರನ್ನು ಸರಕಾರೀ ಶಾಲೆಗಳಲ್ಲಿ ಮಾಸ್ತರರಾಗಿ ನೇಮಿಸಿಕೊಳ್ಳಹತ್ತಿದರು. ಅವರಲ್ಲಿ ಯಾರಾದರೂ ಕನ್ನಡ ಅಭ್ಯಾಸವನ್ನು ಚನ್ನಾಗಿ ಮಾಡಿದವರಿದ್ದರೆ, ಅವರಿಗೆ ಚನ್ನಬಸವಪ್ಪನವರು ಬಹಳ ಪ್ರೋತ್ಸಾಹಿಸುತ್ತಿದ್ದರು. ಇಂಥವರಲ್ಲಿ ಗಂಗಾಧರ ಮಡಿವಾಳೇಶ್ವರ ತೂರಮುರಿ ಮತ್ತು ಶಾಂತವೀರ ರಾಚಿದೇವ ಕಿತ್ತೂರ ಇವರು ಮುಖ್ಯರು. ಗಂಗಾಧರಯ್ಯನವರು ಕನ್ನಡ ಟ್ರೇನಿಂಗ ಕಾಲೇಜದಲ್ಲಿ ಕನ್ನಡ ಶಿಕ್ಷಕರೂ ಆ ಮೇಲೆ ಅಸಿಸ್ಟಂಟಟ್ರಾನ್ಸಲೇಟರರೂ ಆಗಿದ್ದರು. ಈ ಕಾಲಕ್ಕೆ ಕನ್ನಡ ಶಾಲೆಗಳು ಹೆಚ್ಚಾಗಹತ್ತಿದ್ದರಿಂದ, ಕನ್ನಡ ಕ್ರಮಿಕ ಪುಸ್ತಕಗಳ ಅವಶ್ಯಕತೆಯು ಬಹಳೇ ಬೀಳಹತ್ತಿತು. ಆಗ ಚನ್ನಬಸವಪ್ಪನವರು ಕೆಲವು ಕ್ರಮಿಕ ಪುಸ್ತಕಗಳನ್ನು ಗಂಗಾಧರಯ್ಯನವರಕಡೆಯಿಂದ ಬರೆಯಿಸಿದರು. ಈ ಪುಸ್ತಕಗಳು ಅನೇಕ ವರ್ಷಗಳವರೆಗೆ ಶಾಲೆಗಳಲ್ಲಿ ಉಪಯೋಗಿಸಲ್ಪಡುತ್ತಿದ್ದವು. ಆಗಿನ ವಿದ್ಯಾಧಿಕಾರಿಗಳು ಹಳೆಗನ್ನಡ ಗ್ರಂಥಭಾಂಡಾರವನ್ನು ತೀರ ಅರಿಯದವರಾಗಿದ್ದರಿಂದ, ಅವರು ಮರಾಠಿ ಪದ್ಧತಿಯ ಕವಿತೆಗಳನ್ನು ಕೂಡಿಸಿ ಕನ್ನಡ

ಕ್ರಮಿಕ ಕವಿತೆಯ ಪುಸ್ತಕಗಳನ್ನು ರಚಿಸುವದರಲ್ಲಿ ತೊಡಗಿದ್ದರು. ಆದರೆ ಗಂಗಾಧರಯ್ಯನವರು ಹಳೆಗನ್ನಡವನ್ನು ಚನ್ನಾಗಿ ಬಲ್ಲದವರಾದ್ದರಿಂದ ಪ್ರಾಚೀನ ಕನ್ನಡ ಮಹಾಕವಿಗಳ, ದಾಸರ, ಮತ್ತು ಲಿಂಗಾಯತ ಸಾಧುಗಳ ನೈತಿಕಪದ್ಯಗಳನ್ನು ಕ್ರಮಿಕ ಪುಸ್ತಕಗಳಲ್ಲಿ ಸಂಗ್ರಹಿಸಿ, ಹಳೆಗನ್ನಡದ ಮಹತ್ವವನ್ನು ನಮ್ಮ ಕರ್ನಾಟಕಸ್ತರಿಗೆ ಮೊದಲು ಅರಿಕೆಮಾಡಿಕೊಟ್ಟರು. ಇದಲ್ಲದೆ ಹಳೆಗನ್ನಡ ಅಭ್ಯಾಸ ಮಾಡುವವರಿಗೆ ಉಪಯೋಗವಾಗುವಂತೆ ಇವರು ಒಂದು ಕನ್ನಡ ನಿಘಂಟನ್ನು ಸಹ ಬರೆದರು. ಇದು ಹಳೆಗನ್ನಡದ ಮೊದಲನೆಯ ನಿಘಂಟುವು. ಇದನ್ನು ಬರೆದದ್ದಕ್ಕಾಗಿ, ಸರಕಾರದವರು ಗಂಗಾಧರಯ್ಯನವರಿಗೆ ನಾಲ್ಕುಸಾವಿರ ರೂಪಾಯಗಳ ಇನಾಮನ್ನು ಕೊಟ್ಟರು. ಗಂಗಾಧರಯ್ಯನವರು ರಚಿಸಿದ ಕಾದಂಬರೀ ಗ್ರಂಥದ ಸೊಗಸನ್ನು ಕನ್ನಡನಾಡಿನಲ್ಲಿ ಅರಿಯದವರು ಯಾರೂ ಇರಲಿಕ್ಕಿಲ್ಲ. ಇದರಂತೆಯೇ ಶಾಂತವೀರ ರಾಚೀದೇವ ಕಿತ್ತೂರ ಇವರು ಹಳೆಗನ್ನಡದಲ್ಲಿ ಬಹು ಸಮರ್ಥರಾಗಿದ್ದರು. ಇವರು ಬೆಳಗಾವ ಹೈಸ್ಕೂಲಿನಲ್ಲಿಯೂ ಹಿಂದುಗಡೆ ಟ್ರೇನಿಂಗ ಕಾಲೇಜದಲ್ಲಿಯೂ ಕನ್ನಡ ಶಿಕ್ಷಕರಾಗಿದ್ದರು. ಇವರು ರಾಜಶೇಖರ ವಿಳಾಸದ ಕೆಲವು ಅಶ್ವಾಸಗಳಿಗೆ ಉತ್ತಮವಾದ ಟೀಕೆಯನ್ನು ಬರೆದಿರುವರು. ಈ ಮೇರೆಗೆ ಚನ್ನಬಸವಪ್ಪನವರ ಪ್ರೋತ್ಸಾಹನದಿಂದ ಜನರಲ್ಲಿ ಕನ್ನಡ ವಿದ್ಯೆಯಬಗ್ಗೆ ಪ್ರಿತಿಯು ಹುಟ್ಟಿತೊಡಗಿತು. ಮತ್ತು ಈ ಕಾಲಕ್ಕೆ ಕೆಲವು ಗ್ರಂಥಕಾರರೂ ಉತ್ಪನ್ನರಾದರು. ಇಂಥವರಲ್ಲಿ ವೀರಭದ್ರ ಮಡಿವಾಳೇಶ್ವರಪಂಡಿತ, ಶೇಷೋ ರಾಮಚಂದ್ರ ಚೂರಮುರಿ, ವೆಂಗಟ ರಂಗೋ ಕಟ್ಟಿ, ಭುಜಂಗರಾವ ಹುಯಿಲಗೋಳ, ಪಾಂಡುರಂಗ ಚಿಂತಾಮಣ ಪೇಟಕರ ಈ ಮಹನೀಯರು ಮುಖ್ಯರಿರುವರು. ಇವರೆಲ್ಲರೂ ಚನಬಸಪ್ಪನವರ ಸ್ನೇಹಿತರಿದ್ದು ಅವರಂತೆಯೇ ಕನ್ನಡಭಾಷೆಯ ಬಗ್ಗೆ ಮತ್ತು ಕರ್ನಾಟಕ ದೇಶದ ಬಗ್ಗೆ ನಿಶ್ಚಲವಾದ ಅಭಿಮಾನವನ್ನು ತಾಳಿದ್ದರು. ವೀರಭದ್ರ ಮಡಿವಾಳೇಶ್ವರ ಪಂಡಿತ ಇವರು ಮೊದಲು ಬೆಳಗಾವ ಹೈಸ್ಕೂಲಿನಲ್ಲಿ ಅಸಿಸ್ಟಂಟ ಮಾಸ್ತರರಾಗಿದ್ದು, ಹಿಂದುಗಡೆ ಮುನಸಿಫೀ ಪರೀಕ್ಷೆಯನ್ನು ಪಾಸಾಗಿ ಸಬಜಜ್ಜರಾದರು. ಇವರು ಚನ್ನಬಸವಪ್ಪನವರಿಂದ ಪ್ರೋತ್ಸಾಹಿಸಲ್ಪಟ್ಟು ಎರಡು ಕನ್ನಡ ಕ್ರಮಿಕ ಪುಸ್ತಕಗಳನ್ನು ರಚಿಸಿದರು. ಈ ಪುಸ್ತಕಗಳು ಪ್ರಾಥಮಿಕ ಶಾಲೆಗಳಲ್ಲಿ ಬಹಳ ದಿವಸಗಳ ವರೆಗೆ ಉಪಯೋಗಿಸಲ್ಪಡುತ್ತಿದ್ದವು. ವೆಂಕಟರಂಗೋ

ಕಟ್ಟಿಯವರು ಅರೇಬಿಯನ್ ನೈಟ್ಸದ ಭಾಷಾಂತರ, ಕನ್ನಡ ಕ್ರಮಿಕ ಪುಸ್ತಕಗಳು, ಪದಾರ್ಥ ವಿಜ್ಞಾನ ಶಾಸ್ತ್ರ ಇವೇ ಮೊದಲಾದ ಅನೇಕ ಗ್ರಂಥಗಳನ್ನು ಬರೆದು ಕನ್ನಡಕ್ಕೆ ಬಹು ಮಹತ್ವವಾದ ಸೇವೆಯನ್ನು ಮಾಡಿರುವರು. ಭುಜಂಗರಾವ ಹುಯಿಲ್‌ಗೋಳ ಇವರು ಈ ಕಾಲಕ್ಕೆ ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಿದ್ದು ಇವರಾದರೂ ಖಗೋಲ ಶಾಸ್ತ್ರದ ಮೇಲೆ ಗ್ರಂಥವನ್ನು ಬರೆದಿದ್ದಾರೆ. ಪಾಂಡುರಂಗ ಚಿಂತಾಮಣ ಪೇಟಕರ ಇವರೂ ಕೆಲವು ಶಾಲೋಪಯೋಗೀ ಪುಸ್ತಕಗಳನ್ನು ರಚಿಸಿದ್ದಾರೆ. ಧಾರವಾಡದಲ್ಲಿ ಪ್ರಸಿದ್ಧ ಮಿಶನರಿಗಳಾದ ಜಿಗ್ಲರ್ ಸಾಹೇಬರು ಒಂದು ಇಂಗ್ಲಿಷ್--ಕನ್ನಡ ನಿಘಂಟನ್ನು ಬಹು ಶ್ರಮವಹಿಸಿ ಆಕಾಲದಲ್ಲಿ ರಚಿಸಿದರು. ಈ ಕೆಲಸದಲ್ಲಿ ಚನ್ನಬಸವಪ್ಪನವರು ಅವರಿಗೆ ಬಹಳ ಸಹಾಯ ಮಾಡಿದರು. ಚನ್ನಬಸವಪ್ಪನವರ ಸ್ನೇಹಿತರಾದ ಶೇಷೋ ರಾಮಚಂದ್ರ ಚೂರಮುರಿಯವರು ಸಂಸ್ಕೃತ ಶಾಕುಂತಲ ನಾಟಕವನ್ನು ಕನ್ನಡಕ್ಕೆ ಪರಿವರ್ತಿಸಿದರು. ಇದು ಬಹು ಸೊಗಸಾದ ಗ್ರಂಥವೆಂದು ಇನ್ನೂ ಇದರ ಖ್ಯಾತಿಯು ಇದೆ. ಈ ಗ್ರಂಥವನ್ನು ಚೂರಮುರಿಯವರು ಚನ್ನಬಸವಪ್ಪನವರಿಗೆ ಬಹು ಅಭಿಮಾನದಿಂದ ಅರ್ಪಣಮಾಡಿದ್ದಾರೆ. ಚೂರಮುರಿಯವರ ಅರ್ಪಣ ಶ್ಲೋಕಗಳಲ್ಲಿ ಕನ್ನಡ ನುಡಿಯ ಬಗ್ಗೆ ಆ ಕಾಲಕ್ಕೆ ಜನರಲ್ಲಿ ಹುಟ್ಟಿದ ಒಂದು ತರದ ಸ್ಫೂರ್ತಿ ಮತ್ತು ಅಭಿಮಾನ ಇವುಗಳು ಬಹು ಚನ್ನಾಗಿ ವ್ಯಕ್ತವಾಗುವಂತೆ ಇವೆ. ಈ ಮೇಲ್ಕಂಡ ಮಹಾನುಭಾವರೆಲ್ಲರೂ ಈ ಕಾಲಕ್ಕೆ ತಮ್ಮಿಂದಾದಷ್ಟು ಕನ್ನಡ ಸೇವೆಯನ್ನು ಮಾಡಿದರು. ಮತ್ತು ಇವರು ವಿದ್ಯಾಖಾತೆಯನ್ನು ಸೇರಿ, ಜ್ಞಾನಪ್ರಸಾರದ ಶ್ರೇಷ್ಠ ಕಾರ್ಯದಲ್ಲಿ ತೊಡಗಿದರು.

ಈ ಮೇರೆಗೆ ಕನ್ನಡ ಓದುಬರಹ ಬಲ್ಲವರೂ ಕನ್ನಡ ಗ್ರಂಥಕಾರರೂ ಹೆಚ್ಚಾದ ಹಾಗೆ, ಕನ್ನಡ ಅಚ್ಚುಕೂಟಗಳೂ, ವರ್ತಮಾನ ಪತ್ರಗಳೂ ಮೆಲ್ಲಮೆಲ್ಲಗೆ ಹೊರಬೀಳಹತ್ತಿದವು. ಮೊದಲು ಕನ್ನಡ ಅಚ್ಚುಕೂಟ ತೆಗೆದವರು ಮಾದನಶೆಟ್ಟಿ ಕಲ್ಯಾಣಪ್ಪನವರು, ಅವರು ಅದರಬಗ್ಗೆ ಬಹಳ ಕಷ್ಟಬಟ್ಟರು. ಆದರೆ ಅದು ಸಿದ್ಧಿಸಲಿಲ್ಲ. ಆ ಮೇಲೆ ಹುಚ್ಚಯ್ಯಾ ವಿಭೂತಿಯವರು ಒಂದು ಕನ್ನಡಅಚ್ಚುಕೂಟನ್ನು ಇಟ್ಟು, ಅದರಲ್ಲಿಚಂದ್ರೋದಯವೆಂಬ ಒಂದು ವರ್ತಮಾನ ಪತ್ರವನ್ನು ಪ್ರಸಿದ್ಧಿಸಹತ್ತಿದರು. ಇದೇ ಕಾಲಕ್ಕೆ ಪುರಂದರದಾಸ, ಕನಕದಾಸ, ನಿಜಗುಣಶಾಸ್ತ್ರಗಳು, ಬತ್ತೀಸ

ಪುತಳಿ, ಮೊದಲಾದ ಹಳೇ ಧಾರ್ಮಿಕ ಮತ್ತು ಪೌರಾಣಿಕ ಗ್ರಂಥಗಳು ಅಚ್ಚುಕೂಟಗಳಲ್ಲಿ ಹೊರಬೀಳಹತ್ತಿದವು. ಈ ಮೇರೆಗೆ ೩೦-೪೦ ವರ್ಷಗಳ ಹಿಂದೆ ಉತ್ತರಕರ್ನಾಟಕದಲ್ಲಿ ನಡೆದ ಜ್ಞಾನಪ್ರಸಾರದ ಪ್ರಯತ್ನಗಳಿಗೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷವಾಗಿ ಚನ್ನಬಸವಪ್ಪನವರೇ ಕಾರಣರಾದರು. ಅವರು ಈ ಭಾಗದಲ್ಲಿ ಕನ್ನಡ ಶಾಲೆಗಳನ್ನು ಬೆಳಿಸಿದ್ದರಿಂದಲೂ ಕನ್ನಡ ಪಂಡಿತರನ್ನು ಮುಂದಕ್ಕೆ ತಂದು, ಅವರನ್ನು ಗ್ರಂಥ ರಚನೆಯಲ್ಲಿ ತೊಡಗಿಸಿದ್ದರಿಂದಲೂ ತಮ್ಮ ಅಪ್ರತಿಮ ಬೋಧಾಶಕ್ತಿ ಮತ್ತು ಕೃತಿಗಳಿಂದ ಕನ್ನಡ ಅಭಿಮಾನವನ್ನು ಸರಿಕರಲ್ಲಿಯೂ ಕೆಳಗಿನವರಲ್ಲಿಯೂ ಸುಶಿಕ್ಷಿತರಲ್ಲಿಯೂ ಬೆಳಿಸಿದ್ದರಿಂದಲೂ ಈ ಸುಪರಿಣಾಮಗಳು ತಲೆದೋರಹತ್ತಿದವು. ಆ ಕಾಲಕ್ಕೆ ಇಂಥ ಪ್ರಯತ್ನಗಳು ನಡೆಯದೆ ಹೋಗಿ, ಒಂದು ವೇಳೆ ಮುಂಬಯಿ ಕರ್ನಾಟಕಸ್ಥರು ಸ್ವಭಾಷೆಯನ್ನು ಬಿಟ್ಟು ಕೊಟ್ಟು, ಪರಭಾಷೆಗೆ ಅಂಟಿಕೊಂಡು, ಅದನ್ನೇ ಅವರು ಶಾಲೆಗಳಲ್ಲಿ ಕಲಿಯುತ್ತ ಕುಳಿತಿದ್ದರೆ, ಮೇಲ್ಕಂಡ ಪ್ರಯತ್ನಗಳು ಇಲ್ಲಿ ಏನೂ ಸಾಗದೆ ಜನರು ಇನ್ನೂ ಅಂಧಕಾರದಲ್ಲಿಯೇ ಉಳಿದು ಬಿಡುತ್ತಿದ್ದರು.

ಈ ವರೆಗೆ, ನಾವು ಚನ್ನಬಸವಪ್ಪನವರು ವಿದ್ಯಾಖಾತೆಯನ್ನು ಸೇರಿ ವಿದ್ಯಾಪ್ರೋತ್ಸಾಹನದಬಗ್ಗೆ ಮಾಡಿದ ನಾನಾವಿಧ ಪ್ರಯತ್ನಗಳನ್ನೂ ಅವುಗಳಿಂದ ಕರ್ನಾಟಕದೇಶದ ಮೇಲೆ ಆದ ಸುಪರಿಣಾಮಗಳನ್ನು ವಿವರಿಸಿದೆವು. ಇನ್ನು ಮೇಲೆ ಅವರ ಧಾರ್ಮಿಕ ವಿಚಾರಗಳ ವಿಷಯವಾಗಿಯೂ ಲಿಂಗಾಯತ ಸಮಾಜಕ್ಕೋಸ್ಕರ ಅವರು ಮಾಡಿದ ಪ್ರಯತ್ನಗಳ ವಿಷಯವಾಗಿಯೂ ಹೇಳುವೆವು.

## ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳು.

ಚನ್ನಬಸವಪ್ಪನವರು ನಾಸ್ತಿಕರಿದ್ದರೆಂತಲೂ ಧರ್ಮಶ್ರದ್ಧೆ ಇಲ್ಲದವರಿದ್ದರೆಂತಲೂ ಅವರಿಗೆ ಅನೇಕರು ಬಹಳ ದೋಷವಿಡುತ್ತಾರೆ. ಚನ್ನಬಸವಪ್ಪನವರು ಒಮ್ಮೆ ಒಂದು ಕೋರ್ಟಿನಲ್ಲಿ ಸಾಕ್ಷೀ ಹೇಳಬೇಕಾಗಿತ್ತು. ಆಗ ಪ್ರತಿಜ್ಞೆ ಮಾಡುವ ಪ್ರಸಂಗ ಬರಲು, ಅವರು ದೇವರ ಹೆಸರಿನಿಂದ ಆಣೆಮಾಡಿ ನಿಜವಾಗಿ ಹೇಳುತ್ತೇನೆಂದು ಅನ್ನಲಿಕ್ಕೆ ಒಪ್ಪದೆ, ನಾನು ಸತ್ಯವಾಗಿಯೂ ಪ್ರಮಾಣಪೂರ್ವಕವಾಗಿಯೂ ನಿಜವನ್ನೇ ಹೇಳುತ್ತೇನೆ, ಎಂದು ಪ್ರತಿಜ್ಞೆ ಮಾಡಿ, ತಮ್ಮ ಸಾಕ್ಷಿ ಹೇಳತೊಡಗಿದರು. ಇದರಿಂದ ಚನ್ನಬಸ

ವಪ್ಪನವರು ನಾಸ್ತಿಕರಿದ್ದರೆಂದು ಅನೇಕರು ಹೇಳುವದುಂಟು. ಆದ್ದರಿಂದ ಇದರ ನಿಜಸ್ಥಿತಿಯ ಬಗ್ಗೆ ವಿಚಾರಮಾಡುವದು ಅವಶ್ಯವಿರುತ್ತದೆ.

ಚನ್ನಬಸವಪ್ಪನವರು ಯಾವುದನ್ನೂ ಅಂಧತೆಯಿಂದ ಸ್ವೀಕರಿಸುವವರಾಗಿದ್ದಿಲ್ಲ. ಇದು ಆಧುನಿಕ ಪಾಶ್ಚಿಮಾತ್ಯ ಶಿಕ್ಷಣದ ಪರಿಣಾಮವಾಗಿರುತ್ತದೆ. ಅವರು ಶಾಸ್ತ್ರೀಯ ವಿಷಯಗಳನ್ನೂ ಗಣಿತ ಶಾಸ್ತ್ರವನ್ನೂ ಚನ್ನಾಗಿ ಬಲ್ಲವರಾಗಿದ್ದದ್ದಲ್ಲದೆ ಗ್ರೀಸ್, ರೋಮು ಮತ್ತುಯುರೋಪ ಖಂಡದೊಳಗಿನ ಬೇರೆ ಬೇರೆ ದೇಶಗಳಲ್ಲಿ ಆಗಿಹೋದ ಆಧುನಿಕ ಮತ್ತು ಪ್ರಾಚೀನ ತತ್ವಜ್ಞಾನಿಗಳ ಗ್ರಂಥಗಳನ್ನು ಸದಾ ಅವಲೋಕಿಸುತ್ತಿದ್ದರು. ಅವರಲ್ಲಿದ್ದ ಗ್ರಂಥಭಾಂಡಾರವು ಬಹಳ ದೊಡ್ಡದಿತ್ತು. ಈ ಮೇರೆಗೆ ಪಾಶ್ಚಿಮಾತ್ಯ ಶಿಕ್ಷಣವನ್ನು ಹೊಂದಿದ ಮನುಷ್ಯನು ಏನಾದರೊಂದು ಹಳೇ ಗ್ರಂಥದಲ್ಲಿದ್ದ ಮಾತ್ರದಿಂದ ಇಲ್ಲವೇ ಕಾಲಾಂತರದಿಂದ ರೂಢಿಯಲ್ಲಿದ್ದ ಮಾತ್ರದಿಂದ ಅದು ಸತ್ಯವೆಂದು ನಂಬಲಾರನು ಚನ್ನಬಸವಪ್ಪನರು ಈ ತರದ ಮನಸ್ಸಿನ ಪ್ರವೃತ್ತಿಯುಳ್ಳವರಾಗಿದ್ದರು. ಆದ್ದರಿಂದ ಅವರು ನಮ್ಮಲ್ಲಿಯ ಸಾಮಾಜಿಕ ದುಷ್ಟ ರೂಢಿಗಳನ್ನೂ ಧರ್ಮದ ಹೆಸರಿನಿಂದ ಮಾಡುವ ಅನೇಕ ಮೂಢ ಧರ್ಮಾಚಾರಗಳನ್ನೂ ಬಹಳ ಹಳಿಯುತ್ತಿದ್ದರು. ಒಂದು ಸಾರೆ ಅವರು ಒಬ್ಬ ಶಾಸ್ತ್ರಿಗಳ ಕೂಡ ಊಟಕ್ಕೆ ಕುಳಿತಿದ್ದರು. ಆಗ ಅವರು ಹತ್ತರಿದ್ದ ತಂಬಿಗೆಯನ್ನು ಎಡಗೈಯ್ಯಿಯಿಂದ ಎತ್ತಿ ನೀರು ಕುಡಿಯುತ್ತಿರುವಾಗ್ಗೆ, ಶಾಸ್ತ್ರಿಗಳು ಚನ್ನಬಸವಪ್ಪನವರಿಗೆ-- "ಅಣ್ಣನವರೇ ಎಡಗೈ ಮಾತ್ರ ಹಚ್ಚಿ ಹೀಗೆ ನೀರು ಕುಡಿದರೆ ಅದು ಶರೇ ಕುಡಿದ ಹಾಗಾಗುತ್ತದೆ. ಅದಕ್ಕೆ ಬಲಗೈ ಹಚ್ಚಿ ಕುಡಿಯತಕ್ಕದ್ದು" ಎಂದು ಅನ್ನಲು, ಅದಕ್ಕೆ ಅವರು—"ಅದು ಹಾಗೆ ಹೇಗಾದೀತು? ಒಂದು ತಂಬಿಗೆಯಲ್ಲಿ ಶರೇ ಹಾಕಿ ಬಲಗೈಯ್ಯಿಂದ ಕುಡಿದರೆ, ನೀರು ಕುಡಿದಂತೆ ಆಗುವದೋ ಹ್ಯಾಗೆ? " ಎಂದು ತಿರುಗಿ ಪ್ರಶ್ನಮಾಡಲು, "ಅದು ಹೇಗಾದೀತು" ಎಂದು ಶಾಸ್ತ್ರಿಗಳು ಅಂದಕೂಡಲೆ, "ಹಾಗಾದರೆ ನೀರು ಎಡಗೈಯ್ಯಿಂದ ಕುಡಿದಮಾತ್ರಕೆ ಅದು ಶರೇ ಹೇಗಾದೀತು? ಎಡಗೈಯ್ಯಿಂದ ಕುಡಿದರೇನು ಬಲಗೈಯ್ಯಿಂದ ಕುಡಿದರೇನು, ನೀರಿಗೆ ನೀರೇ, ಶರೆಗೆ ಶರೆಯೋ ಆಗುವದು. ನೀರು ಇದ್ದದ್ದು ಶರೆಯಾಗಲಾರದು, ಶರೆ ಇದ್ದದ್ದು ನೀರಾಗಲಾರದು" ಎಂದು ಅಂದರು. ಇದೇಮೇರೆಗೆ ಅವನು ಪ್ರಚಾರದಲ್ಲಿದ್ದ ಅನಿಷ್ಠ ರೂಢಿಗಳನ್ನೂ ಮೂಢಾಚಾರಗಳನ್ನೂ ತೀಕ್ಷ್ಣ ಶಬ್ದಗಳಿಂದ

ತಿರಸ್ಕರಿಸುತ್ತಿದ್ದರು. ಅವರು ಸ್ವಾಭಾವಿಕವಾಗಿ ಬಹು ತೀಳಿಯಾದ ಬುದ್ಧಿಯುವರಾಗಿದ್ದರಿಂದ ಒಂದು ವಿಷಯದಲ್ಲಿದ್ದ ನ್ಯೂನತೆಯನ್ನು ಅವರು ಓಸ್ಕ್ಕೊಲೇ ಕಂಡು ಹಿಡಿಯುತ್ತಿದ್ದರು. ಮತ್ತು ಅದನ್ನು ಅವರು ತಮ್ಮ ಮರ್ಮಭೇದಕಗಳಾದ ಸಮಯೋಚಿತ ಸ್ಪಷ್ಟ ಶಬ್ದಗಳಿಂದ ಜನರ ಮುಂದಿಡುತ್ತಿದ್ದರು. ಇದು ಹಳೇ ಸಾಂಪ್ರದಾಯಿಕರ ಮನಸ್ಸಿಗೆ ಬಹಳ ಹತ್ತುತ್ತಿತ್ತು. ಇದರಿಂದ ಅವರು ಚನ್ನಬಸವಪ್ಪನವರು 'ಧರ್ಮಲಂಡರೆಂತಲೂ ನಾಸ್ತಿಕರೆಂತಲೂ' ಅವರಿಗೆ ಅನ್ನುತ್ತಿದ್ದರು.

ಆದರೆ ಅನೇಕರು ಸ್ವೆಚ್ಛಾಚಾರಿಗಳಾಗಿ ಯಾವ ವಿಚಾರವನ್ನೂ ಮಾಡದೆ ತಮಗೆ ಬೇಡಾದದ್ದನ್ನೆಲ್ಲ ಅವಿಚಾರವೆಂದು ಹಳಿಯುತ್ತಿರುತ್ತಾರೆ. ಧರ್ಮ ಮೂಢತೆಯೂ ಧಾರ್ಮಿಕ ಡಂಭಾಚಾರವೂ ಎಷ್ಟು ಹಾನಿಕಾರಕಗಳೋ ಅಷ್ಟೇ ಇಂಥ ಧಾರ್ಮಿಕ ಸ್ವೇಚ್ಛಾವೃತ್ತಿಯೂ ಸಮಾಜಕ್ಕೆ ಹಾನಿಕಾರಕವು. ಆದರೆ ಚನ್ನಬಸವಪ್ಪನವರನ್ನು ಇಂಥವರಲ್ಲಿ ಎಣಿಸಲಾಗದು. ಅವರು ವಿದ್ವಾಂಸರಿದ್ದರು. ಅವರ ವಿಷಯ ವ್ಯಾಸಂಗವು ಬಹಳ ದೊಡ್ಡದಾಗಿತ್ತು. ಅವರು ಅನೇಕ ವರ್ಷಗಳವರೆಗೆ ತಮ್ಮ ಬಳಿಯಲ್ಲಿ ಒಬ್ಬ ಪಂಡಿತನನ್ನು ಇಟ್ಟುಕೊಂಡು, ಹಿಂದೂ ಧರ್ಮಶಾಸ್ತ್ರಗಳನ್ನು ಪರಿಶೀಲನೆ ಮಾಡುತ್ತಿದ್ದರು. ಎಲ್ಲಾದರೂ ಆರೂಢರೂ ವಿದ್ವಾಂಸರೂ ಸ್ವಾಮಿಗಳೂ ಇದ್ದರೆ, ಅಲ್ಲಿಗೆ ತಪ್ಪದೆ ಹೋಗಿ, ತತ್ವವಿಚಾರಗಳ ಬಗ್ಗೆ ಅವರಗೂಡ ಪ್ರಸ್ತಾಪ ನಡಿಯಿಸುತ್ತಿದ್ದರು. ಅವರು ಇಂಥ ಗಹನ ವಿಷಯಗಳನ್ನು ಜನರ ಮುಂದೆ ಮೇಲಿಂದ ಮೇಲೆ ತೆಗೆದು, ಅವರ ವಿಚಾರಗಳನ್ನು ಕೇಳಿಕೊಳ್ಳುತ್ತಿದ್ದರು. ಒಂದು ಸಾರೆ ಅವರ ಒಬ್ಬ ಪ್ರೀತಿಯ ಸ್ನೇಹಿತನು— "ಚನ್ನಬಸವಪ್ಪನವರೇ, ಜನರು ನಿಮಗೆ ನಾಸ್ತಿಕರೆಂದೆನ್ನುತ್ತಾರೆ. ಇದರ ಕಾರಣವೇನು? ಮತ್ತು ಕಂಡ ಕಂಡ ಜನರಿಗೆಲ್ಲ ನೀವು ದೇವರು ಇದ್ದಾನೋ ಇಲ್ಲವೋ? ಎಂದು ಪ್ರಶ್ನಮಾಡುವ ಕಾರಣವೇನು? ಎಂದು ಕೇಳಿದನು. ಅದಕ್ಕೆ ಅವರು— "ಹೌದು, ಹೌದು, ನಾನು ನಾಸ್ತಿಕನೇ ಸರಿ. ಯಾಕಂದರೆ ಜಗನ್ನಿರ್ಮಾಣಕನಾದ ದೇವರ ಅಗಾಧವಾದ ಮಹಾತ್ಮೆಯನ್ನು ತಿಳಿದವರೇ ಆಸ್ತಿಕರು. ಆ ಸೃಷ್ಟಿಕರ್ತನ ಮಹಿಮೆಯನ್ನು ತಿಳಿಯದವರೆಲ್ಲರೂ ನಾಸ್ತಿಕರು. ಅಂದಬಳಿಕ ಆ ಸೃಷ್ಟಿಕರ್ತನ ಅಗಾಧವಾದ ಮಹಾತ್ಮೆಯು ನನಗೆ ತಿಳಿಯದ ಕಾರಣ ನಾನು ನಾಸ್ತಿಕನೇ ಸರಿ. ಜ್ವರ ಚಳಿ ಮುಂತಾದ ರೋಗಗಳನ್ನು ದೂರಮಾಡುವ ಕ್ವಿನಾ

ಯನ್ ಗಿಡವು ಅಮೇರಿಕದ ಕಾಡು ಇಂಡಿಯನ್ನರಿಂದ ಮೊದಲು ಶೋಧಿ ಸಲ್ಪಟ್ಟಂತೆಯೇ ದೇವರು ಇದ್ದಾನೋ ಇಲ್ಲವೋ ಎಂಬ ಈ ನನ್ನ ಪ್ರಶ್ನೆಗೆ ಸಮರ್ಪಕವಾದ ಉತ್ತರವನ್ನು ಅತಿ ಕಾಡು ಸ್ಥಿತಿಯವರೇ ಕೊಟ್ಟು ನನ್ನ ಮನಸ್ಸನ್ನು ಯಾಕೆ ತೃಪ್ತಿಪಡಿಸಲಿಕ್ಕಿಲ್ಲ? ಆದ ಕಾರಣ ನಾನು ದೇವರು ಇದ್ದಾನೋ ಇಲ್ಲವೋ ಎಂದು ಕಂಡಕಂಡವರನ್ನು ಕೇಳುತ್ತೇನೆ" ಎಂದು ಹೇಳಿದರು. ಇದು ಒಬ್ಬ ನಾಸ್ತಿಕನ ಭಾಷಣವಲ್ಲ. ಆದರೆ ಇದು ಸತ್ಯ ಶೋಧಕಕ್ಕಾಗಿ ಹಾತೊರೆಯುತ್ತಿರುವ ಒಬ್ಬ ವಿದ್ವಾಂಸನ ಭಾಷಣವು. ಆದ್ದರಿಂದ ಚನ್ನಬಸವಪ್ಪನವರು ಎಲ್ಲರಗೂಡ, ನಾನಾ ಪ್ರಕಾರದ ವಾದ ವಿವಾದಗಳನ್ನು ಮಾಡುತ್ತಿದ್ದರು. ಒಮ್ಮೊಮ್ಮೆ ವೇದಾಂತಿಗಳ ವಾದ ವನ್ನೂ ಒಮ್ಮೊಮ್ಮೆ ನಾಸ್ತಿಕರ ವಾದವನ್ನೂ ಆಸ್ತಿಕರ ವಾದವನ್ನೂ ಮಾಡು ತ್ತಿದ್ದರು. ಮುಸಲ್ಮಾನರ ಕೂಡ ಮತ್ತು ಕ್ರಿಶ್ಚನ್ನರ ಕೂಡ ಧಾರ್ಮಿಕ ವಾದಗಳಲ್ಲಿ ಆಗಾಗ್ಗೆ ತೊಡಗುವರು. ಒಮ್ಮೊಮ್ಮೆ ಅವರು ತಮಗೆ ಕಾ ಣುವ ಅತ್ಯಲ್ಪ ವಿಷಯಗಳ ಮತ್ತು ಜನರೂಢಿಗಳ ಬಗ್ಗೆ ದೀರ್ಘ ಆಲೋ ಚನೆ ಮಾಡಿ, ಅವುಗಳೊಳಗಿಂದ ಏನಾದರೂ ಒಂದು ಹೊಸ ವಿಚಾರವನ್ನು ತೆಗೆಯಲಿಕ್ಕೆ ಪ್ರಯತ್ನಿಸುವರು. ಅವರು ಒಮ್ಮೆ ರಾಣೇಬಿನ್ನೂರ ಶಾಲೆ ಯನ್ನು ಪರೀಕ್ಷಿಸಿ, ಒಂದು ಮಠದಲ್ಲಿ ಇಳಿದುಕೊಂಡಿದ್ದರು. ಆಗ ಒಬ್ಬ ಗೃಹಸ್ಥರಿಗೆ:— "ವಿಲಾಯತಿಯಲ್ಲಿ ಕೆಲವು ಜನರು ಗಡ್ಡದ ಕೂದಲುಗ ಳನ್ನೂ ಬಗಲಲ್ಲಿರುವ ಕೂದಲುಗಳನ್ನೂ ಬೋಳಿಸಿಕೊಳ್ಳುವದಿಲ್ಲ. ಯಾಕಂ ದರೆ, ಬೋಳಿಸಿಕೊಂಡರೆ ಉಪಯೋಗವಿಲ್ಲದ ಕೂದಲುಗಳನ್ನು ದೇವರು ಮಾಡಿರುವನೆಂದು, ದೇವರ ಸರ್ವಜ್ಞತ್ವಕ್ಕೆ ಭಂಗತಂದಂತಾಗುತ್ತದೆಂದು ತಿಳಿದು ಅವರು ಅವುಗಳನ್ನು ಬೋಳಿಸಿಕೊಳ್ಳುವದಿಲ್ಲ. ಆ ಕೂದಲುಗಳು ಸಹ ಉಪಯೋಗವಿರುತ್ತವೆಂದು ಆ ಜನರು ತಿಳಿದುಕೊಳ್ಳುತ್ತಾರೆ." ಎಂದು ಅಂದರು. ಈ ಮೇರೆಗೆ ಚನ್ನಬಸವಪ್ಪನವರು ಅತ್ಯಲ್ಪ ವಿಷಯಗಳನ್ನು ಸಹ ತೆಗೆದುಕೊಂಡು, ನಾನಾವಿಧವಾಗಿ ಚರ್ಚಿಸುತ್ತ ಗಹನ ವಿಚಾರ ಗಳಲ್ಲಿ ತೊಡಗುತ್ತಿದ್ದರು.

ಆದರೆ ಚನ್ನಬಸವಪ್ಪನವರು ಹೀಗೆ ತಮ್ಮ ವಿಚಾರಗಳನ್ನು ತಮ್ಮ ಮನಸ್ಸಿನಲ್ಲಿಯೇ ಇಟ್ಟುಕೊಂಡು, ಅವೇ ಉತ್ತಮವಾದವುಗಳೆಂದು ತಿಳಿ ದುಕೊಂಡು ಎಂದೂ ಇರುತ್ತಿದ್ದಿಲ್ಲ. ಅವರು ತಮ್ಮ ವಿಚಾರಗಳನ್ನು ಸಾರ್ವ ಜನಿಕ ಸಭೆಗಳಲ್ಲಿಯೂ ಸಂಭಾಷಣೆಗಳಲ್ಲಿಯೂ ಜನರ ಮುಂದೆ ಇಟ್ಟು

ಅವುಗಳ ಬಗ್ಗೆ ವಾದವಿವಾದ ಮಾಡಲಿಕ್ಕೆ ಯಾವಾಗಲು ಸಿದ್ಧರಿರುತ್ತಿದ್ದರು. ಮತ್ತು ಅವುಗಳನ್ನು ಯಾರಾದರು ಖಂಡನೆ ಮಾಡಲಿಕ್ಕೆ ಯತ್ನಿಸಿದರೆ, ಅವರು ಅದಕ್ಕೆ ಎಂದೂ ಅಸಂತೋಷಬಡದೆ, ಅವುಗಳಿಗೆ ಸಕಾರಣವಾಗಿ ತಮ್ಮ ಉತ್ತರವನ್ನು ಹೇಳುವರು. ಒಂದು ಸಾರೆ ಧಾರವಾಡದಲ್ಲಿ ತೋಳವುಟ್ಟೆ ಸ್ವಾಮಿ ರಾಯರೆಂಬ ಒಬ್ಬ ಪ್ರಸಿದ್ಧ ಬ್ರಾಹ್ಮಣ ವಕೀಲರ ಮನೆಯಲ್ಲಿ ಲಗ್ನಸಮಾರಂಭವು ಬಹಳ ವೈಭವದಿಂದ ನಡೆದಿತ್ತು. ಆ ಕಾಲಕ್ಕೆ ಉತ್ತರಾದಿ ಮಠದ ಸ್ವಾಮಿಗಳೂ ಅವರ ಕೂಡ ಅನೇಕ ಶಾಸ್ತ್ರಿಗಳೂ ಪಂಡಿತರೂ ಧಾರವಾಡಕ್ಕೆ ಬಂದಿದ್ದರು. ಆಗ ಚನ್ನಬಸವಪ್ಪನವರು ಕೆಳಗೆ ಕಾಣಿಸಿದ ವಿಷಯಗಳನ್ನು ವಾದಕ್ಕಾಗಿ ಇಟ್ಟು, ಒಂದು ಪ್ರಕಟನ ಪತ್ರಿಕೆಯನ್ನು ಪ್ರಸಿದ್ಧಿಸಿದರು. ಆ ವಿಷಯಗಳು ಯಾವವೆಂದರೆ:— (೧) ದೇವರ ಅಸ್ತಿತ್ವ (೨) ದೇವರ ನಾಸ್ತಿತ್ವ (೩) ಇಂದ್ರಿಯಗಳಲ್ಲಿ ಯಥಾರ್ಥ ಜ್ಞಾನವಿಲ್ಲ. ಈ ವಿಷಯಗಳನ್ನಿಟ್ಟು ಇವುಗಳಲ್ಲಿ ಬೇಕಾದವರು ಬೇಕಾದ ವಿಷಯಗಳನ್ನು ಆರಿಸಿಕೊಂಡು, ಅವುಗಳ ಬಗ್ಗೆ ತಮ್ಮ ಗೂಡವೇ ವಾದ ಮಾಡಿ ಯಾರು ಅವುಗಳನ್ನು ಸಿದ್ಧಪಡಿಸುವರೋ ಅವರಿಗೆ ೨೦೦ ರೂಪಾಯಿಗಳ ಬಹುಮಾನವನ್ನು ಕೊಡುವೆವೆಂಬದಾಗಿ ಪಟ್ಟಣದಲ್ಲಿ ಸಾರಿದರು. ನಿಯಮಿತ ವೇಳೆಗೆ ಚನ್ನಬಸವಪ್ಪನವರು ವಿಠೋಬಾ ದೇವರ ಗುಡಿಯಲ್ಲಿ ವಾದಕ್ಕೆ ಸಿದ್ಧರಾಗಿ ಕುಳಿತರು. ಆದರೆ ಈ ವಿಷಯಗಳಲ್ಲಿ ಯಾವುದನ್ನೂ ತೆಗೆದುಕೊಂಡು ಒಬ್ಬ ವಿದ್ವಾಂಸನಾದರೂ ಅವರ ಕೂಡ ವಾದ ಮಾಡಲಿಕ್ಕೆ ಮುಂದುವರಿಯಲಿಲ್ಲ! ಈ ಮೇರೆಗೆ ಚನಬಸವಪ್ಪನವರು ತಮ್ಮ ಅಭಿಪ್ರಾಯಗಳನ್ನೂ ವಿಚಾರಗಳನ್ನೂ ಪ್ರಕಟ ಮಾಡಲಿಕ್ಕೆ ಯಾವಾಗಲೂ ತತ್ಪರರಾಗಿರುತ್ತಿದ್ದರು. ಇದಲ್ಲದೆ ಈ ಮೇಲಿನ ಸಂಗತಿಯಿಂದ ಅವರ ವಿದ್ವತ್ತೆಯೂ ವಾದ ಚತುರತೆಯೂ ಅವರ ಸಮಕಾಲೀನದಲ್ಲಿ ಜನರಿಗೆ ಎಷ್ಟು ಚನ್ನಾಗಿ ವಿದಿತವಾಗಿದ್ದವೆಂಬದು ತಿಳಿದು ಬರುತ್ತಿದೆ.

ಈ ಮೇರೆಗೆ ಚನ್ನಬಸಪ್ಪನವರ ವಿಚಾರಗಳಿದ್ದದರಿಂದ ಅವರು ವೇದಗಳು, ಬಾಯಬಲ್ಲ, ಕುರಾನ ಮೊದಲಾದ ಗ್ರಂಥಗಳು ದೇವಪ್ರಣೀತವಾದವುಗಳೆಂದು ತಿಳಿಯುತ್ತಿದ್ದಿಲ್ಲ. ಅವು ಮನುಷ್ಯರಿಂದಲೇ ಆದವೆಂದು ಅವರು ಯಾವಾಗಲೂ ಪ್ರತಿಪಾದಿಸುವರು. ಒಂದು ಸಾರೆ ಧಾರವಾಡದಲ್ಲಿ ಪ್ರಸಿದ್ಧ ಪಾದ್ರಿಗಳಾದ ಜಿಗಲರ ಧೊರೆಗಳ ಬಂಗಲೆಯಲ್ಲಿ ಮುಸ

ಲ್ಮಾನರ ಮತ್ತು ಕ್ರಿಶ್ಚನ್ನರ ಒಂದು ದೊಡ್ಡ ಸಭೆಯು ನೆರೆದಿತ್ತು. ಆಗ ಚನ್ನಬಸವಪ್ಪನವರು ನೆರೆದ ಜನರಿಗೆ ಅಂದದ್ದೇನಂದರೆ — "ಕುರಾನವು ದೇವರಿಂದ ಆದುದೆಂದು ನನಗೆ ಮುಸಲ್ಮಾನರು ಸಿದ್ಧಮಾಡಿ ಕೊಟ್ಟರೆ ನಾನು ಮುಸಲ್ಮಾನನಾಗುವೆನು. ಕ್ರಿಶ್ಚನ್ನರು ತನ್ನ ಬಾಯುಬಲವು ದೇವರಿಂದ ಪ್ರಣೀತವಾದುದೆಂದು ಸಿದ್ಧಪಡಿಸಿದರೆ, ನಾನು ಕಿಶ್ಚನ್ನನಾಗುವೆನು" ಎಂದು ಆಹ್ವಾನಿಸಿದರು. ಆದರೆ ಯಾರೂ ಅವರ ಕೂಡ ವಾದಕ್ಕೆ ನಿಲ್ಲಲಿಲ್ಲ. ಒಂದು ಸಾರೆ, ಒಬ್ಬರು ಅವರಿಗೆ ಪೃಥ್ವಿಯಲ್ಲಿಯ ಧರ್ಮಗಳಲ್ಲಿ ಯಾವದು ಸತ್ಯವಾದುದೆಂದು ಕೇಳಲು, ಅವರು ಪ್ರತ್ಯುತ್ತರವಾಗಿ, ಅವೆಲ್ಲವೂ ಸಣ್ಣ ದೊಡ್ಡ ತೂತುಗಳುಳ್ಳ ಡೋಣಿಗಳಂತೆ 'ಇವೆ ಎಂದು ನುಡಿದರು. ಒಟ್ಟಿಗೆ ಚನ್ನಬಸವಪ್ಪನವರು ಯಾವ ವಿಷಯವನ್ನು ತೆಗೆದುಕೊಂಡರೂ ಅದರಲ್ಲಿ ತಮಗೆ ಸಟಿ ಕಂಡದ್ದನ್ನು ಸಟಿ ಎಂತಲೂ ದಿಟ ಕಂಡದ್ದನ್ನು ದಿಟವೆಂತಲೂ ನುಡಿಯುತ್ತಿದ್ದರು.

ಚನ್ನಬಸವಪ್ಪನರ ಈ ತರದ ವರ್ತನದಿಂದ ಅವರಿದ್ದ ಕಾಲಕ್ಕೆ ಧಾರವಾಡ ಪಟ್ಟಣದಲ್ಲಿ ಧಾರ್ಮಿಕ ವಿಷಯುಗಳ ಬಗ್ಗೆ ಚರ್ಚೆಮಾಡುವ ಸ್ಫೂರ್ತಿಯು ಬಹಳ ಉಂಟಾಗಿತ್ತು. ಕೆಲವು ವರ್ಷಗಳಂತೂ ಓಣಿ ಓಣಿಗಳಲ್ಲಿಯೂ ಮನೆ ಮನೆಗಳಲ್ಲಿಯೂ ಜನರು ಕೂಡಿದಲ್ಲಿಯೂ ಧರ್ಮಚರ್ಚೆಗಳೂ ವಾಗ್ವಾದಗಳೂ ನಡೆಯುತ್ತಿದ್ದವು. ಆದರೆ ಚನ್ನಬಸವಪ್ಪನವರು ತಮ್ಮ ಪೂರ್ವವಯುಸ್ಸಿನಲ್ಲಿಯೇ ಅಂದರೆ ೪೭ ವರ್ಷದವರಿರುವಾಗಲೇ ತೀರಿಕೊಂಡರು. ಅವರು ತಮ್ಮ ವಿಚಾರಗಳ ಬಗ್ಗೆ ಯಾವ ಗ್ರಂಥವನ್ನೂ ಬರೆದಿಡಲಿಲ್ಲ. ಆದ್ದರಿಂದ ಅವರ ಕಾಲಕ್ಕೆ ಹಬ್ಬಿದ ಈ ತರದ ಧಾರ್ಮಿಕ ವಿಷಯುಗಳ ಬಹಿರಂಗ ಚರ್ಚೆಗಳು ಹಿಂದುಗಡೆ ಅಷ್ಟಕ್ಕೇ ನಿಂತುಹೋದವು.

ಈ ವಿಧವಾಗಿ ಚನ್ನಬಸವಪ್ಪನವರ ಧಾರ್ಮಿಕ ವಿಚಾರಗಳಿದ್ದರೂ ಅವರು ಸಾಮಾಜಿಕ ಬಂಧನಗಳನ್ನೂ ನೈತಿಕ ಕಟ್ಟುಗಳನ್ನೂ ಉಲ್ಲಂಘಿಸಬೇಕೆಂದು ಎಂದೂ ಇಚ್ಛಿಸಲಿಲ್ಲ. ಚನ್ನಬಸವಪ್ಪನವರು ಜನ್ಮತಃ ಲಿಂಗಾಯತರಿದ್ದರು. ಆದರೆ ಅವರು ತಮ್ಮ ಲಿಂಗಾಯತ ಸಮಾಜವನ್ನು ಎಂದೂ ಬಿಡಲಿಲ್ಲ. ಒಂದು ಸಾರೆ ಹುಬ್ಬಳ್ಳಿಯ ಹತ್ತರವಿರುವ ಉಣಕಲ್ಲ ಎಂಬ ಗ್ರಾಮದಲ್ಲಿ ಬಹು ಜನರು ಕ್ರಿಸ್ತೀಮತವನ್ನು ಸೇರಲಿಕ್ಕೆ ಸಿದ್ಧರಾದುದನ್ನು ಕೇಳಿ ಅವರು ಅಲ್ಲಿಗೆ ಹೋಗಿ ಅವರ ಮನಸ್ಸನ್ನು ತಿರುಗಿಸಿದರು. ಅದೇ ಮೇರೆಗೆ ಅವರು ಹೋದ ಹೋದಲ್ಲಿ ನೀತಿಯ ಬೋಧೆಯನ್ನು ಮಾಡದೆ

ಬಿಡುತ್ತಿದ್ದಿಲ್ಲ. ಅವರಲ್ಲಿ ಪ್ರಸಂಗಕ್ಕೆ ಸರಿಯಾಗಿ ಮಾತನಾಡುವ ಜಾಣ್ಮೆಯು ಮಿಗಿಲಾದದ್ದಿತ್ತು. ಅದರಿಂದ ಅವರ ಮಾತುಗಳು ಜನರಲ್ಲಿ ಬಹಳ ಪರಿಣಾಮಕರವಾದವುಗಳಾಗುತ್ತಿದ್ದವು. ಒಂದು ದಿನ ಅವರು ತಮ್ಮ ಮನೆಯ ಕಟ್ಟೆಯ ಮೇಲೆ ಕುಳಿತಾಗ, ಇಬ್ಬರು ಹೆಂಗಸರು ಜಗಳಾಡಿ ಬಾಯಿಗೆ ಬಂದಂತೆ ಬಯ್ಯುವವನ್ನು ಕೇಳಿದರು. ಆಗ ಅವರು ಅವರಿಬ್ಬರನ್ನು ತಮ್ಮ ಹತ್ತರ ಕರೆದು, ಒಬ್ಬಳಿಗೆ "ಅವ್ವಾ, ನೀನು ಎಲ್ಲ ಬೈಗಳಲ್ಲಿ ಹೆಚ್ಚಿನದಾವದ್ದೊಂದು ಬೈಗುಳನ್ನು ಆಕೆಗೆ ಬೈ" ಎಂದು ಮತ್ತೊಬ್ಬಳಿಗೆ "ಆಕೆಯು ನಿನಗೆ ಬೈದದ್ದಕ್ಕಿಂತ ಹೆಚ್ಚಿನ ಬೈಗುಳಿದ್ದರೆ ಬೈ; ಇಲ್ಲದಿದ್ದರೆ ಬೇಡ. ಅಥವಾ ನೀನೇ ಮೊದಲು ಎಲ್ಲ ಬೈಗುಳಲ್ಲಿ ಹೆಚ್ಚಿನದೊಂದು ಬೈಗುಳನ್ನು ಆಕೆಗೆ ಬೈ. ಆ ಮೇಲೆ ನಿನ್ನದಕ್ಕಿಂತ ಹೆಚ್ಚಿನ ಬೈಗುಳು ಸಿಕ್ಕರೆ ಆಕೆಯು ನಿನಗೆ ಬಯ್ಯುವಳು; ಇಲ್ಲದಿದ್ದರೆ ಇಲ್ಲ" ಎಂದು ಹೇಳಲಾಗಿ ಅವರಿಗೆ ಏನೊಂದು ತೋಚದೆ ಲಜ್ಜಿತರಾಗಿ ಜಗಳಾಡುವದನ್ನು ಬಿಟ್ಟು ಹೋದರು. ಈ ತರದ ವರ್ತನೆಯಿಂದ ಚನ್ನಬಸವಪ್ಪನವರು ಅಜ್ಞಾನಿಗಳಾದ ಸಜ್ಜನರನ್ನು ಸುಧಾರಿಸಲಿಕ್ಕೆ ಯಾವಾಗಲೂ ಪ್ರಯತ್ನಿಸುತ್ತಿದ್ದರು.

ಜನ ಸುಧಾರಣೆಯನ್ನು ಮಾಡುವ ಅವರ ಈ ತರದ ಪ್ರಯತ್ನಗಳಲ್ಲಿ ಅವರ ವಕ್ತೃತ್ವ ಶಕ್ತಿಯು ಅವರಿಗೆ ಒಳಿತಾಗಿ ಸಹಾಯ ಮಾಡುತ್ತಿತ್ತು. ಅವರು ಸಭೆಗಳಲ್ಲಿ ಚನ್ನಾಗಿ ಭಾಷಣಮಾಡುವ ಶಕ್ತಿಯನ್ನು ಅವರು ಪುಣೆಯಲ್ಲಿದ್ದಾಗಲೇ ಪಡೆದುಕೊಂಡಿದ್ದರು. ಗಂಟೆಯ ನಾದದಂತಿದ್ದ ಅವರ ಉಚ್ಚಧ್ವನಿ, ಎತ್ತರವಾದ ಮತ್ತು ಬಲವುಳ್ಳ ಅವರ ಮೈಕಟ್ಟು ತೇಜಃಪುಂಜವಾದ ಮುಖಮುದ್ರೆ ಮಾರ್ಮಿಕ ನುಡಿಗಳು ಸಭಿಕರನ್ನು ಕೂಡಲೇ ವಶಮಾಡಿಕೊಳ್ಳುತ್ತಿದ್ದವು. ಅವರು ಮಾತನಾಡುವ ಭಾಷಾಶೈಲಿಯು ಬಹು ಬಿರಸಾದದ್ದು. ಆದರೂ ಅವರ ಶಬ್ದಗಳಲ್ಲಿ ಬಹಳ ಮಾರ್ಮಿಕತೆಯೂ ಬಲವೂ ಇರುತ್ತಿದ್ದವು. ಎಷ್ಟು ಗಹನ ವಿಷಯಗಳಿದ್ದರೂ. ಅವುಗಳಿಗೆ ಸಮಯೋಚಿತ ಮತ್ತು ವ್ಯವಹಾರಿಕ ಉದಾಹರಣೆಗಳನ್ನು ಕೊಟ್ಟು, ಅವು ಕೇಳುವವರ ಮನಸ್ಸಿನಲ್ಲಿ ಬಿಂಬಿಸುವಂತೆ ಭಾಷಣ ಮಾಡುತ್ತಿದ್ದರು. ಆದ್ದರಿಂದ ಪ್ರೇಕ್ಷಕರು ಅವರ ಭಾಷಣ ಕೇಳಲಿಕ್ಕೆ ಎಂದೂ ಬೇಸರಿಯುತ್ತಿದ್ದಿಲ್ಲ. ಇದರಂತೆಯೇ ಅವರು ವಾದದಲ್ಲಿ ಬಹು ತೀಕ್ಷ್ಣ ಬುದ್ಧಿಯುಳ್ಳವರಾರಿದ್ದರು. ಅವರು ಶಾಸ್ತ್ರೀಯ ವಿಷಯಗಳನ್ನೂ ತರ್ಕಶಾಸ್ತ್ರವನ್ನೂ ಚನ್ನಾಗಿ ಬಲ್ಲವರಾಗಿದ್ದರಿಂದ ವಿಷಯದಲ್ಲಿಯ

## ವಿಚಾರ.

ಮಹಾಲಿಂಗಾದಿಯಾದ ಷಡ್ವಿಧ ಲಿಂಗಗಳಿಗೆ ಹೃದಯಾದಿ ಸ್ವರೂಪವನ್ನು ಹೇಳಿರುವುದರ ತತ್ವವು ಶಿವಾದ್ವೈತಮಂಜರಿಯಲ್ಲಿ ಕೆಳಗೆ ಹೇಳಿದಂತೆ ವಿವರಿಸಲ್ಪಟ್ಟಿರುವುದು.

ಮಹಾಲಿಂಗಃ— ಗುರುಕಟಾಕ್ಷಸಂಪ್ರಾಪ್ತವಾದ ಸ್ವವಿಮರ್ಶ (ತನ್ನ ಅರಿವು) ಲಕ್ಷಣದಿಂದ ಕೂಡಿದ ಸ್ವಾತ್ಮಪ್ರತ್ಯಭಿಜ್ಞಾನವನ್ನು ಪಡೆದಿರುವುದರಿಂದಲೂ, ಬಾಹ್ಯಗಳಾದ ಶ್ರೋತ್ರಾದಿ ಜ್ಞಾನಕರ್ಮೇಂದ್ರಿಯಂಗಳಿಗೆ ವಿಷಯಂಗಳಾದ ಶಬ್ದಾದಿ ಸಕಲ ಪದಾರ್ಥ ಗ್ರಹಣಕ್ಕೆ ಸಾಧನವಾಗಿ ಅಂತರ್ಮುಖವುಳ್ಳದ್ದಾಗಿರುವುದರಿಂದಲೂ ವೀರಶೈವನ ಹೃದಯವೇ ಓಂಕಾರಪ್ರಣವರೂಪವಾದ ಮಹಾಲಿಂಗವು.

ಪ್ರಸಾದಲಿಂಗಃ— ಗುರುವು ಸಕಲ ತತ್ವಾರ್ಥಗಳನ್ನು ಬೋಧಿಸುವ ಶಬ್ದಗಳಿಂದ ಶಿಷ್ಯನನ್ನು ಅನುಗ್ರಹಿಸುವನು. ಅನುಗ್ರಹವೇ ಪ್ರಸಾದವು. ಅಂತಹ ಪ್ರಸಾದರೂಪವಾದ ಗುರುವಾಕ್ಯ ಗ್ರಹಣಕ್ಕೆ ಸಾಧನವಾಗಿರುವುದರಿಂದ ಶ್ರೋತ್ರವೇ ಯಕಾರ ರೂಪವಾದ ಪ್ರಸಾದಲಿಂಗವು.

ಚರಲಿಂಗಃ— ಚರಲಿಂಗವೆಂದರೆ ಜಂಗಮಲಿಂಗವು. ಜಂಗಮನು ಸರ್ವವ್ಯಾಪಕನು. ಅಂತೆಯೇ ಸರ್ವಾಂಗ ವ್ಯಾಪಕವಾಗಿ ಶೀತಾದಿ ಸ್ಪರ್ಶಸಾಧನವಾಗಿರುವುದರಿಂದ ತ್ವಗಿಂದ್ರಿಯವು ಚರಲಿಂಗರೂಪವಾಗಿರುವುದು.

ಶಿವಲಿಂಗಃ— ಮಹಾ ಪ್ರಕಾಶವೇ ನೇತ್ರಗೋಳಕವನ್ನು ಪ್ರವೇಶಿಸಿ ಸಕಲರೂಪ ಪದಾರ್ಥ ಪ್ರಕಾಶನಕ್ಕೆ ಸಾಧನವಾಗಿರುವುದರಿಂದ ನೇತ್ರವೇ ಮಹಪ್ರಕಾಶಮೂರ್ತಿಯಾದ ಶಿಕಾರಮಯ ಶಿವಲಿಂಗವಾಗಿರುವುದು.

ಗುರುಲಿಂಗ— ಗುರುವು ಮಂತ್ರ ಮೂರ್ತಿಯಿರುವನು. ಗುರುಸ್ವರೂಪವಾದ ಮಂತ್ರವೇ ಮಧುರಾದಿ ಷಡ್ರಸರೂಪವನ್ನು ಹೊಂದಿರುವುದೆಂದ್ದು ತಿಳಿದು ಮಂತ್ರೋಚ್ಚಾರಣದ ರಸಾಸ್ವಾದನವನ್ನು ಮಾಡತಕ್ಕದ್ದು. ತಾದೃಶ ಮಂತ್ರೋಚ್ಚಾರಣ ರಸಾ ಸ್ವಾದನಕ್ಕೆ ಸಾಧನವಾಗಿರುವುದರಿಂದ ಜಿಹ್ವೆಯು ಮಕಾರಮಯವಾದ ಗುರುಲಿಂಗರೂಪವಾಗಿರುವುದು.

ಆಚಾರಲಿಂಗ— ಈಡಾಪಿಂಗಳಗಳೆಂಬ ನಾಡೀದ್ವಾರದಿಂದ ಪ್ರಾಣವಾಯುಸಂಚಾರಕ್ಕೆ ಆಶ್ರಯವಾಗಿರುವದರಿಂದಲೂ ದೇಹಶುದ್ಧಿಯನ್ನು

ಟುವಾಡುವ ದೇಹಕಾದಿ ಕ್ರಮೋತ್ಪನ್ನವಾದ ಶ್ರಾಣಾಯಾಮಾಚರಣೆಗೆ ಸಾಧನವಾಗಿರುವದರಿಂದಲೂ ಸತ್ಸದಾಚರಣೆಗೆ ಹೇತುವೆನಿಸಿಕೊಳ್ಳುವ ನಾಸಿಕವೇ ನಕಾರಮಯವಾದ ಆಚಾರಲಿಂಗವೆನಿಸಿಕೊಳ್ಳುವುದು.

ಶಿವಾದ್ವೈತದರ್ಪಣದಲ್ಲಿ— ಆಚಾರಾದಿ ಷಡ್ವಿಧಲಿಂಗಗಳಿಗೆ ಬ್ರಹ್ಮರಂಧ್ರಾದಿ ಷಡ್ವಿಧ ಚಕ್ರಗಳೇ ಸ್ಥಾನಗಳು. ಆ ಚಕ್ರಸ್ಥಾನಗಳಲ್ಲಿಯೇ ಆಚಾರಾದಿ ಲಿಂಗಗಳು ಪ್ರತ್ಯಕ್ಷಯೋಗಗಳು. ಹೀಗಿದ್ದರೂ, ಆಚಾರಾದಿಲಿಂಗಗಳು ಆಯಾ ಇಂದ್ರಿಯ ದ್ವಾರದಿಂದ ಆಯಾ ಪದಾರ್ಥಾನುಸಂಧಾತೃರೂಪಗಳಾಗಿರುವುದರಿಂದ ಆಯಾ ಇಂದ್ರಿಯಗಳಿಗೆ ಆಚಾರಾದಿ ಲಿಂಗವುಖತ್ವ ವ್ಯಪದೇಶದಿಂದ ಆಚಾರಾದಿ ಲಿಂಗಸ್ವರೂಪವು ಹೇಳಲ್ಪಟ್ಟಿರುವುದೆಂದು ಉಕ್ತವಾಗಿರುವುದು. ಮತ್ತು ಈ ವಿಷಯದಲ್ಲಿ ಕೇನೋಪನಿಷತ್ತಿನ " ಓಂ ಕೇನೇಷಿತಂ ಪತತಿ ಪ್ರೇಷಿತಂ ಮನಃ " " ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನಃ" ಇತ್ಯಾದಿ ವಾಕ್ಯಗಳ ಪ್ರಮಾಣವೂ ಹೇಳಲ್ಪಟ್ಟಿರುವುದು.

## ಭಕ್ತಾದಿ ಸ್ಥಲಗಳ ಷಡ್ವಿಧ ಹಸ್ತಗಳು.

ಸೂ. ೨೮. ಈ ಪ್ರಕಾರವಾಗಿ ಸುಪ್ರಸಿದ್ಧವಾದ ಲಿಂಗಮುಖವು ಹೇಳಲ್ಪಟ್ಟದು. ಅನಂತರದಲ್ಲಿ ಭಕ್ತಾದಿ ಷಟ್‌ಸ್ಥಲಗಳ ಹಸ್ತಭೇದವು ಪ್ರದರ್ಶಿಸಲ್ಪಡುವುದು.

ಸೂ. ೨೯. ೩೦. ವಸ್ತುವಿನಿಂದ ಭಾವವೂ, (ವಸ್ತು ಸತ್ತೆಯು) ಭಾವದಿಂದ ಜ್ಞಾನವೂ, (ವಸ್ತು ಸತ್ತಾಜ್ಞಾನವು) ಜ್ಞಾನದಿಂದ ಮನಸ್ಸೂ, ಮನಸ್ಸಿನಿಂದ ಅಹಂಕಾರವೂ, ಅಹಂಕಾರದಿಂದ ಬುದ್ಧಿಯೂ, ಬುದ್ಧಿಯಿಂದ ಚಿತ್ತವೂ ಸಂಭವಿಸುವವು. ಈ ಭಾವಾದಿಗಳ ಲಕ್ಷಣವನ್ನು ಅನುಕ್ರಮದಿಂದ ಹೇಳುವೆನು. ಅಸ್ತಿ (ಇರುತ್ತದೆ) ಹೀಗೆಂದು ಆರಂಭಿಸಲ್ಪಡುವುದು ಅವುದೋ ಅದೇ ವಸ್ತುವು. (ಜಗತ್ತಿನ ಪ್ರತಿಯೊಂದು ವಸ್ತುವಿನ ಸಾಧನೆಗೆ ಅದರ ಅಸ್ತಿತ್ವವೇ ಮನುಷ್ಯನಲ್ಲಿ ಉಂಟಾಗುವ ಮೊದಲನೆಯ ಸ್ಫುರಣವೆಂದು ಭಾವವು) ಆ ವಸ್ತು ಸತ್ತೆಯೇ ಭಾವವೆಂದು ಹೇಳಲ್ಪಡುವುದು. ಆ ವಸ್ತು ಸತ್ತೆಯನ್ನು ಯಾವಾಗಲೂ ತಿಳಿಯಿಸಕಲ್ಪದೇ ಜ್ಞಾನವು. ತಿಳಿದುದನ್ನು ಸರ್ವದಾ ಮನನಮಾಡಿಕೊಳ್ಳತಕ್ಕುದೇ ಮನಸ್ಸು. ಮನನವಿಷಯವನ್ನು ನಾನು ನನ್ನದು ಎಂದು ಅಹಂಕರಿಸುವುದೇ ಅಹಂ

ಕಾರವು. ಅಹಂಕಾರವನ್ನು ನಿಶ್ಚಯಿಸತಕ್ಕದ್ದೇ (ಅಹಂಕರಿಸಿದ ವಿಷಯದ ಗುಣದೋಷಾತ್ಮಕವಾದ ನಿಶ್ಚಯವಿಚಾರವೇ) ಬುದ್ಧಿಯು. ನಿಶ್ಚಿತವಾದುದನ್ನು ಸ್ಥೈರ್ಯಗುಣದಿಂದಿಟ್ಟುಕೊಳ್ಳುವುದೇ (ನಿಶ್ಚಿತ ವಿಷಯದ ಸ್ಥಿರತೆಗೆ ಆಶ್ರಯವಾದುದೇ) ಚಿತ್ತವು. ಈ ಭಾವಾದಿ ಷಟ್ಕವೇ ವಸ್ತು ಸಾಧಕವು.

ಸೂ. ೩೩. ೩೫. ಚಿತ್ತವು ಭಕ್ತನಿಗೂ, ಬುದ್ಧಿಯು ಮಹೇಶ್ವರನಿಗೂ, ಅಹಂಕಾರವು ಪ್ರಸಾದಿಗೂ, ಮನಸ್ಸು ಪ್ರಾಣಲಿಂಗಿಗೂ, ಜ್ಞಾನವು ಶರಣನಿಗೂ, ಭಾವವು ಐಕ್ಯನಿಗೂ, ಹಸ್ತಗಳಾಗಿರುವವು.

ಸೂ ೩೬ ೪೧ ಭಕ್ತಾದಿಸ್ಥಲಗಳ ಅಂಗಲಿಂಗಹಸ್ತಗಳು.

ಸೂ. ಆತ್ಮಾಂಗದಲ್ಲಿ ಭಾವಹಸ್ತದಿಂದ ಮಹಾಲಿಂಗಾರ್ಚನತತ್ಪರವಾದುದೇ ಐಕ್ಯಸ್ಥಲವು. ವ್ಯೋಮಾಂಗದಲ್ಲಿ ಜ್ಞಾನಹಸ್ತದಿಂದ ಪ್ರಸಾದಲಿಂಗಾರ್ಚನಪರವಾದುದೇ ಶರಣಸ್ಥಲವು. ಅನಿಲಾಂಗದಲ್ಲಿ ಮನೋಹಸ್ತದಿಂದ ಚರಲಿಂಗಾರ್ಚನಯುಕ್ತವಾದುದೇ ಪ್ರಾಣಲಿಂಗಸ್ಥಲವು. ಅನಲಾಂಗದಲ್ಲಿ ಅಹಂಕಾರಹಸ್ತದಿಂದ ಶಿವಲಿಂಗಾರ್ಚನರತಿಯುಳ್ಳದ್ದೇ ಪ್ರಸಾದಿಸ್ಥಲವು. ಜಲಾಂಗದಲ್ಲಿ ಬುದ್ಧಿಹಸ್ತದಿಂದ ಗುರುಲಿಂಗಾರ್ಚನತತ್ಪರವಾದುದೇ ಮಹೇಶ್ವರಸ್ಥಲವು. ಭೂಮ್ಯಂಗದಲ್ಲಿ ಚಿತ್ತಹಸ್ತದಿಂದ ಆಚಾರಲಿಂಗತತ್ಪರವಾದುದೇ ಭಕ್ತಸ್ಥಲವು. ಎಂಬುದಾಗಿ ಶಿವಸಿದ್ಧಾಂತಜ್ಞರಿಂದ ಹೇಳಲ್ಪಟ್ಟಿರುವದು.

ಈ ರೀತಿಯಾಗಿ ಅಂಗ, ಹಸ್ತ, ಲಿಂಗ, ಲಿಂಗಮುಖ ಇವುಗಳನ್ನು ಕ್ರಮವಾಗಿ ಹೇಳಿರುವೆನು.

## ವಿಚಾರವು.

ಭಕ್ತಾದಿ ಐಕ್ಯಾಂತವಾದ ಷಡಂಗಸ್ಥಲಗಳಲ್ಲಿ ಆಚಾರಾದಿ ಷಡ್ವಿಧಲಿಂಗಗಳ ಅರ್ಚನೆಗೆ ಹಸ್ತಗಳೆಂದು ಹೇಳಲ್ಪಟ್ಟ ಚಿತ್ತಾದಿಗಳು ಅಂಗಪದವಾಚ್ಯನಾದ ಶುದ್ಧ ಜೀವನಿಗೆ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನಸ್ಸು, ಸುಜ್ಞಾನ, ಸದ್ಭಾವರೂಪದಿಂದ ಪರಿಣಮಿಸಲಾಗಿ ಇವೇ ಷಟ್ಕರ್ಮಗಳೆನಿಸಿಕೊಳ್ಳುವವೆಂದು ವೀರಶೈವ ಪ್ರಕ್ರಿಯೆಯಲ್ಲಿ ಹೇಳಲ್ಪಟ್ಟಿರುವದು.

## ಪಂಚಾಕ್ಷರೀ ವಿದ್ಯಾಸಾಹಿತ್ಯ.

ದೀಕ್ಷಿತನಾದ ವೀರಶೈವನ ಸರ್ವಾಂಗವು ಲಿಂಗಮಯವಾಗಿರುವಂತೆ ಮಂತ್ರಾತ್ಮಕವೂ ಆಗಿರುವುದು. ಇಲ್ಲಿ ಮಂತ್ರವೆಂದರೆ ಶಿವಪಂಚಾಕ್ಷರಿಯು. ಇದು ಓಂಕಾರದಿಂದ ಸಹಿತವಾಗಲು ಷಡಕ್ಷರಿಯೆನಿಸುವುದು. ಈ ಮಂತ್ರಮಹಿಮೆಯನ್ನೂ, ಮಂತ್ರಾರ್ಥವನ್ನೂ, ಈ ಮಂತ್ರವು ವೀರಶೈವನ ಅಂಗದಲ್ಲಿ ನೆಲಸಿರುವ ಬಗೆಯನ್ನೂ ವಿವರಿಸುವನು

ಸೂ- ೪೨. ೪೪. ಪೂರ್ವವಿಷಯ ಪ್ರತಿಪಾದನಾನಂತರದಲ್ಲಿ ಈಗ ಪಂಚಾಕ್ಷರೀ ವಿದ್ಯಾಸಾಹಿತ್ಯವು ಹೇಳಲ್ಪಡುವುದು. ಪರಾವಿದ್ಯೆಯೆನಿಸಿಕೊಂಡಿರುವ ಪಂಚಾಕ್ಷರಿಯೇ ಸತಾರಾ ಅಂದರೆ ಓಂಕಾರಸಹಿತವಾಗಲು ಷಡಕ್ಷರಿಯಾಗುವುದು. ಈ ಮಂತ್ರವು ಸ್ಥೂಲಸೂಕ್ಷ್ಮಾದಿ ಭೇದದಿಂದ ಎಂಟು ಪ್ರಕಾರವಾಗಿರುವುದು.

ಮಂತ್ರಮಾತೃಕೆ, ಲಿಂಗರೂಪಿಣಿ, ಸರ್ವದಾ ಶಿವಪ್ರದಾಯಿನಿಯೆಂದು ಹೆಸರುಗೊಂಡ ಈ ಶಿವಮಂತ್ರವು ವೀರಶೈವನ ಸರ್ವಾಂಗಗಳಲ್ಲಿ ಪ್ರತಿಷ್ಠಿತವಾಗಿದೆ.

ಈ ಮಂತ್ರವು ಲಿಂಗಾಂಗಸಂಯೋಗಬೋಧಕವು.

ಸೂ. ೪೫. ೪೭. ನಮಃ ಪದವೇ ಅಂಗವು. 'ಶಿವ' ಎಂಬ ಪದವೇ ಲಿಂಗವು. 'ಆಯ' ಎಂಬ ಪದವೇ ಸಂಬಂಧವು. ಈ ಲಿಂಗಾಂಗ ಸಂಬಂಧವೆಂಬ ಪದತ್ರಯ ಬೋಧನಾರ್ಥವಾಗಿ ಇರುವ ಈ ಮಂತ್ರವು ಮಂತ್ರರಾಜವೆಂದು ಕರೆಯಿಸಿಕೊಳ್ಳಲ್ಪಡುವುದು. 'ನಮಃ' ಎಂಬ ಪದವು ಜೀವವಾಚಕವಾಗಿಯೂ, 'ಶಿವ' ಎಂಬ ಪದವು ಪರಮಾತ್ಮವಾಚಕವಾಗಿಯೂ ಇದ್ದು, 'ಆಯ' ಎಂಬ ಪದವು ಜೀವಪರಮಾತ್ಮರ ತಾದಾತ್ಮ್ಯವಾಚಿಯಾಗಿರುವುದರಿಂದ "ನಮಃ ಶಿವಾಯ" ಎಂದು ಈ ಮಂತ್ರವನ್ನು ಕರೆಯುತ್ತಾರೆ.

## ಷಟ್ಚಕ್ರಗಳಲ್ಲಿ ನಕಾರಾದಿಪ್ರಣವಗಳು.

ಸೂ. ೪೮. ೪೯. ಮೂಲಾಧಾರದಲ್ಲಿ ಶಿವಸ್ವರೂಪವಾದ ನಕಾರಪ್ರಣವವೂ, ಸ್ವಾಧಿಷ್ಠಾನದಲ್ಲಿ ಮಕಾರಪ್ರಣವವೂ, ಮಣಿಪೂರಕದಲ್ಲಿ ಶಿಕಾರಪ್ರಣವವೂ, ಅನಾಹತದಲ್ಲಿ ವಕಾರಪ್ರಣವವೂ ವಿಶುದ್ಧದಲ್ಲಿ,

ಯಕಾರಪ್ರಣವವೂ, ಆಜ್ಞಾಸ್ಥಾನದಲ್ಲಿ ಓಂಕಾರವೂ, ಪ್ರತಿಷ್ಠಿತವಾಗಿರುವವು.

## ನಕಾರಾದಿಪ್ರಣವಗಳು ಷಡ್ವಿಧಲಿಂಗರೂಪಗಳು.

ಸೂ. ೫೦. ೫೨. ನ, ಮ, ಶಿ, ವಾ, ಯ, ಓಂ, ಎಂಬ ಆರಕ್ಷರಗಳು ಕ್ರಮವಾಗಿ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗರೂಪಗಳಾಗಿರುವವು. ಮತ್ತು ಕ್ರಮಗಣನೆಯಲ್ಲಿ ನಕಾರಾದಿಯಾಗಿ- ಅಂದರೆ ೧ನೆಯ ಪ್ರಣವವು ನಕಾರವು ೨ನೆಯದು ಮಕಾರವು. ೩ನೆಯದು ಶಿಕಾರವು. ೪ನೆಯದು ವಕಾರವು. ೫ನೆಯದು ಯಕಾರವು. ೬ನೆಯದು ಓಂಕಾರವು. ಎಂಬುದಾಗಿ ತಿಳಿಯತಕ್ಕದ್ದು.

## ತ್ವಗಾದಿಯಾದ ಷಟ್‌ಸ್ಥಾನದಲ್ಲಿ ನಕಾರಾದಿಗಳು.

ಸೂ. ೫೩. ೫೪. ವ್ಯಾಪಕವಾದ ಓಂಕಾರವು ದೇಹವನ್ನು ವ್ಯಾಪಿಸಿರುವ ತ್ವಕ್ಕಿನಲ್ಲಿಯೂ, ನಕಾರವು ರಕ್ತದಲ್ಲಿಯೂ, ಮಕಾರವು ಮಾಂಸದಲ್ಲಿಯೂ, ಶಿಕಾರವು ಮೇದಸ್ಸಿನಲ್ಲಿಯೂ, ವಕಾರವು ಅಸ್ಥಿಯಲ್ಲಿಯೂ, ಯಕಾರವು ಮಜ್ಜೆಯಲ್ಲಿಯೂ ವ್ಯಾಪಿಸಿಕೊಂಡಿರುವವು. ದೇಹಸಾರವಾದ ಶುಕ್ಲದಲ್ಲಿ ಷಡಕ್ಷರವು ನೆಲಸಿರುವುದು.

## ಮಂತ್ರ ಶರೀರ

ಸೂ. ಈ ರೀತಿಯಾಗಿ ಮಂತ್ರಮೂರ್ತಿಯಾದ ಶಿವನಂತೆ ತನ್ನ ಶರೀರವು ಷಡಕ್ಷರಮಯವಾಗಿರುವದೆಂಬ ಭಾವವು ಯಾವಾತನಿಗೆ ದೃಢತರವಾಗಿರುವುದೋ, ಆತನೇ ನಾನು ಎಂಬುದಾಗಿ ಶಿವವಚನವಿರುವುದು.

## ವಿಚಾರ

ದೇಹದ ಗುದ, ಗುಹ್ಯ, ನಾಭಿ, ಹೃದಯ, ಕಂಠ, ಭ್ರೂಮಧ್ಯ ಇವಾರು ಸ್ಥಲಗಳು ಕ್ರಮವಾಗಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳ ಸ್ಥಾನವಾಗಿರುವವು. ಈ ಆಧಾರಾದಿ ಸ್ಥಾನಗಳಲ್ಲಿಯೇ ಕ್ರಮವಾಗಿ ಮೇಲೆ ಹೇಳಿದ ನಕಾರಾದಿ ಪ್ರಣವಗಳು ಆಚಾರಾದಿ ಲಿಂಗರೂಪದಿಂದಿರುವವೆಂದು ತಿಳಿಯತ

ಳ್ಳದ್ದು. ಮತ್ತು ಆಧಾರಚಕ್ರ ಕಮಲವು ನಾಲ್ಕು ದಳಗಳುಳ್ಳದ್ದು. ಸ್ವಾಧಿಷ್ಠಾನವು ೬ ದಳಗಳುಳ್ಳದ್ದು, ಮಣಿಪೂರಕವು ೧೦ ದಳಗಳುಳ್ಳದ್ದು. ಅನಾಹತವು ೧೨ ದಳಗಳುಳ್ಳದ್ದು. ವಿಶುದ್ಧವು ೧೬ ದಳಗಳುಳ್ಳದ್ದು, ಆಜ್ಞಾ ಚಕ್ರವು ೨ ದಳಗಳುಳ್ಳದ್ದಾಗಿರುವುದೆಂತಲೂ, ಪ್ರತಿಯೊಂದು ಚಕ್ರದ ಪ್ರತಿಯೊಂದು ದಳಗಳಲ್ಲಿಯೂ ಅಂದರೆ — ಆಧಾರದಲ್ಲಿ ವ ಶ ಷ ಸ, ಸ್ವಾಧಿಷ್ಠಾನದಲ್ಲಿ ಬ ಭ ಮ ಯ ರ ಲ, ಮಣಿಪೂರಕದಲ್ಲಿ ಡ ಢ ಣ ತ ಥ ದ ಧ ನ ಪ ಫ, ಅನಾಹತದಲ್ಲಿ ಕ ಖ ಘ ಙ ಚ ಛ ಜ ಝ ಞ ಟ ಠ, ವಿಶುದ್ಧಿಯಲ್ಲಿ ಅ ಆ ಇ ಈ ಉ ಊ ಋ ೠ ಎ ಏ ಐ ಒ ಓ ಔ ಅಂ ಅಃ, ಆಜ್ಞಾಚಕ್ರದಲ್ಲಿ ಹಂ ಕ್ಷಂ, ಎಂಬ ಪ್ರಣವಗಳಿರುವವೆಂಬುದಾಗಿಯೂ ಗ್ರಂಥಾಂತರದಲ್ಲಿ ಉಕ್ತವಾಗಿದೆ. ಈ ವಿಚಾರದಿಂದ ಶರೀರವು ಪ್ರಣವಮಯವಾಗಿರುವುದೆಂದು ತಿಳಿಯುತ್ತದೆ. ಇದೂ ಅಲ್ಲದೆ, “ಓಂಕಾರೋ ವದನಂ ದೇವಿ, ನಮಃ ಕಾರೌ ಭುಜದ್ವಯಂ। ಶಿಕಾರೋ ದೇಹಮಧ್ಯಸ್ತು ವಾಯಕಾರೌ ಪದದ್ವಯಂ” ಎಂಬ ಪ್ರಮಾಣದಿಂದ ವೀರಶೈವನ ಮುಖವೇ ಓಂಕಾರವು. ಎರಡು ಭುಜಗಳೇ ನಮಕಾರಗಳು ದೇಹಮಧ್ಯವೇ ಶಿಕಾರವು ಎರಡು ಪಾದಗಳೇ ವಾಮಕಾರಗಳೆಂದು ಹೇಳಲ್ಪಟ್ಟಿರುವದರಿಂದಲೂ ವೀರಶೈವನ ಶರೀರವು ಷಡಕ್ಷರ ಮಂತ್ರಮಯವಾಗಿರುವುದೆಂದು ವ್ಯಕ್ತವಾಗುವುದು. ಈ ರೀತಿಯಾಗಿ ವೀರಶೈವನ ಶರೀರವು ಮಂತ್ರಲಿಂಗ ಸ್ವರೂಪವಾಗಿರುವುದೆಂದು ಹೇಳುವುದರಿಂದ ವೀರಶೈವನು ಶಿವಸ್ವರೂಪನೇ ಆಗುವನೆಂದು ಸಿದ್ಧವಾಗುವದು. ಈತನು ಷಟ್‌ಸ್ಥಲಾಚರಣದಿಂದ ಶಿವಾನಂದವನ್ನೆ ಅನುಭವಿಸುವನು. ಅಂದರೆ—ಭೂಮ್ಯಂಗದಲ್ಲಿದ್ದು, ಭಕ್ತನಾಗಿ ಶ್ರದ್ಧಾಭಕ್ತಿಯಿಂದ ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗಕ್ಕೆ ಚಿತ್ತಹಸ್ತದಿಂದ ಗಂಧ ಪದಾರ್ಥವನ್ನು ಧರಿಸಿ, ನಕಾರ ಮಂತ್ರವನ್ನು ಸ್ಮರಿಸುತ್ತಾ, ನಾಸಿಕೇಂದ್ರಿಯ ಮುಖದಿಂದ ಸಮರ್ಪಿಸಿ ತತ್ಪ್ರಸಾದ ಭೋಗಿಯಾಗಿ ಆನಂದವನ್ನನುಭವಿಸುವನು. ಇದರಂತೆಯೇ ಮುಂದಿನ ಸ್ಥಲಗಳಿಗೆ ಉಕ್ತವಾದ ಅಂಗ, ಭಕ್ತಿ. ಶಕ್ತಿ, ಲಿಂಗ, ಹಸ್ತ, ಪದಾರ್ಥ, ಮಂತ್ರ, ಮೊದಲಾದವುಗಳ ಪ್ರಯೋಜನವನ್ನು ತಿಳಿದುಕೊಳ್ಳತಕ್ಕದ್ದು. ಈ ಲಿಂಗಾಂಗ ಸಾಮಗ್ರಿಯ ವಿಷಯದಲ್ಲಿ ವೀರಶೈವ ಸಿದ್ಧಾಂತ ಪ್ರತಿಪಾದಕ ಗ್ರಂಥಗಳಲ್ಲಿ ಹೇಳಿರುವುದೇನಂದರೆ — ಶಕ್ತಿವಿಶಿಷ್ಟನಾದ ಶಿವನೇ

ಲಿಂಗಾಂಗರೂಪವನ್ನು ಹೊಂದಿದನು. ಒಂದಾದ ಲಿಂಗತತ್ವವೇ ಇಷ್ಟ, ಪ್ರಾಣ, ಭಾವರೂಪದಿಂದ ಮೂರುವಿಧವಾಯಿತು. ಪುನಃ ಒಂದೊಂದ ರಲ್ಲಿ ಕ್ರಮದಿಂದ ದ್ವಿವಿಧವಾಗಿ ಆಚಾರಾದಿ ರೂಪದಿಂದ ಆರು ತೆರನಾ ಯಿತು. ಲಿಂಗಗತಶಕ್ತಿಯಾದರೂ ಚಿಚ್ಛಕ್ತಿಯೇ ಮೊದಲಾದ ಅವರ ನಾಮದಿಂದಲೂ, ಓಂಕಾರಾದಿ ಪ್ರಣವರೂಪದಿಂದಲೂ ಶಾಂತ್ಯತೀತೋ ತ್ತರಾದಿ ಕಲಾಭೇದದಿಂದ ಆರುತೆರನಾಗಿ ಆರು ಲಿಂಗಗಳನ್ನು ಆಶ್ರಯಿ ಸಿತು. ಅಂಗ ತತ್ವವು ಉಪಾಸ್ಯವಾದ ಲಿಂಗತತ್ವದಂತೆ ಉಪಾಸಾರ್ಥ ವಾಗಿ ತಾನೂ ಮೊದಲು ತ್ಯಾಗಾಂಗಾದಿ ತ್ರಿವಿಧರೂಪವನ್ನು ಹೊಂದಿತು ಪುನಃ ಒಂದೊಂದರಲ್ಲಿ ಇತ್ತೆರನಾಗಿ ಭಕ್ತಾದಿ ರೂಪದಿಂದ ಷಡ್ವಿಧವಾ ಯಿತು. ಅಂಗಗತ ಶಕ್ತಿಯಾದರೂ ಶ್ರದ್ಧಾದಿ ಷಡ್ವಿಧಭಕ್ತಿರೂಪವನ್ನೂ, ಚಿತ್ತಾದಿ ಷಡ್ವಿಧ ಹಸ್ತರೂಪವನ್ನೂ, ಜ್ಞಾನೇಂದ್ರಿಯ ಕರ್ಮೇಂದ್ರಿಯ ರೂಪವನ್ನೂ, ಇಂದ್ರಿಯ ವಿಷಯವಾಗಿ ತೃಪ್ತಿಲಕ್ಷಣವುಳ್ಳ ಶಬ್ದಾದಿ ಷಡ್ವಿಧಾರ್ಥರೂಪವನ್ನೂ, ಆಕಾಶಾದಿ ಪಂಚಕಸಮಷ್ಟಿ ರೂಪವನ್ನೂ ಹೊಂದಿ, ಅಂಗವನ್ನಾಶ್ರಯಿಸಿತು.

ಈ ರೀತಿಯಾಗಿ ಹೇಳಿರುವದರಿಂದ ಸೂತ್ರಕಾರನು ಪ್ರತಿಪಾದಿಸಿ ರುವ ಲಿಂಗಾಂಗಸಾಮಗ್ರಿಯೆಲ್ಲವೂ ಶಿವಶಕ್ತಿವಿಲಾಸದಿಂದುಂಟಾದ ಉರ್ಧ್ವ ಸೃಷ್ಟಿಗೆ ಸೇರಿದುದಲ್ಲವೇ ಅಧೋಸೃಷ್ಟಿಗೆ ಸಂಬಂಧಿಸಿರುವುದಿಲ್ಲವು. ಮತ್ತು ಈ ಲಿಂಗಾಂಗಸಾಮಗ್ರಿಯಲ್ಲಿ ಅಧೋಸೃಷ್ಟಿಯನ್ನನುಸರಿಸಿದ ಯಾವ ಶಂಕೆಗೂ ಅವಕಾಶವಿಲ್ಲವೆಂದು ಕಂಡುಬರುತ್ತದೆ.

## ಅಧಿಕರಣ ಸಮಾಪ್ತಿ

ಸೂ. ೫೬-೫೭ ಶಿವಪ್ರಣೀತವಾದ ಆಗಮವಾಕ್ಯಾರ್ಥವನ್ನು ಚೆನ್ನಾ ಗಿ ವಿಚಾರಿಸಿ ಈ ದೃಶವಾದ ಸಂಸಾರಂಗಲಿಂಗ ಸಾಹಿತ್ಯವು ನನ್ನಿಂದ ಉಕ್ತವಾಗಿರುವದು ಈ ಶಿವಸಿದ್ಧಾಂತ ತಂತ್ರವೆಂಬ ಹೆಸರಿನ ಶಿವಾದ್ವೈ ತವನ್ನು ಸರಿಯಾಗಿ ತಿಳಿದುಕೊಂಡಾತನು ತನ್ನ ಅಜ್ಞಾನ ಗ್ರಂಥಿಯನ್ನು ಭೇದಿಸಿಬಿಡುವನು.

## ಷಷ್ಠಾಧಿಕರಣಂ ಸಮಾಪ್ತಂ.

# ಸಪ್ತಮಾಧಿಕರಣಂ.

## ಅರ್ಪಣಸದ್ಭಾವ ನಿರೂಪಣಂ

ಲಿಂಗಭೋಗೋಪಭೋಗಿಯಾದ ವೀರಶೈವನ ಲಿಂಗಾರ್ಪಣ ಸ್ವರೂಪವನ್ನೂ ತದ್ಭೇದವನ್ನೂ ನಿರೂಪಿಸಲಿಚ್ಛಿಸಿ, ಮೊದಲು ಅರ್ಪಣದ ಪ್ರಯೋಜನವನ್ನು ಪ್ರಥಮ ಸೂತ್ರದಿಂದ ಪ್ರತಿಪಾದಿಸುವನು.

ಸೂ. ೧ ಸರ್ವಾಂಗಲಿಂಗಸಾಹಿತ್ಯ ಪ್ರತಿಪಾದನಾನಂತರದಲ್ಲಿ ಸರ್ವಕ್ರಿಯೆಗಳಲ್ಲಿಯೂ ಆತ್ಮನ ನಿರ್ಲೇಪತ್ವಸಿದ್ಧಿಗಾಗಿ ಈಶ್ವರೋಕ್ತವಾದ ಶ್ರೀಲಿಂಗಾರ್ಪಣ ಸದ್ಭಾವವನ್ನು ಸಂಗ್ರಹವಾಗಿ ಹೇಳುವೆನು.

## ಲಿಂಗಾರ್ಪಣವಿಧಿಯು

ಸೂ. ೨ ಲಿಂಗಾರ್ಪಣ ವಿಧಿಯು ದ್ವಿವಿಧವಾಗಿರುವುದೆಂದು ದೇಶಿಕೋತ್ತಮರಿಂದ ಹೇಳಲ್ಪಟ್ಟಿದೆ. ಒಂದು ಕ್ರಿಯಾಮತಾರ್ಪಣವು. ಮತ್ತೊಂದು ಜ್ಞಾನಮತಾರ್ಪಣವು.

## ಕ್ರಿಯಾರ್ಪಣಸ್ವರೂಪ

ಸೂ. ೩-೪ ತನ್ನ ಉಪಭೋಗಕ್ಕಾಗಿ ಬುದ್ಧ್ಯಚ್ಛಾಸಂಭವವಾದ ಅಂದರೆ ತಾವಾಗಿಯೇ ಪ್ರಾಪ್ತವಾದ ಮತ್ತು ಆಯಾ ಕಾಲೋಚಿತವಾದ ದ್ರವ್ಯಂಗಳಿಂದ ತಾನು ಆದರದಿಂದ ತ್ರಿವಿಧಲಿಂಗದಲ್ಲಿ (ಇಷ್ಟ, ಪ್ರಾಣ, ಭಾವದಲ್ಲಿ) ಮಾಡತಕ್ಕ ಅರ್ಪಣಕ್ರಿಯೆಯೇನುಂಟೋ, ಅದನ್ನು ಕ್ರಿಯಾರ್ಪಣವೆಂದು ಅರ್ಪಣತತ್ವಜ್ಞರು ಹೇಳುವರು.

## ಜ್ಞಾನಾರ್ಪಣಸ್ವರೂಪ

ಸೂ. ೪-೫ ಸ್ವಯಂಪ್ರಾಪ್ತವಾದ ವಸ್ತುಗಳಲ್ಲಿ ಯಾವುದನ್ನು ಯಾವ ಇಂದ್ರಿಯ ಮುಖದಿಂದ ಅರ್ಪಿಸಬೇಕೆಂಬುದನ್ನು ತಿಳಿದುಕೊಂಡು, ಸರ್ವಕಾಲದಲ್ಲಿಯೂ ಸರ್ವತ್ರ ಆಚಾರಾದಿ ಷಡ್ವಿಧಲಿಂಗಗಳಲ್ಲಿ ಆ ಲಿಂಗಮುಖಗಳಿಂದ ಗಂಧಾದಿ ಪದಾರ್ಥಗಳನ್ನು ಅನಿಚ್ಛಾಪೂರ್ವಕವಾಗಿ ಅರ್ಪಣಮಾಡುವುದೇ ಜ್ಞಾನಾರ್ಪಣವು.

## ವಿಚಾರ.

ಶಿವಕ್ರಿಯಾಜ್ಞಾನಪರನು ಲಿಂಗಾರ್ಪಿತವಲ್ಲದ ಪದಾರ್ಥಗಳನೊಲ್ಲದೆ, ಲಿಂಗದ ಪ್ರಸಾದವನ್ನೇ ಸೇವಿಸುವನು. ಆಶೆಗೆ ದಾಸನಾಗಿ ಬಳಲದೆ, ಶಿವನ ದಾಸನಾಗಿ ದುಡಿದು, ಶಿವಕೃಪೆಯಿಂದ ಬಂದ ಪದಾರ್ಥವನ್ನಷ್ಟೇ ಸಂತೋಷದಿಂದ ಪರಿಗ್ರಹಿಸಿ, ಉಕ್ತಕಾಲದಲ್ಲಿ ಕಾಲಕ್ಕೆ ತಕ್ಕ ಪದಾರ್ಥವನ್ನು ಶಿವಕ್ರಿಯೆಯಿಂದ ಸಂಸ್ಕರಿಸಿ, ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಅಥವಾ ಗುರುಲಿಂಗಜಂಗಮಕ್ಕೆ ಅರ್ಪಿಸಿ, ಅವರ ಪ್ರಸಾದವನ್ನು ಸ್ವೀಕರಿಸುವುದು ಕ್ರಿಯಾರ್ಪಣವೆನಿಸುವುದು. ಇನ್ನು ಸರ್ವಕಡೆಯಲ್ಲಿ ಸರ್ವಕಾಲದಲ್ಲಿಯೂ ತಾವಾಗಿಯೇ ಪ್ರಾಪ್ತವಾಗುತ್ತಿರುವ ಶಬ್ದಾದಿ ವಿಷಯಗಳನ್ನು ಇಂದ್ರಿಯ ಮುಖದಿಂದ ಭೋಗಿಸುವ ಸಂದರ್ಭದಲ್ಲಿ, ಇಂದ್ರಿಯಗಳನ್ನು ಲಿಂಗಸ್ಥಾನಗಳಾಗಿಯೂ, ಲಿಂಗಮುಖಗಳನ್ನಾಗಿಯೂ ತಿಳಿದುಕೊಂಡು ಆಯಾ ವಿಷಯವು ಆಯಾ ವಿಷಯೇಂದ್ರಿಯ ರೂಪವಾದ ಲಿಂಗಕ್ಕೆ ಅರ್ಪಣವಾಗುವುದು. ಅರ್ಪಿತ ವಿಷಯವು ವಿಷಯವಲ್ಲವು. ಲಿಂಗ ಪ್ರಸಾದವು ಎಂಬ ವಿವೇಕವೇ ಜ್ಞಾನಾರ್ಪಣವೆನಿಸುವುದು. ವೀರಶೈವಾಚಾರವು ಜ್ಞಾನಕ್ರಿಯಾತ್ಮಕವಾಗಿರುವುದರಿಂದ ಕೆಲವೆಡೆಯಲ್ಲಿ ಕ್ರಿಯಾಪ್ರಧಾನವಾಗಿಯೂ, ಕೆಲವೆಡೆಯಲ್ಲಿ ಜ್ಞಾನಪ್ರಧಾನವಾಗಿಯೂ ಆಚರಿಸಬೇಕಾಗುವುದು. ಕ್ರಿಯಾಪ್ರಧಾನವಾದ ಆಚರಣೆಗೆ ಸಹಜಾಚರಣವೆಂದೂ. ಜ್ಞಾನಪ್ರಧಾನವಾದ ಆಚರಣೆಗೆ ಸಂಬಂಧಾಚರಣವೆಂದೂ ವೀರಶೈವ ಸಂಪ್ರದಾಯಜ್ಞರು ಹೇಳುವರು. ಸಹಜ ಸಂಬಂಧಗಳ ಜ್ಞಾನವಿಲ್ಲದೇ ಹೋದರೆ, ವೀರಶೈವಾಚಾರವನ್ನು ನಡೆಸಲು ಸಾಧ್ಯವಿಲ್ಲವೆಂಬುದು ಪ್ರತಿಯೊಬ್ಬ ವೀರಶೈವನು ನೆನಪಿನಲ್ಲಿಡತಕ್ಕ ವಿಷಯವಾಗಿದೆ.

## ಕ್ರಿಯಾರ್ಪಣ- ತದ್ಭೇದ

ಸೂ. ೬. ೯. ಈಗ ಇಲ್ಲಿ ಕ್ರಿಯಾರ್ಪಣ ವಿಧಾನವನ್ನು ಹೇಳುತ್ತೇನೆ. ವೀರಶೈವತತ್ವಜ್ಞನು ದ್ರವ್ಯಶುದ್ಧಿಗಾಗಿ ಪ್ರಸಂಗಾನುಸಾರವಾಗಿ ಯಾವ ಯಾವ ಕ್ರಿಯೆಯನ್ನು ಮಾಡತಕ್ಕದ್ದಿರುವುದೋ, ಅದೆಲ್ಲವನ್ನೂ ಈಶ್ವರಾರ್ಪಣ ಬುದ್ಧಿಯಿಂದ ಮಾಡತಕ್ಕದ್ದು. ಏಕೆಂದರೆ- ಶಿವಾರ್ಪಿತವಾದ ದ್ರವ್ಯಗಳು ಬಂಧವನ್ನಾಗಲೀ ಮುಕ್ತಿಯನ್ನಾಗಲೀ ಉಂಟುಮಾಡದೆ ಕೇವಲ ಶಿವಪ್ರಸಾದವನ್ನೇ ಉಂಟುಮಾಡುವವು. ಇದೇ ವೀರಶೈವ ಪದ್ಧತಿಯು. ಆದುದರಿಂದ ಈ ಅರ್ಪಣ ವಿಧಾನದಲ್ಲಿ ಆತ್ಮನ ಉಪಭೋಗಕ್ಕಾಗಿ ಅರ್ಪ

ಣಕ್ರಿಯೆಯು ಯಾವಾಗಲೂ ಸ್ಥೂಲ ಸೂಕ್ಷ್ಮಭೇದದಿಂದ ವಿಧಿಸಲ್ಪಡುವುದು.

## ತ್ರಿವಿಧ ದ್ರವ್ಯಗಳು.

ಸೂ. ೯. ೧೦. ೧೧. ಆತ್ಮೋಪಭೋಗ ನಿಮಿತ್ತಂಗಳಾದ ದ್ರವ್ಯಗಳು ಸ್ಥೂಲ, ಪ್ರವಿವಿಕ್ತ, (ಸೂಕ್ಷ್ಮ) ಆನಂದವೆಂಬ ನಾಮದಿಂದ ಮೂರು ತೆರವಾಗಿರುವವು. ಮತ್ತು ಸ್ಥೂಲ, ಸೂಕ್ಷ್ಮ, ಆನಂದವೆಂಬ ಈ ದ್ರವ್ಯಗಳು ಕ್ರಮವಾಗಿ ರೂಪ, ರುಚಿ, ತೃಪ್ತಿಯೆಂದು ಕರೆಯಿಸಿಕೊಳ್ಳುವವು.

## ತ್ರಿವಿಧ ದ್ರವ್ಯಾರ್ಪಣ.

ಸೂ. ೧೧. ೧೪. ಬಹಿರಂಗದಲ್ಲಿ (ಸ್ಥೂಲ ಶರೀರ) ಸ್ಥೂಲ ದ್ರವ್ಯವಾದ ರೂಪವನ್ನು ಇಷ್ಟಲಿಂಗಕ್ಕೆ ಅರ್ಪಿಸುವವನೇ ವಿಶ್ವ ಜೀವನು. ಅಂತರಂಗದಲ್ಲಿ (ಸೂಕ್ಷ್ಮ ಶರೀರ) ಸೂಕ್ಷ್ಮ ದ್ರವ್ಯವಾದ ರುಚಿಯನ್ನು ಪ್ರಾಣಲಿಂಗಕ್ಕೆ ಅರ್ಪಿಸುವವನೇ ತೈಜಸ ಜೀವನು. ಆತ್ಮಾಂಗದಲ್ಲಿ (ಕಾರಣ ಶರೀರ) ಆನಂದ ದ್ರವ್ಯವಾದ ತೃಪ್ತಿಯನ್ನು ಭಾವಲಿಂಗಕ್ಕೆ ಅರ್ಪಿಸುವವನೇ ಪ್ರಾಜ್ಞ ಜೀವನು.

## ಪ್ರಸಾದ.

ಸೂ. ೧೪-೧೬ ಪ್ರತಿನಿತ್ಯದ ಭೋಜನಕ್ರಿಯೆಯಲ್ಲಿ ವೀರಶೈವನು ಯಾವರೂಪದ್ರವ್ಯವನ್ನು ಲಿಂಗಕ್ಕೆ ಅರ್ಪಿಸುವನೋ, ಅದನ್ನೇ ಭುಂಜಿಸತಕ್ಕದ್ದು. ಅನ್ಯವಾದ ರೂಪ ಪದಾರ್ಥವು ಭುಂಜಿಸಲಿಕ್ಕೆ ಯೋಗ್ಯವಲ್ಲವು. ಅಂತಹ ಅನ್ಯರೂಪವನ್ನು ಭುಂಜಿಸಿದ್ದಾದರೆ ಅದು ಶಿವಾರ್ಪಿತವಾಗಲಾರದು. ಮತ್ತು ಗುರುವಿನಿಂದ ಪ್ರತಿಷ್ಠಿತವಾದ ಲಿಂಗಕ್ಕೆ ಹೇಗೆ ಪೂರ್ವದ ಶಿಲಾದಿಭಾವವು ಇಲ್ಲವೆನಿಸುವದೋ, ಹಾಗೆಯೇ ಶಿವಪ್ರಸಾದದ ಪೂರ್ವದ ಹೆಸರು ಇಲ್ಲವೆನಿಸುವದು. ಆ ಹೆಸರನ್ನು ಸ್ಮರಣ ಮಾಡಕೂಡದು.

## ಭಕ್ತನ ಪದಾರ್ಥಕಾಯವು ಮತ್ತು ಪ್ರಸಾದಕಾಯವು

ಸೂ: ೧೭. ೧೮. ಭಕ್ತನು ತನ್ನ ಭಕ್ತಿಪ್ರಭಾವದಿಂದ ಪೂಜಾದಿಯಿಂದ ಪೂಜಾಂತದವರಿಗೂ ಪದಾರ್ಥಕಾಯನಾಗಿರುವನು. ಮತ್ತು ಪೂಜಾಂತದಿಂದ ಪೂಜಾದಿಯ ವರಿವಿಗೂ ಪ್ರಸಾದಕಾಯನಾಗಿರುವನು. ಅಂದರೆ—ಭಕ್ತನು ತನ್ನ ಲಿಂಗಪೂಜೆಯನ್ನು ಪ್ರಾರಂಭಿಸಿ ಅದನ್ನು ಮು

ಗಿಸುವವರಿಗೂ ಪದಾರ್ಥ ಕಾಯನೆನಿಸಿಕೊಳ್ಳುವನು. (ಭಕ್ತನ ಕಾಯವು ಲಿಂಗಾರ್ಪಣಕ್ಕೆ ತಕ್ಕ ಶುದ್ಧ ಪದಾರ್ಥ ರೂಪವಾಗಿರುವುದೆಂದು ಭಾವವು) ಲಿಂಗ ಪೂಜೆಯನ್ನು ಮುಗಿಸಿ, ಲಿಂಗಪ್ರಸಾದವನ್ನು ಸ್ವೀಕರಿಸಿದ ಬಳಿಕ ಪುನಃ ಉಕ್ತಕಾಲದಲ್ಲಿ ಲಿಂಗಪೂಜಾವಧಿಯು ಬರುವವರಿಗೂ ಭಕ್ತನು ಪ್ರಸಾದ ಕಾಯನೆನಿಸಿಕೊಳ್ಳುವನು. (ಲಿಂಗ ಪ್ರಸಾದವನ್ನು ಭುಂಜಿಸಿದ ಭಕ್ತನ ಕಾಯವು ಪುನಃ ಲಿಂಗಪೂಜಾವಧಿಯವರಿಗೂ ಪ್ರಸಾದ ಸ್ವರೂಪವಾಗಿಯೇ ಇರುವುದೆಂದು ಭಾವವು.)

## ರೂಪದ್ರವ್ಯದ ಪ್ರಸಾದ ಕಾಲವು.

ಸೂ. ೧೯-೨೦-೨೧ ಪೂಜಾ ಕಾಲದಲ್ಲಿ ಯಾವ ರೂಪ ದ್ರವ್ಯವು ಲಿಂಗ ಮುಖದಿಂದ ಅರ್ಪಿಸಲ್ಪಟ್ಟಿದೆಯೋ; ಅದು ಪುನಃ ಪೂಜಾಕಾಲದ ಪರ್ಯಂತವೂ ಪ್ರಸಾದರೂಪದಿಂದಿರುವುದು. ಅಂದರೆ ಲಿಂಗಪೂಜಾವಸರದಲ್ಲಿ ಕೊಡಲ್ಪಟ್ಟ ದ್ರವ್ಯವೇ ಶುಭವು. ಲಿಂಗಪೂಜಾವಸರಕ್ಕೆ ಸಲ್ಲದ ದ್ರವ್ಯವು ಅಶುಭವೂ, ಅನರ್ಪಿತವೂ ಆಗುವುದು. ಆದುದರಿಂದ ಲಿಂಗಾವಸರಕ್ಕೆ ಸಲ್ಲಿದುದೇ ಶುಭವು. (ಪ್ರಸಾದ ರೂಪವು) ಆತ್ಮಾವಸರಕ್ಕೆ ಸಲ್ಲಿದುದೇ ಅಶುಭವು. [ಪದಾರ್ಥ ರೂಪವು] ಎಂದು ಹೇಳಲ್ಪಡುವುದು.

## ತ್ರಿವಿಧ ಪ್ರಸಾದ

ಸೂ. ೨೨-೨೪. ಇಷ್ಟ, ಪ್ರಾಣ, ಭಾವಲಿಂಗಗಳಿಗೆ ಅರ್ಪಿಸಿದ ದ್ರವ್ಯವು ಕ್ರಮವಾಗಿ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವೆನಿಸಿಕೊಳ್ಳುವುದು. ಆತ್ಮನು ವಿಶ್ವ, ತೈಜಸ, ಪ್ರಾಜ್ಞನೆಂಬ ಹೆಸರಿನಿಂದ ಕ್ರಮವಾಗಿ ಜಾಗ್ರತ್, ಸ್ವಪ್ನ, ನಿದ್ರಾವಸ್ಥೆಗಳಲ್ಲಿ ಆದರದಿಂದ ಯಾವಾಗಲೂ ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದಗಳನ್ನುಪಭೋಗಿಸುತ್ತಿರುವನು.

## ಲಿಂಗಭೋಗಿಯು ನಿರ್ಲೇಪನು

ಸೂತ್ರ. ೨೪ - ೨೫. ವೀರಶೈವನು ಲಿಂಗಾರ್ಪಿತೋಪಭೋಗದಿಂದ ನಿರ್ಲೇಪನಾಗಿ ಬಿಡುವನೆಂಬುದರಲ್ಲಿ ಸಂಶಯವಿಲ್ಲವು. ಸ್ಥೂಲಾದಿಶರೀರತ್ರಯದಲ್ಲಿ ಭೋಗ್ಯವಾದ ರೂಪಾದಿ ಪದಾರ್ಥತ್ರಯವನ್ನೂ, ಭೋಕ್ತೃವಾದ ವಿಶ್ವಾದಿ ಜೀವತ್ರಯವನ್ನೂ, ಶುದ್ಧ ಸಿದ್ಧ ಪ್ರಸಿದ್ಧವೆಂಬ ತ್ರಿವಿಧ ಪ್ರಸಾದಭೋಗವನ್ನೂ, ಇಷ್ಟಾದಿ ತ್ರಿವಿಧ ಲಿಂಗವನ್ನೂ ಯಾವಾತನು ತಿಳಿದುಕೊಂಡಿರುವನೋ, ಆತನು ಭೋಗಿಯಾಗಿದ್ದರೂ ವಿಷಯಾದಿಗಳಿಂದ

ನಿರ್ಲಿಪ್ತನಿರುವನು. (ಲಿಂಗಭೋಗೋಪಭೋಗಿಯಾಗುವದರಿಂದ ಆತನನ್ನು ವಿಷಯಾದಿಗಳು ಸೋಂಕಲಾರವೆಂದು ತಾತ್ಪರ್ಯವು.)

## ವಿಚಾರ.

ರೂಪ, ರುಚಿ, ತೃಪ್ತಿಗಳೆಂಬ ತ್ರಿವಿಧ ಪದಾರ್ಥಗಳಲ್ಲಿ ರೂಪವೆಂದರೆ ಭೋಗ್ಯವಸ್ತುಗಳೆಲ್ಲ "ಶಿವಃ ಸರ್ವಮಿದಂ ಜಗತ್" ಎಂಬಾಗಮೋಕ್ತಿಯಿಂದ ಶಿವವ್ಯತಿರಿಕ್ತವಾಗಿರದೆ ಶಿವರೂಪದಿಂದಿರುವವೆಂಬ ತಿಳುವಳಿಕೆಯು ರುಚಿಯೆಂದರೆ, "ರಸೋವೈಸಃ" ಎಂಬ ತೈತ್ತಿರೀಯ ಶೃತಿಯಿಂದ ಪದಾರ್ಥಗಳಲ್ಲಿರುವ ಜ್ಞಾನವರ್ಧಕ ರುಚಿಯು ಶಿವಾಂಶವೇ ಎಂಬ ತಿಳುವಳಿಕೆಯು. ತೃಪ್ತಿಯೆಂದರೆ, ಶಿವಸುಖವಲ್ಲದೆ ಬೇರೆ ಸುಖಕ್ಕೆಳಸೆನೆಂಬ ನಿರ್ಧಾರವೇ. ಮತ್ತು ಶುದ್ಧ ಪ್ರಸಾದವೆಂದರೆ, ಕಾಮ, ಕ್ರೋಧಾದಿ ಅರಿಷಡ್ವರ್ಗಗಳ ಸೋಂಕಿಲ್ಲದುದು. ಸಿದ್ಧ ಪ್ರಸಾದವೆಂದರೆ, ಶಿವಜ್ಞಾನೋದಯವಾದುದು. ಪ್ರಸಿದ್ಧಪ್ರಸಾದವೆಂದರೆ, ಶಿವೋಹಂಭಾವನಿಶ್ಚಲವಾದುದು. ಎಂದು ಕೆಲವರ ವಿಚಾರವಿರುವುದು.

## ಜ್ಞಾನಾರ್ಪಣಂ

ಕ್ರಿಯಾರ್ಪಣ ಜ್ಞಾನಾರ್ಪಣಗಳ ಲಕ್ಷಣವು ಪೂರ್ವದಲ್ಲಿ ಉಕ್ತವಾಗಿದೆ. ವಿಭಾಗಕ್ರಮವನ್ನನುಸರಿಸಿ, ಮೊದಲು ಕ್ರಿಯಾರ್ಪಣದ ವಿಸ್ತಾರವಾದ ಸ್ವರೂಪವು ನಿರೂಪಿತವಾಗಿದೆ. ಈಗ ಜ್ಞಾನಾರ್ಪಣದ ಸ್ವರೂಪವು ನಿರೂಪಿಸಲ್ಪಡುವುದುಃ—

ಸೂ. ೨೬. ಸರ್ವೇಂದ್ರಿಯಗಳ ಮುಖದಿಂದ ಉಪಭೋಗಕ್ಕಾಗಿ ಬರುವದ್ರವ್ಯಗಳ ದೋಷನಿವೃತ್ತಿಗಾಗಿ ಮುಖ್ಯವಾಗಿ ಸ್ವಾನುಭವದಿಂದ ತಿಳಿಯಲು ಸಾಧ್ಯವಾದ ಜ್ಞಾನಾರ್ಪಣವನ್ನು ಇನ್ನು ಮುಂದೆ ಹೇಳಲಿಚ್ಛಿಸುವೆನು.

## ವಿಚಾರವು

ಕರ್ಮಕಾಂಡಿಗಳು ಹವಿಃಶೇಷವನ್ನು ಭುಂಜಿಸುವಂತೆ ಜ್ಞಾನಕ್ರಿಯಾಯುಕರಾದ ವೀರಶೈವರು ಗುರುಲಿಂಗಜಂಗಮಾರ್ಪಿತವಾದ ಪ್ರಸಾದವನ್ನು ಕ್ರಿಯಾರೂಪದಿಂದಲೂ ಜ್ಞಾನರೂಪದಿಂದಲೂ ಭುಂಜಿಸಬೇಕೆಂಬ ವಿಧಿಯುಂಟು. "ರುದ್ರೇಣಾತ್ತ ಮಶ್ನಂತಿ; ರುದ್ರೇಣ ಘ್ರಾತಂ ಜಿಘ್ರಂತಿ; ರುದ್ರೇಣ ಪೀತಂ ಪಿಬಂತಿ" (ವೀರಶೈವರು ಗುರು ಲಿಂಗ ಜಂಗ

ಮರೂಪನಾದ ಶಿವನು ಉಂಡುದು ನುಣ್ಬರು; ಮೂಸಿಸಿದುದನು ಮೂಸಿಸುವರು; ಕುಡಿದುದನು ಕುಡಿವರು) ಎಂಬ ಶೃತಿವಾಕ್ಯವು ಈ ಪ್ರಸಾದ ವಿಧಿಗೆ ಪ್ರಮಾಣವಾಗಿರುವುದು. ಈ ಪ್ರಸಾದದಿಂದಲೇ ಶಿವಜ್ಞಾನವು ಸಿದ್ಧಿಸುವುದೆಂದು ಸೂತ್ರಕಾರನಿಂದ ಮುಂದೆ ಪ್ರತಿಪಾದಿತವಾಗಿದೆ.

## ಷಟ್‌ಸ್ಥಲ ಮಾರ್ಗದಿಂದ ಪ್ರಸಾದಭೋಗ.

ಸೂ. ೨೭. ಆತ್ಮನು ಭಕ್ತಾದಿ ಷಟ್‌ಸ್ಥಲ ರೂಪದಿಂದ ಆಯಾ ಸ್ಥಲೋಕ್ತವಾದ ಆಚಾರಾದಿ ಲಿಂಗಮುಖದಿಂದ ಅರ್ಪಿತವಾಗಿ ಸ್ವತಃ ಸಿದ್ಧವಾದ ಪ್ರಸಾದವನ್ನು ಆದರದಿಂದ ಉಪಭೋಗಿಸುವನು.

ಸೂ ೨೮. ಸರ್ವಪದಾರ್ಥವೂ ಸರ್ವಾಂಗದಲ್ಲಿಯೂ ಪ್ರತಿಷ್ಠಿತವಾದ ಷಡಕ್ಷರಾತ್ಮಕವಾದ ಲಿಂಗದಲ್ಲಿಯೇ ಅರ್ಪಿತವಾದುದೆಂದು ಶೃತಿಗಳು ಪ್ರತಿಪಾದಿಸುತ್ತಿರುವವು.

## ಷಡಕ್ಷರ ಮಂತ್ರಾರ್ಥವು.

ಸೂ. ೨೯–೩೧. "ಓಂ ನಮಃ ಶಿವಾಯ" ಎಂಬ ಷಡಕ್ಷರದಲ್ಲಿ 'ಓಂ' ಎಂಬುದು ಅಖಿಲ ಜಗದ್ವಾಚಕವಾಗಿಯೂ, 'ನಮಃ' ಎಂಬುದು 'ನಮಮೇದಂ' ಅಂದರೆ ಈ ಅಖಿಲವು ನನ್ನದಲ್ಲವು ಎಂದು ಬೋಧಿಸುವುದಾಗಿಯೂ; 'ಶಿವಾಯ' ಎಂಬದು ಇದೆಲ್ಲವೂ ಶಿವನಿಗೋಸ್ಕರವಾಗಿರುವುದೆಂದು ಹೇಳುವುದಾಗಿಯೂ ಇರುವವು. ಅಂದರೆ ಉಪಭೋಗ್ಯವಾದ ಜಗತ್ತೆಲ್ಲವೂ ನನಗಲ್ಲವು, ಶಿವನ ಉಪಭೋಗಕ್ಕಾಗಿರುವುದೆಂದು ತಿಳಿದು, ಸಮಸ್ತವನ್ನು ಶಿವನಿಗೆ ಸಮರ್ಪಣ ಮಾಡುವ ಅರ್ಥ ಬೋಧಕವಾಗಿ ಮಂತ್ರರಾಜನಾದ ಈ ಷಡಕ್ಷರ ಮಂತ್ರವು ಸರ್ವೋತ್ಕೃಷ್ಟವಾಗಿ ವರ್ತಿಸುತ್ತಿರುವುದು. ಈ ಷಡಕ್ಷರ ಮಂತ್ರದಲ್ಲಿರುವ ದ್ವಿಮಾತ್ರಾತ್ಮಕವಾದ 'ಮಃ' ಎಂಬುದು ಲೋಪವಾದ ಮಕಾರವುಳ್ಳದ್ದೆಂದು ತಿಳಿಯತಕ್ಕದ್ದು. ಅಂದರೆ 'ಮಃ' ಎಂಬಲ್ಲಿ 'ಮಮ' (ನನ್ನದು) ಎಂದಿರುವುದೆಂದು ಭಾವಿಸಬೇಕು. (ಹೀಗೆ ಭಾವಿಸದಿದ್ದರೆ ಓಂ=ಎಲ್ಲಾ ಜಗತ್ತು; ನ ಮಮ=ನನ್ನದಲ್ಲವು ಶಿವಾಯ=ಶಿವನಿಗೋಸ್ಕರವಿರುವುದು ಎಂಬರ್ಥವು ಹೊರಡುವುದೆಂದು ತಾತ್ಪರ್ಯವು)

ಈ ರೀತಿಯಾಗಿ ಷಡಕ್ಷರ ಮಂತ್ರಾರ್ಥವಿರುವುದರಿಂದ ಉಪಾಸಕನು ಅರ್ಪಣಸದ್ಭಾವ ಜ್ಞಾನವನ್ನೇ ಅಭ್ಯಾಸಿಸತಕ್ಕದ್ದು.

## ವಿಚಾರ.

ವೀರಶೈವರ ಉಪಾಸನ ಮಂತ್ರವೆಂದರೆ ಷಡಕ್ಷರ ಮಂತ್ರವು. ವೀರಶೈವರು ಷಡಕ್ಷರಮಂತ್ರಮೂರ್ತಿಯಾದ ಶಿವನನ್ನು ಷಡಕ್ಷರಮಂತ್ರದಿಂದ ಜಪಿಸಿ ತಮ್ಮ ಇಷ್ಟಸಿದ್ಧಿಯನ್ನು ಹೊಂದಬೇಕಾದರೆ ಮಂತ್ರಾರ್ಥವನ್ನು ತಿಳಿದಿರಬೇಕು. ಆ ಮಂತ್ರಾರ್ಥವೇ "ಸಕಲ ಜಗತ್ತು ನನ್ನದಲ್ಲವು ಶಿವನಿಗೋಸ್ಕರವಾಗಿರುವುದು" ಎಂದು ಪ್ರತಿಪಾದಿತವಾಗಿದೆ. ಇದರಿಂದ ತಿಳಿದುಬರುವುದೇನಂದರೆ:— ವೀರಶೈವನು ಶಿವನಿಗೋಸ್ಕರವಾಗಿರುವ ಭೋಗ್ಯವಾದ ಜಗತ್ತನ್ನು ಶಿವನಿಗರ್ಪಿಸಿ, ಶಿವನ ಭೋಗೋಪಭೋಗಿಯಾದರೆ ತನ್ನ ಇಷ್ಟಸಿದ್ಧಿಯಾಯಿತೆಂದು ತಿಳಿದು ಆಚರಿಸತಕ್ಕದ್ದು. ಈ ಜ್ಞಾನಾಚಾರವೇ ತನ್ನ ಮತದ ಮೂಲಮಂತ್ರದಲ್ಲಿ ಅಡಕವಾಗಿರುವುದೆಂದು ತಿಳಿದು, ಕ್ರಿಯಾರ್ಪಣ ಜ್ಞಾನಾರ್ಪಣಗಳ ಸದ್ಭಾವದ ವಿವರವನ್ನು ಅಭ್ಯಾಸಮಾಡಿಕೊಳ್ಳತಕ್ಕದ್ದು.

## ಲಿಂಗಾರ್ಪಿತವಾಗುವ ಷಟ್ ಪದಾರ್ಥಗಳು

ಸೂ. ೩೧ ರಿಂದ ೩೬ ಗಂಧ, ರಸ, ರೂಪ, ಸ್ಪರ್ಶ, ಶಬ್ದ, ಪರಿಣಾಮವೆಂದು ಆರು ಪದಾರ್ಥಗಳು ಸರ್ವಕಾಲದಲ್ಲಿರತಕ್ಕವುಗಳಾಗಿವೆ. ಈ ಒಂದೊಂದು ಪದಾರ್ಥಗಳೇ ನಾನಾ ಭೇದಗಳಾಗಿ ವ್ಯವಹಾರಗೊಂಡಿವೆ. ಪೃಥುವ್ಯಾದಿ ಭೂತಗಳಿಗೆ ತನ್ಮಾತ್ರಗಳಾಗಿರುವ ಈ ಗಂಧಾದಿ ವಿಷಯಗಳು ಏಕೈಕವಸ್ತುನಿಷ್ಠಗಳಾಗಿ ಎಲ್ಲವೂ ಏಕರೂಪವನ್ನೇ ಹೊಂದಿರುವವು. ಹೇಗೆಂದರೆ:— ಗಂಧವು ಚಂದನಾದಿವಸ್ತುಮಯುವಾಗಿರುವುದು. ರಸವು ಮಧುರಾದಿ ವಸ್ತುಮಯುವಾಗಿರುವುದು. ರೂಪವು ಶ್ವೇತಪೀತಾದಿವಸ್ತುಮಯುವಾಗಿರುವುದು. ಸ್ಪರ್ಶವು ಮೃದುಕಠಿಣಾದಿ ವಸ್ತುಮಯುವಾಗಿರುವುದು. ಶಬ್ದವು ನಾದಾದಿಮಯುವಾಗಿರುವುದು. ಪರಿಣಾಮವು ಸುಖಾದಿಮಯುವಾಗಿರುವುದು. ಈ ಪ್ರಕಾರವಾಗಿ ಸಕಲಪದಾರ್ಥಗಳಲ್ಲೂ ಆತ್ಮನು ಲಿಂಗಾರ್ಪಣಬುದ್ಧಿಯಿಂದ ಸರ್ವದಾ ಪ್ರಸಾದಸುಖವನ್ನು ಅನುಭವಿಸುತ್ತಿರುವನು. ಅಂದರೆ ಎಲ್ಲಾ ಪದಾರ್ಥಗಳನ್ನೂ ಗಂಧಾದಿಷಡ್ವಿಧರೂಪದಿಂದ ವಿಭಾಗಿಸಿ ಆಚಾರಾದಿ ಲಿಂಗಾರ್ಪಣಂಗೈದು ಆ ಗಂಧಾದಿ ಪದಾರ್ಥಗಳನ್ನು ಪ್ರಸಾದರೂಪದಿಂದುಪಭೋಗಿಸುವನು.

## ಪ್ರಸಾದೋಪ ಭೋಗಕ್ರಮ.

ಸೂ. ೩೭ರಿಂದ ೫೦ ಆತ್ಮನು ಭಕ್ತಾದಿಯಾದ ಷಡಂಗಸ್ಥಲಮಾರ್ಗದಿಂದ ಆಚಾರಾದಿ ಷಡ್ವಿಧಲಿಂಗಾರ್ಪಿತವಾದ ಗಂಧಾದಿ ಷಡ್ವಿಧ ಪ್ರಸಾದವನ್ನು ಭೋಗಿಸುವನು. ಹೇಗೆಂದರೆ:—

ಸದ್ಭಕ್ತಿಯಿಂದ ಕೂಡಿದ ಭಕ್ತನು:— ತನ್ನ ಭೂವ್ಯಂಗದಲ್ಲಿ ನಿಂತು ಕ್ರಿಯಾಶಕ್ತಿಯುಕ್ತವಾದ ಆಚಾರಲಿಂಗಕ್ಕೆ ನಾಸಿಕಮುಖದಲ್ಲಿ ಚಿತ್ತಹಸ್ತದಿಂದ ಚಂದನಾದಿ ನಾನಾ ಪರಿಮಳ ಪದಾರ್ಥಗಳನ್ನು ಸಮರ್ಪಿಸಿ ತದ್ಗಂಧ ಪ್ರಸಾದವನ್ನು ಸದಾ ಅನುಭವಿಸುವನು.

ನಿಷ್ಠಾಭಕ್ತಿಯುಕ್ತನಾದ ಮಾಹೇಶ್ವರನು ತನ್ನ ಜಲಾಂಗದಲ್ಲಿ ನಿಂತು ಜ್ಞಾನಶಕ್ತಿಸಮೇತವಾದ ಗುರುಲಿಂಗಕ್ಕೆ ಜಿಹ್ವಾಮುಖದಲ್ಲಿ ಸುಬುದ್ಧಿಹಸ್ತದಿಂದ ಮಧುರಾದಿ ಷಡ್ರಸ ಪದಾರ್ಥಗಳನ್ನು ಸಮರ್ಪಿಸಿ ತದ್ರಸ ಪ್ರಸಾದವನ್ನು ಸದಾ ಭೋಗಿಸುವನು.

ಅವಧಾನಭಕ್ತಿಯುಕ್ತನಾದ ಪ್ರಸಾದಿಯು ತನ್ನ ಅಗ್ನ್ಯಂಗದಲ್ಲಿ ನಿಂತು, ಇಚ್ಛಾಶಕ್ತಿಯುಕ್ತವಾದ ಶಿವಲಿಂಗಕ್ಕೆ ನೇತ್ರಮುಖದಲ್ಲಿ ನಿರಹಂಕಾರ ಹಸ್ತದಿಂದ ಶ್ವೇತಾದಿವರ್ಣಪದಾರ್ಥಗಳನ್ನು ಸಮರ್ಪಿಸಿ, ತದ್ರೂಪ ಪ್ರಸಾದವನ್ನು ಸದಾ ಸೇವಿಸುವನು.

ಅನುಭವ ಭಕ್ತಿಯುಕ್ತನಾದ ಪ್ರಾಣಲಿಂಗಿಯು ತನ್ನ ವಾಯ್ವಂಗದಲ್ಲಿ ನಿಂತು, ಆದಿಶಕ್ತಿಸಮೇತವಾದ ಜಂಗಮಲಿಂಗಕ್ಕೆ ತ್ವಙ್ಮುಖದಲ್ಲಿ ಸುಮನೋಹಸ್ತದಿಂದ ಮೃದುಕಠಿಣಾದಿ ಪದಾರ್ಥಗಳನ್ನು ಸಮರ್ಪಿಸಿ ತತ್ಸ್ಪರ್ಶಪ್ರಸಾದವನ್ನು ಭೋಗಿಸುವನು.

ಆನಂದಭಕ್ತಿಯುಕ್ತನಾದ ಶರಣನು ತನ್ನ ಆಕಾಶಾಂಗದಲ್ಲಿ ನಿಂತು ಪರಾಶಕ್ತಿಯುಕ್ತವಾದ ಪ್ರಸಾದಲಿಂಗಕ್ಕೆ ಶ್ರೋತ್ರಮುಖದಲ್ಲಿ ಸುಜ್ಞಾನ ಹಸ್ತದಿಂದ ಶಬ್ದದ್ರವ್ಯವನ್ನು ಸಮರ್ಪಿಸಿ, ತನ್ನಾದ ಪ್ರಸಾದವನ್ನು ಸ್ವೀಕರಿಸುವನು.

ಸಮರಸ ಭಕ್ತಿಯುಕ್ತನಾದ ಐಕ್ಯನು ತನ್ನ ಆತ್ಮಾಂಗದಲ್ಲಿ ನಿಂತು, ಚಿಚ್ಛಕ್ತಿಸಮೇತವಾದ ಮಹಾಲಿಂಗಕ್ಕೆ ಹೃದಯಮುಖದಲ್ಲಿ ಸದ್ಭಾವಹಸ್ತದಿಂದ ಪರಿಣಾಮಪದಾರ್ಥವನ್ನು ಸಮರ್ಪಿಸಿ, ತತ್ತೃಪ್ತಿಪ್ರಸಾದವನ್ನು ಸವಿಯುವನು.

## ಅಷ್ಟವಿಧ ಸ್ಥಲಗಳು.

ಸೂ. ೫೧ ಮೇಲೆ ವಿವರಿಸಲ್ಪಟ್ಟ ಅಂಗ, ಲಿಂಗ, ಭಕ್ತಿ, ಶಕ್ತಿ, ಮುಖ, ಹಸ್ತ, ಅರ್ಪಿತಪದಾರ್ಥ, ಪ್ರಸಾದ ಎಂಬ ಅಷ್ಟವಿಧಸ್ಥಲಗಳು ಭಕ್ತಾದಿಯಾದ ಪ್ರತಿಯೊಂದು ಸ್ಥಲದಲ್ಲಿಯೂ ಇರುತ್ತಿರುವವು.

## ಅಂಗಾದಿಗಳು ಸಚ್ಚಿದಾನಂದ ಸ್ವರೂಪವು.

ಸೂ. ೫೨ ಶಿವನ ಸಚ್ಚಿದಾನಂದ ಲಕ್ಷಣದಲ್ಲಿ ಅಂಗಲಿಂಗಗಳು ಸದ್ರೂಪವಾಗಿಯೂ, ಭಕ್ತಿಶಕ್ತಿಗಳು ಚಿದ್ರೂಪವಾಗಿಯೂ, ಅರ್ಪಣಪ್ರಸಾದಗಳು ಆನಂದರೂಪವಾಗಿಯೂ ಇರುವವು.

## ಗಾಯತ್ರಿಯು ಲಿಂಗಾಂಗಸಂಯೋಗಪರವು.

ವೀರಶೈವರಿಗೆ ಉಪದೇಶ್ಯ ಮಂತ್ರವು ವೇದಸಾರವಾದ ಶಿವಪಂಚಾಕ್ಷರವು. ಇದು ಶ್ರೀ ರುದ್ರದಲ್ಲಿರುವುದು. "ವಿದ್ಯಾನು ಶೃತಿರುತ್ಕೃಷ್ಟಾ ರುದ್ರೈಕಾದಶಿನೀ ಶೃತೌ" (ವಿದ್ಯೆಗಳಲ್ಲಿ ವೇದವು ಶ್ರೇಷ್ಠವಾದುದು; ವೇದಗಳಲ್ಲಿ ಶ್ರೀ ರುದ್ರವು ಶ್ರೇಷ್ಠವಾದುದು.) ಎಂದು ಶ್ರೀ ರುದ್ರವು ಶೃತಿಸಾರವಾಗಿರುವುದು. ಈ ಶಿವಮಂತ್ರವು ಲಿಂಗಾಂಗ ಸಂಯೋಗಪರವಾಗಿರುವುದೆಂದು ಪೂರ್ವದಲ್ಲಿ ಸೂತ್ರಕಾರನಿಂದ ಪ್ರತಿಪಾದಿತವಾಗಿದೆ. ಇನ್ನು ಪುಸ್ಕೃತ ದ್ವಿಜರಿಗೆ ಉಪದೇಶ ಮಂತ್ರವಾದ ಗಾಯತ್ರಿಯಾದರೂ ಲಿಂಗಾಂಗ ಸಂಯೋಗಪರವಾದುದೆಂದು ಈಗ ಪ್ರತಿಪಾದಿಸಲ್ಪಡುವುದು:—

ಸೂ. ೫೩. ೫೪. ಗಾಯತ್ರಿಯಲ್ಲಿಯು 'ಸವಿತುಃ' ಎಂಬ ಪದವು ಅಂಗ ಅಂದರೆ ಜೀವವಾಚಕವಾಗಿಯೂ, 'ಭರ್ಗಃ' ಎಂಬ ಪದವು ಲಿಂಗವಾಚಕವಾಗಿಯೂ, ಧೀಮಹಿ' ಎಂಬ ಪದವು ಸಂಬಂಧವಾಚಕವಾಗಿಯೂ ಇರುವುದರಿಂದ ಗಾಯತ್ರಿಯು ಲಿಂಗಾಂಗ ಸಂಬಂಧವನ್ನೇ ಬೋಧಿಸುತ್ತದೆ. ಇದರಂತೆ ಸವಿತುಃ' ಭರ್ಗಃ ಧೀಮಹಿ ಎಂಬ ಪದಗಳು ಕ್ರಮವಾಗಿ ಜೀವ ಶಿವರ ಐಕ್ಯವನ್ನೂ ಬೋಧಿಸುತ್ತಿರುವವು.

## ವಿಚಾರ.

ಸೂರ್ಯ ಪ್ರಕಾಶದಿಂದಲೇ ಜೀವ ವ್ಯವಹಾರವೂ ಆ ವ್ಯವಹಾರಕ್ಕೆ ಸಾಧನವಾದ ಸೃಷ್ಟಿಯೂ ಸಿದ್ಧಿಸುವವು. "ಸೂರ್ಯ ಆತ್ಮಾ ಜಗತಃ

ತಸ್ಥುಷಶ್ಚ" (ಸೂರ್ಯನು ಸ್ಥಾವರ ಜಂಗಮಾತ್ಮಕವಾದ ಸೃಷ್ಟಿಗೆ ಆತ್ಮನ ಹನು) ಎಂಬ ಋಕ್ಕಾದರೂ ಇದೇ ಅರ್ಥವನ್ನು ಹೇಳುವುದರಿಂದ ಸೂರ್ಯ ಶಬ್ದವು ಜೀವವಾಚಕವೆಂದು ಆಗಮಗಳು ವಿವರಿಸುತ್ತವೆ. ಭರ್ಗಶಬ್ದವು ಶಿವವಾಚಕವೆಂದು ಕೋಶಗಳಲ್ಲಿ ಪ್ರಸಿದ್ಧಿಯು. ಧೀಮಹಿ ಎಂಬ ಶಬ್ದವು ಜ್ಞಾನವಾಚಕವಾಗಿ ಜೀವಶಿವರ ಸಂಬಂಧ ಜ್ಞಾನವನ್ನು ತೋರಿಸುತ್ತದೆ ಈ ಕಾರಣದಿಂದ ಗಾಯತ್ರಿಯು ಲಿಂಗಾಂಗ ಸಂಯೋಗಪರವೆಂಬುದು ನಿರ್ವಿವಾದವು.

## ಅರ್ಪಣದಲ್ಲಿ ಜೀವಶಿವರ ತಾದಾತ್ಮ್ಯವು.

ಸೂ. ೫೫. ೫೬. ಅಂಗಲಿಂಗ ಸಂಬಂಧವೆಂದರೆ ಜೀವಶಿವರ ತಾದಾತ್ಮ್ಯವು. ಈ ತಾದಾತ್ಮ್ಯವು ಪದಾರ್ಥ, ಪ್ರಸಾದ, ಅರ್ಪಣ ಈ ಮೂರರಲ್ಲಿಯೂ ತೋರುವುದು. ಹೇಗೆಂದರೆ—ಪದಾರ್ಥರೂಪನೇ ಜೀವನು ಪ್ರಸಾದರೂಪನೇ ಶಿವನು. ಅರ್ಪಣವೇ ಜೀವಶಿವರ ತಾದಾತ್ಮ್ಯವು. ಇದೇ ಆಗಮ ಸಿದ್ಧಾಂತವು.

## ವಿಚಾರ.

ಆತ್ಮನು ಪದಾರ್ಥರೂಪದಿಂದಿರುವನು. ಇವನು ಪರಮಾತ್ಮನಿಗೆ ಅರ್ಪಿಸಲ್ಪಟ್ಟವನಾಗಲಾಗಿ ಪ್ರಸಾದರೂಪನು. ಅಂದರೆ ಪರಮಾತ್ಮನೇ ಆಗಿಬಿಡುವನು. ಆತ್ಮ ಪರಮಾತ್ಮರ ಅಭೇದ ಜ್ಞಾನವೇ ಅರ್ಪಣವು. ಈ ಅರ್ಪಣಜ್ಞಾನದ ತತ್ವವನ್ನರಿತು ವೀರಶೈವನು ತನ್ನ ಭೋಗ್ಯಪದಾರ್ಥಗಳನ್ನೆಲ್ಲ ಲಿಂಗಕ್ಕರ್ಪಿಸಿ, ಲಿಂಗಭೋಗೋಪಭೋಗಿಯಾಗಿರುವನು. ಇಷ್ಟೇ ಅಲ್ಲ; ಕಡೆಗೆ ತಾನೆಂಬ ಪದಾರ್ಥವನ್ನೇ ಶಿವನಿಗರ್ಪಿಸಿ, ತಾನೇ ಪ್ರಸಾದರೂಪನಾಗಿ (ಶಿವನಾಗಿ) ಬೆಳಗುವನು. ಇದೇ ಕ್ರಿಯಾರ್ಪಣ ಜ್ಞಾನಾರ್ಪಣಗಳ ಮುಖ್ಯ ತತ್ವವು.

## ಲಿಂಗಭೇದಗಳು.

ಸೂ. ೫೭. ಏಕಪಾದ ಪರಲಿಂಗವೇ ೧, ೩, ೬, ೯ ಪ್ರಕಾರವಾಗಿ ಆತ್ಮನ ಸರ್ವಾಂಗದಲ್ಲಿಯೂ ಬೆಳಗುತ್ತಿರುವುದು.

ಸೂ. ೫೮. ಈ ಪ್ರಕಾರವಾದ ಲಿಂಗಭೇದವನ್ನೂ ಲಿಂಗಮುಖವನ್ನೂ ಅರ್ಪಣವಿಧಾನವನ್ನೂ ತಿಳಿಯದೆ, ಆತ್ಮನು ಇಂದ್ರಿಯ ಕರ್ಮಗಳಲ್ಲಿ ನಿರ್ಲೇಪತ್ವವನ್ನು ಹೇಗೆ ಹೊಂದುವನು. ಲಿಂಗಾದಿಜ್ಞಾನದಿಂದ ಕರ್ಮಲೇಪವಿಲ್ಲವು.

ಸೂ. ೫೯. ೬೦. ಲಿಂಗಾದಿತತ್ವವನ್ನು ತಿಳಿಯದವನನ್ನು ಯಾವಾಗಲೂ ಕರ್ಮಲೇಪವು ಬಿಡದಿರುವುದು. ಆದರೆ, ತಜ್ಞನನ್ನು ಮಾತ್ರ ಕರ್ಮವು ಸ್ಪರ್ಶಿಸಲಾರದು. ಕೈಗೆ ಹತ್ತುವ ಜಿಡ್ಡು ನಾಲಿಗೆಗೆ ಹತ್ತದಂತೆಯೂ, ಮುಟ್ಟಿದರೆ ತಗಲಿಕೊಳ್ಳುವ ಕಪ್ಪು ಕಣ್ಣಿನ ಒಳಗುಡ್ಡೆಗೆ ಅಂಟಿಕೊಳ್ಳದಂತೆಯೂ ಈ ಷಟ್‌ಸ್ಥಲ ತತ್ವಜ್ಞನಿಗೆ ಶುಭಾ ಶುಭ ಕರ್ಮಫಲವು ಹೊದ್ದಲಾರದು.

## ದಾಸೋಹಂ ಭಾವವು.

ಸೂ. ೬೧. ವೀರಶೈವನು ಸೋಹಮಸ್ಮಿ ಅಂದರೆ ಆ ಪರಶಿವನೇ ನಾನಿರುವೆನೆಂಬ ಜ್ಞಾನವುಳ್ಳವನಾದರೂ ಶರೀರಾದಿ ಸರ್ವಪದಾರ್ಥಗಳನೂ ಶಿವನಿಗೆ ಸಮರ್ಪಿಸುವ ಅರ್ಪಣ ಕ್ರಿಯೆಯಲ್ಲಿ ಮಾತ್ರ ದಾಸೋಹಂ ಅಂದರೆ ನಾನು ಶಿವನ ದಾಸನು ಎಂದು ಸದಾಚರಣೆಯನ್ನು ನೆರವೇರಿಸತಕ್ಕದ್ದು. ಹೀಗೆ ಆಚರಿಸುವದೇ ದಾಸೋಹಂ ಭಾವವು.

ಸೂ. ೬೨. ೬೩. ಇಂದ್ರಿಯ ಮುಖದಿಂದ ಪ್ರಾಪ್ತವಾಗುವ ಯಾವ ಕಿಂಚಿತ್ ಸುಖವುಂಟೋ ಆದೆಲ್ಲವನ್ನೂ ಇಂದ್ರಿಯ ಮುಖದಿಂದ ತನ್ನ ಸ್ವಾಮಿಯಾದ ಶಿವನಿಗೆ ಸಮರ್ಪಿಸಿ, ತತ್ಪ್ರಸಾದವನ್ನು ಭುಂಜಿಸತಕ್ಕದ್ದೇ ದಾಸೋಹಂ ಭಾವವು.

## ದಾಸೋಹಂಭಾವದಿಂದ ಶಿವನೊಡನೆ ಭೋಗವು.

ಸೂ. ೬೪ ರಿಂದ ೬೬. ಆತ್ಮನು ಸರ್ವವೂ ಶಿವಾರ್ಪಿತವಾಗುವುದರಿಂದ ಅಂದರೆ ತಾನೂ ಸಹಿತ ಶಿವನಿಗರ್ಪಿಸಲ್ಪಡುವುದರಿಂದ ಉಳಿದುದಾವುದನ್ನು ತಿಳಿಯುತ್ತಾನೆ? ಉಳಿಯುವುದಾದರೂ ಏನಿದೆ? (ಏನಿಲ್ಲವು)

ಈ ರೀತಿಯಾಗಿ ನಿಜದಿಂದ ಸರ್ವವೂ ಲಿಂಗಾರ್ಪಿತವಾದುದೆಂದು ಯಾವಾತನು ತಿಳಿಯುತ್ತಾನೆಯೋ; ಅಂತಹ ಜ್ಞಾನಿಯು ಸಕಲ ಭೋಗ

ಗಳನ್ನೂ ಪರಶಿವನೊಡನೆ ಭೋಗಿಸುವನು. ಆ ಜ್ಞಾನಿಯು ಲಿಂಗದೇಹಿಯೂ, ಶಿವಾತ್ಮರೂಪನೂ, ಲಿಂಗಾಚಾರನೂ ಆಗುವನಲ್ಲದೆ ಲೌಕಿಕನಲ್ಲವು. ಆತನು ಲಿಂಗಮಯವಾಗಿ ಕಾಣುವ ಸರ್ವರೂಪವನ್ನೂ ಲಿಂಗದೊಡನೆ ಭೋಗಿಸುವನು. ಆ ಮಹಿಮನ ಅಂಗವೆಲ್ಲವೂ ಲಿಂಗವು; ಅನ್ನಪಾನಾದಿಕವೆಲ್ಲವೂ ಲಿಂಗಾರ್ಪಿತವು. ಆತನಿಗೆ ಸರ್ವದಾ ಲಿಂಗಪ್ರಸಾದವು ತೃಪ್ತಿಮಯವಾಗಿ ಬೆಳಗುವುದು.

## ಅರ್ಪಣ ಸದ್ಭಾವ ಜ್ಞಾನವು ಗುರೂಪದೇಶ ಸಾಧ್ಯವು

ಸೂ. ೬೭ ಮೇಲೆ ವಿವರಿಸಿದ ವೇದಾಂತವಾಕ್ಯಜನ್ಯವಾದ ಈ ಅರ್ಪಣ ಸದ್ಭಾವಜ್ಞಾನವು ಗುರೂಪದೇಶದಿಂದ ಸಾಧ್ಯವು. ಉಪದೇಶವಿಲ್ಲದೆ ಶಾಸ್ತ್ರಕೋಟಿಯಿಂದಲೂ ಸಾಧ್ಯವಲ್ಲವು.

## ಉಪಸಂಹಾರ

ಸೂ. ೬೮. ೬೯. ಕರ್ಮದ ನಿರ್ಲೇಪತ್ವ ಸಿದ್ಧಿಗಾಗಿ ಶ್ರೀ ಲಿಂಗಾರ್ಪಣಸದ್ಭಾವ, ಅರ್ಪಿತ, ಪ್ರಸಾದ, ಭೋಗ ಇವುಗಳ ಪರಮಾರ್ಥ ಸ್ವರೂಪವನ್ನು ನಾನು ಹೇಳಿರುವೆನು. ಶಿವಸಿದ್ಧಾಂತ ತಂತ್ರನಾಮಕವಾದ ಈ ಶಿವಾದ್ವೈತ ವಿದ್ಯೆಯನ್ನು ತಿಳಿದ ಪ್ರಭುವು ಅವಿದ್ಯಾಗ್ರಂಥಿಯನ್ನು ಭೇದಿಸುವನು.

## ಸಪ್ತಮಾಧಿಕರಣಂ ಸಂಪೂರ್ಣಂ



## ಅಷ್ಟಮಾಧಿಕರಣಂ

ಪೂರ್ವಾಧಿಕರಣಗಳಲ್ಲಿ ಪ್ರತಿಪಾದಿತವಾದ ಷಟ್‌ಸ್ಥಲ ಕ್ರಿಯೆಯ ಅಂತಿಮ ಧ್ಯೇಯವನ್ನು ವಿವರಿಸಿ ಸೂತ್ರಂಗಳನ್ನು ಸಮಾಪ್ತಿಗೊಳಿಸುವದ ಕ್ಕಾಗಿ ಅಷ್ಟಮಾಧಿಕರಣವನ್ನು ಪ್ರಾರಂಭಿಸುವನು:—

### ಕ್ರಿಯಾ ವಿಶ್ರಾಂತಿ

ಸೂ. ೧. ಈಶ್ವರನು ಪಾರ್ವತಿಗೆ ರಹಸ್ಯವಾಗಿ ಆಗಮಗಳಲ್ಲಿ ಬೋಧಿಸಿದ ಕ್ರಿಯಾ ವಿಶ್ರಾಂತಿಯನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆನು.

### ಕ್ರಿಯಾವಿಶ್ರಾಂತಿ ಸ್ವರೂಪ.

ಸೂ. ೨ ೩ ಷಟ್‌ಸ್ಥಲಾಚಾರ ಸಂಪನ್ನನಾದ ವೀರಶೈವನು ಮಾಡುವ ಕ್ರಿಯೆಗಳೆಲ್ಲವೂ ಲಿಂಗಾರ್ಪಿತವಾಗಿಯೇ ಇರುವುದರಿಂದ ಅವು (ಶುಭಾಶುಭ ಫಲದ ಸೋಂಕಿಲ್ಲದೆ) ತಾವಾಗಿಯೇ ಆತನಲ್ಲಿ ಸುಖಲಕ್ಷಣದಿಂದ ಲಕ್ಷಿತವಾದ ವಿಶ್ರಾಂತಿಯನ್ನು ಹೊಂದುವವು. ಇಂತಹ ವಿಶ್ರಾಂತಿಯೇ ತತ್ವಜ್ಞರಿಂದ ಕ್ರಿಯಾ ವಿಶ್ರಾಂತಿಯೆಂದು ಹೇಳಲ್ಪಡುವುದು.

### ಕ್ರಿಯಾವಿಶ್ರಾಂತಿಯೇ ಸಮ್ಯಜ್ಞಾನವು

ಸೂ. ೩. ಈ ಶಿವಾನುಭವ ಶಾಸ್ತ್ರದಲ್ಲಿ ಈ ಕ್ರಿಯಾವಿಶ್ರಾಂತಿಯೇ ಸಮ್ಯಜ್ಞಾನವೆಂದು ಉಕ್ತವಾಗಿದೆ. ಈ ವಿಷಯದಲ್ಲಿ ಯಾವ ಸಂಶಯವಿಲ್ಲವು

### ಸಮ್ಯಗ್ಜ್ಞಾನ ಸ್ವರೂಪವು

ಸೂ. ೪. ಸಮ್ಯಗ್ಜ್ಞಾನವೆಂದರೆ ನಾನು (ಆತ್ಮನು) ಸಾಕ್ಷಾತ್ತಾದ ಶಿವನೇ ಎಂದು ತಿಳಿಯುವಿಕೆಯು. ಅಂತಹ ತಿಳುವಳಿಕೆಯಿಂದಲೇ ಆತ್ಮನು ಆಪ್ತಕಾಮನಾಗಿ (ಇಷ್ಟಾರ್ಥವನ್ನು ಪಡೆದು) ಸುಖಿಯಾಗುವನು.

### ಆಪ್ತಕಾಮನಾದ ಶರಣನ ಲಕ್ಷಣವು

ಸೂ. ೫ ರಿಂದ ೧೨. ಆತ್ಮಕಾಮನಾದ ನಿತ್ಯಸುಖಿಗೆ ಲೌಕಿಕಗಳಾದ ಬಾಹ್ಯಪ್ರವೃತ್ತಿಗಳೆಲ್ಲವೂ ಆತ್ಮನಲ್ಲಿ ನಾಶಗೊಂಡಿರುವವು. ಆ ಬಾಹ್ಯ

ವೃತ್ತಿಗಳೆಲ್ಲವೂ ನಷ್ಟವಾಗಲಾಗಿ ಆಗ ಆಪ್ತಕಾಮನಲ್ಲುಂಟಾಗುವ ಲೀಲಾ ಮಾತ್ರವಾದ ಸ್ವೇಚ್ಛಾಚಾರವೆಲ್ಲವೂ ಶಿವಾರ್ಚನಾರೂಪವಾಗಿರುವುದು. ಆತನು ಭೋಗಿಸಿದುದೆಲ್ಲವೂ ಶಿವಾರ್ಪಿತವಾದುದಾಗಿಯೇ ಇರುವುದು. ಆತನ ಕಣ್ಣಿಗೆ ಸಕಲವೂ ಶಿವರೂಪವಾಗಿಯೇ ತೋರುತ್ತಿರುವುದು. (ಇದು ಸಮ್ಯಗ್ಜ್ಞಾನದ ಕುರುಹು)

ಈ ಆಪ್ತಕಾಮನಾದ ಶರಣನಿಗೆ ನಾನೇ ಶಿವನೆಂಬ ಸಮ್ಯಗ್ಜ್ಞಾನೋದಯದಿಂದ ಶಿವಾರ್ಚನವೆಂಬುದು ಈತನ ಸ್ವೇಚ್ಛಾಚಾರನಿಬಂಧನವಲ್ಲದೆ ಅನ್ಯನಿಬಂಧನರೂಪವಲ್ಲವು. ಈತನು ತಾನೇ ಸಚ್ಚಿದಾನಂದರೂಪ ಶಿವನಾಗಿ ಬೆಳಗುತ್ತಿರುವನು. ಆ ಬೆಳಗಿನಲ್ಲಿ ತನಗನ್ಯವಾದ ವಸ್ತುವೇ ತೋರದು.

ಈ ಶರಣನಿಗೆ ಶರೀರದಿಂದುಂಟಾಗುವ ಬಂಧಮೋಚನಂಗಳೊಂದೂ ಇಲ್ಲವು. ಏಕೆಂದರೆ ಈ ಶರಣನು ಯಾವುದನ್ನೂ ಕಳೆದುಕೊಳ್ಳಬೇಕಾದುದೂ ಇಲ್ಲ; ಹೊಸದಾಗಿ ಸಂಪಾದಿಸಬೇಕಾದುದೂ ಇಲ್ಲ. ಬಂಧವಿದ್ದರೆ ಮುಕ್ತಿಯೂ, ಮುಕ್ತಿಯಿದ್ದರೆ ಬಂಧವೂ ಇರುವುದಿಲ್ಲ. ಒಂದಿಲ್ಲದಿದ್ದರೆ ಮತ್ತೊಂದು ಸಿದ್ಧವಾಗಿಯೇ ಇರುವುದು. ಈ ಶರಣನಿಗಾದರೋ ಬಂಧವೂ ಇಲ್ಲ; ಮೋಚನವೂ ಇಲ್ಲ. ಈತನಲ್ಲಿ ಪರಸ್ಪರಾನುಬಂಧಗಳಾದ ಬಂಧಮೋಚನಗಳ ಅಭಾವವಿರುವುದರಿಂದ ನಿರಂಕುಶವಾದ ಭಕ್ತಿಯೊಂದೇ ತೋರುತ್ತಿರುವುದು.

## ಶರಣನ ಭಕ್ತಿಯು.

ಸೂ. ೧೩. ಶರಣನ ಮಾಯಾರಹಿತವಾದ ಈ ಶಿವಮಾರ್ಗದಲ್ಲಿ (ಷಟ್‌ಸ್ಥಲಾಚರಣೆಯಲ್ಲಿ) ಯೋಗವೂ, ತಪಸ್ಸೂ, ಅರ್ಚನಾಕ್ರಮವೂ, ಮತ್ತಾವುದೊಂದೂ ತೋರುವುದಿಲ್ಲ. ಭಕ್ತಿಯೊಂದೇ ಸದಾ ಪ್ರಕಾಶಿಸುತ್ತಿರುವುದು.

## ಭಕ್ತಿಯ ಪ್ರಶಸ್ತಿಯು.

ಸೂ. ೧೪. ಭಕ್ತಿಯು ಸತ್ವರಜಸ್ತಮೋಗುಣಂಗಳ ಸಂಬಂಧಿಯಾಗಿದ್ದರೂ, ಅದು ಶಿವಾರ್ಪಿತವಾಗಲಾಗಿ ಶುದ್ಧಿಯನ್ನು ಹೊಂದಿ (ತ್ರಿಗುಣರಹಿತವಾಗಿ) ಸ್ವಾತಂತ್ರ್ಯದಿಂದ ವರ್ತಿಸುತ್ತದೆ. ಅಂದರೆ— ಭಕ್ತಿ

ಯು ಸತ್ವಾದಿ ತ್ರಿಗುಣದಿಂದ ಉತ್ಪನ್ನವಾಗಿದ್ದರೂ, ಆ ತ್ರಿಗುಣವನ್ನತಿಕ್ರಮಿಸಿ, ತನ್ನ ವಿಶುದ್ಧತೆಯಿಂದ ಆ ಮೂರುಗುಣಗಳನ್ನು ಏಕಾಕಾರವನ್ನಾಗಿ ಮಾಡುತ್ತದೆ. ಭಕ್ತಿಯಲ್ಲಿ ಸಾತ್ವಿಕಾದಿ ಗುಣತ್ರಯವು ನಿಲ್ಲಲಾರದು. ಭಕ್ತಿಯು ಸ್ವಭಾವದಿಂದ ಗುಣರಹಿತವಾಗಿರುವುದು.

ಸೂ. ೧೫. ೧೬. ಸಿದ್ಧರಸವು ಬೆಳ್ಳಿ, ತಾಮ್ರ, ಕಬ್ಬಿಣಗಳನ್ನು ಸೋಂಕಿ, ತನ್ನ ಶಕ್ತಿಯಿಂದ ಷೋಡಶವರ್ಣಪೂರ್ಣವಾದ ಸುವರ್ಣವನ್ನಾಗಿ ಮಾಡುವಂತೆ ಈ ಶುದ್ಧವಾದ ಶಿವಭಕ್ತಿಯು ಬೆಳ್ಳಿಮೊದಲಾದ ಮೂರು ವಸ್ತುಗಳ ಸದೃಶಂಗಳಾದ ಸತ್ವರಜಸ್ತಮೋಗುಣಂಗಳನ್ನು ತಾನು ಶುದ್ಧಿಗೊಳಿಸಿ ಎಲ್ಲವನ್ನೂ ಶಿವಮಯವಾದ ಏಕಾಕಾರವನ್ನಾಗಿ ಮಾಡುವುದು.

ಸೂ. ೧೭. ಸತ್ವರಜಸ್ತಮೋಗುಣಂಗಳು ಕ್ರಮವಾಗಿ ಹಿಮ, ಕುಂಕುಮ, ಕಸ್ತೂರಿಯು ಶ್ವೇತ, ರಕ್ತ, ಕೃಷ್ಣ ವರ್ಣಗಳುಳ್ಳವಾಗಿರುವವು. ಈ ಗುಣಗಳಲ್ಲಿ ಶಿವಾತ್ಮಕವಾದ ಭಕ್ತಿಯು ಸಮಾವೇಶವಾಗಲಾಗಿ ಆ ಗುಣಗಳ ಬಣ್ಣವಡಗಿ ಸದ್ವಾಸನದಿಂದ ಕೂಡಿದ ಭಕ್ತಿಯು ಸ್ವಾತ್ಮರೂಪದಿಂದ ಗುಣರಹಿತವಾದ ಪರಮಪದದಲ್ಲಿ ಸದಾ ಜಯಶಾಲಿಯಾಗಿ ಬೆಳಗುತ್ತಿರುವುದು. ಅಂದ ಮೇಲೆ—ಭಕ್ತಿಯೋಗದ ಸ್ಥಿತಿಯನ್ನು ಏನು ಹೇಳತಕ್ಕದ್ದು !!!

## ಕಾಂಡತ್ರಯ.

ಸೂ. ೧೮. ೨೧. ನಾನು ಮಾಡುವ ಧರ್ಮಾಧರ್ಮಗಳ ಫಲವನ್ನೆಲ್ಲಾ ಅನುಭವಿಸಲಿಕ್ಕೆ ನಾನೇ ಕರ್ತನೆಂಬ ಅಭಿಮಾನದಿಂದ ಪೂರ್ಣವಾದದ್ದು ಕರ್ಮಕಾಂಡವೆನಿಸುವುದು. ಈ ಧರ್ಮಾಧರ್ಮ ಕರ್ಮಗಳಿಗೆಲ್ಲಾ ನಾನು ಕರ್ತನಲ್ಲ; ಇದಕ್ಕೆಲ್ಲಾ ನಾನುಸಾಕ್ಷಿಯಾಗಿರುವೆನು ಎಂಬ ಅಭಿಮಾನದಿಂದ ಕೂಡಿಕೊಂಡಿರುವುದು ಜ್ಞಾನಕಾಂಡವೆನಿಸುವುದು. ನಾನು ಧರ್ಮ ಕರ್ಮಗಳಿಗೆ ಕರ್ತನೂ ಅಲ್ಲ; ಸಾಕ್ಷಿಯೂ ಅಲ್ಲ; ಎಲ್ಲದಕ್ಕೂ ಶಿವನೇ ಕರ್ತನೂ ಸಾಕ್ಷಿಯೂ ಇರುವನೆಂದು ಆ ಕರ್ತೃತ್ವ ಸಾಕ್ಷಿತ್ವಾಭಿಮಾನವನ್ನು ಬಿಟ್ಟಿರುವುದೇ ಭಕ್ತಿಕಾಂಡವು. ಇವುಗಳಲ್ಲಿ ಕರ್ಮಸ್ಥಾನವು ಮುತ್ತಿನ ಚಿಪ್ಪಾಗಿಯೂ, ಜ್ಞಾನಸ್ಥಾನವು ತಾವರೆ ಯೆಲೆಯಾಗಿಯೂ, ಭಕ್ತಿಸ್ಥಾನವು ಕಾದ ಕಬ್ಬಿಣದ ಪಿಂಡವಾಗಿಯೂ ಇರುವವು. ಇವುಗಳಲ್ಲಿ ಸಂಸಾರವೆಂಬ ನೀರಿನ ಹನಿಯು

ಬಿದ್ದರೆ; ಮುತ್ತಿನ ಚಿಪ್ಪಿನಲ್ಲಿ ಸಾಫಲ್ಯವು, (ಮುತ್ತಾಗುವಿಕೆಯು) ತಾವರೆಯೆಲೆಯಲ್ಲಿ ವೈಫಲ್ಯವು, (ಮುತ್ತಿನಂತೆ ತೋರುವಿಕೆಯು) ಕಾದ ಕಬ್ಬಿನದ ಪಿಂಡದಲ್ಲಿ ನಾಶವೂ (ನೀರೆಂಬ ಹೆಸರೂ ಸಹಿತ ಮಾಯವಾಗುವಿಕೆ) ಸಂಭವಿಸುವದು ಪ್ರಸಿದ್ಧಿಯು. ಅಂದರೆ– ಕರ್ಮಜ್ಞಾನ ಭಕ್ತಿಗಳಿಂದ ಕ್ರಮವಾಗಿ ಸಂಸಾರ ಬಂಧದ ಸಫಲತ್ವ, ನಿಷ್ಫಲತ್ವ, ನಾಶಂಗಳುಂಟಾಗುವವೆಂದು ಅರಿಯತಕ್ಕದ್ದು. ಆದುದರಿಂದ ಈ ಕಾಂಡತ್ರಯದಲ್ಲಿ ಶಿವಾತ್ಮಕವಾದ ಭಕ್ತಿಕಾಂಡವೇ ಶ್ರೇಷ್ಠವಾಗಿರುವದು.

## ಲೇಖಾತ್ರಯವು

ಸೂ. ೨೨. ೨೩. ಕರ್ಮಜ್ಞಾನ ಭಕ್ತಿಗಳು ಕ್ರಮವಾಗಿ ಶಿಲಾಲೇಖೆ, ಸ್ಥಲಲೇಖೆ, ಜಲಲೇಖೆಗಳಾಗಿರುವವು. ಶಿಲಾಲೇಖೆಯು ಅಚ್ಚಳಿಯದಂತಿರುವುದು. ಸ್ಥಲಲೇಖೆಯು ಬರೆದಳಿಸಲಿಕ್ಕೆ ಬರತಕ್ಕದ್ದಾಗಿದೆ. ಜಲಲೇಖೆಯಾದರೋ, ಹೆಸರಿಗೆ ಮಾತ್ರ ಜಲಲೇಖೆಯೆಂದು ಹೇಳಬಹುದಾಗಲಿ; ಜಲದಲ್ಲಿ ಲೇಖೆಯನ್ನು ಬರೆಯಲಿಕ್ಕಾಗಲಿ ಅಳಿಸಲಿಕ್ಕಾಗಲಿ ಬರುವಂತಿಲ್ಲವು. ಅಂದರೆ ಕರ್ಮಜ್ಞಾನ ಭಕ್ತಿಗಳಿಂದ ಸಂಸಾರ ಬಂಧವು ಕ್ರಮವಾಗಿ ಮೇಗಣ ಲೇಖಾತ್ರಯದ ಸ್ಥಿತಿಯಲ್ಲಿರುವುದೆಂದು ಅರಿಯತಕ್ಕದ್ದು.

## ಕರ್ಮಚತುಷ್ಟಯ

ಸೂ. ೨೪. ೨೬. ಕರ್ಮವು ಅಶುಭಕರ್ಮ, ಶುಭಕರ್ಮ, ಜ್ಞಾನಕರ್ಮ, ಪ್ರಸಾದಕರ್ಮವೆಂದು ನಾಲ್ಕು ತೆರನಾಗಿರುವುದು. ಅಶುಭಕರ್ಮದಿಂದ ನರಕವೂ, ಶುಭಕರ್ಮದಿಂದ ಸ್ವರ್ಗವೂ ಲಭಿಸುವವು. ಶುಭಾಶುಭ ಕರ್ಮಗಳ ಹೊರತಾಗಿ ಜ್ಞಾನಿಯಾದರೆ, ಆ ಜ್ಞಾನರೂಪ ಕರ್ಮದಿಂದ ಮೋಕ್ಷವು ಸಿದ್ಧಿಸುವದು. ಈ ಪಾಪ ಪುಣ್ಯ ಜ್ಞಾನಗಳು ಮೂರನ್ನು ಬಿಟ್ಟು ಶಿವಪ್ರಸಾದವನ್ನು ಸಂಪಾದಿಸಿದರೆ ಆ ಪ್ರಸಾದ ಕರ್ಮದಿಂದ ಭಕ್ತಿಯು ಲಭಿಸುವದು. ಅಂದರೆ ವೀರಶೈವನ ಕರ್ಮವು ಪ್ರಸಾದಕರ್ಮವಾಗಿರತಕ್ಕದ್ದೆಂದು ಭಾವವು.

## ಪ್ರಸಾದವೂ ಭಕ್ತಿಯೂ

ಸೂ. ೨೭ ಶಿವಪ್ರಸಾದದಿಂದ ಶಿವಭಕ್ತಿಯೂ, ಶಿವಭಕ್ತಿಯಿಂದ ಶಿವಪ್ರಸಾದವೂ ಲಭಿಸುವವು. ಇವೆರಡಕ್ಕೂ ಬೀಜಾಂಕುರಗಳಂತೆ ಪರ

ಸ್ಪರ ಜನ್ಯಜನಕಭಾವವಿರುವದು. (ಶಿವಾನುಗ್ರಹದಿಂದಲ್ಲದೆ ಶಿವಭಕ್ತಿಯು ಲಭಿಸದು; ಆ ಶಿವಭಕ್ತಿಯಿಂದಲೇ ಶಿವಾನುಗ್ರಹವು ಸಾಧ್ಯವು.)

## ಜ್ಞಾನಭಕ್ತಿಗಳು.

ಸೂ. ೨೮ ಜ್ಞಾನಭಕ್ತಿಗಳಲ್ಲಿ ಜ್ಞಾನವು ಮೊದಲು ಶಿವಜೀವರ ಭೇದಾಭೇದವನ್ನು ಹೇಳಿಕೊಡುವುದು. ಅನಂತರದಲ್ಲಿ ಭಕ್ತಿಯು ಶಿವ ಜೀವರ ಭೇದಾಭೇದವನ್ನು ಕಾರ್ಯತಃ ತೋರ್ಪಡಿಸುವುದು. ಆದುದ ರಿಂದ ಜ್ಞಾನಕ್ಕಿಂತಲೂ ಭಕ್ತಿಯೇ ಪರವಾದದ್ದು.

## ಭಕ್ತಿಯ ಕಾರ್ಯ.

ಸೂ. ೨೯ ೩೧ ಭಕ್ತಿಯು ಉಪಾಸನಾಮಾರ್ಗದಲ್ಲಿ ಮೊದಲು ಆತ್ಮನನ್ನು ಶಿವನಿಂದ ಪೃಥುಕ್ಕರಿಸಿ ಕಡೆಗೆ ಶಿವನಲ್ಲಿ ಕೂಡಿಸುವುದು. (ಶಿವಸಾಮರಸ್ಯರೂಪವಾದ ಅವ್ಯತತ್ವವನ್ನುಂಟುಮಾಡುವುದು) ಅಂದರೆ ಶಿವನಲ್ಲಿ ಆತ್ಮನು ಹಾಲಿನಲ್ಲಿ ತುಪ್ಪದಂತೆಯೂ, ಕಟ್ಟಿಗೆಯಲ್ಲಿ ಬೆಂಕಿ ಯಂತೆಯೂ ಪ್ರವಾಹದಲ್ಲಿ ನೀರಿನಂತೆಯೂ ಅಡಕವಾದ ಅಭೇದರೂ ಪದಿಂದಿದ್ದರೂ, ಭಕ್ತಿಯು ಹಾಲಿನಿಂದ ತುಪ್ಪವನ್ನೂ, ಕಟ್ಟಿಗೆಯಿಂದ ಬೆಂಕಿಯನ್ನೂ, ಪ್ರವಾಹದಿಂದ ನೀರನ್ನೂ ಬೇರ್ಪಡಿಸುವಂತೆ ಶಿವನಿಂದ ಆತ್ಮನನ್ನು ಬೇರ್ಪಡಿಸಿ, ಶಿವನನ್ನು ಉಪಾಸ್ಯನನ್ನಾಗಿಯೂ, ಜೀವನನ್ನು ಉಪಾಸಕನನ್ನಾಗಿಯೂ ಮಾಡಿ, ಕೊನೆಗೆ ಶಿವಜೀವರ ಐಕ್ಯವನ್ನುಂಟು ಮಾಡುವುದು. (ಇದು ವೀರಶೈವರ ಭಕ್ತಿಯ ಕಾರ್ಯವು. ಈ ಭಕ್ತಿ ಕಾರ್ಯವೇ ವೀರಶೈವರ ದ್ವೈತಾದ್ವೈತ ಸಿದ್ಧಾಂತದ ತಳಗಟ್ಟು)

## ಅದ್ವೈತ ಭಕ್ತಿಯು.

ಶಕ್ತಿವಿಶಿಷ್ಟವಾದ ಶಿವನು ಮೊದಲು ಲಿಂಗಾಂಗರೂಪದಿಂದ ದ್ವಿವಿ ಧನಾಗಿ ಕಡೆಗೆ ಏಕರೂಪನಾಗುವನು. ಈ ಭೇದಾ ಭೇದ ಕಾರ್ಯವು ಶಿವ ಗತವಾದ ಶಕ್ತಿಯದು (ಭಕ್ತಿಯದು) ಆಗಿರುವುದು. ಅಂದರೆ-ಶಿವಜೀ ವರನ್ನು ಮೊದಲು ಬೇರ್ಪಡಿಸಿ, ಕೊನೆಗೆ ಸಮರಸಗೊಳಿಸುವುದೇ ಶಿವಶಕ್ತಿ ರೂಪವಾದ ಭಕ್ತಿಯ ಮುಖ್ಯಕಾರ್ಯವು. ಇಂತಹ ಭಕ್ತಿಯೇ ವೀರಶೈವ ಮತದಲ್ಲಿ ಅದ್ವೈತ ಭಕ್ತಿಯೆಂದು ಕರೆಯಿಸಿಕೊಳ್ಳುವುದೆಂಬುದನ್ನು ಸೂತ್ರ ಕಾರನು ದೃಷ್ಟಾಂತಪೂರ್ವಕವಾಗಿ ಪ್ರತಿಪಾದಿಸುವನು:—

ಸೂ. ೩೨. ೩೩. ಒಬ್ಬ ಪುರುಷನು ಅಖಂಡವಾದದ್ದೊಂದು ವಸ್ತುವನ್ನು ಮೊದಲು ತನ್ನ ನೇತ್ರವನ್ನು ಸಂಕೋಚಗೊಳಿಸಿ ನೋಡಿದರೆ, ಖಂಡ ಖಂಡವಾಗಿ ಕಾಣುವುದು. ಪುನಃ ಅದೇ ಪುರುಷನೇ ತನ್ನ ನೇತ್ರವನ್ನು ಸಮಗೊಳಿಸಿ ನೋಡಲಾಗಿ, ಆ ವಸ್ತುವಿನ ನಿಜವಾದ ಅಖಂಡರೂಪವೇ ದೃಗ್ಗೋಚರವಾಗುವುದು. ಅಂತೆಯೇ ಈ ಅದ್ವೈತ ಭಕ್ತಿಯಲ್ಲಿ ಮೊದ ಮೊದಲು ಶಿವಜೀವರಲ್ಲಿ ಉಪಾಸ್ಯೋಪಾಸಕ ಭೇದದ ತೋರಿಕೆಯಾದರೂ, ಸರ್ವತೋ ಮುಖವಾದ ಶಿವಪ್ರಸಾದವು ಈ ಅದ್ವೈತ ಭಕ್ತಿಯಿಂದ ಸಿದ್ಧಿಸಿದನಂತರದಲ್ಲಿ ಸರ್ವವೂ ಏಕಾತ್ಮರೂಪದಿಂದಲೇ ಬೆಳಗುತ್ತಿರುವುದು.

## ಶಿವಪ್ರಸಾದದ ಕುರುಹು.

ಅದ್ವೈತಭಕ್ತಿಯಿಂದ ಸಿದ್ಧಿಸಿದ ಶಿವಪ್ರಸಾದದ ಕುರುಹನ್ನು ವಿಶದವಾಗಿ ವಿವರಿಸುವನು.

ಸೂ. ೩೪ ರಿಂದ ೪೧ ಆತ್ಮನಿಗೆ ಶಿವಪ್ರಸಾದದಿಂದ ಪ್ರತಿಯೊಂದು ಕಾರ್ಯವೂ, ಆ ಕಾರ್ಯದ ಕರ್ತೃವೂ, ಕಾರ್ಯವನ್ನು ಮಾಡಿಸತಕ್ಕವನೂ, ಕಾರ್ಯಸಾಧನವೂ, ಸಹ ತನ್ನ (ಆತ್ಮ) ರೂಪವಾಗಿಯೇ ತೋರುತ್ತಿರುವವು. ಅದರಂತೆಯೇ ಭೋಗವೂ, ಭೋಗಿಸುವವನೂ, ಭೋಗದಾತನೂ, ಭೋಗಸಾಧನವೂ ಆತ್ಮರೂಪದಿಂದಲೇ ಪ್ರಕಾಶಿಸುವವು. ಮತ್ತು ಗ್ರಾಹಕನೂ, ಗ್ರಾಹ್ಯವೂ, ಗ್ರಹಣವೂ ಸರ್ವತೋ ಮುಖವಾಗಿ ಆತ್ಮರೂಪದಿಂದಲೇ ವಿರಾಜಿಸುವವು. ಆ ಶಿವಪ್ರಸಾದದಿಂದ ಜೀವಾತ್ಮ ಪರಮಾತ್ಮರೂ, ಅವರ ಭೇದವೂ, ಭೇದವನ್ನು ಮಾಡತಕ್ಕವನೂ ಸಹ ತಾನೇ (ಆತ್ಮನೇ) ಎಂದು ತೋರುತ್ತಿರುವವು. ದೇಹೇಂದ್ರಿಯಾದಿಗಳೂ ಪ್ರಾಣಮನೋ ಬುದ್ಧ್ಯಹಂಕಾರಗಳೂ ಸಹ ತಾನೇ (ಆತ್ಮನೇ) ಆಗಿರುವವು. ವಿಧಿನಿಷೇಧಗಳೂ ನಿಷಿದ್ಧಕರಣಗಳೂ ಸಹ ತಾನೇ(ಆತ್ಮನೇ)ಆಗಿರುವವು. ಕಾಮಕ್ರೋಧಾದಿಗಳೂ ಶಾಂತ್ಯಾದಿಗಳೂ ಸಹ ಆತ್ಮರೂಪದಿಂದ ತೋರುವವು. ಆದುದರಿಂದ ಸರ್ವವೂ ಆತ್ಮರೂಪದಿಂದ ಅಂದರೆ ಶಿವಾಕಾರದಿಂದ ಬೆಳಗುವಂತೆ ಮಾಡುವ ಇಂತಹ ಶಿವಾನುಗ್ರಹದ ಕುರುಹನ್ನು ಕರತಲಬಿಲ್ವದಂತೆ ತಂದುಕೊಡುವ ಸರ್ವಸಿದ್ಧಿಪ್ರದವಾದ ಅದ್ವೈತ ಭಕ್ತಿಯನ್ನೇ ವೀರಶೈವನು ಆಶ್ರಯಿಸತಕ್ಕದ್ದು. ಸಂಸಾರಕ್ಲೇಶಕ್ಕೆ ಸಾಧನವಾದ ದ್ವೈತಭಕ್ತಿಯನ್ನು ಆಶ್ರಯಿಸತಕ್ಕುದಲ್ಲವು.

## ದ್ವೈತ ಅದ್ವೈತ ಭಕ್ತಿಗಳು

ಸೂ. ೪೩-೪೫ ದ್ವೈತಭಕ್ತಿಯಲ್ಲಿ ಕೊನೆಯವರೆವಿಗೂ ಭೇದವು ಇದ್ದೇ ಇರುವುದು. ಪೂಜ್ಯಪೂಜಕರುಗಳಿಗೆ ಐಕ್ಯವೇ ಇಲ್ಲ. ಕಡೆಯವರೆಗೂ ಒಂದನ್ನು ಮತ್ತೊಂದು ಪ್ರಾರ್ಥಿಸಿಕೊಂಡೇ ಇರುವುದು. ಈ ದ್ವೈತ ಭಕ್ತಿಯಲ್ಲಿ ಸಾಮರಸ್ಯವಿಲ್ಲದಿರುವುದರಿಂದ ಇದು ಸಂಸಾರಬಂಧವಿಮೋಚಕವಲ್ಲ. ಆ ಸಂಸಾರವನ್ನೆ ಮತ್ತಷ್ಟು ಬಲಪಡಿಸತಕ್ಕದ್ದು. ಸಾಮರಸ್ಯದಾಯಕವಾದ ಅದ್ವೈತ ಭಕ್ತಿಯಾದರೋ ಸಂಸಾರನಾಶವನ್ನುಂಟುಮಾಡಿ, ಬಂಧವಿಮೋಚನಗೊಳಿಸುವುದು. ಅಂತಹ ನಿರ್ವಿಕಲ್ಪವಾದ ಅದ್ವೈತ ಭಕ್ತಿಯು ದ್ವೈತಭಕ್ತಿಗಿಂತಲೂ ಶ್ರೇಷ್ಠವಾದದ್ದಿರುವುದು.

## ಅದ್ವೈತಭಕ್ತಿಯುಕ್ತಯೋಗಿಯು.

ಸೂ. ೪೬ ರಿಂದ ೬೦. ಅದ್ವೈತಭಕ್ತಿ ಸಂಪನ್ನನಾದ ಶಿವಯೋಗಿಯ ಸಕಲಕ್ರಿಯೆಗಳೂ ಸುಟ್ಟ ಬಟ್ಟೆಯ ಕ್ರಿಯೆಗೆ ಸಮಾನವಾಗಿರುವವು. ಸುಟ್ಟ ಬಟ್ಟೆಯು ಆಕಾರಮಾತ್ರದಿಂದ ಬಟ್ಟೆಯಂತೆ ತೋರುತ್ತಿದ್ದರೂ, ಸುಡದ ಬಟ್ಟೆಯಿಂದ ಬೇಕಾದುದನ್ನು ಕಟ್ಟುವುದೂ ಮುಚ್ಚುವುದೂ ಮೊದಲಾದ ಕೆಲಸವನ್ನು ಮಾಡುವಂತೆ ಈ ಸುಟ್ಟ ಬಟ್ಟೆಯಿಂದ ಹೇಗೆ ಮಾಡಲಾಗುವುದಿಲ್ಲವೋ ಅದರಂತೆ ಅದ್ವೈತಭಕ್ತಿಯುಕ್ತನಾದ ಶಿವಯೋಗಿಯ ಯಾವ ಕ್ರಿಯೆಗಳೂ ಫಲ ಜನಕಗಳಾಗುವುದಿಲ್ಲ. ಫಲೇಚ್ಛೆಯಿಂದ ಮಾಡುವ ಕರ್ಮವು ಪ್ರತಿಬಂಧಕವು. ಅದನ್ನಾಚರಿಸಬಾರದು. ಕೇವಲ ಕ್ರಿಯಾಮಾತ್ರವಾದ ಅಂದರೆ ಫಲಾಭಿಲಾಷೆಯಿಲ್ಲದ ಶುದ್ಧಕ್ರಿಯೆಯನ್ನಾಚರಿಸುವುದರಿಂದ ಬಾಧಕವಿಲ್ಲ. ಹೇಗೆ ಚಿತ್ರಪಟವು ಸ್ತ್ರೀವಿಲಾಸದರ್ಶಕವಾದರೂ ಅದರಿಂದ ಸಂಭೋಗಾದಿ ಫಲವಿಲ್ಲವೋ; ಅದರಂತೆಯೇ ಅದ್ವೈತಕ್ರಿಯೆಗೂ ಜನನಮರಣಾದಿ ಫಲವಿಲ್ಲವು. ಉರಿದ ಬೀಜನ್ನು ಬಿತ್ತಿದರೂ ಅದು ಫಲಿಸದಂತೆ ಅದ್ವೈತಭಕ್ತಿಯುಕ್ತನಾದ ಯೋಗಿಯ ಕ್ರಿಯೆಯು ಫಲಜನಕವಾಗಲಾರದು. ಬಂಜೆಯು ಕಾಮದಿಂದಲಾದರೂ ಅಕಾಮದಿಂದಲಾದರೂ ತನ್ನ ಪುರುಷನ ಸಂಗವನ್ನು ಮಾಡಿ ಫಲವನ್ನು (ಮಕ್ಕಳನ್ನು) ಪಡೆಯಲಾರಳು. ಅದರಂತೆಯೇ ಅದ್ವೈತಭಕ್ತಿಯೆಂಬ ಸತಿಯು ಈಶ್ವರ ಸಂಗವನ್ನು ಮಾಡಿದರೆ ಬಂಧಕರವಾದ ಯಾವ ಫಲವೂ ಜನಿಸಲಾರದು.

ಅದ್ವೈತಭಕ್ತಿಯೋಗವನ್ನು ಹೊಂದಿದ ಯೋಗಿಯ ಕ್ರಿಯೆಯು ನಿಷ್ಫಲರೂಪದಿಂದಾಗಲಿ ಸಫಲರೂಪದಿಂದಾಗಲಿ ತೋರುವುದಿಲ್ಲ. ಇದು ಅದ್ವೈತಭಕ್ತಿರೂಪದಿಂದಲೇ ಬೆಳಗುತ್ತಿರುವುದು. ಅದ್ವೈತಭಕ್ತಿಯ ಕ್ರಿಯೆಗೆ ನಿಷ್ಫಲ ಸಫಲತ್ವಗಳನ್ನು ಹೇಳುವುದು ಭ್ರಾಂತಿಯು.

ಆದರೆ--ಕ್ರಿಯಾ ಸಾಮಾನ್ಯಕ್ಕೆ ಕೇವಲ ನಿಷ್ಫಲತ್ವವೇ ಆಗಲಿ ಕೇವಲ ಸಫಲತ್ವವೇ ಆಗಲಿ ಉಂಟೆಂದು ಹೇಳಕೂಡದು. ಅದ್ವೈತ ಭಕ್ತಿಯನ್ನೊಳಗೊಳ್ಳದ ಕ್ರಿಯೆಗೆ ತಕ್ಕ ಫಲಾಫಲಗಳು ಇದ್ದೇ ಇರುವವು. ಅದ್ವೈತ ಭಕ್ತಿಯ ಕ್ರಿಯೆಗಳಿಗೆ ಮಾತ್ರ ಫಲಾಫಲಗಳಿಲ್ಲವು. ಚಿತ್ರಪಟದ ಸ್ತ್ರೀವ್ಯಕ್ತಿಯ ನಾಭಿಯು ನಿಮ್ನವಾಗಿಯೂ (ತಗ್ಗಾಗಿಯೂ) ಕುಚವು ಉನ್ನತವಾಗಿಯೂ (ಉಬ್ಬಾಗಿಯೂ) ನೋಟಕ್ಕೆ ಮಾತ್ರ ತೋರುತ್ತಿದ್ದರೂ; ಚಿತ್ರದಲ್ಲಿ ಕೈಯಿಟ್ಟು ಸವರಿದಾಗ ನಿಮ್ನೋನ್ನಗಳು ಸಮಾನವಾಗಿ ಕಾಣುವಂತೆ ಶಿವಯೋಗಿಗೆ ಅದ್ವೈತ ಕ್ರಿಯೆಯ ಫಲಾಫಲಗಳು ಸಮಾನವಾಗಿಯೇ ಕಾಣುವವು. (ಯೋಗಿಯ ಕ್ರಿಯೆಗೆ ಫಲವೂ ಇಲ್ಲ, ನಿಷ್ಫಲವೂ ಇಲ್ಲವು. ಆದು ಅದ್ವೈತ ಭಕ್ತಿರೂಪದಿಂದಿರುವದೆಂದು ಭಾವವು)

ನಾನಾವಿಧವಾದ ನದಿಗಳೂ ಜಲಾಶಯಗಳೂ ಸ್ವಸ್ಥಾನದಲ್ಲಿ ಭಿನ್ನ ಭಿನ್ನವಾಗಿ ಕಾಣುತ್ತಿದ್ದರೂ; ಅವೆಲ್ಲವೂ ಸಮುದ್ರವನ್ನು ಸೇರಿ ಏಕಾಕಾರವನ್ನು ಹೊಂದುವಂತೆ ಶಿವಯೋಗಿಯ ನಾನಾವಿಧವಾದ ಕ್ರಿಯೆಗಳು ಮೊದಲು ಭಿನ್ನ ಭಿನ್ನ ರೂಪದಿಂದ ತೋರಿದರೂ, ಅದ್ವೈತ ಭಕ್ತಿಯನ್ನು ಹೊಂದಲಾಗಿ ಅದ್ವೈತ ಭಕ್ತಿರೂಪದಿಂದಲೇ ತೋರುವವು.

ಶಿವಯೋಗಿಯ ಕ್ರಿಯೆಯು (ಜನರ ಕಣ್ಣಿಗೆ, ಕ್ರಿಯಾಕಾರದಿಂದ ತೋರುತ್ತಿದ್ದರೂ, ಅದು ಕ್ರಿಯೆಯಲ್ಲ, ಶಿವಯೋಗಿಯ ಲೀಲೆಯು. ಆ ಲೀಲೆಯು ಶಿವಯೋಗಿಗೆ ಮಾತ್ರ ಮೇಲೆ ಹೇಳಿದಂತೆ ಅದ್ವೈತ ಭಕ್ತಿ ರೂಪದಿಂದ ಅಥವಾ ಶಿವಾರ್ಚನ ಶಿವಾರ್ಪಣರೂಪದಿಂದ ಬೆಳಗುತ್ತಿರುವುದಲ್ಲದೆ ಕ್ರಿಯಾಕಾರದಿಂದಲ್ಲವು.

## ಅದ್ವೈತ ಭಕ್ತಿ ದೇವತೆಯ ಲೀಲೆ

ಸೂ. ೬೧ ರಿಂದ ೬೫. ಅದ್ವೈತ ಭಕ್ತಿ ದೇವತೆಯು ತಾನು ಲೀಲೆಯಿಂದ ಸಕಲಾಕಾರವನ್ನು ಧರಿಸಿ ಕ್ರೀಡಿಸುತ್ತಾ, ತನ್ನನ್ನು ಶಿವಾರ್ಪಿ

ತಂಗೈದು, ಆ ಶಿವಾರ್ಪಿತವನ್ನೇ ತಾನು ಉಪಭೋಗಿಸುತ್ತಿರುವಳು. (ಅದ್ವೈತದಲ್ಲಿ ಭೋಕ್ತೃ ಭೋಗಾದಿ ಭೇದವಿಲ್ಲವೆಂದು ಭಾವವು.)

ಪ್ರಪಂಚ ವಿಷಯಗಳನ್ನು ಲಕ್ಷೀಕರಿಸಿ ವಿಶುದ್ಧ ಜ್ಞಾನಮಯವಾದ ಅದ್ವೈತ ಭಕ್ತಿಯನ್ನು ಅನುರಾಗಪರನೆಂದೂ ವಿರಾಗಪರವೆಂದೂ ಭೇದ ಮಾಡಿದಾಗ್ಯೂ; ಭಕ್ತಿಯು ಮಾತ್ರ ಆ ಅನುರಾಗವಿರಾಗಗಳಿಂದ ನಿರ್ಲಿಪ್ತವಾಗಿರುವದು. ಆ ಭಕ್ತಿಯು ಅಂತರ್ಲೇಪ ಬಹಿರ್ಲೇಪಗಳಲ್ಲಿಯೂ, ತ್ಯಾಗಗ್ರಹಣಗಳಲ್ಲಿಯೂ, ವಿಷಯ ವಿಷಯಿಗಳಲ್ಲಿಯೂ, ಅನುರಾಗವಿರಾಗಗಳಲ್ಲಿಯೂ ಸಮಾನವಾಗಿರುವದು. ಅಂದರೆ ಅವರ ಸೋಂಕಿಲ್ಲದಿರುವದು. ಆದುದರಿಂದ ಭಕ್ತಿಯು ಯಾವ ವಸ್ತುವನ್ನೂ ಅನುರಾಗದಿಂದ ಗ್ರಹಿಸುವದಿಲ್ಲ. ವಿರಾಗದಿಂದ ತ್ಯಜಿಸುವದೂ ಇಲ್ಲ. ಆಕಾಶವು ಕತ್ತಲೆ ಬೆಳಕುಗಳಿಂದ ಯುಕ್ತವಾಗಿದ್ದರೂ ಅವುಗಳ ಸೋಂಕಿಲ್ಲದೆ ತಾನು ಶುದ್ಧವಾಗಿರುವಂತೆ ಭಕ್ತಿಯು ಅನುರಾಗ ವಿರಾಗದಿಂದ ಕೂಡಿದ್ದರೂ ತಾನು ಅವುಗಳ ಲೇಪವಿಲ್ಲದಿರುವುದು.

## ಕರ್ಮಮತ ಭಕ್ತಿಮತಗಳು

ಸೂ. ೬೬ - ೭೧ ಕತ್ತಲೆ ಬೆಳ್ದಿಂಗಳುಗಳ ಪ್ರಸಕ್ತಿಯು ರಾತ್ರಿಯ ಕಾಲದಲ್ಲಿಯಲ್ಲದೆ ಹಗಲಲ್ಲಿಲ್ಲದಂತೆ, ಪಾಪಪುಣ್ಯಗಳ ಪ್ರಸಕ್ತಿಯು ಕರ್ಮಮತದಲ್ಲಿರುವದಲ್ಲದೆ ಶಿವಭಕ್ತಿಮತದಲ್ಲಿಲ್ಲವು.

ಕತ್ತಲೆ ಬೆಳದಿಂಗಳುಗಳ ಸಂಬಂಧವಿಲ್ಲದ ಹಗಲಲ್ಲಿ ಸೂರ್ಯನ ತೇಜಸ್ಸೊಂದೇ ಪ್ರಕಾಶಿಸುವಂತೆ ಪಾಪಪುಣ್ಯಗಳ ಸೋಂಕಿಲ್ಲದ ಭಕ್ತಿಮತದಲ್ಲಿ ಶಿವತೇಜಸ್ಸೊಂದೇ ಬೆಳಗುತ್ತಿರುವದು. ಹಗಲಲ್ಲಿ ಸೂರ್ಯನು ಪ್ರಕಾಶಿಸುವಂತೆ ಭಕ್ತಿಮತದಲ್ಲಿ ಶಿವನು ಪ್ರಕಾಶಿಸುವನು. ಹಗಲಲ್ಲಿ ಉಷ್ಣ ಲಕ್ಷಣದ ಬಿಸಲಿರುವಂತೆ ಭಕ್ತಿಮತದಲ್ಲಿ ಜ್ಞಾನ ಲಕ್ಷಣದ ಶಿವತೇಜಸ್ಸಿರುವದು. ರಾತ್ರಿಯಲ್ಲಿ ಕತ್ತಲೆ ಬೆಳದಿಂಗಳೆರಡೂ ಇರಬಹುದಾದ್ದರಿಂದ ರಾತ್ರಿಯಲ್ಲಿ ಆ ಕತ್ತಲೆ ಬೆಳ್ದಿಂಗಳುಗಳಿಗೆ ಮಿಶ್ರತ್ವವನ್ನು ಹೇಳಬೇಕು. ಅದರಂತೆಯೇ ಅಜ್ಞಾನವಿಶಿಷ್ಟವಾದ ಕರ್ಮಮತದಲ್ಲಿ ಪಾಪಪುಣ್ಯಗಳ ಪ್ರವೃತ್ತಿಯು ಇರುವುದೆಂದು ಹೇಳಬೇಕು. ಇದರಿಂದ ಸೂರ್ಯತೇಜೋವಿಶಿಷ್ಟವಾದ ಹಗಲಿನಂತೆ ಇರುವ ಶಿವತೇಜೋಯುಕ್ತವಾದ ಭಕ್ತಿಮತದಲ್ಲಿ ಪಾಪಪುಣ್ಯಗಳ ಸಂಬಂಧವು ಇಲ್ಲವೆಂಬುದೇ

ಸಿದ್ಧಾಂತವು. ಈ ಪ್ರಕಾರದಿಂದ ಅದ್ವೈತ ಭಕ್ತಿಗೆ ಶುಭಾಶುಭ ಕರ್ಮದ ಲೇಪವಿಲ್ಲೆಂಬುದು ತಾನಾಗಿಯೇ ಸಿದ್ಧವಾಗುವದು.

## ಶಿವಭಕ್ತಿಯು ಪಂಚಮ ಪುರುಷಾರ್ಥವು.

ಸೂ. ೭೩ರಿಂದ ೮೦ ಶಿವಪ್ರಸಾದದಿಂದ ಶಿವಜ್ಞಾನೋದಯವಾಗುವುದು. ಆ ಶಿವ ಜ್ಞಾನದಿಂದ ಮೋಕ್ಷವು ಸಿದ್ಧಿಸುವುದು. ಆ ಮೋಕ್ಷಸ್ಥಾನದ ಮೇಲೆ ಸ್ವತಂತ್ರವಾದ ಭಕ್ತಿಯು ಮೋಕ್ಷಕ್ಕಿಂತಲೂ ಶ್ರೇಷ್ಠತರವಾಗಿ ನಿಜ ಲೀಲೆಯಿಂದ ಬೆಳಗುತ್ತಿರುವದು. ಅಂದರೆ- ಧರ್ಮ, ಅರ್ಥ ಕಾಮ, ಮೋಕ್ಷವೆಂಬ ಚತುರ್ವಿಧ ಪುರುಷಾರ್ಥಗಳಿಗೆ ಪರವಾದದ್ದಾಗಿ ಈ ಸನಾತನವಾದ ಶಿವಭಕ್ತಿಯು ಪಂಚಮ ಪುರುಷಾರ್ಥವೆನಿಸಿಕೊಂಡಿರುವುದು.

ಈ ಪಂಚಮ ಪುರುಷಾರ್ಥವು ಇಹಪರಲೋಕಗಳ ಗಮನಾಗಮನದ ಅಥವಾ ಉಭಯ ಲೋಕ ಸುಖದ ತೊಡಕಿಲ್ಲದೆ ಸಂಪೂರ್ಣವಾದ ಸ್ವತಂತ್ರ ವೈಭವವುಳ್ಳದಾಗಿರುವದು. ಈ ಭಕ್ತಿಯು ತನ್ನನ್ನಾಶ್ರಯಿಸಿದ ಫಲಾಕಾಂಕ್ಷಿಗಳ ಭಾವಾನುರೂಪವಾದ ಅಂದರೆ "ಯಾದೃಶೀ ಭಾವನಾ ಪುಂಸಾಂ ಸಿದ್ಧಿರ್ಭವತಿ ತಾದೃಶೀ" ಎಂಬ ವಾಕ್ಯದಂತೆ ಫಲಸಿದ್ಧಿಯನ್ನುಂಟು ಮಾಡುವುದಾಗಿರುವುದು. ಈ ಭಕ್ತಿಯು ಉತ್ತರೋತ್ತರದಲ್ಲಿ ತನಗಿಂತ ಶ್ರೇಷ್ಠವಾದುದಿಲ್ಲದುದರಿಂದ ತಾನು ನಿರುತ್ತರವಾಗಿಯೂ ಸಂಪೂರ್ಣವಾಗಿಯೂ ಇರುವದು.

ಇಂತಹ ಭಕ್ತಿಯಿಂದ ಕೂಡಿದ ಶಿವಶರಣರಲ್ಲಿ ಕೆಲವರು ತಮ್ಮ ಪ್ರಾಣಸಹಿತರಾಗಿ ಶಿವಸ್ಥಾನವನ್ನು ಹೊಂದಿರುವರು. ಕೆಲವರು ಈ ಸ್ಥೂಲ ಶರೀರದಿಂದಲೇ ಶಿವಪದವನ್ನಡರಿರುವರು. ಮತ್ತೆ ಕೆಲವರು ತಮ್ಮ ಹೆಂಡರುಮಕ್ಕಳು ಬಂಧುಗಳು ಮನೆಮಠಗಳನ್ನೆಲ್ಲಾ ಕಟ್ಟಿಕೊಂಡು ಕೈಲಾಸಕ್ಕೆ ತೆರಳಿರುವರು. ಇನ್ನು ಕೆಲವರು ತಮ್ಮ ಗ್ರಾಮ ದೇಶಕೋಶ ಪರಿಜನಗಳನ್ನೆಲ್ಲಾ ಕೂಡಿಕೊಂಡು ಶಿವಸನ್ನಿಧಿಯನ್ನು ಸೇರಿರುವರು. ಕೆಲವರು ಎಲ್ಲರನ್ನೂ ಬಿಟ್ಟು ತಾವು ಮಾತ್ರ ಹೋಗಿರುವರು. ಅಂದರೆ ಪ್ರಾಣಾದಿವಸ್ತುವಿಷಯಗಳಲ್ಲಿ ಅನುರಾಗವುಳ್ಳ ಭಕ್ತರು ಅವುಗಳೊಡನೆಯೇ ಶಿವೈಕ್ಯರಾಗಿರುವರು. ಅವುಗಳ ಮೇಲಣ ಅನುರಾಗವನ್ನು ಬಿಟ್ಟವರು ತಾವು ಮಾತ್ರವೇ ಶಿವೈಕ್ಯರಾಗಿರುತ್ತಾರೆ.

ಈ ಭಕ್ತಿಯೇ ಪಂಚಮಪುರುಷಾರ್ಥವೆನಿಸಿಕೊಂಡು ಪರಮಾರ್ಥ ದಾಯಿನಿಯೂ, ಪರತತ್ವವೇದಿನಿಯೂ, ಭವದೋಷಹಾರಿಣಿಯೂ, ಶಿವ ಭಾವಕಾರಿಣಿಯೂ ಆಗಿರುವುದು.

## ಷಟ್‌ಸ್ಥಲಜ್ಞನಾದ ವೀರಶೈವನು.

ಸೂ. ೮೧ ೮೨ ಮೇಲೆ ಹೇಳಿದಂತೆ ಭಕ್ತಿಯ ಮಹಿಮೆಯನ್ನು ತಿಳಿದ ವೀರಶೈವನು ಶಿವಾದ್ವೈತಪರಾಯಣನಾಗಿ, ಭಕ್ತಿವಿಲಾಸವೈಭವದಲ್ಲಿದ್ದು ನಿಜೈಕ್ಯಸೌಖ್ಯಪ್ರದವಾದ ಶಿವಪ್ರಸಾದವನ್ನು ಹೊಂದಿ "ನಾನು ಅನಾತ್ಮ ವಸ್ತುವಲ್ಲವು ಯಾವನೆಂದರೆ ಸರ್ವಕ್ಕೂ ಸಾಕ್ಷಿಭೂತನಾದ ಆತ್ಮನೇ ನಾನು. ಆತ್ಮಪ್ರಭುವಾದ ಶಿವನ ದಾಸನು ನಾನು. (ಶಿವದಾಸೋಹಂ ಶಿವದಾಸೋಹಂ) ಎಂದು ಸ್ವಲೀಲೆಯಿಂದ ಶಿವನನ್ನು ಕೊಂಡಾಡುತ್ತಾ ಚರಿಸುತ್ತಿರುವನು. ಈತನೇ ಷಟ್‌ಸ್ಥಲಜ್ಞನಾದ ವೀರಶೈವನು.

## ವಿಚಾರ.

"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾಚ" "ಏಕ ಏವ ರುದ್ರೋ ನದ್ವಿತೀಯಾಯ ತಸ್ಥೆಯ ಇಮಾನ್ ಲೋಕಾನ್ ಈಶತ ಈಶನೀಭಿಃ ಪರಮಶಕ್ತಿಭಿಃ" ಎಂಬ ಶ್ವೇತಾಶ್ವತರೋ ಪನಿಷದಾದಿ ಶ್ರುತಿಗಳು ಪರಬ್ರಹ್ಮನಾದ ಷಟ್‌ಸ್ಥಲಾತ್ಮಕ ಪರಶಿವನಿಗೆ ಸ್ವಾಭಾವಿಕಾನಂತ ಜಗಜ್ಜನನ ಶಾಸನ ಪಾಲನಶಕ್ತಿವಿಶಿಷ್ಟತ್ವವನ್ನು ಹೇಳು ತ್ತಿರುವನಷ್ಟೆ. ಅಂತಹ ಶಕ್ತಿಯೇ ಭಕ್ತಿಯು. ಇದು ಶಿವನ ಸ್ವಭಾವ ಭೂತವಾಗಿರುವುದು. ಈ ಭಕ್ತಿರೂಪವಾದ ಶಕ್ತಿಯೊಂದಿಲ್ಲದಿದ್ದರೆ, ಶಿವ ನಿಗೆ ಸರ್ವಜ್ಞತ್ವ, ಸರ್ವಶಕ್ತಿಮತ್ವ, ಸರ್ವಕಾರಣತ್ವ, ಸರ್ವನಿಯಂತ್ರತ್ವ, ಸರ್ವೋಪಾಸ್ಯತ್ವ, ಸರ್ವಾನುಗ್ರಾಹಕತ್ವ, ಸರ್ವಪುರುಷಾರ್ಥಹೇತುತ್ವ, ಮೊದಲಾದವುಗಳು ಸಂಭವಿಸುತ್ತಿದ್ದಿಲ್ಲ. ಅಚಿಂತ್ಯಮಹಿಮಾಸ್ಪದವಾದ ಇಂತಹ ಶಿವಶಕ್ತಿಗೆ ವೀರಶೈವರು ಭಕ್ತಿಯೆಂದು ಕರೆದಿರುವರು. ಸಕಲ ಪುರುಷಾರ್ಥಹೇತುವಾಗಿರುವುದರಿಂದ ಈ ಭಕ್ತಿಯನ್ನು ಪಂಚಮಪುರು ಷಾರ್ಥವೆಂದು ಕರೆಯುವರು. ವೀರಶೈವನು ತನ್ನ ಷಟ್‌ಸ್ಥಲಾಚರಣೆ ಯಿಂದ ಈ ಭಕ್ತಿಯನ್ನು ಅಪೇಕ್ಷಿಸಿದಂತೆ ಮುಕ್ತಿಯನ್ನಪೇಕ್ಷಿಸಲಾರನು. ಮುಕ್ತಿಯೆಂಬುದು ಭಕ್ತಿಯಲ್ಲಡಗಿರುವುದು. ಆದುದರಿಂದ ಷಟ್‌ಸ್ಥಲಾ ಚರಣೆಗೆ ಭಕ್ತಿಯೇ ಅಂತಿಮಧ್ಯೇಯವೆಂಬುದನ್ನು ಮರೆಯಕೂಡದು.

ಯಾವನು ಪೂರ್ವೋಕ್ತವಾದ ಭಕ್ತಿಯೆಂಬ ಪಂಚಮ ಪುರುಷಾರ್ಥ ಸಾಧಕವಾದ ಷಟ್‌ಸ್ಥಲ ಕ್ರಿಯೆಯ ತತ್ವವನ್ನರಿತು ಅದರಂತೆ ಆಚರಿಸುವನೋ ಅವನೇ "ಏಕೇನ ಜನ್ಮನಾ ಮುಕ್ತಿರ್ವೀರಶೈವೇನ ಮಾಹೇಶ್ವರಿ" ಎಂಬ ಶಿವಾಗಮ ವಚನದಂತೆ ಒಂದೇ ಜನ್ಮದಲ್ಲಿ ಮುಕ್ತನಾಗುವ ವೀರಶೈವನೆಂದರಿಯಬೇಕು. ಇಂತಹ ಷಟ್‌ಸ್ಥಲ ಜ್ಞಾನ ಸಂಪಾದನೆಗೆ ತಕ್ಕಧಿಕಾರವನ್ನು ಗುರುವಿನಿಂದ ಶಿವದೀಕ್ಷಾ ಸಂಸ್ಕಾರದ ಮೂಲಕವಾಗಿ ಪಡೆದಿರುವ ಪ್ರತಿಯೊಬ್ಬ ವೀರಶೈವನೂ ಅಧಿಕೃತವಾದ ತನ್ನ ಈ ಜನ್ಮದಲ್ಲಿ ಪೂರ್ವೋಕ್ತವಾದ ಅದ್ವೈತ ಭಕ್ತಿಯ ಸಂಪಾದನೆಯಿಂದ ಜನ್ಮಸಾರ್ಥಕತೆಯನ್ನು ಅಂದರೆ ಶಿವೈಕ್ಯತೆಯನ್ನು ಪಡೆಯುವನು.

## ಷಟ್‌ಸ್ಥಲ ವಿದ್ಯಾಧಿಕಾರಿ.

ಸೂ ೮೩. ೮೪. ಈ ಪ್ರಕಾರವಾಗಿ ಪರಮ ರಹಸ್ಯವೂ, ವೇದ ವೇದಾಂತ ಸಾರವೂ ಭವಭಯ ಬಾಧೆಗೆ ದೂರವೂ ಆದ ಷಟ್‌ಸ್ಥಲ ಬ್ರಹ್ಮ ವಿದ್ಯಾಬೋಧೆಯನ್ನು ಗುರು ಶಿವ ಪದ ಭಕ್ತಿಯಿಂದ ಹೊಂದಿದ ವಿದ್ಯೆಯುಳ್ಳವನಿಗೆ ಕೊಡತಕ್ಕುದಲ್ಲದೆ ಭಕ್ತಿ ಸಂಪದ್ವಿರಹಿತನಿಗೆ ಕೊಡತಕ್ಕುದಲ್ಲವು. ಏಕೆಂದರೆ— ಇಂತಹ ತತ್ವಾರ್ಥಂಗಳನ್ನು ಶಿಷ್ಯರಾಗದ ಅಥವಾ ಭಕ್ತರಾಗದವರಿಗೆ ಬೋಧಿಸಕೂಡದೆಂದು ವೇದಾನು ಶಾಸನ ವಿರುವುದು.

## ಅಧಿಕರಣ ಸಮಾಪ್ತಿ.

ಸೂ. ೮೫. ಈ ಪ್ರಕಾರವಾಗಿ ಸಂಸಾರನಾಶಕವಾದ ಅದ್ವೈತಭಕ್ತಿ ನಿರ್ವಾಣ ನಿಷ್ಠೆಯೇ ಅಂತಿಮ ಧ್ಯೇಯವಾಗುಳ್ಳ ಕ್ರಿಯಾ ವಿಶ್ರಾಂತಿಯು ನನ್ನಿಂದ ಹೇಳಲ್ಪಟ್ಟಿದು.

## ಸಮಾಪ್ತಿ ಮಂಗಳವು.

ಸೂ. ೮೬. ೮೭. ಲಿಂಗಾಂಗೈಕ್ಯ ಸ್ವರೂಪನೂ, ಲಿಂಗ ಮೂರ್ತಿಯೂ ಆದ ಶ್ರೀ ಮೈಸೂರ ಸೋಮೇಶಲಿಂಗಕ್ಕೆ ನಮಸ್ಕಾರವು. 'ನಮಃ ಶಿವಾಯ' ಎಂಬ ಮಂತ್ರದಲ್ಲಿ ನಮಃ ಶಬ್ದವೇ ಉಮೆಯೂ, ಶಿವ ಶಬ್ದವೇ ಶಿವನೂ, ಅಯಶಬ್ದವೇ ಆ ಉಮಾಶಿವರ ಸಂಯೋಗವೂ ಆಗಿರುವುದರಿಂದ ಆ ಪಂಚಾಕ್ಷರ ಮಂತ್ರಾತ್ಮಕವಾದ ಸೋಮ (ಉಮಾಸಹಿತನಾದ ಶಿವ) ತತ್ವವನ್ನು ಉಪಾಸಿಸುತ್ತಿರುವನು.

ವಾಚಾಮಗೋಚರವಾದ ಆತ್ಮ ಸ್ವರೂಪನೂ, ಶಿವಭಾವ ಪ್ರಾಪ್ತನೂ ಷಟ್‌ಸ್ಥಲ ಬ್ರಹ್ಮ ಮೂರ್ತಿಯೂ ಆದ ಸದ್ಗುರುನಾಥನಿಗೆ ನಮಸ್ಕಾರವು.

## ಗ್ರಂಥೋಪಸಂಹಾರವು.

ಶಿವಾನುಭವ ವಿಶಿಷ್ಟನೂ, ಮಹಾತ್ಮನೂ ಆದ ಮಾಯಿದೇವ ಪ್ರಭುವಿನಿಂದ ಅತಿಶೋಭನಾತ್ಮಕವಾದ ಈ ವಾತೂಲೋತ್ತರ ತಂತ್ರಸಾರವಾದ ಶಿವಾನುಭವಸೂತ್ರವು ಉಕ್ತವಾಗಿರುವುದು. ಶಿವಾದ್ವೈತ ತಂತ್ರಸಂಜ್ಞಕವಾದ ಈ ಶಿವ ಸಿದ್ಧಾಂತವನ್ನು ಯಾವಾತನು ತಿಳಿದುಕೊಳ್ಳುವನೋ ಆ ಪ್ರಭುವರನು ಅವಿದ್ಯಾಗ್ರಂಥಿಯನ್ನು ಭೇದಿಸುವನು.

ಮಾಯಿದೇವ ಪ್ರಭುಗಳ

ಶ್ರೀ ಶಿವಾನುಭವಸೂತ್ರಂ ಸಂಪೂರ್ಣಂ

ಓಂ ಶಾಂತಿಃ ಶಾಂತಿಃ ಶಾಂತಿಃ



R. N. B. 2554

# ಶಿವಾನುಭವ.

ಸಂಪುಟ ೫ ] (ಮಾಸಪತ್ರಿಕೆ.) [ಸಂಚಿಕೆ ೨



ಸನ್ ೧೯೩೦] ವಿಜಾಪುರ. [ವೈಶಾಖ ೧೮೫೨

ವಾ. ಚ. ೪ ರೂ. ೮.

# ವಿಷಯಾನುಕ್ರಮಣಿಕೆ.


| ವಿಷಯ | ಲೇಖಕರ ಹೆಸರು | ಪುಟ |
|---|---|---|
| ೧ ವೀರಶೈವ ವರ್ಣಭೇದ ವಿದಾರಿಕಾ | ಶ್ರೀ. ಸಿದ್ಧರಾಮಪ್ಪ ಪಾವಟೆ ಬಿ.ಎ.ಎಲ್.ಎಲ್.ಬಿ ಹುಬ್ಬಳ್ಳಿ | ೧೭-೨೩ |
| ೨ ಆಗಮಗ್ರಂಥಗಳ ಮುದ್ರಣದ ಅವಶ್ಯಕತೆ | ಶ್ರೀ. ಕೆ. ಚನ್ನಮಲ್ಲಪ್ಪ ಶಿರಾಳಕೊಪ್ಪ | ೨೪-೭೭ |
| ೩ ಷಟ್‌ಸ್ಥಲ ಶಾಸ್ತ್ರದಧ್ಯೆಯ | ಸಂಪಾದಕ | ೨೮-೩೩ |
| ೪ ಸಕಲೇಶ ಮಾದರಸನ ವಚನ | ,, | ೧--೨೩ |
| ೫ ಕೈ. ವಾ. ಚನ್ನಬಸಪ್ಪ ಬಸಲಿಂಗಪ್ಪ ಧಾರವಾಡ | ,, | ೨೫-೪೨ |


## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಪ್ರಯತ್ನಿಸುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪ಆ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಲೇಖಗಳನ್ನು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ. ಬೇಕಾದವರು ತೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತಿರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೫ ]　　　ನೋ ೧೯೩೦　　　[ ಸಂಚಿಕೆ ೨

## ವೀರಶೈವ ವರ್ಣಭೇದ ವಿದಾರಿಕಾ.

ಲೇಖಾಂಕ ೨.

(ಲೇಖಕಃ— ಸಿದ್ಧರಾಮಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ.

ಬಸವನು ವೇದವೇದಾಂತ ಆಗಮಾಗಮಾಂತಸಾರವಾಗಿ ವೀರಶೈವ ಧರ್ಮವನ್ನು ಪ್ರತಿಷ್ಠಾಪಿಸಿದನು. ಶಿವನೆ ಅನಾದಿಭಕ್ತಸ್ವರೂಪದಿಂದ ಜಗದ್ಗುರುವಾಗಿ ವೀರಶೈವವನ್ನು ಪ್ರತಿಷ್ಠಾಪಿಸಿದನೆಂದು ಆಗಮಗಳ ಹೃದಯವು.

ಅನಾದಿಭಕ್ತ ರೂಪೇಣ ಭಗವಾನ್ ಪರಮಶ್ಶಿವಃ।
ಪಂಚಾಚಾರಾಂಶ್ಚ ಷಡ್ರೂಪಾಣ್ಯಷ್ಟಾವಾವರಣಾನಿ ಚ॥
ಲಿಂಗಾಂಗ ಸಾಮರಸ್ಯಂಚ ಮುಕ್ತಿಮಾಹ ಜಗದ್ಗುರುಃ।

ಎಂದು ಯೋಗಜಾಗಮ ವಾಕ್ಯವಿರುವದನ್ನು ವೀರಶೈವ ಧರ್ಮಶಿರೋಮಣಿಕಾರನು ಪ್ರಥಮ ಪರಿಚ್ಛೇದದಲ್ಲಿ ಉದಾಹರಿಸಿರುವನು. ಅಂದರೆ ಷಡ್ಗುಣೈಶ್ವರ್ಯ ಸಂಪನ್ನನಾದ ಪರಮಶಿವನು ಸದಾಚಾರ ಲಿಂಗಾಚಾರ ಶಿವಾಚಾರ ನಿಯತಾಚಾರ ಗಣಾಚಾರ ಎಂಬ ಪಂಚಾಚಾರಗಳನ್ನೊಡಗೊಂಡ, ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಎಂಬ ಆರು ಪರ್ಯಾಯಗಳನ್ನೊಳಕೊಂಡ, ಗುರುಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷ ಮಂತ್ರವೆಂಬ ಅಷ್ಟಾವರಣಗಳನ್ನೊಡಗೂಡಿದ ಲಿಂಗಾಂಗ ಸಾಮರಸ್ಯ ಮುಕ್ತಿಯನ್ನು ಜಗದ್ಗುರುವಾಗಿ ಬೋಧಿಸಿದನು. ಅಂತಸ್ತು ಅನಾದಿ ಭಕ್ತನೇ ಬಸವನು. ಬಸವನಲ್ಲದೆ ಇನ್ನಾರು

ಅನಾದಿಭಕ್ತಾವತಾರನೆಂದು ನಾವು ಕೇಳಿಲ್ಲ. ಆದುದರಿಂದ ಈ ವಿಷಯದಲ್ಲಿ ಬಸವ ವಚನವನ್ನು ಉದಾಹರಿಸುವದು ಪ್ರಮಾಣೋದಾಹರಣವೇ ಆಗಿದೆ. ಶಿವತತ್ವ ರತ್ನಾಕರದ ನಾಲ್ಕನೆಯ ತರಂಗದ ೮ ನೆಯ ಕಲ್ಲೋಲದಲ್ಲಿ

ಧರ್ಮಪ್ರವೃತ್ತಿಂ ಶಿಥಿಲಾಮವೇಕ್ಷ್ಯಚ ಸಮಂತತಃ।
ಅವತೀರ್ಯ ದಯಾವಶ್ಯೋ ಭಗವಾನ್ ಬಸವೇಶ್ವರಃ॥
ಧರ್ಮಂ ಸಸ್ಥಾಪಯಾಮಾಸ ಸರ್ವಮೇವ ಧರಾತಲೇ।
ವೀರಶೈವಮತಂ ಸ್ಥಾಪ್ಯ ಪ್ರಕಾಶನಮಥಾಕರೋತ್ ॥

ಎಂದು ಆಗಮವಾಕ್ಯವನ್ನು ಗ್ರಂಥಕಾರನು ಉದಾಹರಿಸಿರುವನು. ಅದರಂತೆಯೆ

ಕೃಪಯಾ ಶಿವಸದ್ಭಕ್ತಿರ್ಭುವಿ ಯೇನ ಪ್ರಕಾಶಿತಾ ।
ದ್ವಿತೀಯ ಶಂಭುಂ ಭಕ್ತ್ಯಾ ತಂ ನಮಾಮಿ ಬಸವೇಶ್ವರಮ್ ॥

ಎಂದು ಶ್ರೀ ಪಂಡಿತಾರಾಧ್ಯ ಚರಿತ್ರಕಾರನು ಬಸವನೇ ಅನಾದಿ ಭಕ್ತನೆಂದು ಸೂಚಿಸಿರುವನು. ಇದಲ್ಲದೆ, ವೀರಶೈವಾಚಾರ ಕೌಸ್ತುಭಕಾರನು

ಭೂಮೌ ಬಿಜ್ಜಲಿರಾಂಬಲೀ ಮತಿತರಾಮಾತ್ಮ ಪ್ರಭಾವೇನಪ್ಯೈ॥
ಯಃ ಕೂಲಂಕಷಣಂ ನ್ಯವಾರಯದಥ ಸ್ಫೀತಾನುಕಂಪಾನಿಧಿಃ ||
ತಂ ಭೂಯೋಪಿ ವೀರಶೈವ ಮತ-ಭೂ ಮಂದಾರ ಭೂಮೀರುಹಂ।
ವಂದೇಹಂ ಬಸವೇಶ್ವರಂ ಸುಮವತಾರಿ ಸದ್ಬ್ರಹ್ಮ ವಿದ್ಯಾಗುರುಂ॥

ಎಂದು ಹಾಡಿ ಬಸವನು ವೀರಶೈವ ಧರ್ಮಪ್ರವರ್ತಕನೆಂದು ಸಾರಿರುವನು. ಶ್ರೀ ಷಡಕ್ಷರನು ಬಸವಾಷ್ಟಕದ ೩ ನೆಯ ಪದ್ಯದಲಿ,

ಶುಭ್ರಾಭ್ರವಭ್ರಾಮೃತ ರುಗ್ಭಾಸಿತ ಕೀರ್ತಿಮ್ ।
ಪ್ರಭ್ರಾಜದ್ವಾಗ್ವಿಸ್ತೃತ ವೇದಾಗಮ ಜಾಲಮ್ ॥
ಕಾರುಣ್ಯಾದ್ರಾಪಾಂಗಾಸಂಗಾ ಸಖವಾಹಮ್ ।
ವಂದೇಹಂ ತ್ವಾಂ ನಿರ್ಜಿತ ಪಾಶಂ ಬಸವೇಶಮ್ ॥

ಅಂದರೆ ಹೇರಳವಾದ ಬೆಳ್ಳನ್ನ ಅಮೃತದ ಕಾಂತಿಯಂತೆ ಹೊಳೆವ ಕೀರ್ತಿಯುಳ್ಳ, ಮಿರುಗುವ ವಚನಗಳಿಂದ ವೇದಾಗಮಗಳ ಸಮು

ಪಾಯುವನ್ನು ಹೆಚ್ಚಿಸಿದ, ಕರುಣೆಯಿಂದ ತೊಯ್ದು ಕುಡಿನೋಟವನ್ನುಳ್ಳ, ಮದನ ಮರ್ದನನ ವಾಹನವಾದ, ಎಲೆ ಬಸವೇಶನೆ, ಪಂಚಪಾಶಗಳನ್ನು ಏನುಳಿಯದಂತೆ ಗೆದ್ದ ನಿನ್ನನ್ನು ನಾನು ವಂದಿಸುತ್ತೇನೆ, ಎಂದು ಬಸವನು ಶ್ರೀ ವೀರಶೈವ ಮತಸ್ಥಾಪಕನೆಂದೂ, ಅವನ ವಚನಗಳು ವೇದಾಗಮಗಳೆಂದೂ, ಬೋಧಿಸುವನು.

ವೃಷಭೇಂದ್ರ ವಿಜಯದಲ್ಲಿ

ಪ್ರಮಥ ಪ್ರಥಮಾಚಾರ್ಯಂ।
ಕುಮತತಮಸ್ಸೂರ್ಯನಾರ್ಯನ ತುಲಿತಕಾರ್ಯಂ।
ನಮದಮರವರ್ಯನಭವಾ।
ಗಮಧುರ್ಯಂ ಬಸವರಾಜನನುಪಮಶೌರ್ಯಂ॥

ಎಂಬೀ ಕಂದದಲ್ಲಿ ಬಸವನು ಶಿವನ ಪ್ರಮಥಗಣಂಗಳಿಗೆಲ್ಲ ಆಚಾರ್ಯನೆಂದೂ, ವೇದರಹಸ್ಯವನ್ನು ತಿಳಿಯದೆ ಹರಡಿದ ಕುಮತಗಳೆಂಬ ಕತ್ತಲೆಗೆ ಸೂರ್ಯನೆಂದೂ, ಪೂಜ್ಯತಮನೆಂದೂ, ಆತನು ಮಾಡಿದ ಧರ್ಮಸ್ಥಾಪನಾ ಕಾರ್ಯವನ್ನು ಇನ್ನಾರು ಮಾಡಿದ ಕಾರ್ಯಕ್ಕೂ ಹೋಲಿಸಲಾಗದೆಂದೂ, ದೇವತೆಗಳಿಗೆಲ್ಲ ವರಣೀಯನೆಂದೂ, ಶಿವಾಗಮಗಳ ಸಿದ್ಧಾಂತ ಪ್ರತಿಷ್ಠಾಪನಾ ಭಾರವನ್ನು ಹೊತ್ತವನೆಂದೂ, ತನ್ನ ಕಾರ್ಯನಿರ್ವಾಹಕ್ಕೆ ಬೇಕಾಗಿರುವ ಅಸಮಾನ ಶೌರ್ಯವನ್ನುಳ್ಳವನೆಂದೂ, ಹೇಳಿರುವನು.

ಇರಲಿ. ಬಸವನ ಮಹಿಮೆಯನ್ನು ಬಣ್ಣಿಸಲು ನನ್ನ ಶಕ್ತಿಯು ಸಾಲದು. ಕನ್ನಡ ವಚನದಲ್ಲಿ ಪುರುಷಸೂಕ್ತಾರ್ಥನಿರ್ವಾಹದಲ್ಲಿ ಉದಾಹರಿಸುವುದು ಅದಾವ ಮಾರ್ಗವೆನ್ನುವ ಸಂಕುಚಿತ ಮತಿಗಳ ವಿಕಾಸಕ್ಕಾಗಿ ಪೂರ್ವಿಕರ ವಚನಗಳನ್ನಿಲ್ಲಿ ಇಳಿಸಿದೆನು. ಇನ್ನು ಬಸವ ವಚನಗಳತ್ತ ಹೊರಳುವ ವಚನ ಸ್ವಾರಸ್ಯವು ತಿಳಿಯಲಿಕ್ಕಾಗಿ ಮೊದಲು ಸ್ಮಾರ್ತಶಾಸ್ತ್ರವ ನೋಡುವ ಮನುಸ್ಮೃತಿಯ ಮೊದಲನೆಯ ಅಧ್ಯಾಯದಲ್ಲಿ ಸೃಷ್ಟಿ ವಿವರಣಮುಂಟು. ೫ ೬ ೭ ೮ ೯ ೧೦ ೧೧ ಶ್ಲೋಕಗಳಲ್ಲಿ ಪರಮಾತ್ಮನಲ್ಲಿ ಬಹಿರಿಂದ್ರಿಯಗಳಿಗೆ ಗೋಚರವಲ್ಲದ ಜಗದ್ಬೀಜವಿರುವುದು. ಆದವನ ಶರೀರವು ನಾನಾ ವಿಧವಾದ ಸೃಷ್ಟಿಯನ್ನು ರಚಿಸಲೆಣಿಸಿ ಜಗದ್ಬೀಜ ಅಥವಾ ಪ್ರಕೃತಿ ಎಂಬ ತನ್ನ ಶರೀರದಿಂದ ಮಹದಹಂಕಾರ ತನ್ಮಾತ್ರಾದಿ

ಕ್ರಮದಿಂದ ಅಪ್ತತ್ವವನ್ನು ಹುಟ್ಟಿಸಿ ಅದರಲ್ಲಿ ಶಕ್ತಿರೂಪವಾದ ಬೀಜವ ನ್ನಿಟ್ಟರು. ಆ ಬೀಜವು ಶುದ್ಧವಾದ ತತ್ತಿಯಾಯ್ತು. ಅದರಲ್ಲಿ ಚತು ರ್ಮುಖನು ಹುಟ್ಟಿದನು. ಆದುದರಿಂದ ಬ್ರಹ್ಮನು ಈ ಸದಸದಾತ್ಮಕ ವಾದ ಪ್ರಕೃತಿಯಿಂದ ಹುಟ್ಟಿದನೆಂದಾಯ್ತು. ವೇದಸಿದ್ಧವಾದುದರಿಂದ ಪ್ರಕೃತಿಗೆ ಸತ್ತೆಂದೂ ಇಂದ್ರಿಯಂಗಳಿಗೆ ಅಗೋಚರವಾದುದರಿಂದ ಅಸ ತ್ತೆಂದೂ ಶಾಸ್ತ್ರವ್ಯವಹಾರವಿದೆ ಎಂದು ಹೇಳಿರುವುದು. ಹನ್ನೊಂದನೆಯ ಶ್ಲೋಕವನ್ನುದಾಹರಿಸುವ

ಯತ್ತತ್ಕಾರಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ ।
ತದ್ವಿಸೃಷ್ಟಃ ಸ ಪುರುಷೋ ಲೋಕೇ ಬ್ರಹ್ಮೇತಿ ಕೀರ್ತ್ಯತೇ ॥

ಆ ಬ್ರಹ್ಮನಿಗೆ ತನ್ಮಾತ್ರೆಗಳೂ ಅಹಂಕಾರವೂ ಎಂಬ ಆರು ಶರೀರ ಘಟಕಗಳು. ಅವುಗಳನ್ನು ಆಶ್ರಯಿಸಿ ಪಂಚಭೂತಗಳೂ ಮನ ಇಂದ್ರಿಯ ಗಳೂ (ಪಂಚತನ್ಮಾತ್ರಗಳಿಂದ ಭೂತಗಳು ಅಹಂಕಾರದಿಂದ ಮನ ಇಂದ್ರಿ ಯಂಗಳು) ಹುಟ್ಟುತ್ತಿರುವುದರಿಂದ ಅವು ಬ್ರಹ್ಮನ ಶರೀರವಾಗಿವೆ. ಷಡಾ ಶ್ರಯಾರ್ಣ ಷಡ್ಭಿರಾಶ್ರಯಾತ್ ಶರೀರಂ ಎಂದು ಶರೀರ ಶಬ್ದ ನಿರ್ವ ಚನವು ಎಂದು ೧೭ ನೆಯ ಶ್ಲೋಕವಿದೆ.

ಯನ್ಮೂರ್ತ್ಯವಯವಾಃ ಸೂಕ್ಷ್ಮಾಸ್ತಸ್ಯೇಮಾನ್ಯಾಶ್ರಯಂತಿಷ
ಟ್ । ತಸ್ಮಾಚ್ಛರೀರಮಿತ್ಯಾಹುಸ್ತಸ್ಯಮೂರ್ತಿಂ ಮನೀಷಿಣಃ ॥

ಇಂತಹ ಮೂರ್ತಿಯುಳ್ಳ ಬ್ರಹ್ಮನು ಪಂಚಭೂತಾಹಂಕಾರಗಳಿಂದ ಸೃಷ್ಟಿಯನ್ನು ಮಾಡುವಲ್ಲಿ, ಆಯಾ ಪದಾರ್ಥವು ತನ್ನ ತನ್ನ ಪ್ರಾಚೀನಕಲ್ಪದ ಗುಣಗರ್ಮಾನುರೋಧದಿಂದ ಆ ಸ್ವಭಾವವನ್ನು ಆಳಿತು ಎಂದು ೨೮ನೆ ಶ್ಲೋಕವು.

ಯಂತು ಕರ್ಮಣಿಯಸ್ಮಿನ್ ಸ ನಿಯುಕ್ತಂ ಪ್ರಥಮಂ ಪ್ರಭುಃ ।
ಸ ಚ ದೇವ ಸ್ವಯಂ ಭೇಜೇ ಸೃಜ್ಯಮಾನಃ ಪುನಃ ಪುನಃ ।೨೮॥

ಇದರ ವಿವರವೆ ೨೯ ನೆಯದರಲ್ಲಿ.

ಹಿಂಸ್ರ ಹಿಂಸ್ರೇ ಮೃದುಕ್ರೂರೇ ಧರ್ಮಾಧರ್ಮಾವೃತಾ ವೃತೇ ।
ಯದ್ಯಸ್ಯ ಸೋ ದಧಾತ್ಸರ್ಗೇ ತತ್ತಸ್ಯ ಸ್ವಯಮಾವಿಶೇತ್॥

ಪೂರ್ವ ಗುಣಕರ್ಮಾನುಯೋಗದಿಂದ ಹಿಂಸಕಾಹಿಂಸಕ ಮೃದು ಕ್ರೂರ ಧರ್ಮಾಧರ್ಮ ಸತ್ಯಾಸತ್ಯ ಸ್ವಭಾವವನ್ನು ಆವಾವುದಕ್ಕೆ ಅವಾವುದನ್ನುಂಟುಮಾಡಿದನೊ ಅದದು ಆಯಾ ಸ್ವಭಾವವನ್ನು ಹೊಂದಿತು.

ಈ ಸ್ವಭಾವವು ಬೇರೆ ಬೇರೆ ಋತುಮಾರ್ಗಗಳಲ್ಲಿ ಬೇರೆ ಬೇರೆ ಗುಣಭೇದವಿರುವಂತೆ ಉಂಟೆಂದು.

ಯಥರ್ತು ಲಿಂಗಾನ್ಯೃತವಃ ಸ್ವಯಮೇವರ್ತು ಪರ್ಯಯೇ ।
ಸ್ವಾನಿಸ್ವಾನ್ಯಭಿಪದ್ಯಂತೇ ತಥಾ ಕರ್ಮಾಣಿ ದೇಹಿನಃ ॥೩೦॥
ಇಂತು ಗುಣಕರ್ಮಗಳಿಂದ ಸರ್ವಸೃಷ್ಟಿಯನ್ನು ಹೇಳಿ.

ಲೋಕಾನಾಂತು ವಿವೃದ್ಧ್ಯರ್ಥಂ ಮುಖ ಬಾಹುರು ಪಾದತಃ ।
ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂಚ ನಿರವರ್ತಯೇತ್ ॥೩೧॥

ಭೂರಾದಿ ಲೋಕಗಳ ಹೆಚ್ಚಳಕ್ಕಾಗಿ ಮುಖಬಾಹುಗಳಿಂದ ತೊಡೆ ಅಡಿಗಳಿಂದ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರುಗಳನ್ನು ಹುಟ್ಟಿಸಿದನು ಎಂದು ಹೇಳುವನು.

ಇಷ್ಟಕ್ಕೆ ನಿಂತರೆ ಎಲ್ಲವು ಸರಿಯೆ. ಇದು ಗುಣಕರ್ಮಾನುರೂಪ ವರ್ಣ ಸೃಷ್ಟಿಗೆ ವಿರುದ್ಧವಲ್ಲ. ಆದರೆ ಮನುವು ಬ್ರಾಹ್ಮಣಜಾತಿಯು ಎಂದಿಗು ಜನ್ಮದಿಂದ ಅಂದರೆ ವಿಶಿಷ್ಟ ಪಿಂಡಗಳಿಂದ ಆ ಪಿಂಡಗಳಲ್ಲಿ ಗುಣವ್ಯತ್ಯಾಸವಿದ್ದರು ಸಹ ಅಧಿಕವೆಂದು ಹೇಳಲುದ್ಯುಕ್ತನಾಗುವನು. ಒಂದನೆಯ ಅಧ್ಯಾಯದಲ್ಲಿ ೯೨ ೯೩ ೯೪ ೯೫ ೯೬ ೯೮ ೧೦೦ ನೆಯ ಶ್ಲೋಕಗಳನ್ನು ನೋಡಿರಿ.

ಊರ್ಧ್ವಂ ನಾಭೇರ್ಮೇಧ್ಯತರಃ ಪುರುಷಃ ಪರಿಕೀರ್ತಿತಃ ।
ತಸ್ಮಾನ್ಮೇಧ್ಯತಮಂತ್ವಸ್ಯ ಮುಖಮುಕ್ತಂ ಸ್ವಯಂಭುವಾ ॥೯೨॥
ಉತ್ತಮಾಂಗೋದ್ಭವಾಜ್ಜ್ಯೈಷ್ಠ್ಯಾತ್ ಬ್ರಹ್ಮಣಶ್ಚೈವ ಧಾರಣಾತ್ ।
ಸರ್ವಸ್ಯೈವಾಸ್ಯ ಸರ್ಗಸ್ಯ ಧರ್ಮತೋ ಬ್ರಾಹ್ಮಣಃ ಪ್ರಭುಃ ॥೯೩॥
ತಂಹಿಸ್ವಯಂಭೂಃ ಸ್ವಾದಾಸ್ಯಾತ್ತಪಸ್ತಪ್ತ್ವಾದಿತೋ ಸೃಜತ್ ।
ಹವ್ಯಕವ್ಯಾಭಿವಾಹ್ಯಾಯ ಸರ್ವಸ್ಯಾಸ್ಯಚ ಗುಪ್ತಯೇ ॥೯೪॥
ಯಸ್ಯಾಸ್ಯೇನ ಸದಾಶ್ನಂತಿ ಹವ್ಯಾನಿ ತ್ರಿದಿವೌಕಸಃ ।
ಕವ್ಯಾನಿಚೈವ ಪಿತರಃ ಕಿಂಭೂತಮಧಿಕಂ ತತಃ ॥೯೫॥

ಭೂತಾನಾಂ ಪ್ರಾಣಿನಃ ಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವಿನಃ ।
ಬುದ್ಧಿಮತ್ಸು ನರಾಃ ಶ್ರೇಷ್ಠಾ ನರೇಷು ಬ್ರಾಹ್ಮಣಾಃ ಸ್ಮೃತಾಃ ॥೯೬॥
ಉತ್ಪತ್ತಿರೇವ ವಿಪ್ರಸ್ಯ ಮೂರ್ತಿರ್ಧರ್ಮಸ್ಯ ಶಾಶ್ವತೀ ।
ಸಹಿಧರ್ಮಾರ್ಥಮುತ್ಪನ್ನೋ ಬ್ರಹ್ಮಭೂಯಾಯ ಕಲ್ಪತೇ ॥೯೮॥
ಸರ್ವಂ ಸ್ವಂ ಬ್ರಾಹ್ಮಣಸ್ಯೇದಂ ಯತ್ಕಿಂಚಿಜ್ಜಗತೀಗತಂ।
ಶ್ರೈಷ್ಠ್ಯೇನಾಭಿಜನೇನೇದಂ ಸರ್ವಂ ವೈ ಬ್ರಾಹ್ಮಣೋಽರ್ಹತಿ ॥೧೦೦॥
ಸ್ವಮೇವ ಬ್ರಾಹ್ಮಣೋ ಭುಂಕ್ತೇ ಸ್ವಂ ವಸ್ತೇ ಸ್ವಂ ದದಾತಿ ಚ।
ಆನೃಂಶಸ್ಯಾದ್ಬ್ರಾಹ್ಮಣಸ್ಯಭುಂಜತೇ ಹೀತರೇಜನಾಃ ॥೧೦೧॥

ಪುರುಷಶರೀರದಲ್ಲಿ ಹೊಕ್ಕಳ ಮೇಲುಗಡೆಯು ಹೆಚ್ಚು ಪರಿಶುದ್ಧವು. ಅದರಲ್ಲಿಯೂ ಮುಖವು ಅತಿಶಯವಾದುದು. ಬ್ರಾಹ್ಮಣನು ಮುಖದಿಂದ ಹವ್ಯ ಕವ್ಯಗಳನ್ನು ದೇವತೆಗಳಿಗೂ ಪಿತೃಗಳಿಗೂ ತಲ್ಪಿಸಲಿಕ್ಕೆ ಬ್ರಹ್ಮನಿಂದ ಹುಟ್ಟಿದನು. ಅವನ ಬಾಯಿಂದಲೆ ದೇವಪಿತೃಗಳು ಹವ್ಯಕವ್ಯಗಳನ್ನುಣ್ಣುವು ದರಿಂದ ಅವನಿಗಾರು ಸಾಟಿ? ಭೂಮಿಯಲ್ಲಿರುವ ದ್ರವ್ಯವೆಲ್ಲ ಬ್ರಾಹ್ಮಣನದೆ. ಅವನು ಉಣ್ಣುವುದು ಉಡುವುದು ಕೊಡುವುದು ಎಲ್ಲ ಅವನದೆ. ಇನ್ನುಳಿದವರು ಅವನ ಬ್ರಾಹ್ಮಣನ ಸಾಧುತ್ವದಿಂದಲೆ ಬ್ರಾಹ್ಮಣನದಾದ ಸೊತ್ತನ್ನು ಉಣ್ಣುವರು ಉಡುವರು ಕೊಡುವರು. ಇತ್ಯಾದಿ

ಗುಣದಿಂದಲ್ಲದೆ ಹುಟ್ಟಿನಿಂದ ಬ್ರಾಹ್ಮಣ್ಯವನ್ನು ಹೇಳುವುದು ಯುಕ್ತಿ ವಿರೋಧವಾಗಿರುವುದರಿಂದ ಮನುಸ್ಮೃತಿಯ ಟೀಕಾಕಾರನಾದ ಕುಲ್ಲೂಕನು ದೈವ್ಯಾಶಕ್ತ್ಯಾ ಬ್ರಾಹ್ಮಣಾದಿ ನಿರ್ಮಾಣಂನ ನಿಶಂಕನೀಯಾತ್ ಬ್ರಾಹ್ಮಣೋಽಸ್ಯ ಮುಖಮಾಸೀತ್ ಇತಿ ಶ್ರುತಿಸಿದ್ಧತ್ವಾತ್ ಎಂದು ೩೧ನೆಯ ಶ್ಲೋಕದ ಟೀಕೆಯಲ್ಲಿ ಹೇಳುವನು.

ಮೇಲೆ ಪುರುಷಸೂಕ್ತವಿಚಾರದಲ್ಲಿ ಹೇಳಿದ ರೀತಿಯಿಂದ ಗುಣಕರ್ಮಾನುಸಾರವಾಗಿ ಚಾತುರ್ವರ್ಣ್ಯವನ್ನು ಹೇಳುವುದಕ್ಕೆ ಶ್ರುತಿಯು ಅಡ್ಡ ಬರುವುದಿಲ್ಲ. ಮನುಸ್ಮೃತಿಯು ಸೃಷ್ಟಿವಿವರವನ್ನು ಗುಣಕರ್ಮಾದಿಂದಲೆ ಮಾಡುತ್ತ ಬ್ರಾಹ್ಮಣನ ಹೆಚ್ಚಳಕ್ಕಾಗಿ ಜನ್ಮದಿಂದ ಹೆಚ್ಚುಗಾರಿಕೆಯನ್ನು ಸಾಧಿಸಲು ನಡುವೆ ಯತ್ನಿಸಿ ಕುಂಟುಬಿದ್ದದೆ. ಆ ಕುಂಟು ದೈವೀ ಶಕ್ತಿಯನ್ನವಲಂಬಿಸಿ ತಿದ್ದಲಾರದು. ಶ್ರುತಿಯು ಪ್ರತ್ಯಕ್ಷಾದಿ ಪ್ರಮಾಣಗಳ

ಗಗೋಚರವಾದ ವಿಷಯದಲ್ಲಿ ಪ್ರಮಾಣವಾಗುವುದು. ಜಗತ್ತಿನ ಆದಿಯಲ್ಲಿಯು ಪದಾರ್ಥಗಳನ್ನು ಜಕತ್ಸೃಷ್ಟಿಯಲ್ಲಿ ಅಂತರ್ಭಾವವಾಗುವ ಇಂದ್ರಿಯಾಂತಃಕರಣಗಳು ತಿಳಿಯಲಾರವಾಗಿ ಆ ವಿಷಯದಲ್ಲಿ ಶ್ರುತಿಯು ಪ್ರಮಾಣವಾಗಿದಪುದು. ದಮುಶಮಾದಿ ಗುಣಗಳಿಲ್ಲದೆ ಅವುಗಳಿಗೆ ವಿರುದ್ಧವಾದ ಗುಣಗಳಿಂದ ಕೂಡಿವವನೆಂದು ಪ್ರತ್ಯಕ್ಷವಾಗಿ ಕಂಡುಬರುವವನನ್ನು ಶ್ರುತಿಯು ಬ್ರಾಹ್ಮಣನೆಂದು ಹೇಳುವುದೆಂದರೆ ಅದನ್ನು ಅಪಹಾಸಮಾಡಿದಂತೆಯೆ ಸರಿ.

ಇದನ್ನೆಲ್ಲ ಖಂಡಿಸಿ ಜಗದಾರಾಧ್ಯನಾದ ಗುರುಬಸವನು ಯಥಾರ್ಥವನ್ನು ಹೇಳುವ ವಚನಗಳಿವು.

"ಉತ್ಪತ್ತಿ ಶುಕ್ರಶೋಣಿತದಿಂದಾದ ಲಜ್ಜೆ ಸಾಲದೆ? ಮತ್ತೆ ದುರಿತಂಗಳ ಹೊರುವ ಹೆಗ್ಗತನವೇತಕಯ್ಯ? ಮೃತ್ಯುವಿನ ಬಾಯಿಗೆ ಒಳಗಾಗಲೇತಕೆ? ಒತ್ತೊತ್ತೆಯ ಜನನವ ಗೆಲುವರೆ ಕರ್ತೃವ ಪೂಜಿಸು ನಮ್ಮ ಕೂಡಲಸಂಗಮದೇವನ" ಭಕ್ತಸ್ಥಳ ೧೫೯.

ಶ್ವಪಚೋಪಿಯಾದರೇನು? ಶಿವಭಕ್ತನೆ ಕುಲಜನೆಂಬೊ! ಹೊಲೆಗಂಡಲ್ಲದೆ ಪಿಂಡದ ನೆಲೆಗಾತ್ರವಿಲ್ಲ. ಜಲಬಿಂದುವಿನ ವ್ಯವಹಾರವೊಂದೆ. ಆಶೆಯಾಮಿಷರೋಷ ವಿಷಯಾದಿಗಳೆಲ್ಲ ಒಂದೆ. ಕುಲಜನೆಂಬುವುದಕ್ಕೆ ಆವುದು ದೃಷ್ಟಾಂತ? ಸಪ್ತಧಾತು ಸಮಂ ಪಿಂಡಂ ಸಮೋ ಯೋನಿ ಸಮುದ್ಭವಃ। ಆತ್ಮಾ ಜೀವೋ ಸಮುತ್ಪನ್ನಃ ವರ್ಣಾನಾಂ ಕಿಂ ಪ್ರಯೋಜನಂ ಎಂದುದಾಗಿ ಕಾಸಿ ಕಮ್ಮಾರನಾದ. ಬೀಸಿ ಮಡಿವಾಳನಾದ. ಹಾಸನಿಕ್ಕಿ ಸೂಲಿಗನಾದ. ವೇದವನೋದಿ ಹಾರುವನಾದ. ವರ್ಣದಲ್ಲಿ ಜನಿಸಿದರುಂಟೆ ಜಗದೊಳಗೆ? ಇದು ಕಾರಣ ಕೂಡಲಸಂಗಮದೇವ ಲಿಂಗಸ್ಥಲವನರಿತವನೆ ಕುಲೀನ ಕುಲಜನು.

ಕೊಲ್ಲುವವನೆ ಮಾದಿಗನು. ಹೊಲಸು ತಿನ್ನುವನೆ ಹೊಲೆಯನು. ಕುಲವೇನೊ? ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗಮದೇವರ ಶರಣರೆಲ್ಲ ಕುಲಜರು.

ವ್ಯಾಸ ಬೋಯಿತಿಯ ಮಗ. ಮಾರ್ಕಂಡೇಯ ಮಾತಂಗಿಯ ಮಗ. ಮಂಡೋದರಿ ಕಪ್ಪೆಯ ಮಗಳು ಕುಲವನರಸದಿರೆಂಬೊ! ಕುಲದಿಂದ ಮುನ್ನೇನಾದಿರೆಂಬೊ! ಸಾಕ್ಷಾದಗಸ್ತ್ಯ ಕಬ್ಬಿಲದುರ್ವಾಸ ಮಚ್ಚಿಗ ಕಶ್ಯಪ

ಕರ್ಮಾರ. ಕೌಂಡಿನ್ಯ ನೆಂಬವ ಋಷಿ ಮೂರು ಲೋಕವರಿಯಲು ನಾಯಿಂದ ಕಾಣಿ ನಮ್ಮ ಕೂಡಲಸಂಗನ ವಚನವಿಂತೆಂದುದು.

ಆದುದರಿಂದ ವರ್ಣವು ಗತಕರ್ಮಾನುಸಾರಿಯೆಂಬುದು ತ್ರಿಭುವನ ಗುರುಬಸವನ ಸಿದ್ಧಾಂತವು. ಅದರಂತೆಯೆ ಪುರುಷಸೂಕ್ತವು. ಅದರಂತೆಯೆ ಮನುಸ್ಮೃತಿಯ ಸೃಷ್ಟಿಪ್ರಕರಣದ ಉಪಕ್ರಮವು. ಆದಾವ ಬಳಿಕ ಮನುವು ಬ್ರಾಹ್ಮಣನನ್ನು ಜಾತಿಯಿಂದ ಮೇಲು ಮಾಡುವ ಯತ್ನವು ಸ್ವಗ್ರಂಥಕ್ಕೂ ಯುಕ್ತಿಗೂ ಶ್ರುತಿಗೂ ವಿರುದ್ಧವು.

ಈ ಗುಣಕೃತ ಜಾತಿಯು ವೀರಶೈವ ಲಿಂಗವಂತರಲ್ಲಿ ದೀಕ್ಷಾಪ್ರಭಾವದಿಂದ ಅಳಿವುದೆಂಬ ಸಿದ್ಧಾಂತವಿರುತ್ತದೆ.

ಮುಂದೆ ಸಾಗುವುದು.

---

# ಆಗಮ ಗ್ರಂಥಗಳ ಮುದ್ರಣದ ಅವಶ್ಯಕತೆ.

(ಶ್ರೀಯುತ — ಕೆ. ಚನ್ನಮಲ್ಲಪ್ಪ ಶಿರಾಳಕೊಪ್ಪ)

ವೀರಶೈವ ಧರ್ಮವು ಲೋಕದಲ್ಲಿ ಶ್ರೇಷ್ಠವಾದುದೆಂದು ಶಾಸ್ತ್ರವು ಹೇಳುತ್ತಿರುವುದು ಸರ್ವರಿಗೂ ತಿಳಿದ ವಿಷಯವೇ ಆಗಿದೆ. 'ಏಕೇನ ಜನ್ಮನಾ ಮುಕ್ತಿರ್ವೀರಾಣಾಂತುಮಹೇಶ್ವರಿ' ಈ ವಾಕ್ಯದ ಪ್ರಕಾರ ವೀರಶೈವರಿಗೆ ಒಂದೇ ಜನ್ಮದಲ್ಲಿ ಮುಕ್ತಿಲಭಿಸುವುದೆಂಬುದರಿಂದಲೂ, ಇದರ ಪ್ರಾಶಸ್ತ್ಯವು ಗೊತ್ತಾಗಬಹುದು. ಆದ್ದರಿಂದ ಜಗತ್ತಿನ ಧರ್ಮಗಳಲ್ಲಿ ಇದು ಪರಮ ಧರ್ಮವೆನಿಸಿಕೊಂಡಿರುವುದು. ವ್ಯಾಸ ಋಷಿಗಳೂ ಕೂಡಾ 'ಶೈವೋಪಿ ಪರಮೋ ಧರ್ಮಃ ಶ್ರೇಷ್ಠಾನುಷ್ಠಾನ ಶಬ್ದತಃ ಎಂಬದಾಗಿ ಹೇಳಲಿಕ್ಕಾರಂಭಿಸಿ, 'ಧರ್ಮಗಳಲ್ಲಿ ಪರಮಧರ್ಮ, ಅಪರಮಧರ್ಮ, ಎಂದು ಎರಡು ವಿಧ. ಅಪರಮ ಧರ್ಮವೆಂದರೆ ಸಾಮಾನ್ಯಧರ್ಮ. ಇದು ವೇದ, ಉಪನಿಷತ್, ಪುರಾಣ ಇವುಗಳಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುದು. ಪರಮ ಧರ್ಮವೆಂದರೆ ಶ್ರೇಷ್ಠವಾದ ಧರ್ಮ. ಇದು ವೇದ, ಪುರಾಣಾದಿಗಳಲ್ಲಿ ಸ್ವಲ್ಪವಾಗಿಯೂ, ಆಗಮಗಳಲ್ಲಿ ವಿಶೇಷವಾಗಿಯೂ ಹೇಳಲ್ಪಟಿರುವುದು. ಆಗಮಗಳಲ್ಲಿಯಾದರೂ ಎರಡು ವಿಧ. ಒಂದನೆಯದು ಶ್ರೌತ, ಎರಡನೆಯದು ಸ್ವತಂತ್ರ.

ಶ್ರೌತವೆಂಬುದು ವೇದಧರ್ಮಾನುಸಾರವಾದ ಕೆಲವು ವಿಷಯಗಳನ್ನು ತಿಳಿಸುವುದು. ಸ್ವತಂತ್ರವೆಂಬುದು ವೇದದ ಮುಖ್ಯ ಭಾಗವನ್ನು ಸಂಗ್ರಹಿಸಿ ಮೋಕ್ಷ ಸಾಧನೋಪಾಯಗಳನ್ನು ಸ್ವಂತವಾಗಿ (ಇತರ ಪ್ರಮಾಣಾಪೇಕ್ಷೆಯಿಲ್ಲದೆ) ಬೋಧಿಸುವುದು. ಈ ಸ್ವತಂತ್ರಗಳಾದ ಆಗಮಗಳಾದರೂ ದಿವ್ಯಾಗಮಂಗಳೆನಿಸಿಕೊಂಡು ಇಪ್ಪತ್ತೆಂಟು ಇರುವವು. ಇವುಗಳಲ್ಲಿ ಶಿವಾಗಮ, ರುದ್ರಾಗಮಗಳೆಂದು ಎರಡು ವಿಧ. ಶಿವಾಗಮಗಳು ಹತ್ತು:— ಕಾಮಿಕ, ಯೋಗಜ, ಚಿಂತ್ಯ, ಕಾರಣ, ಅಜಿತ, ದೀಪ್ತ, ಸೂಕ್ಷ್ಮ, ಸಹಸ್ರ ಮತ್ತು ಅಂಶುಮದಾಗಮ ಇವೇ. ರುದ್ರಾಗಮಗಳು ೧೮. ವಿಜಯಾದಿ ವಾತೂಲಾಂತಗಳು. ಈ ಸ್ವತಂತ್ರಾಗಮಗಳಲ್ಲಿ ಹೇಳಲ್ಪಟ್ಟ ಪರಧರ್ಮದಿಂದ ಕೈವಲ್ಯವು ಸಿದ್ಧಿಸುವುದು" ಹೀಗೆ ಹೇಳಿರುವರು. ವೀರಶೈವರು ಹೇಳುವ ಪ್ರಕಾರ ವ್ಯಾಸ ಋಷಿಗಳು ಹೇಳಿರುವುದರಿಂದ ಕಾಮಿಕಾದಿ ವಾತೂಲಾಂತಗಳು ಪ್ರಬಲಗಳಾದ ಪ್ರಮಾಣಾಗಮಗಳೆಂಬುದು ಸಿದ್ಧವಾಗುವದು. ಹೀಗಿರುವಲ್ಲಿ ವೀರಶೈವರು ತಮ್ಮ ಜ್ಞಾನಭಾಂಡಾಗಾರವಾದ ಶಿವಾಗಮಗಳಲ್ಲಿ ಯಾವುವನ್ನು ಸುಲಭವಾಗಿ ಸಿಕ್ಕುವಂತೆ ಅಥವಾ ಎಲ್ಲರೂ ಓದಿಕೊಳ್ಳುವಂತೆ ಮುದ್ರಿಸಿ ಪ್ರಸಿದ್ಧಪಡಿಸಿರುವರಾ? ಮೇಲೆ ಕಂಡ ಹತ್ತು ಶಿವಾಗಮಗಳನ್ನು ಸಂಪೂರ್ಣವಾಗಿ ನನಗೆ ಒದಲಿಕ್ಕೆ ಕೊಡುವ ಮಹನೀಯರು ಈಗ ಯಾರು ಇರುತ್ತಾರೆ? ಆದರೆ ಸೂಕ್ಷ್ಮಾಗಮದ ಹತ್ತು ಪಟಲಗಳನ್ನು ಮಾತ್ರ ಕನ್ನಡದಲ್ಲಿ ಹುಬ್ಬಳ್ಳಿ ಮೂರುಸಾವಿರ ಮಠದ ಶ್ರೀ ಜಗದ್ಗುರು ಮಹಾಸ್ವಾಮಿಗಳವರೂ ಮಹಾರಾಷ್ಟ್ರದಲ್ಲಿ ರಾ. ಬ. ವಾರದ ಮಲ್ಲಪ್ಪನವರೂ ಮುದ್ರಿಸುವುದಕ್ಕೆ ಕಾರಣರಾಗಿರುವರು. ಉಳಿದವುಗಳೆಲ್ಲಿರುವವು? ಯಾರು ಓದುತ್ತಿದ್ದಾರೆ? ಎಂಬುದು ಪ್ರಕಟವಿಲ್ಲದಂತೆ ಆಗಿದೆ. ಇದರ ಮೇಲಿಂದ ವೀರಶೈವರು ತಮ್ಮ ಮುಖ್ಯವಾದ ಜ್ಞಾನಭಾಂಡಾಗಾರ ದ್ರವ್ಯವನ್ನು ತಿಳಿಯದೆ ಇತರರ ದ್ರವ್ಯದಿಂದ ತಮ್ಮ ಕಾಲಹರಣೆಯನ್ನು ಮಾಡುತ್ತಿರುವರೆಂಬುದು ಸ್ಪಷ್ಟವಾಗುವದಿಲ್ಲವೇ?

ಈ ಕಾಲದಲ್ಲಿ ಪಾಶ್ಚಾತ್ಯರನೇಕರು ದೇವಜ್ಞಾನ ಎಂದರೆ ವಿಶ್ವಕರ್ತನಜ್ಞಾನವನ್ನು (ಇದನ್ನೇ ಧರ್ಮಜ್ಞಾನವೆಂದು ಕರೆವರು) ಹೊಂದಬೇಕೆಂದು ಬಯಸಿ, ಧಾರ್ಮಿಕ ವಿಚಾರದ ತರ್ಕ ಅಥವಾ ಪರಿಶೋಧನೆಗಳನ್ನು ನಡೆಸುತ್ತಿರುವರು. ಧರ್ಮಜ್ಞಾನದಲ್ಲಿ ವಿಶೇಷಾಸಕ್ತರಲ್ಲದವರೂ ಕೂಡ ಧಾರ್ಮಿಕವಿಚಾರಮಾಡುತ್ತಿರುವಲ್ಲಿ ಧರ್ಮನಿಷ್ಠರೆನಿಸಿಕೊಂಡು, ಧರ್ಮಾಚರಣೆಯ

ಲ್ಲಿದ್ದು, ಪರಮಧರ್ಮಿಗಳೆನಿಸಿಕೊಂಡ ವೀರಶೈವರು, ತಮ್ಮ ಧರ್ಮಗ್ರಂಥಗಳನ್ನು ಪ್ರಸಾರಪಡಿಸುವುದರಲ್ಲಿ ಹಿಂದಾಳುಗಳಾಗಿರುವರೆಂಬುದನ್ನು ತಿಳಿವುದು ವಿಷಾದಕರವಲ್ಲವೇ? ಕ್ರೈಸ್ತಧರ್ಮಿಗಳು ತಮ್ಮ ಧರ್ಮವನ್ನು ಹರಡುವ ಬಗ್ಗ್ಯಾಗಿ ಹಿಂದುಸ್ಥಾನದಲ್ಲಿ ಇಂಗ್ಲಿಷಶಾಲೆಗಳನ್ನೂ ಪಾದರಿಗಳನ್ನೂ ಏರ್ಪಡಿಸಿ ಅವರ ಮೂಲಕ ಬೈಬಲಿನ ಅಂಶಗಳನ್ನು ಸಾಮಾನ್ಯರಿಗೂ ತಿಳಿಯುವಂತೆ ಏರ್ಪಡಿಸುವುದಕ್ಕಾಗಿ ಲಕ್ಷ ಗಟ್ಟಲೆ ರೂಪಾಯಿಗಳನ್ನು ಖರ್ಚುಮಾಡುತ್ತಿರುವುದನ್ನು ನೋಡಿಯೂ, ವೀರಶೈವ ಶ್ರೀಮಂತರು ಸ್ವಧರ್ಮಾಭಿಮಾನದ ದೆಸೆಯಿಂದ ಮೇಲೆ ಕಂಡ ಆಗಮಾದಿಗಳನ್ನೂ ಹೊರಗೆಡವಲು ಯತ್ನಮಾಡದಿರುವುದು ವೀರಶೈವಸಮಾಜದ ದೌರ್ಭಾಗ್ಯವಲ್ಲವೇ? ಪೂರ್ವದಲ್ಲಿ ಒಬ್ಬೊಬ್ಬ ವರ್ತಕರು ಗ್ರಂಥೋದ್ಧಾರಕ್ಕೆ ಸಹಾಯ ಮಾಡಿದ ವಿಷಯಗಳು ಈಗಲೂ ನೆನಪಿಗೆ ಬರುವಂತಿವೆ. ಕೋರಾವಾರದ ಬಸವಪ್ಪನವರು ಖರ್ಚುಕೊಟ್ಟು ಬರೆಸಿದರೆಂದು ಕುಮಾರವಿಜಯ ವಿಳಾಸವೆಂಬೊಂದು ಗ್ರಂಥವು ಬರೆಯಲ್ಪಟ್ಟಿರುವುದು. ಇದರಂತೆ ಅನೇಕ ಮಹನೀಯರು ಗ್ರಂಥಗಳನ್ನು ಬರೆಸಿದ ಉದಾಹರಣೆಗಳು ವಿಶೇಷವಾಗಿರುತ್ತವೆ. ಅದು ಹಾಗಿರಲಿ. ಇತ್ತೀಚೆಗೆ ರಾ॥ ಬ॥ ವಾರದ ಮಲ್ಲಪ್ಪನವರು ಸುಮಾರು ೪೦-೫೦ ಗ್ರಂಥಗಳನ್ನು ಮುದ್ರಣ ಪಡಿಸಲಿಕ್ಕೆ ಶಾಸ್ತ್ರಿಗಳೇ ಮುಂತಾದವರನ್ನು ನೇಮಿಸಿಕೊಂಡು ಸಾವಿರಗಟ್ಟಲೆಯಾಗಿ ದ್ರವ್ಯವನ್ನು ಖರ್ಚುಮಾಡಲಿಲ್ಲವೇ? ಕೆಲವು ಜನ ಇವರಂತೆ ಇತರ ಶ್ರೀಮಂತರು ಅಥವಾ ಧರ್ಮಾಭಿಮಾನಿಗಳು ಈಚೆಗೆ ಗ್ರಂಥೋದ್ಧರಣವೆಂಬ ಧರ್ಮಕಾರ್ಯವನ್ನು ಮಾಡದಿರುವುದು ವಿಷಾದಕರವಾಗಿದೆ. ಈಗ ಶಿವಧರ್ಮಾಭಿವೃದ್ಧಿಯ ಕಳಕಳಿಯುಳ್ಳ ಶ್ರೀಮಂತರು ಬಹು ಮುಖ್ಯವಾದ ಹತ್ತು ಶಿವಾಗಮಗಳನ್ನು ಮುದ್ರಿಸುವುದಕ್ಕೆ ಯಾಕೆ ಅನುಕೂಲರಾಗಬಾರದು? ಸಿರಸಂಗಿಯ ಲಿಂಗರಾಜರು ತಮ್ಮ ಸರ್ವಸ್ವವನ್ನೂ ಯಾದಗಿರಿ ಶಂಕರಣ್ಣನವರು ಒಂದೂವರೆ ಲಕ್ಷ ರೂಪಾಯಿಗಳನ್ನೂ ವಿದ್ಯಾಖಾತೆಗೆ ಒಪ್ಪಿಸಲಿಲ್ಲವೇ? ಇವರ ಅನುಕರಣವನ್ನು ಈಗಿನ ಶ್ರೀಮಂತರು ಮಾಡುವುದರಲ್ಲಿ ತಪ್ಪೇನಿರುವುದು?

ವೀರಶೈವ ಮತದ ಜಗದ್ಗುರುಗಳೆನಿಸಿಕೊಂಬ ಮಹಾಸ್ವಾಮಿಗಳಾದರೂ ಮತೋದ್ಧಾರಣ ದೃಷ್ಟಿಯಿಂದ ಈ ಕಾರ್ಯಕ್ಕೆ ಏಕೆ ಕೈ ಹಾಕಬಾರದು? ಶ್ರೀ ಶಂಕರಾಚಾರ್ಯರು ಎಷ್ಟು ಗ್ರಂಥಗಳನ್ನು ಪ್ರಕಟಿಸಿದರು? ತೋಂಟದ ಸಿದ್ಧಲಿಂಗಸ್ವಾಮಿಗಳು ಎಷ್ಟು ಗ್ರಂಥಗಳ ಪ್ರಕಟನದಲ್ಲಿ ಅಂಗವನ್ನು ವಹಿ

ಸಿದ್ಧಾರೆ? ಈ ಮುಂತಾದ ವಿಷಯುಗಳನ್ನು ಯೋಚಿಸಿಕೊಂಡು ಇವರೂ ಸಾಧ್ಯವಾದಷ್ಟು ಪ್ರಯತ್ನಮಾಡುವುದಾದರೆ ಆಗಮುಗಳ ಪ್ರಕಟನದ ಈ ಧರ್ಮೋನ್ನತಿಯ ಕಾರ್ಯವು ಬಹಳ ದೊಡ್ಡದಾಗುವುದೇ? ಎಂದಿಗೂ ಇಲ್ಲ.

ವೀರಶೈವರ ಗ್ರಂಥಪ್ರಸಾರಣ ಸಂಘಗಳು ಕೆಲವು ಉದಯವಾಗಿ ಆಗಲೇ ಅಸ್ತವನ್ನು ಹೊಂದಿದುವು. ಇನ್ನಾದರೂ ಒಂದನ್ನು ಸ್ಥಾಪಿಸಿ ಇದಕ್ಕೆ ಒಂದು ಶಾಶ್ವತ ನಿಧಿಯಿರುವಂತೆ ಏರ್ಪಡಿಸುವುದು ವೀರಶೈವ ಮಹಾಜನಂಗಳಿಗೊಂದು ಕಷ್ಟವಾದ ಕೆಲಸವೇ?

ವೀರಶೈವ ಶಾಸ್ತ್ರಿಗಳು ಧರ್ಮೋನ್ನತಿಯ ಮತ್ತು ಧರ್ಮರಕ್ಷಣೆಯ ಬಗ್ಗೆ ಏಕೆ ಮನಗೊಡುವುದಿಲ್ಲ? ತಾಡವಾಲೆಯಲ್ಲಿರುವ ಇಂಥಾ ಆಗಮುಗಳೇ ಮೊದಲಾದ ತಮಗೆ ದೊರೆತಷ್ಟು ಗ್ರಂಥಗಳನ್ನು ಬೇರೆಯಾಗಿ ಬರೆದು ಮುದ್ರಿಸುವುದಕ್ಕೆ ಏಕೆ ಪ್ರಯತ್ನಿಸಬಾರದು? ವೀರಶೈವ ಗ್ರಂಥಗಳಲ್ಲಿ ಕ್ರಿಯಾಸಾರ, ಅನುಭವಸೂತ್ರ, ವಿಶೇಷಾರ್ಥ ಪ್ರಕಾಶಿಕೆ ಮುಂತಾದವು ಕನ್ನಡ ತಾತ್ಪರ್ಯವಿಲ್ಲದೆ ಸಂಸ್ಕೃತದಲ್ಲಿ ಮೂಲಮಾತ್ರವಾಗಿವೆ. ಇವುಗಳನ್ನು ಹೊರಗೆ ತರಲಿಕ್ಕೆ ಶಾಸ್ತ್ರಿವರ್ಗದವರೇಕೆ ಉದಾಸೀನರಾಗಿರುವರು? ಇವರು ಸಂಘವನ್ನು ಸ್ಥಾಪಿಸಿಕೊಂಡು ಈ ಬಗ್ಗೆ ಪ್ರಯತ್ನಪಟ್ಟರೆ ಬಹಳ ಉತ್ತಮವಾಗುವುದು.

ಇನ್ನು ಮೇಲೆ ವೀರಶೈವ ಗ್ರಂಥಪ್ರಸಾರಕ್ಕಾಗಿ ಮುಂದಾಳುಗಳ ಗಮನವು ಕೊಡಲ್ಪಡಲೆಂದೂ ಈ ಕಾಲದಲ್ಲಿ ಪಾಶ್ಚಾತ್ಯರು ತಮ್ಮ ಧರ್ಮಕಾರ್ಯಗಳಲ್ಲಿ ವಾಚನಾಲಯ, ಪುಸ್ತಕಾಲಯ ಮೊದಲಾದವುಗಳನ್ನೇರ್ಪಡಿಸುವಂತೆ ಇವರೂ ಇದೊಂದು ಮುಖ್ಯವಾದ ಧರ್ಮಕಾರ್ಯವೆಂದೂ ತಿಳಿಯುವವರಾಗಲೆಂದು ಪ್ರಾರ್ಥಿಸುತ್ತೇನೆ.



# ಷಟ್‌ಸ್ಥಲ ಶಾಸ್ತ್ರದ ಧ್ಯೇಯ.

(ಲೇಖಕ:— ರಾ|| ಸಾ|| ಫ. ಗು. ಹಳಕಟ್ಟಿ.)

ಷಟ್‌ಸ್ಥಲ ಶಾಸ್ತ್ರವು ವೀರಶೈವ ಧರ್ಮದ ವೈಶಿಷ್ಟ್ಯವಾಗಿರುತ್ತದೆ. ಈ ಷಟ್‌ಸ್ಥಲದ ತತ್ವಗಳನ್ನೇ ವೀರಶೈವರಲ್ಲಿರುವ ಕಾವ್ಯಗಳೂ, ವಚನಗಳೂ, ಪುರಾಣಗಳೂ, ಧಾರ್ಮಿಕ ತಾತ್ವಿಕ ಗ್ರಂಥಗಳೂ, ವಿವೇಚಿಸುತ್ತವೆ. ಯಾವನಿಗೆ ಷಟ್‌ಸ್ಥಲದ ತತ್ವಗಳ ಜ್ಞಾನವು ಚನ್ನಾಗಿ ಆಗಿದೆಯೋ ಅವನು ವೀರಶೈವರಲ್ಲಿ ಅತ್ಯಂತ ಗಣ್ಯನೆಂದೆನಿಸಿಕೊಳ್ಳುತ್ತಾನೆ. ಅವರಲ್ಲಿಯ ಶ್ರೇಷ್ಠ ಮಠಾಧಿಕಾರಿಗಳಿಗೆ ಷಟ್‌ಸ್ಥಲ ಬ್ರಹ್ಮಿಗಳೆಂತಲೂ ಅವರಲ್ಲಿಯ ಪೀಠಾಧಿಪತಿಗಳಿಗೆ ಷಟ್‌ಸ್ಥಲ ಸ್ಥಾಪನಾಚಾರ್ಯರೆಂತಲೂ ಬಿರುದುಗಳಿರುತ್ತವೆ. ಈ ಮೇರೆಗೆ ವೀರಶೈವ ಧರ್ಮದಲ್ಲಿ ಷಟ್‌ಸ್ಥಲಕ್ಕೆ ಅತ್ಯಂತ ಮಹತ್ವದ ಸ್ಥಾನವು ಕೊಡಲ್ಪಟ್ಟಿರುತ್ತದೆ.

ಈ ಷಟ್‌ಸ್ಥಲಗಳ ಉದ್ದೇಶವು ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ವ್ಯವಹರಿಸಿದರೆ ಲಿಂಗಾಂಗ ಸಾಮ್ಯಶ್ಯತ್ವವು ದೊರಕೊಂಬುದನ್ನು ವಿವೇಚಿಸುವುದೇ ಇರುತ್ತದೆ. ಇದರಲ್ಲಿ ಕೇವಲ ತಾರ್ಕಿಕ ಮತ್ತು ಬೌದ್ಧಿಕ ವಿಚಾರಗಳ ಪ್ರಾಗಲ್ಭ್ಯವು ಇರದೆ ಮನುಷ್ಯನ ಆಚರಣೆಯ ವಿವೇಚನೆಯೇ ಮುಖ್ಯವಾಗಿರುತ್ತದೆ. ಈ ಶಾಸ್ತ್ರದಲ್ಲಿ ಮನುಷ್ಯನು ಜಗತ್ತಿನಲ್ಲಿ ಹ್ಯಾಗೆ ಆಚರಿಸತಕ್ಕದ್ದು ಈ ವಿಷಯ ವಿವೇಚನೆಯೇ ಇದರಲ್ಲಿ ಬಂದಿರುತ್ತದೆ. ಧರ್ಮವಿಷಯದಲ್ಲಿ ಇಂಥ ವಿಷಯಗಳು ಕಡಿಮೆ ತರಗತಿಯವುಗಳೆಂದು ಎಂದೂ ತಿಳಿಯಲಿಕ್ಕೆ ಬರಲಾರದು. ಹಿಂದೂ ಧರ್ಮಗ್ರಂಥಗಳಲ್ಲಿ ಭಗವದ್ಗೀತೆಗೆ ಇಷ್ಟು ಮಹತ್ವವು ಯಾಕೆ ಕೊಡಲ್ಪಡುತ್ತಿದೆ ಎಂಬದನ್ನು ನಾವು ವಿಚಾರ ಮಾಡಿದರೆ ಇದರಲ್ಲಿ ಮನುಷ್ಯನು ತನ್ನ ಆಯುಷ್ಯ ಕ್ರಮದಲ್ಲಿ ಹ್ಯಾಗೆ ವರ್ತಿಸಬೇಕೆಂಬದರ ಬಗ್ಗೆ ಅತ್ಯುತ್ತಮ ವಿವೇಚನೆಯು ಇದ್ದ ಮೂಲಕವಾಗಿಯೇ ಈ ಗ್ರಂಥಕ್ಕೆ ಹಿಂದೂ ವಾಙ್ಮಯದಲ್ಲಿ ಅತ್ಯಂತ ಮಹತ್ವದ ಸ್ಥಾನವು ಬಂದಿರುತ್ತದೆ. ಹಿಂದುಸ್ತಾನದಲ್ಲಿ ಅನೇಕ ತತ್ವಜ್ಞಾನಿಗಳು ಹುಟ್ಟಿ ಅವರು ವೇದಾಂತದ ಬಗ್ಗೆ ವಿದ್ವತ್ಪೂರ್ಣವಾದ ಗ್ರಂಥಗಳನ್ನು ಬರೆದಿರಬಹುದು. ಅಥವಾ ಶಂಕರಾಚಾರ್ಯ ಮಧ್ವಾಚಾರ್ಯರಂತೆ ಅನೇಕರು ತಮ್ಮ ಉಚ್ಚ ಸಿದ್ಧಾಂತಗಳನ್ನು ಪ್ರತಿಪಾದಿಸಿರಬಹುದು. ಆದರೆ ಮನುಷ್ಯನ ಆಚರಣೆ, ರೀತಿ ನಡತೆ ಇವುಗಳ ಬಗ್ಗೆ ತಾತ್ವಿಕ ರೀತಿಯಿಂದ ವಿಚಾರ ಮಾಡಿ ಅವನು ಜಗತ್ತಿನಲ್ಲಿ ಹ್ಯಾಗೆ

ವರ್ತಿಸಬೇಕೆಂಬುದನ್ನು ವಿವೇಚಿಸಿದಂಥವರ ಯೋಗ್ಯತೆಯು ಕಡಿಮೆ ತರದ್ದಲ್ಲ. ಈ ದೃಷ್ಟಿಯಿಂದ ಷಟ್‌ಸ್ಥಲ ಶಾಸ್ತ್ರವು ಅತ್ಯಂತ ಮಹತ್ವದ್ದಿರುತ್ತದೆ.

ಆಚರಣೆಗಳು ಧಾರ್ಮಿಕ ತತ್ವಗಳ ಮೇಲೆ ಅವಲಂಬಿಸಿದ್ದು ಅವು ಆ ತತ್ವಗಳನ್ನು ಕೂಡಲೆ ಮನಸ್ಸಿಗೆ ತರುವಂಥವಿರಬೇಕು. ಹೀಗೆ ಯಾವ ಆಚರಣೆಗಳು ಇರುತ್ತವೋ ಅವುಗಳೇ ಉಪಯುಕ್ತವಾದವುಗಳು. ವೀರಶೈವ ಷಟ್‌ಸ್ಥಲ ಸ್ಥಾಪಕರು ಈ ಬಗೆಯಾಗಿ ಅವುಗಳ ಸ್ವರೂಪವನ್ನು ನಿರ್ಮಿಸಿದ್ದು ತೋರಿಬರುತ್ತದೆ. ಆಚರಣೆಗಳ ಸ್ವರೂಪವು ಹೀಗೆ ಇರದೆ ಹೋದರೆ ಅವುಗಳ ಪರಿಣಾಮಗಳು ಮನುಷ್ಯನ ಮನಸ್ಸಿನ ಮೇಲೆ ಮತ್ತು ನಡತೆಯ ಮೇಲೆ ಏನೂ ಉಂಟಾಗಲಾರವು. ಅಜ್ಞ ಜನರು ಇಂಥವುಗಳನ್ನು ಬರೇ ಅಂಧ ಶ್ರದ್ಧೆಯಿಂದ ಆಚರಿಸುತ್ತ ಹೋಗುವರು. ಈ ಪ್ರಕಾರ ಆಚರಿಸುವವರು ಧಾರ್ಮಿಕ ವರ್ಗದವರ ಮೋಸಗಾರಿಕೆಗೆ ಮಾತ್ರ ಒಳಗಾಗಿ ಅವರಲ್ಲಿ ಧರ್ಮಮೂಢತೆಯು ಬೆಳೆಯುತ್ತ ಹೋಗುವದು. ಈ ಸ್ಥಿತಿಯು ಹಿಂದೂ ಧರ್ಮದ ಇತಿಹಾಸದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಒದಗಿದ್ದು ತೋರಿಬರುತ್ತದೆ. ಹಿಂದೂ ಧರ್ಮದಲ್ಲಿ ವೇದಗಳೂ, ಉಪನಿಷತ್ತುಗಳೂ ಬಹು ಮಹತ್ವವಾದವುಗಳಿದ್ದು ಅವುಗಳು ಹಿಂದೂ ಧರ್ಮದ ತಿರುಳನ್ನು ಬಹು ಸ್ಫುಟವಾದ ರೀತಿಯಿಂದ ವಿವರಿಸಿದರೂ ಆ ಕಾಲದಲ್ಲಿ ರೂಢವಾದ ಯಜ್ಞಾದಿ ಹಿಂಸಾಕರ್ಮಗಳು ಅದಕ್ಕೆ ಬರಬರುತ್ತ ಗ್ಲಾನಿಯನ್ನು ತಂದವು. ಹೀಗೆಯೇ ಆರಂಭದಲ್ಲಿ ಹಿಂದೂ ಸಮಾಜದಲ್ಲಿ ಗುಣ ಕರ್ಮಗಳ ಪ್ರಕಾರ ಸಮಾಜದ ರಚನೆಯು ಉತ್ಪನ್ನವಾದರೂ ಹಿಂದುಗಡೆ ಇದರಲ್ಲಿ ಜಾತಿಯ ಕೃತ್ರಿಮತನವೂ, ಪುರೋಹಿತ ವರ್ಗದವರ ಸ್ವಾರ್ಥತೆಯೂ ಕೂಡಿಕೊಂಡದ್ದರಿಂದ ಇಲ್ಲದ ಭೇದಗಳು ಉತ್ಪನ್ನವಾಗಿ ಸಮಾಜದ ಅವ್ಯವಸ್ಥೆಗೆ ಕಾರಣವಾಯಿತು. ಇದೇ ಪ್ರಕಾರ ಜೈನ ಬೌದ್ಧರ ಕಾಲದಲ್ಲಿ ನೀತಿ ಮತ್ತು ಭಕ್ತಿಗೆ ಪ್ರಾಧಾನ್ಯವು ಕೊಡಲ್ಪಟ್ಟಿದ್ದರೂ ಇದರೊಡನೆ ಮೂರ್ತಿಪೂಜೆಯು ಉದ್ಭವಿಸಿದ್ದರಿಂದ ಸಮಾಜದಲ್ಲಿ ಹುರಳಿಲ್ಲದ ಪೂಜಾದಿ ಕರ್ಮಗಳು ಬಹು ದೊಡ್ಡ ಪ್ರಮಾಣದಿಂದ ಪ್ರಾರಂಭವಾದವು. ಮತ್ತು ಈ ಸ್ಥಿತಿಯು ಹಿಂದೂ ಸಮಾಜದಲ್ಲಿ ಈಗ್ಗೆಯೂ ಸಹ ಕಂಡು ಬರುತ್ತದೆ. ಈ ಬಗೆಯ ಅವ್ಯವಸ್ಥೆಯು ಧಾರ್ಮಿಕ ತತ್ವ ಮತ್ತು ಆಚರಣೆ ಇವುಗಳಲ್ಲಿರತಕ್ಕ

ಪರಸ್ಪರ ಸಂಬಂಧವು ತಪ್ಪಿ ಹೋಗುವದರಿಂದ ಉಂಟಾಗುತ್ತದೆ. ಇದೇ ಧರ್ಮದ ಮತ್ತು ಸಮಾಜದ ಅವನತಿಗೆ ಕಾರಣವಾಗುತ್ತದೆ.

ಷಟ್‌ಸ್ಥಲ ಶಾಸ್ತ್ರಜ್ಞರು ಮೇಲ್ಕಂಡ ಬಗೆಯಾಗಿ ಅವ್ಯವಸ್ಥೆಯಾಗ ಬಾರದೆಂದು ಷಟ್‌ಸ್ಥಲದ ಯೋಜನೆಯನ್ನು ಮಾಡಿದ್ದು ತೋರಿ ಬರುತ್ತದೆ. ಈ ಯೋಜನೆಯು ಅಪೂರ್ವವಾದದ್ದದೆ. ಇದರಂತೆ ಬೇರೆ ಯಾವ ಹಿಂದೂ ಸಮಾಜದಲ್ಲಿಯೂ ತೋರಿ ಬರುವದಿಲ್ಲ. ಈ ಷಟ್‌ಸ್ಥಲವೇ ವೀರ ಶೈವ ಧರ್ಮದ ವೈಶಿಷ್ಟ್ಯವಾಗಿರುತ್ತವೆ.

ಷಟ್‌ಸ್ಥಲಶಾಸ್ತ್ರದಲ್ಲಿ ಸಾಮಾನ್ಯವಾಗಿ ಮೂರು ಭಾಗಗಳನ್ನು ಮಾಡ ಬಹುದಾಗಿದೆ. ೧. ಕರಣ ಹಸಿಗೆಯ ಜ್ಞಾನ ೨ ಷಟ್‌ಸ್ಥಲದ ಮೂಲ ತತ್ವಗಳು ೩ ಅಷ್ಟಾವರಣಗಳ ಜ್ಞಾನ. ಷಟ್‌ಸ್ಥಲಗಳ ವಾಙ್ಮಯವು ಬಹು ತರವಾಗಿ ಈ ಮೂರು ವಿಷಯಗಳನ್ನು ಒಳಕೊಂಡಿರುತ್ತದೆ.

ಇವುಗಳಲ್ಲಿ ಕರಣಹಸಿಗೆಯು ಮನುಷ್ಯನ ಇಂದ್ರಿಯಗಳ ವ್ಯಾಪಾರಗಳ ಜ್ಞಾನವನ್ನು ವಿವರಿಸುತ್ತದೆ. ಇದರಲ್ಲಿ ದೇಹದ ಉತ್ಪತ್ತಿಯು ಹೇಗೆ, ಅದರ ಭಾಗಗಳಾವವು, ೩೬ ತತ್ವಗಳಾವವು, ಶಕ್ತಿಗಳು, ಚಕ್ರಗಳು ಯಾವ ಯಾವವು ಎಲ್ಲಿ ಇರುತ್ತವೆ, ಮನುಷ್ಯನ ಸ್ವಭಾವದ ವಿವರಣೆ ಇವೇ ಮೊದಲಾದ ಅನೇಕ ವಿಷಯಗಳು ಬರುತ್ತವೆ. ಷಟ್‌ಸ್ಥಲಗಳ ಮೂಲ ತತ್ವಗಳನ್ನೂ ಆಚಾರ ವಿಷಯಗಳನ್ನೂ ತಿಳಿಯಲಿಕ್ಕೆ ಮೇಲ್ಕಂಡ ವಿಷಯಗಳ ಜ್ಞಾನವು ಮನುಷ್ಯನಿಗೆ ಅತ್ಯಾವಶ್ಯಕವಿರುತ್ತದೆ. ಇವುಗಳ ನಿಜಸ್ವರೂಪವನ್ನು ಅರಿತಾಗಲೇ ಅವನು ತನ್ನ ವಿಕಾಸತೆಯನ್ನು ಹ್ಯಾಗೆ ಮಾಡಿಕೊಳ್ಳಬೇಕೆಂಬುವನ್ನು ತಿಳಿಯಲಿಕ್ಕೆ ಶಕ್ಯವಾಗುತ್ತದೆ. ಈ ವಿಷಯಗಳ ಬಗ್ಗೆ ವೀರಶೈವ ವಾಙ್ಮಯದಲ್ಲಿ ಅನೇಕ ಗ್ರಂಥಗಳಿದ್ದು ಅವುಗಳಿಗೆ ನಾವು ಒಂದು ಬಗೆಯ ಮಾನಸ ಶಾಸ್ತ್ರಗಳೆಂತಲೇ ಅನ್ನಬಹುದು.

ಷಟ್‌ಸ್ಥಲದ ತತ್ವಗಳೆಂದು ನಾವು ಎರಡನೆಭಾಗ ಮಾಡಿದ್ದು ಇವುಗಳು ಮನುಷ್ಯನಲ್ಲಿರುವ ಶಕ್ತಿಗಳನ್ನೂ ಅವನ ಒಳಹೊರಗಿರುವ ಶರೀರಗಳನ್ನೂ ಹ್ಯಾಗೆ ವಿಕಾಸಗೊಳಿಸಬೇಕೆಂಬುದನ್ನು ವಿವರಿಸುತ್ತವೆ. ಮನುಷ್ಯನ ಶಕ್ತಿಗಳು ಆರಂಭಸ್ಥಿತಿಯಲ್ಲಿ ಬಹು ಅಪೂರ್ಣಾವಸ್ಥೆಯಲ್ಲಿರುತ್ತವೆ. ಆಗ ಅವನ ಮನಸ್ಸು, ಬುದ್ಧಿ, ಜ್ಞಾನ ಮೊದಲಾದವುಗಳು ಉತ್ತಮವಾದುದನ್ನು ಗ್ರಹಿಸಿಕೊಂಡು ಅದನ್ನು ಒಳಕೊಳ್ಳುವ ಸ್ಥಿತಿಯಲ್ಲಿರುವದಿಲ್ಲ. ಅವು ಅಪಕ್ವ

ವಾಗಿದ್ದು ಕೆಡಕಾದದ್ದನ್ನು ದೂರೀಕರಿಸಲು ಅಸಮರ್ಥವಾಗಿರುತ್ತವೆ. ಆದರೆ ಷಟ್‌ಸ್ಥಲವು ಈ ಅಪಕ್ವ ಸ್ಥಿತಿಯನ್ನು ದೂರಮಾಡಿ ಪಕ್ವಸ್ಥಿತಿಯನ್ನು ಹ್ಯಾಗೆ ಬರಮಾಡಿಕೊಳ್ಳಬೇಕೆಂಬದನ್ನು ತಿಳಿಸುತ್ತದೆ. ಆದ್ದರಿಂದ ಈ ಶಾಸ್ತ್ರದಲ್ಲಿ ಪ್ರಗತಿಯ ಕಾಲಕ್ಕೆ ಮನುಷ್ಯನಲ್ಲಿ ಯಾವ ಯಾವ ಬದಲಾವಣೆಗಳಾಗುತ್ತವೆ, ಈ ಬದಲಾವಣೆಗಳಲ್ಲಿ ಅವನು ಯಾವ ಯಾವ ಸ್ಥಿತಿಯಲ್ಲಿರುತ್ತಾನೆ ಇವೇ ಮೊದಲಾದವುಗಳ ತಾತ್ವಿಕ ವಿವೇಚನೆಯು ಇರುತ್ತದೆ. ಈ ಬದಲಾವಣೆಗಳ ಮುಖ್ಯ ಭಾಗಗಳು ಆರು ಇದ್ದರೂ ಅವುಗಳಲ್ಲಿ ಅನೇಕ ಅವಾಂತರ ಕಾರಣಗಳಿಂದ ಅವುಗಳಕಿಂತಲೂ ಹೆಚ್ಚು ಭಾಗಗಳು ಉಂಟಾಗುತ್ತವೆ ಈ ಭಾಗಗಳು ಮೂಲದಲ್ಲಿ ಅಂಗ, ಲಿಂಗವೆಂದೂ, ಆ ಮೇಲೆ ಈ ಎರಡು ಭಾಗಗಳು ಲಿಂಗಕ್ಕೋಸ್ಕರ ಇಷ್ಟ ಪ್ರಾಣ, ಭಾವಗಳೆಂದೂ ಅಂಗಕ್ಕೋಸ್ಕರ ತ್ಯಾಗಾಂಗ, ಭೋಗಾಂಗ, ಯೋಗಾಂಗವೆಂದೂ, ಈ ಮೂರು ಭಾಗಗಳು ಪುನಃ ಆರಾರಾಗಿ ಅಂಗಕ್ಕೋಸ್ಕರ ಭಕ್ತ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂದೂ ಲಿಂಗಕ್ಕೋಸ್ಕರ ಆಚಾರ, ಗುರು, ಶಿವ, ಚರ ಮಹತ್ ಎಂದೂ ಮಾಡಲ್ಪಟ್ಟು ಇವುಗಳು ವಿವೇಚಿಸಲ್ಪಡುತ್ತವೆ. ಈ ೬ ಅಂಗಗಳು ಮತ್ತು ೬ ಲಿಂಗಗಳು ಪುನಃ ೩೬, ಆ ಮೇಲೆ ಅವು ೨೧೬, ಈ ಮೇರೆಗೆ ಭಾಗಗಳು ಮಾಡಲ್ಪಡುತ್ತಿವೆ. ಈ ಎಲ್ಲ ಭಾಗಗಳ ಜ್ಞಾನವೇ ಷಟ್‌ಸ್ಥಲ ಶಾಸ್ತ್ರದ ಮುಖ್ಯ ವಿಷಯವಾಗಿರುತ್ತದೆ. ಇದರಲ್ಲಿ ಮೇಲ್ಕಂಡ ಎಲ್ಲ ಭಾಗಗಳ ಪರಸ್ಪರ ಸಂಬಂಧವನ್ನು ಅರಿತುಕೊಂಡು ಆಯಾಯ ಕಾಲದಲ್ಲಿ ಮನಸ್ಸು ಜ್ಞಾನ, ಬುದ್ಧಿ, ಶಕ್ತಿ, ಭಕ್ತಿ, ಮೊದಲಾದ ಗುಣಗಳ ವಿಕಾಸತೆಯು ಅಂದರೆ ಲಿಂಗ ಚೈತನ್ಯದ ಒಳಕೊಳ್ಳುವಿಕೆಯು ಹ್ಯಾಗೆ ಹ್ಯಾಗೆ ಆಗುತ್ತದೆಂಬದು ವಿವೇಚಿಸಲ್ಪಡುತ್ತಿದೆ. ಇದೇ ಷಟ್‌ಸ್ಥಲ ಜ್ಞಾನವೆನಿಸಿಕೊಳ್ಳುತ್ತದೆ.

ಮೂರನೆಯ ಭಾಗವಾದ ಅಷ್ಟಾವರಣವು ಆಚಾರವಿಷಯಕವಾಗಿದೆ. ವೀರಶೈವನು ಮೇಲ್ಕಂಡ ರೀತಿಯಿಂದ ಷಟ್‌ಸ್ಥಲ ಜ್ಞಾನವನ್ನು ಹೊಂದಿ ಈ ಜ್ಞಾನವನ್ನು ತನ್ನ ನಡತೆಯಲ್ಲಿ ತರಲು ಈ ಅಷ್ಟಾವರಣಗಳು ಅವನಿಗೆ ಉತ್ತಮ ಸಾಧನಗಳಾಗಿವೆ. ಈ ಅಷ್ಟಾವರಣಗಳ ಜ್ಞಾನದಿಂದ ಮನುಷ್ಯನು ತನ್ನ ಮೂರೂ ಶರೀರಗಳಲ್ಲಿ ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳಲ್ಲಿ ಲಿಂಗದ ಪ್ರಕಾಶವನ್ನು ಬರಮಾಡಿಕೊಳ್ಳತ

ಕ್ಕದ್ದು. ಈ ಪ್ರಕಾಶವು ಅವನಲ್ಲಿ ಒಡಮೂಡಿದ ಹಾಗೆ ಅವನ ಹೊರಗೂ ಒಳಗೂ ಲಿಂಗವೆಯಾಗಿ ಅವನು ಲಿಂಗಾಂಗ ಸಾಮರಸ್ಯ ಸ್ಥಿತಿಯುನ್ನು ಹೊಂದಹತ್ತುವನು. ಇದೇ ಅಷ್ಟಾವರಣಗಳ ಜ್ಞಾನ ಅಥವಾ ಶಿವಯೋಗವೆಂದೆನ್ನಿಸಿಕೊಳ್ಳುವದು. ಗುರು ಲಿಂಗ ಜಂಗಮದಲ್ಲಿ ಆಯಾ ಸ್ಥಲಗಳ ಪ್ರಕಾರ ಅನೇಕ ಭೇದ ವಿಭೇದಗಳಿವೆ. ಅವುಗಳನ್ನು ವೀರಶೈವನಾದವನು ತಿಳಿದುಕೊಳ್ಳತಕ್ಕದ್ದು. ಅವನಿಗೆ ಇವುಗಳ ಜ್ಞಾನವಾದ ಹಾಗೆ ಅವನ ಕ್ರಿಯಾದಿಗಳಲ್ಲಿಯೂ ಹೆಚ್ಚೆಚ್ಚು ಉತ್ಕೃಷ್ಟತೆಯು ತೋರಿ ಬರಹತ್ತುವದು. ಪಾದೋದಕ ಪ್ರಸಾದದಲ್ಲಿಯೂ ಅನೇಕ ಭೇದ ವಿಭೇದಗಳಿದ್ದು ಇವುಗಳು ಈ ಉತ್ಕೃಷ್ಟತೆಯ ಪರಿಣಾಮುವನ್ನು ಅವನಲ್ಲಿ ವ್ಯಕ್ತಪಡಿಸುತ್ತವೆ. ವಿಭೂತಿ, ರುದ್ರಾಕ್ಷಿ ಮಂತ್ರಗಳಾದರೂ ಲಿಂಗಾಂಗ ಸಾಮ್ಯಜ್ಞಾನವನ್ನು ಅವನಲ್ಲಿ ದೃಢಪಡಿಸಲಿಕ್ಕೆ ಸಹಾಯಕಗಳಾಗಿರುತ್ತವೆ. ಈ ಎಲ್ಲ ಕ್ರಿಯೆಗಳಲ್ಲಿ ಷಟ್ಸ್ಥಲದ ತತ್ವಗಳು ಬಹು ಸ್ಫುಟವಾಗಿ ಮೂಡಿಕೊಂಡಿರುತ್ತವೆ. ಈ ಕ್ರಿಯೆಗಳಂತೆ ಆಚರಿಸಿದ್ದಾದರೆ ವೀರಶೈವನಲ್ಲಿ ಷಟ್ಸ್ಥಲದ ಮಾರ್ಗಗಳು ಚನ್ನಾಗಿ ಒಳಕೊಂಡು ಅವನು ವಿಕಾಸತೆಯುನ್ನು ಹೊಂದುತ್ತ ಹೋಗುತ್ತಾನೆ. ಈ ವಿಷಯದ ಬಗ್ಗೆ ಮಂತ್ರ ಗೋಪ್ಯ, ಶಿವಯೋಗ, ಪ್ರಸಾದ ಈ ಬಗೆಯಾಗಿ ಹೆಸರುಳ್ಳ ಅನೇಕ ಮಹತ್ವದ ಗ್ರಂಥಗಳು ಷಟ್ಸ್ಥಲ ವಾಙ್ಮಯದಲ್ಲಿ ಉತ್ಪನ್ನವಾಗಿರುತ್ತವೆ.

ಈ ಮೇರೆಗೆ ಷಟ್ಸ್ಥಲ ಶಾಸ್ತ್ರದಲ್ಲಿ ಮೇಲ್ಕಂಡ ಮೂರು ಮುಖ್ಯ ವಿಷಯಗಳಿದ್ದು ಇವುಗಳ ತತ್ವಗಳನ್ನು ಅರಿಯುವದೇ ವೀರಶೈವನ ಮುಖ್ಯ ಕಾರ್ಯವಾಗಿದೆ. ಆದರೆ ಈ ತತ್ವಗಳಿಗೆ ಅನುಸಾರವಾಗಿ ನಡೆಯುವದನ್ನು ಬಿಟ್ಟು ಕೊಟ್ಟು ಇದರ ಶೈವ ಅಥವಾ ಸ್ಮಾರ್ತ ಮಾರ್ಗದಂತೆ ನಡೆಯುವದು ವೀರಶೈವ ಮಾರ್ಗಕ್ಕೆ ವಿರೋಧವಾದುದು. ಷಟ್ಸ್ಥಲ ಶಾಸ್ತ್ರದ ಅಭ್ಯಾಸವು ಈಚೀಚೆಗೆ ವೀರಶೈವ ಸಮಾಜದಲ್ಲಿ ನಿಂತುಹೋದ್ದರಿಂದ ಅದಕ್ಕೆ ಹೊರತಾದ ಕ್ರಿಯಾ ಕರ್ಮಗಳೂ ಆಚಾರ ವಿಷಯಗಳೂ ಎಂದರೆ ಮೂರ್ತಿಗಳ ಪೂಜೆ, ಸ್ಥಾವರ ಲಿಂಗಗಳ ಪೂಜೆ, ಕ್ರಿಯಾ ಕರ್ಮಗಳಲ್ಲಿ ಹೋಮ ಹವನಗಳನ್ನು ಮಾಡುವದು, ಸೂತಕಾದಿಗಳನ್ನು ಪಾಲಿಸುವದು, ವರ್ಣಗಳನ್ನು ಪಾಲಿಸುವದು ಇವೇ ಮೊದಲಾದ ಸಂಬಂಧವಲ್ಲದ ವಿಷಯಗಳ ಸೇರ್ಪಡೆಯಾಗಹತ್ತಿರುತ್ತದೆ. ಇವುಗಳನ್ನು ಈ ಕಾಲಕ್ಕೆ ಷಟ್ಸ್ಥಲ ಶಾಸ್ತ್ರದ ನಿಜವಾದ ಜ್ಞಾನದ ಮೂಲಕ ಹೊರಗಟ್ಟುವದು ಪ್ರತಿಯೊಬ್ಬ ವೀರಶೈವನ ಕಾರ್ಯವಾಗಿರುತ್ತದೆ.

ಇದರ ಮೇಲಿಂದ ಷಟ್‌ಸ್ಥಲವೆಂದರೆ ಪ್ರಗತಿಯು ಒಂದು ಮಾರ್ಗ ೆಂದು ತಿಳಿದುಬರುತ್ತದೆ. ಈ ಶಾಸ್ತ್ರವು ಮನುಷ್ಯನು ಹ್ಯಾಗೆ ವರ್ತಿಸಿ ದರೆ ಅವನಲ್ಲಿ ಲಿಂಗದ ಕಳೆಯು ಉತ್ಪನ್ನವಾಗುತ್ತದೆಂಬದನ್ನು ಅರುಹು ಂಥದಿರುತ್ತದೆ. ಈ ದೃಷ್ಟಿಯಿಂದ ವಿವೇಚಿಸುವ ಶಾಸ್ತ್ರಗಳು ಇತರ ಂದೂ ಮತಗಳಲ್ಲಿ ಬಹು ಕಡಿಮೆ ಇರುತ್ತವೆ. ಆದರೆ ಷಟ್‌ಸ್ಥಲವು ಈ ವಿಷಯವನ್ನೇ ಹೆಚ್ಚಾಗಿ ಬೋಧಿಸುತ್ತದೆ. ಇದರ ಮೂಲಕ ಭಕ್ತನು ಮೆಲ್ಲ ಮೆಲ್ಲಗೆ ಉಚ್ಚ ಉಚ್ಚ ಸ್ಥಿತಿಯನ್ನು ಹೊಂದುತ್ತ ಹೋಗುತ್ತಾನೆ. ಮತ್ತು ಆತನು ಕಡೆಗೆಲಿಂಗದಲ್ಲಿ ಲೀನನಾಗುತ್ತಾನೆ. ಬಸವೇಶ್ವರನು ಅನ್ನು ದೇನಂದರೆ:—

**ಭಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಯುಕ್ತನೆನಿಸುವೆನಯ್ಯ ಮೆಲ್ಲ ಮೆಲ್ಲನೆ. ಸಾರಿ ಶರಣನೆನಿಸುವೆನಯ್ಯ ಮೆಲ್ಲನೆ. ಎಡಹುವ ಮಳಿಗಳ ದಾಂಟಿ ಬರ ಬರ ಲಿಂಗೈಕ್ಯನೆನಿಸುವೆನಯ್ಯ ಕೂಡಲ ಸಂಗಮದೇವಾ ನಿಮ್ಮಿಂದಧಿಕನೆನಿಸುವೆನಯ್ಯ**

ಎಂದು ಹೇಳಿರುವನು. ಈ ಪ್ರಗತಿಯು ಕಾರ್ಯದಲ್ಲಿ ಭಕ್ತನಿಗೆ ಅಸಂಖ್ಯ ತೊಂದರೆಗಳು ಬಂದರೂ ಅವನು ಅವುಗಳನ್ನು ತೊಲಗಿಸಿ ಕಡೆಗೆ ಪರಮಾತ್ಮನಲ್ಲಿ ಲೀನನಾಗುವನೆಂದು ಶ್ರೀ ಬಸವೇಶ್ವರನು ಹೇಳಿ ರುವನು. ಆದರೆ ಈ ಕಾರ್ಯವು ಕೇವಲ ಹೇಳಿಕೆ ಕೇಳಿಕೆಯಿಂದಾಗದೆ ತನ್ನ ಸ್ವಂತ ಆಚರಣೆಯಿಂದ ಮಾಡತಕ್ಕ ಕಾರ್ಯವಾಗಿದೆ. ಈ ವಿಷ ಯದ ಬಗ್ಗೆ ದೇವರದಾಸಿಮಯ್ಯನು ಈ ಕೆಳಗಿನ ಸುಂದರವಾದ ವಚನ ವನ್ನು ನುಡಿದಿದ್ದಾನೆ. ಏನೆಂದರೆ:—

**ಸಣ್ಣ ನನೆಯೊಳಗಣ ಪರಿಮಳವ ಹೊರಸೂಸಿ ಇದಿರಿಂಗೆ ಅರುಹಿಸಬಲ್ಲುದೆ ವಾಯು? ಕೊಡಗೂಸಿ ನೊಳಗಣ ಮೊಲೆ ಮು ಡಿಯ ಹಡೆದ ತಾಯಿತಂದೆಗಳೆಂದಡೆ ಕಾಣಿಸಿಕೊಡಬಲ್ಲರೇ ಕಾಂ ಬುವರ ಕಣ್ಣಿಗೆ? ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು ಕಾಣಾ ರಾ ಮನಾಥಾ.**

**ನನೆ = ಮೊಗ್ಗು, ಕೊಡಗೂಸು = ಮದುವೆಗೆಯೋಗ್ಯಳಾದಕನ್ನೆ ಮುಡಿ = ಕುರುಬು, ಪರಿಣಾಮ = ಸುಖ;**

ಇದರಮೇಲಿಂದ ಮನುಷ್ಯನ ಮನಸ್ಸು ಪಕ್ವವಾದಲ್ಲದೆ ಅವ ನಲ್ಲಿ ಲಿಂಗಸುಖವು ತಲೆದೋರದು. ಮನಸ್ಸನ್ನು ಹ್ಯಾಗೆ ಪಕ್ವವನ್ನಾಗಿ ಮಾಡಬೇಕೆಂಬುದನ್ನು ಅರುಹುವದೇ ಷಟ್‌ಸ್ಥಲ ಶಾಸ್ತ್ರದ ಮುಖ್ಯ ಧ್ಯೇಯ ವಾಗಿದೆ.

ಶಿವಾನುಭವ ಗ್ರಂಥಮಾಲಾ ನಂ. ೨೦



# ಶ್ರೀ
# ಸಕಲೇಶ ಮಾದರಸನ
## ವಚನಗಳು.



ಸಂಪಾದಕರು.

ರಾ|| ಸಾ|| ಫ. ಗು. ಹಳಕಟ್ಟಿ.

ಬಿ. ಎ. ಎಲ್. ಎಲ್. ಬಿ ವಕೀಲ

ವಿಜಾಪುರ

೧೯೩೦

ಬೆಲೆ. ೩ ಆಣೆ.

# ಪ್ರಸ್ತಾವನೆ.

ನಾವು ಈಗ ಸಕಲೇಶ ಮಾದರಸನ ವಚನಗಳನ್ನು ಸಂಗ್ರಹಿಸಿ, ಈ ಪುಸ್ತಕದಲ್ಲಿ ಪ್ರಸಿದ್ಧಿಸಿದ್ದೇವೆ. ಸಕಲೇಶ ಮಾದರಸನು ಬಸವೇಶ್ವ ನಕಿಂತಲೂ ೪೦--೫೦ ವರ್ಷ ಹಿಂದಿನವನು. ಆದರೆ ಮುಂದೆ ಬಸವೇ ್ವರನು ಕಲ್ಯಾಣದಲ್ಲಿ ನಡಿಸಿದ ಧರ್ಮಜಾಗ್ರತಿಯ ಕಾರ್ಯಗಳನ್ನು ಕೇಳಿ ಅವನು ಆ ಪಟ್ಟಣದಲ್ಲಿ ಬಂದು ನಿಂತುಕೊಂಡನು. ಮತ್ತು ಬಸ ವೇಶ್ವರನು ಇರುವ ವರೆಗೂ ಅಲ್ಲಿಯೇ ಇದ್ದು ಶಿವಾನುಭವ ಮಂಟಪದಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳಲ್ಲಿ ಮಗ್ನನಾಗಿ ತತ್ವವಿಚಾರಗ ಳಲ್ಲಿಯೇ ತೊಡಗಿರುತ್ತಿದ್ದನು. ಬಸವೇಶ್ವರನ ಸಮೀಪವರ್ತಿಗಳಾಗಿದ್ದ ಶಿವಶರಣರನ್ನು ವರ್ಣಿಸುವ ಕಾಲಕ್ಕೆ ಈತನ ಹೆಸರು ವೀರಶೈವ ಗ್ರಂಥ ಗಳಲ್ಲಿ ಯಾವಾಗಲೂ ಬರುತ್ತಿದೆ. ಬಹುತರ ಎಲ್ಲ ವಾದದ ವಚನಗಳಲ್ಲಿ ಸಕಲೇಶ ಮಾದರಸನ ವಚನಗಳೂ ಮೇಲಿಂದ ಮೇಲೆ ಬರುತ್ತವೆ. ಇವನ ವಚನಗಳು ಪುರಾತನ ಕಾಲದ ವಚನಗಳಂತೆ ಬಹು ಸುಂದರ ವಾದವುಗಳು. ಅವನು ತನ್ನ ಧಾರ್ಮಿಕ ವಿಚಾರಗಳನ್ನು ಬಹು ಮಾರ್ಮಿಕ ರೀತಿಯಿಂದ ಇವುಗಳಲ್ಲಿ ವಿವರಿಸಿದ್ದಾನೆ. ಆದರೆ ಅವುಗಳಲ್ಲಿ ನೈತಿಕ ವಿಚಾರಗಳೇ ಹೆಚ್ಚಾದವುಗಳು.

ಸಕಲೇಶ ಮಾದರಸನ ವಚನಗಳು ನಮಗೆ ಒತ್ತಟ್ಟಿಗೆ ಸಮಗ್ರ ವಾಗಿ ದೊರೆಕಿರುವದಿಲ್ಲ. ಬೇರೆ ಬೇರೆ ವಚನ ಗ್ರಂಥಗಳಲ್ಲಿ ಸಿಕ್ಕವುಗಳನ್ನು ಒತ್ತಟ್ಟಿಗೆ ಸಂಗ್ರಹಿಸಿ, ಈ ಗ್ರಂಥವನ್ನು ನಾವು ಪ್ರಸಿದ್ಧಿಸಿದ್ದೇವೆ. ಈ ಪ್ರಕಾರ ಈ ವರೆಗೆ ನಮಗೆ ದೊರೆದ ವಚನಗಳು ೮೮ ಮಾತ್ರ. ಇವುಗಳು ಓದುಗರಿಗೆ ಸ್ಫುಟವಾಗಿ ತಿಳಿಯುಬೇಕೆಂಬ ಉದ್ದಿಶ್ಯವಾಗಿ ಶಕ್ಯವಿದ್ದಷ್ಟರ ಮಟ್ಟಿಗೆ ವಿಷಯಾನುಸಾರವಾಗಿ ಸ್ಥಲಗಳ ಪ್ರಕಾರ ಅವುಗಳನ್ನು ವಿಂಗ ಡಿಸಿ ಈ ಪುಸ್ತಕದಲ್ಲಿ ಪ್ರಸಿದ್ಧಿಸಿದ್ದೇವೆ. ಆದರೆ ಯಾರಲ್ಲಾದರೂ ಈ ವಚನಕಾರನ ವಚನಗಳು ಒತ್ತಟ್ಟಿಗೆ ಇದ್ದದ್ದಾದರೆ ಅವುಗಳನ್ನು ಅವರು ನಮ್ಮ ಕಡೆಗೆ ಕಳಿಸಿಕೊಟ್ಟಲ್ಲಿ ನಾವು ಅವರಿಗೆ ಬಹಳ ಆಭಾರಿಯಾಗು ವೆವು. ಮತ್ತು ಅವುಗಳನ್ನು ನಾವು ಮುಂದಿನ ಆವೃತ್ತಿಯಲ್ಲಿ ಇದರಲ್ಲಿ ಸೇರಿಸುವೆವು.

ಸಕಲೇಶ ಮಾದರಸನ ಚರಿತ್ರೆಯು ಸಂಪೂರ್ಣವಾಗಿ ದೊರೆಯು ವದಿಲ್ಲ. ಆದರೆ ಇವನ ವೃತ್ತಾಂತವು ಪದ್ಮಣಾಂಕ ಮಹಾಕವಿಯು ವಿರಚಿಸಿದ ಪದ್ಮರಾಜ ಪುರಾಣದ ೨ ನೇ ಸಂಧಿಯಲ್ಲಿಯೂ ಬಸವ ಪುರಾಣದ ೧೯, ೨೦ ನೇ ಅಧ್ಯಾಯಗಳಲ್ಲಿಯೂ ಬಂದಿರುತ್ತದೆ. ಪದ್ಮರಾಜ ಪುರಾಣದಿಂದ ಸಕಲೇಶ ಮಾದರಸನು ಕೆರೆಯ ಪದ್ಮರಸನ ಅಜ್ಜನೆಂತಲೂ ಕಲ್ಲುಕುರಿಕೆ ಎಂಬಲ್ಲಿ ಅವನು ರಾಜ್ಯವಾಳುವ ದೊರೆಯಾಗಿದ್ದನೆಂತಲೂ ತಿಳಿದು ಬರುತ್ತಿದೆ. ಈ ಪದ್ಮರಾಜ ಪುರಾಣವನ್ನು ವಿರಚಿಸಿದ ಪದ್ಮಣಾಂಕ ಮಹಾಕವಿಯೂ ಸಹ ಸಕಳೇಶ ಮಾದರಸನ ವಂಶದವನಿದ್ದು, ಅವನು ತನ್ನ ವಂಶಾವಳಿಯನ್ನು ಈ ಕಾವ್ಯದಲ್ಲಿ ಕೊಟ್ಟಿದ್ದಾನೆ. ಇದರಿಂದ ಪದ್ಮಣಾಂಕನಿಗೆ ಮಾದರಸನು ೯ ನೇ ತಲೆ ಹಿಂದಿನವನಾಗಿದ್ದನೆಂದು ತಿಳಿಯುತ್ತದೆ. ಆದ್ದರಿಂದ ಈ ಕವಿಯು ಸಕಳೇಶ ಮಾದರಸನ ಬಗ್ಗೆ ಹೇಳಿದ ವೃತ್ತಾಂತಗಳು ಹೆಚ್ಚು ವಿಶ್ವಸನೀಯವೆಂದು ತಿಳಿಯಬಹುದಾಗಿದೆ.

ಈ ಪದ್ಮರಾಜ ಪುರಾಣದಿಂದ ತಿಳಿಯುವದೇನಂದರೆ:—ಸಕಳೇಶ ಮಾದರಸನ ತಂದೆಯಾದ ಮಲ್ಲರಸನು ಕರ್ನಾಟಕ ದೇಶದಲ್ಲಿ ಕಲ್ಲುಕುರಿಕೆ ಎಂಬಲ್ಲಿ ಆಳುತ್ತಿದ್ದನು. ಅಲ್ಲಿ ಅವನು ಮಲ್ಲಿಕಾರ್ಜುನನ ಮೇಲೆ ಭಕ್ತಿಯನ್ನು ತಾಳಿ ಶೈವಧರ್ಮವನ್ನು ಪರಿಪಾಲಿಸುತ್ತ ಸುಖವಾಗಿ ರಾಜ್ಯಭಾರ ಮಾಡುತ್ತಿದ್ದನು. ಮುಂದೆ ಅವನು ವೈರಾಗ್ಯವನ್ನು ತಾಳಿ ತನ್ನ ರಾಜ್ಯವನ್ನು ಪರಿತ್ಯಜಿಸಿ ಶ್ರೀಶೈಲಪರ್ವತಕ್ಕೆ ಬಂದು ಅಲ್ಲಿಯ ಬಿಲ್ವವನದಲ್ಲಿ ಶಿವಯೋಗಿ ಮಲ್ಲರಸನೆಂಬ ಹೆಸರಿನಿಂದ ಪ್ರಸಿದ್ಧನಾದನು.

ಮಲ್ಲರಸನು ಶ್ರೀಶೈಲಕ್ಕೆ ಹೋದ ಬಳಿಕ ಆತನ ಪುತ್ರನಾದ ಸಕಳೇಶ ಮಾದರಸನು ಕಲ್ಲುಕುರಿಕೆಯಲ್ಲಿಯೇ ರಾಜ್ಯವಾಳಹತ್ತಿದನು. ಅವನಾದರೂ ತಂದೆಯಂತೆಯೇ ವೈರಾಗ್ಯಭಾವವುಳ್ಳವನಾಗಿ ಹರ ಭಕ್ತಿಯನ್ನು ಪ್ರತಿಷ್ಠಿಸಿ ಅಧಿಕ ಪ್ರತಾಪದಿಂದ ಅನೇಕ ವರ್ಷ ರಾಜ್ಯಭಾರ ಮಾಡಿದನು. ಆದರೆ ಮುಂದೆ ಅವನು ತನ್ನ ತಂದೆಯಾದ ಮಲ್ಲರಸನು ಶ್ರೀಶೈಲದಲ್ಲಿ ನಡಿಸಿದ ವಿರತಿಯನ್ನು ಕೇಳಿ, ಅವನೂ ತನ್ನ ಸಾಮ್ರಾಜ್ಯ ಭೋಗವನ್ನು ತ್ಯಜಿಸಬೇಕೆಂಬ ಕಾಂಕ್ಷೆಯುಳ್ಳವನಾಗಿ ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಶ್ರೀಶೈಲಕ್ಕೆ ಹೊರಟನು. ಆಗ ಅವನ ಹೆಂಡತಿ, ಮಗ ಮತ್ತು ಸೊಸೆ ಇವರೂ ಅವನನ್ನು ಹಿಂಬಾಲಿಸಿದರು. ಮುಂದೆ ಅವನು ಮಾರ್ಗದಲ್ಲಿ

ಅಂಬೆ ಎಂಬ ಗ್ರಾಮಕ್ಕೆ ಬರಲು ಅಲ್ಲಿಯ ಭಕ್ತರು ಅವನ ಬಗ್ಗೆ ಬಹಳ ಭಕ್ತಿಯನ್ನು ತಾಳಿ ಅವನನ್ನು ಮುಂದಕ್ಕೆ ಹೋಗಗೊಡವೆ ತಮ್ಮ ಗ್ರಾಮ ದಲ್ಲಿಯೇ ನಿಲ್ಲಿಸಿಕೊಂಡರು.

ಮುಂದೆ ಸಕಳೇಶ ಮಾದರಸನು ತನ್ನ ಪುತ್ರನಾದ ಮಾಯಿದೇವ ನನ್ನು ಕರೆದು ಅವನಿಗೆ ನಿನ್ನ ಮಗನು (ಕೆರೆಯ ಪದ್ಮರಸನು) ಬಹು ವಿಖ್ಯಾತ ಪುರುಷನಾಗುವನು. ಆದ್ದರಿಂದ ಇಲ್ಲಿಯೇ ಇರೆಂದು ಹೇಳಿ, ತಾನು ವೈರಾಗ್ಯದಿಂದ ಮಲ್ಲರಸನನ್ನು ಕಾಣಲು ಶ್ರೀ ಶೈಲಪರ್ವತಕ್ಕೆ ಹೊರಟನು.

ಸಕಳೇಶ ಮಾದರಸನು ಶ್ರೀಶೈಲಕ್ಕೆ ಬಂದ ಬಳಿಕ ತನ್ನ ತಂದೆಯು ಎಲ್ಲಿದ್ದಾನೆಂದು ಬಹು ಹುಡಕಹತ್ತಿದನು. ಆಗ ಅಲ್ಲಿ ಅವನಿಗೆ ಅಷ್ಟಗಟ್ಟಿ ಭಸ್ಮಾದ್ರಿಯಹಾಗೆ ಒಬ್ಬ ಯೋಗಿಯು ಬಹು ವಿಸ್ತಾರವಾಗಿ ಬೆಳೆದು ಉದ್ದವಾಗಿ ಬಿದ್ದಿದ್ದನ್ನು ಕಂಡನು. ಆಗ ಮಾದರಸನು ಅವನ ಶಿರಸ್ಸನ್ನು ನೋಡುವೆನೆಂದು ೩ ವರ್ಷ ಹೋದರೂ ಅವನ ಶಿರಸ್ಸು ಕಾಣಲಿಲ್ಲ. ಆ ಮೇಲೆ ಕಾಲ ದೆಸೆಗೆ ೮ ವರ್ಷ ಹೋದರೂ ಅವನ ಪಾದಗಳು ಕಾಣಲಿಲ್ಲ. ಆಗ ಮಾದರಸನು ಪಟ್ಟ ಕಷ್ಟಗಳಿಗೆ ಮಲ್ಲರಸನು ಮೆಚ್ಚಿ ಅವನಿಗೆ ಕಾಣಿ ಸಿಕೊಂಡು, ಪ್ರೀತಿಯಿಂದ ಅವನನ್ನು ಅಪ್ಪಿ ತನ್ನ ಆಶ್ರಮಕ್ಕೆ ಕರೆದೊ ಯ್ದನು. ಆಗ ಸಕಳೇಶ ಮಾದರಸನು ಶಿವಾನುಭವವನ್ನು ಅರಿಯಬೇ ಕೆಂದು ಬಹಳ ಇಚ್ಛಿಸುತ್ತಿದ್ದದ್ದನ್ನು ತಿಳಿದು ಮಲ್ಲರಸನು ಅವನಿಗೆ ಧರ ಣಿಯಲ್ಲಿ ಇನ್ನು ೫೦ ವರ್ಷದ ಮೇಲೆ ಶಿವಭಕ್ತಿಯನ್ನು ನೆಲೆಗೊಳಿಸಲು ಬಸವಾದಿಗಳು ಕಲ್ಯಾಣಪಟ್ಟಣದಲ್ಲಿ ಬರುವರು, ಆಗ ನೀನು ಅವರೊ ಡನೆ ಇದ್ದುಕೊಂಡು ಕಾಲ ಕಳೆ ಎಂದು ಆಜ್ಞಾಪಿಸಿದನು.

ಆಗ ಮಾದರಸನು ಮಲ್ಲರಸನಿಗೆ ನಿಮ್ಮ ಅಂಘ್ರಿಯನ್ನು ಬಿಡಲಾ ರನೆಂದು ಹೇಳಲಾಗಿ ಮಲ್ಲರಸನು ಇವನನ್ನು ಬೇರೆ ರೀತಿಯಿಂದ ಒಡಂಬಡಿ ಸಬೇಕೆಂದು ಬಯಸಿ ಇಲ್ಲಿಯೇ ಜಾಲಿಯ ಗಿಡದಡಿಯಲ್ಲಿ ನಿಲ್ಲೆಂದು ಹೇಳಿ ತಾನು ಒಬ್ಬ ಗೊಲ್ಲನ ವೇಷವನ್ನು ತಾಳಿ ಮಾದರಸನ ಬಳಿಗೆ ಬಂದು ಅವನನ್ನು ಪೀಡಿಸಹತ್ತಲು ಮಾದರಸನು ಕೋಪದಿಂದ ಇವನನ್ನು ಬಯ್ಯಲು ಗೊಲ್ಲನು ನಕ್ಕು ನೀನು ಒಬ್ಬ ತಪಸ್ವಿಯ ವೇಷವನ್ನು ಧರಿಸಿದರೂ ಸಮಾ

ಧಾನವೃತ್ತಿಯನ್ನು ಹೊಂದಿಲ್ಲವೆಂದು ಹೇಳಿ ತನ್ನ ನಿಜರೂಪವನ್ನು ಧಾರಣಮಾಡಿ ಕಲ್ಯಾಣಪುರದ ಬಸವಣ್ಣನ ಬಳಿಗೆ ಹೋಗೆಂದು ಮಾದರಸನಿಗೆ ಆಜ್ಞಾಪಿಸಿದನು.

ಆ ಮೇಲೆ ಸಕಲೇಶ ಮಾದರಸನು ಕಲ್ಯಾಣಕ್ಕೆ ಹೋಗಿ ಬಸವನ ಮುಂದೆ ನಿಂದಿರಲಾಗಿ ಆ ಮಹಾತ್ಮನು ಆ ಮಾದರಸನ ರೂಪವನ್ನು ಸಂಗಮೇಶ್ವರನಲ್ಲಿ ಕಂಡು ಸಾಷ್ಟಾಂಗವೆರಗಿ ನಮಿಸಿ ಅವನನ್ನು ಸನ್ಮಾನಿಸಿದನು. ಮತ್ತು ಮಾದರಸನು ಶಿವಾನುಭವ ಗೋಷ್ಠಿಯಲ್ಲಿ ಕಾಲಕಳೆಯುತ್ತ ಬಸವೇಶ್ವರನ ಹತ್ತಿರವೇ ಇರಹತ್ತಿದನು. ಮುಂದೆ ಬಸವೇಶ್ವರನು ಸಂಗಮನಾಥನಲ್ಲಿ ಐಕ್ಯವನ್ನು ಹೊಂದಲಾಗಿ ಮಾದರಸನು ಕಲ್ಯಾಣವನ್ನು ಬಿಟ್ಟು ಗೋಪೆಯ ಶಿವದೇವನೆಂಬ ವೀರವ್ರತಿಯ ಪುರದಲ್ಲಿ ಬಂದು ಇರಹತ್ತಿದನು. ಮುಂದೆ ಈ ಶಿವದೇವನು ತನ್ನ ಪ್ರಾಣಲಿಂಗದಲ್ಲಿ ಅಡಗಲು ಸಗಲೇಶ ಮಾದರಸನು ಅವನ ಪಟ್ಟಣವನ್ನು ಬಿಟ್ಟು ಮಹಾಲಿಂಗರಾಮನ ವೀರನೆಂಬ ಶಿಷ್ಯನ ಗ್ರಾಮಕ್ಕೆ ಬಂದು ಅಲ್ಲಿ ಇರಹತ್ತಿದನು. ಮುಂದೆ ಈ ಮಹಾಲಿಂಗರಾಮನೂ ಶಿವೈಕ್ಯನಾಗಲು ಸಕಳೇಶ ಮಾದರಸನು ಪರ್ವತಾಶ್ರಮವನ್ನು ಹೊಂದಿ ಅಲ್ಲಿ ಮಲ್ಲರಸನನ್ನು ಕಂಡು ಕಡೆಗೆ ಅಲ್ಲಿಯೇ ಐಕ್ಯಹೊಂದಿದನು.

ಈ ಮೇರೆಗೆ ಪದ್ಮರಾಜ ಪುರಾಣದಲ್ಲಿ ಸಕಳೇಶ ಮಾದರಸನ ವೃತ್ತಾಂತವಿದ್ದು ಇದಕ್ಕೂ ಬಸವ ಪುರಾಣದಲ್ಲಿಯ ವೃತ್ತಾಂತಕ್ಕೂ ವ್ಯತ್ಯಾಸವಿರುತ್ತದೆ. ಬಸವ ಪುರಾಣದಲ್ಲಿ ಮಲ್ಲರಸನೆಂಬ ಧರಣೀ ವಲ್ಲಭನು ರಾಜ್ಯವನೊಲ್ಲದೆ ಅದನ್ನು ತ್ಯಜಿಸಿ ಶ್ರೀ ಪರ್ವತಕ್ಕೆ ಹೋಗಿ ಅಲ್ಲಿ ನಿಶ್ಚಿಂತ ಸಮಾಧಿಯಲ್ಲಿರುತ್ತಿದ್ದನೆಂದು ಹೇಳಲ್ಪಟ್ಟಿದ್ದರೂ ಅವನು ಸಕಲೇಶಮಾದರಸನ ತಂದೆ ಎಂದು ಹೇಳಲ್ಪಟ್ಟಿಲ್ಲ. ಮತ್ತು ಮಾದರಸನು ಅಂಬೆ ಎಂಬ ಪುರದಲ್ಲಿದ್ದು ಅದೇ ಅವನ ರಾಜಧಾನಿಯಾಗಿತ್ತೆಂದು ಅದರಲ್ಲಿ ಹೇಳಲ್ಪಟ್ಟಿದೆ. ಮುಂದೆ ಸಕಳೇಶ ಮಾದರಸನು ಶ್ರೀಶೈಲಕ್ಕೆ ಹೋದದ್ದೂ ಅಲ್ಲಿಂದ ೫೦ ವರ್ಷಗಳ ತರುವಾಯ ಕಲ್ಯಾಣಕ್ಕೆ ಆಗಮಿಸಿದ್ದೂ ವರ್ಣಿಸಲ್ಪಟ್ಟಿವೆ. ಆದರೆ ಮುಂದೆ ಬಸವೇಶ್ವರನು ಕಲ್ಯಾಣವನ್ನು ಬಿಟ್ಟು ಹೋದ ಬಳಿಕ ಸಕಲೇಶ ಮಾದರಸನು ಎಲ್ಲಿಗೆ ಹೋದನು ಮುಂತಾದ್ದು ಹೇಳಲ್ಪಟ್ಟಿಲ್ಲ. ಈ ಮುಂದಿನ ವೃತ್ತಾಂತವು ಪದ್ಮರಾಜ ಪುರಾಣದಲ್ಲಿ ಬಂದಿರುತ್ತದೆ. ಈ ಮೇರೆಗೆ ಸಕಳೇಶ ಮಾದರಸನ ವೃತ್ತಾಂತವಿದೆ.

ಇದರ ಮೇಲಿಂದ ೧೨ ನೇ ಶತಮಾನದಲ್ಲಿ ವೀರಶೈವ ಧರ್ಮ ಜಾಗ್ರತಿಯ ಕಾರ್ಯವು ಬಸವೇಶ್ವರನ ಕಿಂತಲೂ ಪೂರ್ವದಲ್ಲಿಯೇ ಪ್ರಾರಂಭವಾಗಿತ್ತೆಂದು ತೋರುತ್ತದೆ. ಆಗ ಅನೇಕ ಶಿವಶರಣರು ಉತ್ಪನ್ನರಾಗಿ ಧರ್ಮಪ್ರಸಾರದ ಕಾರ್ಯಗಳನ್ನು ಮಾಡಿದರು. ಆದರೆ ಬಸವೇಶ್ವರನು ಕಲ್ಯಾಣಕ್ಕೆ ಬಂದ ಬಳಿಕ ಈ ಧರ್ಮಪ್ರಸಾರದ ಕಾರ್ಯಗಳು ಮತ್ತಿಷ್ಟು ಬಲವಾಗಿ ಸಾಗಿದವು. ಆಗ ರಾಜರಿಂದ ಹಿಡಿದು ಅಸ್ಪೃಶ್ಯರ ವರೆಗೆ ಎಲ್ಲರಲ್ಲಿ ಧಾರ್ಮಿಕ ಚಳವಳಿಯು ಬಹು ಬಲವಾಗಿ ನಡೆಯಿತು. ಮತ್ತು ಅಸಂಖ್ಯ ವಚನಗಳು ರಚಿಸಲ್ಪಟ್ಟು ಅವುಗಳ ಮೂಲಕಾ ದೇಶದಲ್ಲೆಲ್ಲ ಧರ್ಮ ಬೋಧೆಯ ಕಾರ್ಯಗಳು ಸಾಗಿದವು. ಈ ಮೇರೆಗೆ ೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿಯೂ ಅದರ ಸುತ್ತಲಿನ ಪ್ರದೇಶಗಳಲ್ಲಿಯೂ ಒಂದು ಮಹತ್ತರವಾದ ಧರ್ಮಕ್ರಾಂತಿಯು ಉದ್ಭವಿಸಿದ್ದು ತೋರಿಬರುತ್ತದೆ.

ನಾವು ಈಗ ಪ್ರಸಿದ್ಧಿಸಿದ ವಚನಗಳಲ್ಲಿ ಅನೇಕವುಗಳು ಬಹು ಅಶುದ್ಧವಿವೆ. ಅವುಗಳ ಶುದ್ಧಪಾಠಗಳು ನಮಗೆ ದೊರಕದ್ದರಿಂದ ಅವುಗಳನ್ನು ಇದ್ದಕಿದ್ದ ಹಾಗೆಯೇ ಪ್ರಸಿದ್ಧಿಸಿದ್ದೇವೆ

ತಾ॥ ೭-೫-೩೦
ವಿಜಾಪುರ

**ಫ. ಗು. ಹಳಕಟ್ಟಿ**

# ಸಕಲೇಶ ಮಾದರಸನ

## ವಚನಗಳು.

---

### ಭಕ್ತಸ್ಥಲ.

#### ನೀತಿಯುಳ್ಳವನಾಗಿರುವುದು.

೧. ಆಟಮಟವೇ ಆಧಾರ, ಕಪಟವೇ ಸದಾಚಾರ, ಕುಟಿಲವೇ ಘನ ವಾಯಿತ್ತು ಕೆಲಬರಿಗೆ. ಹುಸಿಯು ಮುಸಕವೇ ವರ್ತನೆಯಾಯಿತ್ತು ಕೆಲ ಬರಿಗೆ. ಯಂತ್ರ ತಂತ್ರವೇ ವ್ಯವಹಾರವಾಯಿತ್ತು ಕೆಲಬರಿಗೆ. ಸಟೆಯು ಸಾಗರದೊಳಗೆ ತೇಂಕಾಡುತಿರ್ಪರು ಕೆಲಬರು ಸಕಳೇಶ್ವರ ದೇವರ ನೆರೆ ನಂಬಲರಿಯದವರೆಲ್ಲರು.

**ಆಟಮಟ= ತಕ್ಕುತನ; ಮುಸಕ= ಮನಸ್ಸಿನ ಹೊಯ್ದಾಟ; ತೇಂಕಾಡು= ಹೊಯ್ದಾಡು,**

೨. ಆಸೆಯಿಂದ. ಬಿಟ್ಟು ಕಿರಿಯರಿಲ್ಲ. ನಿರಾಸೆಯಿಂದ ಬಿಟ್ಟು ಹಿರಿಯರಿಲ್ಲ. ದಯದಿಂದ ಬಿಟ್ಟು ಧರ್ಮವಿಲ್ಲ. ವಿಚಾರದಿಂದ ಬಿಟ್ಟು ಸಹಾಯಿಗಳಿಲ್ಲ. ಸಚರಾಚರಕ್ಕೆ ಸಕಳೇಶ್ವರದೇವರಿಂದ ಬಿಟ್ಟು ದೈವವಿಲ್ಲ.

**ದೈವ = ದೇವರು**

೩. ಅದು ಬೇಕು ಇದು ಬೇಕು ಎಂದೆಂಬ ಎದೆಗುಡಿಹತನ ಬೇಡ. ಹದುಳಿಗನಾಗಿದ್ದರೆ ಸಾಕು. ಪಡಿಪದಾರ್ಥ ತನ್ನಿದ್ದೆಡೆಗೆ ಬಹುದು. ನಿಧಿ ನಿಕ್ಷೇಪ ತನ್ನಿದ್ದೆಡೆಗೆ ಬಹುದು. ಹೃದಯಶುದ್ಧನಾಗಿ ಸಕಳೇಶ್ವರ ದೇವ ಶರಣೆಂದರೆ ನಿಜಪದವನೀವನು.

**ಎದೆಗುಡಿಹತನ= ತಳಮಳಿಕೆ; ಹದುಳಿಗ = ಸಂತೋಷವುಳ್ಳವ, ಸಮಾಧಾನಿ; ಪಡಿ = ದಾನಕೊಟ್ಟಂಥಾದ್ದು; ನಿಧಿ = ದ್ರವ್ಯಸಂಚಯ; ನಿಕ್ಷೇಪ = ಇಡಲ್ಪಟ್ಟವಸ್ತು, ದ್ರವ್ಯ**

೪. ದೊರೆಕೊಂಡಂತೆ ಮನದಣಿದಿಪ್ಪವರ, ದುಃಖಕ್ಕೆ ದೂರಾಗಿಪ್ಪವರ, ಒಳಗನರಿದು ಹೊರಗೆ ಮರೆದಿಪ್ಪವರ, ಸದಾನಂದದಲ್ಲಿ ಸುಖಿಯಾಗಿಪ್ಪವರ ಎನಗೊಮ್ಮೆ ತೋರಾ ಸಕಳೇಶ್ವರದೇವಾ ಎನಗಿದೇ ವರವ ನೀವುದು ಕಂಡೆಯಾ ತಂದೆ.

**ತಣಿ = ತೃಪ್ತಿ ಹೊಂದು**

೫. ಬೆಟ್ಟದ ಮೇಲಣ ಗಿಡಗಳು ಬೆಟ್ಟವ ಮುಟ್ಟದಂತಿಪ್ಪವೆ? ವಿವರಿಸಿ ನೋಡಿದಡೆ ಸೃಷ್ಟಿಯೊಳಗಣ ಪ್ರಾಣಿಗಳು ಪರಮನ ಮುಟ್ಟದಿಪ್ಪವೆ? ಕಷ್ಟರು ಬೇಡವೆಂದು ಬಿಟ್ಟೋಡುತಿಪ್ಪ ಪ್ರಾಣಿಗಳನಟ್ಟಿ ಹಿಡಿದು ಕೊಂದರೆ ಪ್ರತಿಷ್ಠಿಸಿದೀಶ್ವರ ನಿಕ್ಕದಿರ್ಪನೇ ನರಕದಲ್ಲಿ? ಒಡೆಯರಿಲ್ಲೆಂದು ಹಲವು ಪ್ರಾಣಿಗಳ ಹರಿಹರಿದು ಕೊಂದರೆ ಹರನಿಕ್ಕದಿಪ್ಪನೇ ಅಘೋರ ನರಕದಲ್ಲಿ? ಸಕಲ ಪ್ರಾಣಿಗಳಿಗೆ ಮೇಲಾರೈಕೆ ನಮ್ಮ ಸಕಳೇಶ್ವರನಲ್ಲದೆ ಮತ್ತೊಬ್ಬರುಂಟೆ?

**ಕಷ್ಟರು= ಕೆಟ್ಟ ಜನರು, ಪ್ರತಿಷ್ಠಿಸಿದ= ಶ್ರೇಷ್ಠನಾದ**

೬. ಜನಮೆಚ್ಚು ಶುದ್ಧನಲ್ಲದೆ ಮನಮೆಚ್ಚು ಶುದ್ಧನಲ್ಲವಯ್ಯ! ನುಡಿಯಲ್ಲಿ ಜಾಣನಲ್ಲದೆ ನಡೆಯಲ್ಲಿ ಜಾಣನಲ್ಲವಯ್ಯ! ವೇಷದಲ್ಲಿ ಅಧಿಕನಲ್ಲದೆ ಭಾಷೆಯಲ್ಲಿ ಅಧಿಕನಲ್ಲವಯ್ಯ! ಧನ ದೊರಕದೆ ನಿಸ್ಪೃಹನಲ್ಲದೆ ಧನ ದೊರಕಿ ನಿಸ್ಪೃಹನಲ್ಲವಯ್ಯ! ಏಕಾಂತದ್ರೋಹಿ ಗುಪ್ತಪಾತಕಿ ಯುಕ್ತಿಶೂನ್ಯಂಗೆ ಸಕಳೇಶ್ವರ ದೇವರು ಒಲಿ ಒಲಿ ಎಂದರೆ ಎಂತೊಲಿವನಯ್ಯಾ?

**ನಿಸ್ಪೃಹ = ಆಶೆಇಲ್ಲದವ; ಏಕಾಂತದ್ರೋಹಿ = ಯಾವಾಗಲೂ ಮನಸ್ಸಿನಲ್ಲಿ ದ್ರೋಹವನ್ನು ಬಗೆಯುವವ**

೭. ಮನ ಮನವೇಕಾರ್ಥವಾಗದವರಲ್ಲಿ, ತನುಗುಣ ನಾಸ್ತಿಯಾಗದವರಲ್ಲಿ, ಶೀಲಕ್ಕೆ ಶೀಲ ಸಮಾನವಿಲ್ಲದವರಲ್ಲಿ, ಬುದ್ಧಿಗೆ ಬುದ್ಧಿ ಕೂಟಸ್ಥನಾಗದವರಲ್ಲಿ, ಭಾವಕ್ಕೆ ಭಾವ ತಾರ್ಕಣೆಯಾಗದವರಲ್ಲಿ, ಅವರೊಡನೆ ಕುಳ್ಳಿರಲಾಗದು. ಗಡಣದಲ್ಲಿ ಮಾತನಾಡಲಾಗದು. ಅದೇನು ಕಾರಣವೆಂದಡೆ, "ಸಂಸರ್ಗ ದೋಷಗುಣಾಭವಂತಿ" ಎಂಬುದಾಗಿ ಮಹಂತ

ಸಕಳೇಶ್ವರದೇವ ಸಾತ್ವಿಕ ಸದುಭಕುತಿಯನರಿಯದವರ ಸಂಗದಿಂದ ಕೈಲಾಸಕ್ಕೆ ದೂರಾಗಿಪ್ಪರು.

**ಏಕಾರ್ಥ = ಒಂದೇ ಅಭಿಪ್ರಾಯ, ಐಕ್ಯತೆ, ಪ್ರೇಮ; ಕೂಟಸ್ಥ= ಮೇಲೆ ನಿಲ್ಲುವದು, ಎಂದೂ ಬಲಾಗದ ಸ್ಥಿತಿ; ತಾರ್ಕಣೆ= ಸರಿಯಾಗಿ ಕೂಡುವದು, ಸಂಘಟ್ಟನೆ; ಗಡಣ = ಸಮೂಹ.**

೮. ಕಾಮನೆಂಬ ಬಿಲ್ಲಾಳು ಉಂಟೆಂಬುದ ನಾವು ಕೇಳಿ ಬಲ್ಲೆವೈಸೆ. ಆವನೆಲ್ಲರನೆಸೆವ. ಅವ ನಮ್ಮ ಕಂಡಡೆ ಬೆಟ್ಟಿನ್ನ ಮಿಟ್ಟಿದುಡ (?) ಸಕಳೇಶ್ವರನನರಿಯದ ನಿರ್ಭಾಗ್ಯರನೆಸೆವಾ.

**ಬಿಲ್ಲಾಳು = ಬಾಣಹೊಡೆಯುವವ, ಎಸೆ= ಒಗೆ**

೯. ಮೊಲೆ ಮುಡಿ ಮುದ್ದು ಮುಖದ ಅಸಿಯ ನಡುವಿನವಳ ಕಂಡಡೆ ನಾನು ಮನದೊಳಗಳುಪದಿಪ್ಪೆನೆ ಅಯ್ಯ? ತನುವಿನ ಮೇಲೆ ಬ್ರಹ್ಮಚರ್ಯತ್ವವಳವಟ್ಟರೇನು ಮನದಮೇಲೆ ಬ್ರಹ್ಮಚರ್ಯತ್ವವಳವಡದನ್ನಕ್ಕ? ಸಕಳೇಶ್ವರದೇವನೇನರ್ಧನಾರಿಯಲ್ಲವೆ?

**ಅಸಿ = ಸಣ್ಣ, ಬಡಕ, ಕೃಶ; ಅಳುಪು = ಇಚ್ಛಿಸು.**

೧೦. ಕಿವಿಯಲ್ಲಿ ಕೀಟಕ, ಕೊರಳಲೊಂದೊದರು, ತಲೆಯಲ್ಲಿ ಹುಳಿತ ಡೊಂದೇರು ನೋವನರಿಯದೆ ವಿಷಯಕ್ಕೆ ಹರಿವುದು ಸೊಣಗನು. ಬೆನ್ನಹಿರ ನೆಲಕ್ಕೆ ನೂಕಲು ಬರವೆಯು ಕಾಗೆ ಬಂದಿರಿಯಲು ನೋವನರಿಯದೆ ವಿಷಯಕ್ಕೆ ಹರಿವುದು ಗಾರ್ದಭನು. ಹರೆಯ ಶಬುದಕ್ಕೆ ಬೊಬ್ಬೆಯ ರಭಸಕ್ಕೆ ತೊಟ್ಟಂಬು ತೊಡರುಚ್ಚಿ ಬೀಳಲು ನೋವನರಿಯದೆ ವಿಷಯಕ್ಕೆ ಹರಿವುದು ಹರಿಣನು. ಸಕಳೇಶ್ವರ ದೇವಾ ನೀಮಾಡಿದ ಮಾಯೆ ಆರಾರನಾಯತಗೆಡಿಸದು?

**ಕೀಟಕ = ಹುಳ; ಏರು = ಗಾಯ; ಸೊಣಗ =ನಾಯಿ; ಗಾರ್ದಭ = ಕತ್ತೆ ಹರೆ =ನಗಾರಿ; ತೊಡರು =ಬಂಧನ; ಹರಿಣ= ಚಿಗರೆ; ಆಯತ= ಒಳಗಾದದ್ದು ಅನುಕೂಲತೆ.**

೧೧. ಪರಮಾರ್ಥದ ಪರೀಕ್ಷೆಯನರಿಯದೆ ನಿಂದಿಸಿ ನುಡಿವರ ಕಂಡಡೆ ಏನೆಂಬೆ? ಅರಳಿಯ ಮರನುಲುಹೇಂಬೆ. ಮೂಗ ಜಾತಿಯ ಶಬುದವೆಂಬೆನು.

ಸಕಳೇಶ್ವರದೇವಾ ನಿಮ್ಮನುಭಾವವನರಿಯದವರ ಕಂಡೆನಾದಡೆ ಹಳಿ ಹಳಿ ಹಳಿ ಎಂಬೆನು.

**ಉಲುಹು = ಶಪ್ಪಳ, ಮೂಗ = ಮೂಕ, ಅನುಭಾವ = ಜ್ಞಾನ**

೧೨. ಬೆಚ್ಚಿನ ಮಡಕೆಯಂತೆ ಬಲ್ಸಿಸಿಕೊಂಡಿದ್ದಡೇನಯ್ಯ (?) ಮುತ್ತಾಗ ಹೂತಂತೆ. ಆಲ ಬೀಳಲು ಬಿಟ್ಟು ಜೆಡೆಗಟ್ಟಿಕೊಂಡಿರ್ದರೇನು? ಕಂಥೆ ಬೊಂತೆಯ ಹೊದ್ದೇನು ಚಿಂತಿಸುತ್ತಿರ್ದಡೇನು? ತನುಮನಧನವಂಚನೆ ಇಲ್ಲದ ಭಕುತನ ಮನವ ಮನೆಯ ಮಾಡಿಕೊಂಡಿಪ್ಪ ಸಕಳೇಶ್ವರದೇವಾ.

**ಬೀಳಲು = ಮರದ ಜಡೆ, ಕಂಥೆ = ರಗಟೆ, ದಪ್ಪಾದಅರಿವೆ, ಬೊಂತೆ = ಹಚ್ಚಡ**

೧೩. ಬಲೀಂದ್ರನ ಸಿರಿಯಿಂದಲಧಿಕರ ನಾನಾರನೂ ಕಾಣೆ. ಅಂತಹ ಸಂಪತ್ತು ಮೂರಡಿ ಗೈದದೆ ಹೋಯಿತ್ತು. ಕೆಡುವಂತಿದ್ದಿತೇ ಕೌರವನ ರಾಜ್ಯ? ಮುಡಿವಂತಿದ್ದಿತೇ ರಾವಣನ ಬಲ್ಲಾಳಿಕೆ? ಪರಸ್ತ್ರೀ ಲಕ್ಷ್ಮೀದೇವಿ ಗೊಲಿದು ಒಂದು ನಿಮಿಷದಲ್ಲಿ ಮಡಿದ. ಇದು ಸತ್ಯ, ಇದು ಸತ್ಯ. ಸಿರಿಸೌಕರ್ಯವೆಂಬುದು ಆಕಾಶದ ರಚನೆ. ಇದನರಿದು ದೇಹ ದಿಚ್ಚೆಯ ನತಿಗಳೆದು ನಮ್ಮ ಸಕಳೇಶ್ವರ ದೇವಂಗೋತು ನಾನೆಂಬ ಭ್ರಮೆಯುಳಿಯಾ ಮರುಳೆ.

**ಮಡಿ=ನಾಶನಾಗು, ಬಲ್ಲಾಳಿಕೆ= ಸಾಮರ್ಥ್ಯ, ಅತಿಗಳೆ=ದೂರಸರಿಸು, ಓತು=ಒಲಿದು.**

೧೪. ತಮ ತಮಗೆ ಸಮತೆಯ ಹೇಳಬಹುದಲ್ಲದೆ, ತಮ ತಮಗೆ ಸಮತೆಯ ನುಡಿಯಬಹುದಲ್ಲದೆ, ಕನಲಿಕೆಯ ಕಳೆದಿಪ್ಪರಾರು ಹೇಳಾ? ಒಬ್ಬರ ಸೊಬ್ಬರು ಹಳಿಯದಿಪ್ಪವರಾರು ಹೇಳಾ? ಮುನಿಸ ಮುಂದಿಟ್ಟಿಪ್ಪರು. ಇದು ಯೋಗಿ ಮಹಾ ಯೋಗಿಗಳಿಗರಿದಪ್ಪುದು ನೋಡಾ. ಸಕಳೇಶ್ವರ ದೇವಾ ನೀ ಕರುಣಿಸಿದವರಿಗಲ್ಲದಿಲ್ಲ.

**ಸಮತೆ = ಸಮಾಧಾನ; ಕನಲಿಕೆ = ಸಿಟ್ಟು; ಮುನಿಸು = ಸಿಟ್ಟು: ಅರಿದು ಆಶ್ಚರ್ಯ, ದುರ್ಲಭ.**

೧೫. ಕರ್ತನೊಬ್ಬನೆ ದೇವ. ಸತ್ಯವೆ ಸುಭಾಷೆ. ಭೃತ್ಯಾಚಾರವೇ ಆಚಾರವಯ್ಯ. ಮತ್ತೆ ದೇವರಿಲ್ಲ, ಮತ್ತೆ ಆಚಾರವಿಲ್ಲ. ಮತ್ತೆ ಸುಭಾಷೆ ಎಂಬವಿಲ್ಲ. ಮಹಂತ ಸಕಳೇಶ್ವರ ದೇವರ ನೊಲಿಸಿದ ಪುರಾತರ ಪಥವಿದು. ಅವಿತತವಿಲ್ಲದೆ ನಂಬುವುದು.

**ಪಥ= ದಾರಿ, ಅವಿತತ = ಸಂಚಲವಿಲ್ಲದೆ, ಗಟ್ಟಿಯಾಗಿ**

೧೬. ಕಾಮದ ಕಳವಳದಲ್ಲಿ ಹುಟ್ಟಿ ಸಂಸಾರವ ತೊಟ್ಟು ಲಿಂಗಮುಖ ಭವನರಿಯದವರೆಲ್ಲರು ಅಂತಿರಲಂತಿರಲಿ! ಬ್ರಹ್ಮಪಾಶವ ಕೊರಳಲ್ಲಿ ಹಿಡಿಸಿಕೊಂಡು ವಿಷಯಾದಿಗಳಂ ಕೊಂಡವರಂತಿರಲಂತಿರಲಿ! ಪಂಚವೇದಶಾಸ್ತ್ರವನೋದಿ ಲಿಂಗ ಉಂಟು ಇಲ್ಲವೆಂಬ ಶ್ವಾನ ಜ್ಞಾನರಂತಿರಲಂತಿರಲಿ! ತನುವ ಹೊತ್ತು ತೊಳಲುವ ಕಾಲವಂಚಕಯೋಗಿಗಳೆಲ್ಲ ಅಂತಿರಲಂತಿರಲಿ! ಪಂಚಮಹಾಶೈವರು ಭ್ರಷ್ಟರಾಗಿಹೋದರು. ಇವರನೆಂತು ಸರಿ ಎಂಬೆನಯ್ಯಾ ಲಿಂಗವಂತಂಗೆ? ಅದ್ವೈತಿಗಳೆಲ್ಲ ಲಿಂಗಾರಾಧನೆ ಹುಸಿ ಎಂದು ಬುದ್ಧಿ ತಪ್ಪಿ ನುಡಿದು ಗಮನ ಕೆಟ್ಟುಹೋದರು. "ಅದೃಶ್ಯಂಭಾವನಂ ನಾಸ್ತಿ ದೃಶ್ಯ ಮೇವ ವಿನಶ್ಯತಿ। ಅವರ್ಣ ಮಕ್ಷಯಂ ಬ್ರಹ್ಮಕಥಂಧ್ಯಾಯಂತಿಯೋಗಿನಃ॥" ಎಂದುದಾಗಿ ಪರಬ್ರಹ್ಮ ನಾನೆಂದಡೆ ಶಿರವ ದಂಡವ ಕೊಂಡರು ಕೇಳಿರಣ್ಣಾ. ಬ್ರಹ್ಮಾದಿಗಳು ಲಿಂಗಕ್ಕೆ ದೂರವಾಗಿ ಹೋದರು. ಅಹಮ್ಮಿಲ್ಲದ ಕಾರಣ ಸಕಳೇಶ್ವರಾ ನಿಮ್ಮ ಶರಣರು ಜಗದ್ವಂದ್ಯರಾದರು.

೧೭. ಎಕ್ಕೆ ಮಿನಿಕೆ ಮೊದಲಾಗಿ, ಅವು ಪಕ್ಷಕ್ಕೆ ಬಂದಡೆ ವಿಷ ಬಿಡುವುದೆ? ಸೊರೆ ವಾರುಧಿಫಣಿ ಅವು ಹರೆಯ ಹಿರಿದಾದಡೇನು? ಮನದಲ್ಲಿ ವಿಷ ಬಿಡದು. ಸಕಳೇಶ್ವರದೇವಾ ನಿಮ್ಮ ನಿಜವನರಿಯದ ಮನುಜಂಗೆ ನರೆ ಹಿರಿದಾದಡೇನು? ಮನದವಗುಣ ಬಿಡದು.

೧೮. ಗರ ಹೊಡೆದಂತೆ ಬೆರೆತುಕೊಂಡಿಪ್ಪರು. ಮರನ ನೇರಿ ಬಿದ್ದಂತೆ ಹಮ್ಮದಂಬೋಗಿಪ್ಪರು. ಉರಗನ ವಿಷವಾವರಿಸಿದಂತೆ, ನಾಲಿಗೆ ಹೊರಳದಂತೆ, ಕಂಗಾಣದಂತೆ, ನಿಮ್ಮ ಕರುಣವೆ ಕರ ಚಲುವ ಸಕಳೇಶ್ವರಯ್ಯ ಸೊಕ್ಕಿನವನ ಪರಿ ಬೇರೆ ತಂದೆ.

**ಗರ = ಗ್ರಹ, ಪಿಶಾಚಿ; ಬೇರೆ = ಸೊಕ್ಕಿನಿಂದನಡೆ, ಹಮ್ಮದ = ಎಚ್ಚರದಪ್ಪುವದು. ಉರಗ = ಹಾವು**

೧೯. ಸಂಸಾರವ ಬಿಟ್ಟುದೇ ಆಚಾರವಯ್ಯಾ. ಕಾಯದಿಚ್ಛೆಗೆ ಕಂಡವರಿಗೆ ಕಾರ್ಪಣ್ಯ ಬಡದಿಪ್ಪುದೇ ಶೀಲ. ಲಿಂಗಾಣತಿಯಿಂದ ಬಂದುದ ಕೈಕೊಂಬುದೇ ವ್ರತ. ಮನಘನವನಗಲದಿಪ್ಪುದೆ ಭಕ್ತಿ. ಸಕಳೇಶ್ವರದೇವಾ ನಿಮ್ಮ ನರಿದವನೆ ಶರಣಾ.

**ಕಾರ್ಪಣ್ಯ=ಕೃಪಣತ್ವೆ, ಆಶೆ; ಆಣತಿ=ಆಜ್ಞೆ,**

೨೦. ಸದ್ಭಕ್ತರಿಗೆ ಸಮಯೋಚಿತವ ಮಾಡುವವನ, ಸದ್ಭಕ್ತರಿಗೆ ನೀಡಿ ತನ್ನ ಹಸಿವ ಮರೆದಿಪ್ಪವನ, ಸದ್ಭಕ್ತರಿಗೆ ಉಳ್ಳುದೆಲ್ಲವ ಕೊಟ್ಟು ಐದರೇ ಎಂದು ಮರುಗುವ ಏಕೋಗ್ರಾಹಿ ಶರಣನ, ತೊಟ್ಟನೆ ತೊಳಲಿ ಅರಸಿ ಕಾಣೆನು. ಮೂರು ತೆರದ ಮುಕ್ತಿಯಂತಪ್ಪ ವರವ ಕೊಟ್ಟೊಡೆ ಯೊಲ್ಲೆನು. ಜಂಗಮಲಿಂಗಕ್ಕೆ ಅರ್ಥ ಪ್ರಾಣಾಭಿಮಾನವ ಕೊಟ್ಟು, ಅಹಂ ಕಾರವಿಲ್ಲದಿಹಂತಹ ಪುರಾತನರ ಮನೆಯ ಬಚ್ಚಲ ಬಾಲಹುಳುವಾಗಿ ಹುಟ್ಟಿಸಯ್ಯಾ ಸಕಳೇಶ್ವರಾ, ನಿಮ್ಮ ಧಮ್ಮ ನಿಮ್ಮ ಧರ್ಮ.

**ಐ=ಬರು, ತೊಳಲು ಅತ್ತಿತ್ತಹೋಗು, ಹುಡುಕಾಡು, ಶ್ರಮಪಡು**

೨೧. ಇದಿರೆನ್ನ ಹಳಿವರು ಮತಿಯ ಬೆಳಗುವರು. ಮನದ ಕಾಳಿಕೆಯ ಕಳೆವರೆನ್ನ ನೆಂಟರು. ದುರಾಚಾರದಲ್ಲಿ ನಡೆವರು ಕನ್ನಡಿ ಎನಗೆ. ಹ್ಯೇಯೋಪಾಯವ ತೋರುವರು. ಇದು ಕಾರಣ ಅನ್ಯದೇ ಶಕ್ಕೆ ಹೋಗಲೊಲ್ಲೆ. ಸಕಳೇಶ್ವರದೇವರ ತೋರುವರೊಳರಿಲ್ಲಿಯೆ.

**ಬೆಳಗು=ಸ್ವಚ್ಛಮಾಡು, ಕಾಳಿಕೆ=ಮಾಲಿನ್ಯ, ಕಳೆ=ದೂರಮಾಡು, ಹ್ಯೇಯ ಒಳರು ಶಕ್ತರು**

## ಭಕ್ತಿಯುಳ್ಳವನಾಗಿರುವುದು.

೨೨. ಯೋಗಿ ಜೋಗಿ ತಪಸಿ ಸನ್ಯಾಸಿ ನರಮಾಂಸಕನಿಲಪ ಟರು ಸುಳಿವರು ಕ್ಷುಧೆ ಕಾರಣ. ತೋರಿ ಮಾರಿ ಯುಂಬ ಬೆವಹಾರಿಗಳು. ನಿರ್ಣಯ ನಿರ್ಲೇಪ ಭಕ್ತಿಯುಳ್ಳವರ ನಲ್ಲದೊಲ್ಲ ಸಕಳೇಶ್ವರದೇವಾ.

**ಕ್ಷುಧೆ =ಹಸಿವೆ, ಬೆವಹಾರಿ = ವ್ಯಾಪಾರಸ್ಥ, ನಿರ್ಲೇಪ =ಸಂಬಂಧವಿಲ್ಲದ**

೨೩. ಹೊಯಿದ ಹರೆಗೆ ಕುಣಿದಾಡುವರೆಲ್ಲ. ಹಾಡಿದ ಗೀತಕ್ಕೆ ತಲೆ ದೂಗುವರೆಲ್ಲ. ಪಂಜರದೊಳಗಣರಗಿಳಿಯಂತೆ, ಅದು ಆಡುವುದು ಹಾಡು ವುದು. ಸಕಳೇಶ್ವರದೇವರಲ್ಲಿ ಅಭ್ಯಾಸಕ್ಕೆ ಮಜ್ಜನಕ್ಕೆರೆವರೆಲ್ಲ ಭಕ್ತರೆ?

**ಹರೆ =ನಗಾರಿ,**

೨೪ ಗಿರಿಯು ಕರದಿಂದೆತ್ತಿದಡೇನು? ಹರಿವ ವಾರುಧಿಯನಾ ಪೋಷಣವ ಮಾಡಿದಡೇನು? ಗಗನ ಗಮನದಲ್ಲಿ ಸ.ಳಿದಡೇನು? ಇವರೆಲ್ಲರು ಪವನದ ಬಳಿಯಲಭ್ಯಾಸಿಗಳು. ಅರ್ಚಿಸಿ ಪೂಜಿಸುವ ಮರ್ತ್ಯದ ಲೌಕಿಕರ ಮೆಚ್ಚ ಸಕಳೇಶ್ವರದೇವ ವೇಷ ಡಂಭಕರಾ.

**ವಾರುಧಿ =ಸಮುದ್ರ = ಅಪೋಷಣ = ಹೀರುವದು, ಕುಡಿಯುವದು,**

೨೫ ಮುಟ್ಟಿದಡೆ, ತಾನು ಮುಟ್ಟೆಂಬನಲ್ಲ. ನಿಷ್ಠೆಯು ಕುಡದಿದ್ದಡೆ ಸಾಕೈಸೆ. ಆಗಮುವನರಿಯದೆ, ಆಚಾರವ ಬೆರಿಸದೆ, ಪೂಜೆಯು ಕೈಕೊಂಬವನಲ್ಲ. ಸಕಳೇಶ್ವರ ದೇವ ತಾನೊಲಿದವರನಲ್ಲದೆ ಒಲ್ಲದವರ ಮೆಚ್ಚನಯ್ಯ.

೨೬. ಸದ್ಭಕ್ತರು ಲಿಂಗಾರ್ಚನೆಯು ಮಾಡುವ ಕಾಲದಲ್ಲಿ ಕದವ ಮುಚ್ಚಿ ಸಮಾಧಾನದಲ್ಲಿ ಲಿಂಗಾರ್ಚನೆಯು ಮಾಡುವುದು. ಶಿವಪೂಜೆಯು ಗುಪ್ತದಲ್ಲಿ ಮಾಡಬೇಕಾಗಿ ತೆರೆಯು ಕಟ್ಟುವುದು. ಪಾಪಿಯು, ಕೋಪಿಯು, ಶಿವಾಚಾರ ಪರಿಭ್ರಷ್ಟನು, ಅಳಿಗೊಂಬನು, ವೈದಿಕ ವಿಪ್ರನು, ಹೊಲ್ಲಹ ದೃಷ್ಟಿಯುಹನು, ಅನಾಚಾರಿಯು, ಮೂರ್ಖನು, ತನ್ನ ಗುರುವ ನಿಂದಿಸುವಾತನು, ಇಂತಪ್ಪವರುಗಳು ಪ್ರಮಾದದಿಂದಾದೊಡೆಯೂ ಕಂಡಡೆ ತಾ ಮಾಡಿದ ಲಿಂಗಾರ್ಚನೆ ನಿಷ್ಫಲವಹುದು. ಇದನರಿದು ಸಕಳೇಶ್ವರ ಲಿಂಗವ, ಏಕಾಂತದಲ್ಲಿ ಭಜಿಸುವ ಭಕ್ತರಿಗೆ ನಮೋ ನಮೋ ಎಂದು ಬದುಕಿದೆನಯ್ಯಾ.

**ಅಳಿಗೊಂಬ=ಕ್ರೂರ, ಹೊಲ್ಲಹ=ಅಯೋಗ್ಯ, ಪ್ರಮಾದದಿಂದ = ತಪ್ಪಿ**

೨೭. ಅಜಾತನು ಜಾತನ ಜಾತನೆಂಬೆನು. ಅಜಾತಂಗೆ ಕುಲಹೊಲೆ ಇಲ್ಲೆಂಬೆನು. ಹಿರಿಯ ಮಹೇಶ್ವರನೆಂಬೆನು. ಸಮಯಾಚಾರವ ಬೆರಿಸಲರ್ಮ್ಮೆನು. ನಿಚ್ಚ ಪೂಜಿಸುವ ಪೂಜಕ ನಾನು. ಸಕಳೇಶ್ವರದೇವಾ ಎನ್ನ ನಾಚಿಸ ಬೇಡಾ.

**ಸಮಯ=ಸಮಾಜ ಭೇದ; ಅರ್ಮ್ಮೆನು=ಸಮರ್ಥನಾಗೆನು. ನಿಚ್ಚ=ನಿತ್ಯ**

೨೮. ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವ ಮಿಟ್ಟೆಯು ಭಂಡರ ಕಂಡು ನಾಚಿತ್ತೆನ್ನ ಮನವು. ಉಪಚಾರವೇಕೋ ಶಿವಲಿಂಗದ

ಕೂಡೆ, ಶ್ವಪಚರಿಗಲ್ಲದೆ? ಸಕಳೇಶ್ವರಯ್ಯ ಇಂತಪ್ಪ ಮಾದಿಗ ವಿದ್ಯಾಭ್ಯಾಸದವರನೊಲಿಯಬಲ್ಲನೆ?

**ನಿಟ್ಟೆ=ಎತ್ತರವಾದ ಸ್ಥಳ, ದಿನ್ನೆ, ಶ್ವಪಚ=ಹೊಲೆಯ**

೨೯. ಈರೇಳ್ನೂರು ವರುಷ ಮಜ್ಜನಕ್ಕೆರೆದು ವೃಥಾ ಹೋಯಿತ್ತಲ್ಲಾ! ಏನೆಂದರಿಯದೆ ವೃಥಾ ಹೋಯಿತ್ತಲ್ಲಾ! ಅದೆಂತೆಂದರಿಯದೆ ವೃಥಾ ಹೋಯಿತ್ತಲ್ಲಾ! ಅಯ್ಯ ಎನ್ನ ಕಯ್ಯ ಕರಿದು ಬಿಳಿದಾಗದು. ಅಯ್ಯ ಎನ್ನ ತನುಮನಧನ ನಿಮ್ಮಲ್ಲಿ ಸ್ವಯವಾಗದಾಗಿ. ಒಂದುವ ಘಾಯಕ್ಕೆ ಮಗುವು ಲಿಂಗದೊಳಗಾಯಿತ್ತು. ಅನುಭವಕ್ಕೊಳಗಾಗದೆ ಎನ್ನ ವಿಚಾರಿಸಿ ನೋಡಿಹೆನೆಂದಡೆ ಏನು ಇಲ್ಲ. ಸುಳುಹಿನೊಳಗೆ ಅರಿದಿಹೆನೆಂದಡೆ ಸುಳುಹಿಂಗೆ ಭಂಗವಾಯಿತ್ತು. ಎನಗಿನ್ನು ಸುಳುಹ ಹೇಳಾ ಸಕಳೇಶ್ವರಾ.

**ಈರೇಳ್ = ಹದಿನಾಲ್ಕು**

## ಪ್ರಾರ್ಥನೆಯ ವಚನಗಳು.

೩೦. ನೀನೆನ್ನನೊಲ್ಲದಿದ್ದರೆ ನಾನಾರ ಸಾರಿ ಬದುಕುವೆನಯ್ಯಾ? ಮೇಕುದೋರಿ ಗಂಡನ ಮಾಡಿಕೊಂಡವರುಂಟೆ? ನಿಮ್ಮಿಂದ ಅಧಿಕರುಂಟೆ ಹೇಳಾ? ತಲೆಯೂರಿ ತಪ್ಪಸ್ಸಿದ್ದೊಡೆ ಅಲ್ಲಿ ಮೂರ್ತಿಯ ತೋರುವಾತನು ನೀನೆ. ಕಣ್ಣ ಮುಚ್ಚಿ ಕಮ್ಮರಿಯ ಹಾಯ್ದರೆಯೂ, ಅಲ್ಲಿ ಪದವಿಯ ಕೊಡುವನು ನೀನೆ. ನೀನು ಕರುಣಿಸುವನ್ನಕ್ಕರ ನಾನು ಹಿಂಗಿದೆನೆ ಹೇಳಾ ಸಕಳೇಶ್ವರಾ?

**ಸಾರು= ಸಮೀಪಕ್ಕೆಬರು, ಮೇಕು= ಶ್ರೇಷ್ಠತ್ವ, ಸೊಕ್ಕು, ಕಮ್ಮರಿ= ಕೊಳ್ಳ ತಗ್ಗು ಪ್ರದೇಶ.**

೩೧. ಮಾಡುವ ಭಕ್ತಂಗೆ, ಕೊಡುವ ದೇವಂಗೆ, ಎಂದೆಂದಿಗೂ ಕೇಡಿಲ್ಲ. ಮಾಡಿರೋ ಮಾಡಿರೊ. ಎನಗೆ ಆಯಿತ್ತು, ಹೋಯಿತ್ತೆಂಬ ಚಿಂತೆ ಇದೆ ಎಂಬ ಸಂತೋಷ ಬೇಡ, ಸಕಳೇಶ್ವರ ದೇವರವರನರಿದು ಸಲುಹುವನಾಗಿ.

೩೩. ಅಯ್ಯಾ, ನಿಮ್ಮಲ್ಲಿ ಆಯುವ ಬೆಡುವೆನೆ? ಸಂಸಾರಕ್ಕಾನಂಜು ವೆ. ಅಯ್ಯಾ ನಿಮ್ಮಲ್ಲಿ ಶ್ರೀಯ ಬೇಡುವೆನೆ? ಪರಾಂಗನೆಯ ಪಾಪ. ಅ ಯ್ಯಾ ನಿಮ್ಮಲ್ಲಿ ಮುಕ್ತಿಯ ಬೇಡುವೆನೆ? ಅದು ನಿಮ್ಮ ಪದವಿ. ಸಕಳೇಶ್ವರ ದೇವಾ ನಾನೇನುವನು ಒಲ್ಲೆ. ನಿಮ್ಮ ಶ್ರೀಪಾದಸೇವೆಯೇ ಸಾಕು.

**ಶ್ರೀ = ಸಂಪತ್ತು**

೩೪. ಅಡವಿಗೆ ಹೋಗಿ ಏವೆನು? ಮನದ ರಜತಮ ಬಿಡದು. ಅಡ ಕಾವನ ತೋರಿ ಗಿಡವ ಕಡಿವನ ಬೈದೆ. ಆಶ್ರಮವ ಕೆಡಿಸಿತ್ತಲ್ಲಾ. ಸಕಳೇ ಶ್ವರದೇವಾ ನಿನ್ನ ಮಾಯೆ ಎತ್ತ ಹೋದರೆ ಬೆನ್ನಬಿಡದು.

**ಏವೆನು = ಏನುಮಾಡಲಿ, ರಜ = ಧೂಳು, ಹೊಲಸು**

೩೫. ದೇಶ ದೇಶಾಂತರವ ತೊಳಲಿ ಬಳಲಿ, ಕೆಲರ ಹಳಿದು ಕೆಲರ ಹೊಗಳಿ, ವೃಥಾ ಹೋಯಿತ್ತೆನ್ನ ಸಂಸಾರ. ಗಿರಿಯ ಶಿಖರದ ಮೇಲೆ ಲಿಂಗಧ್ಯಾನದಲ್ಲಿ ಮೌನಿಯಾಗಿರಿಸು ಸಕಳೇಶ್ವರಾ.

೩೬. ದೇಹಧರ್ಮದಾಸೆ ಬೇರೆ. ಭಕ್ತಿ ಇಲ್ಲದ ಬಗೆ ಬೇರೆ. ಎನ ಗೆಂದು ಮಾಡಿದಿರೀ ಸಕಲ ಪ್ರಪಂಚುವನು? ಎನಗೆಂದು ಮಾಡಿದಿರೀ ಸಕಲ ವ್ಯಾಪಾರಂಗಳನು? ಎನಗೆ ನಿಶ್ಚಿಂತ ಪದವಿಯನಿನ್ನೆಂದಿಗೀವೆಯಯ್ಯಾ ಸಕಳೇಶ್ವರದೇವಾ.

೩೭. ಎನಗೆ ನೀನು ಮಾಡಿದ ಸಂಸಾರದ ಬಳಲಿಕೆ. ನಿನಗೆನ್ನ ಕಾಡುವ ಸಂಸಾರದ ಬಳಲಿಕೆ. ಬಳಲಿಕೆ ಇಬ್ಬರಿಗೆಯೂ ಸರಿ. ನಿನ್ನ ಹೆಚ್ಚೇನು? ಎನ್ನ ಕುಂದೇನು? ನೀನು ಭಕ್ತ ದೇಹಿಕ ದೇವನಾದ ಬಳಿಕ, ಸಕಳೇಶ್ವರದೇವಾ, ನೀನೂ ಬಲ್ಲೆ, ನಾನೂ ಬಲ್ಲೆ.

೩೮. ಅರ್ಥಸನ್ಯಾಸಿ ಬ್ರಹ್ಮಚಾರಿಯಾನಯ್ಯಾ! ದೊರಕದಿದ್ದೊಡೆ ಒಲ್ಲೆನೆಂಬೆನು. ದಿಟಕ್ಕೆ ಬಂದೊಡೆ ಪರಿಹರಿಸಲರಿಯೆನು. ಎನಗೆ ನಿಶ್ಚಿಂ ಯದ ದೆಸೆಯನೆಂದಿಂಗೀವೆಯಯ್ಯ ಸಕಳೇಶ್ವರಾ.

**ಪರಿಹರಿಸು = ಬಿಟ್ಟುಬಿಡು, ದೆಸೆ = ಸ್ಥಿತಿ ಈಯು = ಕೊಡು**

೩೯. ಎಲವದ ಎಕ್ಕೆಯ ಬೂರ ಕಾಗೆ ಗೂಗೆ ಗರಿಯ ಸುವಾರವೆಯಲ್ಲಿ ಪರಮಾಣುಗಳ ಕಲ್ಲ ಮೇಲೆ ಬೆಳೆದಿಹ ಹುಲ್ಲ ಕಡ್ಡಿಯ ಸೋಂಕುಗಳ ಬೇಡಿ ಬಾಳುವ ಮಾನವನಿಂದಲಿ ಬೇಡಿ ನಿಂದವು. ಇಂತುಟನರಿದು ವಿರಕ್ತಿಯಿಂದ ಸಕಳೇಶ್ವರದೇವಾ ಶರಣೆಂದರೆ ನಿಜಪದವ ಕೊಡುವುದಕ್ಕೆ ಸಂದೇಹಬೇಡಾ.



# ಮಹೇಶ್ವರ ಸ್ಥಲ.

## ಸ್ಥಿರಬುದ್ಧಿಯುಳ್ಳವನಾಗಿರುವುದು.

೪೦. ದಲವನೆತ್ತಿಕೊಂಡ ಬಳಿಕ ಬಲುಹ ಸಲಿಸಲೆ ಬೇಕು. ತನ್ನ ಮನವ ತಾನರಿದು ಗೆಲಲೇ ಬೇಕು. ದೇವರೊಲವುಳ್ಳವರ ಕಂಡು, ತಾನಾದೆನೆಂದೊಡೆ ಚಲಿಸನು ಕಂಡಯ್ಯಾ. ನೇಮವೆಂದಡೆ ತಡೆ ಮುಟ್ಟಿಸಲೀಯ್ಯಾ. ತಪ್ಪ ಹಿಡಿವೆ ನೀನು. ಇದು ಕಾರಣ ನಾನು ಪೆರತೊಂದನರಿಯದಂತಿರಿಸೆನ ಸಕಳೇಶ್ವರದೇವ.

**ದಲ = ಸೈನ್ಯ, ಬಲುಹ = ಸಾಮರ್ಥ್ಯ, ಸಲಿಸು = ಒಪ್ಪಿಸು, ಹೊರಗೆಡುವು ಚಲಿಸದು = ನಡೆಯಂದು, ತಡೆ = ದಂಡೆ, ಪೆರತು = ಎರಡನೆಯದು**

೪೧. ಭಕ್ತಂಗೆ ಬೇಡದ ಭಾಷೆ, ನಿನಗೆ ಕೊಡದ ಭಾಷೆ, ಭಕ್ತಂಗೆ ಬಿಡದ ಭಾಷೆ, ನಿನಗೆ ಕಾಡುವ ಭಾಷೆ, ಭಕ್ತಂಗೆ ಸತ್ಯದ ಬಲ, ನಿನಗೆ ಶಕ್ತಿಯ ಬಲ. ಇಬ್ಬರ ಗೆಲ್ಲಕ್ಕೆ ಕಡೆ ಇಲ್ಲ. ಈ ಇಬ್ಬರಿಗೆಯೂ ಒಡೆಯರಿಲ್ಲದ ಅಂಕ. ಇನ್ನು ಭಕ್ತನು ಭಕ್ತಿಯ ಛಲವ ಬಿಡನಾಗಿ, ಭಕ್ತ ಸೋತಡೆ ಭಕ್ತನಡಿಗೆ ಗೆಲವು. ಭಕ್ತ ಗೆದ್ದಡೆಂತು ಗೆಲವು? ಇದ ನೀನೆ ವಿಚಾರಿಸಿಕೊಳ್ಳಾ ಭಕ್ತದೇಹಿಕ ದೇವ ಸಕಳೇಶ್ವರಾ.

**ಗೆಲ್ಲ = ಜಯ, ಅಂಕ = ಗುರುತು**

೪೨. ಜಗವ ಕಲ್ಲು ನೆಲಕ್ಕೆ ಬಿದ್ದರೆ ಕೆಲಕ್ಕೆ ಸಾರುವೆನೆಗ್ಗ! ನಗುತ್ತಲು ಕಲ್ಲೆಣಿಸದೆ ಶಿವ ಶರಣೆನುತ್ತಿಹುದು. ನಗುತ್ತಲು ಕಲ್ಲೆಣಿಸದೆ ಹರ ಶರಣೆನುತ್ತಿಹುದು. ಸಕಳೇಶ್ವರದೇವ ವಿಮುಖನಾದಡೆ ನೆನಹೆಂಬಲಗಿನಿಂದ ಕೈಮಾಡುತ್ತಿಹುದು.

**ಎಗ್ಗ = ದಡ್ಡ, ವಿಮುಖ = ಹಿಂದೆಗೆಯುವದು, ನೆನಹು = ಧ್ಯಾನ, ಅಲಗು = ಬಾಣ**

೪೩. ಲೆಂಕನಾಗಲಿ, ಕಿಂಕರನಾಗಲಿ, ಶರಣನಾಗಲಿ, ಸಂದೇಹಿಯಾಗಲಿ, ದರ್ಶನ ಸ್ಪರ್ಶನವುಳ್ಳವರಾರಾದೊಡಾಗಲಿ, ದುಶ್ಶೀಲ, ಶೀಲಯುಕ್ತೊ ವಾಯೋ ವಾಕೋಽಪ್ಯಸ್ಯಲಕ್ಷಣಂ ಭೂತಿ! ಸಂಯುಕ್ತಂ ಸ

ಪ್ರೋಜ್ಯೋರಾಜ ಪುತ್ರವತ್" ಎಂದುದಾಗಿ ಸಕಳೇಶ್ವರದೇವರಾರ ಮನದಲ್ಲಿ ಹೋಗಿದ್ದಾನೆಂದರಿಯಬಾರದು.

**ಲೆಂಕ = ಸೇವಕ**

೪೪. ಸರ್ವಸಂಗ ಪರಿತ್ಯಾಗಿ ಎಂದೊಡೆ, ಭೋಗಕ್ಕೆ ಮರುಗಿಸುವೆ. ಪಾಕನೇಮಿ ಎಂದೊಡೆ ಷಡ್ರಸಕ್ಕೆ ಆಶಿಸುವೆ. ಮೌನವ್ರತಿ ಎಂದೊಡೆ, ಸನ್ನೆಯಲ್ಲಿ ಬೇಡಿಸುವೆ. ಬ್ರಹ್ಮಚಾರಿ ಎಂದೊಡೆ ಅಂಗನೆಯರಿಗೆರಗಿಸುವೆ. ಸಕಳೇಶ್ವರ ದೇವಾ ಎನ್ನಳಿವಾಡಿ ಕಾಡುವೆ.

**ಅಳಿವಾಡು= ನಾಶಮಾಡು, ತೊಂದರೆಕೊಡು.**

೪೫. ಘನಕೆ ಘನ ಪದವಿಯ ಬಯಸೆನಾಗಿ ಎನ್ನ ಮನವ ನೀ ಬಲ್ಲೆ. ಭಕ್ತರಿಗೆ ಬೇಡಿದ್ದ ಕುಡುವ ವರದಾನಿ ನೀ ನೋಡಯ್ಯಾ! ಆನೇನುವ ಬೇಡೆನಾಗಿ ಸಕಳೇಶ್ವರದೇವ ಎನ್ನ ಮಾತ ಮನ್ನಿಸುವ.

೪೬. ಇಂಥವರ ದೆಸೆಯಿಂದ ಇಂತುಟಾದುದೆಂದು ಚಿಂತಿಸುತ್ತಿಪ್ಪ ಭಾಷೆಗೆಟ್ಟ ಮನದವ ನಾನಲ್ಲವಯ್ಯಾ! ಎನ್ನಲ್ಲಿದ್ದುದನು ನೀವೆ ಬಲ್ಲಿರಿ. ಬಹ ಅನುವನು ನೀವೆ ಬಲ್ಲಿರಿ. ಸಕಳೇಶ್ವರ ದೇವಾ ಇವರ ಕಾವರು ನೀವೆಯಾಗಿ.

**ಅನುವ = ಸೌಕರ್ಯ, ಲಾಭ,**

೪೭. ಕಾಮಿಸಿ, ಕಲ್ಪಿಸಿ, ಭಾವಿಸಿ, ಬರಿದೆ ಬಳಲದಿರು. ಚಿಂತೆ ಮರುಳುತನ. ಅದೆಂತು ಬಂದುದನಂತೆ ಕಾಂಬುದು. ಚಿಂತೆ ಮರುಳುತನ. ಅಚಿಂತ್ಯ ಸಕಳೇಶ್ವರ ಮಾಡಿದಂತೆಯಲ್ಲದೆ ಎಂತು ಆಗದು. ಚಿಂತೆ ಮರುಳುತನ.

**ಬರಿದೆ = ವ್ಯರ್ಥವಾಗಿ**

೪೮. ದೇವರೆದ್ದ ಠಾವು ಏಳುವೆವಯ್ಯಾ! ದೇವ ಬಿದ್ದ ಠಾವು ಬೀಳುವೆವಯ್ಯಾ! ದೇವ ಸತ್ತ ಠಾವು ಸಾವೆವಯ್ಯಾ! ದೇವ ಬದುಕಿದ ಠಾವು ಬದುಕಿದೆವಯ್ಯಾ. ನಾವು ಸತ್ತು ದೇವ ಹಿಂದುಳಿದರೆ ಎನ್ನಿಂದ ವ್ರತಗೇಡಿಗಳಾರು ಹೇಳಾ ಸಕಳೇಶ್ವರದೇವಾ?

೪೯. ಶ್ವಾನ ಮುಟ್ಟಿದ ಪಾಯಸ ನೈವೇದ್ಯಕ್ಕೆ ಸಲ್ಲುವದೆ? ಭಕ್ತಿ ಮಿಶ್ರವಾದಡೆ ಈಶ್ವರ ನೊಲಿವನೆ? ಅರಗು ಮಳಲು, ಬೆರಿಸಿ ಉಕ್ಕ ಗೆಲುವಂತೆ, ನಿಮ್ಮ ಬೆರಿಸಿದವರು ನಿಟ್ಟೂರಿಸದಿಹರೆ ಷಡುದರ್ಶನವ? ಸಾಗರವ ದಾಂಟುವವ ಬಸವನ ಬಾಲವ ಬಿಟ್ಟು ಮತ್ತೊಂದಕ್ಕೆ ಹರಿದು ಕಡಲ ನೊಡಗೂಡುವಂತೆ, ಶಿವಲಿಂಗದೇವನ ಪೂಜಾಕ್ರಿಯೆಯು ಮರೆದರೆ ಒಡಗೂಡದಿಹನೆ ಕರ್ಮದ ಕಡಲವ? ದಿಟಪುಟವಿಲ್ಲದ ಭಕ್ತಿಯು ಮೆಚ್ಚ ಸಕಳೇಶ್ವರದೇವಾ.

**ಶ್ವಾನ = ನಾಯಿ ನಿಟ್ಟೂರಿಸು = ಗಟ್ಟಿಯಾಗಿಒರಿಸು ಕಡಲ = ಸಮುದ್ರ**
**ದಿಟಪುಟ = ನಿಶ್ಚಯು 'ಗಟ್ಟಿತನ**

೫೦. ನಿನ್ನ ಹಂಗೇಸು ಹರಿಯೆನು. ಅಂಜದೆ ನುಡಿವೆನು. ನೀ ಹೊರೆವ ಜಗವೆಲ್ಲವ ಜೀವರಾಶಿಗಳೊಳಗೆ ಆಸೆಗೆ ಬೇರೆ ಕೊಟ್ಟುದುಳ್ಳೊಡೆ ಹೇಳು ದೇವಾ! ಅರ್ಚಿಸಿ ಪೂಜಿಸಿ ನಿಮ್ಮ ವರವ ಬೇಡಿದೆನಾದೊಡೆ ಬಾರದ ಭವಂಗಳಲ್ಲಿ ಎನ್ನ ಬರಿಸು ಸಕಳೇಶ್ವರದೇವಾ

**ಹೊರೆ = ಸಂರಕ್ಷಿಸು'**

೫೧. ಕಾಯುದಿಂದ ಗುರವ ಕಂಡೆ. ಕಾಯುದಿಂದ ಲಿಂಗವಕಂಡೆ. ಕಾಯದಿಂದ ಜಂಗಮುವಕಂಡೆ. ಕಾಯುದಿಂದ ಪ್ರಸಾದವ ಕಂಡೆ. ಕಾಯುದಿಂದ ಸಕಳೇಶ್ವರ ದೇವರ ಪೂಜಿಸುವಲ್ಲಿ ಉತ್ತರ ಸಾಧಕನಾದೆಯಲ್ಲಾ ಎಲೆ ಕಾಯುವೆ.

# ಪ್ರಸಾದಿಸ್ಥಲ.

## ಲಿಂಗಾರ್ಪಣ ಭಾವವುಳ್ಳವನಾಗಿರುವುದು.

೫೨. ಆರುವನೊಲ್ಲೆನೆಂದು ಅರಣ್ಯಕ್ಕೆ ಹೋಹುದು ಕಾರ್ಯವಲ್ಲ. ದುರುಳುತನ. ಊರೊಳಗಿರ್ದರೆ ನರರ ಹಂಗು. ಅರಣ್ಯದೊಳಗಿರ್ದರೆ ತರುಗಳ ಹಂಗು. ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿಕೊಂಬ ಶರಣನೆ ಜಾಣ ಸಕಳೇಶ್ವರಾ.

೫೩. ಎನಗೆ ಸೋಂಕುವ ಸಕಲ ರುಚಿ ಪದಾರ್ಥಂಗಳನು ನಿನಗೆ ಕೊಡುವೆನೆಂದವಧಾನಿಸುವನ್ನಬರ ಎನಗೂ ಇಲ್ಲದೆ ಹೋಯಿತ್ತು, ನಿನಗೂ ಇಲ್ಲದೆ ಹೋಯಿತ್ತು. ಇಂತಪ್ಪ ಭೇದ ಬುದ್ಧಿಯ ಮಾಣಿಸಿ ಆನರಿದುದೆ ನೀನರಿದುದೆಂಬಂತೆ ಎನ್ನನೆಂದಿಂಗೆ ಇರಿಸುವೆಯಯ್ಯಾ ಸಕಳೇಶ್ವರಾ?

**ಮಾಣಿಸಿ = ಬಿಡಿಸಿ**

೫೪. ಅಚ್ಚ ಪ್ರಸಾದಿ ಅಚ್ಚ ಪ್ರಸಾದಿಗಳೆಂದು ನಿಚ್ಚ ನಿಚ್ಚ ಹುಸಿವರು ನೋಡಾ! ಬಯಲ ಬೆರಿಸುವಲ್ಲಿ, ವಾಯು ಬೀಸುವಲ್ಲಿ, ಭಾಜನ ಸಹಿತ ಭೋಜನ ಉಂಟೆ? ಅಂಗನೆಯರ ಸುರತದ ಸುಖವನು ಲಿಂಗ ವಿರೋಧದಿಂದ ನೆರೆವ ನಿಚ್ಚಪರಾಧಿಗಳನೊಲ್ಲ ನಮ್ಮ ಸಕಳೇಶ್ವರದೇವರು.

**ನೆರೆ = ಕೂಡು**

೫೫. ಆಚಾರವ ನುಡಿವೆ. ಅನಾಚಾರವ ನುಡಿವೆ. ನಮಗೆ ನಿಮಗೆ ಪ್ರಸಾದ ಸ್ವಾಯತ ನೋಡಾ! ನಾನು ಭಕ್ತನೆಂಬ ನುಡಿಗೆ ಸಕಳೇಶ್ವರ ದೇವ ನಗುವ.

**ಸ್ವಾಯತ = ಒಳಗೊಂಡ**



# ಪ್ರಾಣಲಿಂಗಿಸ್ಥಲ.

## ಪರಮಾತ್ಮನಲ್ಲಿ ಧ್ಯಾನವುಳ್ಳವನಾಗಿರುವುದು.

೫೬. ಗತಿಮತಿ ಚೈತನ್ಯ ಶಬ್ದ ಉಳ್ಳನ್ನಕ್ಕ ಕ್ರಿಯುಂತಂತೆ ನಡೆವುದು. ಉರುವಣೆ ಬೇಡ ಕಂಡೆಯಾ ಮನವೇ. ಎಲೆ ಮನವೇ ಕ್ರಿಯುಂತಂತೆ ನಡೆವುದು. ಹೂ ಮಿಡಿಯು ಹರಿದಡೆ ಹಣ್ಣಾಗಬಲ್ಲುದೆ? ಲಿಂಗದಲ್ಲಿ ಮನಲೀಯ್ಯವಾಗದನ್ನಕ್ಕ ದೇವ ಸಕಳೇಶ್ವರನೊಂತೊಲಿವ?

**ಉರುವಣೆ= ಮೇಲೆ ಹಾಯುವಿಕೆ, ತೊಂದರೆ,**

೫೭. ಲಿಂಗದ ಭಾವ ಹಿಂಗದ ನಂಬಿಗೆ. ಅಂಗನೆಯರ ಮೊಲೆ ಲಿಂಗವಾಯಿತ್ತು. ಕಾಯ ಸಂಸಾರ ಸುಖವು. ಇದು ಕಾರಣ ಸಕಳೇಶ್ವರ ನಿಮ್ಮ ಶರಣರ ಕಾಮಿಗಳೆಂದೆನ್ನಬಹುದೆ?

೫೮. ಜ್ಯೋತಿಯ ಮುಟ್ಟಿದ ಬತ್ತಿ ಎಲ್ಲ ಜ್ಯೋತಿಯಪ್ಪವಯ್ಯಾ! ಸಾಗರವ ಮುಟ್ಟಿದ ನದಿಗಳೆಲ್ಲ ಸಾಗರವಪ್ಪವಯ್ಯಾ! ಪ್ರಸಾದವ ಮುಟ್ಟಿದ ಪದಾರ್ಥವೆಲ್ಲ ಪ್ರಸಾದವಪ್ಪವಯ್ಯಾ! ಲಿಂಗವ ಮುಟ್ಟಿದಂಗವೆಲ್ಲ ಲಿಂಗವಪ್ಪವಯ್ಯಾ! ಸಕಳೇಶ್ವರದೇವಾ, ನಿಮ್ಮ ಮುಟ್ಟಿದವರೆಲ್ಲ ನಿಮ್ಮಂತಪ್ಪರಯ್ಯಾ!

೫೯. ಸರ್ವ ಸಂಗ ಪರಿತ್ಯಾಗವ ಮಾಡಿ ಲಿಂಗಗೂಡಾಗಿ, ತನು ಪರಿಣಾಮವನೈದಿ, ಪೆರತೊಂದನರಿಯದೆ ಇರದು. ಮೋಕ್ಷವಲ್ಲ. ಜಂಗಮದಲ್ಲಿ ತಕ್ಕ ಉಚಿತವ ಮಾಡಿ ನಿಮ್ಮ ಕರುಣವ ಪಡೆಯದ ಪಾಪಿ ನಾನಯ್ಯಾ. ಇಂತು ಎರಡಕ್ಕಲ್ಲದ ಉಭಯ ಭ್ರಷ್ಟ ನಾನು. ಸಕಳೇಶ್ವರದೇವನೊಲಿಯೊಲಿ ಎಂದೊಡೆ ಎಂತೊಲಿವನಯ್ಯಾ?

**ಪರಿಣಾಮ= ಸಂತೋಷ, ಮೋಕ್ಷ, ಮತ್ತು**

೬೦. ಸುಖವನನುಭವಿಸಿ ಯಾನುಸುಖದ ಹದನ ಕಂಡೆ. ದುಃಖವನನುಭವಿಸಿಯಾನು ದುಃಖದ ಹದನ ಕಂಡೆ. ಸಾಕೆಂದು ನಿಂದೆ ನಿಭ್ರಾಂತನಾಗಿ, ಸಾಕೆಂದು ನಿಂದೆ. ಸಕಳೇಶ್ವರದೇವನಲ್ಲದೆ ಪೆರತೇನು ಇಲ್ಲೆಂದು ಸಾಕೆಂದು ನಿಂದೆ.

**ಹದ = ರೀತಿ, ಅನುಭವ**

೬೧. ಕುರುಹಿನ ರೂಹಿನ ಕೈಯಲ್ಲಿ ದರ್ಪಣವಿದ್ದಲ್ಲಿ ಫಲವೇನು? ಒಂದಕ್ಕೆ ಜೀವವಿಲ್ಲ. ಒಂದಕ್ಕೆ ತೇಜವಿಲ್ಲ. ಕಾರಣ ವರಿಯದ ಕಾರಣ ಮನುಜರ ಕೈಯಲ್ಲಿ ಲಿಂಗ ವಿರ್ದು ಫಲವೇನು? ಅಂಗರಹಿತವಾದ ಸಂಗವ ನರಿಯರು. ಸಂಗ ರಹಿತವಾದ ಸುಖವ ನರಿಯರು. ನಿಸ್ಸಂಗಿ ನಿಂದ ನಿಲವ ಸಕಳೇಶ್ವರದೇವಾ ನಿಮ್ಮ ಶರಣ ಬಲ್ಲ.

ರೂಹು = ರೂಪು

೬೨. ಪಿನಾಕಿಯಲ್ಲಿ ಪಲ್ಲಟವಿಲ್ಲದ ಪಂಚೈವರ ಪ್ರಾಣಂಗಳು ಸಂಚ ಗೆಡವೆ? ಹಲವು ಕಾಲ ಲಿಂಗದ ಮೇಲಣ ನೋಟ ಭಾವ ತಪ್ಪಿ ತನು ಉರುಳಿ ಲಿಂಗವ ಬೆರಸನೆ ಅನುಮಿಷನು? ಒಬ್ಬ ಜಂಗಮ ಮನೆಗೆ ಬಂದಡೆ ಇಲ್ಲೆಂದು ಕಳುಹಿದರೆ ಅಲ್ಲಿ ಹೋಗದೆ ಬಸವರಾಜನ ಪ್ರಾಣ? ಬರು ಗಳಪಿ ಬೇಳಂಬವಿಲ್ಲದೆ ಪರಮ ಪದ ವುಳ್ಳವರ ಮಹಾ ಬೆಳಗೊಳಕೊಳ್ಳದೆ, ತನ್ನಿಚ್ಛೆಯಲಾಗಿ ಹೋಗುತ್ತಿಪ್ಪ ಲಿಂಗದಿಚ್ಛೆಯ ನರಿಯದವರ ಕಂಡಡೆ ಮೆಚ್ಚುವನೇ ನಮ್ಮ ಸಕಳೇಶ್ವರದೇವಾ?

ಪಿನಾಕಿ = ಈಶ್ವರ, ಪಲ್ಲಟ = ಬದಲು, ಭೇದ, ಸಂಚ = ಮರ್ಮ ಬರು = ವ್ಯರ್ಥ, ಗಳಪು = ವ್ಯರ್ಥಮಾತಾಡು ಬೇಳಂಬ = ಇಚ್ಛೆ, ಬಯಕೆ ಬೆಳಗು = ಪ್ರಕಾಶ

೬೩. ಏರಿಯ ಕಟ್ಟಬಹುದಲ್ಲದೆ, ನೀರ ತುಂಬಬಹುದೆ? ಕೈದು ಕೊಡಬಹುದಲ್ಲದೆ, ಕಲಿತನವ ಕೊಡಬಹುದೆ? ವಿವಾಹವ ಮಾಡಬಹುದಲ್ಲದೆ, ಪುರುಷತನವ ನರಸಬಹುದೆ? ಘನವ ತೋರಬಹುದಲ್ಲದೆ ನೆನಹ ನಿಲಿಸಬಹುದೆ? ಓದೋ ಕಾಲು ಬುದ್ಧಿ ಮುಕ್ಕಾಲು ಎಂಬ ಲೋಕದ ಗಾದೆ ಮಾತಿನಂತೆ ಸದ್ಗುರು ಕಾರುಣ್ಯವಾವರೂ ಸಾಧಿಸನವನಿಲ್ಲ ಸಕಳೇಶ್ವರಾ.

ಏರಿ = ಒಡ್ಡು

೬೪. ಲಿಂಗದೊಳನುಭಾವ ಹಿಂಗದ ಕಾರಣ, ಅಂಗನೆಯರ ಮೋಲಿ ಲಿಂಗವಾದವು. ತನುವೆ ತನ್ನ ಸುಖ, ಮನವೆ ಪರಮ ಸುಖ, ಸಕಳೇಶ್ವರ ನಿಮ್ಮ ಶರಣರಲ್ಲಿ ಕಾಮಿ ಎಂಬರೇ ನಂಬಿಯಣ್ಣನ?

ಅನುಭಾವ = ಜ್ಞಾನ

೬೫. ಸರೋವರದ ಮಂಡುಕನು ತಾವರೆಯ ನೆಳಲ ಸಾರಿದಡೆ, ರಿಮಳವದಕೇ ಅಯ್ಯಾ ಅ ಅ ಆ ಅ ಅರಿಬಾರದು. ಪರಿಮಳವದಕೆ ಅಯ್ಯಾ, ಆ ಅ ಅ ಅರಿಬಾರದು, ಮದಾಳಿಗಲ್ಲದೆ, ಸಕಳೇಶ್ವರದೇವಾ, ನಿಮ್ಮ ವೇದಿದ ವೇದ್ಯಂಗಲ್ಲದೆ.

೬೬. ಅಶನ ವ್ಯಸನಾದಿಗಳನಂತನಂತ. ಕಾಷಾಯಾಂಬರ ಧಾರಿಗಳನಂತನಂತ. ಸಕಳೇಶ್ವದೇವಾ ನೀನಲ್ಲದೆ ಪೆರತನರಿಯದವರು ಎತ್ತಾನುಬ್ಬರು.

೬೭. ಮೆಳೆಯ ಮೇಲೆ ಕಲ್ಲನಿಕ್ಕಿ, ಮೆಳೆ ಭಕ್ತನಾಗಬಲ್ಲುದೆ? ಮೇಹಕ್ಕಿ ಮೆಯ್ಯನೊರಸಿದೊಡೆ ಪಶುಗಳು ಮೆಚ್ಚುವವು. ಅನ್ನವನಿಕ್ಕಿ ಹಿರಣ್ಯವಕೊಟ್ಟರೆ ಜಗವೆಲ್ಲ ಹೊಗಳುವವು. ಒಳಗನರಿದು ಹೊರಗೆ ಮರೆವವರನಗೆ ನೀ ತೋರಾ ಸಕಳೇಶ್ವರಾ.

**ಮೇಹು = ಮೇವು, ಆಹಾರ; ಹಿರಣ್ಯ = ಬಂಗಾರ**

೬೮. ಗಿರಿ ಗಗನ ಗಂಹ್ವರ ದೊಳಗಿರ್ದಡಲ್ಲೇನೋ? ಮನವು ಲೇಸಾದಡೆ ಸಾಲದೆ? ಮನವು ಲೇಸಾಗಿರ್ದಡೆ ಸಾಲದೆ? ಪರಮ ಸುಖಿಯಾಗಿಪ್ಪರಣನ ಹೃದಯದಲ್ಲಿ ಸದಾ ಸನ್ನಿಹಿತ ಸಕಳೇಶ್ವರದೇವಾ

**ಗಂಹ್ವರ= ಗುಹೆ**

೬೯. ಚಂದ್ರೋದಯದಲುಂಬ ಚಕೋರಕೋಗರವ ಹಾಕಿ ಬಸಿಬಡಿದುಕೊಂಡು ಉಣ್ಣದೆಂದಳುವರು ನೋಡಾ! ಲೋಕದ ಚಿಂತೆಯನಂತವನಾಡುವರಲ್ಲದೆ ತಮ್ಮ ಚಿಂತೆಯನಾಡರೊಪ್ಪಚ್ಚಿಯು ನೋಡಾ. ಹಂತ ಸಕಳೇಶ್ವರದೇವಾ ನಿಮ್ಮ ಶರಣರ ನಿಲವಿಂಥದಯ್ಯ.

**ಓಗರ= ಅನ್ನ; ಬಸಿರ= ಹೊಟ್ಟೆ; ಒಪ್ಪಚ್ಚಿ= ಸ್ವಲ್ಪ, ತುಸು**

೭೦. ಮಗನಿಗೆ ತಂದೆಯಾಗಿರುಹ, ತಂದೆಗೆ ಮಗನಾಗಿರುಹ, ಹೆಂಡಗೆ ಗಂಡನಾಗಿರುಹ, ಊರಿಗೆ ಒಕ್ಕಲಾಗಿರುಹ, ಮಸಣಕ್ಕೆ ಹೆಣನಾಗಿಹ, ಸಕಳೇಶ್ವರದೇವ ನಿಮ್ಮ ಶರಣನ ಪರಿ ಬೇರೆ.

**ಮಸಣ = ಶ್ಮಶಾನ**

೭೧. ಮನ ನಿಮ್ಮ ಬೆಂಸಿದಡೆ, ಬಿನ್ನಾಣಕ್ಕೆ ಹೇಳುವನಲ್ಲ. ಅನುಪಮ ಭಕ್ತಿ ಸುಖ ಸಾರಾಯ ಸಮರ್ಥನಾಗಿ ತನು ನಿಪ್ಪಂತೆ ಇಪ್ಪ ನೋಡಾ. ಮನುಜರ ಕಂಗಳಿಗೆ ಜ್ಞಾನಮೂರ್ತಿ ಜ್ಯೋತಿಯಂತಿರ್ಪ ಮಹಂತ ಸಕಳೇಶ್ವರ ದೇವನ ನಿಲವು.

**ಬಿನ್ನಾಣ = ವಿಜ್ಞಾನ, ಯುಕ್ತಿ; ನಿಲವು = ಸ್ಥಿತಿ, ರೀತಿ.**



# ಶರಣಸ್ಥಲ.

## ಶರಣನ ಲಕ್ಷಣಗಳು.

೭೨. ಶತವೇದಿ, ಸಹಸ್ರವೇದಿಗಳು, ಕಬ್ಬುನವ ಹೊನ್ನ ಮಾಡುವ ಸಿದ್ಧರಸವೇದಿಗಳಾದಡೇನಂತಿರಲಿ, ದೀಪವಾದಿಗಳು ಜನಾದಿಗಳು ಹಿರಣ್ಯಂಗಳ ವೇದಿಸುವ ವೇದಿಗಳಾದಡೇನಂತಿರಲಿ, ಅಂತಿರಲಿ. ಘಟಂದಿಸಪ (?) ಚಂದನ, ಪರುಷ, ಕಾಗೆಯು ಹೊಂಬಣ್ಣವ ಮಾಡುವ ಮೇರುವಾದಡೇನಂತಿರಲಿ, ಅಂತಿರಲಿ. ಸಕಳೇಶ್ವರದೇವಾ ನಿಮ್ಮ ಶರಣ ಸ್ವತಂತ್ರ ಘನವೇದಿ ಸ್ವರವೇದಿ ಶಬುದವೇದಿ ಎಂಬುವರು ಲಿಂಗವೇದಿಗಳಿಗೆಂತು·ಸರಿ ಎಂಬೆ?

೭೩. ಪರುಷ ಮೃಗ ಬಂದು ನಿಂದಲ್ಲಿ ಜನ್ನ ಜಯವಾಗದೆ ಧರ್ಮಂಗೆ? ಲಿಂಗ ಜಂಗಮ ಭಕ್ತಿ ಪ್ರಜ್ವಲಿಸದೆ ಸಿರಿಯಾಳಂಗೆ? ಪ್ರಸಾದವ ಬಿಬ್ಬಿಬಾಚಯ್ಯ ಮೆರವುತ ಬಪ್ಪಲ್ಲಿ ಅರಿಯದೆ ನಿಂದಿಸಿದಡೆ ಹರಿದು ಹತ್ತದೆ ಉರಿಯ ನಾಲಿಗೆ? ಗ್ರಾಮದಿ ಹರನಿತ್ತ ನಿರೂಪ ವಿಡಿಸಿದ ಮಾರ್ಗದಲ್ಲಿ ಮಾರಾರಿಯ ಶರಣರು ಬಂದು ನಿಂದಲ್ಲಿ, ಅರ್ಧಗೃಹಂಗಳುಳಿಯವೆ? ಸದ್ಯೋಜಾತನ ಶರಣ ಧರೆಯ ಉರಿಯ ನಾಲಿಗೆಯಲ್ಲದವನು ಅಂಗಣ ಮೆಟ್ಟಲಾಗದೆಂದಡೆ ಉರಿಯ ಜ್ವಾಲೆಯ ಬಿಟ್ಟಡೆ ಪರಿಹರಿಸದೆ ಕುಂಚಿಗೆಯ ತುದಿಯಲ್ಲಿ? ಪರವನೊಲ್ಲದ ಶರಣರು ಸ್ವತಂತ್ರ ಮಹಿಮರು. ಅದೆಂತೆಂದಡೆ, ಅವರೆಂದಂತೆ ಅಹುದೆನ್ನದೆ ಅಂಗದ ಮೇಲೆ ಲಿಂಗ ಪ್ರತಿಷ್ಠೆಯಾಗದೆ ಶಿವಯೋಗಿ ಸಿದ್ಧರಾಮಯ್ಯಂಗೆ, ಸಕಲ ಭೂತ ದುರಿತಂಗಳು ಬಿಟ್ಟೋಡುತ್ತಿದ್ದವು, ಸಕಳೇಶ್ವರ ದೇವಾ ನಿಮ್ಮ ಶರಣನ ದೇವತ್ವಕಂಜಿ.

೭೪. ಉಡಲು ಸೀರೆಯ ಕಾಣದೆ ಬತ್ತಲೆ ಇಪ್ಪರಯ್ಯ. ಉಣಲಶನವ ಕಾಣದೆ ಹಸಿದಿಪ್ಪರಯ್ಯ. ಮಿಾಯಲೆಣ್ಣೆಯ ಕಾಣದೆ ಮಂಡೆ ಬೋಳಾಗಿಪ್ಪರಯ್ಯಾ? ದಿಟದಿಂ ಬಿಡಿಸಬಾರದಂತೆ ಈ ಸಟೆಯ ಸಂಸಾರವ ಧರಿಸಿಪ್ಪವರಿಗಂಜುವೆ ಕಾಣಾ ಸಕಳೇಶ್ವರಾ.

**ಮಿಾಯು = ಸ್ನಾನಮಾಡು,**

೭೫. ಅಂಗದ ಗುಣವಳಿದು ಲಿಂಗಾಂಗಿಯಾದ ನಿಜಶರಣನು ಜಗನ ಠಕ್ಕರಾದ ಜಂಗುಳಿಗಳ ಬಾಗಿಲುಗಳಿಗೆ ಹೋಗನು ನೋಡಾ;

ಹೋದೊಡೆ ಗುರುವಾಕ್ಯವಿಡಿದು ಹೋಗಿ ಲಿಂಗಾರ್ಪಿತ ಭಿಕ್ಷಾ ಎಂದು ಭಿಕ್ಷವ ಬೇಡಿ, ಲಿಂಗಾಣತಿಯಿಂದ ಬಂದ ಭಿಕ್ಷವ, ಲಿಂಗ ನೆನಹಿಂದ ಲಿಂಗ ನೈವೇದ್ಯವಾಗಿ ಕೈಕೊಂಡು, ಬಂದ ಬಂದ ಸ್ಥಲವನರಿದು, ಲಿಂಗಾರ್ಪಿತವ ಮಾಡಬೇಕು. ಅದೆಂತೆಂದೊಡೆ, "ರಾಜಾನ್ನಂ ನರಕಶ್ಚೈವ ಸೂತಕಾನ್ನಂ ತಥೈವ ಚ ಮೃತಾನ್ನಂ ವರ್ಜಯೇತ್ ಜ್ಞಾನೀ ಭಕ್ತಾನ್ನಂ ಭುಂಜಿಯೇತ್ಸದಾ" ಇಂತೆಂದುದಾಗಿ, ಲಿಂಗಾಂಗಿಗೆ, ಲಿಂಗಾಭಿಮಾನಿಗೆ, ಲಿಂಗಪ್ರಾಣಿಗೆ ಇದೇ ಪಥವಯ್ಯಾ ಸಕಳೇಶ್ವರದೇವಾ ನಿಮ್ಮಾಣೆ.

**ಜಂಗುಳಿ = ಸಮುದಾಯ ಗುಂಪು**

೭೬. ಶಿವಯೋಗಿ ಭಿಕ್ಷವ ಕೊಂಬಲ್ಲಿ ಜಾತಿ ಸೂತಕ ವಿಲ್ಲದಿರಬೇಕು. ಆಚಾರ ಸಂಕಲ್ಪವಿಲ್ಲದಿರಬೇಕು. ಶಿವಂಗೆ ಸಲ್ಲದ ದ್ರವ್ಯಕ್ಕೆ ಕೈಯ್ಯಾನದಿರಬೇಕು. ಇಂತೀ ಕ್ರಮವರಿದು ಲಿಂಗನೈವೇದ್ಯ ಭಿಕ್ಷವ ಕೊಳಬಲ್ಲರೆ ಆತನೇ ಶರಣ ಸಕಳೇಶ್ವರಾ.

**ಆನು = ಕೊಡು,**

೭೭. ಕಾಡ ಪತ್ರೆಯನಾ ಕೀಡಿ ತಿಂದಿರನೆ? ಉಡು ಏಕಾಂತ ನಿವಾಸಿಯೇ? ತೋಳ ದಿಗಂಬರಿಯೇ? ಎತ್ತು ಬ್ರಹ್ಮಚಾರಿಯೆ? ಬಾವುಲು ತಲೆಕೆಳಗಾಗಿರ್ದಡೆ ತಪಸಿಯೆ? ಸಕಳೇಶ್ವರದೇವಾ, ನಿಮ್ಮ ನಿಜವನರಿಯುವ ಶರಣರು ಹೊರಹಂಚು ಒಳಬೊಳ್ಳೆ. ಒಲ್ಲರು ಲಿಂಗೈಕ್ಯರೂ.

**ಬಾವುಲು = ತೊಗಲಬಾವುಲಿ, ಹೊರಹೊಂಚು = ಹೊರಗಿನವೇಷ; ಒಳಬೊಳ್ಳೆ = ಒಳಗೆಪೊಳ್ಳಾದದ್ದು.**

೭೮. ಭಕ್ತನೆಂಬನು ಬಸವಣ್ಣನ. ಶರಣನೆಂಬನು ಪ್ರಭುದೇವರ. ಐಕ್ಯನೆಂಬನು ಅಜಗಣ್ಣನ. ಹಿಂದೆ ಆದವರಿಲ್ಲ, ಇನ್ನುಮುಂದೆ ಆವರಿಲ್ಲ. ಸಕಳೇಶ್ವರದೇವಾ ನಿಮ್ಮಶರಣರು ಮೂವರೆ.

೭೯. ಬ್ರಹ್ಮಾದಿಗಳು ಲಿಂಗಕ್ಕೆ ದೂರಾಗಿ ಹೋದರು. ಅಹಮ್ಮಿಲ್ಲದ ಕಾರಣ ಸಕಳೇಶ್ವರದೇವಯ್ಯ ನಿಮ್ಮ ಶರಣರು ಜಗವಂದ್ಯರಾದರು.

**ಅಹಂ = ಸೊಕ್ಕು**

# ಐಕ್ಯಸ್ಥಲ

೮೦. ದುಃಖ ಹೋಯಿತ್ತು, ತನ್ನಲ್ಲಿ ತಾನಿಲ್ಲದೆ. ಸುಖ ನಿಂದುದು ತನ್ನಲ್ಲಿ ತಾನು ನಿಜವಾಗಿ ನಿಂದವಂಗೆ, ಸಕಳೇಶ್ವರಯ್ಯನು ತಾನಾಗಿ ನಿಂದ ವಂಗೆ.

೮೧. ಮೃತ್ತಿಕೆ ಒಂದರಲಾದ ಭಾಂಡದಂತೆ, ಚಿನ್ನ ಒಂದರಲಾದ ಬಂಗಾರದಂತೆ, ಉದಕ ಒಂದರಲಾದ ವಾರಿಕಲ್ಲಂತೆ, ಬ್ರಹ್ಮದಿಂದಲಾದ ಜಗವು ಭಿನ್ನವೆಲ್ಲಿಯದು ಸಕಳೇಶ್ವರಯ್ಯಾ?

**ಮೃತ್ತಿಕೆ = ಮಣ್ಣು, ಬಂಗಾರ = ಆಭರಣ, ವಾರಿಕಲ್ಲು = ಆಣೇಕಲ್ಲು**

೮೨. ಅರುಹನಾಹಾರಂಗೊಂಬುದೇ ಪರಮ ಸುಖ. ಮರವೆಗೆ ತೆರಹುಂಟೆ ಶಿವೈಕ್ಯಂಗೆ? ಇತರ ಸುಖ ಬೆವಹಾರ. ಅರು ಹಿರಿಯರ ಸಂಗ ಸುಖವೆ ಆಹಾರ, ತೃಪ್ತಿಯಿಂದತಿಶಯ. ಆ ಚರಿತ್ರನ ಮನವ ಮಹಂತ ಸಕಳೇಶ್ವರ ತಾನೆ ಬಲ್ಲ.

**ತೆರಹು = ಸ್ಥಳ, ಬೆವಹಾರ = ವ್ಯಾಪಾರ, ಕಾರ್ಯ**

೮೩. ಸರ್ಪದಷ್ಟವಾದವರು ತಮ್ಮ ತಾವರಿಯರು. ಕಾಮದಷ್ಟವಾದವರು ಲಜ್ಜೆ ನಾಚಿಕೆಯ ತೊರೆವರು. ಸಂಸಾರ ದಷ್ಟವಾದವರು ಪರಮಾರ್ಥವನರಿಯರು. ಲಿಂಗ ದಷ್ಟವಾದರೆ ಅಂಗವೆನಲಿಲ್ಲ. ಆರಾಧ್ಯಪ್ರಿಯ ಸಕಳೇಶ ದೇವನಲ್ಲಿ ಸುಖಿಯಾಗಿಪ್ಪರು.



# ಬಹಳ ಅಶುದ್ಧ ವಚನಗಳು.

೮೪. ಕಸವ ಬೋಹರಿಸಿ ದೇಹಾರಕ್ಕೆಡೆಮಾಡಿ ಕಸನಿರಲಿ:, ದೇಹಾರಶುಚಿಗೆ ಸೊಖಿತನಲ್ಲ ಪರದೈವವುಳ್ಳವಂಗೆ ಗುರುಲಿಂಗವಿಲ್ಲ. ಪರಕೆ ವಿಖಾಸಲ ಹಿಡಿಯಲು ಲಿಂಗಕೋಗರವಿಲ್ಲ. ಇದು ಕಾರಣ ಇಷ್ಟತ್ರಿನ ಬಳಿನೀರು ಸನ್ನಿ ಪರಮಾರ್ಥಕ್ಕೆ ಸಲ್ಲರು. ಹರಭಕ್ತರೊಲ್ಲರು. ಸಕಳೇಶ್ವರ ದೇವನವರ ಮೆಚ್ಚ.

**ಬೋಹರಿಸು = ಸುತ್ತಗಟ್ಟು, ದೇಹಾರ = ಕೆಟ್ಟಗತಿ**

೮೫. ನವ ದಾಸಾನತಿ ಬಳನೆಂದಡೆ ಒಂದು ಕೇಶವ ಕಿತ್ತನೆ? ಶಿವನಿತ್ತ ಪಿಂಡದ, ಶ್ರೀರಾಮನು ಸೀತೆಗೆ ದಿಬ್ಬ್ಯವ ನಿಕ್ಕಿಪೆನೆಂದು ಹೊಡಕುಂಡದೊಳಗುರುಹಿದೊಡೆ ಬ್ರಹ್ಮಾಂಡವನೊಡೆದು ಮರುಳುತ್ತಿಪ್ಪಲ್ಲಿ ಉರಿನಾಲಿಗೆಯು ಕೀಳನೆ? ಪರಮನೊಲಿದ ಪಾಶುಪತಿ ನಿರೂಪನೊಲಿದಖುಷಿಯು ಒಂದು ವಾಕ್ಯದಿಂದ ಜಲಸಾಗರಂಗಳು ಬಂಧನಕ್ಕೆ ಬಾರವೆ? ನಳನೀಲರ ಕೈಯ್ಯಲ್ಲಿ ಈಶ್ವರನ ಶರಣರ ಗಾಸೆ ಮಾಡಿದನೆಂದಡೆನೊಸಲಕ್ಕರವ ತೊಡೆಯನೆ? ಅಸುರನ ಪ್ರಹರಾಜನವಿಡಿದು ಹಿರಣ್ಯಕನಕೊಂದು ಶಿರವ ಹೋಗಾಡನೆ ನರಸಿಂಹನು? ಸ್ವತಂತ್ರನಯ್ಯ, ಸಕಳೇಶ್ವರದೇವಾ ನಿಮ್ಮ ಶರಣನು. ನಿಡಿಲ ಸ್ವೀಕರಿಸನೆ ಶಿವಯೋಗಿ ಸಿದ್ಧರಾಮಯ್ಯನು?

೮೬. ವೇದವಿದ್ದನಿತು ಬ್ರಹ್ಮರಾಕ್ಷಸನಾದಲ್ಲಿ; ಸಮತೆ ಇದ್ದನಿತು ಸಾಗುರಿಯಲಿ, ವಿರರಿಕುವರ ಸಾವಿನಲಿದ್ದನಿತು, ಶಿವಪದವಾಗಲರಿವುದೆ? ತಪ್ಮಲ್ಲಿ ಶಿವಸುಖವಿಲ್ಲದನುಭಾವ ಸಕಳೇಶ್ವರದೇವನರಿದ ಶಿವೈಕ್ಯ ಅರಿಯದ ಮರುಳುಗಳಲ್ಲಿ ಏನಿಪ್ಪಡೇನು?

೮೭. ಶಂಭುವಿಕ್ಕಿದಾಜ್ಞೆಯ ಮೀರಿ ಅಂಬರ ಪಡ್ಡಬಿದ್ದರೆ, ಅಂಬುಧಿ ಮೇರೆವರಿಯಿತೆ? ಕರುಣಿ ಎಂಬುದು ನಿರಲಿ ನಿರಇತೆ, ತಾನಿಪ್ಪನೆ ಆತನೊಳಗೆ? ಅಂಗದ ಮೇಲಣ ಲಿಂಗ ಹಿಂಗಿದ ಭಂಗವನರಿಯದೆ ನುಡಿವುತ್ತಿಪ್ಪ ಭಂಗಿತರನೇನೆಂಬೆನಯ್ಯ? ಹ್ಯೇಯುವ ನುಡಿದಡೆ ಹೇಸುವನಯ್ಯ

ಶಿವನು. ಸ್ವೀಕರಿಸುವನಾ ಕೆಲರ ಕೈಯ್ಯಲಿ. ಸತ್ಯವುಳ್ಳರಿ ಸಾಗರವ ಹೊಕ್ಕ ಲಿಂಗ ಅಗ್ರದಿಂದ ಬಾರನೆ ಸಕಳೇಶ್ವರದೇವಾ ನಿಮ್ಮ ಶರಣರಿಗೆ.

೮೮. ಚಿಕ್ಕಟ್ಟ್ವ ಕಡಿದಡೇನು? ನಕ್ಕಲೆಯರಿಯದು. ಹೊಕ್ಕು ಹರಿದು ಹೊಲನ ಮೇಯಲರಿಯದು. ಮಕ್ಕಳ ಹಡೆದಡೇನು? ಹೊಕ್ಕಲು ರಾದದು. ಲೆಕ್ಕ ಕೊಂಡ್ಯೈನೂರಿದ್ದಡೇತಕೆ ಬಾತೆ ಮಾರಯ್ಯ? ಮಿಕ್ಕಕು ಕವಿಗಳರೆ ವಚನ ಹೊಲದಕುಕ್ಕೆ ತೆನೆಯಾದಂತೆ ಕಾಣಾ ಸಕಳೇಶ್ವರ ದೇವಾ.



ಶಿವಾನುಭವ ಗ್ರಂಥಮಾಲಾ ನಂ. ೨೧

# ಕೈ. ವಾ. ಚನ್ನಬಸಪ್ಪ ಬಸಲಿಂಗಪ್ಪ
# ಧಾರವಾಡ
## ಇವರ ಚರಿತ್ರೆಯು.



ಸಂಪಾದಕರು.

**ರಾ|| ಸಾ|| ಫ. ಗು. ಹಳಕಟ್ಟಿ**

ಬಿ. ಎ. ಎಲ್. ಎಲ್. ಬಿ. ವಕೀಲ

**ವಿಜಾಪುರ.**

೧೯೩೦

**ಬೆಲೆ. ೪ ಆಣೆ.**

# ಪ್ರಸ್ತಾವನೆ.

## ೨ ನೇ ಆವೃತ್ತಿ.



೧೬ ವರ್ಷಗಳ ಹಿಂದೆ ಈ ಚರಿತ್ರೆಯು ೧ ನೇ ಆವೃತ್ತಿಯು ಪ್ರಸಿದ್ಧಿ ಸಲ್ಪಟ್ಟಿತ್ತು. ಅದರ ಪ್ರತಿಗಳು ಈಗ ಸಿಗುವದಿಲ್ಲಾದ್ದರಿಂದಲೂ ಚನ್ನ ಬಸವಪ್ಪನವರ ಚರಿತ್ರೆಯನ್ನು ಈಗಿನ ಕಾಲಕ್ಕೆ ಕರ್ನಾಟಕದ ಅಭಿಮಾನಿಗಳು ಅರಿಯುವದು ಅವಶ್ಯ ತೋರಿದ್ದರಿಂದಲೂ ಮೊದಲಿನ ಆವೃತ್ತಿಯಲ್ಲಿ ಸ್ವಲ್ಪ ಹೆಚ್ಚುಕಡಮೆ ಮಾಡಿ ತಿದ್ದಿ ಈ ಎರಡನೇ ಆವೃತ್ತಿಯನ್ನು ಪ್ರಸಿದ್ಧಿಸಿದ್ದೇವೆ- ಆದರೆ ಇದರಲ್ಲಿಯ ವಿಷಯಗಳಲ್ಲಿ ಯಾವ ಹೆಚ್ಚುಕಡಿಮೆ ಮಾಡಿಲ್ಲ.

ತಾ. ೨೪--೪--೨೦ **ಫ. ಗು. ಹ.**

---

# ಪ್ರಸ್ತಾವನೆ.

## (೧ ನೇ ಆವೃತ್ತಿ.)



೧೯೧೧ ನೇ ಇಸವಿಯ ಡಿಸೆಂಬರ ತಿಂಗಳಿನಲ್ಲಿ ವಿಜಾಪುರದಲ್ಲಿ ವೀರಶೈವ ಮಹಾಸಭೆಯ ಸ್ಟ್ಯಾಂಡಿಂಗ ಕಮಿಟಿಯು ನೆರೆದ ಕಾಲಕ್ಕೆ ಸಾಂಪ್ರತ ಮತ್ತು ಪ್ರಾಚೀನ ಕಾಲದಲ್ಲಿ ಆಗಿಹೋದ ವೀರಶೈವ ಮಹಾ ಪುರುಷರ ಚರಿತ್ರೆಗಳನ್ನು ಬರೆಯಿಸುವ ಬಗ್ಗೆ ಚರ್ಚೆಯು ಹೊರಟಿತ್ತು. ಆಗ ಚನ್ನಬಸವಪ್ಪನವರು ಕರ್ನಾಟಕದಲ್ಲಿ ವಿದ್ಯಾಪ್ರಸಾರ ಮಾಡ ಲಿಕ್ಕೆ ಮೊದಲು ಬಹು ಪರಿಶ್ರಮ ಪಟ್ಟವರಿರುವದರಿಂದ ಇವರ ಚರಿತ್ರೆಯನ್ನು ಬರೆಯಿಸುವದು ಅವಶ್ಯವೆಂದು ಕೆಲವರು ಸೂಚಿಸಿದರು. ಆಗ ವಿಜಾಪುರದ ಲಿಂಗಾಯತ ಜಿಲ್ಲಾ ಸಭೆಯವರು ಈ ಕಾರ್ಯಕ್ಕೆ ಉತ್ತೇಜನ ಕೊಡಬೇಕೆಂದು ಯೋಚಿಸಿ ಚನ್ನಬಸವಪ್ಪನವರ ಆಯುಷ್ಯಕ್ರಮ

ವಲ್ಲಿ ವರ್ಣಿಸಿದ ಸಂಗತಿಗಳನ್ನು ತಿಳಿಸಿದವರಿಗೆ ೨೦ ರೂಪಾಯಿಗಳ ವರೆಗೆ ಬಹುಮಾನಗಳನ್ನು ಕೊಡುವೆವೆಂಬುದಾಗಿ ಪ್ರಸಿದ್ಧಿಸಿದರು. ಚನ್ನ ಬಸವಪ್ಪನವರ ಮಕ್ಕಳಾದ ರಾ. ರಾ. ಬಸವಲಿಂಗಪ್ಪ ಚನ್ನಬಸವಪ್ಪ ಧಾರವಾಡ, ರಾ. ರಾ. ಶಿವಾನಂದ ಯಜ್ಞೇಶ್ವರ ವಾಜಪೆ ಸ್ಕೂಲ್ ಮಾಸ್ತರ ರೋಣ, ಕೈ. ವಾ. ಶಿದ್ಧರಾಮಯ್ಯ ಹನ್ನೆರಡು ಮಠ ಪೆನಶೆಂಡ ಮಾಸ್ತರ ಹುಬ್ಬಳ್ಳಿ ಈ ಮೂವರು ಮಾತ್ರ ತಮಗೆ ಗೊತ್ತಿದ್ದ ಸಂಗತಿಗಳನ್ನು ಬರೆದು ತಿಳಿಸಿದರು. ಇದಕ್ಕಾಗಿ ಇವರಿಗೆ ನಾವು ಬಹಳ ಅಭಾರಿ ಆಗಿದ್ದೇವೆ. ಇವರಿಗೆ ಅನುಕ್ರಮವಾಗಿ ೨೫, ೫, ೧೦ ರೂಪಾಯಿಗಳು ಈ ಮೇರೆಗೆ ಬಹುಮಾನಗಳು ಪರೀಕ್ಷಾ ಕಮಿಟಿಯವರು ಗೊತ್ತುಪಡಿಸಿದ ಮೇರೆಗೆ ಜಿಲ್ಲಾ ಸಭೆಯವರಿಂದ ಕೊಡಲ್ಪಟ್ಟವು. ಇವರು ಕಳಿಸಿಕೊಟ್ಟ ಸಂಗತಿಗಳಲ್ಲಿ ಯುಕ್ತವಾದವುಗಳನ್ನು ಆರಿಸಿ ಅವುಗಳ ಮೇಲಿಂದ ಮತ್ತು ಬೇರೆ ಕೆಲ ಸಭ್ಯ ಗೃಹಸ್ಥರ ಕಡೆಯಿಂದ ದೊರಕಿಸಿದ ಮಾಹಿತಿಯಿಂದ ಈ ಚರಿತ್ರೆಯು ಬರೆಯಲ್ಪಟ್ಟಿದೆ.

ಈ ಚರಿತ್ರೆಯಲ್ಲಿ ಏನಾದರೂ ತಪ್ಪು ಸಂಗತಿಗಳಿದ್ದದ್ದು ವಾಚಕರಿಗೆ ಕಂಡು ಬಂದರೆ ಮತ್ತು ಚನ್ನಬಸವಪ್ಪನವರ ಬಗ್ಗೆ ಹೆಚ್ಚಿಗೆ ವೃತ್ತಾಂತವು ಯಾರಿಗಾದರೂ ಗೊತ್ತಿದ್ದರೆ ಅವರು ಅವುಗಳನ್ನು ನಮಗೆ ತಿಳಿಸಿದರೆ ನಾವು ಅವರಿಗೆ ಬಹಳೇ ಆಭಾರಿ ಆಗುವೆವು. ಮತ್ತು ಆ ಸಂಗತಿಗಳು ಈ ಚರಿತ್ರೆಯ ಮುಂದಿನ ಆವೃತ್ತಿಯಲ್ಲಿ ಸೇರಿಸಲ್ಪಡುವವು.

**ವಿಜಾಪುರ.**
ತಾ- ೨--೬--೧೯೧೪

**ಫ. ಗು. ಹಳಕಟ್ಟಿ**
ಬಿ. ಎ. ಎಲ್. ಎಲ್. ಬಿ.

ನ್ಯೂನತೆಯನ್ನು ಒಮ್ಮೆಲೆ ಕಂಡು ಹಿಡಿದು, ಅವುಗಳನ್ನು ಸ್ಫುಟವಾಗಿ ೊರಗೆಡವಲಿಕ್ಕೆ ಸಮರ್ಥರಾಗುತ್ತಿದ್ದರು. ಆದ್ದರಿಂದ ಅವರ ಗೂಡ ಾದಿಸಲಿಕ್ಕೆ ಯಾರೂ ಧೈರ್ಯವಾಡುತ್ತಿದ್ದಿಲ್ಲ.

ಈ ಮೇರೆಗೆ ಚನ್ನಬಸವಪ್ಪನವರು ತಮ್ಮ ಕುಶಾಗ್ರ ಬುದ್ಧಿ, ವಿಸ್ಮೃತಿ, ತ್ವ, ವಾದಚತುರತೆ ಮುಂತಾದ ಗುಣಗಳ ಉಪಯೋಗವನ್ನು ಲ್ಲಿ ವಿದ್ಯಾಪ್ರೋತ್ಸಾಹನೆ ನೈತಿಕವೃತ್ತಿ ಸದ್ವಿಚಾರಗಳನ್ನು ಹುಟ್ಟಿ ಉಪಯೋಗಿಸುತ್ತಿದ್ದರು. ಅವರು ತಮ್ಮ ಫಿರ್ತಿಯಲ್ಲಿ ಹಳ್ಳಿ ಳಿಗೆ ಹೋದಾಗ್ಗೆ ಸಹ ಜನರನ್ನು ತಮ್ಮ ಸುತ್ತಲು ನೆರಿಸಿಕೊಂಡು, ವರಿಗೆ ನಾನಾವಿಷಯಗಳ ಬಗ್ಗೆ ಬೋಧೆಮಾಡುತ್ತಿದ್ದರು. ಆದ್ದರಿಂದ ವರ ವರ್ಚಸ್ಸು ಜನಸಮುದಾಯದಲ್ಲಿ ಅತ್ಯಂತವಾಗಿ ಬೆಳೆದಿತ್ತು. ುಷ್ಟರೂ ದುರ್ಗುಣಿಗಳೂ ಅವರ ಸಮೀಪಕ್ಕೆ ಸಹ ಹೋಗುತ್ತಿದ್ದಿಲ್ಲ. ವರು ಸಮೀಪಕ್ಕೆ ಹೋದರೆ, ಅವರ ದುರ್ಗುಣಗಳನ್ನು ಚನ್ನಬಸವಪ್ಪ ವರು ತಮ್ಮ ಸ್ವಾಭಾವಿಕ ತೀಕ್ಷ್ಣ ಶಬ್ದಗಳಿಂದ ಜರಿಯದೆ ಬಿಡುತ್ತಿ ್ಲ. ಒಬ್ಬ ಸ್ವಾಮಿಗಳು ಚನ್ನಬಸವಪ್ಪನವರನ್ನು ಕಾಣಲಿಕ್ಕೆ ಹೋದಾಗ್ಗೆ ವರು "ಸಕ್ಕರೀಕರಣಿಯು ಪಾಯಖಾನೆಯಲ್ಲಿ ಬಿತ್ತು" ಎಂದು ಅಂದು ುಟ್ಟರು. ಧರ್ಮಗುರುಗಳ ಮೇಲೆ ಚನ್ನಬಸವಪ್ಪನವರ ಕಟಾಕ್ಷವು ಬಹಳ ತ್ತು. ಚನ್ನಬಸವಪ್ಪನವರು ಯಾವದೊಂದು ಊರಿಗೆ ಹೋದ ಕೂಡಲೇ, ಲ್ಲಿಯ ಮಠದ ಅಯ್ಯನವರು ಆ ಊರು ಬಿಟ್ಟೇ ಹೋಗುತ್ತಿದ್ದರು. ಈ ೇರೆಗೆ ಚನ್ನಬಸವಪ್ಪನವರ ದರ್ಪವು ಜನರಲ್ಲಿ ಅತ್ಯಂತ ವಿಲಕ್ಷಣವಾ ತ್ತು. ಈ ಕಾರಣದಿಂದ ಆಗಿನ ಜನರು ಅವರಿಗೆ "ಹುಲಿ ಚನಬಸಪ್ಪ' ಂದು ಕರೆಯುತ್ತಿದ್ದರು. ಚನ್ನಬಸವಪ್ಪನವರು ಸಾಧಾರಣ ಒಬ್ಬ ಶಾಲೆ ು ಇನ್‌ಸ್ಪೆಕ್ಟರರು. ಅವರಿಗೆ ದೇಹದಂಡನೆಯ ಯಾವ ಅಧಿಕಾರವೂ ರಲಿಲ್ಲ. ಆದರೆ ಯಾವನು ಮನುಷ್ಯರಲ್ಲಿಯ ಶ್ರೇಷ್ಠ ಮನೋವೃತ್ತಿಗ ಗೆ ಉತ್ತೇಜನಕೊಟ್ಟು, ಅವರಲ್ಲಿ ಸದಸದ್ವಿಚಾರ-ವಿವೇಕ-ಸ್ವಾಭಿಮಾನ ಳನ್ನು ಹುಟ್ಟಿಸಿ, ಅವುಗಳ ಬಲದಿಂದ, ಅವರನ್ನು ತನ್ನ ಕಡೆಗೆ ಸೆಳೆದು ೂಳ್ಳಲು ಸಮರ್ಥನಾಗುವನೇ ಅವನು ಬಡವನಿರಲಿ ಬಲ್ಲಿದನಿರಲಿ, ುಚ್ಚನಿರಲಿ ನೀಚನಿರಲಿ, ಅವನ ಅಧಿಕಾರವು ಜನ ಸಮಾಜದ ಮೇಲೆ ಾಶ್ವತವಾಗಿ ಉಳಿಯುವದು. ಮತ್ತು ಇಂಥವನೇ ಸಮಾಜ ಚಾಲಕ

ನಾಗಿ ದೇಶೋದ್ಧಾರಕನಾಗುವನು. ಇಂಥವರ ವರ್ಗದಲ್ಲಿ ಚನ್ನಬಸವಪ್ಪನವರನ್ನು ನಾವು ಎಣಿಸಬಹುದಾಗಿದೆ.

ಈ ವರೆಗೆ ನಾವು ಚನ್ನಬಸವಪ್ಪನವರು ಕರ್ನಾಟಕ ದೇಶಕ್ಕೆ ಮಾಡಿದ ಕಾರ್ಯಗಳನ್ನು ವಿವರಿಸಿದೆವು. ಇನ್ನು ಮೇಲೆ ಅವರು ತಾವು ಹುಟ್ಟಿದ ಲಿಂಗಾಯತ ಸಮಾಜಕ್ಕೋಸ್ಕರ ಯಾವ ಯಾವ ಸುಧಾರಣೆಯ ಪ್ರಯತ್ನಗಳನ್ನು ಮಾಡಿದರೆಂಬುದನ್ನು ವಿವರಿಸುವೆವು. ವಾಚಕರು ಬೇಕಾದ ಜಾತಿಯವರಿದ್ದರೂ ಕೂಡ ಅವರು ಚನ್ನಬಸವಪ್ಪನವರ ಪ್ರಯತ್ನಗಳ ಬೋಧ ತೆಗೆದುಕೊಳ್ಳತಕ್ಕಂಥ ಅನೇಕ ಸಂಗತಿಗಳು ಇರುತ್ತವೆ.

ಈಗಿನ ಕಾಲಕ್ಕೆ ಜಾತಿಗಳು ನಮ್ಮ ಹಿಂದೂ ಸಮಾಜಕ್ಕೆ ಮುಖ್ಯಾಂಗಗಳಾಗಿ ಉಳಿದಿವೆ. ಇಂಥ ವಿಲಕ್ಷಣ ಸ್ಥಿತಿಯು ಅನೇಕ ಐತಿಹಾಸಿಕ ಕಾರಣಗಳಿಂದಲೂ ಅನೇಕ ಸಾಮಾಜಿಕ ಧಾರ್ಮಿಕ ಕೃತ್ರಿಮ ನಿರ್ಬಂಧನೆಗಳಿಂದಲೂ ಇದಕ್ಕೆ ಉಂಟಾಗಿದೆ. ಅದು ಕಾರಣ ಈ ಕಾಲಕ್ಕೆ ಹಿಂದೂ ಸಮಾಜದ ಪ್ರಯತ್ನಗಳು ಆಯಾ ಜಾತಿಗಳು ಮತ್ತು ಒಟ್ಟು ದೇಶ ಇವುಗಳಲ್ಲಿಯ ಪರಸ್ಪರ ಸಂಬಂಧವನ್ನರಿತುಕೊಂಡು ಇವೆರಡನ್ನೂ ಸಮ್ಮೇಳನ ಪಡಿಸಿ, ಸಮವಾಗಿ ಪ್ರಯತ್ನಿಸುವದು ಅವಶ್ಯವದೆ. ಚನ್ನಬಸವಪ್ಪನವರು ಉದಾರ ಬುದ್ಧಿಯವರಾದ್ದರಿಂದ ಅವರು ಇದನ್ನರಿತು ವರ್ತಿಸುವವರಾಗಿದ್ದರು. ಅವರ ಮನಸ್ಸಿನಲ್ಲಿ ಸ್ವಸಮಾಜದ ಬಗ್ಗೆ ಉಜ್ವಲ ಪ್ರೀತಿಯು ಸದಾ ತುಂಬಿ ತುಳಕುತ್ತಿತ್ತು. ಅದರಂತೆಯೇ ಅವರಲ್ಲಿ ತಮ್ಮ ಕನ್ನಡ ನಾಡಿನ ಮತ್ತು ವಿದ್ಯೆಯ ಬಗ್ಗೆ ಅತುಲವಾದ ಪ್ರೀತಿಯು ಬಾಸಿಸುತ್ತಿತ್ತು. ಆದರೆ ಅವರು ಈ ವೆರಡೂ ವಿಷಯಗಳಲ್ಲಿ ಏನೊಂದು ಪರಸ್ಪರ ವಿರೋಧವನ್ನುಂಟು ಮಾಡದೆ, ನಿಷ್ಪಕ್ಷಪಾತದಿಂದಲೂ ನಿಷ್ಕಪಟತೆಯಿಂದಲೂ ವರ್ತಿಸುವವರಾಗಿದ್ದರು. ಆದ್ದರಿಂದಲೇ ಅವರು ತಮ್ಮ ಸಮಾಜದವರಿಗೂ ನಾಡಿನವರಿಗೂ ಸರಿಯಾಗಿ ವಂದ್ಯರಾದರು

ಕರ್ನಾಟಕದಲ್ಲಿ ಲಿಂಗಾಯತರ ಸಮಾಜವು ಬಹು ದೊಡ್ಡದಾಗಿದೆ. ಈ ಸಮಾಜವು ಘಾತುಕವಾದ ಜಾತಿಭೇದವನ್ನು ಮುರಿದೊತ್ತಿ ಸರ್ವರೂ ಸಮಾನರೆಂಬ ಭಾವನೆಯನ್ನು ಜನರಲ್ಲಿ ಹಬ್ಬಿಸಿ, ಸಮಾಜದಲ್ಲಿ ನಿರಂತರ ಧರ್ಮಬೋಧೆ ಮಾಡಲೂ ವಿದ್ಯಾದಾನ ಮಾಡಲೂ ಗ್ರಾಮಾಂತರಗಳಲ್ಲಿ ಮಠಗಳನ್ನು ಸ್ಥಾಪಿಸಿ, ಒಂದು ಕಾಲಕ್ಕೆ ಕರ್ನಾಟಕದಲ್ಲಿ ಮಹತ್ತರವಾದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಯ ಕಾರ್ಯಗಳನ್ನು

ಮಾಡಿದ್ದಾಗಿರುತ್ತದೆ. ಆದರೆ ಈ ಸಮಾಜದಲ್ಲಿ ಸಾಂಪ್ರತ ಕಾಲದ ಹೊಸ ಪರಿಸ್ಥಿತಿಗನುಸರಿಸಿ ಸುಧಾರಣೆಯು ಬೀಜಗಳನ್ನು ಮೊದಲು ಬಿತ್ತಿದವರು ಚನ್ನಬಸವಪ್ಪನವರೇ ಇದ್ದಾರೆ. ಅವರೇ ಈ ಸಮಾಜದಲ್ಲಿ ಪ್ರಾಥಮಿಕ ಮತ್ತು ಇಂಗ್ಲೀಯು ಶಿಕ್ಷಣವನ್ನು ಪ್ರಸಾರಗೊಳಿಸಲು ಬಹಳ ಪ್ರಯತ್ನಿಸಿ ಅವರ ಅಭಿವೃದ್ಧಿಗೆ ಕಾರಣರಾದರು.

ಚನ್ನಬಸವಪ್ಪನವರ ನಿರಂತರ ಪ್ರಯತ್ನಗಳಿಂದ ಹಳ್ಳಿ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಗಳು ಸ್ಥಾಪಿಸಲ್ಪಡಹತ್ತಿದ ಹಾಗೆ ಲಿಂಗಾಯತ ವಿದ್ಯಾರ್ಥಿಗಳ ಸಂಖ್ಯೆಯಾದರೂ ಭರದಿಂದ ಶಾಲೆಗಳಲ್ಲಿ ತಾನಾಗಿಯೇ ಬೆಳೆಯುತ್ತ ನಡೆಯಿತು. ಅದು ಕೆಳಗೆ ಕಾಣಿಸಿದ ಅಂಕಿಗಳಿಂದ ತಿಳಿದುಬರುವಂತೆ ಇದೆ. ಇವು ೧೮೮೨--೮೩ನೇ ವರ್ಷದವಿದ್ದು ಲಿಂಗಾಯತ ಹುಡುಗರ ಸಂಖ್ಯೆಯೊಂದಿಗೆ ಬ್ರಾಹ್ಮಣ ಹುಡುಗರ ಸಂಖ್ಯೆಯನ್ನೂ ತುಲನೆಗಾಗಿ ಕೊಟ್ಟಿರುತ್ತೇವೆ.

| ಸಂಖ್ಯೆ | ಜಿಲ್ಲೆಗಳು. | ಒಟ್ಟು ವಿದ್ಯಾರ್ಥಿಗಳ ಸಂಖ್ಯೆ. | ಲಿಂಗಾಯತ ವಿದ್ಯಾರ್ಥಿಗಳ ಸಂಖ್ಯೆ. | ಬ್ರಾಹ್ಮಣ ವಿದ್ಯಾರ್ಥಿಗಳ ಸಂಖ್ಯೆ. |
|---|---|---|---|---|
| ೧ | ಧಾರವಾಡ | ೬೯,೭೧೧ | ೧೩,೮೫೮ | ೩೪೩೫ |
| ೨ | ಬೆಳಗಾವ | ೧೦,೧೮೧ | ೫೨೬೪ | ೨೭೧೯ |
| ೩ | ವಿಜಾಪುರ | ೧೫,೮೬೮ | ೩೩೩೬ | ೨೦೬೧ |

ಈ ಸಂಖ್ಯೆಗಳನ್ನು ನೋಡಿದರೆ ಉತ್ತರ ಕರ್ನಾಟಕ ಭಾಗದಲ್ಲಿ ಪ್ರಾಥಮಿಕ ಶಿಕ್ಷಣವು ಲಿಂಗಾಯತ ಸಮಾಜದಲ್ಲಿ ಆ ಕಾಲಕ್ಕೆ ಚನ್ನಾಗಿ ಬೆಳೆಯಿತೆಂದು ಕಂಡು ಬರುತ್ತದೆ. ಇದು ಚನ್ನಬಸವಪ್ಪನವರು ಪ್ರಾಥಮಿಕ ಶಿಕ್ಷಣವನ್ನು ಹೆಚ್ಚಿಸಿದ್ದರ ಪರಿಣಾಮುವಾಗಿರುತ್ತದೆ. ಆದರೆ ಚನ್ನಬಸವಪ್ಪನವರು ಪಾಶ್ಚಿಮಾತ್ಯ ಶಿಕ್ಷಣದ ಲಾಭವನ್ನು ಪಡೆದವರಾಗಿದ್ದರು. ಆದ್ದರಿಂದ ಅವರು ತಮ್ಮ ಸಮಾಜದಲ್ಲಿ ಅದನ್ನು ಬೆಳಿಸಬೇಕೆಂಬ ಅತ್ಯುತ್ಕಟ ಇಚ್ಛೆಯುಳ್ಳವರಾಗಿದ್ದರು. ಆ ಕಾಲಕ್ಕೆ ಸರಕಾರೀ ಹೈಸ್ಕೂಲುಗಳೂ ಮಿಶನ್ ಸ್ಕೂಲುಗಳೂ ಜಿಲ್ಹಾ ಸ್ಥಳಗಳಲ್ಲಿ ಸ್ಥಾಪಿಸಲ್ಪಡಹತ್ತಿದವು. ಆದರೆ ಪ್ರಾಥಮಿಕ ಶಾಲೆಗಳಲ್ಲಿ ಲಿಂಗಾಯತರ ಸಂಖ್ಯೆಯು ಹೆಚ್ಚಿದ್ದರೂ ಅವರ ಸಂಖ್ಯೆ

ಯು ಇಂಗ್ಲಿಷ್ ಶಾಲೆಗಳಲ್ಲಿ ಅತ್ಯಲ್ಪವಾಗಿದ್ದಿತು. ಈ ಸ್ಥಿತಿಯು ಅಹಿತಕಾರ ಕವೆಂದು ಚನ್ನಬಸವಪ್ಪನವರಿಗೆ ತೋರಿದ್ದರಿಂದ, ಅವರು ಲಿಂಗಾಯತ ಸಮಾಜದ ವಿದ್ಯಾರ್ಥಿಗಳಿಗೆ ಇಂಗ್ಲಿಷ್ ವಿದ್ಯಾಭ್ಯಾಸಕ್ಕೋಸ್ಕರ ಬಹಳ ಪ್ರೋತ್ಸಾಹಿಸುತ್ತಿದ್ದರು. ಆ ಕಾಲದಲ್ಲಿ ಕೆಳಗೆ ಕಾಣಿಸಿದ ಸಂಗತಿಗಳು ವರ್ತಿಸಿದವು.

ಮೈಸೂರ ಸಂಸ್ಥಾನ ಚಿತ್ರಕಲ್ಲದುರ್ಗದಲ್ಲಿ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘಾರಾಜೇಂದ್ರ ಮಹಾ ಸ್ವಾಮಿಗಳವರ ಪ್ರಹನ್ಮಠ ವಿರುತ್ತದಷ್ಟೇ. ಈಪೀಠದಮೇಲೆ ಚನ್ನಬಸಪ್ಪನವರ ಕಾಲ ವಲ್ಲಿ ಶ್ರೀ ಮಹಾಲಿಂಗಸ್ವಾಮಿಗಳವರು ಆರೂಢರಾಗಿದ್ದರು. ಅವರು ಈ ಕಾಲಕ್ಕೆ ದೇಶದಲ್ಲಿ ಸಂಚಾರಕ್ಕೆ ಹೊರಟರು. ಪೂರ್ವದಲ್ಲಿ ಈ ಪೀಠಾಧಿಪತಿಗ ಳೆಲ್ಲಾರೂ ಬಹು ದಿವಸ ಸಂಚಾರಕ್ಕೆ ಹೊರಟಿರಲಿಲ್ಲ. ಆದ್ದರಿಂದ ಶ್ರೀ ಮಹಾಸ್ವಾಮಿಗಳವರು ಸಂಚಾರಕ್ಕೆ ಹೊರಟಕೂಡಲೆ ಅವರು ಹೋದ ಹೋದಲ್ಲಿ ಬಹು ಸಂಭ್ರಮದಿಂದ ಉತ್ಸವಗಳು ನಡೆಯಲಾರಂಭಿಸಿದವು. ಮಹಾಲಿಂಗ ಸ್ವಾಮಿಗಳಾದರೂ ಸ್ವಾಭಾವಿಕವಾಗಿ ಬಹು ಉದಾರಿಗಳೂ ಅತಿಕರುಣಿಗಳೂ ಆಗಿದ್ದರು. ಅವರು ತಮ್ಮ ದರ್ಶನಕ್ಕೆ ಬಂದ ಜನ ರಿಗೆಲ್ಲ ಏನೊಂದು ಭೇದಭಾವವನ್ನೆಣಿಸದೆ ಬೆಲೆಯುಳ್ಳ ಉಡುಗರೆಗ ಳನ್ನೂ ಬಡವರಿಗೆ ದಾನಧರ್ಮಗಳನ್ನೂ ಧಾರಳವಾಗಿ ಕೊಡುತ್ತಿದ್ದರು. ಆದ್ದರಿಂದ ಅವರು ಎಲ್ಲರಿಗೂ ಬಹಳ ಪ್ರೀಯರಾದರು. ಲಿಂಗಾಯತ ಸಮಾಜದವರಾದರೂ ಅವರಿಗೆ ಮೆಚ್ಚಿದವರಾಗಿ ಅವರನ್ನು ಬಹು ವೈಭವದಿಂದ ಕಂಡುಕೊಂಡು, ಉದಾರ ಕಾಣಿಕೆಗಳನ್ನು ಕೊಡುತ್ತಿ ದ್ದರು. ಸ್ವಾಮಿಗಳಾದರೂ ಅವುಗಳನ್ನು ಸಂಗ್ರಹಿಸಲಿಕ್ಕೆ ಇಚ್ಛಿಸದೆ, ದಾನ-ಧರ್ಮಗಳಲ್ಲಿಯೂ ಗಣಾರಾಧನೆಗಳಲ್ಲಿಯೂ ಅನ್ನಸಂತರ್ಪಣೆಗಳ ಲ್ಲಿಯೂ ವೆಚ್ಚಮಾಡಿ ಬಿಡುತ್ತಿದ್ದರು. ಈಮೇರಿಗೆ ಸ್ವಾಮಿಗಳವರ ಉತ್ಸ ವವು ದೇಶದಲ್ಲಿ ಅಸದೃಶವಾಗಿ ನಡೆಯತೊಡಗಿತು.

ಈಪ್ರಕಾರ ದೇಶದಲ್ಲಿ ಮಹಾಸ್ವಾಮಿಗಳವರ ಸಂಚಾರವು ದುಂದು ಗಾರಿಕೆಯಿಂದ ನಡೆದದ್ದು ಚೆನ್ನಬಸವಪ್ಪನವರ ವಿವೇಕಕ್ಕೆ ಮಾತ್ರ ಸರಿಬರ ಲಿಲ್ಲ. ಅವರು ಬಾಹ್ಯಾಡಂಬರವನ್ನು ಪ್ರೀತಿಸುತ್ತಿದ್ದಿಲ್ಲ. ಮತ್ತು ಅವರು ತಮ್ಮ ಸಮಾಜದ ಹಣವು ಹೀಗೆ ಅಸಿನಾರವಾಗಿ ವೆಚ್ಚವಾಗುವದನ್ನು ನೋಡಿ ಮನಸ್ಸಿನಲ್ಲಿ ವಿಷಾದಪಡುತ್ತಿದ್ದರು. ಅವರು ಒಂದು ಸಾರೆ

ಮಹಾಸ್ವಾಮಿಗಳವರ ದರ್ಶನಕ್ಕೆ ಹೋದಾಗ ಅವರಿಗೆ ಹೀಗೆ ನಿರರ್ಥಕವಾಗಿ ಹಣ ವೆಚ್ಚಮಾಡುವದು ನಿಷ್ಪ್ರಯೋಜಕವೆಂದು ಹೇಳಿದ್ದಲ್ಲದೆ, ಆಧುನಿಕ ಸುಧಾರಣೆ ಮತ್ತು ಇಂಗ್ಲಿಷ ಶಿಕ್ಷಣದ ಅವಶ್ಯಕತೆಯನ್ನು ಕುರಿತು ಅವರಿಗೆ ನಿರೂಪಿಸಿದರು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಮಹಾಸ್ವಾಮಿಗಳವರ ಬದಿಯಲ್ಲಿದ್ದವರು ಮಾತ್ರ ಚನ್ನಬಸವಪ್ಪನವರು ಮ್ಲೇಂಛ ಭಾಷೆಯನ್ನು ಲಿಂಗಾಯತರಿಗೆ ಕಲಿಸಿ, ಧರ್ಮವನ್ನು ಕೆಡಿಸಿ ಬಿಡುವ ಮನಸ್ಸಿನವರಿರುವರೆಂದು ಹೇಳಿ, ಅವರನ್ನು ಒಳಿತಾಗಿ ಹಳಿದರು.

ಮುಂದೆ ಮಹಾ ಸ್ವಾಮಿಗಳು ಶ್ರೀ ಉಳವಿಯ ಕ್ಷೇತ್ರದಲ್ಲಿ ಒಂದು ಬಹುದೊಡ್ಡ ಗಣಾರಾಧನೆಯನ್ನು ಮಾಡಿಸಿದರು. ಆ ಕಾಲಕ್ಕೆ ಆ ಸ್ಥಳದಲ್ಲಿ ಬಹುದೂರ ದೇಶದಿಂದ ಸಾವಿರಾರು ಜನರು ನೆರೆದರು. ಅಷ್ಟು ದೊಡ್ಡ ಜಾತ್ರೆಯೂ ವೈಭವವೂ ಅಲ್ಲಿ ಹಿಂದಕ್ಕೆ ಎಂದೂ ಆಗಿದ್ದಿಲ್ಲ. ಆ ವೈಭವನ್ನು ನೋಡಿದವರು ಈಗಲೂ ಅದನ್ನು ಪರಪರಿಯಿಂದ ವರ್ಣಿಸುತ್ತಾರೆ. ಈ ಮೇರೆಗೆ ದೇಶದಲ್ಲೆಲ್ಲ ಎಲ್ಲಿ ನೋಡಿದರೂ, ಮಹಾಸ್ವಾಮಿಗಳ ಮಹತ್ವ, ಔದಾರ್ಯ, ವೈಭವ ಇವುಗಳ ವರ್ಣನೆಗಳೇ ನಡೆದಿದ್ದವು. ಆದರೆ ಈ ತರದ ವೈಭವಕ್ಕೆ ಮೆಚ್ಚದೆ ಮನಸ್ಸಿನಲ್ಲಿಯೇ ಉಮ್ಮಳಿಸುತ್ತಲಿದ್ದವರು ಚನ್ನಬಸವಪ್ಪನವರೊಬ್ಬರೇ ಆಗಿದ್ದರು. ಅವರು ಅನಿಯಂತ್ರಿತವಾಗಿ ಸಮಾಜದ ದುಡ್ಡು ಹೀಗೆ ಹಾಳಾಗಿ ಹೋಗುವದು ಅವರ ಮನಸ್ಸಿಗೆ ತುಸುವಾದರೂ ಬರಲಿಲ್ಲ. ಅವರು ಉಳವಿಯ ಸಮಾರಂಭಕ್ಕೆ ಸಹ ಹೋಗಲಿಲ್ಲ.

ಈ ಮೇರೆಗೆ ಚನ್ನಬಸವಪ್ಪನವರು ಉಳವಿಯ ಸಮಾರಂಭಕ್ಕೆ ಬಾರದ್ದು ಮಹಾಲಿಂಗಸ್ವಾಮಿಗಳ ಮನಸ್ಸಿಗೆ ಬಹಳೇ ಹತ್ತಿತು. ಆಗಿನ ಲಿಂಗಾಯತ ಸಮಾಜದಲ್ಲಿ ಇವರೊಬ್ಬರೇ ವಿದ್ಯಾವಂತರಾಗಿ ಸರಕಾರೀ ಶ್ರೇಷ್ಠ ಪದವಿಯಲ್ಲಿದ್ದದರಿಂದ ಇವರು ದೊಡ್ಡ ಮನುಷ್ಯರೆಂದೆಣಿಸಿಕೊಳ್ಳುತ್ತಿದ್ದರು. ಆದ್ದರಿಂದ ಮಹಾಸ್ವಾಮಿಗಳವರು ಅವರನ್ನು ಆಗ್ರಹದಿಂದ ಉಳಿವಿಗೆ ಕರಿಸಿಕೊಂಡರು. ಚನ್ನಬಸಪ್ಪನವರು ಉಳಿವಿಗೆ ಹೋದಮೇಲೆ, ಅಲ್ಲಿ ದೊಡ್ಡದೊಂದು ಸಭೆಯು ನೆರೆಯಲು, ಆ ಸಭೆಯಲ್ಲಿಯೇ ಮಹಾಸ್ವಾಮಿಗಳ ಈ ತರದ ಆಡಂಬರಗಳನ್ನೂ ದುಂದು ವೆಚ್ಚವನ್ನೂ ನಿರಾಕರಿಸಿದರು. ಮತ್ತು ಅವರು ಸಾಂಪ್ರತ ಕಾಲಸ್ಥಿತಿಯನ್ನೂ ಶಿಕ್ಷಣ ಪ್ರಸಾರದ

ಅವಶ್ಯಕತೆಯನ್ನೂ ತಿಳಿಸಿ ಹೇಳಿ, ಕಡೆಯಲ್ಲಿ ಮಹಾಸ್ವಾಮಿಗಳವರು ಇಷ್ಟು ದೊಡ್ಡ ಜನಸಮುದಾಯವನ್ನು ನೆರಿಸಿ, ಗಣಾರಾಧನೆಯನ್ನು ಮಾಡಿಸಿದ್ದರ ಉಪಯೋಗವು ಉಳಿವಿಯ ಗುಡ್ಡವನ್ನು ಹೇಸಿಕೆ ಮಾಡಿದ್ದೊಂದೇ ಆಯಿತೇ ಹೊರತು ಬೇರೊಂದೇನೂ ಆಗಲಿಲ್ಲವೆಂದು ತಮ್ಮ ಸ್ವಾಭಾವಿಕ ಸ್ಪಷ್ಟೋಕ್ತಿಗಳಿಂದ ಮಹಾಸ್ವಾಮಿಗಳಿಗೆ ಹೇಳಿದರು. ಆಗ ಮಹಾಸ್ವಾಮಿಗಳವರ ಮನಸ್ಸು ಬದಲಾಯಿತು. ಅವರು ಚನ್ನಬಸವಪ್ಪನವರ ವಿಚಾರಗಳಿಗೊಪ್ಪಿ ಅವುಗಳಂತೆ ನಡೆಯಲು ಸಿದ್ಧರಾದರು. ಆಗ ನ್ನಬಸವಪ್ಪನವರು ಬೆಳಗಾವಿಯಲ್ಲಿ ಒಂದು ವಿದ್ಯಾರ್ಥಿಗೃಹವನ್ನು ಸ್ಥಾಪಿಸುವ ವಿಚಾರವನ್ನು ಅವರಿಗೆ ಹೇಳಲು, ಅದಕ್ಕೆ ಮಹಾಸ್ವಾಮಿಗಳವರು ಒಪ್ಪಿ, ಧನ ಸಹಾಯ ಮಾಡುವೆವೆಂಬದಾಗಿ ವಚನ ಕೊಟ್ಟರು. ಆ ಮೇಲೆ ಚನ್ನಬಸವಪ್ಪನವರ ಅತಿ ಸಂತೋಷದಿಂದ ಬೆಳಗಾವಿಗೆ ತಿರುಗಿ ಬಂದರು. ಒಬ್ಬ ಸಮಾಜ ಚಾಲಕನಲ್ಲಿ ತೋರತಕ್ಕ ಗುಣಗಳೆಂದರೆ, ಇವೇ ಇರುತ್ತವೆ. ಅವನು ಶ್ರೇಷ್ಠ ವಿಚಾರವುಳ್ಳವನಾಗಿ, ಅವುಗಳನ್ನು ಯಾರ ಮುಂದೆಯೂ ಪ್ರಕಟಿಸಲು ಹಿಂಜರಿಯುವದಿಲ್ಲ. ಮತ್ತು ಅವುಗಳ ಪ್ರಯತ್ನಗಳಲ್ಲಿ ಯಾವಾಗಲೂ ಆಸಕ್ತನಾಗಿದ್ದು ಜನರ ದೂಷಣೆಗೆ ಬೆದರುವದಿಲ್ಲ. ಇದಕ್ಕೆ ಅಸಸ್ಪೃಶ್ಯವಾದ ನೈತಿಕ ಧೈರ್ಯವು ಬೇಕಾಗುತ್ತದೆ. ಈ ಧೈರ್ಯವು ಚನ್ನಬಸವಪ್ಪನವರಲ್ಲಿ ಸಂಪೂರ್ಣವಾಗಿತ್ತು.

ಆ ಮೇಲೆ ಚನ್ನಬಸವಪ್ಪನವರು ಬೆಳಗಾವಿಯಲ್ಲಿ ಒಂದು ಬಾಡಿಗೆ ಮನೆಯನ್ನು ಹಿಡಿದು, ಅಲ್ಲಿ ಒಂದು ವಿದ್ಯಾರ್ಥಿ ಗೃಹವನ್ನು ಸ್ಥಾಪಿಸಿದರು. ಆದರೆ ಆರಂಭದಲ್ಲಿ ವಿದ್ಯಾರ್ಥಿಗಳೇ ಕೂಡುವದು ಕಷ್ಟವಾಯಿತು. ಆದರೆ ಅವರು ಶಾಳಾಖಾತೆಯಲ್ಲಿ ಡಿಪ್ಯೂಟಿಗಳಾಗಿದ್ದುದರಿಂದ ಯೋಗ್ಯ ಹುಡುಗರನ್ನು ಆರಿಸಿಕೊಳ್ಳಲು ಅವರಿಗೆ ಅನುಕೂಲವಾಗಿತ್ತು ಎಲ್ಲಾದರೂ ಯೋಗ್ಯ ಹುಡಗರಿದ್ದರೆ, ಏನಾದರೂ ಉಪಾಯಮಾಡಿ ಅವರನ್ನು ಬೋರ್ಡಿಂಗಿನಲ್ಲಿ ತಂದು ಸೇರಿಸುತ್ತಿದ್ದರು. ಈ ಮೇರೆಗೆ ಸ್ವಲ್ಪದಿವಸಗಳಲ್ಲಿ ಅವರು ೫೦ ಜನ ವಿದ್ಯಾರ್ಥಿಗಳನ್ನು ಕೂಡಿಸಿದರು. ಆಗಿನ ಕಾಲಕ್ಕೆ ಇಷ್ಟು ಜನ ಲಿಂಗಾಯತ ವಿದ್ಯಾರ್ಥಿಗಳು ಸ್ವಲ್ಪ ದಿವಸಗಳಲ್ಲಿ ಕೂಡಿದ್ದು ಜನರಿಗೆ ಬಹಳ ಸೋಜಿಗವೆನಿಸಹತ್ತಿತು. ಯಾಕಂದರೆ ಆಗಿನ ಜನರು ಲಿಂಗಾಯತ ಸಮಾಜವು ವಿದ್ಯೆಯಲ್ಲಿ ಎಂದೂ ಮುಂದೆ ಬೀಳಲಾರದೆಂದು ಎಣಿಸುತ್ತಿದ್ದರು. ಮತ್ತು ಕೆಲವರಂತೂ ಚನ್ನಬಸವಪ್ಪನವರು ೫೦ ಕತ್ತೆಗಳನ್ನು ಕೂಡಿಹಾಕಿ ಅವು

ಗಳಿಗೆ ದಿನಾಲು ಕರಾರೀ ಮಾಡಿ, ದಾಣೀ ತಿನಿಸಿ, ಜೋಪಾನಮಾಡಿದಮಾತ್ರ ದಿಂದ ಅವು ಎಂದಾದರೂ ಕುದುರೆಗಳಾಗಬಹುದೋ, ಎಂದು ಅನೇಕ ರೀತಿ ಹಾಸ್ಯಮಾಡಹತ್ತಿದರು. ಆದರೆ ಚನ್ನಬಸವಪ್ಪನವರು ಈ ತರದ ದೂಷಣೆಗಳಿಗೆ ಕಿವಿಗೊಡದೆ ತಾವು ಹಿಡಿದ ಕಾರ್ಯದಲ್ಲಿ ತತ್ಪರರಾಗಿದ್ದರು. ಅವರು ವಿದ್ಯಾರ್ಥಿ ಗೃಹದ ವ್ಯವಸ್ಥೆಯನ್ನು ಅತ್ಯುತ್ತಮವಾಗಿ ಇಟ್ಟರು. ಸಾಕಷ್ಟು ಜನ ಅಡಿಗೆಯವರನ್ನೂ ಸೇವಕರನ್ನೂ ಕಾರಕೂನರನ್ನೂ ನೇಮಿಸಿಕೊಂಡಿದ್ದರು. ಗಂಗಾಧರ ಮಡಿವಾಳೇಶ್ವರ ತೂರಮರಿ ಮತ್ತು ಮಡಿವಾಳಯ್ಯ ಪಂಡಿತ ಇವರಿಬ್ಬರೂ ಬೋರ್ಡಿಂಗಿನ ಮೇಲ್ವಿಚಾರಕರಾಗಿದ್ದರು. ಇವರೂ ಚನ್ನಬಸವಪ್ಪನವರೂ ಮೇಲಿಂದಮೇಲೆ ಅಲ್ಲಿಗೆ ಹೋಗಿ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಮಹಾಲಿಂಗಸ್ವಾಮಿಗಳವರು ಪ್ರತಿ ತಿಂಗಳು ತಪ್ಪದೇ ೩೦೦ ರೂಪಾಯಿಗಳನ್ನು ಚನ್ನಬಸವಪ್ಪನವರಿಗೆ ಕಳಿಸಿಕೊಡುತ್ತಿದ್ದರು. ಈವೇಳೆಗೆ ಈ ವಿದ್ಯಾರ್ಥಿ ನಿಲಯವು ಏರಿಕೆಯ ಸ್ಥಿತಿಯನ್ನು ಹೊಂದಹತ್ತಿತು. ಲಿಂಗಾಯತ ಸಮಾಜದಲ್ಲಿ ಪಾಶ್ಚಿಮಾತ್ಯ ಶಿಕ್ಷಣದ ಪ್ರಥಮಾರಂಭವು ಇದೇ ಇರುತ್ತದೆ. ಆದರೆ ಈ ವಿದ್ಯಾರ್ಥಿ ನಿಲಯವು ಬಹಳ ದಿವಸ ಬಾಳಲಿಲ್ಲ. ಅದರ ಮುಖ್ಯ ಪೋಷಕರಾದ ಮಹಾಲಿಂಗ ಸ್ವಾಮಿಗಳವರು ಮುಂದೆ ೨ ವರ್ಷಗಳಲ್ಲಿಯೇ ಲಿಂಗೈಕ್ಯರಾದರು. ಆದ್ದರಿಂದ ಈ ವಿದ್ಯಾರ್ಥಿ ನಿಲಯವನ್ನು ಸಾಗಿಸುವ ಭಾರವು ಚನ್ನಬಸವಪ್ಪನವರ ಮೇಲೆಯೇ ಬಿತ್ತು. ಆದರೆ ಅವರು ಧನಿಕರಾಗಿದ್ದಿಲ್ಲ. ಆದರೂ ಅವರು ತಮ್ಮ ಸ್ವಂತ ಖರ್ಚಿನಿಂದ ಕೆಲವು ದಿವಸ ಬೋರ್ಡಿಂಗನ್ನು ಹಾಗೂ ಹೀಗೂ ಸಾಗಿಸಿದರು. ಎರಡನೆಯವರು ಅವರಿಗೆ ಇದರಲ್ಲಿ ಯಾರೂ ಸಹಾಯ ಮಾಡಲಿಲ್ಲ. ಆಗ ಅವರು ಸಾಲಮಾಡಿ ಹಣ ಪೂರೈಸಿದರು. ಮುಂದೆ ಹೀಗೆ ಸಾಲಮಾಡಿದ ಬಗ್ಗೆ ಅವರ ಮೇಲೆ ಕೋರ್ಟಿನ ಡಿಕ್ರಿಗಳಾದವು. ಆಗ ಅವರು ಒಂದು ಮನೆಯನ್ನು ಮಾರಿ ಆ ಡಿಕ್ರಿಗಳ ಹಣವನ್ನು ಮುಟ್ಟಿಸಿದರು. ಮುಂದೆ ಅವರಿಗೆ ಧಾರವಾಡಕ್ಕೆ ವರ್ಗವಾಯಿತು. ಆದ್ದರಿಂದ ಆ ಬೋರ್ಡಿಂಗು ಅಷ್ಟಕ್ಕೆ ನಿಂತು ಹೋಯಿತು. ಈ ಎಲ್ಲ ಸಂಗತಿಗಳ ಮೇಲಿಂದ ಚನ್ನಬಸವಪ್ಪನವರು ಎಷ್ಟು ಸ್ವಾರ್ಥತ್ಯಾಗಿಗಳೂ ಉದಾರಿಗಳೂ ಸ್ವಸಮಾಜ ಹಿತಚಿಂತಕರೂ ಆಗಿದ್ದರೆಂದು ತಿಳಿದು ಬರುತ್ತದೆ.

ಆದರೆ ಸ್ತುತ್ಯಕಾರ್ಯಗಳು ಮೊದಲು ಕೈಗೂಡದೆ ಅರ್ಧಕ್ಕೆ ನಿಂತು ಬಿಟ್ಟರೂ ಅವುಗಳ ಪ್ರಯತ್ನಗಳ ಸುಪರಿಣಾಮಗಳು ಮಾತ್ರ ಅವುಗಳ ಗೂಡ ನಾಶವಾಗುವದಿಲ್ಲ. ಅವುಗಳ ಅಪಜಯದಲ್ಲಿಯೇ ಮುಂದಿನ ಜಯದ ಬೀಜಗಳು ಅಂಕುರಿಸಿಕೊಂಡಿರುವವು. ಈ ಮೇರೆಗೆ ಈ ವಿದ್ಯಾರ್ಥಿನಿಲಯವು ನಿಂತು ಹೋದದ್ದರಿಂದ, ಮುಂದೆ ಶಾಶ್ವತವಾದ ಒಂದು ಧನನಿಧಿಯನ್ನು ಕೂಡಿಸಬೇಕೆಂಬ ವಿಚಾರಗಳು ಜನರಲ್ಲಿ ಸಹಜಿಕವಾಗಿಯೇ ಕೊರಡಹತ್ತಿದವು. ಮುಂದೆ ಸ್ವಲ್ಪ ವರ್ಷಗಳಲ್ಲಿಯೇ ಕೈ. ವಾ, ಗುರುಸಿದ್ದಪ್ಪ ಬಸವಣ್ಣೆಪ್ಪ ಗಿಲಗಂಚಿಯವರೂ ರಾ. ಬ. ರುದ್ರಗೌಡಾ ಚನವೀರಗೌಡ ಅರಟಾಳ ಇವರೂ ಈಗಿನ ಧಾರವಾಡ ಲಿಂಗಾಯತ ವಿದ್ಯಾಭಿ ವೃದ್ಧಿ ಸಂಘ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಆದರೆ ಯಾವ ಮಹಾನುಭಾವರು ತಮ್ಮ ಕೇವಲ ಬೋಧಾಶಕ್ತಿಯಿಂದ ಅಜ್ಞ ಜನರಲ್ಲಿ ತಕ್ಕ ವಿಚಾರಗಳನ್ನು ಹುಟ್ಟಿಸಿ, ಅವರನ್ನು ಸಮಾಜ ಕೆಲಸಕ್ಕೆ ಪ್ರೇರೇಪಿಸಿ ಮೊದಲು ಸಮಾಜಕ್ಕೆ ತಕ್ಕ ದಾರಿಯನ್ನು ತೋರಿಸಿ ಕೊಟ್ಟರೋ ಮತ್ತು ಪ್ರಾಥಮಿಕ ಹಾಗೂ ಆಂಗ್ಲೇಯ ವಿದ್ಯೆಯ ಮಹತ್ವವನ್ನು ತಮ್ಮ ಸಮಾಜದವರಿಗೆ ತಿಳಿಸಿಕೊಟ್ಟು ಅವರ ಭಾವೀ ಪ್ರಗತಿಯ ತಳಹದಿಯನ್ನು ಊರಿದರೋ ಅಂಥ ಚನ್ನಬಸವಪ್ಪನವರು ಲಿಂಗಾಯತ ಸಮಾಜದವರಿಂದ ನಿರಂತರವಾಗಿ ಸ್ಮರಿಸಲ್ಪಡತಕ್ಕ ಮನುಷ್ಯರಾಗಿರುವರು.

ಈ ಮೇರೆಗೆ ಈ ವಿದ್ಯಾರ್ಥಿ ನಿಲಯವು ಮುರಿದು ಹೋದರೂ ಅದರಲ್ಲಿದ್ದ ಅನೇಕ ವಿದ್ಯಾರ್ಥಿಗಳು ಈ ಕಾಲಕ್ಕೆ ಸ್ಥಾಪಿಸಲ್ಪಟ್ಟಿದ್ದ ಬೆಳಗಾವ ಸರದಾರ ಹೈಸ್ಕೂಲಿನಲ್ಲಿಯೂ ಅಲ್ಲಿದ್ದ ನಾರ್ಮಲ್ ಸ್ಕೂಲಿನಲ್ಲಿಯೂ ತಮ್ಮ ಅಭ್ಯಾಸವನ್ನು ಸಾಗಿಸಹತ್ತಿದರು. ಅವರೆಲ್ಲರೂ ಬಹುತರವಾಗಿ ಬಡವರಿದ್ದದರಿಂದ ಅವರು ಹ್ಯಾಗಾದರೂ ಮಾಡಿ ಕಷ್ಟಬಟ್ಟು ಶಿಕ್ಷಣವನ್ನು ಸಂಪಾದಿಸಲಾರಂಭಿಸಿದರು. ಇವರಲ್ಲಿ ಅನೇಕರು ಮ್ಯಾಟ್ರಿಕ್ಯುಲೇಶನ್ನು ಮತ್ತು ಟ್ರೇನಿಂಗ ಕಾಲೇಜ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬೇರೆ ಬೇರೆ ಖಾತೆಗಳಲ್ಲಿ ಸೇರಿಕೊಂಡರು. ಮತ್ತು ಅನೇಕರು ಶಾಲಾಧ್ಯಾಪಕರಾದರು. ಈಗಿನ ಕಾಲಕ್ಕೆ ಈ ಸಂಗತಿಗಳು ಅತ್ಯಲ್ಪವೆಂದೆನ್ನಿಸಿಕೊಳ್ಳುಬಹುದು. ಆದರೆ ಈ ಮೇರೆಗೆ ಪ್ರಯತ್ನ ಪೂರ್ವಕವಾಗಿ ಜರುಗಿಸಲ್ಪಟ್ಟ ಸುಧಾರಣಾ ಕಾರ್ಯಗಳು ಸಮಾಜದಲ್ಲಿ ಹೊಸವಿಚಾರಗಳನ್ನು ಹುಟ್ಟಿಸಲಿಕ್ಕೂ ಆತ್ಮೋನ್ನತಿಯ ಪ್ರಯತ್ನಗಳನ್ನು ಹಬ್ಬಿಸಲಿಕ್ಕೂ ಕಾರಣವಾಗು

ತ್ತವೆ. ಈ ಪ್ರಯತ್ನಗಳು ಆರಂಭದಲ್ಲಿ ಅತ್ಯಲ್ಪವಾಗಿ ತೋರಿದರೂ ಅವುಗಳ ಸುಪರಿಣಾಮಗಳು ಕ್ರಮೇಣ ಹಬ್ಬುತ್ತ ಹೋಗಿ, ಮುಂದೆ ಒಂದು ಪ್ರಚಂಡ ನದಿಯಂತೆ ಪ್ರವಹಿಸತೊಡಗುವವು

ಈ ಮೇರೆಗೆ ಚನ್ನಬಸಪ್ಪನವರು ತಮ್ಮ ದೇಶಕ್ಕೂ ತಮ್ಮ ಸಮಾಜಕ್ಕೂ ಮಾಡಿದ ಕಾರ್ಯಗಳನ್ನು ವಿಸ್ತರಿಸಿದೆವು. ಇನ್ನು ಮೇಲೆ ಅವರಲ್ಲಿದ್ದ ಕೆಲವು ಅಸಾಧಾರಣವಾದ ಗುಣಗಳನ್ನು ಸಂಕ್ಷೇಪವಾಗಿ ವಿವರಿಸಿ, ಈ ಚರಿತ್ರೆಯನ್ನು ಮುಗಿಸುತ್ತೇನೆ

ಚನ್ನಬಸಪ್ಪನವರಲ್ಲಿ ಇದ್ದ ಮೇಲಾದ ಗುಣವೆಂದರೆ ಜಗತ್ತಿನಲ್ಲಿ ನಿಜವಾದದ್ದಾವುದೆಂಬದನ್ನು ತಿಳಿದುಕೊಳ್ಳಬೇಕೆಂಬ ಅವರ ಇಚ್ಛೆ. ಈ ಸತ್ಯಶೋಧದಲ್ಲಿ ಅವರು ಯಾವಾಗಲೂ ತತ್ಪರರಾಗಿದ್ದರು. ಆದ ಕಾರಣ ಅವರು ಹೋದ ಹೋದಲ್ಲಿ ವಿದ್ವಾಂಸರ ಕೂಡ ಸಂಭಾಷಣೆ ಮಾಡಲೂ ದೀರ್ಘ ವಿಚಾರದಲ್ಲಿ ತೊಡಗಲೂ ಪ್ರೀತಿಸುತ್ತಿದ್ದರು.

ಅವರಲ್ಲಿ ಈ ಸತ್ಯಶೋಧಕ ಗುಣವಿದ್ದದರಿಂದ, ಅವರು ಯಾವಾಗಲೂ ಗ್ರಂಥಾವಲೋಕನದಲ್ಲಿಯೇ ಕಾಲಕಳೆಯುವರು. ಅವರ ಲೈಬ್ರರಿಯು ಬಹಳ ದೊಡ್ಡದಾಗಿತ್ತು. ಆದರೆ ಅದರೊಳಗಿನ ಗ್ರಂಥಗಳೆಲ್ಲ ಬಹುತರವಾಗಿ ಗಣಿತ ಮತ್ತು ತತ್ವಜ್ಞಾನ ಈ ವಿಷಯಗಳ ಮೇಲೆಯೇ ಇದ್ದವು. ಅವರು ಬೇರೆ ವಿಷಯಗಳನ್ನು ಬಹುಶಃ ಪ್ರೀತಿಸುತ್ತಿದ್ದಿಲ್ಲ.

ಗಣಿತವು ಅವರ ಪ್ರೀತಿಯ ವಿಷಯವು. ಈ ವಿಷಯವನ್ನು ಅವರು ಆಮರಣ ಅಭ್ಯಾಸ ಮಾಡುತ್ತಿದ್ದರು. ಅವರಿಗೆ ಸ್ವಲ್ಪ ಅವಕಾಶ ದೊರೆದ ಕೂಡಲೆ ಅವರು ಈ ವಿಷಯದಲ್ಲಿ ಮಗ್ನರಾಗುತ್ತಿದ್ದರು. ಅವರು ಎಲ್ಲಾದರೂ ಗಣಿತಜ್ಞರನ್ನು ಕಂಡರೆ, ಅವರಿಗೆ ತಕ್ಕ ಮನ್ನಣೆಯನ್ನು ಕೊಡಲು ಬಹಳ ಮುಂದಾಗುತ್ತಿದ್ದರು. ಮತ್ತು ಅವರನ್ನು ತಮ್ಮ ಮಿತ್ರರಂತೆ ಪ್ರೀತಿಸುತ್ತಿದ್ದರು.

ಈ ಮೇರೆಗೆ ಅವರು ಸ್ವತಃ ವಿದ್ವಾಂಸರಿದ್ದರೂ ಅವರು ತಮ್ಮ ವಿದ್ವತ್ತೆಯನ್ನು ಬಚ್ಚಿಡಲಿಕ್ಕೆ ಎಂದೂ ಯತ್ನಿಸಲಿಲ್ಲ. ಅವರು ಅದನ್ನು ಜನರಿಗೆ ತಿಳಿಸಲಿಕ್ಕೆ ಯಾವಾಗಲೂ ಹವಣಿಸುತ್ತಿದ್ದರು. ಅವರು ಫಿರ್ತಿಯ ಮೇಲಿದ್ದಾಗ ಹಳ್ಳಿಯ ಜನರಿಗೆ ನಾನಾ ವಿಧವಾಗಿ ಬೋಧಿಸುತ್ತಿದ್ದರು. ಬೆಳಗಾವಿಯ ಬೋರ್ಡಿಂಗಿನಲ್ಲಿದ್ದ ವಿದ್ಯಾರ್ಥಿಗಳಿಗೆ ಗಣಿತ ವಿಷಯವನ್ನು

ಸ್ವತಃ ಕಲಿಸುತ್ತಿದ್ದರು. ಪ್ರಸಂಗ ಬಂದರೆ, ಸಾರ್ವಜನಿಕ ಸಭೆಗಳಲ್ಲಿ ಭಿನ್ನ ಭಿನ್ನ ವಿಷಯಗಳ ಮೇಲೆ ವ್ಯಾಖ್ಯಾನಗಳನ್ನು ಕೊಡುತ್ತಿದ್ದರು. ಈ ಮೇರೆಗೆ ಅವರು ಅನೇಕ ರೀತಿಯಿಂದ ಜ್ಞಾನಪ್ರಸಾರದ ಬಗ್ಗೆ ಪ್ರಯತ್ನಿಸುತ್ತಿದ್ದರು.

ಅವರ ಈ ಕಾರ್ಯದಲ್ಲಿ ಅವರಲ್ಲಿದ್ದ ಸಮಯೋಚಿತ ಭಾಷಣ ಶಕ್ತಿಯೂ ಸ್ವಾಭಾವಿಕ ವಕ್ತೃತ್ವ ಗುಣವೂ ಬಹಳೇ ಸಹಾಯವಾಗುತ್ತಿದ್ದವು. ಕನ್ನಡ ಮರಾಠಿ ಮತ್ತು ಇಂಗ್ಲಿಷ ಭಾಷೆಗಳಲ್ಲಿ ಭಾಷಣ ಮಾಡುವ ಶಕ್ತಿಯು ಅವರಲ್ಲಿ ಮಿಗಿಲಾದದ್ದಿತ್ತು. ಅವರ ಭಾಷಣಗಳು ಉತ್ಸಾಹದಿಂದಲೂ ದೀರ್ಘವಿಚಾರಗಳಿಂದಲೂ ತುಂಬಿಕೊಂಡಿರುತ್ತಿದ್ದವು. ಆದ್ದರಿಂದ ಅವುಗಳನ್ನು ಕೇಳಲಿಕ್ಕೆ ಜನರು ಬೇಸರಿಯುತ್ತಿದ್ದಿಲ್ಲ. ಅವರ ಭಾಷಣಗಳಲ್ಲಿ ಬಿರಸು ನುಡಿಗಳು ವಿಶೇಷವಾಗಿದ್ದರೂ ಅವುಗಳಲ್ಲಿ ತೀಕ್ಷ್ಣತೆಯೂ ಮಾರ್ಮಿಕತೆಯೂ ಇರುತ್ತಿದ್ದವು.

ಚನ್ನಬಸಪ್ಪನವರು ಈ ಮೇರೆಗೆ ವಿದ್ಯಾಪ್ರಿಯರಾಗಿದ್ದುದರಿಂದ ವಿದ್ಯಾಪ್ರಿಯರೇ ಅವರ ಸ್ನೇಹಿತರಾಗಿದ್ದರು. ಇವರಲ್ಲಿ ವೆಂಕಟರಂಗೋ ಕಟ್ಟಿ, ಭುಜಂಗರಾವ ಹುಯಿಲಗೋಳ, ಬಾಸೆಲ್ ಮಿಶನ್ ಸಂಘಕ್ಕೆ ಸೇರಿದ ರೆವ್ಹರೆಂಡ ಜೀಗ್ಲರ್ ಇವರೇ ಮುಖ್ಯರಾಗಿದ್ದರು. ಇವರೆಲ್ಲರೂ ಉತ್ತಮ ಕನ್ನಡ ಗ್ರಂಥಕಾರರೂ ವಿದ್ವಾಂಸರೂ ರಸಿಕರೂ ಆಗಿದ್ದರು.

ಚನ್ನಬಸಪ್ಪನವರು ಕಪಟಿಗಳಾಗಿದ್ದಿಲ್ಲ. ಅವರು ಹೊರಗೊಂದು ಒಳಗೊಂದು ಎಂದೂ ತೋರಿಸಲಿಲ್ಲ. ಅವರು ತಮ್ಮ ಮನಸ್ಸಿಗೆ ಬಂದದ್ದನ್ನೂ ಬಾರದನ್ನೂ ಯಾರೇ ಇರಲಿ, ಸ್ಪಷ್ಟವಾಗಿ ಅಂದುಬಿಡುತ್ತಿದ್ದರು. ಕಾಪಟ್ಯವು ದುರ್ಬಲ ಮನುಷ್ಯನ ಕುರುಹು. ಆದರೆ ಚನಬಸವಪ್ಪನವರು ಬಹಳ ಯೋಗ್ಯತೆಯ ಮನುಷ್ಯರಾಗಿದ್ದದರಿಂದ ಅವರು ತಮ್ಮ ಅಭಿಪ್ರಾಯಗಳನ್ನು ಜನರ ಮುಂದಿಟ್ಟು ಆ ಪ್ರಕಾರ ಯಾವಾಗಲೂ ಪ್ರಯತ್ನಿಸುವರ

ಚನ್ನಬಸಪ್ಪನವರು ತೋರಿಕೆಯಿಂದಲೂ ಮಾತಿನಿಂದಲೂ ಕಠಿಣ ಹೃದಯವುಳ್ಳವರಾಗಿರಬಹುದೆಂದು ಭಾಸವಾಗುವಂತಿತ್ತು. ಆದರೆ ಅವರು ಬಹು ದಯಾಶೀಲರಾಗಿದ್ದರು. ಒಬ್ಬ ಶಾಲಾ ಮಾಸ್ತರನು ಯಾವದಾದರೊಂದು ತಪ್ಪುಮಾಡಿದ ಮಾತ್ರದಿಂದ, ಅವರು ಅವನಿಗೆ ಅಹಿತವನ್ನೂ

ಎಂದೂ ಮಾಡುತ್ತಿದ್ದಿಲ್ಲ. ಅವರನ್ನು ಕೂಡಲೇ ಕ್ಷಮಿಸುತ್ತಿದ್ದರು. ಎಷ್ಟೋ ಸನ ಮಾಸ್ತರರು ಚನ್ನಬಸವಪ್ಪನವರ ಈ ಗುಣವನ್ನು ಬಹಳ ಹೊಗಳು ತ್ತಿರುವದನ್ನು ಈಗಲೂ ಅನೇಕರು ಕೇಳಿರಬಹುದು. ಆದ್ದರಿಂದ ಚನಬ ಸಪ್ಪನವರು ಬಹಳ ಲೋಕಪ್ರಿಯರಾಗಿದ್ದರು.

ಚನಬಸವಪ್ಪನವರು ಯಾರಲ್ಲಾದರೂ ತಪ್ಪುಗಳನ್ನು ಕಂಡರೆ. ಅವು ಗಳನ್ನು ಅವರಿಗೆ ತಿಳಿಸಿ, ಅವರನ್ನು ಹಾದಿಗೆ ಹಚ್ಚಲು ಯಾವಾಗಲೂ ಪ್ರಯತ್ನಿಸುತ್ತಿದ್ದರು. ಅವರು ಆ ಮನುಷ್ಯನಿಗೆ ಸರಿಯಾಗಿ ಅತ್ಯಂತ ಮನೋವೇಧಕ ಮತ್ತು ಮಾರ್ಮಿಕ ಶಬ್ದಗಳಿಂದ ಸಿಟ್ಟುಮಾಡುತ್ತಿದ್ದರು. ಒಬ್ಬ ಮಾಸ್ತರನು ಅವರಿಗೆ--" ನಾನು ಕೆಲಸಮಾಡಲಿಕ್ಕೆ ಹತ್ತಿ ಇಂ ತಿಷ್ಟು ವರ್ಷಗಳಾದವು. ನಾನೇನೂ ತಪ್ಪುಮಾಡಲಿಲ್ಲ. ಉತ್ತಮ ರೀತಿ ಯಿಂದ ಕೆಲಸಮಾಡಿರುತ್ತೇನೆ. ಎಂದು ಹೇಳಿ ತನಗೆ ಬಡತೀಕೊಡಬೇ ಕೆಂದು ಬೇಡಿಕೊಳ್ಳಲಾಗಿ, ಚನ್ನಬಸವಪ್ಪನವರು --" ನಾನು ತಪ್ಪುಮಾ ತಿಲ್ಲ ಎಂದು ಅನ್ನಬೇಡ. ನೀನು ತಪ್ಪು ಮಾಡಿರುತ್ತೀನೆ; ಆದರೆ ಆ ತಪ್ಪು ತಿಸ್ಪ್ಯೂಟಿಯವರ ದೃಷ್ಟಿಗೆಮಾತ್ರ ಬಿದ್ದಿಲ್ಲ ಎಂದು ಅನ್ನು" ಎಂದು ಉತ್ತರ ಕೊಟ್ಟರು. ಮತ್ತೊಂದು ಸಾರೆ ಒಬ್ಬ ಹೆಡ್‌ಮಾಸ್ತರನು ನನ್ನ ಅಸಿಸ್ಟಂ ಟನು ನನ್ನ ಮಾತನ್ನು ಕೇಳದೆ ತನ್ನ ಮನಸ್ಸಿಗೆ ಬಂದಂತೆ ನಡೆಯು ತ್ತಾನೆ. "ಎಂದು ಚನ್ನಬಸವಪ್ಪನವರ ಮುಂದೆ ದೂರಹೇಳಿದನು. ಅದಕ್ಕೆ ಅವರು ಆ ಹೆಡ್‌ಮಾಸ್ತರನ ಅಯೋಗ್ಯತೆಯನ್ನು ತಿಳಿದುಕೊಂಡು, ಅವ ನಿಗೆ--" ಹೀಗೊ, ಒಳ್ಳೇದು. ನೀನು ನಿನ್ನ ಮನಸ್ಸಿಗೆ ಬಂದಂತೆ ನಡೆ ಯುವೆಯೋ ಅಥವಾ ಬಾರದಂತೆ ನಡೆಯುವೆಯೋ? ಭೂಮಿಯ ಮೇ ಲಿನ ಜನರು ತಮ್ಮ ತಮ್ಮ ಮನಸ್ಸಿಗೆ ಬಂದಂತೆ ನಡೆಯುವರೋ, ಅಥವಾ ಬಾರದಂತೆ ನಡೆಯುವರೋ ಹೇಳು ಎಂದು ಅನ್ನಲು. ಆ ಹೆಡ್‌ಮಾಸ್ತರನು ಇದರಿಂದ ತನ್ನ ಕೈಕೆಳಗಿನವರ ಬಗ್ಗೆ ಈ ರೀತಿಯಿಂದ ತಿರಸ್ಕಾರ ಮುಂದೆ ಹೇಳದೆ, ಅವರನ್ನು ತಿದ್ದುಕೊಂಡು ಹೋಗಬೇಕೆಂದು ಇವರ ಅಭಿಪ್ರಾಯವೆಂದು ತಿಳಿದುಕೊಂಡು ಅಲ್ಲಿಂದ ಹೊರಟು ಹೋದನು.

ಈ ಮೇರೆಗೆ ಚನಬಸವಪ್ಪನವರು ಎರಡನೆಯವರ ದೋಷಗಳನ್ನು ಸ್ಪಷ್ಟವಾಗಿ ಹೊರಗೆಡಹುವುತ್ತಿದ್ದರೂ, ತಮ್ಮಲ್ಲಿದ್ದ ದೋಷಗಳನ್ನು ಎರಡ ನೆಯವರು ತೆಗೆದರೆ ಅವರು ಸಿಟ್ಟಾಗುತ್ತಿದ್ದಿಲ್ಲ. ಒಂದು ಸಾಲೆಯಲ್ಲಿ

ಪರೀಕ್ಷೆಯು ನಡೆದಿತ್ತು. ಆಗ ಚೆನ್ನಬಸವಪ್ಪನವರು ಮೇಲಿನ ಎತ್ತೆಯು ವರಿಗೆ ಗಣಿತ ಹೇಳಿ ಹೆಡ್‌ಮಾಸ್ತರನಿಗೂ ಆ ಗಣಿತ ಮಾಡಲಿಕ್ಕೆ ಹೇಳಿದರು. ಆಗ ಆ ಮಾಸ್ತರನು-- ನಾನು ಇದನ್ನು ಮಾಡುತ್ತೇನೆ. ಆದರೆ ಒಂದುವೇಳೆ ಇದು ನನಗೆ ಬರದಿದ್ದರೆ, ನನ್ನವಿದ್ಯಾರ್ಥಿಗಳಲ್ಲಿ ನನ್ನ ಮಹತ್ವವು ಕಡಿಮೆಯಾಗಿ, ನನ್ನ ಕರ್ತವ್ಯಕ್ಕೆ ನೀವೇ ಭಂಗತಂದಂತಾಗು ವದಿಲ್ಲವೇ? ಈ ಮಾತು ನನಗೊಬ್ಬನಿಗಷ್ಟೇ ಅಲ್ಲ. ಎಲ್ಲ ಮಾಸ್ತರರಿಗೂ ಹತ್ತುತ್ತದೆ. ಈ ಸಂಗತಿಯು ವಿಷಯವಾಗಿ ದೊರೆಗಳವರು ವಿಚಾರ ಮಾಡತಕ್ಕದ್ದು" ಎಂದು ಅನ್ನಲಾಗಿ, ಚನ್ನಬಸವಪ್ಪನವರು--"ಅಹುದು, ಅಹುದು. ನೀನು ಹೇಳಿದು ನಿಜವು. ನಿನ್ನ ಮಾತು ಒಳ್ಳೇ ಸಾರವುಳ್ಳದ್ದು. ನೀನೆ ನನ್ನ ಗುರುವು" ಎಂದು ಹೇಳಿ ಆ ಮಾಸ್ತರನನ್ನು ಮುಂದೆ ಬಹು ಪ್ರೀತಿಸುವವರಾದರು.

ಚನ್ನಬಸಪ್ಪನವರು ತಮ್ಮ ಅಧಿಕಾರದಲ್ಲಿ ಯಾರಿಗೂ ಪಕ್ಷಪಾತ ಮಾಡುತ್ತಿದ್ದಿಲ್ಲ. ಎಲ್ಲರನ್ನು ಒಂದೇ ದೃಷ್ಟಿಯಿಂದ ನೋಡುತ್ತಿದ್ದರು. ಅವರ ತಮ್ಮಂದಿರಾದ ಸಣ್ಣಚನ್ನಬಸವಪ್ಪನವರು ಒಂದು ಶಾಲೆಯ ಮಾಸ್ತರರಾಗಿದ್ದರು. ಒಂದುವೇಳೆ ಚನ್ನಬಸಪ್ಪನವರ ಮನಸ್ಸಿಗೆ ಬಂದಿದ್ದರೆ ಅವರು ಅವರನ್ನು ಸುಲಭವಾಗಿ ಮೇಲೆ ಏರಿಸಬಹುದಾಗಿತ್ತು. ಆದರೆ ಅವರು ಅವರನ್ನು ಅವರ ಯೋಗ್ಯತೆಗಿಂತ ಹೆಚ್ಚು ಏರಿಸಲಿಲ್ಲ. ಅವರ ಈ ಸಮವರ್ತನೆಯನ್ನು ನೋಡಿ ಅವರ ಕೈಕೆಳಗಿನ ಜನರೆಲ್ಲರೂ ಅವರ ಬಗ್ಗೆ ಬಹು ಪೂಜ್ಯ ಬುದ್ಧಿಯುಳ್ಳವರಾಗಿದ್ದರು.

ಚನ್ನಬಸಪ್ಪನವರು ಬಹು ಉದಾರಗುಣವುಳ್ಳವರೂ ಅಂತಃಕರುಣೆಗಳೂ ಆಗಿದ್ದರು. ಅವರು ಶ್ರೀಮಂತರಾಗಿದ್ದಿಲ್ಲ. ಆದರೂ ಅವರು ತಮ್ಮ ಶಕ್ತಿಯನ್ನು ಮೀರಿ ಅನ್ಯರಿಗೆ ಸಹಾಯ ಮಾಡುತ್ತಿದ್ದರು. ಹೋದ ಧಾತು ಸಂವತ್ಸರದಲ್ಲಿ ಕರ್ನಾಟಕ ಭಾಗದಲ್ಲಿ ಬಹು ಭಯಂಕರವಾದ ಬರಗಾಲವು ಬಿದ್ದಿತ್ತು. ಆಗ ಉಣಕಲ್ಲ ಗ್ರಾಮದಲ್ಲಿ ಅನೇರರು ಕ್ರೈಸ್ತ ಮತವನ್ನು ಸೇರಲಿಕ್ಕೆ ಸಿದ್ಧರಾದದ್ದನ್ನು ಕೇಳಿ ಚನ್ನಬಸಪ್ಪನವರು ಅಲ್ಲಿಗೆ ಹೋಗಿ ಅವರಿಗೆ ತಕ್ಕ ಉಪದೇಶ ಮಾಡಿದ್ದಲ್ಲದೆ, ಅವರ ಹೀನಸ್ಥಿತಿಯನ್ನು ನೋಡಿ ಅವರಿಗೆ ನಾಲ್ಕೈದು ನೂರು ರೂಪಾಯಿಗಳ ವರೆಗೆ ದಾನಮಾಡಿದರು. ಇದೇ ಮೇರೆಗೆ ಅವರು ಹಳ್ಳಿಗಳಿಗೆ ಹೋದಾಗ್ಗೆ ಶಾಲೆಯ ವಿದ್ಯಾರ್ಥಿಗಳಿಗೆ ಮಿಠಾಯಿಗಳನ್ನೂ ಇನಾಮುಗಳನ್ನೂ ತಮ್ಮ

ಖರ್ಚಿನಿಂದಲೇ ಕೊಂಡುಕೊಡುತ್ತಿದ್ದರು. ಬೆಳಗಾವಿಯಲ್ಲಿ ಅವರು ಸ್ಥಾಪಿಸಿದ ವಿದ್ಯಾರ್ಥಿ ಗೃಹಕ್ಕೆ ಹಿಂದುಗಡೆ ಧನಸಹಾಯವು ದೊರೆಯದಿರಲು ಅವರು ತಮ್ಮ ಕೈಯಿಂದಷ್ಟೇ ಅಲ್ಲ, ಸಾಲಮಾಡಿ ಅದಕ್ಕೆ ಹಣ ಪೂರೈಸಿದರು. ಇದು ಅವರ ಸ್ವಾರ್ಥತ್ಯಾಗವನ್ನು ತೋರಿಸುತ್ತದೆ. ಇದೇ ಮೇರೆಗೆ ಅವರು ತಮ್ಮ ಪಗಾರದೊಳಗಿಂದ ಉಳಿದ ಅಲ್ಪಸ್ವಲ್ಪ ಹಣವನ್ನು ಬಡವಿದ್ಯಾರ್ಥಿಗಳಿಗೆ ಇವರಂತೆಯೇ ವೆಚ್ಚಮಾಡಿಬಿಡುತ್ತಿದ್ದರು. ಆದ್ದರಿಂದ ಅವರು ಸಾಯುವಾಗ ಬಡವರಾಗಿಯೇ ಇದ್ದರ . ಈ ವರ್ತನೆಯು ಅವರ ವಿಶಾಲವಾದ ಶ್ರೇಷ್ಠ ಮನಸ್ಸನ್ನು ಪ್ರಕಟ ಪಡಿಸುತ್ತದೆ.

ಇದೇ ಮೇರೆಗೆ ಕೆಳಗೆ ಕಾಣಿಸಿದ ಸಂಗತಿಯು ಚನ್ನಬಸವಪ್ಪನವರ ಸರಳ ಮತ್ತು ಪ್ರಾಮಾಣಿಕ ಸ್ವಭಾವವನ್ನು ತೋರಿಸತಕ್ಕ ಒಂದು ಉತ್ತಮ ಉದಾಹರಣೆಯಾಗಿರುತ್ತದೆ. ಏನಂದರೆಃ– ಅವರಿದ್ದ ಕಾಲಕ್ಕೆ ಧಾರವಾಡದಲ್ಲಿ ಒಂದು ಸರಕಾರೀ ಡಿಸ್ಟ್ರಿಕ್ಟ ಬುಕ್‌ಡಿಪೋ ಇರುತ್ತಿತ್ತು. ಅದರ ಮೇಲ್ವಿಚಾರಣೆಯು ಡಿಪ್ಯೂಟಿಯವರ ಕಡೆಗೆ ಇರುತ್ತಿತ್ತು. ಅಲ್ಲಿ ಮಾರಾಟಕ್ಕಾಗಿ ೮-೧೦ ಸಾವಿರ ರೂಪಾಯಿಗಳ ಪುಸ್ತಕಗಳು ಇರುತ್ತಿದ್ದವು. ಆ ಡಿಪೋದ ಕಾರಕೂನನು ಚನ್ನಬಸವಪ್ಪನವರಿಗೆ ತಿಳಿಯದಂತೆ ೪-೬ ವರ್ಷಗಳಲ್ಲಿ ೪-೫ ಸಾವಿರ ರೂಪಾಯಿಗಳನ್ನು ಅಪಹರಿಸಿಬಿಟ್ಟಿದ್ದನು. ಆದರೆ ಈ ಡಿಪೋದ ಜಮಾಖರ್ಚಿನ ಪುಸ್ತಕಗಳ ಮೇಲೆ ಚನ್ನಬಸವಪ್ಪನವರ ಸಹಿ ಇರುತ್ತಿತ್ತು. ಕಾಯದೆ ಪ್ರಕಾರ ಆ ಹಣದ ಬಗ್ಗೆ ಚನ್ನಬಸವಪ್ಪನವರು ಜವಾಬುದಾರರಾಗಿದ್ದರು. ಆದರೆ ಮುಂದೆ ಕಾರಕೂನನ ಮೋಸವು ಬಯಲಿಗೆ ಬರಲು ಅವನು ಎಲ್ಲಿಯೋ ಓಡಿಹೋಗಿ ಬಿಟ್ಟನು. ಆಗ ಅವನ ಜಾಮೀನುದಾರರ ಆಸ್ತಿಯಿಂದ ಆ ಎಲ್ಲ ಹಣವು ವಸೂಲು ಆಗದಿರಲು, ಚನ್ನಬಸವಪ್ಪನವರುಃ—"ಈ ಡಿಪೋದ ತಪಾಸಣೆಯು ನನ್ನ ಕಡೆಗೆ ಇದ್ದು ನಾನು ನನ್ನ ಹೆಡ್‌ಕ್ಲಾರ್ಕನನ್ನು ನಂಬಿ ಈ ಜಮಾಖರ್ಚಿನ ಪುಸ್ತಕಗಳ ಮೇಲೆ ಸಹಿ ಮಾಡಿದ್ದು ನನ್ನ ತಪ್ಪು ಇರುತ್ತದೆ. ನಾನು ಸ್ವತಃ ಈ ಲೆಖ್ಖವನ್ನು ತಪಾಸು ಮಾಡದಿದ್ದರೂ ಕಳೆದು ಹೋದ ಹಣಕ್ಕೆ ನಾನೇ ಜವಾಬುದಾರನಾಗಿದ್ದೇನೆ. ಆದ್ದರಿಂದ ನನಗೆ ಸಲ್ಲತಕ್ಕ ಪಗಾರದಲ್ಲಿ ನನ್ನ ಮನೆತನದ ವೆಚ್ಚಕ್ಕೆ ೬೦ರೂಪಾಯಿ ಮಾತ್ರ ಬಿಟ್ಟುಕೊಟ್ಟು, ಉಳಿದದ್ದನ್ನೆಲ್ಲ ಕಡಿಮೆ ಬಿದ್ದ ಹಣವನ್ನು ಮುಟ್ಟಿಸಿಕೊಳ್ಳುವದಕ್ಕಾಗಿ ಉಪಯೋಗಿಸಬೇಕು" ಎಂದು ಸರಕಾರಕ್ಕೆ ತಿಳಿಸಿದರು. ಆದರೆ ಸರಕಾರದವರು ಚನ್ನಬಸವಪ್ಪನವರಿಂದ ವಿದ್ಯಾಖಾ

ತಿಗೆ ಆನ ವ.ಹತ್ತರ ಸಹಾಯ.ವನ್ನು ಲಕ್ಷಕ್ಕೆ ತಂದು, ಆ ಹಣವನ್ನು ಅವರಿಗೆ ಕ್ಷಮಿಸಿ ಬಿಟ್ಟರು.

ಚನ್ನಬಸವಪ್ಪನವರು ಅತ್ಯಂತ ನೈತಿಕ ಧೈರ್ಯವುಳ್ಳವರಾಗಿದ್ದರು. ಯಾವಕಾಲದಲ್ಲೂ ಅವರಿಗೆ ಭೀತಿ ಎಂಬದು ಏನೂ ಇರಲಿಲ್ಲ. ತೇಜಃಪುಂಜವಾದ ಅವರ ಈ ವರ್ತನೆಯು ಅವರ ಸ್ವಭಾವದಲ್ಲಿ ಒಡೆದು ಕಾಣುವಂತೆ ಇದೆ. ಒಬ್ಬ ಮನುಷ್ಯನು ವಿದ್ವಾಂಸನೂ ದೊಡ್ಡ ಅಧಿಕಾರಿಯೂ ಶ್ರೀಮಂತನೂ ಇರಬಹುದು. ಆದರೆ ಅವನಲ್ಲಿ ಈ ಬಗೆಯ ನೈತಿಕ ಧೈರ್ಯವಿಲ್ಲದಿದ್ದರೆ ಅವನಿಂದ ದೊಡ್ಡಕಾರ್ಯಗಳಾಗವು. ಈ ಗುಣವು ಬರಬೇಕಾದರೆ ಅವನಲ್ಲಿ ಸತ್ಯದ ಬಗ್ಗೆ ನಿಷ್ಕಪಟವಾದ ಪ್ರೀತಿಯು ಬೇಕು. ಮತ್ತು ಆ ಸತ್ಯದ ಪ್ರಸಾರದ ಬಗ್ಗೆ ಭೀತಿಯುಳ್ಳವನಾಗದೆ ಅದಕ್ಕಾಗಿ ಹಿಂಸಿಸಲ್ಪಡಲು ಸಿದ್ಧನಾಗಿರಬೇಕು. ಇಂಥವನು ಯಾವ ಸ್ಥಿತಿಯಲ್ಲಿದ್ದರೂ, ಅವನ ವರ್ಚಸ್ಸು ಎಲ್ಲ ಜನರ ಮೇಲೆ ಉಳಿಯುವನು. ಇವೆಲ್ಲ ಗುಣಗಳು ಚನ್ನಬಸಪ್ಪನವರಲ್ಲಿ ಸಂಪೂರ್ಣವಾಗಿದ್ದವೆಂಬದು ಅವರ ಅನೇಕ ಪ್ರಸಂಗಗಳಲ್ಲಿಯ ವರ್ತನೆಯಿಂದ ವಾಚಕರಿಗೆ ತಿಳಿದು ಬರುವಂತೆ ಇದೆ.

ಚನ್ನಬಸವಪ್ಪನವರು ಸಂಭಾಷಣೆಯಲ್ಲಿ ಬಹು ಚತುರರು. ಮಾತ್ರ ಕಥೆಗಳನ್ನು ಯುಕ್ತಿಯಿಂದಲೂ ರಸಿಕತನದಿಂದಲೂ ಆಡುವರು. ಜನರು ಇವರ ಮಾತುಗಳಿಗೂ ಅಭಿಪ್ರಾಯಗಳಿಗೂ ಬಹಳ ಮೆಚ್ಚುತ್ತಿದ್ದರು. ಆದ್ದರಿಂದ ಅವರು ಎಲ್ಲರಲ್ಲಿಯೂ ಬಹು ಗೌರವವುಳ್ಳವರಾಗಿದ್ದರು.

ಚನ್ನಬಸಪ್ಪನವರಲ್ಲಿ ಜಾತಿವಿಷಯಕ ಮತ್ಸರ ಭಾವಗಳು ಏನೂ ಇದ್ದಿದ್ದಿಲ್ಲ. ಅವರ ಧಾರ್ಮಿಕ ವಿಚಾರಗಳು ಅವರನ್ನು ಧರ್ಮಾಂಧರನ್ನಾಗಿ ಮಾಡುವದು ಅಸಂಭವವಾಗಿತ್ತು. ಅವರು ಬೇರೆ ಜಾತಿಯವರನ್ನು ಎಂದೂ ನಿಂದಿಸಲಿಲ್ಲ. ಆದ್ದರಿಂದ ಅವರು ಎಲ್ಲರಿಗೂ ಬೇಕಾಗಿದರು. ಚನ್ನಬಸವಪ್ಪನವರಂಥ ಉದಾರ ವಿಚಾರವುಳ್ಳ ಮನುಷ್ಯನು ಜಾತ್ಯಾಭಿಮಾನವನ್ನು ವಹಿಸುವದು ಅಸಂಭವವಿರುತ್ತದೆ.

ದೊಡ್ಡ ಮನುಷ್ಯರಿಗೆ ಸ್ತುತಿಪ್ರಿಯರಾಗುವ ಒಲವು ಬಹಳ ಇರುತ್ತದೆ. ತಾವು ಮಾಡಿದ ಮತ್ತು ಮಾಡುವ ಕಾರ್ಯಗಳು ಬಹು ದೊಡ್ಡವೆಂಬ ಅಭಿಮಾನವು ಅವರಲ್ಲಿ ಸೇರಿ, ಯಾವಾಗಲೂ ಅವರು ತಮ್ಮ ಹೆಮ್ಮೆಯಲ್ಲಿ ಇರುತ್ತಾರೆ. ಇಂಥವರ ಸುತ್ತಲು ಸ್ವಾರ್ಥಪರಾಯಣ

ಾದ ಜನರು ನೆರೆದು ಅವರ ಮುಖಸ್ತುತಿಯನ್ನು ಮಾಡುತ್ತ ತಮ್ಮ
ಸ್ವಕಾರ್ಯ ಸಾಧಿಸುವದರಲ್ಲಿ ತೊಡಗಿರುತ್ತಾರೆ. ಆದರೆ ಚನ್ನಬಸವಪ್ಪ
ವರು ಇಂಥ ಮುಖಸ್ತುತಿಗೆ ಎಂದೂ ಉತ್ತೇಜನ ಕೊಡಲಿಲ್ಲ. ಇದು
ಕಗೆ ಕಾಣಿಸಿದ ಸಂಗತಿಯಿಂದ ಚನ್ನಾಗಿ ವ್ಯಕ್ತವಾಗುವಂತೆ ಇದೆ.
ನ್ನಬಸವಪ್ಪನವರು ಒಂದು ಊರಿಗೆ ಪರೀಕ್ಷೆಗೆ ಹೋದಾಗ್ಗೆ, ಒಬ್ಬ
ಾಸ್ತರನು ಅವರ ಮೇಲೆ ಕೆಲವು ಕವಿತೆಗಳನ್ನು ರಚಿಸಿ, ಕೆಲವು ಸಭ್ಯ
ಹಸ್ಥರ ಮುಂದೆ ಅವುಗಳನ್ನು ಮೊದಲು ಅಂದು ತೋರಿಸಿದನು.
ವರು ಅವುಗಳಿಗೆ ಸಂತೋಷಬಟ್ಟು, ನಾವು ಚನ್ನಬಸವಪ್ಪನವರಿಗೆ ಇದನ್ನು
ೇಳುವೆವು. ನೀವು ಅವರ ಮುಂದೆ ಇವುಗಳನ್ನು ಅಂದು ತೋರಿಸಿರಿ.
ದರಿಂದ ಅವರು ಸಂತೋಷಬಟ್ಟು ನಿಮಗೆ ಕಲ್ಯಾಣ ಮಾಡುವರು ಎಂದು
ೇಳಿದರು. ಆ ಮೇಲೆ ಅವರು ಚನ್ನಬಸವಪ್ಪನವರ ಮುಂದೆ ಈ ಪ್ರಸ್ತಾಪ
ಗೆಯಲಾಗಿ ಅವರು— " ಹೀಗೋ ಬಹಳ ಸಂತೋಷ. ಇವೊತ್ತಿನ
ಾಯಂಕಾಲದಲ್ಲಿ ನೀವೆಲ್ಲರೂ ಕೂಡಿದಾಗ ಆ ಮಾಸ್ತರನು ಅವುಗಳನ್ನು
ಂದು ತೋರಿಸಲಿ. ನಾನು ಕೇಳುತ್ತೇನೆ" ಎಂದು ಹೇಳಿದರು. ಆ
ೕಲೆ ಸಂಜೆಗೆ ಎಲ್ಲರೂ ನೆರೆದ ಮೇಲೆ ಮಾಸ್ತರನು ಚನ್ನಬಸಪ್ಪನ
ರ ಮುಂದೆ ಬಹಳ ಉತ್ಸಾಹದಿಂದ ತನ್ನ ಕವಿತೆಗಳನ್ನು ಅಂದು
ೋರಿಸಲು, ಆಗ ಚನ್ನಬಸವಪ್ಪನವರುಃ —ನೀವೇ ಸ್ವತಃ ಈ ಕವಿತೆಗಳನ್ನು
ಚಿಸಿರುವಿರೋ" ಎಂದು ಕೇಳಲು, ಮಾಸ್ತರನುಃ— " ಹೌದು, ನಾನೇ
ವುಗಳನ್ನು ರಚಿಸಿರುವೆನು ಎಂದು ಅನ್ನಲಾಗಿ ಚನ್ನಬಸವಪ್ಪನವರುಃ--
ಹಾಗಾದರೆ ನನ್ನ ನಾಸಿಕೆಯು 'ಸಂಪಿಗೆ ಹೂವಿಗೆ ಸರಿ' ಎಂದು ಬಣ್ಣಿ
ರುವಿರಿ. ಅದು ಹಾಗೆಲ್ಲಿ ಇದೆ? ಮುಖವನ್ನು ಹೀಗೆಯೇ ಬಣ್ಣಿಸಿರು
ರಿ. ನಾನು ಬಹು ದಯವಂತನೆಂತಲೂ ಶಾಂತನೆಂತಲೂ ಹೊಗಳಿ
ುವಿರಿ. ಆದರೆ ಈಗ ನನಗೆ ಸಿಟ್ಟು ಬಂದಿದೆ. ಇನ್ನೂ ಎಷ್ಟೋ ಬಗೆ
ಯಾಗಿ ದೇವರಿಗೆ ಸರಿಯೆಂದು ನನ್ನನ್ನು ವರ್ಣಿಸಿರುವಿರಿ. ಇದು ನಿಜ
ೋ? ಅಂದ ಬಳಿಕ ನಿಮ್ಮ ಕವಿತೆಗಳೆಲ್ಲ ಸುಳ್ಳು. ದೋಷದವು. ಈ
ೀತಿ ಸುಳ್ಳು ಯಾಕೆ ವರ್ಣಿಸಿದಿರಿ? ಸುಳ್ಳು ಯಾಕೆ ನುಡಿಯುವಿರಿ?
ಬಗ್ಗೆ ಬಹು ವೇಳೆ ವ್ಯರ್ಥ ಕಳೆದಿರಿ. ಮನೆಯಲ್ಲಿ ಒಂದು ಪಾವು
ೋಳ ಬೀಸಲಿಕ್ಕೆ ಹಿಡದಿದ್ದರೆ, ಅವರು ಬಹು ಸಂತೋಷದಿಂದ
ಮಗೆ ರೊಟ್ಟೀ ಮಾಡಿ ಹಾಕುತ್ತಿದ್ದರು" ಎಂದು ಅವರಿಗೆ ಸಿಟ್ಟು ಮಾಡಿ

ವರು. ಆಗ ಮಾಸ್ತರನು ನಿರುತ್ತರನಾಗಿ ತನ್ನ ತಪ್ಪನ್ನು ಒಪ್ಪಿಕೊಂಡು ಇನ್ನು ಮುಂದೆ ಹೀಗೆ ಮುಖಸ್ತುತಿ ಮಾಡುತ್ತ ವ್ಯರ್ಥವಾಗಿಯೂ ಸುಳ್ಳು ತನದಿಂದಲೂ ಕಾಲಹರಣ ಮಾಡೆನೆಂದು ಹೇಳಿಕೊಳ್ಳಬೇಕಾಯಿತು.

ಆದರೆ ಮನುಷ್ಯನಲ್ಲಿ ಅನೇಕ ಸದ್ಗುಣಗಳಿದ್ದರೂ ಅವನಲ್ಲಿದು ರ್ಗುಣಗಳಾದರೂ ಕೆಲವು ಮಟ್ಟಿಗೆ ಇದ್ದೇ ಇರುತ್ತವೆ. ಈಸಂಗೆ ಚನ್ನಬಸವಪ್ಪನವರಲ್ಲಿ ಅನೇಕ ಉತ್ತಮೋತ್ತಮ ಗುಣಗಳಿದ್ದರೂ ಅವರಲ್ಲಿ ಹಲಕೆಲವು ದುರ್ಗುಣಗಳೂ ವ್ಯಸನಗಳೂ ಸಹ ಇದ್ದವು. ಇವುಗ ಳಲ್ಲಿ ವ್ಯಸನಗಳು ವ್ಯಕ್ತಿಮಾತ್ರಕ್ಕೆ ಸಂಬಂಧಪಟ್ಟಿರುವದರಿಂದ ಅವುಗ ಳನ್ನು ಇಲ್ಲಿ ವಿವರಿಸುವದು ಅಯುಕ್ತವು. ಆದರೆ ಇವೆಲ್ಲವೂ ಶ್ರೇಷ್ಠ ಗುಣಗಳ ಪ್ರಭಾವದಲ್ಲಿ ಅಡಗಿಹೋಗುತ್ತವೆ. ಮತ್ತು ಇಂಥ ಮನು ಷ್ಯನು ಮರಣ ಹೊಂದಿದ ಮೇಲೆ ಅವರಲ್ಲಿನ್ನ ದುರ್ಗುಣಗಳು ಮರೆತು ಹೋಗಿ, ಅವರ ಸದ್ಗುಣಗಳ ಸುಪರಿಣಾಮಗಳು ಜನರ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿದು ಅವನು ಜನರಿಗೆ ಹೆಚ್ಚೆಚ್ಚು ಪ್ರಿಯನಾಗುತ್ತ ಹೋಗುತ್ತಾನೆ.

ಚನ್ನಬಸವಪ್ಪನವರು ಸ್ವಾಭಾವಿಕವಾಗಿ ಕೋಪಿಷ್ಠರೂ, ತಾಳ್ಮೆಯಿ ಲ್ಲದವರೂ ಹಟಮಾರಿಗಳೂ ಬಿರುಸು ಮಾತಿನವರೂ ಆಗಿದ್ದರು. ಆದ್ದ ರಿಂದ ಅವರು ತಮ್ಮ ಕೋಪದಲ್ಲಿ ಏನಾದರೊಂದನ್ನು ಮಾಡುವರು ಆದರೆ ಆ ಕೋಪವು ಹೊದ ಮೇಲೆ ಅವರು ತಮ್ಮ ತಪ್ಪನ್ನು ಒಪ್ಪಿ ಕೊಂಡು ಯೋಗ್ಯಮಾರ್ಗಕ್ಕೆ ಹತ್ತುವರು. ಇದರಿಂದ ಅವರ ವರ್ತ ನೆಯಲ್ಲಿ ಅನೇಕ ಸಾರೆ ಚಂಚಲತೆಯು ಉತ್ಪನ್ನವಾಗುತ್ತಿತ್ತು ಮತ್ತು ಅನೇಕ ತಪ್ಪುಗಳೂ ಆಗುತ್ತಿದ್ದವು. ಒಮ್ಮೊಮ್ಮೆ ಅವರ ತೀಕ್ಷ್ಣವಾದ ಮಾತುಗಳು ಜನರ ಮನಸ್ಸಿಗೆ ಬಹಳ ಹತ್ತುತ್ತಿದ್ದವು. ಯಾಕಂದರೆ ಮನುಷ್ಯನಿಂದ ತಪ್ಪಾಗಿದ್ದರೂ ಅದನ್ನು ಒಪ್ಪಿಕೊಳ್ಳಲಿಕ್ಕೆ ಆವನಿಗೆ ಪ್ರಾಣ ಸಂಕಟ ಬರುತ್ತದೆ. ಇದು ಚನ್ನಬಸವಪ್ಪನವರ ಲಕ್ಷ್ಯಕ್ಕೆ ಬರುತ್ತಿದ್ದಿಲ್ಲ. ಅವರು ಅಂತ್ಯಾವಸ್ಥೆಯಲ್ಲಿದ್ದಾಗ್ಗೆ ಅವರ ಮಿತ್ರರಾದ ವೆಂಕಟ ರಂಗೋ ಕಟ್ಟಿಯವರು ಅವರನ್ನು ಕಾಣಲಿಕ್ಕೆ ಬಂದರು. ಆಗ ಅವರು—"ನಿಮಗೆ ಹ್ಯಾಗೆ ಆದೆ? ನಿಮ್ಮ ದೇಹದಲ್ಲಿ ಹ್ಯಾಗೆ ಅನಿಸುತ್ತದೆ?" ಎಂದು ಕೇಳಲು, ಅದಕ್ಕೆ ಚನ್ನಬಸವಪ್ಪನವರು—"ನನಗೆ ಈಗ್ಗೆ ಯಾವ ಸ್ಥಿತಿಯು ಬಂದಿ ರುವದೋ ಆ ಸ್ಥಿತಿಯು ನಿಮಗೆ ಬಂದಾಗ್ಗೆ ತಿಳಿಯುವದು" ಎಂದು

ಉತ್ತರ ಕೊಟ್ಟರು. ಈ ತರದ ತೀಕ್ಷ್ಣ ಮಾತುಗಳು ಅವರಿಗೆ ಪಾಡಿಕೆ ಯಾಗಿದ್ದವು. ಆದರೆ ಇಂಥ ತೀಕ್ಷ್ಣ ಮಾತಿನಲ್ಲಿ ದುಷ್ಟ ಮನಸ್ಸು ಇರದ್ದ ರಿಂದ ಜನರು ಅವುಗಳನ್ನು ಕ್ಷಮಿಸುತ್ತಿದ್ದರು.

ಚನ್ನಬಸವಪ್ಪನವರು ಎತ್ತರವಾದ ಮೈಕಟ್ಟುಳ್ಳವರೂ ಸಾಮರ್ಥ್ಯ ವಂತರೂ ನಸುಗೆಂಪು ಬಣ್ಣದವರೂ ತೇಜಃಪುಂಜವಾದ ಮುಖಮುದ್ರೆ ಯುಳ್ಳವರೂ ಆಗಿದ್ದರು. ಅವರ ಉಡಿಗೆತೊಡಿಗೆಗಳು ಬಹಳ ಸಾದಾ ಇರುತ್ತಿದ್ದವು. ಅವರೊಬ್ಬ ದೊಡ್ಡ ಸರಕಾರೀ ಅಧಿಕಾರಿಗಳಂತೆ ಕಾಣದೆ, ಒಬ್ಬ ಹಳೇ ಪದ್ಧತಿಯ ಬಣಜಿಗನಂತೆ ಕಾಣುತ್ತಿದ್ದರು. ಅವರಿಗೆ ಡಂಭದ ಪೋಷಾಕು ಜಂಬದ ನುಡಿಗಳು ಸೇರುತ್ತಿದ್ದಿಲ್ಲ. ಚದುರಂಗದ ಮೇಲೆ ಅವರ ಪ್ರೀತಿಯು ಬಹಳ. ಆದರಲ್ಲಿ ಅವರು ಬಹಳ ಪ್ರವೀಣರಿದ್ದರು. ಅವರ ಊಟವಾದರೂ ಬಹಳ ಸಾದಾ ತರದ್ದಾಗಿರುತ್ತಿತ್ತು. ಅವರು ಫಿರ್ತಿಯ ಮೇಲೆ ಇದ್ದಾಗ ಸವಿಯಾದ ಊಟವನ್ನು ಇಚ್ಛಿಸುತ್ತಿದ್ದಿಲ್ಲ. ಅವರು ತಂಗಳ ರೊಟ್ಟಿಯನ್ನು ಹಳ್ಳದ ಇಲ್ಲವೇ ಭಾವಿಯ ದಂಡೆಯ ಮೇಲೆ ಕುಳಿತು ತಿಂದು ಮುಂದೆ ಹೋಗಲಿಕ್ಕೆ ಹಿಂದಾಗುತ್ತಿದ್ದಿಲ್ಲ. ಅವರು ತಮ್ಮ ಕೈಕೆಳಗಿನ ಜನರಿಂದ ಸರಬರಾಯಿಯನ್ನು ಎಂದೂ ಸ್ವೀಕರಿಸ ಲಿಲ್ಲ. ಒಬ್ಬ ಮಾಸ್ತರನು ನಮಗೆ ಹೇಳಿದ್ದೇನಂದರೆ, ಚನ್ನಬಸವಪ್ಪ ನವರು ಕಡ್ಲೀ ಗಿಡ ತರಲಿಕ್ಕೆ ತಮ್ಮ ಶಿಪಾಯಿಯ ಕೈಯಲ್ಲಿ ೨ ದುಡ್ಡು ಕೊಟ್ಟರು. ಆ ಶಿಪಾಯಿಯು ಈ ಬಗ್ಗೆ ಮಾಸ್ತರನನ್ನು ಕೇಳಲು ಅವನು ಒಂದು ದೊಡ್ಡ ಸಿವಡನ್ನು ತರಿಸಿಕೊಟ್ಟನು. ಆದರೆ ಆ ಸಿಪಾಯಿಯು ಎರಡು ದುಡ್ಡಿಗೆ ಇಂಥ ದೊಡ್ಡ ಶಿವಡು ತಂದು ಕೊಟ್ಟರೆ, ಸಾಹೇಬರು ಬಯ್ಯು ವರೆಂದು ಹೇಳಿ ಎಷ್ಟು ಶಿವಡು ಬೇಕೋ ಅಷ್ಟೇ ಒಯ್ದನು. ಇವರ ಮೇಲಿಂದ ಚನ್ನಬಸವಪ್ಪನವರ ವರ್ತನೆಯು ಎಂಥ ಶ್ರೇಷ್ಠ ತರದ್ದಿತ್ತೆಂ ಬದು ತಿಳಿದು ಬರುವಂತೆ ಇದೆ.

ಈ ಮೇರೆಗೆ ಚನ್ನಬಸವಪ್ಪನವರಲ್ಲಿ ಅನೇಕ ಅಮೌಲ್ಯವಾದ ಗುಣ ಗಳಿದ್ದವು. ಆದ್ದರಿಂದ ಅವರು ತಮ್ಮ ನಾಡಿನವರಲ್ಲಿ ಬಹು ಪ್ರಿಯರಾ ಗಿದ್ದರು. ಅವರು ತಮ್ಮ ಜನರಲ್ಲಿ ಕೇವಲ ಒಬ್ಬ ಸರಕಾರೀ ಅಧಿಕಾರಿ ಯಂತೆ ವ್ಯವಹರಿಸದೆ, ಒಬ್ಬ ಶಿಕ್ಷಕ, ಒಬ್ಬ ಸಾರ್ವಜನಿಕ ಹಿತಚಿಂತಕ, ಒಬ್ಬ ಸುಧಾರಕ, ಒಬ್ಬ ದೇಶಾಭಿಮಾನಿ, ಒಬ್ಬ ಬೋಧಕನಂತೆ ವ್ಯವಹರಿ

ಸಿದರು. ಆದ್ದರಿಂದ ಅವರು ನಮ್ಮ ಕರ್ನಾಟಕಸ್ಥರು ಸದಾ ನೆನಿಸಲು ತಕ್ಕವರಾದ ಒಬ್ಬ ದೊಡ್ಡ ಮನುಷ್ಯರಾಗಿದ್ದಾರೆ. ಅವರು ಇನ್ನೂ ಹೆಚ್ಚು ದಿವಸ ಬಾಳಿದ್ದರೆ ಅವರು ಹೆಚ್ಚಿನ ಪದವಿಗೆ ಏರಿ ನಮ್ಮ ದೇಶಕ್ಕೆ ಕಲ್ಯಾಣ ಮಾಡಬಹುದಾಗಿತ್ತು. ಯಾಕಂದರೆ ಅವರ ಮೇಲೆ ಸರಕಾರದವರ ಮತ್ತು ಸ್ವಜನರ ಪ್ರೀತಿಯು ಸಂಪೂರ್ಣವಾಗಿತ್ತು. ಆದರೆ ಅವರು ಬಹಳ ದಿವಸ ಬಾಳಲಿಲ್ಲ. ಅವರಿಗೆ ಬಹುಮೂತ್ರ ವಿಕಾರವು ಉಂಟಾಗಿ, ಅವರು ತಮ್ಮ ವಯಸ್ಸಿನ ೪೭ ನೆಯ ವರ್ಷದಲ್ಲಿಯೇ ಅಂದರೆ ಸನ್ ೧೮೮೧ ನೇ ಇಸ್ವಿಯ ಜಾನೇವರಿ ೪ ನೇ ತಾರೀಖಿನ ದಿವಸ ಧಾರವಾಡದಲ್ಲಿ ದೇಹವಿಟ್ಟರು.

ಅವರು ಈ ಮೇರೆಗೆ ಅಲ್ಪ ವಯಸ್ಸಿನಲ್ಲಿ ತೀರಿಕೊಂಡದ್ದಕ್ಕೆ ಆಗಿನ ಕಾಲದ ಜನರು ಬಹಳ ಹಳಹಳಿಸಿದರು. ಅವರ ನಿಧನ ಸಮಯಕ್ಕೆ ಒಬ್ಬ ಸಾರ್ವಜನಿಕ ದೊಡ್ಡ ಗೃಹಸ್ಥನಿಗೆ ಕೊಡಬೇಕಾದ ಮಾನಮರ್ಯಾದೆಗಳನ್ನು ಧಾರವಾಡ ಪಟ್ಟಣದೊಳಗಿನ ಎಲ್ಲ ಜಾತಿಯ ಜನರು ಕೊಟ್ಟು ಅವರ ಮೇಲಿದ್ದ ತಮ್ಮ ಪ್ರೀತಿಯನ್ನು ವ್ಯಕ್ತಗೊಳಿಸಿದರು. ಇಂಥ ಕರ್ತೃತ್ವಶಕ್ತಿಯುಳ್ಳ ಮಹಾ ಪುರುಷರು ನಮ್ಮ ಕರ್ನಾಟಕ ಭೂಮಿಯಲ್ಲಿ ಜನಿಸಲೆಂದು ನಾವು ಕೋರಿ ಈ ಚಿಕ್ಕ ಚರಿತ್ರೆಯನ್ನು ಸಮಾಪ್ತಿಗೊಳಿಸುತ್ತೇವೆ.

---

# ಶಿವಾನುಭವ.

ಸಂಪುಟ ೫ ]

(ಮಾಸಪತ್ರಿಕೆ.)

[ ಸಂಚಿಕೆ ೩



ಬೆಂಗಳೂರ
ಸರ್ಪಭೂಷಣ ಶಿವಯೋಗಿಗಳ
ಗುಡಿಯ ವಳಭಾಗ.
ವಿಜಾಪುರ.

ಜೂನ ೧೯೩೦ ]

[ ಜ್ಯೇಷ್ಠ ೧೮೫೨

ವಾ. ಚ. ೪ರೂ. ೪ಆ.

# ವಿಷಯಾನುಕ್ರಮಣಿಕೆ.


| ವಿಷಯ | ಲೇಖಕರಹೆಸರು | ಪುಟ |
|---|---|---|
| ೧. ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ. | ಶ್ರೀ. ಹೆಚ್. ಜೆ. ಯಸ್. ಶರ್ಮ ಮಧುವನ ಹಳ್ಳಿ. | ೩೪-೪೬ |
| ೨. ವೀರಶೈವ ವರ್ಣಾಶ್ರಮ ವಿಚಾರವು. | ಶಿವಸುತ | ೪೭-೫೫ |
| ೩. ವೀರಶೈವ ವರ್ಣಭೇದ ವಿದಾರಿಕಾ. | ರಾ॥ ರಾ॥ ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ. | ೫೬-೬೨ |
| ೪. ಷಟ್ಸ್ಥಲಶಾಸ್ತ್ರದ ಪ್ರಕಾರಸ್ತ್ರೀಯರ ಹಕ್ಕುಗಳು. | ಸಂಪಾದಕರು. ಮಧುಕರ | ೬೩-೭೨ |
| ೫. ವೀರಶೈವನು ನವಗ್ರಹಗಳನ್ನು ಧಿಕ್ಕರಿಸುವನೋ ಅಥವಾ ಅಂಗೀಕರಿಸುವನೋ. | | ೭೩ |
| ೬. ಪ್ರಭುದೇವರ ವಚನಗಳು. | | ೧-೨೪ |


## ಶಿವಾನುಭವ.

ಇದು ವೀರಶೈವ ಧಾರ್ಮಿಕ ಉನ್ನತಿಯ ಬಗ್ಗೆ ಪ್ರಯತ್ನಿಸುವ ಮೇಲ್ತರದ ಮಾಸಪತ್ರಿಕೆಯು. ಇದು ೬೪ ಪುಟಗಳುಳ್ಳದ್ದಿದ್ದು ಚಂದಾ ಮಾತ್ರ ೪ರೂ. ೪ಆ. ಇದು ಪ್ರತಿತಿಂಗಳ ಮಧ್ಯಕ್ಕೆ ಹೊರಡುತ್ತದೆ. ಲೇಖಕರು ಚಿಕ್ಕ ಚಿಕ್ಕ ಲೇಖಗಳನ್ನು ಕಳಿಸಬೇಕು. ವೀರಶೈವರ ಉನ್ನತಿಯ ಪರವಾಗಿ ಯಾರು ಬೇಕಾದವರು ಲೇಖಗಳನ್ನು ಬರೆದರೂ ಅವಕಾಶ ಸಿಗುವದು. ಕೆಲವರು ಇದರ ಹಿಂದಿನ ಸಂಚಿಕೆಗಳನ್ನು ಬೇಡುತ್ತಾರೆ. ಆದರೆ ೧-೨ ಸಂಚಿಕೆಗಳು ಸಿಗುವದೇ ಇಲ್ಲ. ೩ ರಿಂದ ೧೨ ವರೆಗೆ ಮಾತ್ರ ಸಿಗುತ್ತವೆ ಬೇಕಾದವರು ಶೀವ್ರ ತರಿಸಿಕೊಳ್ಳಬಹುದು. ತಡವಾದರೆ ಪ್ರತಿಗಳು ಸಿಗಲಾರವು. ಯಾಕಂದರೆ ಪ್ರತಿಗಳು ಸ್ವಲ್ಪೇ ಉಳಿದಿವೆ. ಪ್ರತಿಯೊಂದು ಸಂಚಿಕೆಗೆ ೮ ಆಣೆ.

ಮ್ಯಾನೇಜರ.

# ಶಿವಾನುಭವ.

ವರ್ಷ ೫ ]  ಜೂನ ೧೯೩೦  [ ಸಂಚಿಕೆ ೩

## ಸರ್ಪಭೂಷಣ ಶಿವಯೋಗಿಗಳ ಜೀವನ ಚರಿತ್ರೆ.

ಲೇಖಕ:— ಹೆಚ್ ಜಿ. ಯಸ್. ಶರ್ಮ ಮಧುವನಹಳ್ಳಿ.



ಅನಾದಿಕಾಲದಿಂದ ಬಂದ ಈ ವೀರಶೈವ ಮತದಲ್ಲಿ ಜನ್ಮವೆತ್ತಿ ತಮ
ಅದ್ವಿತೀಯ ಸರಸಕವಿತಾಪಾಂಡಿತ್ಯದಿಂದಲೂ, ಅದ್ಭುತವಾದ ಯೋಗಮ
ಹಿಮೆಯಿಂದಲೂ, ಅಸಾಮಾನ್ಯವಾದ ಶಾಪಾನುಗ್ರಹ ಶಕ್ತಿಯಿಂದಲೂ
ಅನನ್ಯ ದೈವನಿಷ್ಠೆಯಿಂದಲೂ, ಮಿಗಿಲಾದ ವಿರತಿಯಿಂದಲೂ, ಇಡೀ ಸಮಾ
ಜವನ್ನೇ ಪವಿತ್ರಗೊಳಿಸಿದ ಮಹನೀಯರಲ್ಲಿ ಶ್ರೀ ಸರ್ಪಭೂಷಣ ಶಿ
ಯೋಗಿಗಳು ಒಬ್ಬರಾಗಿರುವರು. ಹತ್ತಾರು ಋಣಗ್ರಂಥಗಳನ್ನು ರಚಿಸ
ಮತ್ತೆ ಮತ್ತೆ ಓದಬೇಕೆನ್ನುವಷ್ಟು ಸುರಸವೂ, ವೈರಾಗ್ಯಬೋಧಕವು
ಆದ ಒಂದೇ ಗ್ರಂಥವನ್ನು ರಚಿಸಿ ತಾವು ದೀರ್ಘಕಾಲ ಜೀವಿಸದಿದ್ದರು
ತಮ್ಮ ಹೆಸರು ಆಚಂದ್ರಾರ್ಕವಾಗಿ ಪ್ರತಿಯೊಬ್ಬ ವೀರಶೈವ ಆಬಾ
ವೃದ್ಧರ ಬಾಯಿಂದಲೂ ಹೊರಸೂಸುವಂತೆ ಮಾಡಿಕೊಂಡ ಈ ಮ
ನೀಯರ ಚರಿತ್ರೆಯು ಮೊದಲಿಂದ ಕೊನೆಯುವರುವಿಗೂ ಸನ್ಮಾರ್ಗಬೋ
ಧಕವಾದುದಾಗಿರುವುದು. ಇವರ ಪ್ರತಿಯೊಂದು ವೃತ್ತಿಯೂ ಇಂದಿ
ಜನಾಂಗದವರಿಗೆ ಹಾಗೂ ಅಜ್ಞಾನವಶರಾದ ಗುರುಜಂಗಮರಿಗೆ ಆ
ಶವಾಗಿರುವುದು. ಆದರೂ ಇಂಥಾ ಮಹಾತ್ಮರ ಜೀವಚರಿತ್ರೆಗಳೆಲ್ಲ ಇ
ಲ್ಲಿಯೇಗೆಜ್ಜಲು ಹುಳುಗಳಿಗೆ ಆಹಾರವಾಗುತ್ತಿರುವುದು ನಮ್ಮಗಳ ದು
ದೃಷ್ಟವೆಂದೇ ಹೇಳಬಹುದು. ಆದುದರಿಂದ ಇನ್ನಾದರೂ ಸಮಾಜ ಸೇವ

ಭಿಮಾನಿಗಳು ಇಂಥಾ ದಿವ್ಯಪುರುಷರ ಚರಿತ್ರೆಗಳನ್ನೆಲ್ಲ ಪರಿಶೋಧಿಸಿ ಸಮಾಜದ ಮುಂದಿಡಲೆತ್ನಿಸಲೆಂದು ಹಾರೈಸುತ್ತೇನೆ.

## ಜನನ.

ಮೈಸೂರ ದೇಶದಲ್ಲೆಲ್ಲ ಅತ್ಯಂತ ಪ್ರಸಿದ್ಧವಾದ ಬೆಂಗಳೂರು ನಗರವು ಆದಿಯಿಂದಲೂ ಅಗಣಿತ ಗುರು ಜಂಗಮರುಗಳಿಗೆ ವಾಸಸ್ಥಳವಾಗಿ ಬಂದಿರುವದು. ಇಲ್ಲಿನ ಗುರುಚರ ಪತಿಗಳಲ್ಲನೇಕರು ಇತ್ತೀಚೆಗೆ ಧರ್ಮಭ್ರಷ್ಟತೆಯನ್ನು ಹೊಂದುತ್ತ ಬಂದಿರುವುದಾದರೂ ಇವರ ಆದಿಗುರುಗಳು ತಮ್ಮ ಮಹಿಮಾರಾಶಿಗಳಿಂದ ಅತ್ಯಂತ ವಿಖ್ಯಾತರಾಗಿರುತ್ತಿದ್ದರು. ಅವರುಗಳಲ್ಲಿ ತಿಪ್ಪಶೆಟ್ಟಿ ಮಠದ ಶ್ರೀ ಚರಮೂರ್ತಿ ಗುರುಸಿದ್ಧಸ್ವಾಮಿಗಳೆಂಬವರೊಬ್ಬರು ೧೮ ನೇ ಶತಮಾನದ ಅಂತ್ಯಭಾಗದಲ್ಲಿ ಅತ್ಯಂತ ಕೀರ್ತಿವಂತರೂ ಮಹಿಮಾಶಾಲಿಗಳೂ ಆಗಿದ್ದು, ಇವರ ಶಿಷ್ಯ ಶ್ರೇಣಿಯಲ್ಲಿ ಬಾಣಾವರದ ಮಲ್ಲಿಕಾರ್ಜುನಪ್ಪನೆಂಬವರು ಮೊದಲನೆಯವರಾಗಿದ್ದರು. ಶ್ರೀ ಗುರುಸೇವೆಗೋಸುಗ ಮನೆಮಠಗಳನ್ನೆಲ್ಲ ತೊರೆದು ಬಂದ ಈ ಮಹನೀಯರ ಧರ್ಮಪತ್ನಿಯಾದ ಮಹದೇವಮ್ಮನು ಸರ್ವ ವಿಧಗಳಲ್ಲಿಯೂ ಪತಿಗನುಕೂಲೆಯಾಗಿ ಗುರುಸೇವೆಯಲ್ಲಿ ಜಗತ್ತಿಗೇ ಆದರ್ಶಳಾಗಿರುತ್ತಿದ್ದಳು. ಹೀಗಿದ್ದ ಈ ದಂಪತಿಗಳಿಗೆ ಸುಮಾರು ಕ್ರಿ. ಶ. ೧೭೯೫ ರಲ್ಲಿ ನಮ್ಮ ಚರಿತ್ರನಾಯಕರಾದ ಸರ್ಪಭೂಷಣ ಶಿವಯೋಗಿಗಳು ಪುತ್ರರಾಗಿ ಜನಿಸಿದರು. ಇವರಿಗೆ ಜನನ ಕಾಲದಲ್ಲಿಟ್ಟ ಹೆಸರು ಸಪ್ಪಯ್ಯ ಎಂಬುದು. ಮಲ್ಲಿಕಾರ್ಜುನಪ್ಪನವರಿಗೆ ಇವರಲ್ಲದೆ ಶಾಂತಪ್ಪ, ಮಲ್ಲಶೆಟ್ಟೆಪ್ಪ, ಹುಚ್ಚಣ್ಣ ಎಂಬ ಮೂವರು ಪುತ್ರರೂ, ಮಲ್ಲಮ್ಮನೆಂಬ ಪುತ್ರಿಯೂ ಇರುತ್ತಿದ್ದರು. ಆದರೂ ಸರ್ಪಭೂಷಣರಲ್ಲಿ ಆದಿಯಿಂದಲೂ ಅಪರೊಬ್ಬರಲ್ಲಿಯೂ ಕಾಣದ ಒಂದು ದಿವ್ಯ ತೇಜಸ್ಸು ರಂಜಿಸುತ್ತಿತ್ತು.

## ಸರ್ಪಭೂಷಣರಾದುದು.

ತೃತೀಯ ಕುಮಾರರಾದ ಇವರು ಸುಮಾರು ಮೂರು ವರ್ಷದವರಿದ್ದಾಗ ಒಮ್ಮೆ ಮಲ್ಲಿಕಾರ್ಜುನಪ್ಪನವರು ಪತ್ನೀಪುತ್ರರೊಡಗೂಡಿ ಶ್ರೀ ಗುರುಸಿದ್ಧಸ್ವಾಮಿಗಳ ಸೇವೆಮಾಡಿ ಬರುವುದಕ್ಕಾಗಿ ತಿಪ್ಪಶೆಟ್ಟಿಯ ಮಠಕ್ಕೆ ಹೋದರು. ಶ್ರೀಗಳವರು ತೋಟದಲ್ಲಿ ಯಾವುದೋ ಕಾರ್ಯದಲ್ಲಿ ತೊಡಗಿರಲಾಗಿ ಮಹಾದೇವಮ್ಮನು ಮಗುವನ್ನು ಹಿತ್ತಲಿನ ಜಗುಲಿಯ ಮೇಲೆ

ಕುಳ್ಳಿರಿಸಿ, ಶ್ರೀಗಳಲ್ಲಿಗೆ ಹೋಗಲು, ಇತ್ತ ಒಂದು ಕೃಷ್ಣ ಸರ್ಪವು ಆ ಮಗುವಿನ ಬಳಿಗೈದಿ ಅವನನ್ನು ಸುತ್ತಿ ತಲೆಯ ಮೇಲೆ ಹೆಡೆಯೆತ್ತಿ ಆಡ ತೊಡಗಿತು. ದೂರದಲ್ಲಿಯೇ ಈ ಆಶ್ಚರ್ಯವನ್ನು ಕಂಡ ಶ್ರೀಗಳು, ಆ ಶಿಶುವು ಕೇವಲ ಮನುಷ್ಯಮಾತ್ರವಲ್ಲದೆ ದಿವ್ಯ ಮಹಿಮಾಶಾಲಿಯಾಗಿರ ಬೇಕೆಂದು ನಿಶ್ಚೈಸಿ, ಆ ವಿಶೇಷವನ್ನು ಬಾಲನ ತಾಯಿ ತಂದೆಗಳಿಗೆ ತೋರಿಸುತ್ತಾ ಅಂಥಾ ಮಹನೀಯನನ್ನು ಪುತ್ರನನ್ನಾಗಿ ಪಡೆದ ಅವ ರನ್ನು ಧನ್ಯವಾದಮಾಡತೊಡಗಿದರು. ಈ ರೀತಿಯಾಗಿ ಸ್ವಲ್ಪ ಹೊತ್ತು ಕಳೆಯಲು ಕೊನೆಗೆ ಆ ಪೂಜ್ಯಪಾದರ ಆಜ್ಞೆಯಂತೆ ಸರ್ಪವು ಮಗು ವನ್ನು ಬಿಟ್ಟು ಹೊರಟುಹೋಯಿತು. ಶ್ರೀಗಳವರು ಮಗುವಿಗೆ ಸರ್ಪ ಭೂಷಣನೆಂದೇ ನಾಮಕರಣವನ್ನುಮಾಡಿ ಅಂದಿನಿಂದ ಆ ಹೆಸರಿಂದಲೇ ಕರೆಯುವಂತೆ ಆಜ್ಞಾಪಿಸಿದರು. ಈ ರೀತಿಯಾಗಿ ಶ್ರೀ ಸರ್ಪಭೂಷಣ ಶಿವಯೋಗಿಗಳು ಬಾಲ್ಯದಲ್ಲಿಯೇ ಬಸವಾದಿ ಶ್ರೀಮದ್ವಿಭೂತಿಗಳಂತೆ ಅದ್ಭುತ ಮಹಿಮೆಯನ್ನು ಜಗತ್ತಿಗೆ ತೋರ್ಪಡಿಸಿ ಮೆರೆದರು.

## ವಿದ್ಯಾಭ್ಯಾಸ.

ಈ ರೀತಿಯಾಗಿ ಸರ್ಪ ಭೂಷಣರು ಐದು ವರ್ಷಗಳನ್ನು ಕಳೆಯಲು ಅವರಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂದು ಅವರ ಮಾತಾಪಿತೃಗಳು ಅತ್ಯಂತ ಶ್ರಮ ಪಟ್ಟರು. ಆದರೆ ಏನೂ ಪ್ರಯೋಜನವಾಗಲಿಲ್ಲ. ಉಳಿದ ಸಹಪಾ ಟಿಗಳಂತಲ್ಲದೆ ಅನವರತವೂ ಆಟಪಾಟಗಳಲ್ಲಿ ತೊಡಗಿ ವಿನೋದದಿಂದಲೇ ಕಾಲಕಳೆಯುತ್ತಿದ್ದ ಮಹಾತ್ಮಮಹೇಶ್ವರನಂತೆ ಇವರು ಯಾವಾಗಲೂ ಸಹಪಾಟಿಗಳೊಡನೆ ಆಟವಾಡುವುದರಲ್ಲಿಯೇ ಕಾಲಕಳೆಯುತ್ತಿದ್ದರು. ಹತ್ತೆಂಟು ಪುಂಡ ಹುಡುಗರು ಇವರ ಜತೆಯನ್ನು ಸೇರಿ ಎಲ್ಲರಿಗೂ ಬಹಳ ತೊಂದರೆ ಕೊಡತೊಡಗಿದರು. ಇದರಿಂದ ಗ್ರಾಮದವರೆಲ್ಲರೂ ಇವರ ವಿಚಾರವಾಗಿ ಮಲ್ಲಿಕಾರ್ಜುನಪ್ಪನವರಿಗೆ ದೂರು ಹೇಳುತ್ತಿದ್ದರಾ ದರೂ ಅವರು ತಾವು ಏನು ಮಾಡಲೂ ಶಕ್ತರಲ್ಲದವರಾಗಿ ತಂತಮ್ಮಲ್ಲಿ ಮರುಗುತ್ತಿದ್ದರು.

ಹೀಗಿರಲು ಒಮ್ಮೆ ಗುರುವರ್ಯ ಗುರುಸಿದ್ಧಸ್ವಾಮಿಗಳು ಎಂದಿನಂತೆ ಮಲ್ಲುಕಾರ್ಜುನಪ್ಪನವರ ಮನೆಗೆ ಶಿವಾರ್ಚನೆಗೆ ದಯಮಾಡಿಸಿದರು. ಆ ವೇಳೆಗೆ ಸರಿಯಾಗಿ ಸರ್ಪಭೂಷಣರೂ ಮನೆಗೆ ಬರಲು ಅವರ ತಂದೆ

ತಾಯಿಗಳು ಅವರಿಗೂ ಸ್ನಾನ ಮಾಡಿಸಿ ಶ್ರೀ ಗುರು ಸನ್ನಿಧಿಗೆ ಕರೆದೊಯ್ದರು. ಮತ್ತು ತಮ್ಮ ಪುತ್ರನ ದುರ್ನಡತೆಗಳನ್ನೆಲ್ಲಾ ಬಣ್ಣಿಸಿ ಅವರು ದುಃಖಪಡತೊಡಗಲು ಗುರುಸಿದ್ಧಸ್ವಾಮಿಗಳು ಇವರನ್ನು ಮುಂದೆ ಕುಳ್ಳಿರಿಸಿಕೊಂಡು, ಆ ರೀತಿ ಮಾತಾಪಿತೃಗಳಿಗೆ ಅಪ್ರಿಯವಾದ ಕಾರ್ಯಗಳನ್ನು ಮಾಡುತ್ತಾ ಅವರನ್ನು ದುಃಖಕ್ಕೀಡುಮಾಡದೆ, ಜತೆ ಬಾಲರಂತೆ ವಿದ್ಯಾವಂತನಾಗಿ ಕೀರ್ತಿಯನ್ನು ಪಡೆಯುವಂತೆ ಬಹಳ ವಿಧವಾಗಿ ನೀತಿಬೋಧೆ ಮಾಡಿದರು. ಸದ್ಗುರು ಸಾನ್ನಿಧ್ಯದಿಂದ ಪರಿಪಕ್ವವಾದ ಮನಸ್ಸುಳ್ಳವರಾದ ಸರ್ಪಭೂಷಣರು ಕೂಡಲೇ ಗುರುಗಳಿಗೆ ನಮಸ್ಕರಿಸಿ, ಎಲ್ಲರಿಗೂ ಆಶ್ಚರ್ಯವಾಗುವಂತೆ 'ಹಾಗಾದರೆ ತಾವೇ ವಿದ್ಯೆ ಹೇಳಿ ಕೊಡುವಿರಾದಲ್ಲಿ ನಾನು ಚನ್ನಾಗಿ ಅಭ್ಯಾಸ ಮಾಡುವೆನು. ತಮ್ಮಲ್ಲಲ್ಲದೆ ಅನ್ಯರಾರಲ್ಲಿಯೂ ವಿದ್ಯೆ ಕಲಿಯಲು ನನ್ನ ಮನ ಒಪ್ಪದು' ಎಂದು ಉತ್ತರ ಕೊಟ್ಟರು. ಗುರುಗಳೂ ಅದಕ್ಕೆ ಸಮ್ಮತಿಸಲು ಅಂದಿನಿಂದ ಗುರುಸಾನ್ನಿಧ್ಯದಲ್ಲಿಯೇ ಕಾಲಕಳೆಯುತ್ತಾ ಇವರು ವಿದ್ಯಾಭ್ಯಾಸ ಮಾಡತೊಡಗಿದರು.

## ವೈರಾಗ್ಯ.

ಸರ್ಪಭೂಷಣರು ಸರ್ವ ವಿದ್ಯಾಪಾಂಡಿತ್ಯವನ್ನು ಪಡೆಯುವಷ್ಟರಲ್ಲಿಯೇ ಮಾತಾಪಿತೃಗಳಿಗೆ ಇವರಿಗೆ ಲಗ್ನಮಾಡಬೇಕೆಂಬ ಬಯಕೆಯುಂಟಾಯಿತು. ಮೋಹ ಪಾಶಬದ್ಧರಾದ ಮಾನವರ ಗತಿಯೇ ಹೀಗೆ! ಪುತ್ರನು ಲಗ್ನವಾಗಲು ಇಚ್ಛಿಸಲಿ. ಅಥವಾ ಇಚ್ಛಿಸದಿರಲಿ- ಲಗ್ನಕ್ಕೆ ಯೋಗ್ಯನಿರಲಿ ಅಥವಾ ಇಲ್ಲದಿರಲಿ- ಯಾವುದೊಂದನ್ನೂ ಯೋಚಿಸದೆ ಅವನಿಗೊಂದು ಆಜ್ಞಾಬಾಲೆಯನ್ನು ಕಟ್ಟಿ, ಮಗನು ಹದಿನೆಂಟು ವರ್ಷದವನಾದರೂ ಮೂರು ನಾಲ್ಕು ವರ್ಷದ ಮಗುವಿನೊಡನೆ ಆಟಪಾಟಗಳನ್ನಾಡುವುದನ್ನು ನೋಡಿ ಹಿಗ್ಗಲಾಶಿಸುವರು. ಅವನು ಇದಕ್ಕೆ ಸಮ್ಮತಿಸದಿದ್ದರೆ ಮಾತಾಪಿತೃವಾಕ್ಯೋಲ್ಲಂಘನೆ ಮಾಡಿದನೆಂದು ಅನುದಿನವೂ ಜರಿಯುವರು. ಅವರ ಮನಸ್ಸನ್ನನುಮೋದಿಸಿದರೆ ನಿರ್ಬಲನೂ ಮಂದಮತಿಯೂ ರೋಗಪೀಡಿತನೂ ಆಗಿ ಅಕಾಲಮರಣಕ್ಕೆ ತುತ್ತಾಗಬೇಕಾಗುವದು. ಈ ರೀತಿಯಾಗಿ ಉಭಯ ಸಂಕಟಗಳಲ್ಲಿ ಸಿಕ್ಕು ನರಳುತ್ತಿರುವ ಮಾನವ ಸಹೋದರರನೇಕರನ್ನು ನಾವು ಅನುದಿನವೂ ನೋಡುತ್ತಿರುವೆವು.

ವೇದಾಂತ ವಿಶಾರದರಾದ ಸರ್ಪಭೂಷಣರು ಈ ವಿಚಾರವಾಗಿ ಬಹಳ ಯೋಚನೆ ಮಾಡಿದರು. ಕೊನೆಗೆ ಕ್ಷಣಿಕವಾದ ನಿಸ್ಸಾರವಾದ

ಹ್ಯೇಯವಾದ ಈ ಸಂಸಾರ ಸುಖವನ್ನು ತುಚ್ಛೀಕರಿಸಿ ಪವಿತ್ರವಾದ ವೈರಾಗ್ಯ ಮಾರ್ಗವನ್ನನುಸರಿಸಿ ಈ ಮೋಹಪಾಶದಿಂದ ದೂರವಾಗಬೇಕೆಂದು ನಿರ್ಧರಿಸಿ ತಮ್ಮ ಮನೋಭಿಪ್ರಾಯವನ್ನೇ ಶ್ರೀಗಳವರಲ್ಲಿ ಬಿನ್ನವಿಸಿಕೊಂಡರು. ಇದರಿಂದ ಇವರ ಲಗ್ನದ ವಿಚಾರವು ಅಷ್ಟಕ್ಕೆ ಕೊನೆಗಾಣಬೇಕಾಯಿತು. ಅಂದಿನಿಂದ ಇವರು ಸ್ವೇಚ್ಛೆಯಾಗಿ ವೈರಾಗ್ಯ ಮಾರ್ಗದಲ್ಲಿ ತಿರುಗಾಡತೊಡಗಿದರು.

## ದೇಶಸಂಚಾರ.

ಈ ರೀತಿಯಾಗಿ ಸರ್ಪಭೂಷಣರು ಪಾರಮಾರ್ಥ ಸಾಧನೆಯಲ್ಲಿ ೨೨ ವರ್ಷಗಳನ್ನು ಕಳೆಯಲು ಇವರಿಗೆ ಏಕಾಂಗಿಯಾಗಿ ದೇಶಸಂಚಾರ ಮಾಡಬೇಕೆಂಬ ಲವಲವಿಕೆಯುಂಟಾಯಿತು. ಅದಕ್ಕೆ ಶ್ರೀಗಳವರ ಅನುಮತಿಯೂ ದೊರಕಲು ಇವರ ತಂದೆತಾಯಿಗಳು ದೇಶಸಂಚಾರಕ್ಕೆ ಬೇಕಾಗುವ ಧನವನ್ನೂ ಪಾಲಕರನ್ನೂ ಒದಗಿಸತೊಡಗಿದರು. ಇದನ್ನರಿತ ಸರ್ಪಭೂಷಣರು ತಮಗೆ ಅವಾವುವೂ ಅವಶ್ಯವಿಲ್ಲವೆಂದು ಹೇಳಿ ಏಕಾಂಗಿಯಾಗಿ ಹೊರಡಲುದ್ಯುಕ್ತರಾಗಿ ಶ್ರೀ ಗುರುವಿನ ಆಶೀರ್ವಾದವನ್ನು ಪಡೆಯಲೋಸುಗ ಅವರಲ್ಲಿಗೆ ಬಂದು ನಮಸ್ಕರಿಸಿದರು. ಆಗ ಗುರುವರ್ಯರಾದ ಗುರುಸಿದ್ಧಸ್ವಾಮಿಗಳು ತಾವು ಧರಿಸಿದ್ದ ಮಂಗಳಕರವಾದ ಕಾಷಾಯ ವಸ್ತ್ರವನ್ನು ಇವರಿಗೆ ಧರಿಸಿ ದಿವ್ಯ ರುದ್ರಾಕ್ಷೀಹಾರ ಒಂದನ್ನು ಇವರ ಕೊರಳಿಗೆ ಹಾಕಿ ಆಶೀರ್ವಾದ ಪೂರ್ವಕವಾಗಿ ಇವರ ಪ್ರಯಾಣಕ್ಕನುಮತಿಯನ್ನು ಕೊಟ್ಟರು.

ಈ ರೀತಿಯಾಗಿ ಪೂಜ್ಯ ಗುರುವಿನಿಂದಲೂ, ಜನನೀ ಜನಕರಿಂದಲೂ ಆಶೀರ್ವಾದವನ್ನು ಹೊಂದಿದ ಸರ್ಪಭೂಷಣರು ತಮ್ಮ ಊಟ-ಉಪಚಾರಗಳೊಂದನ್ನೂ ಲೆಕ್ಕಿಸದೆ ಕೇವಲ ಪಾದಚಾರಿಗಳಾಗಿ ಸಂಚಾರ ಹೊರಟು, ಅನೇಕ ಪುಣ್ಯಸ್ಥಳಗಳನ್ನು ಸಂದರ್ಶಿಸಿ ಕೊನೆಗೆ ಭೂಕೈಲಾಸವೆನ್ನಿಸಿಕೊಂಡು ಅನೇಕ ಸಾಧುಶಿರೋಮಣಿಗಳಿಗೆ ಯೋಗ್ಯ ಮಂದಿರವಾಗಿಯೂ, ಪರಮೇಶ್ವರನ ಪಂಚ ಮುಖಗಳಿಂದ ಹುಟ್ಟಿದ ರೇಣುಕಾದಿ ಪಂಚಾಚಾರ್ಯರಲ್ಲೊಬ್ಬರಾದ ಪಂಡಿತಾಚಾರ್ಯ ಭಗವತ್ಪಾದ ಅವತರಿಸಿದ ಶ್ರೀ ಮಲ್ಲಿಕಾರ್ಜುನ ಲಿಂಗೋದ್ಭವ ಸ್ಥಳವಾಗಿ ಯಾತ್ರಾ ಮಾತ್ರದಿಂದ ಪಾಮರರಿಗೂ ಮುಕ್ತಿ ಕೊಡತಕ್ಕದ್ದಾಗಿಯೂ, ಹಿಂದೆ ಶ್ರೀರಾಮನು ಚತುರ್ವೇದ ಪಾರಾಯಣನಾಗಿದ್ದ ರಾವಣನನ್ನು ಕೊಂದುದಕ್ಕಾಗಿ ಪ್ರಾಪ್ತವಾದ ಬ್ರಹ್ಮ

ಹತ್ಯ ದೋಷದ ಶೇಷಭಾಗವನ್ನು ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಯಾತ್ರೆ ಮಾಡಲು ಬಂದ ಪುಣ್ಯ ಸ್ಥಳನಾಗಿಯೂ, ಅನೇಕ ಮಂದಿರ ಗಳಿಗೆ ಆವಾಸ ಸ್ಥಾನವಾಗಿ, ಪುಣ್ಯ ತೀರ್ಥಗಳಿಂದಲೂ, ಪರ್ವತ ಕ್ಷೇತ್ರ ಗಳಿಂದಲೂ ಕೂಡಿ ಪಂಡಿತ ಪ್ರೇಕ್ಷಣೀಯ ಸ್ಥಳವಾಗಿಯೂ, ಇರುವದ ರಿಂದ ಕವಿಗಳ ವರ್ಣನೆಗೆ ಯೋಗ್ಯವಾಗಿಯೂ ಇರುವ ಶ್ರೀಶೈಲ ಪರ್ವ ತವನ್ನು ಸೇರಿದರು. ೨೨ ವರ್ಷಗಳ ಅಖಂಡ ಬ್ರಹ್ಮಚರ್ಯದಿಂದ ರಂಜಿ ಸುತ್ತಿದ್ದ ಈ ದಿವ್ಯ ಪುರುಷರಿಗೆ ಅಲ್ಲಿ ಅನೇಕ ಶಿಷ್ಯರಾದರು. ಅವರ ಲ್ಲೆಲ್ಲ ಫಾಲಲೋಚನರೆಂಬವರು ಮುಖ್ಯರು. ಇವರ ಸೇವಾ ಶುಶ್ರೂಷೆಗ ಳಿಂದ ಪ್ರಸನ್ನರಾದ ಸರ್ಪಭೂಷಣರು ಇವರನ್ನು ತಮ್ಮಲ್ಲಿಯೇ ನಿಲ್ಲಿಸಿ ಕೊಳ್ಳಬೇಕೆಂಬ ಅಭಿಲಾಷೆಯಿಂದ ತಾವು ಬರುವವರೆಗೂ ಬೆಂಗಳೂರಿ ನಲ್ಲಿರಬೇಕೆಂದು ಇವರನ್ನು ಊರಿಗೆ ಹೊರಡಿಸಿ ತಾವು ಹಾಗೆಯೇ ಮುಂದೆ ಹೊರಟರು.

ಈ ರೀತಿಯಾಗಿ ಪುಣ್ಯಕ್ಷೇತ್ರಯಾತ್ರೆ ಮಾಡುತ್ತಲೂ, ಅಲ್ಲಲ್ಲಿ ಪವಿತ್ರ ಮತಸಿದ್ಧಾಂತಗಳನ್ನು ಬೋಧೆಮಾಡುತ್ತಲೂ, ಶ್ರೀ ಸರ್ಪಭೂಷಣರು ಹಿಮಾಲಯ ಪರ್ಯಂತರ ಸಂಚರಿಸಿ ಕೊನೆಗೆ ದೊಡ್ಡ ಬಾಣಾವರದ ಬಳಿಗೆ ಬಂದರು. ಆ ಕಾಲದಲ್ಲಿ ಸಿದ್ಧಮಲ್ಲಪ್ಪನೆಂಬ ಶರಣರು ಬಹಳ ಪ್ರಸಿದ್ಧರೂ ಮಹಿಮಾಶಾಲಿಗಳೂ ಆಗಿ ಆ ಗ್ರಾಮದ ಹತ್ತರದಲ್ಲಿರುವ ಬೆಟ್ಟ ದಲ್ಲಿ ವಾಸವಾಗಿರುತ್ತಿದ್ದರು. ಸರ್ಪಭೂಷಣರು ಪ್ರತಿದಿನವು ತಂಡೋ ಪತಂಡವಾಗಿ ಆ ಬೆಟ್ಟಕ್ಕೆ ಹೋಗುತ್ತಿದ್ದ ಯಾತ್ರಿಕರಿಂದ ಅವರ ಮಹಿ ಮೆಯನ್ನು ತಿಳಿದು ತಾವೂ ಅವರನ್ನು ಸಂದರ್ಶಿಸುವ ಬಯಕೆಯಿಂದ ಆ ಬೆಟ್ಟಕ್ಕೆ ಹೊರಟರು. ಇವರ ಬರುವಿಕೆಯನ್ನರಿತ ಆ ಮಹನೀಯರು ಇವರನ್ನೆದುರುಗೊಳ್ಳುವುದಕ್ಕಾಗಿ ಬರುತ್ತಿರಲು ದಾರಿಯಲ್ಲಿ ಇವರಿಬ್ಬರೂ ಒಬ್ಬರನ್ನೊಬ್ಬರು ಸಂದಿಸಿ ಕುಶಲ ಪ್ರಶ್ನಾದಿಗಳನ್ನು ಮಾಡಿದರು. ಆದರೆ ಮರುಕ್ಷಣವೇ ಅವರ ಶರೀರದಲ್ಲಿ ಲಿಂಗವಿಲ್ಲದಿದ್ದುದು ಸರ್ಪಭೂಷಣರಿಗೆ ಗೊತ್ತಾಗಲು ಅವರನ್ನು ಕುರಿತು ಲಿಂಗವೆಲ್ಲೆಂದು ಪ್ರಶ್ನಿಸಿದರು. ಆ ಶರ ಣರು ''ಭಕ್ತಾದಿ ಸ್ಥಳಗಳನ್ನು ಮೀರಿರುವೆನಾದ್ದರಿಂದ ಅದು ಅನಾವಶ್ಯ ಕವೆಂದು ತೆಗೆದುಬಿಟ್ಟಿರುವೆನು.'' ಎಂದು ಉತ್ತರಕೊಟ್ಟರು.

ಈ ಕರ್ಣ ಕಠೋರವಾಕ್ಯವನ್ನು ಕೇಳುತ್ತಲೇ ಸರ್ಪಭೂಷಣರು ನಿಟ್ಟು ಸಿರನ್ನು ಬಿಟ್ಟು, ಅವರನ್ನು ಕುರಿತು 'ಅಯ್ಯಾ, ಎಂಥಾ ಪಾಪ ಕಾರ್ಯವನ್ನು

ಮಾಡಿದೆ? ದೊಡ್ಡ ತರಗತಿಗೆ ಬಂದೆನೆಂದು ಪ್ರಥಮ ತರಗತಿಯಲ್ಲಿ ನಡೆದ ಅಕ್ಷರಾಭ್ಯಾಸವನ್ನು ಮರೆಯಲಾದೀತೇ! ಆ ಲಿಂಗವು ನಿನಗೇನು ಹೊರೆಯಾಗಿದ್ದಿತೇ? ಒಂದು ವೇಳೆ ಇದನ್ನು ಹೃದಯದಲ್ಲಿ ಧರಿಸಲು ನಿನಗೆ ಅಪಮಾನವಾಗುತ್ತಿದ್ದಲ್ಲಿ ಕಾಲಿಗಾದರೂ ಕಟ್ಟಿದ್ದಲ್ಲಿ ಆಗುತ್ತಿತ್ತಲ್ಲಾ! ಇದೂ ನಿನ್ನ ಯೋಗ್ಯತೆಗೆ ಕುಂದಾಗಿ ತೋರಿತೇ? ನೀನೆಷ್ಟು ಮಹಿಮಾಶಾಲಿಯನ್ನಿಸಿಕೊಂಡರೂ, ಇಂಥಾ ಪಾಪ ಕಾರ್ಯವನ್ನು ಮಾಡಿದ ನಿನಗೆ ಮುಕ್ತಿ ದೊರಕದು. ಇಂದಿನ ಕೀರ್ತಿಯು ಪೂರ್ವಜನ್ಮದ ಸುಕೃತಶೇಷವೆಂದು ತಿಳಿ. ಈ ಘೋರ ಕಾರ್ಯ ಪ್ರವರ್ತನೆಯಿಂದ ನೀನು ಮತ್ತೊಮ್ಮೆ ಇದೇ ಜನ್ಮದಲ್ಲಿ ಹುಟ್ಟಬೇಕಾಗಿದೆ' ಎಂದು ಹೇಳುತ್ತಾ ಅವರೆಷ್ಟೆಷ್ಟು ವಿಧದಿಂದ ಪ್ರಾರ್ಥಿಸಿಕೊಂಡರೂ ಭವಿಯೂ ಪಾಪಿಯೂ ಆದ ನಿನ್ನ ಸಂಗಡ ಸಂಭಾಷಿಸುವುದೂ ಪಾಪಕರವಾದುದು' ಎಂದು ಅಲ್ಲಿಂದ ಹಿಂತಿರುಗಿದರು.

## ನಿರಪವಾದ-ವಿಮೋಚನೆ.

ಶ್ರೀ ಶಿವಯೋಗಿಗಳು ದೊಡ್ಡ ಬಾಣಾವರದಿಂದ ಹಾಗೆಯೇ ಬಳ್ಳಾರಿಗೆ ಬಂದು ನೆಲಸಿರುವಾಗ್ಗೆ ಒಮ್ಮೆ ತಮ್ಮ ದಿನಚರಿಯ ಪದ್ಧತಿಯಂತೆ ಒಂದಾನೊಂದು ಮನೆಯ ಬಳಿಗೆ ಹೋಗಿ ಅಂದಿನ ಶಿವಾರ್ಚನೆಗೆ ಅನುಕೂಲಮಾಡಿಕೊಡಬೇಕೆಂಬಂಶವನ್ನು ಹೇಳಿ ಕಳುಹಿಸಿದರು. ಆ ಮನೆಯ ಯಜಮಾನನು ಶಿವೈಕ್ಯನಾಗಿದ್ದುದರಿಂದ ಅವನ ಧರ್ಮ ಪತ್ನಿಯು ಈ ತೇಜಃಪುಂಜ ರಂಜಿತ ಮುಖಕಮಲರಾದ ಮಹಾನು ಭಾವರನ್ನು ನೋಡಿ, ಈ ಪೂಜ್ಯರ ಸೇವೆ ಸತ್ಕಾರಗಳನ್ನು ಮಾಡಿ ಕೃತಾರ್ಥಳಾಗಬೇಕೆಂದೆಣಿಸಿ, ಶ್ರೀ ಸರ್ಪಭೂಷಣರನ್ನು ಮನೆಗೆ ಕರೆದೊಯ್ದು, ಸ್ನಾನ ಶಿವಾರ್ಚನೆಗಳನ್ನು ಮಾಡಿಸಿ ಸತ್ಕರಿಸಿದಳು. ಮತ್ತು ಇನ್ನೂ ನಾಲ್ಕಾರು ದಿವಸಗಳು ಈ ಅಬಲೆಯ ಅಲ್ಪ ಸತ್ಕಾರಗಳನ್ನು ಸ್ವೀಕರಿಸಿ ಕೃತಾರ್ಥಳನ್ನಾಗಿ ಮಾಡಬೇಕೆಂದು ಅತಿವಿನಯದಿಂದ ಪ್ರಾರ್ಥಿಸಲು ಇವಳ ಭಕ್ತಿಪೂರ್ವಕವಾದ ಸೇವೆ ಸತ್ಕಾರಗಳಿಗೆ ಪ್ರಸನ್ನರಾದ ಗುರುವರ್ಯರು ಭಕ್ತೋತ್ತಮಳ ದೀನ ಪ್ರಾರ್ಥನೆಯನ್ನುಲ್ಲಂಘನೆ ಮಾಡದೆ ಅಲ್ಲಿಯೇ ಕೆಲವು ಕಾಲವಿರಲು ನಿರ್ಧರಿಸಿದರು. ಆದರೆ ನಾಲ್ಕಾರು ದಿವಸಗಳಲ್ಲಿಯೇ ಈ ಮುಗ್ಧ ಗುರುಪುಂಗವರ ಮಹಿಮೆಯನ್ನರಿಯದ ಕೆಲವು ಅಜ್ಞ ಮಾನವರು, ಪ್ರಾಪ್ತವ

ಯಸ್ಥಳಾದ ಆಕೆಯ ಬಳಿಯಲ್ಲಿ ಯೌವನ ಸೌಂದರ್ಯದ ತೇಜಸ್ಸಿನಿಂದ ರಂಜಿಸುವ ಈ ಮಹನೀಯರು ಇರುವ ವಿಚಾರವನ್ನು ಕುರಿತು ಮನ ಬಂದಂತೆ ಟೀಕೆ ಮಾಡತೊಡಗಿದರು. ಇದು ದಿನ ದಿನಕ್ಕೆ ಅಭಿವೃದ್ಧಿಹೊಂದಿ, ಕೊನೆಗೆ ಆ ಮುಗ್ಧ ಭಕ್ತಳ ಕಿವಿಗೂ ಬಿದ್ದಿತು. ಆಗಲಾ ಅಬಲೆಯು ದುಃಖ ಕಂಪನಗಳಿಂದ ಕೂಡಿದವಳಾಗಿ ಈ ದುರಪವಾದದಿಂದ ಪಾರಾಗುವ ಮಾರ್ಗವಾವುದೂ ತನಗೆ ತೋಚದಿರಲು, ಕೊನೆಗೆ ಶ್ರೀ ಸರ್ಪಭೂಷಣ ರಲ್ಲಿಯೇ ಈ ಆರೋಪಣೆಯನ್ನು ಬಿನ್ನವಿಸಿಕೊಂಡಳು. ಈ ಕರ್ಣ ಕಠೋರ ವಾಕ್ಯವನ್ನು ಕೇಳಿದೊಡನೆಯೇ ಸರ್ಪಭೂಷಣರು ದೀರ್ಘ ನಿಟ್ಟುಸಿರನ್ನು ಬಿಟ್ಟು ಇನ್ನು ಅಲ್ಲಿ ಅರೆಗಳಿಗೆಯೂ ನಿಲ್ಲಲು ಅಸಮಾಧಾನವನ್ನು ಹೊಂದಿ ತಕ್ಷಣವೇ ಮುಂದಕ್ಕೆ ಪ್ರಯಾಣ ಹೊರಟರು.

ನಿರ್ಜೀವಿಯಾದ ಚರ್ಮದ ತಿದಿಯಿಂದ ಹೊರಡುವ ಉಸಿರೇ ಯಾವ ಕಠಿಣ ಲೋಹಗಳನ್ನಾದರೂ ಕರಗಿಸಿ ದ್ರವಗೊಳಿಸುವಲ್ಲಿ ಅನಂತ ಮಹಿಮರಾದ ಶ್ರೀಮದ್ವಿಭೂತಿಗಳ ನಿಟ್ಟುಸಿರು ಏನನ್ನು ತಾನೇ ಮಾಡ ದಿರದು! ಇವರು ಊರನ್ನು ಬಿಟ್ಟು ಸ್ವಲ್ಪ ದೂರ ಹೋಗುವಷ್ಟರಲ್ಲಿಯೇ ಇವರ ಮೇಲೆ ಇಲ್ಲದ ದೋಷಾರೋಪಣೆ ಮಾಡಿದವರೆಲ್ಲಾ ಒಬ್ಬೊಬ್ಬ ರಾಗಿ ವಾಂತಿಭೇದಿರೋಗದಿಂದ ಪ್ರಾಣ ಬಿಡತೊಡಗಿದರು. ಈ ಭಯಂಕರ ವಿನಾಶಕ್ಕೆ ಕಾರಣವನ್ನು ಯೋಚಿಸತೊಡಗಿದ ಆ ನಗರವಾಸಿಗಳಿಗೆ ಇವ ರೆಲ್ಲರೂ ಮನಬಂದಂತೆ ದೂಷಿಸುತ್ತಿದ್ದ ಶ್ರೀ ಸರ್ಪಭೂಷಣರ ವಿಚಾರವು ಜ್ಞಾಪಕಕ್ಕೆ ಬರಲು ಅವರೆಲ್ಲರೂ ಅಳಿದುಳಿದ ಕುಹಕಿಗಳೊಡಗೂಡಿ ಕೂ ಡಲೇ ಶ್ರೀ ಶಿವಯೋಗಿಗಳನ್ನು ಹಿಂಬಾಲಿಸಿದರು. ಮತ್ತು ಅಜ್ಞಾನಮ ಯವಾದ ತಮ್ಮ ವರ್ತನೆಗಳಿಗೆ ದೊರೆತ ಪ್ರತಿಫಲವನ್ನು ಅವರಲ್ಲಿ ಬಿನ್ನ ವಿಸಿಕೊಂಡು ಇನ್ನಾದರೂ ಗ್ರಾಮದಲ್ಲಿ ಶಾಂತಿಯುಂಟಾಗುವಂತೆ ಮಾಡು ವದಕ್ಕಾಗಿ ಹಿಂತಿರುಗಬೇಕೆಂದು ಪ್ರಾರ್ಥಿಸಿಕೊಂಡರು.

ಈ ವಿಧವಾಗಿ ಅನರ್ಥವುಂಟಾಗಲೆಂದು ಕನಸಿನಲ್ಲಿಯು ನೆನಿಸದ ಶ್ರೀ ಸರ್ಪಭೂಷಣರು ಈ ತೆರನಾದ ಭಯಂಕರ ಹಾನಿಗಾಗಿ ವ್ಯಥೆಪಟ್ಟು ಅವರಭಿಲಾಷೆಯಂತೆ ಮತ್ತೆ ಆ ಗ್ರಾಮಕ್ಕೆ ಹಿಂತಿರುಗಲು ಕೂಡಲೇ ಅಲ್ಲಿ ಆವರಿಸಿದ್ದ ವಾಂತಿಭೇದ ರೋಗವು ಶಾಂತವಾಯಿತು. ಈ ಮಹಿಮಾ ಪ್ರದರ್ಶನದಿಂದ ಜನರೆಲ್ಲರಿಗೂ ಅವರಲ್ಲಿ ಭಕ್ತಿಯುತ್ಪನ್ನವಾಗಲು ಶ್ರೀಗ ಳವರು ದೋಷಾರೋಪಣೆಯಿಂದ ನಿವೃತ್ತರಾಗಿ ಎಂದಿನಂತೆ ಆ ಭಕ್ತಳ

ಮನೆಯಲ್ಲಿಯೇ ಶಿವಾರ್ಚನೆ ಮಾಡುತ್ತ ಇರುತ್ತಿದ್ದರು. ಇದರಿಂದ ಈ ವೀರಶೈವ ಮತವನ್ನು ಮನಬಂದಂತೆ ಸಿಂದಿಸುತ್ತಿದ್ದ ಪರಮತೀಯರಿಗೂ ಸಹ, ಇಂಥ ಮಹಾನುಭಾವರನ್ನು ಪಡೆದ ಈ ಮತದಲ್ಲಿ ಪ್ರೀತಿಯೂ. ಭಕ್ತಿಯೂ ಉಂಟಾಗತೊಡಗಿತು.

ಶ್ರೀ ಶಿವಯೋಗಿ ಶಾರ್ದೂಲರಾದ ಶ್ರೀ ಸರ್ಪಭೂಷಣರು ಆ ಸಾಧ್ವಿಯ ಸೇವೆಸತ್ಕಾರಗಳನ್ನು ಕೈಕೊಳ್ಳುತ್ತಾ ಅಲ್ಲಿಯೇ ಮೂರು ತಿಂಗಳುಗಳನ್ನು ಕಳೆದರು. ಕೊನೆಗೆ ಆಕೆಯು ತನ್ನಲ್ಲಿದ್ದ ೧೬೦೦೦ ರೂಪಾಯಿಗಳನ್ನು ಗುರುಕಾಣಿಕೆಯಾಗಿ ಇವರಿಗೆ ಅರ್ಪಿಸಲು ಶ್ರೀ ಶಿವಯೋಗಿಗಳು ಅದು ತಮಗೆ ಪ್ರಕೃತ ಉಪಯೋಗಕ್ಕೆ ಬಾರದೆಂದೆಣಿಸಿ ಅಲ್ಲಿನ ಓರ್ವ ಶ್ರೀಮಂತರಲ್ಲಿಯೇ ಆ ಧನವನ್ನು ಕೊಟ್ಟು ತಾವು ಅಪೇಕ್ಷಿಸಿದಾಗ ಕಳುಹಿಸುವುದೆಂದು ಹೇಳಿ ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡಿದರು. ಈ ರೀತಿಯಾಗಿ ೧೦ ವರ್ಷಗಳ ಕಾಲ ದೇಶಸಂಚಾರ ಮಾಡಿದ ಸರ್ಪಭೂಷಣರು ತಮ್ಮ ಗುರುಗಳು ಲಿಂಗೈಕ್ಯರಾಗುವ ಸಮಯಕ್ಕೆ ಸರಿಯಾಗಿ ಬೆಂಗಳೂರನ್ನು ಸೇರಿದರು.

## ಗ್ರಂಥರಚನೆ.

ಶ್ರೀ ಗುರುಗಳ ಉತ್ತರಕ್ರಿಯಾದಿಗಳನ್ನೆಲ್ಲ ಶಾಸ್ತ್ರೋಕ್ತವಾಗಿ ನಡೆಸಿದ ಸರ್ಪಭೂಷಣರು, ಆ ಮಠದ ವ್ಯವಸ್ಥೆಯನ್ನೆಲ್ಲಾ ಅಂದಿನಿಂದ ತಾವೇ ನೋಡಿಕೊಳ್ಳುತ್ತಾ ಇರಲು, ಒಮ್ಮೆ ಭಕ್ತರೆಲ್ಲರೂ ಒಟ್ಟಾಗಿ ಇವರಲ್ಲಿಗೆ ಬಂದು ಅನಾಯಕವಾಗಿರುವ ಈ ಪೀಠಕ್ಕೆ ತಾವೇ ಉತ್ತರಾಧಿಕಾರಿಗಳಾಗಬೇಕಾಗಿ ಪ್ರಾರ್ಥಿಸಿಕೊಂಡರು. ಆದರೆ ವೈರಾಗ್ಯ ಶಾರ್ದೂಲರಾದ ಶ್ರೀ ಸರ್ಪಭೂಷಣರು ಅದಕ್ಕೊಪ್ಪದೆ, ಆ ಮಠದಲ್ಲಿಯೇ ಬಹಳ ಕಾಲದಿಂದಿದ್ದ ಸರ್ವ ವಿದ್ಯಾವಿಶಾರದರಾದ ಚಿಕ್ಕ ಗುರುಸಿದ್ಧಸ್ವಾಮಿಗಳೆಂಬವರಿಗೆ ತತ್ ಪೀಠಾಧಿಕಾರವನ್ನು ವಹಿಸಿ, ತಾವು ಅವರ ಮೇಲ್ವಿಚಾರಕರಾಗಿರುತ್ತಿದ್ದರು. ಇದರಿಂದ ಶ್ರೀ ಮಠವು ದಿನದಿನಕ್ಕೆ ಅಭಿವೃದ್ಧಿಹೊಂದಿ ದಾಸೋಹಾದಿಗಳನ್ನು ಮಾಡುವುದರಲ್ಲಿ ಅಗ್ರಸ್ಥಾನವನ್ನು ಪಡೆದು ರಂಜಿಸತೊಡಗಿತು.

ಶ್ರೀ ಸರ್ಪಭೂಷಣರು ಕೀರ್ತಿ ಮಹಿಮಾತಿಶಯಂಗಳಲ್ಲಿ ಅತ್ಯಧಿಕರೆನ್ನಿಸಿಕೊಂಡಿದ್ದರೂ ಅಸನವಸನಾದಿಗಳ ವಿಚಾರದಲ್ಲಿ ಸಾಮಾನ್ಯರಂತಿದ್ದು

ಸಮಾಜ ಸೇವಾಭಿಮಾನಿಯು ಹೇಗಿರಬೇಕೆಂಬುದನ್ನು ತೋರಿಸಿಕೊಡುವ ಆದರ್ಶ ಸ್ವರೂಪರಾಗಿರುತ್ತಿದ್ದರು. ಇವರು, ಇಂದಿನ ಅಧಿಕಾಂಶ ಗುರು ಜಂಗಮರು ಪ್ರತಿದಿನವೂ ಸೇವಿಸುತ್ತಿರುವ ಪಂಚಭಕ್ಷ್ಯಗಳ ರುಚಿಯನ್ನೂ, ಹೊರಳಾಡುತ್ತಿರುವ ಮೃದುತರವಾದ ಹಂಸತೂಲಿಕಾತಲ್ಪಗಳ ಸುಖವನ್ನೂ, ಕನಸಿನಲ್ಲಿಯೂ ಕಂಡರಿಯದವರಾಗಿದ್ದರು. ಭಕ್ತರಾರಾದರೂ ಮನೆಗೆ ದಯಮಾಡಿಸಬೇಕೆಂದು ಪ್ರಾರ್ಥಿಸಿಕೊಂಡರೆ ಅವರು ಮನೆಯಲ್ಲಿ ಮಾಡ ಬಹುದಾದ ಸೇವೆ ಸತ್ಕಾರಗಳನ್ನು ಮಠದಲ್ಲಿಯೇ ಮಾಡುವಂತೆ ಹೇಳುತ್ತಿದ್ದರಲ್ಲದೆ ಅವರ ಮನೆಗಳಿಗೆ ಹೋಗುತ್ತಿರಲಿಲ್ಲ. ಆದರೆ ಯಾವಾಗಲೂ ಇಂದ್ರಿಯ ನಿಗ್ರಹಣಸಾಧನವಾದ ಸಾತ್ವಿಕಾಹಾರಗಳನ್ನೇ ಮಿತವಾಗಿ ಸ್ವೀಕರಿಸುತ್ತಾ, ಇಂದ್ರಿಯ ಸುಖಕ್ಕೆನಿತಾದರೂ ಲಕ್ಷ್ಯಗೊಡದೆ, ಮಠದ ಅಟ್ಟದ ಮೇಲೆ ವಾಸಿಸುತ್ತಿದ್ದರು. ಈ ರೀತಿಯಾಗಿ ಪರರ ಗೊಂದಲಕ್ಕೆ ಸಿಕ್ಕದೆ ಏಕಾಂಗಿಯಾಗಿ ವೇದಾಂತ ತತ್ವವಿಚಾರಮಗ್ನರಾಗಿರುವ ಕಾಲದಲ್ಲಿ 'ಕೈವಲ್ಯ ಕಲ್ಪವಲ್ಲರಿ' ಎಂಬ ಸರ್ವ ಜನಾದರಣೀಯವಾದ ದಿವ್ಯ ಗ್ರಂಥವು ಇವರಿಂದ ರಚಿಸಲ್ಪಟ್ಟಿತು. ಇದಲ್ಲದೆ ಬೇರೊಂದು ಶತಕವನ್ನೂ ಇವರು ರಚಿಸಿರುವರಾದರೂ, ನಮ್ಮಗಳ ನಿರ್ಭಾಗ್ಯದಿಂದ ಅದಿನ್ನೂ ದೊರಕದಾಗಿದೆ.

## ನೂತನ ಮಠ ಸ್ಥಾಪನೆ.

ಈ ರೀತಿಯಾಗಿ ಕೆಲವು ಕಾಲ ಕಳೆಯಲು ಬೆಂಗಳೂರಿನ ಭಕ್ತರೆಲ್ಲರೂ ಒಟ್ಟಾಗಿ ಸೇರಿ ಶ್ರೀ ಸರ್ಪಭೂಷಣರಿಗೆ ಒಂದು ಪ್ರತ್ಯೇಕ ಮಠವನ್ನೇ ಕಟ್ಟಬೇಕೆಂದು ಪ್ರಯತ್ನಪಟ್ಟರು. ಈ ಮಹನೀಯರ ಮಹಿಮೆಯು ದಿನದಿನಕ್ಕೆ ಹೆಚ್ಚುತ್ತಾ ಬರಲು, ಆ ಕಾಲದಲ್ಲಿ ಮೈಸೂರು ದೇಶದ ದಿವಾನರಾಗಿದ್ದ ಕೃಷ್ಣಪ್ಪ ನಾಯಕರೂ ಇವರಲ್ಲಿ ಭಕ್ತಿಯನ್ನಿಟ್ಟು, ಈವಾಗ ಶ್ರೀ ಸರ್ಪಭೂಷಣರ ಹೆಸರಲ್ಲಿ ಕರೆಯುವ ಮಠದ ಆವರಣವನ್ನು ಸರಕಾರದಿಂದ ಉಚಿತವಾಗಿ ಕೊಡಿಸಿ ಕೊಟ್ಟರು. ಆವಾಗ ಸರ್ಪಭೂಷಣರು ತಾವು ಬಳ್ಳಾರಿಯಲ್ಲಿರಿಸಿದ್ದ ೧೬೦೦೦ ರೂಪಾಯಿಗಳನ್ನೂ ತರಿಸಿ ಮಠದ ಕೆಲಸಕ್ಕೆ ಪ್ರಾರಂಭಿಸಿದರು. ಈ ಮಠದ ಕೆಲಸದ ಜತೆಯಲ್ಲಿಯೇ ಶ್ರೀ. ಓಂಕಾರೇಶ್ವರ ದೇವಾಲಯವೆಂಬ ಒಂದು ಶಿವಾಲಯದ ಕಟ್ಟಡವೂ ಪ್ರಾರಂಭವಾಯಿತು.



ಬೆಂಗಳೂರ ಸರ್ಪಭೂಷಣ ಶಿವಯೋಗಿಗಳ ಮಠ.



ಬೆಂಗಳೂರ ಸರ್ಪಭೂಷಣ ಶಿವಯೋಗಿಗಳ ಗುಡಿಯ ಹೊರಭಾಗ

## ಲಿಂಗೈಕ್ಯ.

ಆದರೆ ಮಠದ ಕಾರ್ಯವು ಇನ್ನೂ ಅಪೂರ್ಣವಾಗಿರುವಾಗಲೇ ಸರ್ಪಭೂಷಣರಿಗೆ ತಾವು ಕ್ಷಿಪ್ರದಲ್ಲಿಯೇ ಲಿಂಗೈಕ್ಯರಾಗುವ ಬಗ್ಗೆ ತೋರಿಬಂದಿತು. ಆದರೆ ಈ ವಿಚಾರವನ್ನು ಭಕ್ತರಿಗೆ ತಿಳಿಸಿ ಅವರ ಮನಸ್ಸಿಗೆ ಅಸಮಾಧಾನವನ್ನುಂಟುಮಾಡಬಾರದೆಂದು ಕೆಲವು ದಿವಸಗಳು ಈ ವಿಚಾರವನ್ನು ತಮ್ಮಲ್ಲಿಯೇ ಇಟ್ಟುಕೊಂಡಿದ್ದರು.

ಆದರೆ ಒಂದು ದಿನ ಸರ್ಪಭೂಷಣರಿಗೆ ಮಧ್ಯಾನ್ಹದ ನಡುಬಿಸಿಲಲ್ಲಾದರೂ ಉತ್ಸಾಹದಿಂದ ನಿಂತು ಕೆಲಸಮಾಡಿಸುತ್ತಿರುವ ತಮ್ಮ ಶಿಷ್ಯೋತ್ತಮರಾದ ಫಾಲಲೋಚನರನ್ನು ನೋಡಿ ಕನಿಕರವುಂಟಾಯಿತು. ಆಗಲವರು ಫಾಲಲೋಚನರನ್ನು ಕುರಿತು 'ಇನ್ನೊಂದು ತಿಂಗಳಿಗೆ ಕಲಶವನ್ನೇ ಕಳೆದುಕೊಳ್ಳುವ ಈ ಮಠದ ವಿಚಾರದಲ್ಲಿ ನೀನೇಕೆ ಇಷ್ಟು ಶ್ರಮವಹಿಸುವೆ' ಎಂಬಿಷ್ಟನ್ನು ಮಾತ್ರ ಸೂಚಿಸಿದರು. ಇದರ ಭಾವಾರ್ಥವನ್ನರಿತ ಆ ಶಿಷ್ಯೋತ್ತಮರು ಬಹಳ ವ್ಯಸನದಿಂದಲೂ, ಕಟ್ಟಡ ವಿಚಾರದಲ್ಲಿ ಉದಾಸೀನತೆಯಿಂದಲೂ, ಕೂಡಿದವರಾಗಿ ಇನ್ನೊಂದು ತಿಂಗಳ ವರುವಿಗೆ ಕೆಲಸವನ್ನೇ ಮಾಡದಂತೆ ಕೆಲಸಗಾರರಿಗೆ ಕಟ್ಟು ಮಾಡಿದರು.

ಸರ್ಪಭೂಷಣರು ಹೇಳಿದ ಒಂದು ತಿಂಗಳ ಅವಧಿಯಲ್ಲಿ ೨೯ ದಿವಸಗಳು ಕಳೆದು ಹೋದುವಾದರೂ ಈ ಮಹಾತ್ಮರಲ್ಲಿ ಯಾವ ವಿಧವಾದ ಮರಣ ಸೂಚನೆಗಳೂ ತೋರಿಬರಲಿಲ್ಲ. ಮೂವತ್ತನೆಯ ದಿನವೂ ಬಂದಿತು. ಶ್ರೀ ಫಾಲಲೋಚನರು, ತನ್ನ ಪತಿಯು ಪರಲೋಕವನ್ನೈದುವ ಲಗ್ನಕ್ಕೆ ಉಳಿದಿರುವ ಒಂದೊಂದು ಗಳಿಗೆಯನ್ನೂ ಲೆಕ್ಕ ಹಾಕುತ್ತಿದ್ದ ಸತಿ ಶಿರೋಮಣಿ ಸಾವಿತ್ರಿಯಂತೆ ತಮ್ಮ ಪೂಜ್ಯ ಗುರುವರ್ಯರು ಶಿವೈಕ್ಯರಾಗುವ ಸಮಯಕ್ಕೆ ಉಳಿದಿರುವ ಒಂದೊಂದು ಗಳಿಗೆಯನ್ನೂ ಲೆಕ್ಕಿಸತೊಡಗಿದರು. ಆದರೆ ಸರ್ಪಭೂಷಣರು ಆ ದಿವಸವೂ ಸಂಜೆಯ ವರುವಿಗೂ ತಮ್ಮ ದಿನಚರಿಯ ಕಾರ್ಯಗಳನ್ನೆಲ್ಲಾ ಮಾಡಿ, ಸಂಜೆ ಪ್ರದೋಷದ ಸಮಯಕ್ಕೆ ಸರಿಯಾಗಿ ಲಿಂಗಪೂಜೆಗೆ ಕುಳಿತರು. ಆದರೆ ಅಲ್ಲಿಂದ ಮಾತ್ರ ಹೊರಗೆ ಬರಲೇ ಇಲ್ಲ. ತಮ್ಮ ಕರಕಮಲದಲ್ಲಿನ ಲಿಂಗಮೂರ್ತಿಯಲ್ಲಿಯೇ ತಮ್ಮ ಪ್ರಾಣವನ್ನಳವಳಿಸಿ ಕೊನೆಗೆ ಅದರಲ್ಲೇ ಐಕ್ಯತೆಯನ್ನು ಹೊಂದಿದರು.

ಸರ್ಪಭೂಷಣರು ಇಷ್ಟರಲ್ಲಿಯೇ ಲಿಂಗೈಕ್ಯರಾಗುವರೆಂದು ಯಾರೂ ಕನಸಿನಲ್ಲಿಯೂ ತಿಳಿದಿರಲಿಲ್ಲವಾದುದರಿಂದ ಎಲ್ಲರೂ ತಂತಮ್ಮ ಕಾರ್ಯಗಳಲ್ಲಿ ನಿರುತರಾಗಿರುತ್ತಿದ್ದರು. ಆದರೆ ಆ ದಿವಸ ಈ ಶ್ರೀಗಳ ಶಿಷ್ಯವೃಂದದಲ್ಲಿ ಇಬ್ಬರಾದ ಗುಡೇಮಾರನಹಳ್ಳಿ ಮಲ್ಲಿಕಾರ್ಜುನಪ್ಪ ಮತ್ತು ರೊಟ್ಟಿ ರುದ್ರಪ್ಪ ಎಂಬವರು ಬೆಂಗಳೂರಿಗೆ ಸುಮಾರು ೪೦—೪೫ ಮೈಲಿಗಳ ದೂರವಿರುವ ಮೊರಳೆ ಎಂಬ ಗ್ರಾಮಕ್ಕೆ ಹೋಗಿದ್ದಾಗ್ಗೆ ಒಂದು ಅತ್ಯಾಶ್ಚರ್ಯಕರವಾದ ಸಂಗತಿ ನಡೆಯಿತು. ಆ ಕಾಲದಲ್ಲಿ ಮಹಾಮಹಿಮರೂ, ದೇಶದಲ್ಲೆಲ್ಲಾ ವಿಖ್ಯಾತರೂ ಆದ ಹುಚ್ಚಪ್ಪಸ್ವಾಮಿಗಳೆಂಬವರು ಪ್ರಸಿದ್ಧವಾದ ಆ ಊರಿನ ಮಠಾಧಿಕಾರಿಗಳಾಗಿದ್ದರು. ಇವರ ಜೀವನದಲ್ಲಿನ ಪ್ರತಿಯೊಂದು ವಿಚಾರವೂ ಇಷ್ಟೇ ಮಹತ್ವವಾದುದಾದ್ದರಿಂದ ಪ್ರಕೃತ ನಮ್ಮ ಚರಿತ್ರೆಗೆ ಸಂಬಂಧಪಟ್ಟ ಒಂದು ವಿಚಾರವನ್ನು ತಿಳಿಸಿ ಉಳಿದುವನ್ನು ಇವರ ಜೀವನಚರಿತ್ರಾರೂಪವಾಗಿ ಮತ್ತೊಮ್ಮೆ ತಿಳಿಸುವೆನು. ಆ ದಿವಸ ಸಾಯಂಕಾಲ, ಮೇಲೆ ಹೇಳಿದವರಿಬ್ಬರೂ ಈ ಪೂಜ್ಯಪಾದರ ದರ್ಶನಾರ್ಥವಾಗಿ ಶ್ರೀ ಮಠಕ್ಕೆ ಹೋಗಿದ್ದ ಸಮಯದಲ್ಲಿ ಶ್ರೀಗಳವರು ಶಿವಪೂಜೆಯಲ್ಲಿ ತೊಡಗಿದ್ದರು. ಆವಾಗ ಶ್ರೀ ಶಿವಲಿಂಗಮೂರ್ತಿಯಲ್ಲಿಯೇ ತಮ್ಮ ದೃಷ್ಟಿಯನ್ನಳವಳಿಸಿ ಬಹಿರ್ವ್ಯಾಪಾರವನ್ನು ಮರೆತಿದ್ದ ಅವರಿಗೆ ಶ್ರೀ ಸರ್ಪಭೂಷಣರು ದಿವ್ಯವಿಮಾನಾರೂಢರಾಗಿ ಕೈಲಾಸಕ್ಕೆ ಹೋಗುತ್ತಿದ್ದಂತೆ ಭಾಸವಾಗಿ, ಅವರ ಬಾಯಿಂದ ಸರ್ಪಭೂಷಣಾ ನೀನೆ ಧನ್ಯ! ಧನ್ಯ! ಎಂಬ ಶಬ್ದಗಳು ಹೊರಟವು. ಗುರುದರ್ಶನಾಪೇಕ್ಷಿಗಳಾಗಿ ಬಾಗಿಲಲ್ಲೇ ಕುಳಿತಿದ್ದ ಆ ಭಕ್ತರು ಇದೇನೆಂದು ಆಶ್ಚರ್ಯಪಡುತ್ತಿರಲು ಅಷ್ಟರಲ್ಲಿಯೇ ಹುಚ್ಚಪ್ಪಸ್ವಾಮಿಗಳು ತಮ್ಮ ಲಿಂಗಪೂಜೆಯನ್ನು ಮುಗಿಸಿ ಹೊರಗೆ ಬಂದು, ಅವರಿಗೆ ಶ್ರೀ ಸರ್ಪಭೂಷಣರ ಲಿಂಗೈಕ್ಯದ ವಿಚಾರವನ್ನು ತಿಳಿಸಿದರು. ಅವರೀರ್ವರೂ ಕೂಡಲೇ ಊಟವನ್ನು ಮುಗಿಸಿ, ಶ್ರೀಗಳವರ ಅಂತ್ಯದರ್ಶನಕ್ಕಾಗಿ ಆ ರಾತ್ರಿಯೇ ಬೆಂಗಳೂರಿಗೆ ಹೊರಟು ಶ್ರೀ ಸರ್ಪಭೂಷಣರ ಭೌತಿಕ ದೇಹವನ್ನು ಸಮಾಧಿಯಲ್ಲಿಟ್ಟು ಮಂಗಳಾರತಿಯನ್ನು ಬೆಳಗುವ ವೇಳೆಗೆ ಸರಿಯಾಗಿ ಅಲ್ಲಿಗೆ ಬಂದು ಆ ಮಹನೀಯರ ಅಂತ್ಯದರ್ಶನವನ್ನು ಪಡೆದರು.

ಈ ರೀತಿಯಾಗಿ ಮಹಾಮಹಿಮರಾದ ಶ್ರೀ ಸರ್ಪಭೂಷಣರು ತಾವು ಅತ್ಯಲ್ಪಕಾಲ ಬದುಕಿದರೂ ಅದನ್ನೆಲ್ಲ ಸದ್ವಿನಿಯೋಗ ಮಾಡಿ ಸ್ವಮತ

ಪರಮಾತವದವರೆಲ್ಲರ ಆದರ ಗೌರವಗಳಿಗೆ ಪಾತ್ರರಾಗಿದ್ದು ತಮ್ಮ ೪೫ ನೇ ವಯಸ್ಸಿನಲ್ಲಿ ಅಂದರೆ ಕ್ರಿ. ಶ. ೧೮೫೯ ರಲ್ಲಿ ಪಂಚಭೌತಿಕ ಮಯವಾದೀ ದೇಹವೆಂಬ ಗೃಹವನ್ನು ಬಿಟ್ಟು ಪರಿಪಕ್ವಾಂತಃಕರಣದ ಹೃತ್ಕಮಲವೆಂಬ ಶಾಂತಿಮಂದಿರವನ್ನು ಹೊಕ್ಕರು. ಇವರ ಸಮಾಧಿ ಸ್ಥಳವು ಇವರ ಮಠದಲ್ಲಿಯೇ ಪೂರ್ವ ಭಾಗದಲ್ಲಿ ಅತ್ಯಂತ ಮಹಿಮೆಯಿಂದ ಇಂದಿಗೂ ಬೆಳಗುತ್ತಿರುವದು.

## ಉಪಸಂಹಾರ.

ಈ ಶಿವಯೋಗಿ ಸಾರ್ವಭೌಮರ ನಂತರ ಶ್ರೀಫಾಲಲೋಚನರೇ ಈ ಮಠದ ಅಧಿಪತಿಗಳಾದರು. ಈ ಪುಣ್ಯಚರಿತರ ಮಹಿಮಾರಾಶಿಗಳು ಇಂದಿಗೂ ಜನರಲ್ಲಿ ರೋಮಾಂಚನವನ್ನುಂಟುಮಾಡುತ್ತಿರುವವು. ಆದರೆ ಇವರ ನಂತರ ಈ ಮಠದ ಅಧಿಕಾರವನ್ನು ವಹಿಸಿದವರಾರೂ ಇವರುಗಳಂತೆ ಮಹಿಮಾಕಾರ್ಯಗಳನ್ನು ಮಾಡಿ ತೋರಿಸಿದಂತೆ ಕಂಡು ಬರುವುದಿಲ್ಲ. ಅವರಲ್ಲೂ ಪ್ರಸ್ತುತ ಆ ಪೀಠವನ್ನೇರಿರುವ ಮಹನೀಯರು ಮುಖ್ಯವಾಗಿ ತಮ್ಮ ಮೂಲಗುರುಗಳ ಚರಿತ್ರೆಯನ್ನೇ ಅದ್ಯಂತವಾಗಿ ತಿಳಿಯರೆಂದು ಹೇಳಲು ನನಗೇ ನಾಚಿಕೆಯಾಗುತ್ತದೆ. ಆದುದರಿಂದ ಬಾನಾದೀ ಲೇಖಕನ ಹೃತ್ಕಮಲ ಮಂದಿರದಲ್ಲಿ ಚಿದ್ರೂಪದಿಂ ನೆಲೆಸಿ ಸಮಾಜ ಸುಧಾರಣಾ ವಿಚಾರವಾಗನುದಿನವೂ ಪ್ರೇರೇಪಿಸುತ್ತಾ ಇರುವ ಅ ಪಶುಪತಿಯ ಅಂಶೀಭೂತರಾದೀ ಸರ್ಪಭೂಷಣರ ಸಚ್ಚರಿತ್ರೆಯು ಕುಪಥಗಾಮಿಗಳಾದೀ ಸಮಾಜಿಕರಿಗೆ ಸ್ವಲ್ಪವಾದರೂ ಸನ್ಮಾರ್ಗದರ್ಶಿಯಾಗುವುದೆಂದು ಪೂರ್ಣ ಭರವಸೆಯಿಂದಿದ್ದೇನೆ.

ಈ ಮಹನೀಯರ ಜೀವನ ಚರಿತ್ರೆಯಲ್ಲಿನ ಕೆಲಕೆಲವಂಶಗಳನ್ನು ಸೂಚಿಸಿದ ಇಲ್ಲಿನ ಕೆಲ ಪೂಜ್ಯಪಾದರುಗಳಿಗೂ, ಇವರ ಇಡೀ ಚರಿತ್ರೆಯನ್ನೆಲ್ಲ ಸಾಂಗವಾಗಿ ಕಳಿಸಿಕೊಟ್ಟ ಸರ್ಪಭೂಷಣರ ಸಂತತಿಯವರಾದ ಬಾಣಾವರದ ಶ್ರೀಯುತ ಹುಚ್ಚಪ್ಪನವರಿಗೂ, ನನ್ನ ಚಿರಕೃತಜ್ಞತೆಗಳನ್ನರ್ಪಿಸಿ ನನ್ನೀ ಲೇಖನವನ್ನಿಲ್ಲಿಗೆ ಮುಗಿಸುವೆನು.

**ಓಂ ಶಾಂತಿ ಶಾಂತಿ ಶಾಂತಿಃ**

# ವೀರಶೈವ ವರ್ಣಾಶ್ರಮ ವಿಚಾರವು.

## ಲೇಖಾಂಕ ೩

**ಲೇಖಕ—ಶಿವಸುತ.**

ಶಿವಾಗಮಗಳಲ್ಲಿ ಪ್ರಾಕೃತ ಧರ್ಮಗಳಾದ ಮಿಶ್ರ, ಮಾರ್ಗ, ಅವಾಂತರಾದಿ ಶೈವ ಧರ್ಮಗಳನ್ನು ನಿರೂಪಿಸಿ ಆ ಮೇಲೆ ಅಪ್ರಾಕೃತವಾದ ವೀರಶೈವ ಧರ್ಮವನ್ನು ಪ್ರತಿಪಾದಿಸಿರುತ್ತದೆ. ಆಗಮಗಳಲ್ಲಿ ಶೈವಮತದ ಬಗ್ಗೆ ಮಾಡಲ್ಪಟ್ಟಿರುವ ಮೇಲ್ಕಂಡ ವಿಭಾಗಗಳನ್ನು ಮರೆದು ಆಧುನಿಕ ಪಂಡಿತರು ಕೆಲವರು ಮಿಶ್ರಮಾರ್ಗ, ಅವಾಂತರ ಧರ್ಮಗಳನ್ನು ವೀರಶೈವದೊಡನೆ ಬೆರೆಯಿಸಿ ವೀರಶೈವದಲ್ಲಿ ಚತುರ್ವರ್ಣಗಳುಂಟೆಂದು ಪ್ರತಿಪಾದಿಸುತ್ತಾರೆ. ಹಾಗೆ ಇದ್ದುದಾದರೇ ವೀರಾಗಮದ ಈ ಕೆಳಗಿನ ಶ್ಲೋಕಕ್ಕೆ ಆಗತ್ಯವೇ ಇರುತ್ತಿದ್ದಿಲ್ಲ.

ಬ್ರಾಹ್ಮಣಂ ತ್ರೀಣಿ ವರ್ಷಾಣಿ ಕ್ಷತ್ರಿಯಂ ವರ್ಷ ಷಟ್ಸು ಚ।
ವೈಶ್ಯಂ ತು ನವ ವರ್ಷಾಣಿ ಶೂದ್ರಂ ದ್ವಾದಶವರ್ಷಾಣಿ"

ಅಂದರೆ ಪ್ರಾಕೃತ ಸೃಷ್ಟಿಯ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರು ಕ್ರಮವಾಗಿ ಮೂರು, ಆರು, ಒಂಭತ್ತು, ಹನ್ನೆರಡು ವರ್ಷಗಳಲ್ಲಿ ನಿಜಭಕ್ತಿಯೋಗಾಚರಣೆಯಲ್ಲಿದ್ದು ಆ ಮೇಲೆ ಶಿವದೀಕ್ಷೆಗೆ ಅರ್ಹರಾಗುತ್ತಾರೆಂದು ಹೇಳಲ್ಪಟ್ಟಿದೆ. ವೀರಶೈವದಲ್ಲೇ ನಾಲ್ಕು ವರ್ಣಗಳಿದ್ದ ಪಕ್ಷದಲ್ಲಿ ಪ್ರಾಕೃತ ಬ್ರಾಹ್ಮಣರು ಅಪ್ರಾಕೃತ ವೀರಶೈವದಲ್ಲಿ ಯಾವ ವರ್ಗಕ್ಕೆ ಸೇರಬೇಕಾಗಿದ್ದಿತು? ಅವರೆಲ್ಲರಿಗೂ ಒಂದೇ ತರಗತಿಯು ದೊರೆಯದೇ ಇದ್ದಿದ್ದರೆ ಶಿವದೀಕ್ಷೆಗೆ ಬ್ರಾಹ್ಮಣರಿಗೆ ಮೂರು ವರ್ಷಗಳು ತದಿತರರಿಗೆ ಹೆಚ್ಚು ಹೆಚ್ಚು ವರ್ಷಗಳು ಏತಕ್ಕೆ ಬೇಕಾಗುತ್ತಿದ್ದವು?

ಹಿಂದೂ ಧರ್ಮದಲ್ಲಿ ವೀರಶೈವ ಮತವು ಅಪೂರ್ವಸ್ಥಾನವನ್ನಲಂಕರಿಸಿರುತ್ತದೆ. ಇದು ಯಾವುದೊಂದು ವ್ಯಕ್ತಿಯಿಂದ ನಿರ್ಮಿಸಲ್ಪಟ್ಟಿಲ್ಲ. ಜಗತ್ತಿನೊಳಗಿನ ಯಾವತ್ತೂ ಧರ್ಮಗಳಿಗೆ ಹೃದಯಸ್ಥ ಬೀಜವಾಗಿರುತ್ತದೆ. ಇದರ ಸಂಘಟನೆಯನ್ನು ನೋಡಿದರೆಯೂ ನವನಿರ್ಮಾಣದ ಚಿಹ್ನಗಳು ಇದರಲ್ಲಿ ಕಾಣಿಸುವುದಿಲ್ಲ. ಸ್ವಾಭಾವಿಕವಾಗಿ ಹುಟ್ಟಿ ಪ್ರಬು

ದ್ಯಮಾನವಾಗಿರುವ ಮಹಾ ವಟವೃಕ್ಷವನ್ನು ಜ್ಞಪ್ತಿಗೆ ತೋರುತ್ತದೆ. ಅಪ್ರಾಕೃತ ವೀರಶೈವ ಸೃಷ್ಟಿಯಲ್ಲಿ ಆತ್ಮನಿಗೆ ಪ್ರಕೃತಿಯ (ಶರೀರದ) ಹಂಗು ಇರುವುದಿಲ್ಲ. ಉಪಾಧಿಗಳನ್ನು ಕಟ್ಟಿಕೊಂಡು ಆತ್ಮಗೌರವಕ್ಕಾಗಿ ಹರಿದಾಡುವುದಕ್ಕೂ ಯೋಗಾದಿ ಸಾಧನಗಳಿಂದ ಅಣಿಮಾದಿ ಅಷ್ಟಸಿದ್ಧಿಗಳನ್ನು ಸಂಪಾದಿಸಿ ವ್ಯವಹರಿಸುವುದಕ್ಕೂ, ಸಾಮಿಊಪ್ಯಾದಿ ಪದವಿಗಳನ್ನು ಪಡೆಯುವ ಧ್ಯೇಯದಿಂದ ಅಷ್ಟಾಂಗಯೋಗನಿರತನಾಗುವದಕ್ಕೂ ಅಥವಾ ಇನ್ನಾವದಾದರೊಂದು ಬಯಕೆಯನ್ನು ಪೂರೈಸಿಕೊಳ್ಳುವ ಕೃತಿಯನ್ನು ಕೈಕೊಳ್ಳುವುದಕ್ಕೂ ಆಸ್ಪದವಿರುವುದಿಲ್ಲ. ಅಪ್ರಾಕೃತ ಸೃಷ್ಟಿಯಲ್ಲಿ ಫಲಾಪೇಕ್ಷತೆಗೆ ಸ್ಥಳವಿಲ್ಲ. ತನು ಪ್ರಕೃತಿ, ಮನ ಪ್ರಕೃತಿ, ಭಾವಪ್ರಕೃತಿಗಳೆಲ್ಲವೂ ನಾಶಗೊಳಿಸಲ್ಪಟ್ಟ ಮೇಲೆಯೇ ಭವಿಯು ಅಪ್ರಾಕೃತ ಭಕ್ತನಾಗುವನು.

ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಂ।
ದೀಯತೆ ಕ್ಷೀಯತೆ ಯಸ್ಮಾತ್ ತಸ್ಮಾದ್ದೀಕ್ಷೇತಿ ಕಥ್ಯತೆ

ಎಂಬ ಸಿದ್ಧಾಂತ ಶಿಖಾಮಣಿ ವಚನಾನುಸಾರವಾಗಿ ತ್ರಿವಿಧಾತ್ಮಕವಾದ ಶಿವದೀಕ್ಷೆಯು ಆತ್ಮನಿಗೆ ಅಂಟಿರುವ ಆಣವ, ಮಾಯಿಕ, ಕಾರ್ಮಿಕ ಮಲಗಳನ್ನು ಹರಿಸುವದು. ಹೀಗೆ ಶಿವದೀಕ್ಷೆಯು ಪಾಶವನ್ನು ಹರಿದೊಗೆಯುವ ಪರಮ ಸಾಧನವಾಗಿದ್ದು ಶಿವದೀಕ್ಷೆಯನ್ನು ಹೊಂದಿದವರಲ್ಲೆಲ್ಲ ಲಿಂಗಧಾರಣೆಯು ವಿಶ್ವ ಸೌಹಾರ್ದ್ರ ಭಾವನೆಯ ಗುರುತಾಗಿರುತ್ತದೆ.

ಈ ರೀತಿ ವೇದಾಂತ ಮತ್ತು ಆಗಮಾಂತಗಳ ರೀತ್ಯಾ ವರ್ಣ ವಿಭೇದಕ್ಕೆ ಅವಕಾಶವಿರುವದಿಲ್ಲ. ಮತ್ತು ಶ್ರೀ ಬಸವೇಶ್ವರರ ಯುಗದಲ್ಲಿ ಸಹ ಶ್ರೀ ಬಸವಾದಿ ಶಿವಶರಣರು ವರ್ಣ ಭೇದವನ್ನು ನಿರ್ದಾಕ್ಷಿಣ್ಯದಿಂದ ಖಂಡಿಸಿರುತ್ತಾರೆ. ಮತ್ತು ಲಿಂಗಧಾರಿಗಳಲ್ಲಿ ಕುಲಭೇದಗಳನ್ನು ಎಣಿಸುವದೊಂದು ಮಹಾ ಪಾತಕವೆಂದು ಪರಿಗಣಿಸಲ್ಪಟ್ಟಿದ್ದಿತ್ತು. ಅದೇ ತತ್ವವೇ ಇಲ್ಲಿಯ ವರೆಗೂ ಅವ್ಯಾಹತವಾಗಿ ಪ್ರತಿಪಾದಿಸಲ್ಪಡುತ್ತ ಮತ್ತು ಆಚರಿಸಲ್ಪಡುತ್ತ ಬಂದಿದ್ದು ಕೇವಲ ಇತ್ತೀಚಿಗೆ ಕೆಲವರು ಈ ವಿಚಿತ್ರ ತತ್ವವನ್ನು ಪ್ರತಿಪಾದಿಸುತ್ತ ಬಂದರೂ ಸದ್ಯಕ್ಕೆ ಬರಿ ಪ್ರತಿಪಾದನೆಯಲ್ಲಿರುತ್ತದಾಗಲಿ ಆಚರಣೆಯಲ್ಲಿ ಬಂದಿಲ್ಲ. ಆಚರಣೆಯಲ್ಲಿ ಬರುವದಕ್ಕೆ ಸಂಭವವೇ ಇರುವದಿಲ್ಲ. ಏತಕ್ಕೆಂದರೆ— ಹೊಸದಾಗಿ ತಲೆದೋರಿರುವ ಈ ಸಿದ್ಧಾಂತದ ಪ್ರಕಾರ ವೀರಶೈವರಲ್ಲಿ ಮಾಹೇಶ್ವರರೆನ್ನಿಸಿಕೊಳ್ಳುವವರು

ಬ್ರಾಹ್ಮಣರು. ಯುದ್ಧ ಕಲೆಯಲ್ಲಿ ನಿಪುಣರಾದವರು ಕ್ಷತ್ರಿಯರು. ವ್ಯಾಪಾರಾದಿಗಳಲ್ಲಿ ನಿರತರಾಗಿರುವವರು ವೈಶ್ಯರು. ಕೃಷಿಕರ್ಮದಲ್ಲಾಸಕ್ತರಾಗಿರುವವರು ಶೂದ್ರರು. ಈ ತತ್ವವನ್ನು ವಿಮರ್ಶಿಸುವದಕ್ಕೆ ಮುಂಚೆ ಇದು ಸಮಾಜದಲ್ಲಿ ಹೇಗೆ ತಲೆದೋರಿತೆಂಬುದನ್ನು ಸ್ವಲ್ಪ ಯೋಚಿಸುವಾ.

ಅದಾವ ಕಾರಣದಿಂದಲೋ ಸ್ಮೃತ್ಯುಕ್ತ ವರ್ಣಭೇದವು ಸರ್ವಮಾನ್ಯವಾಗುತ್ತ ಬಂದು ಹಿಂದೂಧರ್ಮದ ಹೆಗ್ಗುರುತಾಯಿತು. ಹಿಂದೂ ವೆನ್ನಿಸಿಕೊಳ್ಳುವವನು ಈ ನಾಲ್ಕು ವರ್ಣಗಳಲ್ಲಿ ಯಾವದಾದರೊಂದು ವರ್ಣದಲ್ಲಿ ಸೇರಿದವನಾಗಿರಲಿಕ್ಕೇ ಬೇಕು. ಆಗಮಗಳ ಪ್ರಸಾರದ ಪ್ರಾಬಲ್ಯವು ಕಡಿಮೆಯಾಗುತ್ತ ಬಂದಂತೆ ಆಪಾಕೃತ ವೀರಶೈವ ಧರ್ಮವು ತನ್ನ ತೇಜಸ್ಸನ್ನು ಕಳೆದುಕೊಳ್ಳುತ್ತ ಬಂದಿತು. ಮತ್ತು ಆಂಗ್ಲೇಯರ ಪ್ರಭುತ್ವಾರಂಭದಿಂದ ಸ್ಮೃತ್ಯುಕ್ತ ಬ್ರಾಹ್ಮಣ ಧರ್ಮದವರೇ ವಿದ್ಯಾಧಿಕರಾಗುತ್ತ ಬಂದು ರಾಜ್ಯ ಸೂತ್ರಗಳನ್ನು ತಮ್ಮ ಕೈಗಳಲ್ಲಿ ತೆಗೆದುಕೊಳ್ಳ ಹತ್ತಿದರು. ಇವರಾಡಿದ್ದೇ ವೇದ ವಾಕ್ಯವಾಯಿತು. ಜನಸಂಗಣಿತೆಯ *(Census)* ಲೆಖ್ಖದಲ್ಲಿ ವೀರಶೈವರನ್ನು ಯಾವ ವರ್ಗಕ್ಕೆ ಸೇರಿಸಬೇಕೆಂಬ ಪ್ರಶ್ನೆಯು ಹೊರಟಿತು. ಈ ಸಮಸ್ಯೆಯನ್ನು ಬಗೆ ಹರಿಸಲು ವೀರಶೈವ ವಿದ್ವಾಂಸರಾರೂ ಮುಂದೊರೆಯಲಿಲ್ಲ. ಮತ್ತು ಆಗ ವೀರಶೈವರು ಈಗಿನಷ್ಟು ರಾಜಕೀಯ ವಿದ್ಯೆಯಲ್ಲಿ ನಿಷ್ಣಾತರಾಗಿರಲಿಲ್ಲ. ತೀರಿತ ವೀರಶೈವರೆಲ್ಲರೂ ಒಟ್ಟಿಗೆ ಶೂದ್ರ ವರ್ಗಕ್ಕೆ ಸೇರಿಸಲ್ಪಟ್ಟರು. ನ್ಯಾಯ ಸ್ಥಾನದಲ್ಲಿ ಸಹ ಇವರಿಗೆ ಇದೇ ಮರ್ಯಾದೆಯು ದೊರೆಕಿತು. ಇತ್ತೀಚಿಗೆ ಕೆಲ ಮಹನೀಯರು ಈ ಬಗ್ಗೆ ಚಳವಳಿಯನ್ನೆಬ್ಬಿಸಿ ವೀರಶೈವರನ್ನೆಲ್ಲ ಬ್ರಾಹ್ಮಣ ವರ್ಗಕ್ಕೆ ಸೇರಿಸಿಬೇಕೆಂದು ಸರ್ಕಾರದವರೊಡನೆ ವ್ಯವಹಾರವನ್ನು ನಡೆಸಿದರು. ಸೆನ್ಸಸ್ ರೂಲ್ಸ ಪ್ರಕಾರ ಯಾವನೊಬ್ಬನು ತಾನು ಯಾವ ಜಾತಿಯವನೆಂದು ಹೇಳಿಕೊಳ್ಳುತ್ತಾನೆಯೋ ಆ ವರ್ಗದಲ್ಲಿ ಅವನು ಸೇರಿಸಿಕೊಳ್ಳಲ್ಪಡಬೇಕೆಂದಿರುವದರಿಂದ 'ವೀರಶೈವರೆಲ್ಲರೂ ವೀರಶೈವ ಬ್ರಾಹ್ಮಣರೆಂದು ಪರಿಗಣಿಸಲ್ಪಟ್ಟಿತು. ಈ ವಿಷಯವಾಗಿ ಮೈಸೂರ ದೇಶೀಯ ಪಂಡಿತರಲ್ಲಿ ಅನೇಕ ವಾದವಿವಾದಗಳು ನಡೆದವು. ಈ ಚರ್ಚೆಯಲ್ಲಿ ಕೆಲವು ಚಿಕ್ಕಟ್ಟಿನ ಪ್ರಶ್ನೆಗಳು ಹೊರಟವು. "ಬ್ರಾಹ್ಮಣ" ರೆಂದು ಹಾಲಿ ಸದರಿ ಹೆಸರಿನಲ್ಲಿ ರೂಢಿಯಾಗಿ ಬಂದಿರುವ ಜನಾಂಗದವರ ವೇಷ ಪದ್ಧತಿ ಮುಂತಾದವುಗಳನ್ನು ಹೆಗ್ಗುರುತುಗಳನ್ನಾಗಿಟ್ಟುಕೊಂಡು ವೀರ

ಶೈವರು ಬ್ರಾಹ್ಮಣರೆಂದ ಪಕ್ಷದಲ್ಲಿ ಅವರಿಗೆ ಜುಟ್ಟು ಜನಿವಾರಗಳೇತಕ್ಕೆ ಇಲ್ಲ? ಪಂಚಸೂತಕಗಳನ್ನೇತಕ್ಕೆ ಪಾಲಿಸುವದಿಲ್ಲ? ಷಟ್ಕರ್ಮಗಳನ್ನೇ ತಕ್ಕೆ ಆಚರಿಸುವದಿಲ್ಲ? ವಗೈರೆ ಕೆಲವರು ಕೇಳಲಿಕ್ಕೆ ಹತ್ತಿದರು. ಆಗ ನಮ್ಮಲ್ಲಿ ಕೆಲವರು ವೀರಶೈವರು ಕರ್ಮಕಾಂಡ ವಿರೋಧಿಗಳಾಗಿರುವ್ರುದ ರಿಂದ ಅವರಿಗೆ ಜುಟ್ಟು ಜನಿವಾರಗಳೂ, ಷಟ್ಕರ್ಮಗಳೂ, ಪಂಚಸೂತ ಕಗಳೂ ಇರುವದಿಲ್ಲವೆಂತಲೂ ಅದಕ್ಕಾಗಿಯೇ ವೀರಶೈವರು ಅಪ್ರಾಕೃತ ಬ್ರಾಹ್ಮಣರೆಂದು ವ್ಯವಹರಿಸಲ್ಪಡುತ್ತಿರುವರೆಂತಲೂ ಅಭಿಪ್ರಾಯಪಟ್ಟರು. ಬೇರೆ ಕೆಲವರು ತಮ್ಮ ವೈದಿಕತ್ವವನ್ನೂ ಬ್ರಾಹ್ಮಣ್ಯವನ್ನೂ ಸ್ಥಾಪಿಸುವದ ಕ್ಕಾಗಿಯೂ ಮತ್ತು ಹಾಲಿ ವೀರಶೈವ ಸಮಾಜದಲ್ಲಿ ಪ್ರಚಲಿತವಾಗಿರುವ ಪದ್ಧತಿಗಳಿಗೆ ಕುಂದು ಬಾರದಂತೆಯೂ ವಾದಿಸುತ್ತಾ ಲಿಂಗವೇ ಯಜ್ಞೋ ಪವೀತವೆಂತಲೂ, ಲಿಂಗಪೂಜೆಯೇ ಯಜ್ಞವೆಂದಲೂ ಅರ್ಥಮಾಡುತ್ತಾ ಬಂದರು. ಇನ್ನು ಮೂರನೆಯ ತರಗತಿಯವರು "ಬ್ರಾಹ್ಮಣ" ಎಂಬ ಶಬ್ದದ ಸಲುವಾಗಿ ವೀರಶೈವ ಧರ್ಮದ ತತ್ವಗಳಿಗೆ ತಿಲಾಂಜಲಿಯನ್ನಿತ್ತು ವೀರಶೈವರಿಗೆ ಜುಟ್ಟನ್ನು ಬಿಡಬೇಕೆಂತಲೂ, ಜನಿವಾರವನು ಹಾಕಿಕೊ ಳ್ಳಬೇಕೆಂತಲೂ, ಪಂಚಸೂತಕಾದಿಗಳನ್ನು ಪಾಲಿಸಬೇಕೆಂತಲೂ, ಷಟ್ಕ ರ್ಮಗಳನ್ನಾಚರಿಸಬೇಕೆಂತಲೂ ವಗೈರೆ ಸಾರಹತ್ತಿದರು. ಮತ್ತು ಹಾಗೆ ಮಾಡದೇ ಹೋದರೆ ಅವರು ವೀರಶೈವ ಬ್ರಾಹ್ಮಣ ವರ್ಗಕ್ಕೆ ಸೇರಿದವರೇ ಅಲ್ಲವರೆಂದೂ "ಲಿಂಗಾಯತ" ಅರ್ಥಾತ್ ಬಸವ ಪಂಥಕ್ಕೆ ಸೇರಿದವರೆಂದೂ ಮುಂತಾಗಿ ಹೇಳುತ್ತಾ ಏಕತ್ವದಿಂದ ಸರ್ವಾಂಗ ಸುಂದರವಾಗಿದ್ದ ಸಮಾ ಜವನ್ನು ಇಬ್ಭಾಗ ಮಾಡುವ ಹವ್ಯಾಸಕ್ಕೆ ಬಿದ್ದರು. ಇದುವರಿವಿಗೂ ಗೌರವವಾಚಕ ಶಬ್ದಗಳೆಂದು ರೂಢಿಯಲ್ಲಿ ಬಂದಿದ್ದ "ಸ್ವಾಮಿ, ಅಯ್ಯ ನವರು" ಮುಂತಾದ ಪದಗಳು ಮಾಯವಾಗುತ್ತಾ ಬಂದು "ಶರ್ಮ" ಎಂಬ ಹೊಸ ಪದವು ಜಾರಿಯಲ್ಲಿ ಬರಹತ್ತಿತು. ತಲೆ ಮೇಲೆ ಜುಟ್ಟು ಗಳುದಯಿಸಹತ್ತಿದವು. ಆದರೆ ನಮ್ಮ ಸಮಾಜದ ಸುದೈವಪರಿಪಾಕದಿಂದ ಜನಿವಾರಗಳು ಮಾತ್ರ ರೂಢಿಯಲ್ಲಿ ಬಾರದಿದ್ದದ್ದರಿಂದ ಕೆಲವರು ಕರಡಿಗೆಯ ಶಿವದಾರಕ್ಕೇನೆ ಜನಿವಾರವೆಂತಲೂ, ಬೇರೆ ಕೆಲವರು ಚಿಕ್ಕ ರುದ್ರಾಕ್ಷಿ ಮಣಿಗಳ ಹಾರವೇ ಯಜ್ಞೋಪವೀತವೆಂತಲೂ ಹೇಳುತ್ತಾ ತಾವು ಶ್ರೇಷ್ಠ ಬ್ರಾಹ್ಮಣರೆಂದು ಹಿಗ್ಗುತ್ತಿರುವರು.

ಈ ಬದಲಾವಣೆಯು ಸ್ವಾಭಾವಿಕವಾಗಿ ನಮ್ಮ ಸಮಾಜದಲ್ಲಿ ಮಾಹೇಶ್ವರ ವರ್ಗದಲ್ಲಿ ಉತ್ಪನ್ನವಾಯಿತು. ಮಾಹೇಶ್ವರ ವರ್ಗದಲ್ಲಿ ಸೇರಿ

ಈ ರೀತಿ ತಲೆ ತಿರುಗಿದ ಕೆಲವರು ತಮ್ಮ ಹೆಸರಿಗೆ "ಶರ್ಮಾ" ಎಂಬುವ ಬಾಲವನ್ನು ಹಚ್ಚಿಕೊಳ್ಳುತ್ತಾ ತಮ್ಮ ಭಾಷಣದಲ್ಲಿ ನಡುವೆ ಕೆಲವು ಸಂಸ್ಕೃತಪದಗಳನ್ನು ಶ್ಲೋಕಗಳನ್ನು ಸೇರಿಸುತ್ತಾ ಪುರಾತನ ಪ್ರಮಥ ಮಾರ್ಗವನ್ನು ಹೀಯಾಳಿಸುತ್ತಾ ಹೋದೆಡೆಯಲ್ಲಿ ಜುಟ್ಟನ್ನು ಬಿಡಿಸ ಬೇಕು ಜನಿವಾರವನ್ನು ಹಾಕಿಕೊಳ್ಳಬೇಕು ಎಂದು ಗೊಂದಲವನ್ನು ಎಬ್ಬಿಸುತ್ತಾ ನಡೆದರು. ಆದರೆ ವಿಚಾರ ಕ್ರಾಂತಿಯು ಈ ನವಯುಗದಲ್ಲಿ ಈ ವಿಚಿತ್ರ ತತ್ತ್ವಕ್ಕೆ ಎಳ್ಳಷ್ಟು ಆಸ್ಪದ ದೊರೆಯದೆ ಇರುವದು ಅಭಿ ನಂದನೀಯವೇ ಸರಿ.

ಸಾಧಾರಣವಾಗಿ ಮನುಷ್ಯನು ತನಗಿಂತಲೂ ಶ್ರೇಷ್ಠರಾರೂ ಇರಬಾ ರದೆಂದು ಅಪೇಕ್ಷಿಸುವನಾಗಲಿ ಬೇರೆಯವರು ತನ್ನ ತರಗತಿಗೆ ಬರುವು ದೆಂದರೆ ಆತನು ಸಹಿಸಲಾರನು ಅದೇರೀತಿ ಶರ್ಮ ಪಂಥದ ಜನರು ತಾವೇನು ಬ್ರಾಹ್ಮಣರೆನಿಸಿ ಕೊಳ್ಳುವದರಲ್ಲಿ ಹಿರಿ ಹಿರಿ ಹಿಗ್ಗುವರಾಗಲಿ ಭಕ್ತವರ್ಗದವರಿಗೆ ಅದೇ ಬ್ರಾಹ್ಮಣ್ಯವನ್ನು ಕೊಡಲು ನಿರಾಕರಿಸಿದರು. ಮತ್ತು ತಮ್ಮ ಅಧಿಕಾರದಲ್ಲಿ ನಮ್ಮ ಸಮಾಜದಲ್ಲಿ ನಾಲ್ಕು ವರ್ಣಗಳ ನ್ನು ದಿರ್ಪಡಿಸಿದರು. ಇವರ ಅಭಿಪ್ರಾಯದಂತೆ ನಮ್ಮ ಸಮಾಜದಲ್ಲಿ ಪೂರ್ವರಾಜರ ಜಹಾಗೀರ ವಂಶಕ್ಕೆ ಸೇರಿದವರೇ ಕ್ಷತ್ರಿಯರು, ವ್ಯಾಪಾ ರಿಕರೇ (ಬಣಜಿಗ)ರೇ ವೈಶ್ಯರು, ಕೃಷಿಮುಂತಾದ ವೃತ್ತಿಯುಳ್ಳವರೇ ಶೂದ್ರ ರು, ತಾವು ಮಾತ್ರ ಈ ಮೂರು ವರ್ಗದವರ ಮೇಲೆ ಧರ್ಮದ ಹೆಸ ರಿನ ಮೇಲೆ ನಿರಂಕುಶಾಧಿಕಾರವನ್ನು ನಡೆಯಿಸುವ ಬ್ರಾಹ್ಮಣರು. ಆಹಾ! ಎಂಥಾ ವಿಚಿತ್ರವರ್ಣ ವಿಭಾಗವಿದು! ಈ ವಿಭಾಗವು ಎಷ್ಟರಮಟ್ಟಿಗೆ ಸಮಂಜಸವಾದುದೆಂಬುದನ್ನು ಸ್ವಲ್ಪ ವಿಮರ್ಶಿಸುವ.

ಸ್ಮೃತ್ಯುಕ್ತ ವರ್ಣಾಶ್ರಮ ಧರ್ಮದ ರೀತ್ಯಾ ವರ್ಣ ವರ್ಣದವರ ವಿಭಾ ಗವು ಅತಿ ಸ್ಪಷ್ಟವಾಗಿ ತೋರುತ್ತದೆ. ಪರಸ್ಪರ ಸಹಪಜ್ಞ್ತಿ ಭೋಜನ ವಿರುವುದಿಲ್ಲ. ಬ್ರಾಹ್ಮಣನು ಬಾಕಿ ವರ್ಣದವರಿಗೆ ಪೌರೋಹಿತ್ಯಾದಿ ಕರ್ಮಗಳನ್ನು ಮಾಡುತ್ತಿದ್ದರೂ ಯಾವ ವರ್ಣದವರಲ್ಲಿಯೂ ಸಹಪಜ್ಞ್ತಿ ಭೋಜನವನ್ನು ನಡೆಸುವುದಿಲ್ಲ. ಪ್ರತಿಯೊಂದು ವರ್ಣದವರಿಗೂ ವಿಧಿ ನಿಷೇಧಗಳು ಕರ್ಮೇತ್ಯಾದಿಗಳು ಬೇರೆ ಬೇರೆಯಾಗಿರುತ್ತವೆ. ದೀಕ್ಷಾಸಂ ಸ್ಕಾರವು ಮತ್ತು ವೇದಾಧ್ಯಯನವು ದ್ವಿಜರೆಂದೆನ್ನಿಸಿಕೊಳ್ಳುವ ಮೊದ

ಲನೆ ಮೂರು ವರ್ಗದವರಿಗೆ ಮಾತ್ರವಿರುತ್ತವೆ. ಈ ದೃಷ್ಟಿಯಿಂದ ನೋಡಿದರೆ ವೀರಶೈವರಲ್ಲಿ ವರ್ಣವಿಭಾಗವನ್ನು ಮಾಡಲು ಯತ್ನಿಸುವವರು ವೀರಶೈವ ಧರ್ಮದ ತಿರುಳನ್ನರಿಯದವರೆಂದು ಕಂಠೋಕ್ತವಾಗಿ ಹೇಳಬಹುದು. "ಅಷ್ಟಾವರಣಸಂಪನ್ನಃ ಪಂಚಾಚಾರಪರಾಯಣಃ" ಗುರುಲಿಂಗಜಂಗಮಾದಿ ಅಷ್ಟಾವರಣಗಳುಳ್ಳವನೂ, ಐದು ಆಚಾರಗಳನ್ನು ನಿಶಿತ ವ್ರತದಿಂದ ಆಚರಿಸುವವನೂ ವೀರಶೈವನು. ಧಾರ್ಮಿಕ ಪ್ರಗತಿಮಾರ್ಗದಲ್ಲಿ ವೀರಶೈವರೊಳಗೆ ಪರಸ್ಪರ ಯಾವ ಭೇದವೂ ಇರುವದಿಲ್ಲ. ದೀಕ್ಷಾಸಂಸ್ಕಾರವು ವರ್ಗಭೇದವಾಗಲಿ ಸ್ತ್ರೀಪುರುಷಭೇದವಾಗಲಿ ಇಲ್ಲದೇ ಪ್ರತಿಯೊಬ್ಬ ವೀರಶೈವನಿಗೂ ಅವಶ್ಯ ವಿಧಿಯಾಗಿರುವುದು. ವೇದಾಧ್ಯಯನಾಧಿಕಾರವು ಪ್ರತಿಯೊಬ್ಬರಿಗೂ ಇರುತ್ತದೆ. ಶಿವಪೂಜಾದಿ ಅನುಷ್ಠಾನಗಳು ಪ್ರತಿಯೊಬ್ಬ ವೀರಶೈವನಿಗೂ ಅವಶ್ಯಕ ಕರ್ತವ್ಯಗಳಾಗಿರುತ್ತವೆ. ಈ ಧರ್ಮದಲ್ಲಿ ವ್ಯಕ್ತಿಸ್ವಾತಂತ್ರ್ಯಕ್ಕೆ ಇದ್ದಷ್ಟು ಆಸ್ಪದವು ಬೇರೆ ಯಾವ ಸಮಾಜದಲ್ಲಿಯೂ ಇರಲಿಕ್ಕಿಲ್ಲ ದೇವರ ಮತ್ತು ಮನುಷ್ಯನ ನಡುವೆ ಇರುವದಲ್ಲಾಳಿಕೆಯು ಈ ಸಮಾಜದಲ್ಲಿರುವುದಿಲ್ಲ. ಸ್ಮೃತ್ಯುಕ್ತ ವರ್ಣಾಶ್ರಮ ಧರ್ಮದಲ್ಲಿ ಸ್ತ್ರೀತ್ವಕ್ಕೆ ಎಳ್ಳಷ್ಟಾದರೂ ಪ್ರಾಮುಖ್ಯತೆ ಇರುವುದಿಲ್ಲ. ಧಾರ್ಮಿಕ ಕ್ಷೇತ್ರದಲ್ಲಿ ಓರ್ವ ಅಗ್ರವರ್ಣದ ಸ್ತ್ರೀಯು ಶೂದ್ರ ಪಜ್ತಿಗೆ ಸೇರಿದವಳಾಗಿರುತ್ತಾಳೆ. ಶೂದ್ರರಿಗಂತೇ ಸ್ತ್ರೀಯರಿಗೆ ಸಹ ದೀಕ್ಷಾಸಂಸ್ಕಾರವಾಗಲಿ ವೇದಾಧ್ಯಯನಾಧಿಕಾರವಾಗಲಿ ಇರುವದಿಲ್ಲ. ಆದರೆ ವೀರಶೈವ ಸಮಾಜದಲ್ಲಿ ಮಾತ್ರ ಪುರುಷನಿಗೆ ಸಮಾನವಾದ ಪ್ರಾಶಸ್ತ್ಯವು ಸ್ತ್ರೀಗೆ ಕೊಡಲ್ಪಟ್ಟಿದೆ. ಯಾವ ವಿಷಯದಲ್ಲಿಯೂ ಸ್ತ್ರೀಯಳು ಪುರುಷನಿಗಿಂತಲೂ ಕಡಿಮೆಯೆಂದು ಪರಿಗಣಿಸಲ್ಪಡುವುದಿಲ್ಲ.

ಇನ್ನು ಯಾವುದೊಂದು ವೃತ್ತಿಯು ಮನುಷ್ಯನ ಘನತೆಯನ್ನಾಗಲಿ ಪವಿತ್ರತೆಯನ್ನಾಗಲಿ ಕಡಿಮೆ ಮಾಡಲಾರದೆಂಬ ಉದಾತ್ತ ತತ್ವವು ವೀರಶೈವ ಸಮಾಜದಲ್ಲಿ ಬಲವಾಗಿ ಬೇರೂರಿರುತ್ತದೆ. ಮನುಷ್ಯನು ಯಾವ ಕಾಯಕವನ್ನವಲಂಬಿಸಿದ್ದರೂ ತನ್ಮೂಲಕ ಅವನ ಧಾರ್ಮಿಕ ಪ್ರಗತಿಯ ಮಾರ್ಗಕ್ಕೆ ಯಾವ ಆತಂಕ ಉಂಟಾಗಲಾರದು. ಆ ಕಾಯಕವು ಅಹಿಂಸಾತ್ಮಕವಿರಬೇಕು. ಮತ್ತು ಪಂಚಾಚಾರಗಳಿಗೆ ಕುಂದನ್ನು ತರುವಂಥಾದ್ದಿರಬಾರದು. ಸ್ಮೃತ್ಯುಕ್ತವರ್ಣಾಶ್ರಮ ಧರ್ಮದಲ್ಲಿ ವೃತ್ತಿ ಗೌರವ ತತ್ತ್ವದ ಸುಳಿವಿರುವುದಿಲ್ಲ. ಬ್ರಾಹ್ಮಣನು ಭೂಮಿಯನ್ನು ಉಳುವ ನೇಗಿಲನ್ನು ಮುಟ್ಟಿದರೆ ಪಾಪಕರವು. ಶೂದ್ರನು ಬಿಲ್ಲು ಬಾಣಗಳನ್ನು ಹಿಡಿ

ವರೆ ಅವನ ಹಸ್ತವನ್ನು ಛೇದಿಸತಕ್ಕದ್ದು. ವೇದಗಳನ್ನೋದಿದರೆ ನಾಲಿಗೆಯನ್ನು ಕತ್ತರಿಸಬೇಕು. ಕೇಳಿದರೆ ಕಿವಿಗಳಲ್ಲಿ ಕಾವ ಸೀಸವನ್ನು ಹುಯ್ಯಬೇಕು. ಈ ರೀತಿ ಯಾವುದೊಂದು ವರ್ಣಕ್ಕೆ ಸೇರಿದವನು ತನ್ನ ಕುಲಕ್ರಮಾನುಗತ ವೃತ್ತಿಯನ್ನೇ ಅವಲಂಬಿಸಬೇಕಾಗಲಿ ಬೇರೊಂದು ವೃತ್ತಿಗೆ ಕೈಹಾಕಬಾರದು. ಇಂಥಾ ಸಂಕುಚಿತ ಮಾರ್ಗಕ್ಕೆ ವೀರಶೈವ ಸಮಾಜವನ್ನೆಳೆದುಕೊಂಡು ಹೋಗಲು ಪ್ರಯತ್ನಿಸುವವರು ವೀರಶೈವ ಸಮಾಜ ಹಿತಚಿಂತಕರೆಂದು ಹೇಗೆ ಹೇಳಬೇಕು?

ವರ್ಣಾಶ್ರಮ ಧರ್ಮದ ಮಬ್ಬಿನಿಂದ ಅಂಧರಾದವರು ಮತ್ತೊಂದು ಭ್ರಮಾತ್ಮಕ ಕಲ್ಪನೆಗೆ ಒಳಗಾಗಿರುವರು. ಅದಾವುದೆಂದರೆ:— ವೀರಶೈವರಲ್ಲಿ ನಾಲ್ಕು ಆಶ್ರಮಗಳಿರುವವೆಂದೂ ಆಯಾ ಆಶ್ರಮಕ್ಕೆ ಸೇರಿದವರು ಆಯಾ ಆಶ್ರಮ ಧರ್ಮಗಳನ್ನತಿಕ್ರಮಿಸಬಾರದೆಂದೂ ಸಾರುತ್ತಾ ಶ್ರೀ ನಿರಂಜನ ವಿರಕ್ತಸ್ವಾಮಿಗಳಿಗೆ ಸನ್ಯಾಸಾಶ್ರಮದ ಧರ್ಮವು ಅವಲಂಬನೀಯವೆಂದೂ ಸನ್ಯಾಸಾಶ್ರಮ ಧರ್ಮದಂತೆ ನಡೆಯದ ವಿರಕ್ತರು ಧರ್ಮಬಾಹಿರರೆಂದೂ ಮುಂತಾಗಿ ಮನಬಂದಂತೆ ಬರೆಯುತ್ತಿರುವರು. ಸ್ಮೃತಿಗಳಲ್ಲಿ ಮತ್ತು ಮಹಾಭಾರತದ ಶಾಂತಿಪರ್ವದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಸನ್ಯಾಸಾಶ್ರಮವೇ ಬೇರೆ, ವೀರಶೈವಾಗಮೋಕ್ತವಾದ ನಿರಂಜನ ಧರ್ಮವೇ ಬೇರೆ. ವೇದಮಂತ್ರೋಚ್ಚಾರಣೆಯಿಂದ ಸನ್ಯಾಸತ್ವವು ಬರುವುದು. ಅಂದಿನಿಂದ ಆತ್ಮನಿಗೆ ಯಾವ ವಿಧಿನಿಷೇಧಗಳೂ ಇರುವುದಿಲ್ಲ. ಯಾವ ನಿತ್ಯನೈಮಿತ್ತಿಕ ಕರ್ಮಗಳೂ ಇರುವುದಿಲ್ಲ. ಯಾವ ವಿಧವಾದ ಪೂಜಾಕರ್ಮವೂ ಇರುವುದಿಲ್ಲ. ಯಾವ ವಿಧವಾದ ಬಂಧನವೂ ಇರುವುದಿಲ್ಲ. ಅವನು ಧರ್ಮದ ಬಾಹಿರ ಚಿಹ್ನೆಯಾದ ಜನಿವಾರವನ್ನು ತೆಗೆದುಹಾಕಿ ಬಿಡುವನು. ಆದರೆ ವೀರಶೈವ ವಿರಕ್ತ ಮೂರ್ತಿಗೆ ಈ ವಿಧವಾದ ಸ್ವಾತಂತ್ರ್ಯವಿರುವುದಿಲ್ಲ. ಶಿವಲಿಂಗಧಾರಣೆ ಮತ್ತು ಶಿವಲಿಂಗಾರ್ಚನೆಯ ವಿಷಯಗಳಲ್ಲಿ ಓರ್ವ ಸಾಧಾರಣ ಭಕ್ತನಿಗೆ ಎಷ್ಟು ಕಟ್ಟುಗಳಿರುವವೋ ಅಷ್ಟು ಕಟ್ಟುಗಳಿಗೆಲ್ಲಾ ಒಳಪಟ್ಟವನಾಗಿರುತ್ತಾನೆ. ಅಂತರಾತ್ಮ ಪೂಜೆಯೊಂದು ಸಾಕೆಂದು ಸ್ಥೂಲಶರೀರದ ಮೇಲಿರುವ ಇಷ್ಟಲಿಂಗವನ್ನು ಪರಿತ್ಯಜಿಸುವ ಹಕ್ಕು ಆತನಿಗೆ ಇರುವುದಿಲ್ಲ. ಸನ್ಯಾಸಾಶ್ರಮವನ್ನು ಸ್ವೀಕರಿಸುವವನು ಸಾಧಾರಣವಾಗಿ ಮೊದಲನೆ ಮೂರು ಆಶ್ರಮಗಳನ್ನು ದಾಟಿದವನೇ ಇರುತ್ತಾನೆ. ವಿರತಿಮಾರ್ಗವು ಆಗಮ ಧರ್ಮದ ಮುಖ್ಯ ತಳಹದಿಯಾಗಿದ್ದು ನಾನೆಂಬು

ವನ್ನು ಅಳಿದು ಶಿವತತ್ತ್ವದಲ್ಲಿ ಲೀನವಾಗುವುದೇ ಇವರ ಹೆಗ್ಗುರುತಾಗಿದೆ. ಅಂದರೆ ಯಾವಕಾರ್ಯವನ್ನಾಚರಿಸಿದರೂ ಶಿವಾರ್ಪಣೆ ಬುದ್ಧಿಯಿಂದ ಮಾಡಬೇಕು. ಯಾವ ಇಂದ್ರಿಯದ ಮೂಲಕ ಯಾವ ಭೋಗವನ್ನನುಭವಿಸಿದರೂ ಶಿವಾರ್ಪಣೆ ಬುದ್ಧಿಯಿಂದಲೇ ಅನುಭವಿಸಬೇಕು. ಈ ದೃಷ್ಟಿಯಿಂದ ನೋಡಿದರೆ ಪ್ರತಿಯೊಬ್ಬ ನಿಜವಾದ ವೀರಶೈವನು ವಿರಕ್ತನಿರುತ್ತಾನೆ ಮತ್ತು ನಟ್ಟಿಲ ಬ್ರಹ್ಮಿಯಿರುತ್ತಾನೆ. ವೀರಶೈವರಲ್ಲಿ ಧಾರ್ಮಿಕ ವಿಷಯದಲ್ಲಿ ಎಲ್ಲಾ ಆಶ್ರಮದವರಿಗೂ ಒಂದೇ ಒಂದು ತತ್ತ್ವವು ಮುಖ್ಯವಾಗಿರುತ್ತದೆ. ಅದೇ ವಿರತಿಯು. ಅಂದರೆ ನಾನೆಂಬುದರಲ್ಲಿ ಅನುರಕ್ತನಾಗದೇ ಇರುವುದು.

ಹೀಗೆ ಆಗಮೋಕ್ತ ವೀರಶೈವ ಧರ್ಮಕ್ಕೂ ಸ್ಮೃತ್ಯುಕ್ತ ವರ್ಣಾಶ್ರಮ ಧರ್ಮಕ್ಕೂ ಮೂಲತತ್ವದಲ್ಲೇ ಭೇದವಿದ್ದು ವೀರಶೈವ ಸಮಾಜದ ಸಂಘಟನೆಯೇ ಬೇರೆ ವರ್ಣಾಶ್ರಮಧರ್ಮದ ಸಂಘಟನೆಯೇ ಬೇರೆ ಇರುತ್ತವೆ. ಆವೆರಡನ್ನು ಮಿಳಿತಗೊಳಿಸುವದೆಂದರೆ ವೀರಶೈವರ ನಿಜವಾದ ಸ್ವರೂಪವನ್ನು ಬದಲಾಯಿಸಿದಂತಾಗುತ್ತದೆ. ಆಗಮ ಧರ್ಮಸಂಸ್ಥಾಪಕರ ಮೂಲೋದ್ದೇಶವನ್ನೇ ಮರೆತಂತಾಗುತ್ತದೆ. ಆದ ಕಾರಣ ಸಮಾಜ ಬಾಂಧವರೇ, ಇದು ವರಿವಿಗೂ ಅವಿಚ್ಛಿನ್ನವಾಗಿ ನಡಿಸಿಕೊಂಡು ಬರುವ ನಿಮ್ಮ ವ್ಯಕ್ತಿಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಡಿರಿ. ಕಂಡವರನ್ನು ಕಂಡು ಕೌದಿ ಹೊದೆಯುವ ಹವ್ಯಾಸಕ್ಕೆ ಬೀಳಬೇಡಿರಿ. ಬರೀ ಶಬ್ದ ಮೋಹಕ್ಕೆ ಬೀಳಬೇಡಿರಿ. ನಿಜವಾದ ವಸ್ತುವನ್ನು ಬಿಟ್ಟು ಅದರ ನೆರಳನ್ನು ಹಿಡಿಯಲು ಹೋಗಬೇಡಿರಿ.

ಆಧುನಿಕ ವಾತಾವರಣವು ವರ್ಣ ಭೇದ ತತ್ವಕ್ಕೆ ತೀರ ವಿರುದ್ಧವಿರುತ್ತದೆ. ವರ್ಣ ಭೇದದಿಂದ ಹಿಂದೂ ದೇಶಕ್ಕೆ ಎಲ್ಲಾ ವಿಧದಿಂದಲೂ ಯಾವ ರೀತಿ ಅನಿಷ್ಟವೊದಗಿರುವದೆಂಬುದು ಸುಪ್ರಸಿದ್ಧ ಪಂಡಿತರಾದ ಶ್ರೀ ರಾಮಾನಂದ ಚಟರ್ಜಿಯವರು ವರ್ಣ ಭೇದ ನಿರೋಧಕ ಸಭೆಯಲ್ಲಿ ಅಧ್ಯಕ್ಷಸ್ಥಾನದಲ್ಲಿ ಮಾಡಿದ ಭಾಷಣದಿಂದ ಸುವ್ಯಕ್ತವಾಗುತ್ತದೆ. ಬರೀ ಜಾತಿಗೇನೆ ಪ್ರಾಧಾನ್ಯವನ್ನು ಕೊಡುತ್ತಿದ್ದ ಯುಗವು ಹೋಯಿತು. ಈನ ಯುಗದಲ್ಲಿ ಗುಣಕರ್ಮಗಳಿಗೆ ಪ್ರಾಧಾನ್ಯವು. ಸಾತ್ವಿಕಗುಣವುಳ್ಳವನೇ ಅಗ್ರವರ್ಣಜನು. ಹೀಗಿದ್ದು ಸ್ವಾರ್ಥ ಸಾಧನೆಗಾಗಿ ಇಲ್ಲಸಲ್ಲದ

ಭೇದಗಳನ್ನು ಹುಟ್ಟಿಸುತ್ತಾ ಹೋಗುವದು ಸಮಾಜ ಘಾತಕ ಸಾಧನೆಯು. ಎಲ್ಲರೂ ಪ್ರಗತಿ ಮಾರ್ಗದಲ್ಲಿ ಮುಂದೊರೆಯುತ್ತಿದ್ದರೆ ನಾವು ಮುಂದೊರೆಯುವದು ಒತ್ತಟ್ಟಿಗಿರಲಿ ಅವನತಿಮಾರ್ಗವನ್ನು ಹಿಡಿಯಲಾರಂಭಿಸಿರುವೆವು. ಮುಖ್ಯವಾಗಿ ನಮ್ಮ ಸಮಾಜದಲ್ಲಿ ಮಾಹೇಶ್ವರ ವರ್ಗಕ್ಕೆ ಸೇರಿದವರು ಇತ್ತ ಕಡೆಗೆ ಹೆಚ್ಚು ಲಕ್ಷ ಕೊಡತಕ್ಕದ್ದು ಅವಶ್ಯಕವಿರುತ್ತದೆ. ಮೇಲುಕೀಳೆಂಬ ಭಾವನೆಗಳನ್ನು ಹುಟ್ಟಿಸಿ ಸಮಾಜವಲ್ಲಿ ಅನೈಕ್ಯಮತ್ಯವನ್ನು ಹೆಚ್ಚಿಸುವುದರಿಂದ ತಮಗಾದರೂ ಬರುವ ಲಾಭವೇನು? ಇದರಿಂದ ತಮಗೇನೆ ಮುಂದೆ- ಕೇಡುಂಟಾಗುವುದು. ಮತ್ತು ಅಚಿರಕಾಲದಲ್ಲಿ ಇಂಥಾ ತತ್ತ್ವವನ್ನವಲಂಬಿಸುವವರು ವೀರಶೈವ ಸಮಾಜದಿಂದಲೇ ಬಹಿಷ್ಕರಿಸಲ್ಪಡುವ ಸಂಭವ ಉಂಟಾಗದೇ ಇರಲಾರದು. ಬೇರೆ ತಮ್ಮದೊಂದೇ ಪಂಥವು ಎರ್ಪಡಿಸಲ್ಪಟ್ಟು ಸ್ವಲ್ಪಕಾಲದಲ್ಲೇ ಅದು ಕಾಲಪುರುಷನ ದವಡೆಯಲ್ಲಿ ನುರಿತು ಹೋಗಬಹುದು. ಅಲ್ಪ ಸಂಖ್ಯಾಕವಾದ ವೀರಶೈವಸಮಾಜಕ್ಕೆ ಇಂಥಾ ದುಃಸ್ಥಿತಿಯು ಸಂಭವಿಸಲಾರದೆಂದು ಲೇಖಕನ ಆಶಯವು.

# ವೀರಶೈವ ವರ್ಣಭೇದ ವಿದಾರಿಕಾ.

ಲೇಖಾಂಕ. ೩.

ಲೇಖಕಃ— ರಾ॥ ರಾ॥ ಸಿದ್ಧರಾಮಪ್ಪ ದುಂಡಪ್ಪ ಪಾವಟೆ· ಬಿ. ಎ. ಎಲ್.
ಎಲ್. ಬಿ ಹುಬ್ಬಳ್ಳಿ.



ಈ ವರೆಗೆ ಮನ್ವಾದಿಸ್ಮೃತಿ ಶಾಸ್ತ್ರಗಳ ಯಥಾರ್ಥ ತಾತ್ಪರ್ಯವನ್ನು ಪರಿಶೀಲಿಸಿದರೆ, ಆ ಸ್ಮೃತಿಗಳು ಜಾತಿಯಿಂದಲೆ ವರ್ಣವನ್ನು ಹೇಳುವಲ್ಲಿ ಉದ್ಯುಕ್ತವಾಗಿದ್ದರೂ, ಗುಣಕರ್ಮಾನುಸಾರವಾಗಿ ವರ್ಣವೆಂಬುವ ತತ್ವವನ್ನು ಮೀರಿ ಜಾತಿ ಪ್ರಾಧಾನ್ಯವನ್ನು ಸ್ಥಾಪಿಸಲು ಸಮರ್ಥವಾಗಿಲ್ಲವೆಂಬುದನ್ನು ತೋರಿಸಿದೆನು. ಗುಣಕರ್ಮಾನುರೂಪದಿಂದ ಬಂದ ವರ್ಣಭೇದವು ವೀರಶೈವದಲ್ಲಿ ಇಲ್ಲವೆಂಬುದನ್ನು ಈಗ ತೋರಿಸುವದು ಮುಂದಿನ ಸಿದ್ಧಾಂತವಾಗಿರುವದು.

ವೀರಶೈವವೆಂದರೆ- ಲಿಂಗಾಯತವೆಂದರೆ- ಅಥವಾ ಲಿಂಗಿಯೆಂದರೆ- ಅಪ್ರಾಕೃತ ಧರ್ಮವೆಂದು ಸರ್ವ ವೇದಾಗಮಗಳು ಸಾರುತ್ತಿರುವವು. ಅಪ್ರಾಕೃತವೆಂದರೇನು? ಪ್ರಕೃತಿಯನ್ನು ಮತ್ತು ಪ್ರಕೃತಿಯ ಕಾರ್ಯಗಳಾದ ಗುಣಾದಿ ಪೃಥಿವ್ಯಂತಗಳಾದ ತತ್ವಗಳನ್ನು ಮೀರಿದ ಧರ್ಮವೆಂಬರ್ಥವು. ಆತ್ಮನು ಪ್ರಕೃತಿಯಲ್ಲಿಯೂ ಪ್ರಕೃತಿಯ ಕಾರ್ಯಗಳಾದ ಗುಣಾದಿಗಳಲ್ಲಿಯೂ ನಾನು ನನ್ನದೆಂಬ ಅಭಿಮಾನದಿಂದ ಕೂಡಿ, ವಿಷಯೋಪಭೋಗದಲ್ಲಿ ಅಥವಾ ಸ್ವರ್ಗಭೋಗದಲ್ಲಿ ಆಸಕ್ತನಾಗಿರುವುದೇ ಪ್ರಾಕೃತತ್ವವು. ಇಂತಹ ಸ್ವರ್ಗ ಸುಖವನ್ನು ಸ್ಮೃತ್ಯಾದಿ ಶಾಸ್ತ್ರ ಕ್ರಮದಂತೆ ಕರ್ಮಗಳನ್ನು ಮಾಡುತ್ತ ಹೊಂದಬೇಕೆಂಬುದು ಪ್ರಾಕೃತ ಧರ್ಮಾನುಷ್ಠಾನವು. ಇದೇ ಪೈತಾಮಹ ಧರ್ಮವು.

ಇದನ್ನು ತ್ಯಜಿಸಿ·ತನ್ನ ಸ್ವರೂಪವನ್ನು ವಿಚಾರಿಸುತ್ತ ಅಖಂಡ ಪರಶಿವ ತತ್ವವನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಆ ಪರಶಿವ ತತ್ವವೇ ಸಚ್ಚಿದಾನಂದ ಸ್ವರೂಪವಾಗಿದ್ದು, ಅದರಲ್ಲಿ ಸ್ವಾತ್ಮತತ್ವವನ್ನು ಅಡಗಿಸುವದು ಅಪ್ರಾಕೃತ ಧರ್ಮಾನುಷ್ಠಾನವಾಗಿದೆ. ಇದನ್ನೇ ಶಿವಾಗಮಗಳು ಮತ್ತು ಉಪನಿಷತ್ತುಗಳು ಬೋಧಿಸುತ್ತವೆ.

ಈ ಅಪ್ರಾಕೃತ ಧರ್ಮವು ಆಯಾ ಜೀವಾತ್ಮನ ಅಧಿಕಾರ ಯೋಗ್ಯತಾನುಸಾರವಾಗಿ ಅನಾದಿ ಶೈವಾದಿ ವೀರಶೈವಾಂತವಾದ ಸಪ್ತ ವಿಧಶೈವಸ್ವರೂಪವನ್ನೂ ಸಾಮಾನ್ಯಾದಿ ವೀರಶೈವಾಂತ ಚತುರ್ವಿಧ ಭೇದವನ್ನೂ ಒಳಗೊಂಡಿದೆ. ಅನಾದಿಶೈವವನ್ನು ಮೊದಲುಗೊಂಡು ಅಂತ್ಯಶೈವವೆಂದು ಸಪ್ತವಿಧಶೈವವನ್ನು ಸಹ ಆಗಮಗಳು ಕೆಲವೆಡೆಗಳಲ್ಲಿ ಹೇಳುತ್ತವೆ. ಈ ಏಳು ಶೈವಗಳಿಗೂ ಉತ್ತರವಾಗಿ ಎಂಟನೆಯದು ವೀರಶೈವವೆಂದು ಸಾರುವುವು. ಈ ವಿಭೇದಗಳನ್ನು ಸೂಕ್ಷ್ಮಾಗಮದ ೭ನೆಯ ಪಟಲದಲ್ಲಿಯೂ, ಪಾರಮೇಶ್ವರಾಗಮದ ಏಳನೆಯ ಪಟಲದಲ್ಲಿಯೂ, ವಾತೂಲಾಗಮದ ಹತ್ತನೆಯ ಪಟಲದಲ್ಲಿಯೂ ಕಾಣಬಹುದು.

ಇವುಗಳಲ್ಲಿ ಅನಾದಿಶೈವ, ಆದಿಶೈವ, ಅನುಶೈವ, ಮಹಾಶೈವ, ಯೋಗಶೈವ, ಜ್ಞಾನಶೈವ, ವೀರಶೈವವೆಂಬ ಸಪ್ತ ವಿಧ ಶೈವವು ಜೀವಾತ್ಮನ ಬುದ್ಧಿವಿಕಾಸದ ತಾರತಮ್ಯದಿಂದ ಉಂಟಾಗಿದೆಂದು ಪಾರಮೇಶ್ವರಾಗಮದ ತಾತ್ಪರ್ಯವು. ಅನಾದಿಶೈವ ಆದಿಶೈವ ಮಹಾಶೈವ ಅನುಶೈವ ಅವಾಂತರಶೈವ ಪ್ರವರಶೈವ ಅಂತ್ಯಶೈವವೆಂಬ ಸಪ್ತಶೈವವು ಜಾತಿಭೇದಮೂಲವಾದುದೆಂದು ಸೂಕ್ಷ್ಮಾಗಮದ ಸಾರವು. ಈ ಎರಡು ಪ್ರಕಾರದ ಸಪ್ತವಿಧಶೈವದಲ್ಲಿ ಅನಾದಿಶೈವ ಆದಿಶೈವ ಮಹಾಶೈವ ಅನುಶೈವವೆಂಬ ಶಬ್ದಗಳು ಒಂದೇ ವಿಧವಾಗಿ ಕಂಡರೂ ಅವುಗಳ ಅರ್ಥಗಳು ಅತಿ ಭಿನ್ನವಾಗಿವೆಂಬುವನ್ನು ಮರೆಯಕೂಡದು. ನಿಷ್ಠಾಭೇದದಿಂದ ತಾರತಮ್ಯವನು ಹೇಳಿದ ಪಾರಮೇಶ್ವರಾಗಮದ ವಾಕ್ಯದಲ್ಲಿ ಕರ್ಮಪ್ರಧಾನನಾದವನೇ ಅನಾದಿಶೈವನೆಂತಲೂ, ಸ್ಮರಣಶೀಲನಾದವನು ಆದಿಶೈವನೆಂತಲೂ, ಮನನವೇ ಮುಖ್ಯಸಾಧನನಾದವನು ಅನುಶೈವನೆಂತಲೂ, ನಿಶ್ಚಯವೇ ಪರಮಗತಿಯಾದವನು ಮಹಾದೇವನೆಂತಲೂ, ಹೇಳಿರುವುದು. ಯೋಗಶೈವನೆಂದರೆ, ಅಷ್ಟಾಂಗಯೋಗ ಪ್ರಧಾನನಾದವನು. ಜ್ಞಾನಶೈವನೆಂದರೆ ಜ್ಞಾನಭಾವನಾ ಪ್ರಧಾನನಾದವನು ಎಂದು ಹೇಳಿಯದೆ. ವೀರಶೈವನೆಂದರೆ ಜ್ಞಾನಯೋಗಗಳಿಂದ ಯುಕ್ತನೆಂಬ ಅರ್ಥ. ಈ ಜ್ಞಾನಯೋಗಗಳಿಗೆ ಮಹತ್ತಮವಾದ ಭಕ್ತಿಯು ಪ್ರಾಣವಾದುದರಿಂದ, ಭಕ್ತಿಯಲ್ಲಿ ವೀರಶೈವನೆಂದು ಹೇಳಿಯದೆ. (೭ ನೆಯ ಪಟಲದ ೩೪ ರಿಂದ ೩೯ ಶ್ಲೋಕಗಳನ್ನು ನೋಡಿರಿ)

ಸೂಕ್ಷ್ಮಾಗಮದಲ್ಲಿ ವಿವರಿಸಿದ ಸಪ್ತವಿಧಶೈವವಿದು. ಅನಾದಿಶೈವನೆಂದರೆ ಶಿವನು. ಆದಿಶೈವರೆಂದರೆ-- ಕೌಶಿಕಕಾಶ್ಯಪಭರದ್ವಾಜಅತ್ರಿಗೌತಮರು.

ಮಹಾಶೈವರೆಂದರೆ-- ಶೈವದೀಕ್ಷೋಕ್ತಮಾರ್ಗದಿಂದ ದೀಕ್ಷಿತರಾದ ಬ್ರಾಹ್ಮಣರು. ಅನುಶೈವರೆಂದರೆ-- ಶಿವದೀಕ್ಷಿತರಾದ ಕ್ಷತ್ರಿಯರು. ಶಿವದೀಕ್ಷೆಯನ್ನು ಹೊಂದಿದ ವೈಶ್ಯರೇ ಅವಾಂತರಶೈವರು. ಶಿವದೀಕ್ಷಾ ಸಂಸ್ಕೃತರಾದ ಶೂದ್ರರು ಪ್ರವರಶೈವರು. ಅಂತ್ಯ ಜಾತಿಗಳು ಶಿವದೀಕ್ಷೆಯನ್ನು ಹೊಂದಿದರೆ ಅವರು ಅಂತ್ಯಶೈವರು. ಇವು ಜಾತ್ಯನುಕ್ರಮದಿಂದ ಹೇಳಿದುವು. ( ೭ ನೆಯ ಪಟಲದ ೫ ರಿಂದ ೧೫ ಶ್ಲೋಕಗಳನ್ನು ನೋಡಿರಿ. )

ಆಚಾರಭೇದದಿಂದ ಚತುರ್ವಿಧಶೈವವು ಪಾರಮೇಶ್ವರದಲ್ಲಿಯೂ ವಾತೂಲ— ಸೂಕ್ಷ್ಮಾಗಮಗಳಲ್ಲಿಯೂ ಎರಡುವಿಧವಾಗಿ ಹೇಳಲ್ಪಟ್ಟಿದೆ. ಶುದ್ಧ-ಮಿಶ್ರ-ಮಾರ್ಗ-ವೀರ ಅವಾಂತರವೆಂಬ ಪಂಚವಿಧಶೈವವನ್ನು ಪಾರಮೇಶ್ವರದ ೧೭ ನೇ ಪಟಲದಲ್ಲಿ ಕಾಣಬಹುದು. ಶುದ್ಧರೆಂದರೆ ಶಿಖಾಯಜ್ಞೋಪವೀತಾದಿಗಳನ್ನು ಧರಿಸಿದ ವೀರಶೈವ ಮಾರ್ಗಸ್ಥರಾದ (ವೀರಶೈವರಲ್ಲ. ವೀರಶೈವದ ಕೆಲವಂಶವನ್ನು ಅನುಕರಿಸುವರು) ಬ್ರಾಹ್ಮಣರು. ಕ್ಷತ್ರಿಯ ವೈಶ್ಯ ಶೂದ್ರರು ಇದರಂತೆ ವೀರಶೈವಾನುಯಾಯಿಗಳಾದರೆ ಅವರು ಮಿಶ್ರ ಶೈವರು. ಲಿಂಗಧಾರಿಗಳಾದಗ್ಗೂ ಕ್ಷತ್ರಿಯರು ಇನ್ನುಳಿದವರು ಎರಡು ದೈವಗಳನ್ನು ಉಪಾಸಿಸುತ್ತಿದ್ದರೆ ಅವರು ಮಾರ್ಗಶೈವರು ಇವರು ವೀರಶೈವರನ್ನು ಅನುವರ್ತಿಸುವರು. ಇನ್ನುಳಿದವರು ಅವಾಂತರಶೈವರು. ಈ ಎಲ್ಲ ಶೈವಗಳಲ್ಲಿಯೂ ವೀರಶೈವವೇ ಉತ್ತಮೋತ್ತಮವಾದುದು.

ಸಾಮನ್ಯ ಮಿಶ್ರ ಶುದ್ಧ ವೀರವೆಂಬ ಚತುರ್ವಿಧಶೈವವು ಆಚಾರಭೇದದಿಂದಾಗಿದೆ. ಸಾಮಾನ್ಯನೆಂದರೆ ಭಸ್ಮರುದ್ರಾಕ್ಷಿ ಶಿವಲಿಂಗಗಳಲ್ಲಿ ಭಕ್ತಿಯುಳ್ಳವನಾಗಿ ಶಿವಲಿಂಗವನ್ನು ಕಂಡಾಗ ಪೂಜಾನಮಸ್ಕಾರಾದಿಗಳನ್ನು ಮಾಡ ವನು. ಶಿವಕೀರ್ತನದಲ್ಲಿಯೂ ಶಿವಭಕ್ತರಲ್ಲಿಯೂ ಪ್ರೀತಿಯುಳ್ಳವನು.

ವೈಷ್ಣವ ಶಾಕ್ತ ಗಾಣಪತ್ಯ ಮೊದಲಾದ ದೇವತೆಗಳನ್ನೂ ಶಿವನನ್ನೂ ಪೂಜಿಸುತ್ತಿರುವನಾಗಿ ಆ ಎಲ್ಲರಲ್ಲಿ ಶಿವನೇ ಅಧಿಕನೆಂದು ಭಾವಿಸಿ ಲಿಂಗದಲ್ಲಿಯೇ ಸರ್ವವನ್ನು ಪೂಜಿಸುವವನು ಮಿಶ್ರ ಶೈವನು. ಕಾಮಿಕಾದಿ ಇಪ್ಪತ್ತೆಂಟು ಶಿವಾಗಮಗಳಲ್ಲಿ ಕೃತಾಭ್ಯಾಸನಾಗಿ ಶಿವವ್ರತಿಯಾಗಿ ಕರ್ಷಣಾದಿ ಪ್ರತಿಷ್ಠಾಂತವಾದ ವಿಧಿಗಳನ್ನು ಬಲ್ಲವನಾಗಿ ಗುರು ಕೊಟ್ಟ ಲಿಂಗವನ್ನು ಸಿಂಹಾಸನದಲ್ಲಿ ಪೂಜಿಸುತ್ತ ಗ್ರಾಮಾದಿಯಲ್ಲಿ ಸ್ಥಾಪಿತವಾದ ಲಿಂಗವನ್ನು ಪರಾರ್ಥವಾಗಿ ಪೂಜಿಸುವ ಅಧಿಕಾರವುಳ್ಳವನಾಗಿ ಮಂತ್ರಲಿಂಗ ಶರೀರನಾದವನು ಶುದ್ಧಶೈವನು.

ಈ ಜಗತ್ತಿನಲ್ಲಿ ಇವನೊಬ್ಬನೆ ಎಂದು ಹೇಳಿಸಿಕೊಳ್ಳುವ ( ವಿಶಿಷ್ಟ ಈರ್ಯತೆ ವೀರಃ) ಶಿವನೊಡನೆ ನಿತ್ಯಸಂಬಂಧವುಳ್ಳ ಶಿವಾರ್ಥವಾಗಿ ಜೀವ ವನ್ನರ್ಪಿಸಿದ ಶೈವನೇ ವೀರಶೈವನು. (ವಾತುಲಾಗಮ ೧೦ ನೆ ಪಟಲ ನೋಡು) ಸೂಕ್ಷ್ಮಾಗಮದ ೭ ನೆ ಪಟಲದಲ್ಲಿಯಾದರೂ ಇದೇ ಮಾತನ್ನು ಹೇಳಿದೆ.

ಈ ಅಷ್ಟವಿಧ ಸಪ್ತವಿಧ ಪಂಚವಿಧ ಚತುರ್ವಿಧ ಶೈವದಲ್ಲಿ ವೀರಶೈವವೇ ಅತ್ಯುತ್ತಮವಾದುದು. ನ ವೀರಶೈವ ಸದೃಶಂ ಮತಮಸ್ತಿ ಜಗತ್ತ್ರಯೇ । ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಂ ॥ (ಪಾ ೧-೪೦) ಆದುದರಿಂದ ಉಳಿದ ಶೈವಗಳು ವೀರಶೈವಕ್ಕೆ ಸೋಪಾನವಾಗಿವೆ. [ಏವಂ ಕ್ರಮೇಣ ಸೋಪಾನಂ ಮತಭೇದಂ ಸಮಾಶ್ರಯೇತ್ ಪಾ. ೭. ೨೮ ] ವೀರಶೈವದ ಹಿಂದಿನ ಸೋಪಾನಗಳಾದ ಹಿಂದಿನ ಶೈವಗಳು ಅಪ್ರಾಕೃತಸ್ಥಿತಿಯ ಸಾಧನಗಳಾಗಿ ಕ್ರಮೇಣ ಪ್ರಾಕೃತ ಮಾಲಿನ್ಯವನ್ನು ಸೋಸುತ್ತ ಹೋಗುತ್ತವೆ. ವೀರಶೈವವು ಶುದ್ಧ ಅಪ್ರಾಕೃತವು. ಸಾಧನಗಳಾದ ಇತರ ಶೈವಗಳು ಪ್ರಾಕೃತ ಭಾವವನ್ನು ಕ್ರಮೇಣ ಮೀರುತ್ತ ಬರುವದರಿಂದ ಅವುಗಳನ್ನಾದರೂ ಅಪ್ರಾಕೃತ ಧರ್ಮಗಳೆಂದು ಕರೆಯಬಹುದು.

ವಾಯವೀಯ ಸಂಹಿತೆಯ ಉತ್ತರ ಭಾಗದ ೧೧ ನೆಯ ಅಧ್ಯಾಯದಲ್ಲಿ ಪರಮೇಶ್ವರನ ಆಜ್ಞೆಯಿಂದ ಬ್ರಹ್ಮನು ಶೃತಿಯಲ್ಲಿ ಹೇಳಿದ ಧರ್ಮವನ್ನು ನೆನಿಸಿ ಸ್ಮೃತಿರೂಪವಾದ ಪೈತಾಮಹ ಧರ್ಮವನ್ನು ಹೇಳಿದನೆಂತಲೂ, ಆ ಧರ್ಮವನ್ನು ಅನುಷ್ಠಿಸುವದರಿಂದ ಚತುರ್ವರ್ಣಗಳು ಸ್ವರ್ಗವನ್ನು ಪಡೆಯುವರೆಂತಲೂ ಹೇಳಿರುವದು. ಈ ಧರ್ಮವು ಅನೇಕ ದ್ರವ್ಯ ಕರ್ಮಗಳಿಂದ ಸಾಧ್ಯವಾಗಿರುವದರಿಂದ ಕ್ಲೇಶಕರವಾಗಿದೆ. ಆದರೆ ಶಿವಶ್ರದ್ಧೆಯ ಪ್ರಾಪ್ತಿಗಾಗಿ ಆ ಧರ್ಮವನ್ನು ಅನುಷ್ಠಿಸಿದರೆ, ದುರ್ಲಭವಾದ ಆ ಶ್ರದ್ಧೆಯು ದೊರಕಿ ಶಿವಶಾಸ್ತ್ರದಲ್ಲಿ ಮನುಷ್ಯನ ಪ್ರವೃತ್ತಿಯಾಗುವದು ಅಂಥ ಮನುಷ್ಯರ ಧರ್ಮ ಕಾಮಾರ್ಥ ಮೋಕ್ಷಗಳು ಸುಲಭಸಾಧ್ಯವಾಗಬೇಕೆಂದು ಶಿವನು ಮತ್ತೊಂದು ವಿಧದಿಂದ ವರ್ಣಾಶ್ರಮಗಳನ್ನು ಹೇಳಿರುವನೆಂದು ವಿವರಿಸಿಯದೆ.

ತೇಷಾಂ ಸುಖೇನ ಮಾರ್ಗೇಣ ಧರ್ಮಕಾಮಾರ್ಥ ಮುಕ್ತಯೆ ।
ವರ್ಣಾಶ್ರಮ ಸಮಾಚಾರೋಮಯಾ ಭೂಯಃ ಪ್ರಕಲ್ಪಿತಃ॥

ಇಲ್ಲಿ ಭೂಯಃ ಅನ್ನುವ ಶಬ್ದಕ್ಕೆ ಬಹಳ ವಿಧವಾಗಿ ಎಂತಲೂ ಪುನಃ ಎಂತಲೂ ಅರ್ಥವನ್ನು ಮಾಡಬೇಕು; ಅಂದರೆ ಮಾನವರು ಕ್ರಮೇಣ ವೀರಶೈವಕ್ಕೆ ಅರ್ಹರಾಗಬೇಕೆಂದು ಶಿವನು, ಬ್ರಹ್ಮನು ಹೇಳಿದ ಧರ್ಮವನ್ನು ಅಳುಕಿಸಿ ಪುನಃ ನಾನಾ ಪ್ರಕಾರವಾದ (ಬಹಳ ವಿಧದ) ಶೈವಭೇದಗಳನ್ನು ಹೇಳಿದನೆಂಬರ್ಥ. ಈ ಶಿವೋಕ್ತ ಧರ್ಮಗಳು ಮೊದ ಮೊದಲು ಪೈತಾಮಹ ಧರ್ಮವನ್ನು ಅಲ್ಪಾಲ್ಪವಾಗಿ ಕಡಿಮೆ ಮಾಡುತ್ತ ಕೊನೆಯು ವೀರಶೈವದಲ್ಲಿ ಶುದ್ಧ ಶಿವಧರ್ಮವನ್ನೇ ಭೋದಿಸುವವು. ಆದುದರಿಂದ ವಾಯವೀಯದಲ್ಲಿ,

ವರ್ಣಾಶ್ರಮಕೃತೈರ್ಧರ್ಮೈಃ ವಿಪರೀತಂಕ್ವಚಿತ್ಸಮಮ್

(ಯಿ. ಬಾ. ೯ನೆ ಅಧ್ಯಾಯ)

ಎಂದು ಹೇಳಿಯದೆ. ಶಿವೋಕ್ತ ಧರ್ಮವು ಸಿದ್ಧಾಂತದಲ್ಲಿ ಪೈತಾಮಹಧರ್ಮಕ್ಕೆ ವಿರುದ್ಧವಾಗಿರುವದರಿಂದ ವರ್ಣಾಶ್ರಮ ಕೃತೈರ್ಧರ್ಮೈಃ ವಿಪರೀತಂ ಎಂತಲೂ ಪೂರ್ವಶೈವಗಳಲ್ಲಿ ಕೆಲವೆಡೆಗಳಲ್ಲಿ ಪೈತಾಮಹಧರ್ಮವನ್ನು ಕ್ಷಮಿಸುತ್ತಿರುವದರಿಂದ ಕ್ವಚಿತ್ಸಮಂ ಎಂತಲೂ ಹೇಳಿಯದೆ. (ಕ್ವಚಿತ್ ಒಂದೆಡೆಯಲ್ಲಿ ಅಂದರೆ ವೀರಶೈವಸಾಧನ ಭೂಮಿಕೆಯಲ್ಲಿ ಎಂಬರ್ಥ)

ಈ ಸಾಧನ ಭೂಮಿಕೆಗಳ ವಿವರವು ಪಾರಮೇಶ್ವರಾಗಮದ ೧೭ನೆಯ ಪಟಲದಲ್ಲಿ ಹೇಳಿದುದಾಗಿದೆ. ಯಾವ ಭೂಮಿಕೆಯಲ್ಲಿ ಇದ್ದವನೇ ಆಗಲಿ ಆ ಧರ್ಮಾನುಷ್ಠಾನದಿಂದಾದ ಶಿವಪ್ರಸಾದದಿಂದ ವೀರಶೈವ ದೀಕ್ಷೆಗೆ ಯೋಗ್ಯನಾದರೆ ಗುರುವು ಅವನನ್ನು ಪರೀಕ್ಷಿಸಿ ದೀಕ್ಷೆಯನ್ನು ಮಾಡಬೇಕು. ಹಾಗೆ ದೀಕ್ಷೆಯಾದ ಬಳಿಕ ಜಾತಿ ಭೇಧವಿಲ್ಲೆಂದು ಆಗಮಗಳ ಅನುಶಾಸನ ಉಂಟು. (ಸೂಕ್ಷ್ಮಾಗಮದ ೫ ನೆಯ ಪಟಲ ನೋಡಿರಿ.

"ನಾನಾ ವಿಧಾನಿ ಕಾಷ್ಠಾನಿ ವಹ್ನಿಯೋಗಾದ್ಯಥೈಕತಾಂ।
ತಥಾನೇಕವಿಧೋಮರ್ತ್ಯಾಃ ಗುರುತಶ್ಶಿವತಾಮಿಯುಃ ॥
ಕಾಂಚನಂ ರಜತಂ ತಾಮ್ರಂ ರಸಯೋಗಾತ್ಸುವರ್ಣತಾಂ।
ಯಥಾ ಶಿವಜ್ಞಾನ ರಸಾಚ್ಛೂದ್ರಾದಿಃ ಶಿವತಾಂ ವ್ರಜೇತ್
ಯಸ್ಯೈವಂ ಶಾಂಭವೀ ದೀಕ್ಷಾ ಸಂಜಾತಾ ಗುರುಕೃಪಾವಶಾತ್।
ಪೂರ್ವಜಾತ್ಯಾದಿಕಂ ತಸ್ಯ ನ ಸ್ಮರೇತ್ಪ್ರಾಕೃತಂ ಹಿ ತತ್॥

ಅಪ್ರಾಕೃತಸ್ಯ ಭಕ್ತಸ್ಯ ಗುರುಹಸ್ತಾಂಬುಜಾತ್॥
ಪುನರ್ಜಾತಸ್ಯಾತ್ಮಜನ್ಮ ಜಾತ್ಯಾದಿ ನ ಚ ಕಲ್ಪಯೇತ್॥

(ಇತ್ಯಾದಿಯಾಗಿ ೬೨ ರಿಂದ ೬೯ವರೆಗೆ ಶ್ಲೋಕಗಳನ್ನ ನೋಡಿರಿ)

ಪಾರಮೇಶ್ವರಾಗಮಕ್ಕೆ ಟೀಕಾಗ್ರಂಥವಾದ ವೀರಶೈವ ಧರ್ಮಶಿರೋಮಣಿಯ ೨ನೆಯ ಪರಿಚ್ಛೇದದ ೨೭-೨೮ನೆ ಶ್ಲೋಕಗಳಿವು.

ಶ್ರೀಲಿಂಗಧಾರಣ ಮಹಾ ವಿಭವೇನ ಸರ್ವೇ। ರುದ್ರಾ ಬಭೂವು ರತ ಯೇವ ನ ತಾರತಮ್ಯಂ॥ ಏತನ್ಮತೇ ಸಜನನೀಕ ಸುತಾ ಇವಸ್ಯು। ವೀರಾಃಪರಸ್ಪರಸಹೋದರಭಾವ ಭಾಜಃ॥

ಶ್ರೀವೀರಶೈವಮತವಿದ್ಗುರುದೀಕ್ಷಿತಾನಾಂ। ಜೀವತ್ವವರ್ಣನವಿಧೌ ಧೃಷಸಾಹಸಾನಾಂ॥ ಪುಂಸಾಂ ನ ಮೂಲಮಿಹವೇದ್ಮಿ ವದಾಮಿ ತತ್ವಂ। ಸಾಕ್ಷಾಚ್ಛಿವತ್ವಮಖಿಲ ಶೃತಿಶಾಸನೇನ॥

ಲಿಂಗಧಾರಣ ವಿಭವದಿಂದ ದೀಕ್ಷಿತರಾದ ವೀರಶೈವರೆಲ್ಲರು ಒಂದೇ ತಾಯಿಯ ಮಕ್ಕಳು. ಅವರೆಲ್ಲರು ರುದ್ರರು. ಅವರಲ್ಲಿ ಜಾತಿಭೇದ ತಾರತಮ್ಯವನ್ನ ಮಾಡಬಾರದೆಂಬುದೇ ಈ ಶ್ಲೋಕಗಳ ತಾತ್ಪರ್ಯವು.

ಸಿದ್ಧಾಂತಶಿಖಾಮಣಿಯಲ್ಲಿ ಸಂಸಾರಹೇಯಸ್ಥಲದ ೬೬ನೆಯ ಶ್ಲೋಕವಿದು.

ಭೂತ್ವಾಕರ್ಮವಶಾಜ್ಜಂತು ಬ್ರಾಹ್ಮಣಾದಿಷು ಜಾತಿಷು। ತಾಪತ್ರಯ ಮಹಾವಹ್ನಿ ಸಂತಾಪಾದ್ದಹ್ಯತೇ ಭೃಶಂ॥

ಎಂಬ ಶ್ಲೋಕದಿಂದ ವೀರಶೈವ ದೀಕ್ಷಾಪೇಕ್ಷೆಯು ಬ್ರಾಹ್ಮಣಾದಿ ಜಾತಿಗಳಿಂದ ಹೇಸಿ ಲಿಂಗದೀಕ್ಷೆಯನ್ನು ಹೊಂದುತ್ತಾನೆಂದು ಈ ಶ್ಲೋಕದ ಅರ್ಥವು. ಆದುದರಿಂದ ವೀರಶೈವ ದೀಕ್ಷೆಯು ಜಾತಿಯನ್ನು ಮೀರಿದುದೆಂಬರ್ಥ. ಅದೇ ಸಿದ್ಧಾಂತಶಿಖಾಮಣಿಯ ೧೧ ನೆಯ ಪರಿಚ್ಛೇದದ

ಬ್ರಾಹ್ಮಣಃ ಕ್ಷತ್ರಿಯೋವಾಪಿ ವೈಶ್ಯೋವಾ ಶೂದ್ರ ಏವ ವಾ.।
ಅಂತ್ಯಜೋವಾ ಶಿವೇಭಕ್ತಃ ಶಿವವನ್ ಮಾನ್ಯಯೇವಸಃ॥
ಶಿವಭಕ್ತಿ ಸಮಾವೇಶೇ ತ್ವಜಾತಿಪರಿಕಲ್ಪನಾ।
ಇಂಧನೇಷ್ವಗ್ನಿವದ್ಗೇಷುಕೋವಾ ಭೇದಃ ಪ್ರಕೀರ್ತ್ಯತೆ (೫೪-೫೫)

ಎಂಬ ಶ್ಲೋಕಗಳು ಶಿವದೀಕ್ಷಾಗ್ನಿ ದಗ್ಧದಿಂದ ವೀರಶೈವರಲ್ಲಿ ಜಾತಿ ಭೇದವಿಲ್ಲವೆಂತಲೂ ಶಿವಭಕ್ತಿಯು ವ್ಯೆಯಲ್ಲಿ ತುಂಬಿರಲಿಕ್ಕಾಗಿ ಜಾತಿ ಪರಿಕಲ್ಪನೆಯನ್ನು ಮಾಡಲಾಗದೆಂತಲೂ ಹೇಳುತ್ತವೆ. ಸೂಕ್ಷ್ಮಾಗಮದ ೫ ನೆಯ ಪಟಲದಲ್ಲಿ, ಲಿಂಗಧಾರಣವನ್ನು ಮಾಡುವ ಶಿಷ್ಯನ ಲಿಂಗವನ್ನು ' ಶಿವಾಂಗ ಮಿತಿ ಸಂಚಿಂತ್ಯಲಿಂಗ ಸಂಸ್ಕಾರಮಾಚರೇತ್ ' ಎಂದು ಶಿಷ್ಯನ ಶರೀರವನ್ನು ಶಿವಾಂಗವೆಂದು ತಿಳಿದು ಲಿಂಗ ಸಂಸ್ಕಾರವನ್ನಾಚರಿಸಬೇಕು ಎಂದು ಹೇಳಿರುವದರಿಂದ ಆ ಶಿಷ್ಯನ ದೇಹವು ಲಿಂಗಮಯವಾಯಿತು. ( ೪೫ ಶ್ಲೋಕ.)

ಆದರಿಂದಲೇ ಪಾಷಾಣಾದಿ ಕೃತಂ ಲಿಂಗಂ ಯಥಾ ಪೂಜ್ಯಂ ಪ್ರತಿಷ್ಠಿತಂ। ನೀಚ ವಂಶೋದ್ಭವ ಶ್ಚಾಪಿ ಶಿವಭಕ್ತ ಸ್ತಥಾ ಭವೇತ್॥ ಎಂಬ ಶಿವರಹಸ್ಯದರ್ಪಣೆ ಅಂಶದ ೧೩ ನೆಯ ಶ್ಲೋಕವು ಸಂಗತವಾಗಿದೆ.

ಈ ವರೆಗೂ ಪ್ರಮಾಣಗಳನ್ನು ವಿಚಾರಿಸಿದುದಾಯಿತು. ಇನ್ನು ಸ್ವಲ್ಪ ರಲ್ಲಿ ದೀಕ್ಷಾಪದಾರ್ಥವನ್ನು ನಿರೀಕ್ಷಿಸುವಾ. ಗುರುವು ವೇದಾ ಮಾಂತ್ರೀ ಕ್ರಿಯಾ ಎಂಬ ಮೂರು ದೀಕ್ಷೆಗಳನ್ನು ಹಸ್ತ ಮಸ್ತಕ ಸಂಯೋಗ ಮಂತ್ರೋ ಪದೇಶ ಮತ್ತು ಲಿಂಗಧಾರಣಗಳಿಂದ ಮಾಡುವನೆಂದು ಶಾಸ್ತ್ರಗಳಲ್ಲಿ ಹೇಳಿ ರುವದು. ಇವುಗಳಿಂದ ಅನುಕ್ರಮವಾಗಿ ಮಲಮಾಯಾ ಕರ್ಮಗಳೆಂಬ ಮೂರು ಪಾಶಗಳು ಛೇದವಾಗುವವು. ಕರ್ಮದಿಂದಲೇ ಮನುಷ್ಯನಿಗೆ ಆಯಾ ಜಾತಿಯು ಪ್ರಾಪ್ತವಾಗುವದು. ಕರ್ಮವಾದವು ಹರಿದ ಬಳಿಕ ಜಾತಿ ಉಳಿಯಲಾರದು. ಧರ್ಮಾಧರ್ಮಾತ್ಮಕ ಕರ್ಮಗಳಿಂದಲೇ ಜಾತಿಗ ಳುಂಟಾಗುತ್ತವೆಂಬುವಲ್ಲಿ

ಧರ್ಮಾಧರ್ಮಾತ್ಮಕಂಕರ್ಮ ತಚ್ಚ ತ್ರಿವಿಧ ಮಾತ್ಮನಃ॥
ಜಾತ್ಯಾಯುರ್ಭೋಗದಂಯೇನ ನಾಮಿಶ್ರಂ ಪಚ್ಯತೆ ಕ್ವಚಿತ್ ॥

ಎಂಬ ಶತ ಸೂಪಾತ್ರ ರತ್ನದಲ್ಲಿ ಉದಾಹರಿಸಿದ ಆಗಮ ಶ್ಲೋಕವೂ ಆ ಶ್ಲೋಕಾನು ರೋಧದಿಂದಲೇ ಬರೆದ ಸಿದ್ಧಾಂತ ಸಿಖಾಮಣಿಯ ಮೇಲು ದಾಹರಿಸಿದ ಶ್ಲೋಕಗಳು ಪ್ರಮಾಣವಾಗಿವೆ.

( ಮುಂದೆ ಸಾಗುವದು )

# ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಸ್ತ್ರೀಯರ ಹಕ್ಕುಗಳು.

( ಲೇಖಕ:—ಮಧುಕರ )

ವೀರಶೈವ ಧರ್ಮದಲ್ಲಿರುವ ಅನೇಕ ವೈಶಿಷ್ಟ್ಯಗಳಲ್ಲಿ ಸ್ತ್ರೀಯರಿಗೆ ಸಾಮಾಜಿಕ ಮತ್ತು ಧಾರ್ಮಿಕ ಸ್ವಾತಂತ್ರ್ಯವನ್ನು ಅದು ಕೊಟ್ಟದ್ದು ಅತ್ಯಂತ ಮಹತ್ವದ್ದಿರುತ್ತದೆ. ಇದು ಈ ದೃಷ್ಟಿಯಿಂದ ವ್ಯಾಪಕಸ್ವರೂಪವನ್ನು ಹೊಂದಿದಷ್ಟು ಬೇರೆ ಯಾವ ಹಿಂದೂ ಮತವೂ ಹೊಂದಿರಲಿಕ್ಕಿಲ್ಲ. ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರೆಲ್ಲರೂ ಸಮಾನ ಹಕ್ಕುಳ್ಳವರಾಗಿದ್ದಾರೆ. ಈ ವಿಧದ ವಿಚಾರಗಳನ್ನು ವೀರಶೈವ ವಚನಕಾರರು ತಮ್ಮ ಉಕ್ತಿಗಳಲ್ಲಿ ಅತ್ಯಂತ ಸ್ಪಷ್ಟರೀತಿಯಿಂದ ವಿವರಿಸಿದ್ದಾರೆ. ಮತ್ತು ಬಸವೇಶ್ವರನ ಕಾಲದಲ್ಲಿ ಈ ಪ್ರಕಾರ ಸ್ತ್ರೀಯರಿಗೋಸ್ಕರ ಅತ್ಯಂತ ಉದಾರ ಮತ್ತು ಉಚ್ಚಭಾವವನ್ನು ತಾಳಿದ್ದರಿಂದ ಆಗ ಅನೇಕ ಸ್ತ್ರೀಯರು ಧರ್ಮಕಾರ್ಯಗಳಿಗೆ ಪ್ರೇರಣೆಹೊಂದಿ ಅವುಗಳಲ್ಲಿ ತೊಡಗಿದ ಉದಾಹರಣೆಗಳು ಅಸಂಖ್ಯವಾಗಿವೆ. ಸ್ತ್ರೀಯರ ಹಕ್ಕುಗಳ ಬಗ್ಗೆ ದೇವರ ದಾಸಿಮಯ್ಯನೆಂಬ ಪ್ರಸಿದ್ಧ ಶಿವಶರಣನು ಕೆಳಗೆ ಕಾಣಿಸಿದ ವಚನವನ್ನು ಅಂದಿದ್ದು ಅದು ಬಹು ವಿಚಾರಾರ್ಹವಾಗಿದೆ.

"ಮಡದಿಯ ಪ್ರಾಣಕ್ಕೆ ಮೊಲೆಮುಡಿ ಇದ್ದಿತ್ತೆ? ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ? ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೇ ಪ್ರಾಣದಲ್ಲಿ ಹಿಡಿಗೋಲ? ನೀ ತೊಡಕಿಕ್ಕಿದ ತೊಡಕನೀ ಲೋಕದ ಜಡರೆತ್ತ ಬಲ್ಲರೈ ರಾಮನಾಥಾ?"

ಈ ವಚನದ ಅರ್ಥವನ್ನು ಒಬ್ಬ ಪುರಾತನ ಟೀಕಾಕಾರನು ಕೆಳಗೆ ಬರೆದಂತೆ ಮಾಡಿದ್ದಾನೆ. ಅದು ಏನೆಂದರೆ:—

ಸ್ತ್ರೀಯಳ ಅಂಗದಲ್ಲಿ ಕಚಕುಚಂಗಳಿರ್ದ ಹಾಗೆ ಅವಳ ಪ್ರಾಣಕ್ಕೆ ಕಚಕುಚಂಗಳುಂಟೆ? ಇಲ್ಲ. ವಿಪ್ರಸಂಗದಲ್ಲಿ ಶಿಖಾಯಜ್ಞೋಪವೀತ ಇದ್ದ ಹಾಗೆ, ಅವನ ಪ್ರಾಣಲ್ಲಿ ಶಿಖಾಯಜ್ಞೋಪವೀತವಿಲ್ಲ. ಊರಿಂದ ಹೊರಗಿರ್ದ ಹೊಲೆಯನು ಕಯ್ಯಲ್ಲೊಂದಾಯುಧವ ಹಿಡಿದ ಹಾಗೆ ಆತ್ಮನಲ್ಲಿ ಹಿಡಿದಿಪ್ಪನೇ? ಇಲ್ಲ. ಪರಶಿವನು ತನ್ನಂಶವಾದ ಆತ್ಮಂಗೆ ಶರೀರ ಸಂಬಂಧವ ಮಾಡಿರಲು ಹೆಣ್ಣೆಂದು ಗಂಡೆಂದು ವಿಪ್ರನೆಂದು, ಹೊಲೆಯನೆಂದು, ನೂರೊಂದುಕುಲ ಹದಿನೆಂಟು ಜಾತಿಯನುಂಟುಮಾಡಿ ಒಬ್ಬರಿ

ಗೊಬ್ಬರು ಹೊರಡುವ ಬಂಧನವ ಈ ಜಗದ ಅಚೇತನರಾದ ಜೀವರು ಎತ್ತ ಬಲ್ಲರು ಅರಿಯರೆಂದರ್ಥ.

ಈ ವಚನದ ಭಾವವು ಸ್ಪಷ್ಟವದೆ. ಜಗತ್ತಿನಲ್ಲಿ ವಾಡಿಕೆಯಾಗಿ ಜನರು ಸ್ತ್ರೀಪುರುಷರೆಂದು ಭಾವಿಸಿ ಅವರಲ್ಲಿ ಹಿರಿದು ಕಿರಿದೆಂದು ಎಣಿಸುತ್ತಾರೆ. ಅದರಂತೆ ಕುಲ ಹದಿನೆಂಟು ಜಾತಿಗಳನ್ನು ಮಾಡಿಕೊಂಡು ಇಂಥವನು ಕೀಳನು, ಇಂಥವನು ಉಚ್ಚನು ಎಂದು ಹೋರಾಡುತ್ತಲಿರುವರು. ಸರೆ ಮೇಲ್ಕಂಡ ವಚನಕಾರನು ಅನ್ನುವದೇನಂದರೆ, ಈ ತೆರದ ಭೇದ ಭಾವಗಳು ಮನುಷ್ಯನ ಬಹಿರಂಗ ಕೃತಿ ಅಥವಾ ಶರೀರಕ್ಕೆ ಸಂಬಂಧ ಪಟ್ಟವಿರುತ್ತವೆ. ಇವುಗಳು ಕ್ಷಣಿಕವಾದವುಗಳು. ಆದರೆ ಮನುಷ್ಯನ ಪ್ರಾಣವು ಮಾತ್ರ ಶಿವಮಾತ್ಮನ ಅಂಶವಾದ್ದರಿಂದ ಅದು ಸ್ಥಿರವಾಗಿ ಬಾಳು ವಂಥಾದ್ದು. ಇದರಲ್ಲಿ ಈ ಬಗೆಯ ಭೇದಗಳು ತೋರಿಬರುವದಿಲ್ಲ. ಅದು ಎಲ್ಲರಲ್ಲಿಯೂ ಒಂದೇ ಸ್ವರೂಪದಿಂದ ವಾಸಿಸುತ್ತದೆ. ಅವರ ವಿಕಾಸದ ಮೇಲಿಂದಲೇ ಮನುಷ್ಯನಲ್ಲಿ ತಾರತಮ್ಯ ಭಾವವನ್ನು ಎಣಿಸಬೇಕೇ ಹೊರ್ತು ಅವನ ಬಾಹ್ಯ ಆಚರಣೆ, ಬಾಹ್ಯ ಶರೀರದ ಸ್ಥಿತಿ ಇವುಗಳ ಮೇಲಿಂದ ಎಣಿಸ ಕೂಡದೆಂದು ಈ ವಚನಕಾರನು ಹೇಳುತ್ತಾನೆ. ಈ ತರದ ವಿಚಾರಗಳನ್ನು ಆಗಮ ಗ್ರಂಥಗಳಲ್ಲಿಯೂ ಕಾಣಬಹುದಾಗಿದೆ. ಪಾರಮೇಶ್ವರಾಗಮದ ೫ನೇ ಪಟಲದಲ್ಲಿ ಅನ್ನುವದೇನೆಂದರೆ:—

ಯೇ ಸಂತಿ ಜಾತಿ ಭೇದಾಸ್ತ್ವಾನೇಕವಚ್ಛಿವಯೋಗಿನಃ।
ಪಶ್ಯೇದಖಿಲ ಜಾತಿಸ್ಥಾನೇಕ ಮಾತೃ ಸಹೋದರಾನ್ ॥೪೦॥
ನ ಸ್ತ್ರೀಭೇದೋ ನಪುಂಭೇದೋ ಜಾತಿ ವರ್ಣಾಶ್ರಮಾದಿಕಂ।
ಸರ್ವಾತೀತೆ ಮಿದಂವಿದ್ಧಿ ವೀರಶೈವಮತಂಮಮ ॥೪೧॥

ಈ ಉಕ್ತಿಯಲ್ಲಿ ಆಗಮಕಾರನು ವೀರಶೈವ ಧರ್ಮದ ಈ ವೈಶಿಷ್ಟ್ಯ ವನ್ನು ಬಹು ಚನ್ನಾಗಿ ವಿವರಿಸಿರುವನು. ವೀರಶೈವನು ಇತರ ಎಲ್ಲ ಜಾತಿಬಾಂಧವರನ್ನು ತನ್ನ ಮಾತೆಯಿಂದ ಜನಿಸಿದವರಂತೆಯೇ ಕಾಣತ ಕ್ಕದ್ದು. ಅಂದರೆ ಅವರಲ್ಲಿ ಸಹೋದರಭಾವವನ್ನು ತಾಳಿ ಅವರೊಡನೆ ವರ್ತಿಸತಕ್ಕದ್ದು. ಅದೇ ಪ್ರಕಾರ ಅವರು ಸ್ತ್ರೀಪುರುಷ ಭೇದವನ್ನೂ ಎಣಿಸತಕ್ಕದ್ದಲ್ಲ. ಜಾತಿವರ್ಣಾಶ್ರಮಗಳನ್ನೂ ಹಿಡಿಯತಕ್ಕದ್ದಲ್ಲ. ಇವೆ ಲ್ಲಕ್ಕೂ ವೀರಶೈವವು ಮೀರಿನಿಂತಿರುತ್ತದೆಂದು ಈ ಆಗಮವು ಹೇಳುತ್ತಿದೆ.

ಈ ತತ್ವವನ್ನು ಅನುಸರಿಸಿಯೇ ವೀರಶೈವ ವಚನಕಾರರಾದವರೂ ಅನೇಕ ವಚನಗಳನ್ನು ರಚಿಸಿದ್ದಾರೆ.

ಆದರೆ ಈ ಬಗೆಯ ವಿಚಾರಗಳು ಬ್ರಾಹ್ಮಣ ಪದ್ಧತಿಯ ಧರ್ಮ ಗ್ರಂಥಗಳಲ್ಲಿ ಕಂಡುಬರುವದಿಲ್ಲ. ಉಪನಿಷತ್ ಕಾಲದಲ್ಲಿ ಮೇಲ್ಕಂಡ ಬಗೆಯ ಉದಾರ ವಿಚಾರಗಳು ಸಮಾಜದಲ್ಲಿ ರೂಢವಾಗಿದ್ದರೂ ಕೂಡ ಮುಂದೆ ಅವು ಸ್ಮೃತಿಕಾಲದಲ್ಲಿ ಅಕುಂಚಿತ ಸ್ವರೂಪವನ್ನು ಹೊಂದಿ ಸ್ತ್ರೀಯರಿಗೆ ಮೊದಲಿಗೆ ಇದ್ದ ಉಚ್ಚಸ್ಥಾನವು ಹೋಗಲಾಡಿಸಲ್ಪಟ್ಟಿತು. ಸ್ಮೃತಿಕಾರರು ಸ್ತ್ರೀಯು ಪುರುಷನಿಗೆ ಕೇವಲ ಅಧೀನಳಾಗಿ ವರ್ತಿಸ ಬೇಕೆಂತಲೂ ಆಕೆಗೆ ವೇದಾಧಿಕಾರವಿಲ್ಲೆಂತಲೂ ಹೇಳಿ ಆಕೆಯು ಕೇವಲ ಶೂದ್ರಳೆಂಬ ವಿಚಾರಗಳನ್ನು ಪ್ರಸಾರಪಡಿಸಹತ್ತಿದರು. ಸ್ತ್ರೀಯರ ನಿಜ ಧರ್ಮವೆಂದರೆ ಕೇವಲ ಪತಿಯನ್ನಾಶ್ರಯಿಸಿ ಅವನ ಸೇವೆಯಲ್ಲಿ ಕಾಲ ಕಳೆಯುವದೇ ಇರುತ್ತದೆಂಬ ವಿಚಾರಗಳು ಸಮಾಜದಲ್ಲಿ ರೂಢವಾಗುತ್ತ ಹೋದವು. ಇದರಿಂದ ಈ ಕಾಲಕ್ಕೆ ಹಿಂದೂಸಮಾಜವು ಮುಂದುವ ರೆಯುವ ಸ್ಥಿತಿಯನ್ನು ಹೋಗಲಾಡಿಸಿಕೊಂಡು ಹಿಂದೆಗೆಯಹತ್ತಿತೆಂದು ಹೇಳಬಹುದು.

ಆದರೆ ವೀರಶೈವ ಧರ್ಮದಲ್ಲಿ ಹೀಗಿರದೆ ಅದು ಸ್ತ್ರೀಯರಿಗೆ ಪುರು ಷನಷ್ಟೇ ಸಾಮಾಜಿಗ ಮತ್ತು ಧಾರ್ಮಿಕ ಸ್ವಾತಂತ್ರ್ಯವನ್ನು ಕೊಟ್ಟಿರು ವದು. ಇದಕ್ಕೆ ಸ್ತ್ರೀಯರಿಗೆ ಲಿಂಗಧಾರಣೆ ಇರುವದೇ ಮುಖ್ಯ ಗುರು ತಾಗಿದೆ. ಸ್ತ್ರೀಯಳು ಗುರುವಿನಿಂದ ಹೀಗೆ ಲಿಂಗಧಾರಣೆಯನ್ನು ಹೊಂದಿದ ಬಳಿಕ ಆಕೆಯ ಷಟ್‌ಸ್ಥಲಶಾಸ್ತ್ರವನ್ನು ಅಭ್ಯಾಸಮಾಡಿ, ಅದರ ತತ್ವಗ ಳಿಗನುಸರಿಸಿ ತನ್ನ ಧಾರ್ಮಿಕ ವಿಕಾಸವನ್ನು ಮಾಡಿಕೊಳ್ಳುವದು ಆಕೆಯ ಕಾರ್ಯವಾಗಿರುತ್ತದೆ. ಈ ವಿಕಾಸಯನ್ನು ಆಕೆಯು ಸ್ವಪ್ರಯತ್ನದಿಂ ದಲೇ ಜರಗಿಸಿಕೊಳ್ಳತಕ್ಕದ್ದು. ಇದರಲ್ಲಿ ಆಕೆಯು ತನ್ನ ಗಂಡನ ಮೇಲೆ ಅವಲಂಬಿಸುವ ಕಾರಣವಿಲ್ಲ. ಅವನು ಮಾಡುವ ಕ್ರಿಯಾ ಕರ್ಮಗಳ ಫಲವನ್ನು ಅವನೇ ಭೋಗಿಸುವನೇ ಹೊರತು ಅದರಲ್ಲಿ ಹೆಂಡತಿಯ ಪಾಲು ಇರಲಾರದು. ಆದ್ದರಿಂದ ಸ್ತ್ರೀಯು ಲಿಂಗಧಾರಣೆಯನ್ನು ಹೊಂದಿದ ಬಳಿಕ ಷಟ್‌ಸ್ಥಲದ ಮೆಟ್ಟಲುಗಳನ್ನು ಸ್ವಸಾಮರ್ಥ್ಯದಿಂದಲೇ ಹತ್ತುತ್ತ ಮುಂದೆ ಹೋಗಬೇಕಾಗುತ್ತದೆ. ಆರಂಭದಲ್ಲಿ ಆಕೆಯು ಭಕ್ತಮಾಹೇ ಶ್ವರಸ್ಥಲಗಳನ್ನು ಹೊಂದಿ, ಮುಂದೆ ಪ್ರಸಾದಿ ಪ್ರಾಣಲಿಂಗಿ ಸ್ಥಲಗಳನ್ನು

ಒಳಕೊಂಡು, ತರುವಾಯ ಶರಣೆಯಾಗಿ ಐಕ್ಯ ಸ್ಥಿತಿಯನ್ನು ಹೊಂದಲು ಬಾಧ್ಯಳಾಗಿರುವಳು. ಆದ್ದರಿಂದ ಸ್ತ್ರೀಯು ಕಡಿಮೆ ಮತ್ತು ಪುರುಷನು ಹೆಚ್ಚು ಎಂಬ ಭಾವವೇ ವೀರಶೈವ ಧರ್ಮದಲ್ಲಿ ಇಲ್ಲದಾಗಿದೆ.

ಶ್ರೀ ಬಸವೇಶ್ವರನು ತನ್ನ ಒಂದು ವಚನದಲ್ಲಿ ಅಂದಿರುವದೇನಂದರೆ—

"ಗಂಡ ಶಿವಲಿಂಗದೇವರಭಕ್ತ. ಹೆಂಡತಿ ಕೊಂಬುದು ಸುರೆಯು ಮಾಂಸ. ಭಾಂಡಭಾಜನಶುದ್ಧಿ ಇಲ್ಲದವರ ಭಕ್ತಿ ಹೆಂಡದ ಮಡಿಕೆಯು ಹೊರಗೆ ತೊಳೆದಂತೆ ಕೂಡಲಸಂಗಮದೇವಾ"

ಇದರಲ್ಲಿ ಬಸವೇಶ್ವರನು ಪತಿಯು ತನ್ನ ಪತ್ನಿಯೊಡನೆ ಯಾವ ರೀತಿಯಾಗಿ ವರ್ತಿಸಬೇಕೆಂಬುದನ್ನು ಬಹು ಸರಸಾಗಿ ವ್ಯಕ್ತಪಡಿಸಿದ್ದಾನೆ. ಪತಿಯು ತನ್ನ ಸ್ತ್ರೀಯೊಡನೆ ಯಾವಾಗಲೂ ಒಳಕೊಂಡು ವರ್ತಿಸಬೇಕಾದುದರಿಂದ ಆಕೆಯನ್ನು ಶುದ್ಧ ಧಾರ್ಮಿಕ ವರ್ತನೆಗೆ ಹೊರತಾಗಿ ಇಟ್ಟು ತಾನೊಬ್ಬನೇ ಭಕ್ತನಂತೆ ಆಚರಿಸಿದರೆ ಇದು ಹೆಂಡವನ್ನು ತಂದು ಒಂದು ಗಡಿಗೆಯಲ್ಲಿಟ್ಟು ಅದು ಶುದ್ಧವಾಗಬೇಕೆಂದು ಅದನ್ನು ಹೊರಗೆ ಮಾತ್ರ ತೊಳೆದಂತೆಯೇ ಎಂದು ನುಡಿದಿದ್ದಾನೆ. ಇದರಿಂದ ಸ್ತ್ರೀಯು ಕೇವಲ ಒಂದು ತ್ಯಾಜ್ಯವಸ್ತು ಅಥವಾ ಒಂದು ಭೋಗ್ಯವಸ್ತು ಎಂದು ತಿಳಿದು ಹ್ಯಾಗೆ ಬ್ರಾಹ್ಮಣ ಶಾಸ್ತ್ರಗಳು ಅವಳನ್ನು ವರ್ಣಿಸುತ್ತವೋ ಹಾಗೆ ವೀರಶೈವ ಧರ್ಮಗ್ರಂಥಗಳು ಆಕೆಯನ್ನು ವರ್ಣಿಸದೆ ಅವಳಿಗೆ ಅವು ಅತ್ಯಂತ ಶ್ರೇಷ್ಠ ಸ್ಥಾನವನ್ನು ಕೊಟ್ಟಿರುತ್ತವೆ.

ಬಸವೇಶ್ವರನಂತೆ ಇನ್ನೂ ಅನೇಕ ವಚನಕಾರರು ಇದೇ ಅಭಿಪ್ರಾಯವನ್ನು ಸಮರ್ಥಿಸಿರುತ್ತಾರೆ. ದೇವರ ದಾಸಿಮಯ್ಯನು ತನ್ನ ಒಂದು ವಚನದಲ್ಲಿ ಅನ್ನುವದೇನಂದರೆ:—

"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಸತಿಪತಿಗಳೊಂದಾಗದವನ ಭಕ್ತಿ ಅಮೃತದೊಳು ವಿಷ ಬೆರಿಸಿದಂತೆ ಕಾಣಾ ರಾಮನಾಥಾ॥"

ಇದರಲ್ಲಿ ತನ್ನ ಸ್ತ್ರೀ ಸುಧಾರಣೆಯ ವಿಷಯದಲ್ಲಿ ಗಂಡನ ಮೇಲೆ ಎಷ್ಟು ಮಹತ್ತರ ಜವಾಬುದಾರಿಯು ಇರುತ್ತದೆಂಬುದನ್ನು ಈ ವಚನ

ಕಾರನು ಇವರಲ್ಲಿ ಬಹಳ ಚನ್ನಾಗಿ ಉಲ್ಲೇಖಿಸಿರುತ್ತಾನೆ. ಯಾವನು ಹೀಗೆ ವರ್ತಿಸದೆ ತನ್ನ ಸ್ತ್ರೀಯಳು ಅಧರ್ಮದಿಂದ ನಡೆಯಲು ಅವಕಾಶ ಕೊಡುತ್ತಾನೋ ಅವನು ಮಾಡುವ ಭಕ್ತಿ ಎಲ್ಲವೂ ವ್ಯರ್ಥವೆಂದು ಈ ವಚನಕಾರನ ಭಾವವು. ಅವನು ಪುನಃ ಮತ್ತೊಂದೆಡೆಯಲ್ಲಿ ಅನ್ನುವದೇನೆಂದರೆ:—

"ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕ ಭಾವವಾಗಿ ನಿಂದಲ್ಲಿ ಗುಹೇಶ್ವರಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣ"

ಇವರಲ್ಲಿ ಅವನು ದಂಪತಿಗಳನ್ನು ಎರಡು ಕಣ್ಣುಗಳಿಗೆ ಹೋಲಿಸಿ ಹ್ಯಾಗೆ ಈ ಕಣ್ಣುಗಳಲ್ಲೊಂದು ಲೋಪವಾದಲ್ಲಿ ನೋಡುವ ಕಾರ್ಯವು ಹ್ಯಾಗೆ ಸರಿಯಾಗಿ ಜರಗಲಾರದೋ ಹಾಗೆಯೇ ಸ್ತ್ರೀಯಳು ಅಧರ್ಮದಲ್ಲಿದ್ದರೆ ಪುರುಷನು ಮಾಡುವ ಧರ್ಮವೂ ಕೆಟ್ಟು ಹೋಗುವದೆಂದು ಇಲ್ಲಿ ವಿವರಿಸಿದ್ದಾನೆ.

"ಗಂಡ ಭಕ್ತನಾಗಿ, ಹೆಂಡತಿ ಭವಿಯಾದರೆ ಉಂಡ ಊಟ ಇಬ್ಬರಿಗೂ ಸರಿಭಾಗ. ಸತ್ತ ನಾಯ ತಂದು ಅಟ್ಟದ ಮೇಲಿಳುಹಿ ಒಬ್ಬರೊಪ್ಪಚ್ಚಿಯ ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥಾ"

ಈ ವಚನದಲ್ಲಿಯೂ ಕೂಡ ಇದೇ ಭಾವವು ವ್ಯಕ್ತವಾಗಿದ್ದು, ಹೆಂಡತಿಯು ಅನಾಚಾರಿಯಾಗಿ ವರ್ತಿಸಿದರೆ ಉಭಯ ದಂಪತಿಗಳು ಒಂದು ಸತ್ತ ನಾಯನ್ನು ತೆಗೆದುಕೊಂಡು ಅದನ್ನು ಪ್ರತಿಯೊಬ್ಬರು ಅರ್ಧ ಅರ್ಧ ತಿಂಬಂತೆಯೇ ಎಂದು ಹೇಳಿದ್ದಾನೆ.

ಬ್ರಾಹ್ಮಣ ಧರ್ಮಗ್ರಂಥಗಳು ಸತಿಗೆ ಪತಿಯೇ ದೈವವೆಂದು ಪ್ರತಿಪಾದಿಸಿ ಅವನ ಸೇವೆಯನ್ನೇ ಅವಳು ಮಾಡಬೇಕು, ಅದೇ ಆಕೆಯ ಮುಖ್ಯ ಧರ್ಮವು ಎಂದು ಬಹು ಕಠೋರವಾಗಿ ಹೇಳುವದುಂಟು. ಆದರೆ ಈ ತತ್ವಗಳು ವೀರಶೈವ ಸ್ತ್ರೀ ಧರ್ಮಕ್ಕೆ ಸಮ್ಮತವಾಗಲಾರವು. ಈ ಧರ್ಮದ ಪ್ರಕಾರ ಸ್ತ್ರೀಯಳಿಗೆ ಲಿಂಗಧಾರಣವಿರುವದರಿಂದ, ಆಕೆಯು ತನ್ನ ಲಿಂಗದೊಡನೆ ಸತಿ ಪತಿ ಭಾವದಿಂದ ವರ್ತಿಸತಕ್ಕದ್ದು. ಆಕೆಗೆ ಲಿಂಗವೇ ನಿಜವಾದ ಪತಿಯು. ಆ ಲಿಂಗದಿಂದಲೇ ಆಕೆಯು ಮೋಕ್ಷಮಾರ್ಗವನ್ನು

ಹೊಂದತಕ್ಕದ್ದು. ವೀರಶೈವನು ಲಿಂಗಧಾರಿಯಾದ ಬಳಿಕ ಆವನು ತನ್ನ ಲಿಂಗವೊಡನೆ ಸತಿ ಪತಿ ಭಾವದಿಂದ ವರ್ತಿಸಬೇಕೆಂದು ವೀರಶೈವ ಶಾಸ್ತ್ರಗಳು ಉದ್ಘೋಷಿಸುತ್ತವೆ. ಮತ್ತು ಅನೇಕ ವಚನಕಾರರು ಈ ದೃಷ್ಟಿಯಿಂದ ಅಸಂಖ್ಯ ಸತಿ ಪತಿ ಭಾವದ ವಚನಗಳನ್ನು ರಚಿಸಿರುವರು. ಈ ತತ್ವವಾದರೂ ಸ್ತ್ರೀಯರಿಗೂ ಹತ್ತುತ್ತದೆ. ಅದ್ದರಿಂದ ಅವಳು ತನಗೆ ಲಿಂಗವೇ ಪತಿ ಎಂದು ತಿಳಿದು ಅದರೊಡನೆ ಅತ್ಯಂತ ಭಕ್ತಿಯುತಳಾಗಿ ವರ್ತಿಸುವದು ಅವಳ ಕರ್ತವ್ಯವು. ಹೀಗೆ ಆಕೆಯು ನಡೆಯದೆ ಹೋದರೆ ಆಕೆಯ ಷಟ್‌ಸ್ಥಲಾಚರಣೆಯ ಕಾರ್ಯಗಳಿಗೆ ಭಂಗವು ಬರದೆ ಇರಲಾರದು. ಈ ಬಗ್ಗೆ ಅಲ್ಲಮಪ್ರಭುವು ತನ್ನ ಒಂದು ವಚನದಲ್ಲಿ ಅಂದಿರುವದೇನೆಂದರೆ:—

> "ಸತಿ ಭಕ್ತೆಯಾದಡೆ ಹೊಲೆಗಂಜಲಾಗದು. ಪತಿ ಭಕ್ತನಾದಡೆ ಕುಲಕ್ಕಂಜಲಾಗದು. ಸತಿ ಪತಿ ಎಂಬ ಅಂಗ ಸುಖ ಹಿಂಗಿ ಲಿಂಗವೇ ಪತಿಯಾದ ಬಳಿಕ ಸತಿಗೆ ಪತಿಯುಂಟೇ? ಪತಿಗೆ ಸತಿಯುಂಟೇ? ಪಾಲುಂಡು ಮೇಲುಂಬರೇ ಗುಹೇಶ್ವರಾ"

ಎಂದರೆ ಸ್ತ್ರೀಯರು ಬಾಹ್ಯ ಅಂಗಭೋಗಗಳನ್ನು ತ್ಯಜಿಸಿ ಲಿಂಗ ಭೋಗಿಯಾಗಿ ವರ್ತಿಸುವದು ಅವಳ ಕರ್ತವ್ಯವಾಗಿರುತ್ತದೆ. ಹೀಗೆ ವರ್ತಿಸುವ ಸತಿಗೆ ಲಿಂಗವೇ ಪತಿಯು. ಹೀಗೆ ವರ್ತಿಸುವ ವೀರಶೈವ ಸ್ತ್ರೀಯರಿಗೆ ಬಾಹ್ಯ ಅಂಗಭೋಗದ ಪತಿಯು ನಿಜವಾದ ಪತಿಯಲ್ಲ. ಅವಳು ಒಂದು ವೇಳೆ ಆತನೇ ತನ್ನ ನಿಜವಾದ ಪತಿ ಎಂದು ಭಾವಿಸಿ ವರ್ತಿಸಿದರೆ, ಇದು ಹಾಲುಂಡ ಬಳಿಕ ಮೇಲುಂಡಂತೆ ಎಂದು ಅಲ್ಲಮ ಪ್ರಭುವು ಹೇಳಿರುವನು. ವೀರಶೈವರಲ್ಲಿ ಈ ವಿಚಾರಗಳು ಇರುವದರಿಂದ ಸ್ತ್ರೀ ಪುರುಷರಲ್ಲಿ ಹೆಚ್ಚು ಕಡಿಮೆ ಭಾವಗಳು ಉಂಟಾಗಿರುವದಿಲ್ಲ.

ಈ ವಿಚಾರಗಳು ಷಟ್‌ಸ್ಥಲದಲ್ಲಿ ಇರುವದರಿಂದ ಬ್ರಾಹ್ಮಣ ಸಮಾಜ ಮತ್ತು ವೀರಶೈವಸಮಾಜ ಇವುಗಳಲ್ಲಿಯ ರೂಢಿಗಳಲ್ಲಿ ಮಹದಂತರ ಉಂಟಾಗಿರುತ್ತದೆ. ಅವುಗಳಲ್ಲಿ ಕೆಲವುಗಳನ್ನು ಮಾತ್ರ ನಾನು ಇಲ್ಲಿ ವಿವರಿಸುತ್ತೇನೆ.

ಬ್ರಾಹ್ಮಣ ಶಾಸ್ತ್ರಗಳಲ್ಲಿ ಸ್ತ್ರೀಯು ಲಗ್ನವಾಗಬೇಕೇಬೇಕು, ಆಕೆಯು ಅವಿವಾಹಿತಳಾಗಿ ಎಂದೂ ಉಳಿಯಕೂಡದು, ಒಂದು ವೇಳೆ ಹೀಗೆ ಉಳಿ

ದರೆ, ಆಕೆಗೆ ಎಂದೂ ಮೋಕ್ಷವು ಉಂಟಾಗಲಾರದೆಂಬ ಸಿದ್ಧಾಂತಗಳು ಇರುತ್ತವೆ. ಆದರೆ ಇವುಗಳು ಷಟ್‌ಸ್ಥಲ ಶಾಸ್ತ್ರಕ್ಕೆ ಸಮ್ಮತವಾದವುಗಳಲ್ಲ. ಯಾಕಂದರೆ ಷಟ್‌ಸ್ಥಲ ಶಾಸ್ತ್ರದ ಪ್ರಕಾರ ಸ್ತ್ರೀಯು ತನ್ನ ಸ್ವಂತ ಆಚರಣೆಯಿಂದ ಮೋಕ್ಷ ಪದವನ್ನು ಹೊಂದುವವಳಾದ್ದರಿಂದ, ಆಕೆಯು ಗಂಡನನ್ನು ಮಾಡಿಕೊಳ್ಳಲೇಬೇಕೆಂಬ ನಿರ್ಬಂಧವಿರಲಾರದು. ಇದು ಆಕೆಯ ಇಚ್ಛೆಯ ಮೇಲೆ ಇರುತ್ತದೆ. ವೀರಶೈವ ಸ್ತ್ರೀ ಪುರುಷರು ಯಾವಾಗಲೂ ಲಿಂಗ ಭೋಗೋಪಭೋಗಿಗಳಾಗಿ ತಮ್ಮ ಧರ್ಮಾಚಾರಗಳನ್ನು ನಿರ್ವಹಿಸತಕ್ಕದ್ದು. ಇದೇ ಷಟ್‌ಸ್ಥಲದ ಮುಖ್ಯ ತತ್ವವಾಗಿದೆ. ಆದ್ದರಿಂದ ಸ್ತ್ರೀಯಳಿಗೆ ಕಾಮ ಭೋಗವು ಹೆಚ್ಚಾಗಿ, ಇದರಿಂದ ಆಕೆಯ ನಿಜವಾದ ಲಿಂಗಧ್ಯಾನಕ್ಕೆ ಬಾಧೆ ಬಂದದ್ದಾದರೆ ಆಗ ಆಕೆಯು ಲಗ್ನವಾಗಿ ಈ ಕಾಮ ಭೋಗವನ್ನು ಲಿಂಗಾರ್ಪಣಭಾವದಿಂದ ಕಾಮರಹಿತಳಾಗಿ ನಿರ್ವಹಿಸಿಕೊಂಡು ತನ್ನ ಲಿಂಗ ಧ್ಯಾನದಲ್ಲಿ ಆಸಕ್ತಳಾಗಿರತಕ್ಕದ್ದು. ಒಂದು ವೇಳೆ ಅವಳು ಲಗ್ನವಾಗದೆ ತನ್ನ ನಿಜವಾದ ಲಿಂಗರತಿಯಲ್ಲಿರಲು ಸಾಕಷ್ಟು ದೃಢಮನಸ್ಸಿನವಳಾಗಿದ್ದರೆ, ಅವಳು ಲಗ್ನವಾಗುವದನ್ನು ಬಿಟ್ಟುಕೊಡಬಹುದು. ಆದ್ದರಿಂದ ವೀರಶೈವ ಸ್ತ್ರೀಯು ಲಗ್ನವಾಗುವದು ಬಿಡುವದು ಆಕೆಯ ಇಚ್ಛೆಯ ಮೇಲೆ ಇರುತ್ತದೆ. ಹೀಗೆ ಈ ವಿಷಯದಲ್ಲಿ ಬ್ರಾಹ್ಮಣ ಸ್ತ್ರೀಗೂ ವೀರಶೈವ ಸ್ತ್ರೀಗೂ ಮಹದಂತರವಾಗಿರುತ್ತದೆ.

ಈ ವಿಚಾರಗಳ ಮೂಲಕ ವೀರಶೈವ ಸ್ತ್ರೀಯು ಸ್ವತಂತ್ರಳಾಗಿರುತ್ತಾಳೆ. ಮತ್ತು ಬಸವೇಶ್ವರನ ಕಾಲದಲ್ಲಿ ಈ ತರದ ಸ್ವಾತಂತ್ರ್ಯವು ಅವಳಿಗೆ ಸಂಪೂರ್ಣವಾಗಿ ಸಲ್ಲುತ್ತಿತ್ತು. ಆದ್ದರಿಂದ ಆಗ ಅನೇಕ ಸ್ತ್ರೀಯರು ಅವಿವಾಹಿತವಾಗಿ ಉಳಿದು ಕೇವಲ ಧರ್ಮ ಕೃತ್ಯಗಳಲ್ಲಿ ತಮ್ಮ ಆಯುಷ್ಯವನ್ನು ಕಳೆದಿದ್ದು ತೋರಿಬರುತ್ತಿದೆ. ಇಂಥ ಸ್ತ್ರೀಯರಲ್ಲಿ ಮಹಾದೇವಿಯಕ್ಕ ವರದಾನಿ ಗುಡ್ಡಮ್ಮ ಮೊದಲಾದವರು ಅತ್ಯಂತ ಪ್ರಸಿದ್ಧರಾಗಿರುವರು. ಮಹಾದೇವಿಯಕ್ಕನು ಕಡೆಯವರೆಗೂ ಅವಿವಾಹಿತಳಾಗಿ ಉಳಿದು ಧರ್ಮ ತತ್ವವ್ಯಾಸಂಗದಲ್ಲಿಯೇ ತನ್ನ ಕಾಲಕಳೆಯುತ್ತಿದ್ದಳು. ಅದೇ ಪ್ರಕಾರ ವರದಾನಿ ಗುಡ್ಡಮ್ಮಯು ಕನ್ನಿಕೆಯಾಗಿ ಉಳಿದು ವೀರಶೈವ ಧರ್ಮಪ್ರಸಾರ ಕಾರ್ಯದಲ್ಲಿ ತನ್ನ ಶೌರ್ಯ ಧೈರ್ಯಗಳನ್ನು ತೋರಿಸಿದಳು. ಮಹಾದೇವಿಯಕ್ಕನು ಒಂದೆಡೆಗೆ ಹೇಳಿರುವದೇನಂದರೆ:--

"ಕಾಮಾರಿಯ ಗೆಲಿದೆನು ಬಸವ ನಿಮ್ಮ ದಯದಿಂದ. ಸೋಮಧರನ ಹಿಡಿ ತಪ್ಪೆನು ಬಸವ ನಿಮ್ಮ ಕೃಪೆಯಿಂದ. ನಾವುದಲ್ಲಿ ಹೆಂಗುಸೆಂಬ ಹೆಸರಾದರೇನು? ಭಾವಿಸಲು ಗಂಡುರೂಪು. ಅತಿಕಾಮಿ ಚೆನ್ನಮಲ್ಲಿಕಾರ್ಜುನಂಗೆ ತೊಡರಿಸಿಕ್ಕಿ ಎರಡುವರಿಯದೆ ಕೂಡದೆನು ಬಸವ ನಿಮ್ಮ ಕೃಪೆಯಿಂದ.

ಇದರಲ್ಲಿ ಮಹಾದೇವಿಯಕ್ಕನು ತಾನು ಸ್ತ್ರೀಯಳಾದರೇನು? ಪುರುಷನಂತೆಯೇ ಸಾಮರ್ಥ್ಯವುಳ್ಳವಳು ಮತ್ತು ತನ್ನ ಗುರುವಾದ ಬಸವೇಶ್ವರನ ದಯೆಯಿಂದ ಪರಮಾತ್ಮನನ್ನು ಕೂಡೀ ತೀರುವೆನೆಂದು ಅತ್ಯಂತ ದೃಢಭಾವದಿಂದ ಹೇಳಿರುವಳು.

ಈ ಮೇರೆಗೆ ವೀರಶೈವರಲ್ಲಿ ಸ್ತ್ರೀಯಳು ಅವಿವಾಹಿತಳಾಗಿ ಉಳಿಯಲಿಕ್ಕೆ ಅನುಕೂಲವಿರುವದರಿಂದ ಆಕೆಯು ಇಹಲೋಕದ ಪತಿಯು ಮರಣ ಹೊಂದಿದರೆ ಆಕೆಗೆ ವೈಧವ್ಯವು ಪ್ರಾಪ್ತವಾಯಿತೆಂದು ಕುಂದಿಡಲು ಶಕ್ಯವಿರುವದಿಲ್ಲ. ಇದರಿಂದ ಆಕೆಯ ಅಧಿಕಾರಗಳೂ ಮಹತ್ವವೂ ಕಡಿಮೆಯಾಗಲಾರವು. ಆದರೆ ಬ್ರಾಹ್ಮಣ ಗ್ರಂಥಗಳಲ್ಲಿ ವಿಧವೆಯು ಅಶುಭಳೆಂದೂ ಅವಳು ಸಾಮಾಜಿಕ ಮತ್ತು ಧಾರ್ಮಿಕ ವ್ಯವಹಾರಗಳಲ್ಲಿ ತ್ಯಾಜ್ಯಳೆಂದೂ ವಿಧಿಗಳಿರುತ್ತವೆ. ಆದರೆ ಈ ವಿಧಿಗಳು ಷಟ್‌ಸ್ಥಲ ಶಾಸ್ತ್ರಕ್ಕೆ ಸಮ್ಮತವಾಗಲಾರವು. ಯಾಕಂದರೆ ಕೇವಲ ಸ್ಥೂಲಕಾರ್ಯದಲ್ಲಿ ಮಾಡಿಕೊಂಡ ಪತಿಯು ಕಾಲವಾದ ಮಾತ್ರದಿಂದ ವೀರಶೈವ ಸ್ತ್ರೀಯಳಿಗೆ ವೈಧವ್ಯವು ಪ್ರಾಪ್ತವಾಗಲಾರದು. ಎಲ್ಲಿಯ ವರೆಗೆ ಶಿವ ಚಿನ್ಹವು ಸ್ತ್ರೀಯಳ ದೇಹದ ಮೇಲೆ ಇರುತ್ತದೋ ಅಲ್ಲಿಯ ವರೆಗೆ ಅವಳು ಅಶುಭಳೆಂದು ಎಂದೂ ಹೇಳಲಿಕ್ಕೆ ಬರಲಾರದು. ಆದ್ದರಿಂದ ಈ ವಿಷಯದ ಬಗ್ಗೆ ಒಬ್ಬ ವಚನಕಾರನು ಅನ್ನುವದೇನಂದರೆ:--

"ಶಿವಭಕ್ತರು ತಮ್ಮ ನಿಜಕೈಲಾಸಕ್ಕೆ ಹೋದಡೆ, ಅವರರಸಿಯು ಪಾರ್ವತಿಯ ಸರಿ ಎಂದು ಕಾಣಬೇಕು. ಅಲ್ಲಿ ಅನುಸರಣೆಯ ಕೊಟ್ಟು ಬೆರಸಿ ಮಾತನಾಡುವ ಸರಕಿಗಳನೇನೆಂಬೆ ರಾಮನಾಥಾ?"

ಎಂದರೆ ವೀರಶೈವ ವಿಧವೆಯು ಪಾರ್ವತಿಗೆ ಸಮಾನಳೆಂತಲೇ ಭಾವಿಸಬೇಕು. ಹೀಗೆ ಭಾವಿಸದೆ ಆಕೆಯನ್ನು ತಿರಸ್ಕಾರ ಭಾವದಿಂದ ಕಂಡು ಸೊಕ್ಕಿನಿಂದ ಮಾತನಾಡಿದರೆ, ಇಂಥವರು ನರಕಕ್ಕೆ ಭಾಜನರಾಗು

ವರೆಂದು ಈ ವಚನಕಾರನು ನುಡಿದಿದ್ದಾನೆ. ಆದ್ದರಿಂದ ವೀರಶೈವ ಸ್ತ್ರೀಯಳು ವಿಧವೆಯಾದರೂ ಕೂಡ ಸದಾ ಪೂಜ್ಯಳಾಗಿರುವಳು.

ಷಟ್‌ಸ್ಥಲಶಾಸ್ತ್ರದಲ್ಲಿ ಈ ವಿಚಾರಗಳಿರುವದರಿಂದ ಸ್ತ್ರೀಯು ಪ್ರತ್ಯಕ್ಷ ದೇವತೆಯು, ಇಷ್ಟೇ ಅಲ್ಲ ಒಬ್ಬ ವಚನಕಾರನು ಆಕೆಯು ಪ್ರತ್ಯಕ್ಷ ಪರಮಾತ್ಮ ಸ್ವರೂಪಳೆಂತೆಯೇ ಭಾವಿಸಿ ಈ ಕೆಳಗಿನ ವಚನವನ್ನು ನುಡಿದಿದ್ದಾನೆ. ಅವನು (ಸಿದ್ಧರಾಮೇಶ್ವರನು) ಅನ್ನುವದೇನಂದರೆ:--

> "ತಾ ಮಾಡಿದ ಹೆಣ್ಣು ತನ್ನ ತಲೆಯ ನೇರಿತ್ತು. ತಾ ಮಾಡಿದ ಹೆಣ್ಣು ತೊಡೆಯನೇರಿತ್ತು. ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯ ನೇರಿತ್ತು. ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು. ಅದು ಕಾರಣ ಹೆಣ್ಣು ಹೆಣ್ಣಲ್ಲ. ಹೆಣ್ಣು ರಾಕ್ಷಸಿಯಲ್ಲ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ".

ಎಂದರೆ ಯಾವ ಕಾರಣಗಳನ್ನು ಇತರ ಮತಸ್ಥರು ಹೆಣ್ಣು ರಾಕ್ಷಸಿ ಎಂದು ಹೇಳಲು ಮುಂದುಮಾಡಿರುತ್ತಾರೋ, ಅವೇ ಕಾರಣಗಳನ್ನು ಈ ವಚನಕಾರನು ಮುಂದುಮಾಡಿ ಸ್ತ್ರೀಯಳು ಪ್ರತ್ಯಕ್ಷ ಪರಬ್ರಹ್ಮಸ್ವರೂಪಳೆಂದು ಇಲ್ಲಿ ಹೇಳಿದ್ದಾನೆ. ಇದರ ಮೇಲಿಂದ ವಚನಕಾರರು ಸ್ತ್ರೀಯಳಿಗೆ ಎಷ್ಟು ಉಚ್ಚಸ್ಥಾನವನ್ನು ಕೊಟ್ಟಿದ್ದಾರೆಂಬದು ಗೊತ್ತಾಗುತ್ತದೆ.

ಬಸವೇಶ್ವರನ ಕಾಲದಲ್ಲಿ ಈ ಪ್ರಕಾರ ಸ್ತ್ರೀಯರಿಗೆ ಧಾರ್ಮಿಕ ಮತ್ತು ಸಾಮಾಜಿಕ ಸ್ವಾತಂತ್ರತೆಯನ್ನು ಕೊಟ್ಟಿದ್ದರಿಂದ ಆ ಕಾಲಕ್ಕೆ ಅನೇಕ ಶಿವಶರಣೆಯರು ಉತ್ಪನ್ನರಾಗಿ ವೀರಶೈವ ಮತವನ್ನು ಪ್ರಸಾರಪಡಿಸಿದರು. ಮತ್ತು ಅವರಲ್ಲಿ ಅನೇಕರು ಮತಗ್ರಂಥಗಳನ್ನು ರಚಿಸಿದರು. ಇಂಥವರಲ್ಲಿ ಮಹಾದೇವಿಯಕ್ಕ, ನೀಲಾಂಬಿಕೆ, ಅಕ್ಕನಾಗಲಾಂಬಿಕೆ, ಸತ್ಯಕ್ಕ ಮೊದಲಾದವರು ಅತ್ಯಂತ ಪ್ರಸಿದ್ಧರಾಗಿದ್ದಾರೆ.

ಆದರೆ ಸ್ತ್ರೀ ವಿಷಯಕವಾಗಿ ಆಗಿನ ಕಾಲಕ್ಕೂ ಈಗಿನ ಕಾಲಕ್ಕೂ ಉಂಟಾಗಿರುವ ಮಹದಂತರವನ್ನು ವಾಚಕರು ಲಕ್ಷಕ್ಕೆ ತರತಕ್ಕದ್ದಾಗಿದೆ. ಈಗ ನಮ್ಮ ಸಮಾಜದವರು ಬ್ರಾಹ್ಮಣೀ ಧರ್ಮದ ಅಕುಂಚಿತ ವಿಚಾರಗಳನ್ನು ಅನುಕರಣ ಮಾಡುವದರಲ್ಲಿ ತೊಡಗಿದ್ದಾರೆ. ಆದ್ದರಿಂದ ಇವರು ಸ್ತ್ರೀಯರಿಗೆ ಇರುವ ಸ್ವಾಭಾವಿಕ ಅಧಿಕಾರಗಳನ್ನು ಹೊಡೆದು ಹಾಕಿ, ಅವರ ಧಾರ್ಮಿಕ ಮತ್ತು ಸಾಮಾಜಿಕ ಶ್ರೇಷ್ಠತೆಗೆ ಕುಂದು

ಕಂದು ಸಮಾಜದ ಅವನತಿಗೆ ಪಾತ್ರರಾಗಿದ್ದಾರೆ. ಇಷ್ಟೇ ಅಲ್ಲ, ಈಗಿನ ಕಾಲಕ್ಕೆ "ಶಾರ್ದಾಬಿಲ್ಲು" ಪಾಸಾದ ಕೂಡಲೇ ಬ್ರಾಹ್ಮಣರಂತೆಯೇ ಇವರೂ ಬಾಲವಿವಾಹ ಪುಷ್ಟೀಕರಣಕ್ಕೆ ಮುಂದಾಗುತ್ತಿರುವದನ್ನು ನೋಡಿ ಖೇದಪಡಬೇಕಾಗಿರುತ್ತದೆ. ಇದಕ್ಕೆ ಕಾರಣವೆಂದರೆ ಈಗಿನ ವೀರಶೈವರಲ್ಲಿ ನಿಜವಾದ ಷಟ್‌ಸ್ಥಲ ಜ್ಞಾನದ ಕೊರತೆಯೇ ಕಾರಣವೆಂದು ಹೇಳಬಹುದು.



ಟೀಪು:— ಈ ಲೇಖಕನ ವಿಧಾನಗಳು ಸಮರ್ಪಕವಾದವುಗಳಲ್ಲವೆಂದು ಅನೇಕರ ಅಭಿಪ್ರಾಯವಿರಬಹುದು. ಇಂಥವರು ತಮ್ಮ ವಿಚಾರಗಳನ್ನು ಅವಶ್ಯವಾಗಿ ಪ್ರಕಟಿಸಬಹುದು. ಅವರ ಲೇಖಗಳಿಗೆ ಶಿವಾನುಭವವು ಆನಂದದಿಂದ ಇಂಬುಗೊಡುವದು.

ಸಂಪಾದಕರು.

# ವೀರಶೈವನು ನವಗ್ರಹಗಳನ್ನು ಧಿಕ್ಕರಿಸುವನೊ ಅಥವಾ ಅಂಗೀಕರಿಸುವನೊ.

ಜ್ಯೋತಿಷ್ಯವನ್ನು ಅಂಗೀಕರಿಸುವನಾದರೆ ಕರ್ಮಗಳಿಗೆ ಒಳಪಟ್ಟ ಹಾಗಾಯಿತು.

ಇವರ ಪ್ರಕಾರ ೧೨ ನೆಸ್ಥಾನದಲ್ಲಿ ಕೇತುವಿದ್ದರೆ ಇವನಿಗೆ ಮೋಕ್ಷವಾಗುತ್ತವೆಂದು ಸಿದ್ಧಾಂತವಿರುತ್ತದೆ. ಮತ್ತು ಇಂಥಸ್ಥಾನದಲ್ಲಿ ಇಂಥ ಗ್ರಹವಿದ್ದರೆ ಪಂಡಿತನಾಗುವನು. ಸಂಸಾರಿಯಾಗುವದಕ್ಕೂ ಸನ್ಯಾಸಿಯಾಗುವದಕ್ಕೂ ರಾಜನಾಗುವದಕ್ಕೂ ವೈರಾಗ್ಯನಾಗುವದಕ್ಕೂ ಆಚಾರಸ್ಥನಾಗುವದಕ್ಕೂ ಅನಾಚಾರಿಯಾಗುವದಕ್ಕೂ ಸಹಗ್ರಹಚಾರಗಳೆ ಮುಖ್ಯಕಾರಣಗಳಾಗಿರುವವು. ಸುಖ ದುಃಖಗಳಿಗೂ ಸಹಗ್ರಹಚಾರಗಳೇ ಪ್ರಧಾನಗಳಾಗಿರುವವು. ಹೀಗಿರುವಲ್ಲಿ ವೀರಶೈವನು ಯಾವಕಾರಣದಿಂದ ಜ್ಯೋತಿಷ್ಯಶಾಸ್ತ್ರವನ್ನು ನಿರಾಕರಣಮಾಡಿದನು? ಒಬ್ಬನು ಸುಮ್ಮನೆ ಕುಳಿತು ಕೊಂಡರೆ ಸುಖಿಸುವನು. ಮತ್ತೊಬ್ಬನು ಬಗೆ ಬಗೆಯಿಂದ ಕಷ್ಟಪಟ್ಟು ಜೀವಿಸುವನು. ಇದೆಲ್ಲ ಗ್ರಹಚಾರದಿಂದಲೆ ಫಲಾಫಲಗಳು ಪ್ರತ್ಯಕ್ಷವಾಗಿ ಕಂಡುಬರುವವು. ಇಂಥ ಶಾಸ್ತ್ರವನ್ನು ಪ್ರಮಥರು ದೂಷಿಸಿದರೇಕೆ? ಪ್ರಜ್ಞರು ಈ ವಿಷಯದಲ್ಲಿ ವಿವರವಾಗಿ ಉತ್ತರವನ್ನು ಬರೆಯಬೇಕು. ಪ್ರತಿ ಒಬ್ಬ ಮನುಷ್ಯನಿಗು ಜ್ಯೋತಿಷ್ಯ ಶಾಸ್ತ್ರವು ಸಿದ್ಧಾಂತವಾಗಿರುತ್ತದೆ.



# ಪ್ರಭುದೇವರ ವಚನಗಳು.

ಸ್ವಸ್ತಿ ಸಮಸ್ತ ಭುವನ ಜನ ತಿಮಿರ ಹರ ಕಾರಣ ಸ್ವರೂಪರುಂ, ಭಕ್ತವತ್ಸಲರುಂ ಸರ್ವಾಂಗ ಪ್ರಾಣಲಿಂಗ ಮೂರ್ತಿನಿವಾಸರುಂ, ಪುಲಿಗೆರೆಯ ಪುರವರಾಧೀಶ್ವರರುಂ, ಅಪೂರ್ವ ಸ್ವಯಂಭು ಪ್ರಸನ್ನ ಚನ್ನ ದಕ್ಷಿಣ ಶ್ರೀ ಸೋಮನಾಥ ದೇವರ ದಿವ್ಯ ಶ್ರೀಪಾದ ಪದ್ಮಾರಾಧಕರುಂ, ತ್ರಿಕಾಂಡ ನಿಷ್ಠರುಂ, ಋಗ್ಯಜುಃಸಾಮಾಥರ್ವಣಾಂತರ್ಗತ ಪ್ರತಿಪಾದ್ಯ ಪ್ರಮುಖರುಂ, ಶ್ರುತಿ - ಸ್ಮೃತಿ - ಪುರಾಣಾಗಮೇತಿಹಾಸಾದಿ ನಾನಾ ಶಾಸ್ತ್ರಕೋವಿದರುಂ, ಪರಮ ವೀರಶೈವಾಗಮಾಚಾರ್ಯರುಂ, ಸಕಲ ಪ್ರಸಾದ ಪಂಚಾಕ್ಷರೀ ಮಂತ್ರಸಿದ್ಧರುಂ, ನಿತ್ಯ ಪರಿಪೂರ್ಣ ಸಚ್ಚಿದಾನಂದ ನಿರಂಜನರುಂ, ಪರಂಜ್ಯೋತಿ ಸ್ವರೂಪರುಮಪ್ಪ ಪರಮ ಗುರುಮೂರ್ತಿ ಜಗದಾರಾಧ್ಯರುಮಪ್ಪ ಮಹಾಲಿಂಗದೇವರ ಅನಾದಿ ಸಂಸಿದ್ಧ ಗುರುಕುಳದನ್ವಯವೆಂತೆಂದೊಡೇ—ಪ್ರಥಮದಲ್ಲಿ ನಿತ್ಯ ನಿರ್ಮಳ ನಿರಂಜನನಪ್ಪ ಪರಶಿವನು, ದ್ವಿತೀಯದಲ್ಲಿ ವಾಙ್ಮನಾತೀತನಪ್ಪ ನಂದಿಕೇಶ್ವರ ದೇವರು ತೃತೀಯದಲ್ಲಿ ಪರಮ ಋಷೀಶ್ವರನಪ್ಪ ದೂರ್ವಾಸ ದೇವರು, ಚತುರ್ಥದಲ್ಲಿ ದ್ವಿತೀಯ ಸ್ವಯಂಭು ತ್ರಿಣೇತ್ರ ದೇವರು, ಪಂಚಮದಲ್ಲಿ ಉರಿಲಿಂಗ ಪೆದ್ದಣ್ಣಂಗಳು, ಷಷ್ಠಮದಲ್ಲಿ ಸರ್ವೇಶ್ವರ ದೇವರು, ಸಪ್ತಮದಲ್ಲಿ ವಿಶ್ವೇಶ್ವರ ಪೆದ್ದಣ್ಣಗಳು, ಅಷ್ಟಮದಲ್ಲಿ ಸಂಹಿತೆಯ ಕಾಳಿದಾಸಭಟ್ಟರು, ನವಮದಲ್ಲಿ ಸದಾಶಿವ ದೇವರು, ದಶಮದಲ್ಲಿ ಪ್ರಣಮಿದೇವರು, ಏಕಾದಶದಲ್ಲಿ ಈಶಾನ್ಯದೇವರು, ದ್ವಾದಶದಲ್ಲಿ ಮೌನಿದೇವರು, ತ್ರಯೋದಶದಲ್ಲಿ ಚನ್ನಸೋಮದೇವರು, ಚತುರ್ದಶದಲ್ಲಿ ಬಾಗೆಯ ಬಂಕನಾಥದೇವರು, ಪಂಚದಶದಲ್ಲಿ ಶಂಕರ ದೇವರು, ಷೋಡಶದಲ್ಲಿ ಗಂಗಾಧರದೇವರು, ಸಪ್ತದಶದಲ್ಲಿ ಬಂಕನಾಥ ದೇವರು, ಅಷ್ಟದಶದಲ್ಲಿ ಪುರಾಣದ ಮಾಯಿದೇವ ಪಂಡಿತರು, ನವದಶದಲ್ಲಿ ಬಂಕಯ್ಯದೇವರು, ವಿಂಶತಿಯಲ್ಲಿ ಮಹಾಲಿಂಗದೇವರು, ಏಕವಿಂಶತಿಯಲ್ಲಿ ಕುಮಾರ ಬಂಕನಾಥ ದೇವರು, ಆ ಕುಮಾರ ಬಂಕನಾಥದೇವರ ದಿವ್ಯಜ್ಞಾನಾನಂದ ಕರಕಮಳದಲ್ಲಿ ಉದಯವಾದ ತಚ್ಛಿಷ್ಯ ಭಕ್ತಿ ಭಂಡಾರಿ ಜಕ್ಕಣ್ಣನು ಆ ಶ್ರೀ ಗುರುರಾಯಂಗೆ ಬಿನ್ನಪಂಗೆಯ್ವ, ಪರಮಗುರುವೇ,

ಪರಮಗುರುವೇ, ನಿಮ್ಮಡಿಗಳು ಎನ್ನ ಪೂರ್ವ ಜನ್ಮನಿವೃತ್ತಿಯಂ ಮಾಡಿ, ಪುನರ್ಜಾತನೆನಿಸಿ, ಅಂಗದಲ್ಲಿ ಲಿಂಗಪ್ರತಿಷ್ಠೆಯಂ ಮಾಡಿ, ಪ್ರಣವ ಪಂಚಾಕ್ಷರಿಯ ಪ್ರಾಣಸ್ಥಲದಲ್ಲಿ ಸ್ಥಾಪಿಸಿ, ಎನ್ನ ಕೃತಾರ್ಥನ ಮಾಡಿದಿರಿ ದೇವಾ. ಇನ್ನು ಎನ್ನ ಷಡಂಗವು ಲಿಂಗದಲ್ಲಿ ಲೀಯುವಹ ಭೇದವಂ ನಿರೂಪವಂ ಕೊಟ್ಟು ಪಾಲಿಸುದೆಂದೊಡೆ, ಆ ಶ್ರೀಗುರು ಸ್ವಾಮಿ ತಮ್ಮ ಪರಮ ಜ್ಞಾನಾನುಭಾವ ಪ್ರಸನ್ನ ಪ್ರಕಾಶದಿಂದ ಷಟ್‌ಸ್ಥಲವನು ಪ್ರಭುದೇವರ ವಚನಂಗಳಿಂದ ಸಂಕಲ್ಪಿಸಿ, ಸುಲಲಿತ ವಾಕ್ಯಾಮೃತವಾಗಿ, ಆ ವಚನಂಗಳನು ಟೀಕಿಸಿ, ಪರಮಾರ್ಥ ತತ್ವಬೋಧೆಯನು ನಿರೂಪಿಸಿದ ಭೇದವೆಂತಿರ್ದು ದೆಂದೊಡೆ, ಮುಂದೆ ಪ್ರಥಮದಲ್ಲಿ ಪಿಂಡಸ್ಥಲವಾದುದು.



ಪ್ರಭುದೇವರ ಪಿಂಡಸಂಭವವಾದ ಗದ್ಯ. ನಿತ್ಯನಿರಂಜನ ಪರಂಜ್ಯೋತಿ ವಾಙ್ಮನಕ್ಕಗೋಚರಮಪ್ಪ ಶ್ರೀ ಪರಮೇಶ್ವರನು ಕೈಲಾಸದಲ್ಲಿಹ ಎಲ್ಲ ಶಿವಗಣಂಗಳೊಳಗೆ ಅತ್ಯಂತ ಶ್ರೇಷ್ಠನಾಗುತ್ತಿಹ ಮಾಯಾಕೋಳಾಹಳನೆಂಬ ಗಣೇಶ್ವರನು ಒಪ್ಪುತ್ತಿರಲು ಆ ಮಾಯೆಯೊಂದು ದಿನ ಶ್ರೀ ಪಾರ್ವತೀದೇವಿಯವರು ಪರಮೇಶ್ವರನ ಕೂಡೆ ಸಂವಾದಿಸಿ ಈ ಮಾಯಾ ಕೋಳಾಹಳನೆಂಬ ಗಣೇಶ್ವರನು ಆ ಮಾಯೆ ತೋರಿದ ಪರಿ ಎಂತು, ಈತನ ಮಾಯಾಪಕಲನ ಮಾಡಿ ತೋರುವೆನೆಂದು ಪ್ರತಿಜ್ಞೆಯಂ ಮಾಡಿ ತನ್ನ ಓಲಗದ ವಾದ್ಯವ ಬಾರಿಸುವ ಒಬ್ಬ ರುದ್ರ ಕನ್ನಿಕೆಯ ಕರೆದು ನೀನು ಈ ಮಾಯಾ ಕೋಳಾಹಳನೆಂಬ ಗಣೇಶ್ವರನ ಸೋಲಿಸಿ ಬಾ ಎಂದು ನಿರೂಪಿಸಲು ಮಹಾ ಪ್ರಸಾದವೆಂದು ಅನುಜ್ಞೆಯಂ ಕೈಕೊಂಡು ಆ ರುದ್ರ ಕನ್ನಿಕೆ ಶಿವನ ಓಲಗಕ್ಕೆ ಬಪ್ಪ ದಾರಿಯೊಳು ತನ್ನ ಮಾಯಾ ವಿಲಾಸ ಸ್ವರೂಪವಂ ತೋರಿ ಮೆರೆಯುತ್ತ ಮುಂದೆ ಬಂದು ನಿಂದಿರಲು ಆ ಗಣೇಶ್ವರನು ಬರುತ ಆ ಕನ್ನಿಕೆಯ ರೂಪಲಾವಣ್ಯಮಂ ಕಂಡು ಮನ ಪುಟ್ಟಿ ಹಾರೈಸಿ ತನ್ನ ತಾನೆಚ್ಚತ್ತು ಹಾ ಎಂದು ಬೆರಗಾಗಿ ಎನಗೀ ಮಾಯಾಧೀನ ಸಂಬಂಧಿಸಿತಲ್ಲಾ ಎನುತ್ತ ಚಿಂತಾಕ್ರಾಂತನಾಗಿ ಶಿವನೋಲಗಕ್ಕೆ ಬರಲು ಅವನು ಆ ಗಣೇಶ್ವರನ ಸ್ಥಿತಿಯನರಿದು ನೀನು ಮಾಯೆಗೆ ಮನಸೋತ ಕಾರಣ ಮಾಯಾಧೀನನಾಗಿ ಮರ್ತ್ಯದಲ್ಲಿ ಹುಟ್ಟಿ ಹೋಗೆನಲು, ದೇವಾ, ನಾನು ಮರ್ತ್ಯದಲ್ಲಿ ಹುಟ್ಟಿ ನಿಮ್ಮನೆಂತರಿವೆನೆನಲು ಅದಕ್ಕೆ ನೀನು ಅಂಜದಿರು, ನಾನು ನಿನ್ನ ಮುಸುಕಿದ ಮಾಯೆಯಂ ನಿವೃತ್ತಿಯ

ಮಾಡಿ ನಿನ್ನ ಸಂಸಾರ ಬಂಧನವಮಂ ಬಿಡಿಸಿ ನಿನ್ನ ಅಂತರಂಗದಲ್ಲಿ ನಾನು ಗುರುಮೂರ್ತಿಯಾಗಿ ಬಹಿರಂಗದಲ್ಲಿ ಅನುವಿಷನೆಂಬ ಗುರುಮೂರ್ತಿ ಯಾಗಿ ನಿನ್ನ ಕರಸ್ಥಲಕ್ಕೆ ಮಹಾಲಿಂಗವಮಂ ತೋರಿಸಿಕೊಟ್ಟು ಸದ್ಯೋನ್ಮು ಕ್ತನಂ ಮಾಡಿದಪೆನು. ನೀನು ಮರ್ತ್ಯದಲ್ಲಿ ಹೋಗಿ ಶ್ರೀ ವೀರಶೈವಾಚಾ ರಕ್ಕೆ ಪ್ರಥಮಾಚಾರ್ಯ ಪುರುಷನಾದಪೆ. ನಿನ್ನಿಂದ ಮರ್ತ್ಯ ಲೋಕದ ಮಹಾ ಗಣಂಗಳೆಲ್ಲರು ಕೃತಾರ್ಥರಾದಪರು, ಹೋಗೆಂದು ಶಿವನು ಅಭಯ ಹಸ್ತಮಂ ಕೊಡಲು ಮಹಾ ಪ್ರಸಾದವೆಂದನುಜ್ಞೆಯಂ ಕೈಕೊಂಡು ಮಾನು ಷಾಕಾರ ಚೈತನ್ಯ ಕಳೆಯ ಧರಿಸಿ ಮೇರುವಿಂಗೆ ದಕ್ಷಿಣ ಭಾಗದ ಜಂಬೂ ದ್ವೀಪದ ಮಧ್ಯದೊಳು ನಾಗವಸಾಧಿಪತಿ ಎಂಬ ಶಿವಭಕ್ತನ ಸತಿ ಸುಜ್ಞಾನ ದೇವಿಯ ಬಸಿರಲ್ಲಿ ಕಳಾಪ್ರವೇಶಿತನಾಗಿ ಜನಿಸಿ ಅಲ್ಲಮನೆಂಬ ನಾಮವಂ ಧರಿಸಿರಲು ಆ ರುದ್ರ ಕನ್ನಿಕೆಯು ಶಿವನಿರೂಪದಿಂದ ಆ ಪುರದಲೊಬ್ಬ ಶಿವಭಕ್ತನ ಬಸಿರಲ್ಲಿ ಜನಿಸಿ ಕಾಮಲತೆ ಎಂಬ ನಾಮವಮಂ ಧರಿಸಿರಲು ಆ ಸ್ತ್ರೀಗೆ ತಾನು ಪುರುಷನಾಗಿ ಸುಖ ಸಂಗದಿ ಕೆಲವು ಸಂವತ್ಸರಂಗಳಂ ಕಳೆಯಲು ಆ ಕಾಮಲತೆಯು ವಿಶ್ರಾಪವಸ್ಥೈದಿ ತನಗೆಯು ಶ್ರೀ ಪರಮೇ ಶ್ವರನ ಕರುಣ ಪ್ರಸನ್ನಮಪ್ಪ ಕಾಲದೊಳು ಅಲ್ಲಮ ಪ್ರಭುರಾಯನ ಸಂಗ ತದೊಳಗಡಗಿರ್ದ ಶಿವ ತತ್ವ ದರ್ಶನವೆಂತಿರ್ದುದೆಂದಡೆ,

**ಪ್ರಥಮದಲ್ಲಿ ಪಿಂಡಸ್ಥಲವಾದದು.**

---

## ಪಿಂಡಸ್ಥಲ.

೧. ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬ ದಂತೆ, ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಶ್ಶಬ್ದದಂತೆ ಗುಹೇ ಶ್ವರಾ ನಿಮ್ಮ ಶರಣಸಂಬಂಧ.

ಟೀಕು:—ಶಿಲೆಯೊಳಗಿಪ್ಪ ಅಗ್ನಿ ವ್ಯಕ್ತದೋರದ ಹಾಗೆ, ಪರಬ್ರಹ್ಮವು ಪಿಂಡಸ್ಥವಾಗಿದ್ದು ಕಾಣಿಸಬಾರದೆಂಬುದೀಗ, ಶಿಲೆಯೊಳಗಣ ಪಾವಕನಂತೆ ಎಂಬ ಶಬ್ದಕ್ಕರ್ಥ. ಅವುದಾನೊಂದು ಪ್ರತಿಬಿಂಬವು ಉದಕದೊಳಗಿರ್ದು, ಉದಕದ ಗುಣಧರ್ಮ ಕರ್ಮವ ಹೊದ್ದದ ಹಾಗೆ, ಆ ಪರಬ್ರಹ್ಮವು ಪಿಂಡ

ಸ್ಥವಾಗಿರ್ದು, ಆ ಪಿಂಡದ ಗುಣ ಧರ್ಮ ಕರ್ಮವ ಹೊದ್ದದಿಪ್ಪುದೀಗ, ಉದಕದೊಳಗಣ ಪ್ರತಿಬಿಂಬದಂತೆ ಎಂಬ ಶಬ್ದಕ್ಕರ್ಥ. ಬೀಜದೊಳಗಣ ವೃಕ್ಷದ ಹಾಗೆ, ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಪಿಂಡದ ಮಧ್ಯದಲ್ಲಿ ಗೂಢವಾಗಿಪ್ಪುದೆಂಬುದೀಗ, ಬೀಜದೊಳಗಣ ವೃಕ್ಷದಂತೆ ಎಂಬ ಶಬ್ದಕ್ಕರ್ಥ. ಶಬ್ದದೊಳಗೆ ನಿಶ್ಶಬ್ದವಿದ್ದುದನು ಭೇದಿಸಬಾರದ ಹಾಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು, ಅಭೇದ್ಯವಾಗಿಪ್ಪುದೆಂಬುದೀಗ ಶಬ್ದದೊಳಗಣ ನಿಶ್ಶಬ್ದದಂತೆ ಎಂಬುದಕ್ಕರ್ಥ. ಇದು ಪಿಂಡಸಂಭವ ನಿರ್ವಚನ.

೨. ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ? ಬೀಜದೊಳಗಣ ವೃಕ್ಷ ಉಲಿಯಬಲ್ಲುದೆ? ತೋರಲಿಲ್ಲಾಗಿ ಬೀರಲಿಲ್ಲಾರಿಗೆಯು ಗುಹೇಶ್ವರಾ ನಿಮ್ಮ ನಿಲವ ಅನುಭವ ಸುಖಿ ಬಲ್ಲ.

ಟೀಕು:— ಶಿಲೆಯೊಳಗಿಪ್ಪ ಅಗ್ನಿ ಸ್ಫುರಿಸದಂತೆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಆ ಪಿಂಡದಿಂದ ವ್ಯತಿರಿಕ್ತನಾಗಿ ತೋರಲರಿಯದೆಂಬುದೀಗ ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ ಎಂಬ ಶಬ್ದಕ್ಕರ್ಥ. ಬೀಜದೊಳಗಡಗಿಪ್ಪ ವೃಕ್ಷದಂತೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ವ್ಯಧೋದಿಪ್ಪುದೀಗ ಬೀಜದೊಳಗಣ ವೃಕ್ಷ ಉಲಿಯಬಲ್ಲುದೇ ಎಂಬ ಶಬ್ದಕ್ಕರ್ಥ. ಇಂತಪ್ಪ ಪರಬ್ರಹ್ಮವು ತಾನೊಂದಕ್ಕೆಯು ತೋರಲಿಲ್ಲಾಗಿ, ತೋರಲಿಲ್ಲಾಗಿ ಬೀರಲಿಲ್ಲಾರಿಗೆಯೂ ಎಂಬ ಶಬ್ದಕ್ಕರ್ಥ. ಈ ನಿಲವನಾರು ಬಲ್ಲರೆಂದಡೆ ಇದಂ ಹಮ್ಮೆಂಬ ಉಭಯವಳಿದ ಮಹಾನುಭಾವಿ ಬಲ್ಲನೆಂಬುದೀಗ ಅನುಭವ ಸುಖಿ ಬಲ್ಲನೆಂಬ ಶಬ್ದಕ್ಕರ್ಥ.

೩. ಜಲದೊಳಗಿರ್ದ ಕಿಚ್ಚು ಜಲವ ಸುಡದೆ, ಜಲವು ತಾನಾಗಿಯೆ ಇದ್ದಿತ್ತು ನೋಡಾ. ನೆಲೆಯನರಿದು ನೋಡಿಹೆನೆಂದಡೆ, ಅದು ಜಲವು ತಾನಲ್ಲ. ಕುಲದೊಳಗಿರ್ದು ಕುಲವ ಬೆರಿಸದೆ ನೆಲೆಗೆಟ್ಟು ನಿಂದುದುನಾರು ಬಲ್ಲರು? ಹೊರಗೊಳಗೆ ತಾನಾಗಿರ್ದು ಮತ್ತೆ ತಲೆದೋರದಿಪ್ಪುದು ಗುಹೇಶ್ವರಾ ನಿಮ್ಮ ನಿಲವು ನೋಡಾ.

ಟೀಕು:— ಶುಕ್ಲ ಶೋಣಿತಾತ್ಮ ಸಂಗದಿಂದಾದ ಜಲಬುದ್ಬುದ ಪಿಂಡದೊಳಗೆ ಅಡಗಿಪ್ಪ ಪರಶಿವ ಜ್ಞಾನಾಗ್ನಿ ಜಡಪಿಂಡವ ದಗ್ಧವ ಮಾಡಲರಿಯದಲ್ಲಿಯೇ ಗತವಾಗಿ ತದ್ರೂಪಾಗಿದ್ದಿತ್ತೆಂಬುದೀಗ, ಜಲದೊಳಗಿರ್ದ

ಕಿಚ್ಚು ಜಲವ ಸುಡದೆ ಜಲವು ತಾನಾಗಿದ್ದಿತೆಂಬ ಶಬ್ದಕ್ಕರ್ಥ. ವಿವೇಕದಿಂದ ತಿಳಿದು ನೋಡಿದಡೆ ಆ ಶಿವಜ್ಞಾನ ಜಡಪಿಂಡರೂಪಲ್ಲವೆಂಬುದೀಗ ನೆಲೆಯನರಿಯಬಲ್ಲಡೆ ಅದು ಜಲವು ತಾನಲ್ಲವೆಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಜಾತಿ ವರ್ಣಾಶ್ರಮ ಕುಲಗೋತ್ರ ನಾಮಂಗಳೊಳಗೆ ವೇಧಿಸಿಕೊಂಡಿರ್ದು ಹೊದ್ದಿಯೂ ಹೊದ್ದದೆ ಸರ್ವತೋಧಿಕವಾಗಿದ್ದಿತ್ತೆಂಬುದೀಗ ಕುಲದೊಳಗಿರ್ದು ಕುಲವ ಬೆರಸದೆ ನೆಲೆಗೆಟ್ಟುಹೋಗಿ ನಿಂದುದನಾರು ಬಲ್ಲರು ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅಂತರಂಗ ಬಹಿರಂಗದೊಳಗೆ ಪರಿಪೂರ್ಣವಾಗಿರ್ದು ಅನ್ಯವಾಗಿ ತೋರಿಸಿಕೊಳ್ಳಲರಿಯದೆ ಗೋಪ್ಯವಾಗಿಪ್ಪುದೆಂಬುದೀಗ ಒಳಹೊರಗೆ ತಾನಾಗಿ ಮತ್ತೆ ತಲೆದೋರದಿಪ್ಪುದು ಗುಹೇಶ್ವರಾ ನಿಮ್ಮ ನಿಲವು ನೋಡಾ ಎಂಬ ಶಬ್ದಕ್ಕರ್ಥ.

೪. ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮಿಂಚಿನಂತೆ, ಬಯಲ ಮರೆಯಲಡಗಿರ್ದ ಮರೀಚನಂತೆ ಕಂಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರಾ ನಿಮ್ಮ ನಿಲವು.

ಟೀಕು:—ಭೂಗತವಾಗಿಪ್ಪ ನಿಧಾನದಂತೆ, ಪರಬ್ರಹ್ಮವು ಪಿಂಡಮಧ್ಯದಲ್ಲಿ ಗತವಾಗಿ ಕಾಣಬಾರದಿಪ್ಪುದೀಗ, ನೆಲದ ಮರೆಯ ನಿಧಾನದಂತೆ ಎಂಬ ಶಬ್ದಕ್ಕರ್ಥ. ಮೇಘದೊಳಗೆ ಸ್ಫುರಿಸದಿಪ್ಪ ಕ್ಷಣಿಕದಂತೆ ಆ ಪರಬ್ರಹ್ಮವು ಪಿಂಡ ಮಧ್ಯದೊಳಗೆ ಇರ್ದು ಬೇರಿಟ್ಟು ತೋರಲರಿಯದೆಂಬುದೀಗ, ಮುಗಿಲ ಮರೆಯ ಮಿಂಚಿನಂತೆ ಎಂಬ ಶಬ್ದಕ್ಕರ್ಥ. ಬಯಲೊಳಗಡಗಿದ ಮರೀಚಿಯ ನಿಃಕಂಪಿತದಂತೆ, ಆ ಪರಬ್ರಹ್ಮವು ಪಿಂಡದೊಳಗಿರ್ದು ನಿಶ್ಚಲವಾಗಿಪ್ಪುದೆಂಬುದೀಗ ಬಯಲ ಮರೆಯಲಡಗಿದ ಮರೀಚನಂತೆ ಎಂಬ ಶಬ್ದಕ್ಕರ್ಥ. ಕಂಗಳ ಪಟಲದೊಳಗಿರ್ಪ ಪ್ರಭೆ ಕಂಗಳಿಂದ ವ್ಯತಿರಿಕ್ತವಾಗಿ ವಿವರಿಸಬಾರದಂತೆ, ಆ ಪರಬ್ರಹ್ಮವು ಪಿಂಡಸ್ಥವಾಗಿಪ್ಪುದು. ಅದ ವಿವರಿಸಬಾರದೆಂಬುದೀಗ ಕಂಗಳ ಮರೆಯಲಡಗಿರ್ದ ಪ್ರಭೆಯಂತೆ ಎಂಬ ಶಬ್ದಕ್ಕರ್ಥ.

**ಇದು ಪಿಂಡದ ನಿಜದ ನಿಲವು. ಪಿಂಡಸ್ಥಲ ಸಮಾಪ್ತ.**



ಇಂತಪ್ಪ ಮಹಾಪಿಂಡಸ್ಥಲವು ತಾ ತನ್ನ ಲೀಲೆಯಿಂ ತನ್ನೊಳಗಡಗಿದ ಸಕಲ ನಿಷ್ಕಲಾತ್ಮ ತತ್ವಂಗಳನುಂಟು ಮಾಡಿ ತೋರಬೇಕೆಂದು ಇಚ್ಛೈಸಲು ಜ್ಞಾನೋದಯವಾಯಿತ್ತಾಗಿ ಮುಂದೆ ಪಿಂಡಜ್ಞಾನಸ್ಥಲದ ವಚನ.

## ಪಿಂಡಜ್ಞಾನಸ್ಥಲ.

೫. ಆದಿಯಾಧಾರವಿಲ್ಲದಂದು ಹಮ್ಮು ಬಿಮ್ಮುಗಳಿಲ್ಲದಂದು ಸುರಾಳ ನಿರಾಳವಿಲ್ಲದಂದು ಸಚರಾಚರವೆಲ್ಲ ರಚನೆಗೆ ಬಾರದಂದು ಗುಹೇಶ್ವರಾ ನಿಮ್ಮ ಶರಣನುದಯಿಸಿದನಂದು ॥೫॥

ಟೀಕು:— ಆದಿಯಾಧಾರವೆಂಬೆರಡು ಕುರುಹುಗೊಳಿಸದ ಮುನ್ನ ಎಂಬುದೀಗ ಆದಿ ಆಧಾರವಿಲ್ಲದಂದು ಎಂಬ ಶಬ್ದಕ್ಕರ್ಥ ಮದಹಂಕಾರವೈದೋರದ ಮುನ್ನವೆಂಬುದೀಗ ಹಮ್ಮು ಬಿಮ್ಮು ಇಲ್ಲದಂದು ಎಂಬ ಶಬ್ದಕ್ಕರ್ಥ. ಸಕಳ ನಿಃಕಳವೆಂಬೆರಡು ಹುಟ್ಟದಂದು ಎಂಬುದೀಗ ಸುರಾಳ ನಿರಾಳವಿಲ್ಲದಂದು ಎಂಬ ಶಬ್ದಕ್ಕರ್ಥ. ಸಮಸ್ತ ಲೋಕ ಪ್ರಪಂಚು ಪಸರಿಸದಂದು ಎಂಬುದೀಗ ಸಚರಾಚರವೆಲ್ಲ ರಚನೆಗೆ ಬಾರವಂದು ಎಂಬ ಶಬ್ದಕ್ಕರ್ಥ. ಇವಾವಾವು ಇಲ್ಲದಂದು ಇಪ್ಪ ಮಹಾಘನದೊಳಗೆ ಚಿಚ್ಛಕ್ತಿ ಹುಟ್ಟಲು ಆ ಚಿಚ್ಛಕ್ತಿಯು ಸ್ವರೂಪನೇ ಶರಣ ರೂಪಾಗಿ ಉದಯವಾಯಿತ್ತೆಂಬುದೀಗ ಗುಹೇಶ್ವರನ ಶರಣನುದಿಸಿದನಂದು ಎಂಬ ಶಬ್ದಕ್ಕರ್ಥ. ॥೫॥

೬. ನಾದಬಿಂದುಗಳಿಲ್ಲದಂದು, ನಿರ್ಭಯನೆಂಬ ಗಣೇಶ್ವರನು. ಉತ್ಪತ್ತಿ ಸ್ಥಿತಿಲಯವಿಲ್ಲದಂದು, ಅಕ್ಷಯನೆಂಬ ಗಣೇಶ್ವರನು. ಓದು ವೇದಂಗಳಿಲ್ಲದಂದು ಓಂಕಾರನೆಂಬ ಗಣೇಶ್ವರನು. ಯುಗ ಜುಗವಿಲ್ಲದಂದು ಊರ್ಧ್ವಮುಖನೆಂಬ ಗಣೇಶ್ವರನು. ಗುಹೇಶ್ವರನೆಂಬ ಲಿಂಗವಿಲ್ಲದಂದು ನಿರ್ಮಾಯನೆಂಬ ಗಣೇಶ್ವರನು.

ಟೀಕು:— ನಾದಬಿಂದು ಸಂಜ್ಞೆಯಪ್ಪ ಶಿವಶಕ್ತಿ ಪಿಂಡವ ಧರಿಸಿದ ಶಂಕೆಯ ಭಯವು ಎನ್ನಿಂದಾಯಿತ್ತಲ್ಲದೆ, ಆ ನಾದಬಿಂದುವಿಲ್ಲದ ತಾನು ನಿರ್ಭಯನೆಂಬದೀಗ ನಾದಬಿಂದುವಿಲ್ಲದಂದು ನಾನು ನಿರ್ಭಯನೆಂಬು

ಗಣೇಶ್ವರನು ಎಂಬ ಶಬ್ದಕ್ಕರ್ಥ. ಉತ್ಪತ್ತಿ ಸ್ಥಿತಿ ಲಯವಿಲ್ಲದಂದು ಅನಿತ್ಯಭಾವವೆಂಬುದೆನ್ನಿಂದಾಯಿತ್ತಲ್ಲದೆ, ಆ ಉತ್ಪತ್ತಿ ಸ್ಥಿತಿಲಯದವ ನಾನಲ್ಲ. ನಾನು ಅಕ್ಷಯನೆಂಬುದೀಗ ಉತ್ಪತ್ತಿ ಸ್ಥಿತಿಲಯವಿಲ್ಲದಂದು ನಾನು ಅಕ್ಷಯನೆಂಬ ಗಣೇಶ್ವರನು ಎಂಬ ಶಬ್ದಕ್ಕರ್ಥ. ಅದು ಬ್ರಹ್ಮ ಇದು ಬ್ರಹ್ಮವೆಂದು ವಚಿಸುವ ಶೃತಿಪ್ರಮಾಣವಾಕ್ಯ ಎನ್ನಿಂದಾಯಿತ್ತಲ್ಲದೆ, ಈ ಉಲುಹಿಲ್ಲದೊಡೆ ನಾನು ಪ್ರಣವರೂಪನೆಂಬುದೀಗ ಓದು ವೇದಂಗಳಿಲ್ಲದಂದು, ಓಂಕಾರನೆಂಬ ಗಣೇಶ್ವರನೆಂಬ ಶಬ್ದಕ್ಕರ್ಥ. ಯುಗ ಜುಗ ಬ್ರಹ್ಮಾಂಡಂಗಳೆಂಬ ಅಧೋಮುಖ ಎನ್ನ ಉದಯದಿಂದಾದವಲ್ಲದೆ, ನಾನು ಊರ್ಧ್ವಮುಖನೆಂಬುದೀಗ ಯುಗ ಜುಗಂಗಳಿಲ್ಲದಂದು ಉರ್ಧ್ವ ಮುಖನೆಂಬ ಗಣೇಶ್ವರನೆಂಬ ಶಬ್ದಕ್ಕರ್ಥ. ನಾನು ಲಿಂಗವೆಂಬುಭಯ ಸಂದೇಹ ಭ್ರಾಂತು ಎನ್ನಿಂದಾಯಿತ್ತಲ್ಲದೆ, ಈ ಸಂದೇಹ ಭ್ರಾಂತಳಿದಡೆ, ನಾನು ನಿರ್ಮಾಯನೆಂಬುದೀಗ ಗುಹೇಶ್ವರಲಿಂಗವಿಲ್ಲದಂದು ನಾನು ನಿರ್ಮಾಯನೆಂಬ ಗಣೇಶ್ವರನೆಂಬ ಶಬ್ದಕ್ಕರ್ಥ.

೭. ಅಯ್ಯಾ, ಜಲ ಕೂರ್ಮ ಗಜ ಫಣಿಯ ಮೇಲೆ ಧರೆ ವಿಸ್ತರಿಸಿ ನಿಲ್ಲದಂದು, ಗಗನವಿಲ್ಲದಂದು, ಪವನನ ಸುಳುಹಿಲ್ಲದಂದು, ಅಗ್ನಿಗೆ ಕಳೆದೋರದಂದು, ತರುಗಿರಿ ತೃಣ ಕಾಷ್ಠಂಗಳಿಲ್ಲದಂದು, ಯುಗ ಜುಗ ಮಿಗಿಲೆನಿಸಿ ನಿಂದ ಹದಿನಾಲ್ಕು ಭುವನ ನೆಲೆಗೊಳ್ಳದಂದು, ನಿಜವನರಿದಿಹೆನೆಂಬ ತ್ರಿಜಗದಾಧಿಪತಿಗಳಲ್ಲದಂದು ತೋರುವ ಬೀರುವ ಭಾವದಲ್ಲಿ ಭರಿತ ಅಗಮ್ಯ ಗುಹೇಶ್ವರ ಲಿಂಗವು.

ಟೀಕು.––ಪಂಚಭೂತಾದಿ ಸ್ಥಾವರ ಜಂಗಮವಿಲ್ಲದಂದು ಸ್ವಯಂಭುವಾಗಿಪ್ಪುದು ನಿಜವೆಂಬುದೀಗ ಜಲಕೂರ್ಮಗಜ ಫಣಿಯ ಮೇಲೆ ಧರೆ ವಿಸ್ತರಿಸಿ ನಿಲ್ಲದಂದು, ಗಗನವಿಲ್ಲದಂದು ಪವನನ ಸುಳುಹಿಲ್ಲದಂದು, ಅಗ್ನಿಗೆ ಕಳೆದೋರದಂದು, ತರುಗಿರಿ ತೃಣಕಾಷ್ಠಾದಿಗಳಿಲ್ಲದಂದು ಎಂಬ ಶಬ್ದಕ್ಕರ್ಥ. ಯುಗಜುಗ ಮಿಗಿಲೆನಿಸಿ ನಿಂದ ಹದಿನಾಲ್ಕು ಭುವನ ನೆಲೆಗೊಳ್ಳದಂದು ನಿಜವು ಸ್ವಯಂಭುವೆಂಬುದೀಗ ಕಾಣ ಬಂದರ್ಥ. ಆ ನಿಜವ ಕಂಡಿಹೆನರಿದಿಹೆನೆಂಬ ಬ್ರಹ್ಮ ವಿಷ್ಣು ರುದ್ರರುಗಳಿಲ್ಲದಂದು ಎಂಬುದೀಗ ನಿಜವನರಿದಿಹೆನೆಂಬ ತ್ರಿಜಗದಾಧಿಪತಿಗಳಿಲ್ಲದಂದು ಎಂಬ ಶಬ್ದಕ್ಕರ್ಥ. ಈ ಭಾವವು ಇಲ್ಲದಂದು ಆ ಪರಬ್ರಹ್ಮವೆಲ್ಲ ನಿಜವಾಗಿಪ್ಪುದೆಂದು ತನಗೆ ತೋರುವ ಬೀರುವ ಭಾವದೊಳಗೆ ಆ ವಸ್ತು ತದ್ಗತವಾಗಿ ಭರಿತವಾಗಿ

ಸಿರ್ಗಮಾನವಾಗಿಪ್ಪುದೆಂಬುದೀಗ ತೋರುವ ಬೀರುವ ಭಾವದ ಪರಿಯು ಆ ಭಾವದಲ್ಲಿ ಭರಿತ ಅಗಮ್ಯ ಗುಹೇಶ್ವರನೆಂಬ ಶಬ್ದಕ್ಕರ್ಥ.

೮. ಅಯ್ಯಾ, ನೀನು ನಿರಾಳ ನಿರ್ಮಾಯನಾಗಿಪ್ಪೆಯಾಗಿ, ಆಕಾಶದ ಪ್ರಕಾಶವಿಲ್ಲದಂದು, ಸಾಕ್ಷಿಸಭೆಗಳಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು, ಆಧಾರದೊಳಗಣ ವಿಭೂತಿಯನೆ ತೆಗೆದು, ಭೂಮಿಯು ನೆಲೆಗೊಳಿಸಿ, ಪಂಚಾಶತ್‌ಕೋಟಿ ವಿಸ್ತೀರ್ಣ ಭೂಮಂಡಲಕ್ಕೆ ಸುತ್ತಿ ಹರಿವ ಸಪ್ತಸಾಗರಂಗಳು ಎಂಭತ್ತಾರು ಕೋಟಿಯು ತೊಂಭತ್ತೇಳು ಲಕ್ಷ ಕಾಲ ಭುವನ ಮಂಡಲಕ್ಕೆ ಉದಯ ಬ್ರಹ್ಮಾಂಡ ಆರುವತ್ತಾರುಕೋಟಿ ತಾರಾಮಂಡಲವೆಂದಡೆ, ಬೆಳಗಿ ತೋರಿದ ಹನ್ನೆರಡು ಜ್ಯೋತಿಯು, ನಿಲಿಸಿ ತೋರಿದ ಹದಿನಾಲ್ಕು ಭುವನವ. ಈ ಜಗದ ಜಂಗುಳಿಯ ಕಾವ ಗೋವಳ ತಾನಾಗಿ ಚವುರಾಶಿ ಲಕ್ಷ ಜೀವರಾಶಿಗಳಿಗೆ ರಾಶಿವಾಳ ತಾನಾಗಿ ಸಕಲರ ಅಳಿವಿನ ಉಳಿವಿನ ನಿಂದ ನಿಜವ ನೋಡಿ ಕಂಡೆನು ಗುಹೇಶ್ವರಾ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು.

ಟೀಕು:— ನಿರಾಳ ನಿರ್ಮಾಯನಾಗುತ್ತಿಹ ಪರಶಿವನು, ಆಕಾಶ ಪ್ರಕಾಶಿಸದಂದು ನಿಜವಾಗಿದ್ದನೆಂಬುದೀಗ ಕಾಣ ಬಂದರ್ಥ. ತನ್ನ ನಿಜವನುಸುರಿಹೆನೆಂದಡೆ ತನ್ನಿಂವನ್ಯವಾರೂ ಇಲ್ಲವೆಂಬುದೀಗ ಸಾಕ್ಷಿ ಸಭೆಗಳಿಲ್ಲದಂದು ಎಂಬ ಶಬ್ದಕ್ಕರ್ಥ. ಸಚರಾಚರವೆಲ್ಲ ರಚನೆಗೆ ಬಾರದಂದು ನಿಜವಾಗಿದ್ದನೆಂಬುದೀಗ ಕಾಣ ಬಂದರ್ಥ. ಇಂತು ಇವಾವಾವು ಇಲ್ಲದಂದು ಜಗತ್ ಸೃಷ್ಟ್ಯರ್ಥಕಾರಣವಾಗಿ ತನ್ನ ಮಹದಹಂಕಾರ ಭೂಷಣಮಪ್ಪ ಚಿದ್ವಿಭೂತಿಯನು ಆತ್ಮಾಂತರ್ಗತ ಸ್ಥಾನದಿಂ ಬಹಿರ್ಗತವ ಮಾಡಲು, ಅದೇ ಚಿಚ್ಛಕ್ತಿ ಸ್ವರೂಪವಾಗಿ, ಚಿತ್ತಾಯತೆ ಧಾತುಬದ್ಧಂ ಶರೀರಸ್ಥಂ ಎನಿಸಿಕೊಂಡಿತ್ತಾಗಿ ಆಧಾರದೊಳಗಣ ವಿಭೂತಿಯನೆ ತೆಗೆದು ಭೂಮಿಯು ನೆಲೆಗೊಳಿಸಿದನೆಂಬ ಶಬ್ದಕ್ಕರ್ಥ. ಆ ಚಿತ್‌ಶಕ್ತಿಯಿಂದ ಪಂಚಸಾದಾಖ್ಯ ತತ್ವಂಗಳುದಯಿಸಿದವು. ಆ ಸಾದಾಖ್ಯ ತತ್ವಂಗಳಿಂದ ಅಷ್ಟತನುಗಳುದಯಿಸಿದವು. ಆ ಅಷ್ಟತನುಗಳಿಂದ ಬ್ರಹ್ಮಾಂಡವಾದಿಯಾದ ನಾನಾ ಪ್ರಪಂಚುಗಳುದಯಿಸಿದವೆಂಬುದರೊಳಗೆ, ಬ್ರಹ್ಮಾಂಡ ವಳಯ, ಸೂರ್ಯಮಂಡಲ, ತಾರಾಮಂಡಲ, ಚತುರ್ದಶಭುವನ ಕಾಲ ಕಲ್ಪಿತ ಪ್ರಮಾಣಂಗಳೆಲ್ಲವು ಅಡಗಿದವೆಂಬುದು ಕಾಣ ಬಂದರ್ಥ. ಚೌರಾಶಿಲಕ್ಷ ಜೀವ

ರಾಸಿಗಳಿಗೆ ಆ ಪರವಸ್ತುವೇ ಕರ್ತೃವೆಂಬುದು ಕಾಣಬಂದರ್ಥ. ಇಂತು ದಯಿಸಿದ ಸಮಸ್ತ ಪ್ರಪಂಚುಗಳು ಎಲ್ಲಿ ಅಡಗಿದವೆಂದರೆ "ಯದ್ದೃಷ್ಟಂ ತನ್ನಷ್ಟಂ" ಎಂದುದಾಗಿ, ಆ ಮಹತ್ತಿನೊಳಗಡಗಿದವೆಂಬುದು ಸಕಲರ ಅಳಿವಿನ ಉಳಿವಿನ ಎಂಬ ಶಬ್ದಕ್ಕರ್ಥ. ಆ ಉಳಿವೆಯ ಸುಜ್ಞಾನದೀಪ್ತಿಯಂ ಕಂಡೆನೆಂಬುದು ನೋಡಿ ಕಂಡೆನೆಂಬುದಕ್ಕರ್ಥ.

೯. ತಲೆ ಇಲ್ಲದ ತಲೆಯಾತಂಗೆ ಕರುಳಿಲ್ಲದ ಒಡಲು ನೋಡಾ. ಅನಲಂಗೆ ಅಂಗವಿಲ್ಲ. ದಂಗನೆ ಸತಿಯಾಗಿಪ್ಪಳು. ಇವರಿಬ್ಬರ ಬಸಿರಲ್ಲಿ ಹುಟ್ಟಿದಳೆಮ್ಮ ತಾಯಿ. ನಾ ಹುಟ್ಟಿ ತಾಯ ಕೈವಿಡಿದು ಸಂಗವ ಮಾಡಿ ನಿರ್ದೋಷಿಯಾದೆನು ಕಾಣಾ ಗುಹೇಶ್ವರಾ.

ಟೀಕು:—ಜ್ಞಾನದ ತೂರ್ಯವೆಂಬ ವೃತ್ತಿಜ್ಞಾನವಳಿದು ಶುದ್ಧಜ್ಞಪ್ತಿಯೇ ತಲೆ ಇಲ್ಲದ ತಲೆ ಎಂಬ ಶಬ್ದಕ್ಕರ್ಥ. ಆ ಜ್ಞಪ್ತಿಯೇ ಶಿರಸ್ಸಾಗಿಪ್ಪ ಪರಬ್ರಹ್ಮಕ್ಕೆ ಕರಣಾದಿಗಳೆಂಬ ಕರುಳಿಲ್ಲದ ಪರಕಾಯ ಒಡಲಾಯಿತ್ತಾಗಿ ಕರುಳಿಲ್ಲದ ಒಡಲೆಂಬ ಶಬ್ದಕ್ಕರ್ಥ. ಇಂತು ಪರಶಿವನೆಂಬ ಪುರುಷಂಗೆ ಅಕಾಯ ರೂಪಿಣಿಯಪ್ಪ ಪರಶಕ್ತಿಯೇ ಸ್ತ್ರೀಯಳಾಗಿಪ್ಪಳೆಂಬುದೀಗ ಅಂಗವಿಲ್ಲವಂಗನೆ ಸತಿಯಾಗಿಪ್ಪಳೆಂಬ ಶಬ್ದಕ್ಕರ್ಥ ಆ ಪರಶಿವನ ಆ ಪರಶಕ್ತಿಯ ಅಭಿನ್ನಸಂಯೋಗ ಮಥನದಿಂದ ಚಿತ್ಶಕ್ತಿ ಹುಟ್ಟಿದಳೆಂಬುದೀಗ ಇವರಿಬ್ಬರ ಬಸಿರಲ್ಲಿ ಹುಟ್ಟಿದಳೆಮ್ಮ ತಾಯಿ ಎಂಬ ಶಬ್ದಕ್ಕರ್ಥ. ಆ ಚಿತ್ಶಕ್ತಿಯ ಗರ್ಭದೊಳಗೆ ಶಿವಶರಣ ಹುಟ್ಟಿದ ಕಾರಣ, ನಾ ಹುಟ್ಟಿ ಎಂಬ ಶಬ್ದಕ್ಕರ್ಥ. ಆ ಚಿತ್ಶಕ್ತಿಯನು ಶರಣನು ಕೃತನಿಶ್ಚಯ ಹಸ್ತದಿಂ ದೃಢವಿಡಿದ ಕಾರಣ ತಾಯ ಕೈಯ್ಯವಿಡಿದು ಎಂಬ ಶಬ್ದಕ್ಕರ್ಥ. ಆ ಶರಣನು ಆ ಶಕ್ತಿಯಲ್ಲಿ ಸಮರಸ ಸಂಗವ ಮಾಡಿ ಸರ್ವ ದೋಷಂಗಳಳಿದನೆಂಬುದೀಗ ತಾಯ ಕಯ್ಯವಿಡಿದು ಸಂಗವ ಮಾಡಿ ನಿರ್ದೋಷಿಯಾದೆನೆಂಬ ಶಬ್ದಕ್ಕರ್ಥ.

೧೦. ಎನ್ನ ನಾನರಿಯದುದು ಮುನ್ನ ನೀನೇನಾಗಿರ್ದೆ ಹೇಳಾ? ಮುನ್ನ ಬಾಯ ಮುಚ್ಚಿಕೊಂಡಿರ್ದನೆಂಬುದು ನಾ ನಿನ್ನ ಕಣ್ಣಿಂದ ಕಂಡೆನು. ಎನ್ನ ನಾನರಿದ ಬಳಿಕ ಇನ್ನು ನೀ ಬಾಯ್ದೆರೆದು ಮಾತನಾಡಿದಡೆ ಅದ ನಿನ್ನ ಕಣ್ಣಿಂದ ಕಂಡು ನಾಚಿದೆ ನೋಡಾ. ಎನ್ನ ಕಾಂಬ ನಿನಗೆ ನಿನ್ನ ಕಾಂಬ ಎನಗೆ ಸುಚದ ನೋಟ ಒಂದೇ ನೋಡಾ ಗುಹೇಶ್ವರಾ. ನಿನ್ನ ಬೆಡಗಿನ ಬಿನ್ನಣವನರಿದೆ ನೋಡಾ ॥೧೦॥

ಟೀಕು:— ಶಿವಜ್ಞಾನೋದಯವಾದ ಶರಣನು ಅನಾದಿಯಲ್ಲಿ ಪರತತ್ವವು ನಿಶ್ಶಬ್ದವೆಂಬುದನು ಆ ಶಿವಜ್ಞಾನದೃಷ್ಟಿಯಲ್ಲಿ ನೋಡಿ ಕಂಡನು ಎಂಬುದೀಗ ಎನ್ನ ನಾನರಿಯದಂದು ಮುನ್ನ ನೀನೇನಾಗಿರ್ದೆ, ಮುನ್ನ ಬಾಯ ಮುಚ್ಚಿಕೊಂಡಿರ್ದನೆಂಬುದನು ನಾ ನಿನ್ನ ಕಣ್ಣಿಂದ ಕಂಡೆನೆಂಬ ಶಬ್ದಕ್ಕರ್ಥ. ಆ ಪರಶಿವ ತತ್ವದ ನಿಲವು ತಾನೆಂದರಿದ ಬಳಿಕ ನುಡಿದ ನುಡಿಯನು ತನ್ನ ಜ್ಞಾನ ದೃಷ್ಟಿಯಿಂದ ಕಂಡು ನಿವೃತ್ತಿಯ ಮಾಡಿದನೆಂಬುದೀಗ ಎನ್ನ ನಾನರಿದ ಬಳಿಕ ಇನ್ನು ನೀ ಬಾಯ್ದೆರೆದು ಮಾತನಾಡಿದಡೆ ಎನ್ನ ಕಣ್ಣಿಂದ ಕಂಡು ನಾಚಿದೆನೆಂಬ ಶಬ್ದಕ್ಕರ್ಥ. ಇಂತು ಶಿವತತ್ವ ಕಾಂಬ ಶರಣಂಗು ಆ ಶರಣನ ಕಾಂಬ ಶಿವತತ್ವಕ್ಕು ಮೂಲಜ್ಞಾನದೃಷ್ಟಿ ಒಂದೇ ಎಂದರಿದು ಪ್ರಭುದೇವರು ತಮ್ಮ ತಾವರಿದು ವಿವೇಕಿಸುತ್ತಿರ್ದರೆಂಬುದೀಗ ಎನ್ನ ಕಾಂಬ ನಿನಗೆ ನಿನ್ನ ಕಾಂಬ ಎನಗೆ ಸಂಚದ ನೋಟ ಒಂದೆ ಎಂಬ ಬೆಡಗನರಿದೆನೆಂಬ ಶಬ್ದಕ್ಕರ್ಥ.

೧೧. ಮಾಯೆಯ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದರಿದ ಪರಿಯ ನೋಡಾ. ಲಿಂಗವೆಂದರಿದ ಪರಿಯ ನೋಡಾ. ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗುಹೇಶ್ವರನೆಂದರಿದ ಪರಿಯ ನೋಡಾ.

ಟೀಕು:—ಮಾಯಾ ಪಾಶವ ಹರಿದು, ಭ್ರಾಂತಿಸೂತಕವಳಿದು, ಶಿವಜ್ಞಾನೋದಯವಾದ ಶರಣನು ಮಾಯಾ ಬಲೆಯಲ್ಲಿ ಸಿಲುಕಿದ ಮರುಳನಾನೆಂದರಿದ ಪರಿಯ ನೋಡಾ ಎಂಬ ಶಬ್ದಕ್ಕರ್ಥ. ಆ ಮಹಾಲಿಂಗದ ಘನವ ಸದ್ವಿವೇಕದಿಂ ವಿವೇಕಿಸಿ ಅರಿದು ಪರಮ ಹರುಷಿತನಾಗಿ ಲಿಂಗವೆಂದರಿದ ಪರಿಯ ನೋಡಾ ಎಂಬ ಶಬ್ದಕ್ಕರ್ಥ. ಎನ್ನ ಲೀಲೆಯಿಂದ ನಾನೆ ಸಂಸಾರವ ಹೊದ್ದಿಸಿಕೊಂಡೆನಲ್ಲದೆ, ನಿಜದಿಂದ ನೋಡಲು, ತಾನೇ ಪರಶಿವನೆಂಬುದೀಗ, ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗುಹೇಶ್ವರನನರಿದ ಪರಿಯ ನೋಡಾ ಎಂಬ ಶಬ್ದಕ್ಕರ್ಥ

**ಇಂತೀ ಪಿಂಡಜ್ಞಾನಸ್ಥಲ ಸಮಾಪ್ತ.**



ಇಂತು ತನ್ನ ಪಿಂಡಜ್ಞಾನದ ಲೀಲೆಯಿಂದ ಮಾಯಾ ಮಹದಾದಿ ಪ್ರಪಂಚು ತನಗನ್ಯವಾಗಿರಲು, ಆಮಾಯೆಯ ತಾನರಿದು ಬೇರ್ಪಡಿಸಿ ನಿವೃತ್ತಿಯ ಮುಖದಿಂದ ವಿಡಂಬಿಸುತ್ತಿರಲು ಮುಂದೆ ಮಾಯಾವಿಲಾಸ ವಿಡಂಬನಸ್ಥಲವಾದುದು.

## ಮಾಯಾ ವಿಲಾಸ ವಿಡಂಬನಸ್ಥಲ

ಕಾಯದ ಮೊದಲಿಂಗೆ ಬೀಜವಾವುದೆಂದರಿಯದೀ ಲೋಕ. ಇಂದ್ರಿಯಂಗಳು ಬೀಜವಲ್ಲ. ಆ ಕಳಾ ಭೇದವಲ್ಲ. ಸ್ವಪ್ನ ಬಂದೆರಗಿತ್ತಲ್ಲಾ. ಇದಾವಂಗೂ ಶುದ್ಧ ಸುಯಿಧಾನವಲ್ಲ ಕಾಣಾ ಗುಹೇಶ್ವರಾ.

ಟೀಕು:— ಶಿವಾಂಶಿಕರಾದಾತ್ಮರಿಗೆ ತನುಸಂಬಂಧದ ಜನನಕ್ಕೆ ಮೂಲವಾವುದೆಂದೊಡೆ ಇಂದ್ರಿಯಂಗಳಿಂದುದಯವಲ್ಲ. ಅದೇನು ಕಾರಣವೆಂದಡೆ, ಆ ಇಂದ್ರಿಯಂಗಳು ಜಡವಿಷಯಂಗಳಾದ ಕಾರಣವೆಂಬುದೀಗ, ಕಾಯದ ಮೊದಲಿಂಗೆ ಇಂದ್ರಿಯಂಗಳು ಬೀಜವಲ್ಲವೆಂಬ ಶಬ್ದಕ್ಕರ್ಥ. ಆತ್ಮನ ಕಲಾ ಭೇದದಿಂದಾದುದಲ್ಲ. ಅದೇನು ಕಾರಣವೆಂದೊಡೆ, ಆತ್ಮನು ನಿರ್ಮಲಮಪ್ಪ ಶಿವಕಲಾಂಶಿಕನಾದ ಕಾರಣವೆಂಬುದೀಗ ಆ ಕಳಾಭೇದವಲ್ಲವೆಂಬ ಶಬ್ದಕ್ಕರ್ಥ. ಈ ದೇಹ ಸಂಬಂಧಮುತ್ಪತ್ಯವೇತರಿಂದಾಯಿತ್ತೆಂದಡೆ ಶಿವ ತನ್ನ ತದಂಶವಾದಾತ್ಮರಿಗೆ ತಾನೇ ಮರವೆ ಘಟಿಸಲು ಆ ಮರವೆಯಾತ್ಮಂಗೆ ಎಡೆಯೊಕ್ಕ ಕಾರಣ ತಾನು ಶಿವಾಂಶಿಕವೆಂಬುದನು ಮರೆದು ದೇಹೋಹಂ ಎಂಬಲ್ಲಿ ದೇಹಭಾವ ಉದಯವಾಯಿತ್ತೆಂಬುದೀಗ ಸ್ವಪ್ನ ಬಂದೆರಗಿತ್ತಲ್ಲಾ ಎಂಬ ಶಬ್ದಕ್ಕರ್ಥ. ಇಂತು ಶಿವಜ್ಞಾನದಿಂದ ಆತ್ಮಂಗೆ ಬಂದ ಮರವೆಯು ದೇಹದ ಜನನಕ್ಕೆ ಮೊದಲೆಂಬುದನಾರಿಗೆಯು ಅರಿಯಬಾರದು. ಆ ಮರವೆಯುನಾರು ಸಂಸ್ಕಾರವ ಮಾಡಿ ಜನನಕ್ಕೆ ರಹಿತರಾಗಬಾರದೆಂಬುದೀಗ ಇದಾವಂಗೂ ಶುದ್ಧಸುಯಿಧಾನವಲ್ಲ ಕಾಣಾ ಗುಹೇಶ್ವರಾ ಎಂಬ ಶಬ್ದಕ್ಕರ್ಥ.

೧೬. ಅಂಡಜವೆಂಬ ತತ್ತಿಯೊಡೆದು ಪಿಂಡ ಪಲ್ಲಟವಾಗಿ ಗಂಡ ಗಂಡರನರಸಿ ತೊಳಲಿ ಬಳಲುತ್ತಿದ್ದಾರೆ. ಖಂಡ ಮಂಡಲದೊಳಗೆ ಕಂಡೆನೊಂದ ಚೋದ್ಯವ ಕಂದನ ಕೈಯ್ಯ ದರ್ಪಣವ ಪ್ರತಿಬಿಂಬ ನುಂಗಿತ್ತು. ದಿವಾ

ರಾತ್ರಿ ಉದಯದ ಬೆಳಗನು ಕತ್ತಲೆ ನುಂಗಿತ್ತು. ಗುಹೇಶ್ವರನಲ್ಲಿಯೇ ನಿರ್ವಯಲಾಯಿತ್ತು.

ಟೀಕು:—ಪರಶಿವತತ್ವದಲ್ಲಿ ಒಂದು ಚಿತ್ತೆಂಬ ಬಿಂದು ಉದಯಿಸಿ ಊರ್ಧ್ವರೇತಸ್ಸೆಂಬ ರಸಬದ್ಧದಿಂದ ಪಂಚವರ್ಣಾತ್ಮಕ ಸ್ವರೂಪಿಂ ಸಕಲ ತತ್ವವೆಂಬ ಶಿಸುವಂ ಗರ್ಭೀಕರಿಸಿಕೊಂಡಿಪ್ಪ ಕಾರಣದಿಂದೊಂದಂಡಾ ಕೃತಿ ಯಾಗಲು ಇದು ಅಂಡಜ ಶಬ್ದಕ್ಕರ್ಥ. ಆ ಚಿತ್ ಬ್ರಹ್ಮಾಂಡದೊಡಲೊಳಗೆ ಪ್ರಪಂಚ ಬ್ರಹ್ಮಾಂಡವೆಂಬ ತತ್ತಿ ಹುಟ್ಟಿತೆಂಬುದೀಗ ತತ್ತಿ ಶಬ್ದಕ್ಕೆ ನಿರ್ವಚನ. ಆ ಬ್ರಹ್ಮಾಂಡದೊಳಗೆ ಸಮಸ್ತ ಜೀವರಾಶಿಗಳು ಹುಟ್ಟುವಂದು ಹುಟ್ಟಿದನೊಬ್ಬ ಜೀವನು. ತನ್ನ ಸ್ವಭಾವ ಪಿಂಡವ ಮರೆದು, ಮಿಥ್ಯಪಿಂಡವ ಧರಿಸಲು ಅದು ಪಿಂಡ ಪಲ್ಲಟವಾಗಿ ಎಂಬ ಶಬ್ದಕ್ಕರ್ಥ. ಆ ಮಿಥ್ಯ ಪಿಂಡದೊಳಗೆ ಜ್ಞಾನೋದಯವಾದ ಸುಜ್ಞಾನಿಗಳು ತಮ್ಮ ನಿಲವಾವುದೆಂದರಿಯದೆ, ಇದಿರಿಟ್ಟುಕೊಂಡು ಪರಬಹ್ಮವನರಸುತಿಪ್ಪುದೀಗ, ಗಂಡ ಗಂಡರನರಸಿ ತೊಳಲಿ ಬಳಲುತ್ತಿದ್ದಾರೆ ಎಂಬ ಶಬ್ದಕ್ಕರ್ಥ. ಆ ಅರಸುವ ಖಂಡಿತಜ್ಞಾನದ ಬಗೆಯ ಭೇದಿಸಿ ಅರಿದು ಚೋದ್ಯಂಬಡುತಿಹುದೀಗ, ಖಂಡಮಂಡಲವೊಳಗೆ ಕಂಡೆನೆಂದು ಚೋದ್ಯವನೆಂಬ ಶಬ್ದಕ್ಕರ್ಥ. ಇಂತು ತನ್ನ ತಾನರಸುತ್ತಿರ್ಪ ಕರ್ಮಾವ ಶೇಷವೆಂಬ ಸುವಿವೇಕ ಶಿಷ್ಯನ ಜ್ಞಾನದೃಷ್ಟಿಯ ಮುಂದೆ ಇದಿರಿಟ್ಟು ತೋರುವ ಪ್ರರಬ್ರಹ್ಮವು ದರ್ಪಣ ಸ್ಥಾನವಾದ ಕಾರಣ ಕಂದನ ಕೈದರ್ಪಣವೆಂಬ ಶಬ್ದಕ್ಕರ್ಥ ಆ ಇದಿರಿಟ್ಟು ತೋರುವ ಪರಬ್ರಹ್ಮವು ತನ್ನಲ್ಲಿ ತೋರಿ ಪ್ರತಿಬಿಂಬಿಸಿತ್ತೆಂದರಿದು, ಆ ಪ್ರತಿಬಿಂಬ ಭಾವವೇ ಪರಬ್ರಹ್ಮವನವಗ್ರಹಿಸಿ ತಾನೆ ಉಳಿಯಲು ಅದೀಗಾ ಕಂದನ ಕಯ್ಯ ದರ್ಪಣವ ಪ್ರತಿಬಿಂಬ ನುಂಗಿತ್ತೆಂಬ ಶಬ್ದಕ್ಕರ್ಥ. ಅರಿವೆಂಬುದೇ ದಿವ ಶಬ್ದಕ್ಕರ್ಥ. ಮರವೆಂಬುದೇ ರಾತ್ರಿ ಎಂಬುದಕ್ಕರ್ಥ. ಈ ಅರಿವು ಮರವೆಗಳೆರಡನು ತನ್ನಲ್ಲಿ ಹುಟ್ಟಿಸುವರಿವಿನ ಬೆಳಗು ಮಿಥ್ಯಾಜ್ಞಾನ ಪ್ರವೇಶಿತವಹ ಕಾರಣ ದಿವಾ ರಾತ್ರಿ ಉದಯದ ಬೆಳಗನು ಕತ್ತಲೆ ನುಂಗಿತ್ತೆಂಬುದಕ್ಕರ್ಥ ಆ ಮರವೆಯು ನಿಜದಿಂದರಿಯಲು, ಅದು ಪರಬ್ರಹ್ಮವಲ್ಲಿ ಅಳಿಯಿತ್ತೆಂಬುದೀಗ ನಿರ್ವಯಲಾಯಿತ್ತೆಂಬ ಶಬ್ದಕ್ಕರ್ಥ. ॥೧೩॥

೧೪. ರಕ್ಕಸಿಗಿಬ್ಬರು ಮಕ್ಕಳು, ತೊಟ್ಟಿಲವೇಳ್ವೈವರು, ರಕ್ಕಸಿ ಬಾಣತಿಯಾದರೆ, ಮಕ್ಕಳಿಗಿನ್ನೆಂತೊ? ತೊಟ್ಟಿಲ ತೂಗುವೆ. ಜೋಗುಳ

ಮಾಡುವೆ. ರಕ್ಕಸಿ ಬಾಣತಿಯು ತೊಟ್ಟಿಲು ನುಂಗಿತ್ತು. ಇದೇನು ಹೇಳಾ ಗುಹೇಶ್ವರಾ?

ಟೀಕು:— ಮಾಯೆ ಎಂಬ ರಕ್ಕಸಿ ಚತುರ್ದಶ ಭುವನಂಗಳೆಲ್ಲವನು ಅವಗ್ರಹಿಸಿ ನುಂಗುತ್ತಿಹ ಕಾರಣ ಆ ಮಾಯೆಗೆ ರಕ್ಕಸಿ ಎಂಬ ನಾಮವಾಯಿತ್ತು. ಆ ಮಾಯಾ ಸಂಕಲ್ಪಭಾವದಿಂ ಜೀವ ಪ್ರಾಣಗಳೆಂಬೆರಡು ಹುಟ್ಟಿದ ಕಾರಣ ಆ ರಕ್ಕಸಿಗಿಬ್ಬರು ಮಕ್ಕಳೆಂಬ ಶಬ್ದಕ್ಕರ್ಥ. ಆ ಜೀವ ಪ್ರಾಣಂಗಳಿಗೆ ತನುವೆ ಆಶ್ರಯಸ್ಥಾನವಾದ ಕಾರಣ ತೊಟ್ಟಿಲೆಂಬ ಶಬ್ದಕ್ಕರ್ಥ. ಆ ತನುವಿನೊಳಗೆ ಪಂಚಭೂತಂಗಳು ಮಾಯಾಧೀನದಿಂ ಹುಟ್ಟಿದವೆಂಬುದೀಗ ತೊಟ್ಟಿಲಮೇಲೈವರು ಎಂಬ ಶಬ್ದಕ್ಕರ್ಥ. ಇಂತು ತನ್ನಿಂದ ಹುಟ್ಟಿದ ಜೀವ ಪ್ರಾಣ ಪಂಚಭೂತಂಗಳನು ತಾನೆ ನುಂಗುತ್ತುಗುಳುತ್ತ ತಾಯಿ ರಕ್ಕಸಿಯಾದಳೆಂಬಂತಿರಲು, ಅದು ರಕ್ಕಸಿ ಬಾಣತಿಯಾದಳೆಂಬ ಶಬ್ದಕ್ಕರ್ಥ. ಇಂತು ತಾಯಿ ರಕ್ಕಸಿಯಾಗಲು ಮಕ್ಕಳಿನ್ನೆಂತು ಬದುಕುವರೆಂಬುದು ಮಕ್ಕಳಿಗಿನ್ನೆಂತೊ ಎಂಬ ಶಬ್ದಕ್ಕರ್ಥ. ಇಂತು ಮಾಯಾಧೀನದಿಂ ದೇಹಕರ್ಮವಶಮುಪ್ಪನ್ನಕ್ಕರ ಚರಿಸುವೆನೆಂಬುದೀಗ, ತೊಟ್ಟಿಲ ತೂಗುವೆನೆಂಬುದಕ್ಕರ್ಥ. ಆ ದೇಹ ಚರಿಸುವನ್ನಕ್ಕರ ಶಬ್ದಜಾಲಂಗಳಿಂ ಆ ದೇಹ ಪ್ರಾರಬ್ಧವ ಜೋಗೈಸುವೆನೆಂಬುದೀಗ ಜೋಗುಳವಾಡುವೆನೆಂಬ ಶಬ್ದಕ್ಕರ್ಥ. ಆ ಮಾಯೆ ತನ್ನನು ಆ ದೇಹವೇ ಅವಗ್ರಹಿಸಿಕೊಂಡಿಪ್ಪುದೀಗ, ರಕ್ಕಸಿ ಬಾಣತಿಯು ತೊಟ್ಟಿಲು ನುಂಗಿತ್ತೆಂಬ ಶಬ್ದಕ್ಕರ್ಥ.

೧೫. ಗಗನದ ಮೇಲೊಂದಭಿನ್ನದ ಗಿಳಿ ಹುಟ್ಟಿ ಸಯುಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು. ಬ್ರಹ್ಮನಾ ಗಿಳಿಗೆ ಹಂಜರವಾದ. ವಿಷ್ಣುವಾ ಗಿಳಿಗೆ ಕೊರೆಕೂಳಾದ. ರುದ್ರನಾ ಗಿಳಿಗೆ ಕೋಳುವೋದ. ಇಂತೀ ಮೂವ್ವರ ಮುಂದಣ ಕಂದನ ನುಂಗಿ ದೃಷ್ಟನಾಮ ನಷ್ಟವಾಯಿತ್ತು. ಇದೇನು ಹೇಳಾ ಗುಹೇಶ್ವರಾ!

ಟೀಕು:—"ಆತ್ಮಾಕಾಶಮಯೋ ತಾವತ್" ಆತ್ಮನೆಂಬುದೀಗ ಗಗನವೆಂಬ ಶಬ್ದಕ್ಕರ್ಥ. ಆ ಆತ್ಮನ ಅಹಂಕಾರ ವಿಭ್ರಾಂತಿಯು ತೂರ್ಯಾವಸ್ಥೆಯಲ್ಲಿ ಜೀವಹಂಸನುದಯಿಸಿದನೆಂಬುದೀಗ, ಗಗನದ ಮೇಲೊಂದ

ಭಿನ್ನದ ಗಿಳಿ ಹುಟ್ಟಿತೆಂಬುವಕ್ಕರ್ಥ. ಆ ಜೀವ ಹಂಸನು ಸಂಸಾರ ಪ್ರಪಂಚುವೆ ತನಗೆ ಆಶ್ರಯಿಸಿದ ಕಾರಣದಿಂ ಸಯ ಸಂಭ್ರಮದಲ್ಲಿ ಮನೆಯ ಮಾಡಿತ್ತೆಂಬ ಶಬ್ದಕ್ಕರ್ಥ. ಆ ಒಬ್ಬ ಜೀವಹಂಸನು ಪಂಚವಿಂಶತಿ ಭೂತಾತ್ಮಕನಪ್ಪ ಕಾರಣದಿಂ ಆ ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತೆಂಬ ಶಬ್ದಕ್ಕರ್ಥ. ರಜೋಗುಣ ಸಂಬಂಧವೆ ಬ್ರಹ್ಮತತ್ವವಾದ ಕಾರಣ ಆ ರಜೋಗುಣ ಸಂಬಂಧಮಪ್ಪ ಸ್ಥೂಲತನುವೆ ಆ ಜೀವಂಗೆ ನಿವಾಸಸ್ಥಾನವಾಯಿತ್ತೆಂಬುದೀಗ ಬ್ರಹ್ಮನಾ ಗಿಳಿಗೆ ಹಂಜರವಾದನೆಂಬ ಶಬ್ದಕ್ಕರ್ಥ. ಸಾತ್ವಿಕಗುಣ ಸಂಬಂಧವೆ ವಿಷ್ಣುತತ್ವವಾಗಿ, ಆ ಸಾತ್ವಿಕಗುಣ ಸಂಬಂಧಮಪ್ಪ ಸೂಕ್ಷ್ಮತನು ವಿಂದಾದ ಇಂದ್ರಿಯ ವಿಷಯಾದಿ ಭೋಗಂಗಳ ಸ್ಥಿತಿಗತಿ ಆ ಜೀವಂಗೆ ಆಹಾರವಾದ ಕಾರಣ ವಿಷ್ಣುವಾ ಗಿಳಿಗೆ ಕೊರೆ ಕೂಳಾದನೆಂಬ ಶಬ್ದಕ್ಕರ್ಥ. ತಮೋಗುಣ ಸಂಬಂಧವೆ ರುದ್ರತತ್ವವಾಗಿ ಆ ತಮೋಗುಣ ಸಂಬಂಧವಪ್ಪ ಕಾರಣ ತನುವಿನ ಮರವೆ ಆ ಜೀವಭಾವ ಭ್ರಾಂತಿಗೆ ಕೋಳುವೋಯಿತ್ತೆಂಬುದೀಗ ರುದ್ರನಾ ಗಿಳಿಗೆ ತಾ ಕೋಳುವೋದನೆಂಬ ಶಬ್ದಕ್ಕರ್ಥ. ಇಂತೀತತ್ವತ್ರಯಂಗಳಿಗೆ ಇದಿರಿಟ್ಟಿಹ ಆ ಜೀವಭ್ರಾಂತು ನುಂಗಿಪ್ಪ ಕಾರಣ ಲಕ್ಷ್ಯಕ್ಕೆಯೂ ತನ್ನ ನಾಮಕ್ಕೆಯೂ ನಷ್ಟ ಉಂಟೆಂಬುದೀಗ ಮೂವ್ವರ ಮುಂದಣ ಕಂದನ ನುಂಗಿ ದೃಷ್ಟನಾಮ ನಷ್ಟವಾಯಿತ್ತೆಂಬ ಶಬ್ದಕ್ಕರ್ಥ.

೧೬. ನೆಲದ ಬೊಂಬೆಗೆ ಜಲದ ಬಣ್ಣವನುಡಿಸಿ ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ ವಾಯುವನಲನ ಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ ಆಡಿಸುವ ಯಂತ್ರವಾಹಕನಾರೋ? ಬಯಲ ಕಂಭಕ್ಕೆ ತಂದು ಸಯವೆಂದು ಪರವ ಕಟ್ಟಿದಡೆ ಸಯುವದ್ವಯವಾಯಿತ್ತು. ಏನೆಂಬೆ ಗುಹೇಶ್ವರಾ?

ಟೀಕು:— ಪೃಥ್ವಿಯಂಶದ ತನುವೆಂಬುದೀಗ ನೆಲದ ಬೊಂಬೆ ಎಂಬ ಶಬ್ದಕ್ಕರ್ಥ. ಆ ತನುವಿಂಗೆ ಅಪ್ಪುವಿನ ಅಂಶರಸದಿಂ ಬದ್ಧವ ಮಾಡಿ ಎಂಬುದೀಗ ಜಲದ ಬಣ್ಣವನುಡಿಸಿ ಎಂಬ ಶಬ್ದಕ್ಕರ್ಥ. ಆ ಪೃಥ್ವಿಅಪ್ಪುವಿನಂಶದಿಂ ಹಲವು ಪ್ರಕಾರದ ಪ್ರಕೃತಿ, ಆ ಪ್ರಕೃತಿ ಗುಣದಿಂ ಉಲಿವ ಕರಣಂಗಳೆಂಬುದೀಗ ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ ಎಂಬ ಶಬ್ದಕ್ಕರ್ಥ. ಅಗ್ನಿವಾಯುಗಳೆರಡು ಆ ತನುವಿಂಗೆ ಆಧಾರ ಸಂಚವಾಯಿತ್ತೆಂಬುದೀಗ, ವಾಯುವನಲನ ಸಂಚವೆಂಬ ಶಬ್ದಕ್ಕರ್ಥ. ಇಂತಪ್ಪ

ಶರೀರ ಸಂಬಂಧವುಪ್ಪ ಜೀವನ ಹಣೆಯಲ್ಲಿ ಪ್ರಾರಬ್ಧ ಸಂಕಲ್ಪಿತವಾಯಿ
ತ್ತೆಂಬುದೀಗ ಅರಳೆಲೆಯ ಶೃಂಗಾರವ ಮಾಡಿ ಎಂಬ ಶಬ್ದಕ್ಕರ್ಥ. ಇಂತು
ಈ ಜೀವಂಗೆ ಸಂಸಾರವನೊಪ್ಪವಿಟ್ಟು ಪರಶಿವನು ಯಂತ್ರವಾಹಕನಾಗಿ
ಆಡಿಸುತ್ತಿದ್ದನೆಂಬುದೀಗ ಆಡಿಸುವ ಯಂತ್ರವಾಹಕನಾರೋ ಎಂಬ ಶಬ್ದ
ಕ್ಕರ್ಥ. ಇದು ಮಿಥ್ಯವೆಂದರಿವುದೆ ಬಯಲೆಂಬ ಶಬ್ದಕ್ಕರ್ಥ. ದೃಢ
ಬುದ್ಧಿ ಸ್ತಂಭವೆಂಬುದೀಗ ಕಂಭವೆಂಬರ್ಥ. ಆ ಕಂಭದಲ್ಲಿ ಪರಬ್ರಹ್ಮವೆ
ಸತ್ಯವೆಂದರಿದು ನೆಲೆಗೊಳಿಸಿದವೆಂಬುದೀಗ ಸಯವೆಂದು ಪರವ ನೆಲೆಗೊ
ಳಿಸಿವರೆ ಎಂಬ ಶಬ್ದಕ್ಕರ್ಥ. ಆ ನೆಲೆಗೊಂಡ ನಿತ್ಯದಿಂದ ದ್ವೈತಭಾವ
ಅಳಿಯಿತ್ತಾಗಿ ಆ ಸಯವದ್ವಯವಾಯಿತ್ತೆಂಬ ಶಬ್ದಕ್ಕರ್ಥ.

೧೭. ಇಪ್ಪತ್ತೈದು ತಲೆಯೊಳಗೆ ಏಳು ಮೊಲೆ, ಮುಖವೆಂಟು,
ಹದಿನಾಲ್ಕು ಬಾಯಿ, ನೂರಿಪ್ಪತ್ತು ಕೋರೆದಾಡೆ, ಹೃದಯದಲ್ಲಿ ಹುದುಗಿ
ರ್ದಗ್ನಿಯ ತೆಗೆದು ಮುದ್ದಾಡಿ, ಧ್ವನಿಯ ಧರ್ಮವ ನುಂಗಿ, ಮನದ
ವಣ್ಣಗಳಡಗಿ, ಹೆತ್ತ ತಾಯಿ ಮಗನ ನುಂಗಿ, ಶಿಸು ತಾಯ ಬೆಸಲಾಗಿ
ಮಹೇಶ್ವರನೆಂಬ ಸಿಲವು ಅಂಗೈಯ ಮೊಲೆ ನುಂಗಿತ್ತು.

ಟೀಕು:— ದೇಹಕ್ಕೆ ಶಿರಸ್ಸು ಹೇಗೆ ಪ್ರಧಾನವಾಗಿಪ್ಪದು, ಹಾಗೆ
ದ್ದೇಹಕ್ಕೆ ಪಂಚವಿಂಶತಿ ತತ್ವವೆ ಪ್ರಧಾನವಾಗಿಹ ಕಾರಣ, ಇಪ್ಪತ್ತೈದು
ಲೆ ಎಂಬ ಶಬ್ದಕ್ಕರ್ಥ. ಸಪ್ತವ್ಯಸನಂಗಳು ವಿಷಯಂಗಳೆಂಬ ರಸ ತುಂಬಿ
ಕೊಂಡಿರ್ದು ಆ ದೇಹಕ್ಕೆ ಸಂಸಾರ ಸುಖವ ಕೊಟ್ಟು ಪೋಷಿಸಿಕೊಂಡಿಪ್ಪ
ಕಾರಣ ಏಳು ಮೊಲೆ ಎಂಬ ಶಬ್ದಕ್ಕರ್ಥ. ಆ ವ್ಯಸನ ವಿಷಯಂಗಳ
ಹಿಸುವದಕ್ಕೆ ಮುಖವಾವುದೆಂದಡೆ, ಅಷ್ಟಮದಂಗಳೆ ಮುಖವಾದ ಕಾರಣ
ಮುಖವೆಂಟು ಎಂಬ ಶಬ್ದಕ್ಕರ್ಥ. ಆ ಮುಖಂಗಳಿಗೆ ಚತುರ್ದಶ ಇಂದ್ರಿ
ಯಂಗಳೆಂಬವು ಬಾಯಾದ ಕಾರಣ, ಹದಿನಾಲ್ಕು ಬಾಯಿ ಎಂಬ ಶಬ್ದ
ರ್ಥ. ಆ ಚತುರ್ದಶ ಮುಖದ್ವಾರದೊಳಗೆ ಆ ವಿಷಯಮಂ ಮಥನಿಸಿ
ಭೋಗಿಸುವ ಅಂತರಂಗವಾವಾವೆಂದಡೆ, ನೂರಿಪ್ಪತ್ತು ಕರಣ ಮಥನಂ
ಳೆಂಬವೆ ಕಾರಣವಾದ ಕಾರಣ ನೂರಿಪ್ಪತ್ತು ಕೋರೆದಾಡೆ ಎಂಬ ಶಬ್ದ
ರ್ಥ. ಇಂತಪ್ಪ ಮಾಯಾ ಭ್ರಾಂತಿಯ ಜೀವನ ಹೃದಯದಲ್ಲಿ ಅಡಗಿಪ್ಪ
ಜ್ಞಾನಾಗ್ನಿಯ ಸ್ವಾನುಭಾವ ಬೋಧೆಯಿಂದೆಬ್ಬಿಸಿ ತದ್ದೇಹದಿಂ ಬೇರ್ಪ
ಸಿ, ಕೃತ ನಿಶ್ಚಯದಿಂ ಪಿಡಿದು, ಲಾಲಿಸುತ್ತಿರಲು ಎಂಬುದೀಗ ಹೃದ

ಯದಲ್ಲಿ ಹುದುಗಿದಗ್ನಿಯ ತೆಗೆದು ಮುದ್ದಾಡಿಸಿ ಎಂಬ ಶಬ್ದಕ್ಕರ್ಥ. ಇಂತಾಗಲು ಶಬ್ದ ಜಾಲಂಗಳೆಂಬವೆಲ್ಲವು ಅಳಿದವೆಂಬುದೀಗ, ಧ್ವನಿಯು ಧರ್ಮವ ನುಂಗಿ ಎಂಬ ಶಬ್ದಕ್ಕರ್ಥ. ಮನಸ್ಸಿನ ಸಂಕಲ್ಪ ಭಾವದಿಂ ತೋರುವ ನಾನಾ ವರ್ಣಂಗಳೆಲ್ಲ ಅಳಿದವೆಂಬುದೀಗ ಮನದ ಬಣ್ಣಗಳ ಡಗಿ ಎಂಬ ಶಬ್ದಕ್ಕರ್ಥ. ಇಂತು ಮನದ ನ್ಯಾಯ ಧರ್ಮವಳಿದು, ಚಿತ್ ಶಕ್ತಿಯಿಂದುದ್ಭವಿಸಿಪ್ಪ ಶರಣನು ಆ ಚಿತ್ತು ತಾನೆ ತನ್ಮಯವಾಗಿ ಅವಗ್ರಹಿ ಸಿತ್ತೆಂಬುದೀಗ, ಹೆತ್ತತಾಯಿ ಮಗನ ನುಂಗಿದಳು ಎಂಬ ಶಬ್ದಕ್ಕರ್ಥ. ಆ ಚಿತ್ ಶಕ್ತಿಯೊಳಗೆ ತಾನೆಂಬ ಭಾವವ ಕಳೆದುಳಿದ ಶರಣನು ತಾನೇ ಶಿವತತ್ವ ಸ್ವರೂಪನಾಗಿ ಆ ಚಿತ್ ಶಕ್ತಿಗೆ ತಾನೇ ಮಾತೃಸ್ಥಾನವಾಗಿರ್ದ ನೆಂಬುದೀಗ ಶಿಶು ತಾಯ ಬೆಸಲಾಗಿ ಎಂಬ ಶಬ್ದಕ್ಕರ್ಥ. ಇಂತಾದ ನಿಜದ ನಿಲವು ಕರತಳಾಮಳಕವಾಗಿ, ಅಮೃತ ಕುಂಭಸ್ವರೂಪದಿಂದೊ ಪ್ಪುವ ಕರಸ್ಥಲದ ಲಿಂಗದೊಳಡಗಿತ್ತೆಂಬುದೀಗ ಅಂಗಯ್ಯ ಮೊಲೆ ನುಂಗಿ ತ್ತೆಂಬ ಶಬ್ದಕ್ಕರ್ಥ ॥೧೭॥

೧೮. ಜಂಬೂದ್ವೀಪದ ಬೆವಹಾರಿ ಖಂಡ ಭಂಡವ ತುಂಬಿ ಕುಂಭಿ ನಿಯುದರದ ಮೇಲೆ ಪಸಾರವನಿಕ್ಕಿದ. ಉಷ್ಣತೃಷ್ಣೆ ಘನವಾಗಿ ಕಡಲೇಳು ಸಮುದ್ರವಂ ಕುಡಿದು ನೀರಡಿಸಿದಾತ ಅರಲುಗೊಂಡು ಬೆರಗಾದ. ಶಿಸು ತಾಯ ಹೆಣನ ಹೊತ್ತುಕೊಂಡು ಹೆಸರ ಹೇಳುತ್ತೈದಾನೆ. ಗುಹೇಶ್ವರನೆಂಬ ನಿಲವು ವಸುಧೆಯಾಕೃತಿಯ ನುಂಗಿತ್ತು.

ಟೀಕು:—ಭೂಮಧ್ಯದೊಳಗಿಪ್ಪ ಮೇರುಗಿರಿಯ ಬಳಿಸಿ ಸಮೀಪಸ್ಥ ವಾಗಿಹ ಜಂಬೂದ್ವೀಪದ ಹಾಗೆ, ತನುಮಧ್ಯದೊಳಗಿಪ್ಪ ಅಹಂಕಾರವೆಂಬ ಮೇರುವಿನ ಪರಿವೇಷ್ಟಿಸಿಕೊಂಡಿಪ್ಪುದೀಗ ತನುವೆಂಬ ದ್ವೀಪ. ಅದು ಕಾರಣ ಜಂಬೂದ್ವೀಪವೆಂದರೆ ಸ್ಥೂಲ ತನುವೆಂಬುದಕ್ಕರ್ಥ. ಆ ಸ್ಥೂಲ ತನುವಿನ ಗುಣಧರ್ಮ ಕರ್ಮಂಗಳ ವ್ಯವಹಾರವ ಮಾಡುತ್ತಿಪ್ಪಾತನು ಜೀವನಾದ ಕಾರಣ, ಜಂಬೂದ್ವೀಪದ ಬೆವಹಾರಿ ಎಂಬ ಶಬ್ದಕ್ಕರ್ಥ. ಆ ಜೀವನು ಸಕಲ ಇಂದ್ರಿಯಂಗಳು ಕರಣಂಗಳೆಂಬ ಸಾಧನ ದ್ರವ್ಯಂಗಳ ಗಳಿಸಿಕೊಂಡನೆಂಬುದೀಗ ಖಂಡ ಭಂಡವ ತುಂಬಿದನೆಂಬ ಶಬ್ದಕ್ಕರ್ಥ. ಅಹಂಕಾರವೆಂಬ ಭಿತ್ತಿಯ ಮೇಲೆ ಆ ಕರಣಾದಿ ವಿಕಾರವೆಂಬ ದ್ರವ್ಯಂಗಳ ಪರಡಿಸಿಕೊಂಡಿಪ್ಪನೆಂಬುದೀಗ ಕುಂಭಿನಿಯುದರದ ಮೇಲೆ ಪಸಾರವನಿ

ವನೆಂಬ ಶಬ್ದಕ್ಕರ್ಥ. ಆ ವಿಕಾರ ವಿಷಯಂಗಳಲ್ಲಿ ಕಾಮೋಷ್ಣವೆದ್ದು ಶಾತೃಷ್ಣೆ ಹೆಚ್ಚಿತ್ತೆಂಬುದೀಗ ಉಷ್ಣ ತೃಷ್ಣೆ ಘನವಾಗಿ ಎಂಬ ಶಬ್ದ ರ್ಥ. ಆ ತೃಷ್ಣೆಯಿಂ ಸಂಸಾರ ವಿಷಯ ರಸಾಂಬುಧಿಯಂ ಪೋಷಿಸಿ, ತ್ತೆಯು ಆಶಾತೃಷ್ಣೆ ಹಿಂಗದೆ ಇರ್ದನೆಂಬುದೀಗ, ಕಡಲೇಳು ಸಮುದ್ರವಂ ಡಿದು ನೀರಡಿಸಿದಾತ ಅರಲುಗೊಂಡು ಬೆರಗಾದನೆಂಬ ಶಬ್ದಕ್ಕರ್ಥ. ಮಾಯಾ ಸಂಕಲ್ಪ ಸಂಭೂತವಾಗಿಪ್ಪ ಜೀವನು, ಆ ಮಾಯಾಮೃತ ೋಹವ ಧರಿಸಿಕೊಂಡು ಜಾತಿವರ್ಣ ನಾಮಂಗಳಿಗೊಳಗಾದನೆಂಬುದೀಗ ಸು ತಾಯ ಹೆಣನ ಹೊತ್ತುಕೊಂಡು ಹೆಸರ ಹೇಳುತ್ತೈದಾಳೆ ಎಂಬ ಬ್ದಕ್ಕರ್ಥ. ಇಂತಪ್ಪ ಜೀವನ ಮಿಥ್ಯಾಪಿಂಡದ ಮಧ್ಯದಲ್ಲಿ ಶಿವತತ್ವ ಡಗಿತ್ತೆಂಬುದೀಗ, ಗುಹೇಶ್ವರನ ನಿಲವ ವಸುಧೆಯಾಕೃತಿ ನುಂಗಿತ್ತೆಂಬ ಬ್ದಕ್ಕರ್ಥ. ॥೧೮॥

೧೯. ಭೂಮಿಯ ಕಠಿಣವನು, ಆಕಾಶದ ಮೃದುವನು, ತಿಳಿವ ಮನದಲ್ಲಿಯೇ ನಿಂದಿತ್ತು. ಉದಕದೊಳಗೆ ಹುಟ್ಟಿದ ತೃಷ್ಣೆ ಉದಕವ ನರಸಿತ್ತಲ್ಲಾ. ಒಳಗೆ ಸತ್ತು ಹೊರಗಾಡುತ್ತಿದೆ ಗುಹೇಶ್ವರನೆಂಬ ಮಹಿಮ ರಗಾಗಿ, ಅಲ್ಲಿಯೇ ನಿಂದನು.

ಟೀಕು:— ಅನಾತ್ಮಕ ತತ್ವವೆಂಬುದು ಭೂಮಿಯ ಸಂಬಂಧವಾದ ರಣ ಭೂಮಿಯ ಕಠಿಣವೆಂಬ ಶಬ್ದಕ್ಕರ್ಥ. ಇಂತು ಆತ್ಮಾಕಾಶ ಯಂತಾವತ್ ಎಂದುದಾಗಿ ಆತ್ಮ ತತ್ವದ ಪರಿಭಾವವೆಂಬುದು ಆಕಾ ದ ಮೃದುವನು ಎಂಬ ಶಬ್ದಕ್ಕರ್ಥ. ಇಂತು ಆತ್ಮ ತತ್ವ ಅನಾತ್ಮ ತ್ವವೆಂಬೆರಡನು ಇದಿರಿಟ್ಟುಕೊಂಡು ಅನುಭಾವದ್ವಾರದಿಂದ ಅರಿವುತ್ತಿರ್ದ ನಸ್ಸು ನಿಜದರಿವನರಿವ ತೆರನ ಕಾಣದೆ, ಅಲ್ಲಿಯೇ ಸಂಕಲ್ಪ ಬದ್ಧ ದುದೆಂಬುದೀಗ ತಿಳಿವ ಗಮನವಲ್ಲಿಯೇ ನಿಂದಿತ್ತು ಎಂಬ ಶಬ್ದಕ್ಕರ್ಥ ದಕವೆಂದಡೆ ಮನಸ್ಸೆಂಬರ್ಥ. ಅದೆಂತೆಂದೊಡೆ, ಸಂಸಾರ ವಿಷಯ ಸೇಂದ್ರಿಯ ಸಂಕಲ್ಪ ರೂಪಾದ ಕಾರಣ, ಆ ಮನದೊಳಗೆ ತನ್ಮನದ ಲವ ನರಿಯ ಬೇಕೆಂಬರ್ಥ ಹುಟ್ಟಿ ಶ್ರದ್ಧಾತುರದಿಂದಿಪ್ಪುದೀಗ, ಉದ ದೊಳಗೆ ಹುಟ್ಟಿದ ತೃಷ್ಣೆ ಉದಕವನರಸಿತ್ತಲ್ಲಾ ಎಂಬ ಶಬ್ದಕ್ಕರ್ಥ. ದು ಕಾರಣ ಅಂತರಂಗದೊಳಗೆ ತನ್ನ ನಿಜವು ನಷ್ಟವಾಗಿ, ಬಾಹ್ಯಾ

ಭ್ಯಂತರ ವಿಚಾರದಲ್ಲಿ ಬಳಸುತ್ತಿರಲು ಎಂಬುದೀಗ ಒಳಗೆ ಸತ್ತು ಹೊರ ಗಾಡುತ್ತಿದೆ ಎಂಬ ಶಬ್ದಕ್ಕರ್ಥ. ಅಲ್ಲಿ ಮಹಾಲಿಂಗದ ನಿಲವ ಹೊದ್ದದೆ, ನಿಬ್ಬೆರಗಾಗಿ ಇದ್ದುದೆಂಬುದೀಗ ಗುಹೇಶ್ವರಲಿಂಗವು ನಿಬ್ಬೆರಗಾಗಿದ್ದನೆಂಬ ಶಬ್ದಕ್ಕರ್ಥ. ||೧೯||

೨೦. ಭೂಮಿಯಾಕಾಶ ಒಂದು ಜೀವನುದರ. ಅಲ್ಲಿ ಘನವನು ಘನ ವೆನ್ನದವಂಗೆ, ಕಿರಿದನು ಕಿರಿದೆನ್ನದವಂಗೆ, ಆ ಘನವು ಮನಕ್ಕೆ ಗಮಿಸಿದಡೆ ಇದು ಸರಿಯುಂಟೆ ಗುಹೇಶ್ವರಾ?

ಟೀಕು:— ಪಿಂಡ ಬ್ರಹ್ಮಾಂಡಯೋರೈಕ್ಯಂ ಎಂದುದಾಗಿ, ಬ್ರಹ್ಮಾಂ ಡದೊಳಗುಳ್ಳುದೆಲ್ಲವು ಒಂದು ಜೀವನ ಪಿಂಡದೊಳಗೆ ಉಂಟೆಂಬುದೀಗ, ಭೂಮಿಯಾಕಾಶ ಒಂದು ಜೀವನುದರವೆಂಬ ಶಬ್ದಕ್ಕರ್ಥ. ಇದನರಿತು ತನ್ನ ತನುವ ಕಿರಿದೆನ್ನದೆ, ಆ ಬ್ರಹ್ಮಾಂಡವ ಘನವೆನ್ನದಿಪ್ಪುದೀಗ, ಅಲ್ಲಿ ಘನವೆನ್ನದವಂಗೆಕಿರಿದನು, ಕಿರಿದೆನ್ನದವಂಗೆ ಎಂಬ ಶಬ್ದಕ್ಕರ್ಥ. ಆ ಘನತತ್ವವು ತಾನೆಂದರಿದು, ಮನೋ ಮೂರ್ತಿ ತಾನಾದಡೆ, ಪ್ರತಿಇಲ್ಲ ವೆಂಬುದೀಗ ಆ ಘನವು ಮನಕ್ಕೆ ಸಾಧ್ಯವಾದಡೆ ಇನ್ನು ಸರಿಯುಂಟೆ ಎಂಬ ಶಬ್ದಕ್ಕರ್ಥ. ||೨೦||

೨೧. ಬ್ರಹ್ಮಪಾಶ ವಿಷ್ಣುಮಾಯೆ ಎಂಬ ಬಲೆಯ ಬೀಸಿ ಹೊನ್ನು ಹೆಣ್ಣು ಮಣ್ಣೆಂಬ ಭ್ರಾಂತಿಯ ತೋರಿ ಮುಕ್ಕಣ್ಣನಾಡಿದ ಬೇಂಟೆಯ ಆಸೆ ಎಂಬ ಗುಟುಕನಿಕ್ಕಿ ಹೇಸದೆ ಕೊಂದೆಯಲ್ಲ ಗುಹೇಶ್ವರಾ. ||೨೧||

ಟೀಕು:—ರಜೋಗುಣವೆಂಬ ಪಾಶದಿಂ ಬದ್ಧನಾಗಿ, ಸತ್ವಗುಣದ ಸ್ಥಿತಿಯ ಬಲೆಯಲ್ಲಿ ಸಿಲುಕಿದನೆಂಬುದೀಗ, ಬ್ರಹ್ಮಪಾಶ ವಿಷ್ಣುಮಾಯೆ ಎಂಬ ಬಲೆಯ ಬೀಸಿತ್ತೆಂಬ ಶಬ್ದಕ್ಕರ್ಥ. ಹೊನ್ನು ಹೆಣ್ಣು ಮಣ್ಣೆಂಬವರ ಭ್ರಾಂ ತಿಯೊಳು ಮರುಳಾದರೆಂಬುದೀಗ, ಹೊನ್ನು ಹೆಣ್ಣು ಮಣ್ಣೆಂಬ ಭ್ರಾಂತಿ ತೋರಿ ಮುಕ್ಕಣ್ಣನಾಡಿದ ಬೇಂಟೆ ಎಂಬಶಬ್ದಕ್ಕರ್ಥ. "ಆಶಯಾ ಬಧ್ಯತೆ ಲೋಕೆ ಕರ್ಮಣಾ ಬಹು ಚಿಂತಯಾ ಆಯುಕ್ಷೀಣ ನ ಜಾನಾತಿ ವೇಣು ಸೂತ್ರಂ ವಿಧೀಯತೆ" ಎಂದುದಾಗಿ ಎಂಬುದೀಗ ಆಸೆ ಎಂಬ ಗುಟುಕನಿಕ್ಕಿ ಹೇಸದೆ ಕೊಂದೆಯಲ್ಲಾ ಎಂಬ ಶಬ್ದಕ್ಕರ್ಥ. ||೨೧||

೨೨. ಬ್ರಹ್ಮಘನವೆಂಬೆನೆ? ಬ್ರಹ್ಮನ ನುಂಗಿತ್ತು ಮಾಯೆ. ವಿಷ್ಣು ಘನವೆಂಬೆನೆ? ವಿಷ್ಣುವ ನುಂಗಿತ್ತು ಮಾಯೆ. ರುದ್ರ ಘನವೆಂಬೆನೆ?

ರುದ್ರನ ನುಂಗಿತ್ತು ಮಾಯೆ. ತಾ ಘನವೆಂಬೆನೆ? ತನ್ನ ನುಂಗಿತ್ತು ಮಾಯೆ. ಇಂತು ಸರ್ವವು ನಿನ್ನ ಮಾಯೆ ಒಬ್ಬರನೊಬ್ಬರ ನೊಳಕೊಂಡಿತ್ತೆ ಹೇಳಾ ಗುಹೇಶ್ವರಾ?

ಟೀಕು:— ರಾಜಸಾಹಂಕಾರದಲ್ಲಿ ಬ್ರಹ್ಮ ಮಾಯಾಸಕ್ತನಪ್ಪ ಕಾರಣ ಬ್ರಹ್ಮನ ಮಾಯೆ ನುಂಗಿತ್ತೆಂಬ ಶಬ್ದಕ್ಕರ್ಥ. ಸಾತ್ವಿಕಾಹಂಕಾರದಲ್ಲಿ ವಿಷ್ಣು ಮಾಯಾಸಕ್ತನಾಗಿಪ್ಪ ಕಾರಣ, ವಿಷ್ಣುವನು ಮಾಯೆ ನುಂಗಿತ್ತೆಂಬ ಶಬ್ದಕ್ಕರ್ಥ. ತಾಮಸಾಹಂಕಾರದಲ್ಲಿ ರುದ್ರನು ಮಾಯಾ ಸಕ್ತನಾಗಿಪ್ಪ ಕಾರಣ, ರುದ್ರನ ಮಾಯೆ ನುಂಗಿತ್ತೆಂಬ ಶಬ್ದಕ್ಕರ್ಥ. ಬ್ರಹ್ಮವಾನೆಂಬ ಬ್ರಹ್ಮಜ್ಞಾನಿಗಳು ವೃಥಾಹಂಕಾರದಲ್ಲಿ ಮಾಯಾ ಸಕ್ತರಾದ ಕಾರಣ ತಾ ಘನವೆಂದಡೆ ತನ್ನ ನುಂಗಿತ್ತು ಮಾಯೆ ಎಂಬ ಶಬ್ದಕ್ಕರ್ಥ. ಇಂತು ಲೋಕವೆಲ್ಲವನು ಅದು ಪರಶಿವನ ಅಧೀನದ ಮಾಯೆ ಆವರಿಸಿಕೊಂಡಿಪ್ಪಳೆಂಬುದೀಗ ಸರ್ವವು ನಿನ್ನ ಮಾಯೆ ಒಬ್ಬರನೊಬ್ಬರನೊಳಕೊಂಡಿತ್ತೆ ಹೇಳಾ ಗುಹೇಶ್ವರಾ ಎಂಬ ಶಬ್ದಕ್ಕರ್ಥ.

೨೩. ದೇವರನ್ನೆಲ್ಲರ ಹೊಡೆತಂದು ದೇವಿಯರೊಳು ಕೂಡಿತ್ತು ಮಾಯೆ. ಹರಹರಾ ಮಾಯೆ ಇದ್ದೆಡೆಯ ನೋಡಾ. ಶಿವಶಿವಾ ಮಾಯೆ ಇದ್ದೆಡೆಯ ನೋಡಾ. ಎರಡೆಂಬತ್ತು ಕೋಟಿ ಪ್ರಮಥ ಗಣಂಗಳು, ಅಂಗಾಲ ಕಣ್ಣವರು, ಮೆಯ್ಯೆಲ್ಲಾ ಕಣ್ಣವರು, ನಂದಿವಾಹನ ರುದ್ರರು, ಇವರೆಲ್ಲರು ಮಾಯೆಯ ಕಾಲುಗಾಹಿನ ಸರಮಾಲೆ ಕಾಣಾ ಗುಹೇಶ್ವರಾ.

ಟೀಕು:— ಅನಂತಕೋಟಿ ರುದ್ರಾದಿಗಳೆಲ್ಲರು ತಾವು ನಿತ್ಯ ಪರಿಪೂರ್ಣವಾದ ಮಹಾಘನ ಪರಶಿವತತ್ವ ಸ್ವರೂಪರೆಂದರಿಯದೆ ಕೈಲಾಸವೆಂಬ ಪ್ರವೇಶಿಕ ಪುರದಲ್ಲಿ ಆಶ್ರಿತವಾಗಿರ್ದು, ಅಲ್ಲಿಯ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯವೆಂಬ ಅಲ್ಪ ಪದಂಗಳಿಗೆರಗಿ ಮುಚ್ಚಿಮರುಳಾಗಿಪ್ಪರಾಗಿ, ಇವರೆಲ್ಲರು ಮಾಯಾಸಕ್ತರೆಂಬುದೀಗ ದೇವರನೆಲ್ಲರ ಹೊಡೆತಂದು ದೇವಿಯರೊಳು ಕೂಡಿತ್ತು ಮಾಯೆ ಎಂಬುದೀಗ ಈ ವಚನದ ತಾತ್ಪರ್ಯಾರ್ಥ.

೨೪. ಆಡಂಬರದೊಳ ಗಾಡಂಬರವಿದೇನೋ? ಹಾರಿತ್ತು ಬ್ರಹ್ಮನೋಲಗ. ಕೆದರಿತ್ತಿದೇನಯ್ಯ? ಸಾರು ಸಾರೆನುತ್ತ ವಿಷ್ಣು ಅಜನ ನುಂಗಿ

ರುದ್ರಯೋನಿಯೊಳಗಡಗಿತ್ತಿದೇನೋ? ಬೇರಿಲ್ಲದ ಮರ ನೀರಿಲ್ಲದ ನೆಳಲೊ ಳಗೆ ತೋರಿದ ಪ್ರತಿಬಿಂಬವ ನಾನೇನೆಂಬೆ ಗುಹೇಶ್ವರಾ?

ಟೀಕು:—ಶರಣನು ಸುಜ್ಞಾನ ದೃಷ್ಟಿಯಿಂದ ಮಾಯಾಡಂಬರದ ಸ್ಥಿತಿ ಗತಿಯನರಿದು ನಿರೀಕ್ಷಿಸಲು ಎಂಬುದೀಗ ಆಡಂಬರದೊಳಗಾಡಂಬರ ವಿದೇನೋ ಎಂಬ ಶಬ್ದಕ್ಕರ್ಥ. ಇಂತು ನೋಡಲು, ಬ್ರಹ್ಮ ಸೃಷ್ಟಿ ಪಸರ ವೆಲ್ಲವು ಮಿಥ್ಯವಾಗಿ ಹೋಯಿತ್ತೆಂಬುದೀಗ, ಹಾರಿತ್ತು ಬ್ರಹ್ಮನೋಲಗ ಕೆದರಿತ್ತಿದೇನಯ್ಯ ಎಂಬ ಶಬ್ದಕ್ಕರ್ಥ. ಆ ಮಿಥ್ಯವನು ವಿಷ್ಣುತತ್ವ ಸಂ ಬಂಧವುಪ್ಪ ಶುದ್ಧ ಸಾತ್ವಿಕವವಗ್ರಹಿಸಿತ್ತೆಂಬುದೀಗ ಸಾರು ಸಾರು ಎನುತ್ತ ವಿಷ್ಣುವಜನ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಶುದ್ಧ ಸಾತ್ವಿಕವು ರುದ್ರತತ್ವ ವೆಂಬ ನಿಜದ ಸುಷುಪ್ತಿಯ ಸ್ಥಾನವಾದ ಕಾರಣ, ಆ ರುದ್ರನೊಳಗೆ ಲೀಯವಾಯಿತ್ತೆಂಬುದೀಗ, ರುದ್ರಯೋನಿಯೊಳಡಗಿತ್ತಿದೇನೋ ಎಂಬ ಶಬ್ದ ಕ್ಕರ್ಥ. ಆ ನಿಜದ ಸುಷುಪ್ತಿಯೊಳಗೆ ತನ್ನ ನಿಜ ವಿವೇ ವೆಂಬ ವೃಕ್ಷವು ಮೂಲಸ್ಥಾನವಿಲ್ಲದೆ, ನಿರ್ಬೀಜದಲ್ಲಿ ಬೆಳೆಯಿತ್ತೆಂಬುದೀಗ ಬೇರಿಲ್ಲದ ವೃಕ್ಷ ವೆಂಬ ಶಬ್ದಕ್ಕರ್ಥ. ಆ ವಿವೇಕ ವೃಕ್ಷವು ನೀರೆಂಬ ಮನದ ಸಂಚಲವ ಳಿದು ಉನ್ಮನೆಯ ತತ್ವದ ಸದ್ಭಾವಚ್ಛಾಯೆಯೊಳಗೆ ತಾನೆ ಪ್ರತಿಬಿಂಬಿಸಿ ತ್ತೆಂಬುದೀಗ ನೀರಿಲ್ಲದ ನೆಲಲೊಳಗೆ ತೋರಿದ ಪ್ರತಿಬಿಬಿಂಬವ ನಾನೇ ನೆಂಬೆ ಗುಹೇಶ್ವರಾ ಎಂಬ ಶಬ್ದಕ್ಕರ್ಥ. ॥೨೪॥

೨೫. ಚಂದ್ರಮನೊಳಗಣ ಎರಳೆಯು ನುಂಗಿದ ರಾಹುವಿನ ನೋಟ ಅಂದಂದಿಂಗೆ ಬಂದು ಕಾಡಿತ್ತು ನೋಡಾ. ಒಂದರ ತಲೆ ಒಂದರ ಬಸಿರು ಅಂದಂದಿಂಗೆ ಬಂದು ಕಾಡಿತ್ತು ನೋಡಾ. ನಂದಿನಂದಿಯ ನುಂಗಿ ಬಂದುದು ಮಹೀತಳಕ್ಕಾಗಿ ಇಂದು ರವಿಗಡಣವ ನಾನೇನೆಂಬೆ ಗುಹೇಶ್ವರ?

ಟೀಕು:—ತಮೋಗುಣ ನಿವೃತ್ತಿಯ ಮಾಡಿ, ಷೋಡಶಕಳಾ ಸಂ ಪೂರ್ಣ ಭಾವದಿಂ, ಸುಧಾಕರ ಸ್ವರೂಪವಾಗಿಪ್ಪ ಚಂದ್ರಂಗೆಯು ಅಂತ ರಂಗದ ಅಜ್ಞಾನ ತಮೋವೃತ್ತಿಯನಳಿದು, ಶಿವಜ್ಞಾನದ ಕಳೆಯು ಸಂ ಪೂರ್ಣ ಭಾವದಿಂ ಸುಧಾಪಿಂಡರೂಪಿಂ, ಪರಮ ಶಾಂತಿ ಎನಿಪ ಚಿತ್ತಿನ ನಿಲವು ಒಂದೇ ಭಾವವಾದ ಕಾರಣ ಚಂದ್ರಮನೆಂಬ ಶಬ್ದಕ್ಕರ್ಥ. ಆ ಚಿತ್ತಿ ನೊಳಗೆ ತಾನೆ ಶಿವತತ್ವವೆಂಬರಿವಿನ ಕುರುಹು ಲಕ್ಷಕ್ಕೆ ಬರಲು ಅದೆ ಆ

ಚಿತ್ತಿನೊಳಗಣ ಕಳಂಕವಾದ ಕಾರಣ, ಅದು ಚಂದ್ರಮನೊಳಗಣ ಎರಳೆ ಎಂಬ ಶಬ್ದಕ್ಕರ್ಥ. ಆ ಕಳಂಕೆಂಬ ಅಜ್ಞಾನ ಕಾಳಿಕೆಯನು ಶಂಕಾದೃಷ್ಟಿ ಗ್ರಾಹಕತ್ವವಂ ಮಾಡಲು ಎಂಬುದೀಗ, ಎರಳೆಯ ನುಂಗಿದ ರಾಹುವಿನ ನೋಟವೆಂಬ ಶಬ್ದಕ್ಕರ್ಥ. ಅಂತು ಅಜ್ಞಾನ ಶಂಕೆ ಜ್ಞಾನವನರಿಯಲೀಸವೆ ಅಂದಂದಿಂಗೆ ಬಂದು ಕಾಡುತ್ತಿಪ್ಪುದೆಂಬುದೀಗ, ಅಂದಂದಿಗೆ ಬಂದು ಕಾಡಿತ್ತೆಂಬ ಶಬ್ದಕ್ಕರ್ಥ. ಅದೆಂತೆಂದಡೆ, ಸುಜ್ಞಾನದ ಶಿರಸ್ಸು ಅಜ್ಞಾನದ ಒತಲು ಇವೆರಡು ಸಂಬಂಧಿಸಿಕೊಂಡು ಕಾಡುತ್ತಿಪ್ಪುದಾಗಿ, ಒಂದರ ತಲೆ ಒಂದರ ಬಸಿರು ಅಂದಂದಿಂಗೆ ಬಂದು ಕಾಡಿತ್ತೆಂಬ ಶಬ್ದಕ್ಕರ್ಥ. ಇಂತು ಸುಜ್ಞಾನದ ಪ್ರಭೆ ಜ್ಞಾನಾಜ್ಞಾನ ಯುಕ್ತದಿಂದಳಿದುಳಿದ, ತನುಮುಖ ಸಂಬಂಧದಿಂ ಅಧೋ ಮುಖ ಪ್ರವೇಶವಾಗುತ್ತಿಹುದೆಂಬುದೀಗ, ನಂದಿ ನಂದಿಯ ನುಂಗಿ ಬಂದುದು ಮಹೀತಳಕ್ಕಾಗಿ ಎಂಬ ಶಬ್ದಕ್ಕರ್ಥ. ಇಂತು ಜ್ಞಾನ ವಿಪರೀತ ಭಾವವನೆಯ್ದಿ ಪ್ರತಿಸೂರ್ಯ ನ್ಯಾಯದಂತಿರಲು ಇಂದು ರವಿಗಡಣವ ನಾನೇ ನೆಂಬೆನೆಂಬ ಶಬ್ದಕ್ಕರ್ಥ. ॥೨೫॥

೨೬. ಊರ ಮಧ್ಯದ ಕಣ್ಣ ಕಾಡಿನೊಳಗೆ ಬಿದ್ದಿದ್ದಾವೆ ಐದು ಹೆಣನು. ಬಂದು ಬಂದು ಅಳುವರು. ಬಳಗ ಘನವಾದ ಕಾರಣ ಹೆಣನು ಬೇಯದು. ಕಾಡು ನೊಂದದು ಮಾಡ ಉರಿಯಿತ್ತು ಗುಹೇಶ್ವರಾ.

ಟೀಕು:— ಪಂಚಭೂತ ಕಾಯ ಗ್ರಾಮವೆಂಬುದೀಗ ಊರೆಂಬ ಶಬ್ದರ್ಥ. ಆ ತನುವಿನ ಮಧ್ಯದೊಳು ಅಜ್ಞಾನ ದೃಷ್ಟಿಯೊಳಗೆ ಭವಾರಣ್ಯ ತನ್ಮಯವಾಗಿಪ್ಪುದೆಂಬುದೀಗ ಊರ ಮಧ್ಯದ ಕಣ್ಣ ಕಾಡಿನೊಳಗೆಂಬ ಶಬ್ದಕ್ಕರ್ಥ. ಆ ಭವಾರಣ್ಯ ಮಧ್ಯದೊಳು ಶಬ್ದ ಸ್ಪರ್ಶ ರೂಪು ರಸ ಗಂಧಗಳೆಂಬ ವಿಷಯಂಗಳೈದ ಅಚೇತನ ಭಾವದಿಂ ಮೃತಗತಂಗಳಾಗಿರುತ್ತಿರಲು ಬಿದ್ದಿದ್ದಾವೆ ಐದು ಹೆಣನೆಂಬ ಶಬ್ದಕ್ಕರ್ಥ. ಆ ಪಂಚ ವಿಷಯಂಗಳ ಶರೀರ ಸಂಬಂಧಿಗಳಪ್ಪ ಸಕಲಕರಣಂಗಳು ಆ ವಿಷಯಂಗಳ ಮುಟ್ಟಿ ಮುಟ್ಟಿ ಸಂಸಾರ ದುಃಖ ಜೀವಿಗಳಪ್ಪ ಕಾರಣ ಬಂದು ಬಂದು ಅಳುವರು ಬಳಗ ಘನವಾದ ಕಾರಣ ಎಂಬ ಶಬ್ದಕ್ಕರ್ಥ. ಅದು ಕಾರಣ ಆ ವಿಷಯಂಗಳು ಅಳಿಯದೆ ಭವವು ಕೆಡದಿಪ್ಪುದರಿಂದ ದೇಹವೇ ತಾಪತ್ರಯದಲ್ಲಿ ಬೇವುತ್ತಿದ್ದಿತ್ತೆಂಬುದೀಗ ಹೆಣನು ಬೇಯದು, ಕಾಡು ನಂದದು ಮಾಡ ಉರಿಯಿತ್ತೆಂಬ ಶಬ್ದಕ್ಕರ್ಥ.

೨೭. ಹುಲಿಯ ಬೆನ್ನಿಲಿ ಒಂದು ಹುಲ್ಲೆ ಹೋಗಿ ಮೇದು ಬಂದೆನೆಂದಡೆ, ಇದ ಕಂಡು ಬೆರಗಾದೆ. ರಕ್ಕಸಿಯ ಮನೆಗೆ ಹೋಗಿ ನಿದ್ರೆಗೈದು ಬಂದೆನೇದಡೆ, ಇದ ಕಂಡು ಬೆರಗಾದೆ. ಜವನ ಮನೆಗೆ ಹೋಗಿ ಸಾಯದೆ ಬದುಕಿ ಬಂದೆನೆಂದಡೆ ಇವ ಕಂಡು ಬೆರಗಾದೆ ಗುಹೇಶ್ವರಾ.

ಟೀಕು:— ವಿಶ್ವಮಂ ಮುರಿದು ನುಂಗತ್ತಿಹ ಕಾಲವ್ಯಾಘ್ರನ ಬಳಿ ವಿಡಿದು, ಜೀವನೆಂಬ ಮೃಗವು ನಡೆದು, ಸಂಸಾರ ವಿಷಯಸುಖವ ಸವಿದು ಬರುತ್ತಿರ್ದನಲ್ಲಾ ಎಂದು ಜ್ಞಾನಿ ತನ್ನ ತಾನರಿದು ಚೋದ್ಯಂಬಡುತ್ತಿರಲು ಎಂಬುದೀಗ ಹುಲಿಯು ಬೆನ್ನಿನಲಿ ಒಂದು ಹುಲ್ಲೆ ಹೋಗಿ ಮೇದು ಬಂದೆನೆಂದರೆ ಇದ ಕಂಡು ಬೆರಗಾದೆನೆಂಬ ಶಬ್ದಕ್ಕರ್ಥ. ಮಾಯಾಗ್ರಹವಪ್ಪ ಪಂಚಭೂತಾಶ್ರಯದೊಳು ಮೈಮರೆದಿದ್ದು ಎಚ್ಚತ್ತು ಬಂದೆನಲ್ಲಾ ಎಂದು ಜ್ಞಾನಿ ಚೋದ್ಯಂಬಡುತ್ತಿರಲು ಎಂಬುದೀಗ ರಕ್ಕಸಿಯ ಮನೆಗೆ ಹೋಗಿ ನಿದ್ರೆಗೈದು ಬಂದೆನೆಂದಡೆ, ಇದ ಕಂಡು ಬೆರಗಾದೆನೆಂಬ ಶಬ್ದಕ್ಕರ್ಥ. ಜನನ ಮರಣ ಪರಭವದಿಂ ಯಮನ ಬಾಧೆಗೊಳಗಾಗಿರುತ್ತಿರಲು ಎಂಬುದೀಗ ಏತಕ್ಕೆ ಜನನ ಮರಣಗೆಟ್ಟೆನಲ್ಲಾ ಎಂದು ಚೋದ್ಯವ ಮಾಡುತ್ತಿರಲು, ಅದೀಗ ಜವನ ಮನೆಗೆ ಹೋಗಿ ಸಾಯದೆ ಬದುಕಿ ಬಂದಡೆ ಇಡ ಕಂಡು ಬೆರಗಾದೆನೆಂಬ ಶಬ್ದಕ್ಕರ್ಥ. ॥೨೭॥

೨೮. ಹೃದಯಕಂದದ ಮೇಲೆ ಹುಟ್ಟಿತ್ತು. ಹರಿದು ಹಬ್ಬಿ ಕೊಬ್ಬಿ ಹಲವು ಫಲವಾಯಿತ್ತು ನೋಡಿರೆ. ಪರಿಪರಿಯ ಫಲಂಗಳ ಬೇಡಿದವರಿಗಿತ್ತು, ಆ ಫಲವ ಬಯಸಿದವರು ಜಲಮೊಳಗೆ ಬಿದ್ದರೆ ನೋಡಿ ನಗುತ್ತಿರ್ದ ಗುಹೇಶ್ವರ.

ಟೀಕು:— ಹೃತ್ಕಮಲ ಕರ್ಣಿಕಾ ಕುಹರ ಮಧ್ಯದ ಮೂಲಾಹಂಕಾರವೆಂಬ ಬೀಜದೊಳುದಯಿಸಿದ ಅಜ್ಞಾನವೀಗ ಹೃದಯ ಕಂದದ ಮೇಲೆ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತುದಯಿಸಿದ ಅಜ್ಞಾನ ಅಂತರಂಗದೊಳಗೆ ಪೆರ್ಚಿ ಬೆಳೆದು, ದಶವಾಯುಗಳ ದಶನಾಳದೊಳಗೆ ಶಾಖೋಪಶಾಖೆಯಾಗಿ ನಿರ್ಮಿಸಿದ ಸಕಲ ಕರಣಂಗಳೇ ಪರ್ಣಕುಸುಮಂಗಳಾಗಿ ದಶೇಂದ್ರಿಯಗಳೆಂಬ ಫಲವಾಗಿರುತ್ತಿಪ್ಪುದೀಗ ಹರಿದು ಹಬ್ಬಿ ಕೊಬ್ಬಿ ಹಲವು ಫಲವಾಯಿತ್ತು ನೋಡಿರೆ ಎಂಬ ಶಬ್ದಕ್ಕರ್ಥ. ಆ ಇಂದ್ರಿಯ ಸುಖವನಾ

ರಾರು ಬಯಸುವರು, ಆ ಬಯಸಿದವರಿಗೆಲ್ಲಕ್ಕು ತತ್ಸಂಸಾರ ಸುಖವನುಂಟುಮಾಡಿಕೊಡುತ್ತಿರಲು, ಆದೀಗ ಬೇಡಿದವರಿಗೆ ಬೇಡಿತ್ತನಿತ್ತು ಎಂಬ ಶಬ್ದಕ್ಕರ್ಥ. ಆ ಐದಿಂದ್ರಿಯ ಸುಖರಸದ ಫಲವ ನಿಶ್ಚೈಸಿದವರು ಸಂಸಾರಸಾಗರದೊಳಗೆ ಬಿದ್ದರೆ, ಶಿವಜ್ಞಾನಿಗಳು ಕಂಡು ಹಾಸ್ಯವನಾಡುತ್ತಿರಲು ಆ ಫಲವ ಬಯಿಸಿದವರು ಜಲದೊಳಗೆ ಬಿದ್ದರೆ ನೋಡಿ ನಗುತ್ತಿರ್ದನೆಂಬ ಶಬ್ದಕ್ಕರ್ಥ.

೨೯. ಪಂಚಾಶತ್ಕೋಟಿ ಭೂಮಂಡಲವನೊಂದು ತಲೆ ಇಲ್ಲದ ಮುಂಡ ನುಂಗಿತ್ತ ಕಂಡೆನು. ತಲೆ ಇಲ್ಲದ ಕಂಡು ಬೆರಗಾದೆನು. ನವ ಖಂಡ ಮಂಡಲ ಭಿನ್ನವಾದಂದು, ಆ ತಲೆಯ ಕಂಡವರುಂಟೆ ಗುಹೇಶ್ವರಾ?

ಟೀಕು:-- ಜ್ಞಾನಕಾಂಡ, ಪರಿಚ್ಛೇದ್ಯಂ ಕರ್ಮಕಾಂಡ ರತೋ ನರಃ ಶಿರಚ್ಛೇದಕಬಂಧಸ್ಯ ಮಂಡನಂ ಕುರ್ವತಿ॥ ಎಂದುದಾಗಿ ತಲೆ ಎಂದಡೆ ಜ್ಞಾನ. ಮುಂಡನೆಂದಡೆ ಅಜ್ಞಾನದ ಪ್ರಪಂಚು. ವಿಶ್ವವನವಗ್ರಹಿಸಿ ಕೊಂಡಿಪ್ಪುದೆಂಬುದೀಗ, ಪಂಚಾಶತ್‌ಕೋಟಿ ಭೂಮಂಡಲವನೊಂದು ತಲೆಇಲ್ಲದ ಮುಂಡ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಪ್ರಪಂಚು ನುಂಗಿದ ಭೇದವನು ಸುಜ್ಞಾನಿ ಶರಣನು ಪ್ರಮಾಣವೃತ್ತಿಯಿಂದ ನೋಡದೆ. ತಲೆಯಿಂದ ಅರುವಿನಿಂದ ನಿರೀಕ್ಷಿಸಿ ಕಂಡು ಚೋದ್ಯಮಂ ಬಡುತ್ತಿರಲು, ಆದೀಗ ತಲೆ ಇಲ್ಲದೆ ಕಂಡು ಬೆರಗಾದೆನೆಂಬ ಶಬ್ದಕ್ಕರ್ಥ. ಆ ಮಾಯೆಯನು ಇದಿರಿಟ್ಟು, ಅರಿವುತ್ತಿಪ್ಪ ಅರಿವು ಖಂಡಿತವಾದಕಾರಣ, ನವಖಂಡ ಮಂಡಲವೆಂಬ ಶಬ್ದಕ್ಕರ್ಥ. ಆ ಖಂಡಿತ ಜ್ಞಾನವು ಅಖಂಡಿತಜ್ಞಾನದೊಳಳಿಯಿತ್ತೆಂಬುದೀಗ, ನವಖಂಡಮಂಡಲ ಭಿನ್ನವಾಯಿತ್ತೆಂಬ ಶಬ್ದಕ್ಕರ್ಥ. ಆ ಖಂಡಿತ ಜ್ಞಾನದ ನಿಲವನಾರಿಗೂ ಕಾಣಬಾರದೆಂಬುದೀಗ, ಆ ತಲೆಯ ಕಂಡವರುಂಟೇ ಎಂಬ ಶಬ್ದಕ್ಕರ್ಥ.

೩೦. ಅರಗಿನ ಪುತ್ಥಳಿಯನುರಿ ಕೊಂಡಡೆ ಉದಕ ಬಾಯಾರಿ ಬಳಲುತ್ತಿದೆ. ಆಗಿಂಬೋ ಬಾವಿ ಎನಗಿಂಬೋ. ಆಗಿದಾತ ಸತ್ತ. ಬಾವಿ ಬತ್ತಿತ್ತು. ಇದು ಕಾರಣ ನೆರೆ ಮೂರು ಲೋಕ ಬರು ಸೂರೆವೋಯಿತ್ತು ಗುಹೇಶ್ವರಾ.

ಟೀಕು:—ಒಂದು ಜೀವಿಯು ಮಲದಿಂದಾದ ಲಕ್ಷಕ್ಕೂ, ಒಬ್ಬ ಜೀವನ ಮಲತ್ರಯ ಸಂಬಂಧದಿಂದಾದ ದೇಹಕ್ಕೂ ಸಂಬಂಧ ಒಂದೇ ಯಾದ ಕಾರಣ, ಆ ದೇಹಕ್ಕೆ ಅರಗೆಂಬ ಶಬ್ದವಾಯಿತ್ತು. ಆ ಮಲ ದೇಹವನು ತಾಪತ್ರಯಾಗ್ನಿ ಗ್ರಹಿಸಲು ಅದೀಗ ಅರಗಿನ ಪುತ್ಥಳಿಯು ಸುರಿಕೊಂಡಡೆ ಎಂಬ ಶಬ್ದಕ್ಕರ್ಥ. ಆ ತಾಪತ್ರಯಾಗ್ನಿ ದೇಹವನಾವರ್ತಿಸಲು, ಉದಕವೆಂಬ ನಾಮವ ಧರಿಸಿಪ್ಪ ಮನವು ಅತ್ಯಂತ ಕಾಮಾದಿ ತೃಷ್ಣೆಯಾತುರನಾಗಿದ್ದಿತ್ತು. ಆ ತೃಷ್ಣೆಗೆ ತನುವೆಂಬ ಭೂಮಿಯ ಮೇಲೆ ವಿಷಯವೆಂಬ ಕೂಪವನುಂಟು ಮಾಡುತ್ತಿರಲು ಅದೀಗ ಅಗಿಂಬೋ ಬಾವಿ ಎನಗಿಂಬೋ ಎಂಬ ಶಬ್ದಕ್ಕರ್ಥ. ಆ ವಿಷಯ ಕೂಪದೊಳಗಣ ಸಂಸಾರ ರಸವ ಕುಡಿದು ಜೀವನು ಮರಣವನೆಯ್ದುತ್ತಿಹ ಕಾರಣ, ಅಗಿದಾತ ಸತ್ತನೆಂಬ ಶಬ್ದಕ್ಕರ್ಥ. ಆ ಜೀವನು ಮೃತಗತವಾಗುತ್ತಿರಲು, ಆ ವಿಷಯ ಕೂಪಂಗಳು ಆ ಜೀವನ ಕೂಡೆ ನಷ್ಟವಾಗುತ್ತಿಹ ಕಾರಣ, ಬಾವಿ ಬತ್ತಿತ್ತೆಂಬ ಶಬ್ದಕ್ಕರ್ಥ. ಇಂತು ಸಂಸಾರದ ಭ್ರಾಂತಿನ ದೋಷದಿಂ ಲೋಕವೆಲ್ಲವು ವೃಥಾ ಕೆಡುತ್ತಿರ್ದರೆಂಬುದೀಗ ನೆರೆ ಮೂರು ಲೋಕ ಬರು ಸೂರೆವೋಯಿತ್ತೆಂಬ ಶಬ್ದಕ್ಕರ್ಥ. ॥೩೦॥

೩೧. ಅಂಗದ ಕೊನೆಯ ಮೇಲಣ ಕೋಡಗ ಕೊಂಬಿಂಗೆ ಹಾರಿತ್ತು ಅಯ್ಯ. ಒಂದು ಸೋಜಿಗ. ಕೆಯ್ಯ ನೀಡಲು ಮುಯ್ಯೆಲ್ಲವ ನುಂಗಿತ್ತು. ಒಯ್ಯನೆ ಕರೆವಡೆ ಮುಂದೆ ನಿಂದಿತ್ತು. ಮೆಯ್ಯಂತಡೆ ಬಯಲಾಯಿತ್ತು ಗುಹೇಶ್ವರಾ.

ಟೀಕು:— ಶರೀರವೆಂಬ ವೃಕ್ಷದಲ್ಲಿಹ ಮನವೆಂಬ ಮರ್ಕಟನೆಂಬುದೀಗ, ಅಂಗದ ಕೊನೆಯ ಮೇಲಣ ಕೊಡಗವೆಂಬ ಶಬ್ದಕ್ಕರ್ಥ. ಇಂದ್ರಿಯಂಗಳೆಂಬ ಶಾಖೋಪ ಶಾಖೆಗಳಿಗೆ ಲಂಘಿಸುತ್ತಿಹುದೆಂಬುದೀಗ ಕೊಂಬಿಗೆ ಹಾರಿತ್ತೆಂಬ ಶಬ್ದಕ್ಕರ್ಥ. ಆ ಮನವ ಹಿಡಿದು ನಿಲಿಸಿಹೆನೆಂದು ನೆನೆಯಲು, ಆ ನೆನೆವ ಮನ ತಾನಾಗಿ ಸರ್ವಾಂಗವನು ಸಂಕಲ್ಪಭಾವದಿಂ ಅವಗ್ರಹಿಸಿತ್ತೆಂಬುದೀಗ, ಕೈಯ್ಯ ನೀಡಲು ಮೆಯ್ಯೆಲ್ಲವ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಬೋಧೆಯಿಂದ ಆ ಮನಸ್ಸು ಆಹ್ವಾನಿಸಲು ಸಂಚಲವ ಬಿಟ್ಟು ನಿಶ್ಚಲವಾಗಿ ನಿಂದಿತ್ತೆಂಬುದೀಗ, ಒಯ್ಯನೆ ಕರೆದಡೆ ಮುಂದೆ ನಿಂದಿತ್ತೆಂಬ ಶಬ್ದಕ್ಕರ್ಥ. ಆ ಮನೋ ಮೂರ್ತಿ ಶಿವನು ತಾನೆಂದರಿಯಲು ಆ ಮನವು ಅಲ್ಲಿಯೇ ನಿರ್ವಯಲಾಯಿತ್ತೆಂಬುದೀಗ ಮುಯ್ಯಾಂತಡೆ ಬಯಲಾಯಿತ್ತೆಂಬ ಶಬ್ದಕ್ಕರ್ಥ.

# ಶಿವಾನುಭವ.

ಸಂಪುಟ–೫ ಸಂಚಿಕೆ–4

(ಮಾಸಿಕವು.)




ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ.**

ಬಿ. ಏ. ಎಲ್. ಎಲ್. ಬಿ.



**ವಿಜಾಪುರ.**

**೪ ನೇ ಸಂಚಿಕೆ**

ಜುಲೈ ೧೯೩೦

# ವಿಷಯಾನುಕ್ರಮಣಿಕೆ.


| ವಿಷಯ. | ಲೇಖಕರು. | ಪುಟ. |
| --- | --- | --- |
| ೧. ಲಿಂಗಾಂಗ ಸಾಮರಸ್ಯವು | ಶ್ರೀ. ಶಿವಾನಂದಾಶ್ರಮವಾಸಿ ಬಸವದಾಸಾನುದಾಸರ ಪುತ್ರ ಮು. ಅಗರಖೇಡ. | ೭೪-೯೨ |
| ೨. ವೀರಶೈವ ವರ್ಣಭೇದ ವಿದಾರಿಕಾ. | ಶ್ರೀ. ಸಿದ್ಧರಾಮಪ್ಪ ಪಾವಟೆ ಬಿ. ಏ. ಎಲ್. ಎಲ್. ಬಿ. ಅಡ್ವೋಕೇಟ ಹುಬ್ಬಳ್ಳಿ | ೯೩-೯೮ |
| ೩. ಶಿವತತ್ವ ರತ್ನಾಕರದ ವಿಮರ್ಶೆ | ವೇ. ಚಂದ್ರಶೇಖರಶಾಸ್ತ್ರೀ ಪ್ರಿನ್ಸಿಪಾಲ ಶಂಕರ ಕಾಲೇಜ ಯಾದಗಿರಿ. | ೯೯-೧೦೨ |
| ೪. ವೀರಶೈವನು ನವಗ್ರಹಗಳನ್ನು ಅಂಗೀಕರಿಸುವನು. | ದೈವಜ್ಞ ವಿನೋದ ಶಿರೋಳ ಬೃಹನ್ಮಠ ಜ್ಯೋತಿಷ್ಯ ಆಶ್ರಮ | ೧೦೩-೧೦೪ |
| ೫. ಚೋಳರೇಣುಕ ಸಂವಾದ | ಶ್ರೀ ವಿರಭದ್ರಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ. ಸಬಜಜ್ಜ ಧಾರವಾಡ. | ೧೦೫-೧೧೨ |
| ೬. ಭಾವವೇ | ಶ್ರೀ. ಈಶ್ವರ ಸಣಕಲ್ಲ ರಬಕವಿ | ೧೧೩ |
| ೭. ಪ್ರಭುದೇವರ ವಚನಗಳು | ಸಂಪಾದಕರು | ೨೫-೪೮ |


---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೫ ] ಜುಲೈ ೧೯೩೦ [ ಸಂಚಿಕೆ ೪

## ಕ್ರಿಯಾಜ್ಞಾನೈಕ್ಯ ಶ್ರೀ ಶಿವಯೋಗವು

ಅಥವಾ

## ಲಿಂಗಾಂಗಸಾಮರಸ್ಯವು.

(ಲೇಖಕ:— ಶಿವಾನಂದಾಶ್ರಮವಾಸಿ ಬಸವದಾಸಾನುದಾಸರ ಪುತ್ರ
ಮು. ಅಗರಖೇಡ ಜಿ ವಿಜಾಪುರ.)

ಶ್ರೀಮತ್ಸಚ್ಚಿದಾನಂದ ನಿತ್ಯಪರಿಪೂರ್ಣ ಪರಬ್ರಹ್ಮವಸ್ತುವೇ ಪ್ರಕೃತಿಪುರುಷಾತ್ಮಕವಾದೀ ಜಗತ್ತಿಗೆ ಜನ್ಮಸ್ಥಾನವು. ಆ ಪರಬ್ರಹ್ಮವಸ್ತುವೇ ತನ್ನಲ್ಲಿ ಲೀನವಾಗಿರುವ ಚಿಚ್ಛಕ್ತಿಯ ಸ್ಫುರಣದಿಂದ "ಲಿಂಗ" ವೆಂತಲೂ "ಅಂಗ" ವೆಂತಲೂ ದ್ವಿವಿಧವಾಯಿತು. ಲಿಂಗವೇ ಉಪಾಸ್ಯವಾಗಿಯೂ, ಅಂಗವೇ ಉಪಾಸಕವಾಗಿಯೂ ವ್ಯವಹೃತವಾದವು. ಆಕಾಶವೊಂದೇ ಉಪಾಧಿಯ ವಶದಿಂದ ಭಿನ್ನ ಭಿನ್ನ ವ್ಯವಹರಣೆಗೊಳಗಾಗುವಂತೆ ಆ ಪರಬ್ರಹ್ಮವಸ್ತುವೂ ಸಹ ಉಪಾಧಿವಶದಿಂದ ಭಿನ್ನ ಭಿನ್ನ ರೂಪವಾಗಿದ್ದರೂ ವಿಚಾರತಃ ನಿರುಪಾಧಿಸ್ಥಿತಿಯಲ್ಲಿ ಒಂದೆಂಬುದೇ ಸತ್ಯ. ಲಿಂಗವೆಂದರೆ "ಬ್ರಹ್ಮೇತಿ ಲಿಂಗ ಮಾಖ್ಯಾತಂ" ಎಂಬ ವಚನಾನುಸಾರವಾಗಿ ಲಿಂಗವೇ ಸಾಕ್ಷಾತ್ಪರಬ್ರಹ್ಮವೆಂದು ಹೇಳಲ್ಪಡುವುದು. ಅಂಗವೆಂದರೆ "ತಸ್ಮಾದಂಗಸ್ವರೂಪೋಸೌ ಜೀವಸ್ಸಂಸಾರವೃತ್ತಿಭಾಕ್" ಎಂಬ ಪ್ರಮಾಣಾನುಸಾರವಾಗಿ ಅಂಗಕ್ಕೆ ಜೀವನೆಂದು ಹೇಳಿದಂತಾಯಿತು. ಇದರಿಂದ ತಿಳಿವುದೇನೆಂದರೆ, ಲಿಂಗಾಂಗಗಳೇ ಶಿವಜೀವರುಗಳೆಂದು ವಿದಿತವಾಗುವುದು. ಆ ಪರಮಾತ್ಮವಸ್ತುವೇ ಎರಡಾದ ಮೇಲೆ ಆ ಪರವಸ್ತುವಿನಲ್ಲಿ ಅವಿನಾಭೂತವಾ

ಗಿರುವ (ಇದ್ದೂ ಇಲ್ಲದಂತೆ, ಕಂಡೂ ಕಾಣದಂತೆ "ಪುಷ್ಪದೊಳಗಣ ಮಕರಂದವಿದ್ದಂತೆ" ಯಾವಾಗಲೂ ಅಡಗಿಕೊಂಡಿರುವ) ಚಿಚ್ಛಕ್ತಿಯೂ ಕೂಡ ಸ್ವಾತಂತ್ರ್ಯದಿಂದ ಶಕ್ತಿ (ಕಲೆ) ಯಂತಲೂ, ಭಕ್ತಿಯಂತಲೂ ಎರಡು ತೆರನಾಯಿತು. ಆ ಶಕ್ತಿಯು ಲಿಂಗಸ್ಥಲವನ್ನಾಶ್ರಯಿಸಿ ಉಪಾಸ್ಯವಾಯಿತು. ಭಕ್ತಿಯು ಅಂಗಸ್ಥಲವನ್ನಾಶ್ರಯಿಸಿ ಉಪಾಸಕವಾಯಿತು. ಲಿಂಗಾಂಗಗಳೇ ಶಿವಜೀವರುಗಳೆಂದು ಮೇಲೆ ಹೇಳಿದ ಪ್ರಕಾರ ಅಂಥಾ ಲಿಂಗಾಂಗಸಾಮರಸ್ಯವೇ ಶಿವಜೀವೈಕ್ಯವೆಂದು ತಿಳಿಯಲ್ಪಡುವುದು. ಲಿಂಗಾಂಗಗಳು ಅಭಿನ್ನವೆನಿಸಿಕೊಳ್ಳುವಂತೆ ಶಕ್ತಿಭಕ್ತಿಗಳೆರಡೂ ಅಭಿನ್ನವೆನಿಸಿಕೊಳ್ಳುವವು

ಈ ಲಿಂಗಾಂಗಗಳಲ್ಲಿ ಮೊದಲನೇ ಲಿಂಗಸ್ಥಲವು-ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ವಿಧವಾಯಿತು. ಭಾವಲಿಂಗವೇ "ಅಸಿ" ಪದದರ್ಥವುಳ್ಳದ್ದು. ಪ್ರಾಣಲಿಂಗವು "ತ್ವಂ" ಪದದರ್ಥವುಳ್ಳದ್ದು ಇಷ್ಟಲಿಂಗವು "ತತ್,, ಪದದರ್ಥವುಳ್ಳದ್ದು. ಇದರಿಂದ "ತತ್ವಮಸಿ,, ಎಂಬ ಮಹಾ ವಾಕ್ಯವೇ ತ್ರಿವಿಧ ಲಿಂಗಗಳೆಂದು ತಿಳಿಯಬೇಕು.

ಈ ತ್ರಿವಿಧಲಿಂಗಗಳೂ ಸಹ ಪ್ರತಿಯೊಂದೂ ಎರಡೆರಡರಂತೆ ಆರು ಭೇದಗಳಾಗುವವು. ಹ್ಯಾಗೆಂದರೆ, ಮೊದಲನೇ ಭಾವಲಿಂಗವು. ಮಹಾಲಿಂಗ ಪ್ರಸಾದಲಿಂಗವೆಂದೆರಡು ಪ್ರಕಾರವಾಯಿತು. ಪ್ರಾಣಲಿಂಗವು-ಜಂಗಮಲಿಂಗ ಶಿವಲಿಂಗವೆಂದೆರಡು ತೆರನಾಯಿತು. ಇಷ್ಟಲಿಂಗವು-ಗುರುಲಿಂಗ ಆಚಾರಲಿಂಗವೆಂದೆರಡು ವಿಧವಾಯಿತು. ಹೀಗೆ ಪರವಸ್ತು ಪರಬ್ರಹ್ಮಸ್ವರೂಪವಾದ ಲಿಂಗವೇ ಆರಾದಬಳಿಕ ತನ್ನಲ್ಲಿ ಅವಿನಾಭೂತವಾಗಿರುವ ಚಿಚ್ಛಕ್ತಿಯೂ ಸಹ ಷಡ್ವಿಧ ಕಲೆಯನ್ನು ಧರಿಸಿ ಆರು ತೆರನಾಗುವುದು. ಹ್ಯಾಗೆಂದರೆ, ಶಾಂತ್ಯತೀತೋತ್ತರ ಕಲೆಯಿಂದ ಕೂಡಿದ್ದು ಚಿಚ್ಛಕ್ತಿಯಂತಲೂ, ಶಾಂತ್ಯತೀತ ಕಲೆಯಿಂದ ಕೂಡಿದ್ದು ಪರಾಶಕ್ತಿಯಂತಲೂ, ಶಾಂತಿಕಲೆಯಿಂದ ಕೂಡಿದ್ದು ಆದಿಶಕ್ತಿಯಂತಲೂ, ವಿದ್ಯಾಕಲೆಯಿಂದ ಕೂಡಿದ್ದು ಇಚ್ಛಾಶಕ್ತಿಯೆಂತಲೂ, ಪ್ರತಿಷ್ಠಾಕಲೆಯಿಂದ ಕೂಡಿದ್ದು ಜ್ಞಾನಶಕ್ತಿಯಂತಲೂ, ನಿವೃತ್ತಿಕಲೆಯಿಂದ ಕೂಡಿದ್ದು ಕ್ರಿಯಾಶಕ್ತಿಯಂತಲೂ ತಿಳಿಯಬೇಕು. ಪೂರ್ವೋಕ್ತ ಆರು ಲಿಂಗಗಳೇ ಈ ಆರು ಶಕ್ತಿಗಳೊಡನೆ ಕೂಡಿ ಆರುತತ್ವಗಳನ್ನಾಶ್ರಯಿಸುವುವು. ಅದು ಹೇಗೆಂದರೆ, ಮಹಾಲಿಂಗವು-ಚಿಚ್ಛಕ್ತಿಸಮೇತ ಶಿವತತ್ವವನ್ನಾಶ್ರಯಿಸಿ ಭಾವಗಮ್ಯವಾಗುವುದು. ಪ್ರಸಾದಲಿಂಗವು-ಪರಾಶಕ್ತಿಯುಕ್ತವಾಗಿ ಸಾದಾ

ೃಕತ್ವವನ್ನಾಶ್ರಯಿಸಿ ಜ್ಞಾನೈಕ್ಯಗವ್ಯನಾದುದು. ಜಂಗಮಲಿಂಗವು-ಆದಿ
ಕ್ತಿಸಮೇತ ಅನುಭೂತ್ತತತ್ವವನ್ನಾಶ್ರಯಿಸಿ ಮನೋಗೋಚರವಾದುದು. ಶಿವ
ಂಗವು-ಇಚ್ಛಾಶಕ್ತಿಯುಕ್ತ ವ ಱತ್ತತತ್ವವನ್ನಾಶ್ರಯಿಸಿ ಅಹಂಕಾರಗೋ
ರವಾದುದು. ಗುರುಲಿಂಗವು-ಜ್ಞಾನಶಕ್ತಿಯುಕ್ತ ಕರ್ತೃತತ್ವವನ್ನಾಶ್ರಯಿಸಿ
ುದ್ಧಿಗವ್ಯವಾದುದು. ಆಚಾರಲಿಂಗವು ಕ್ರಿಯಾಶಕ್ತಿಯುಕ್ತ ಸಕಲತತ್ವವ
ನ್ನಾಶ್ರಯಿಸಿ ಚಿತ್ತೈಕಗೋಚರವಾದುದು. ಹೀಗೆ ಒಂದೇ ವಸ್ತುವು ಮೂರಾಗಿ
ಕ್ತಿಸಂಯೋಗದಿಂದ ಆರುತೆರನಾದ ರೀತಿಯು ಹೇಳಿತಷ್ಟೇ. ಇವು
ಪಾಸ್ಯವಾದ ಲಿಂಗಸ್ಥಲಗಳ ಭೇದವಾದವು.

ಇದರಂತೆ ಉಪಾಸಕವಾದ ಅಂಗಸ್ಥಲವೂ ಸಹ ಭಕ್ತ್ಯಾದಿಸಂಯೋ
ದಿಂದ ಭಿನ್ನ ಭಿನ್ನಗಳಾಗುವುದನ್ನುದಾಹರಿಸುವ. ಅಂಗ (ಜೀವ) ತತ್ವವು
ಂದೇ, ಯೋಗಾಂಗ, ಭೋಗಾಂಗ, ತ್ಯಾಗಾಂಗವೆಂದು ಮೂರುವಿಧ
ಾಯಿತು. ಯೋಗಾಂಗವು-ಕಾರಣದೇಹ ಸುಷುಪ್ತ್ಯವಸ್ಥಾಪನ್ನಪ್ರಾಜ್ಞ
ನ್ನಿಸಲ್ಪಡುವುದು. ಭೋಗಾಂಗವು-ಸೂಕ್ಷ್ಮದೇಹ ಸ್ವಪ್ನಾವಸ್ಥಾಪನ್ನ
ಜಸರೂಪವೆನ್ನಿಸಲ್ಪಡುವುದು. ತ್ಯಾಗಾಂಗವು-ಸ್ಥೂಲದೇಹ ಜಾಗ್ರದವ
ಸ್ಥಾಪನ್ನ ವಿಶ್ವರೂಪವೆನ್ನಿಸಲ್ಪಡುವುದು. ಈ ಯೋಗಾಂಗ, ಭೋಗಾಂಗ,
್ಯಾಗಾಂಗಗಳೇ ಕ್ರಮವಾಗಿ ಪರಮಾತ್ಮ, ಅಂತರಾತ್ಮ, ಜೀವಾತ್ಮಗ
ಂಬ ಅಪರನಾಮಕಗಳಾಗಿರುವುವು. ತ್ರಿವಿಧಲಿಂಗಗಳೂ ಆರಾದಂತೆ
ಅಂಗಗಳೂ ಕಡೆ ಪ್ರತಿಯೊಂದೊಂದೂ ಎರಡೆರಡು ತೆರನಾಗುವುವು.
ದು ಹೇಗೆಂದರೆ, ಯೋಗಾಂಗವು--ಐಕ್ಯ, ಶರಣ ಎಂಬೆರಡು ಸ್ಥಲವು
ದ್ದಾಯಿತು. ಭೋಗಾಂಗವು--ಪ್ರಾಣಲಿಂಗಿ, ಪ್ರಸಾದಿ ಎಂಬೆರಡು ಸ್ಥಲ
ಳುಳ್ಳದ್ದಾಯಿತು. ತ್ಯಾಗಾಂಗವು--ಮಾಹೇಶ, ಭಕ್ತ ಎಂಬೆರಡು ಸ್ಥಲ
ಳುಳ್ಳದ್ದಾಯಿತು. ಇವುಗಳಲ್ಲಿಯು ಐಕ್ಯ ಶರಣ ಸ್ಥಲಗಳೆರಡೂ ಕಾರಣ
ೇಹ ಪ್ರಾಜ್ಞಾರೂಪಸಂಪನ್ನಗಳೆನಿಸುವುವು. ಪ್ರಾಣಲಿಂಗಿ ಪ್ರಸಾದಿಸ್ಥಲ
ಗಳೆರಡೂ ಸೂಕ್ಷ್ಮದೇಹ ತೈಜಸರೂಪಸಂಪನ್ನಗಳೆನಿಸುವುವು. ಮಾಹೇಶ
ಭಕ್ತಸ್ಥಲಗಳೆರಡೂ ಸ್ಥೂಲದೇಹ ವಿಶ್ವರೂಪಸಂಪನ್ನಗಳೆನಿಸುವುವು. ಹೀಗೆ
ಶಕ್ತಿವೈಚಿತ್ರ್ಯದ ಸಂಯೋಗದಿಂದ ಅಂಗಸ್ಥಲಗಳೂ ಆರುತೆರನಾಗುವುವು.

ಅಧಿಕಾಭಾವಾಪನ್ನನಾದ ಸ್ವಪ್ರಕಾಶತಾ ಶಕ್ತಿಯೇ ಲಿಂಗದ ಆರು
ಭೇದಗಳನ್ನನುಸರಿಸಲು ಆರು ವಿಧವಾದ ಶಕ್ತಿಯೆನಿಸಿಕೊಂಡಂತೆ ನ್ಯೂನೀ
ಭೂತವಾದ ಸ್ವಪ್ರಕಾಶತಾ ಶಕ್ತಿಯೆಂಬ ಭಕ್ತಿಯೂ ಕೂಡ ಐಕ್ಯಾದ್ಯ

ಷಡ್ವಿಧಸ್ಥಲಗಳಲ್ಲೂ ಪ್ರವರ್ತಿಸಿ ಉಪಾಧಿವಶದಿಂದ ಆರುವಿಧವೆನಿಸಿಕೊಳ್ಳುವುದು. ಅದು ಹೇಗೆಂದರೆ, ಸಮರಸಭಕ್ತಿಯೆಂತಲೂ ಆನಂದಭಕ್ತಿಯೆಂತಲೂ ಅನುಭಾವಭಕ್ತಿಯೆಂತಲೂ ಅವಧಾನ ಭಕ್ತಿಯ ೦ತಲೂ, ನೈಷ್ಠಿಕಭಕ್ತಿಯೆಂತಲೂ, ಸದ್ಭಕ್ತಿಯೆಂತಲೂ, ಹೆಸರಾದವು. ಇವುಗಳಲ್ಲಿಯ ಐಕ್ಯಸ್ಥಲವನ್ನು ಸಮರಸಭಕ್ತಿಯೂ ಶರಣಸ್ಥಲವನ್ನು ಆನಂದಭಕ್ತಿಯೂ, ಪ್ರಾಣಲಿಂಗಿಸ್ಥಲವನ್ನು ಅನುಭಾವಭಕ್ತಿಯೂ, ಪ್ರಸಾದಿಸ್ಥಲವನ್ನು ಅವಧಾನಭಕ್ತಿಯೂ, ಮಾಹೇಶ್ವರಸ್ಥಲವನ್ನು ನೈಷ್ಠಿಕಭಕ್ತಿಯೂ, ಭಕ್ತಿಸ್ಥಲವನ್ನು ಸದ್ಭಕ್ತಿಯೂ ಸೇರಿಕೊಂಡಿರುವುವು. ಈ ಆರು ಅಂಗಸ್ಥಲಗಳೂ ಕೂಡ ಹಿಂದೆ ಹೇಳಿದ ಆರು ಲಿಂಗಸ್ಥಳಗಳಿಗೆ ಉಪಾಸಕಗಳಾಗಿರುವುವೆಂಬುದನರುಹುವ ಶಿವನೇ ತನ್ನ ಚಿಚ್ಛಕ್ತಿಯ ಸ್ಫುರಣದಿಂದ ಮಹಾಲಿಂಗಸ್ಥಲವಾದನು. ಅದಕ್ಕೆ ಐಕ್ಯಸ್ಥಲವೇ ಉಪಾಸಕವಾಗಿರುವುದು. ಆ ಮಹಾಲಿಂಗದಲ್ಲಿ ಪರಾಶಕ್ತಿಯ ಸ್ಫುರಣದಿಂದ ಪ್ರಸಾದಲಿಂಗವುದಯಿಸಿ ಅದಕ್ಕೆ ಶರಣಸ್ಥಲವೇ ಉಪಾಸಕವಾಗಿರುವುದು. ಆ ಪ್ರಸಾದಲಿಂಗದಲ್ಲಿ ಆದಿಶಕ್ತಿ ಸ್ಫುರಣದಿಂದ ಜಂಗಮಲಿಂಗವುದಯಿಸಿ ಅದಕ್ಕೆ ಪ್ರಾಣಲಿಂಗಿಸ್ಥಲವು ಉಪಾಸಕವಾಗಿರುವುದು. ಆ ಜಂಗಮಲಿಂಗದಲ್ಲಿ ಇಚ್ಛಾಶಕ್ತಿಯ ಸ್ಫುರಣದಿಂದ ಶಿವಲಿಂಗವುದಯಿಸಿ ಅದಕ್ಕೆ ಪ್ರಸಾದಿಸ್ಥಲವು ಉಪಾಸಕವಾಗಿರುವುದು. ಆ ಶಿವಲಿಂಗದಲ್ಲಿ ಜ್ಞಾನಶಕ್ತಿಯ ಸ್ಫುರಣದಿಂದ ಗುರುಲಿಂಗವುದಯಿಸಿ ಅದಕ್ಕೆ ಮಾಹೇಶ್ವರ ಸ್ಥಲವು ಉಪಾಸಕವಾಗಿರುವುದು. ಆ ಗುರುಲಿಂಗದಲ್ಲಿ ಕ್ರಿಯಾಶಕ್ತಿಯ ಸ್ಫುರಣದಿಂದ ಆಚಾರಲಿಂಗವುದಯಿಸಿ ಅದಕ್ಕೆ ಭಕ್ತಸ್ಥಲವು ಉಪಾಸಕವಾಗಿರುವುದು.

ಹೀಗೆ ಹಿಂದೆ ಹೇಳಿದಂತೆ ಷಟ್‌ಸ್ಥಲ ಭೇದವನ್ನು ಹೊಂದಿದ ಅಂಗ (ಆತ್ಮ) ದಿಂದ ಆಕಾಶ ಹುಟ್ಟಿತು. ಆಕಾಶದಿಂದ ವಾಯುವು ಹುಟ್ಟಿತು. ಅದರಿಂದ ಅಗ್ನಿಯು, ಅದರಿಂದ ಜಲ, ಅದರಿಂದ ಭೂಮಿ, ಉದಯಿಸಿದವು. ಐಕ್ಯಾದಿ ಭಕ್ತಾಂತ್ಯಸ್ಥಲಗಳೆಲ್ಲಕ್ಕೂ ಕ್ರಮವಾಗಿ ಈ ಆತ್ಮಾದಿಗಳೇ ಅಂಗವಾಗಿಹವು. ಹೇಗೆಂದರೆ ಐಕ್ಯಸ್ಥಲಕ್ಕೆ ಆತ್ಮಾಂಗವು. ಶರಣಸ್ಥಲಕ್ಕೆ ಆಕಾಶಾಂಗವು. ಪ್ರಾಣಲಿಂಗಿಸ್ಥಲಕ್ಕೆ ವಾಯ್ವಾಂಗವು. ಪ್ರಸಾದಿಸ್ಥಲಕ್ಕೆ ಅಗ್ನ್ಯಂಗವು. ಮಾಹೇಶ್ವರ ಸ್ಥಳಕ್ಕೆ ಜಲಾಂಗವು. ಭಕ್ತಸ್ಥಳಕ್ಕೆ ಭೂಮ್ಯಂಗವು.

ಹೀಗೆ ಷಡ್ವಿಧ ಭಕ್ತಿ ಅಂಗ ಮೊದಲಾದವುಗಳಿಂದ ಕೂಡಿಕೊಂಡಿರುವ ಐಕ್ಯಾದಿ ಷಟ್ಸ್ಥಲಗಳಲ್ಲಿ ಪ್ರತಿಯೊಂದಕ್ಕೂ ಇರುವ ತಾರತಮ್ಯಾದಿ ಲಕ್ಷಣಗಳು ಹ್ಯಾಗೆಂದರೆ, ನಾನು ನೀನೆಂಬ ಭೇದವೂ, ದೇಹ ಪ್ರಾಣೇಂದ್ರಿಯಾದಿಗಳ ಭೇದವೂ ಇವು ಭ್ರಾಂತಿಜನ್ಯವಾದವುಗಳು. ಇವುಗಳೊಂದೂ ನನಗೆ ಸಂಬಂಧಪಟ್ಟವುಗಳಲ್ಲ ಎಂಬ ಭಾವದಿಂದ ಸುಖ ಸಾಮರಸ್ಯವನ್ನು ಪಡೆದಿರುವುದೇ ಐಕ್ಯ ಸ್ಥಳವೆನಿಸುವುದು. ಜ್ಞಾನ ಪ್ರಕಾಶದಿಂದ ತಾನೇ ಲಿಂಗವೆಂತಲೂ, ದೇಹೇಂದ್ರಿಯಾದಿಗಳೆಲ್ಲವೂ ನನ್ನ ರೂಪವೆಂತಲೂ ತಿಳಿದು ಸಕಲವಿಷಯಗಳಲ್ಲೂ ಕೂಡಿ ಆನಂದದಿಂದಿರುವುದೇ ಶರಣ ಸ್ಥಲವೆನಿಸಿಕೊಳ್ಳುವುದು. ಪ್ರಾಣೇಂದ್ರಿಯಾದಿಗಳೆಲ್ಲಾ ನಾನೆಂಬ ಭ್ರಾಂತಿಜನ್ಯವಾದ ಅಜ್ಞಾನವನ್ನು ಬಿಟ್ಟು ಇವುಗಳೆಲ್ಲವೂ ಲಿಂಗಮಯಗಳಾಗಿರುವುವು ಎಂಬುದಾಗಿ ತಿಳಿದು ತದೇಕಾಯತ್ತ ಮಾನಸದಿಂದಿರುವುದೇ ಪ್ರಾಣಲಿಂಗಿಸ್ಥಲವೆನಿಸುವುದು. ಪ್ರತಿಯೊಂದು ಇಂದ್ರಿಯಗಳ ಮುಖದಿಂದಲೂ ತಾನು ಅನುಭವಿಸುವ ಪದಾರ್ಥಗಳನ್ನು ಮೊದಲು ಲಿಂಗಕ್ಕರ್ಪಿಸಿ ಆ ಬಳಿಕ ಅದನ್ನು ಭಕ್ತಿ ಪುರಸ್ಸರವಾಗಿ ಲಿಂಗ ಮುಖದಿಂದ ತಾನು ಪರಿಗ್ರಹಿಸುವುದೇ ಪ್ರಸಾದಿಸ್ಥಲವೆನಿಸುವುದು. ಆಸ್ತಿಕ್ಯ ಬುದ್ಧಿಯಿಂದಲೂ, ಲಿಂಗಪೂಜಾದಿ ನಿತ್ಯವ್ರತದಿಂದಲೂ ಸತ್ಯಧರ್ಮಶೌಚಾದಿ ಸದಾಚಾರಗಳಿಂದಲೂ ಕೂಡಿ ಲಿಂಗೈಕ್ಯನಿಷ್ಠನಾಗಿ ವೀರಶೈವ ವ್ರತ ತತ್ಪರನಾಗಿರುವುದೇ ಮಾಹೇಶ್ವರ ಸ್ಥಲವೆನಿಸಿಕೊಳ್ಳುವುದು. ದೇಹ ಪ್ರಾಣೇಂದ್ರಿಯಾದಿಗಳೆಲ್ಲವೂ ಸತ್ಯವೆಂಬಂತೆ ತೋರುತ್ತಿದ್ದರೂ ಅಸ್ಥಿರವಾದವುಗಳೆಂದೇ ತಿಳಿದು ಚಿತ್ತವನ್ನು ಸದಾ ಭಕ್ತಿ ಕ್ರಿಯಾಚರಣೆಯಲ್ಲೇ ಅಳವಡಿಸಿರುವುದು ಭಕ್ತಸ್ಥಲವೆನಿಸಿಕೊಳ್ಳುವುದು.

ಇದು ವರಿವಿಗೂ ಆಚಾರಲಕ್ಷಣಾದಿಗಳು ಷಟ್ಸ್ಥಲಗಳಿಗೆ ಬೇರೆ ಬೇರೆಯಾಗಿ ತಿಳುಹಿದ್ದಾಯಿತಷ್ಟೆ. ಇವಾರರಲ್ಲಿ ಮೂರು ಜ್ಞಾನಾತ್ಮಕಗಳು, ಮೂರು ಕ್ರಿಯಾತ್ಮಕಗಳಾಗಿರುವುವು. ಐಕ್ಯ, ಶರಣ, ಪ್ರಾಣಲಿಂಗಿ ಈ ಮೂರು ಜ್ಞಾನಾತ್ಮಕಗಳಾಗಿರುವುವು. ಪ್ರಸಾದಿ, ಮಾಹೇಶ್ವರ, ಭಕ್ತ ಈ ಮೂರು ಕ್ರಿಯಾತ್ಮಕಗಳಾಗಿರುವವು. ಲಿಂಗಸ್ಥಲಗಳೆಲ್ಲವೂ ಉಪಾಸ್ಯವೆಂತಲೂ, ಅಂಗಸ್ಥಲಗಳೆಲ್ಲವೂ ಉಪಾಸಕವೆಂತಲೂ ಈ ಮೊದಲೇ ತಿಳುಹೋಣವಾಗಿದೆ. ಆದರಂತೆಯೇ ಲಿಂಗಾಂಗಸ್ಥಲಗಳನ್ನು ಪೂಜ್ಯಪೂಜಕ, ಸೇವ್ಯಸೇವಕಗಳೆಂದು ತಿಳಿಯಬೇಕು. ಉಪಾಸಕಗಳಾದ ಅಂಗಸ್ಥಲ

ಗಳು ತಮ್ಮ ತಮ್ಮ ಉಪಾಸ್ಯಸ್ಥಲಗಳನ್ನು ಸಕ್ರಮವಾಗಿ ಪ್ರತಿಯೊಂದೊಂದೂ ಸದ್ಭಾವ, ಸುಜ್ಞಾನ, ಸುಮನಸ್ಸು, ನಿರಹಂಕಾರ, ಸುಬುದ್ಧಿ, ಸುಚಿತ್ತಗಳೆಂಬ ಹಸ್ತಗಳಿಂದ ಪೂಜಿಸಿ ಹೃದಯ, ಶ್ರೋತ್ರ, ತ್ವಕ್, ಚಕ್ಷು, ಜಿಹ್ವೆ, ಘ್ರಾಣ ಇವುಗಳ ಮುಖೇನ- ಪರಿಣಾಮ, ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ದ್ರವ್ಯಗಳನ್ನು ಸ್ವೀಕರಿಸಿ ತತ್ಪ್ರಸಾದ ಸುಖವನ್ನು ಅನುಭವಿಸುವನೆಂದರಿಯಬೇಕು.

ಈ ಹಿಂದೆ ಹೇಳಿದ ಭಕ್ತಾದಿ ಐಕ್ಯಾಂತಸ್ಥಲಗಳನ್ನು ನಿವೃತ್ತಿಮಾರ್ಗರೀತ್ಯಾ ವಿವೇಚಿಸಿದರೂ ಈ ಪಂಚಮಹಾಭೂತಾತ್ಮಕವಾದೀ ಶರೀರದಲ್ಲಿ ಆಧಾರ, ಸ್ವಾಧಿಷ್ಠಾನ, ಮಣಿಪೂರಕ ಅನಾಹತ, ವಿಶುದ್ಧಿ, ಆಜ್ಞಾ, ಎಂಬಾರು ಚಕ್ರಗಳಿವೆಯೆಂಬುದು ಸರ್ವಶೃತವೇ ಇದೆಯಷ್ಟೆ. ಇವುಗಳಲ್ಲನುಕ್ರಮವಾಗಿ ೪-೬-೧೦-೧೨-೧೬-೨ ದಳಗಳಿರುವುವು. ಈ ಪ್ರತಿಯೊಂದು ಚಕ್ರಗಳ ದಳಗಳಲ್ಲಿ ಅಂದರೆ, ಆಧಾರಚಕ್ರದ ದಳಗಳಲ್ಲಿ ವ, ಶ, ಷ, ಸ, ಸ್ವಾಧಿಷ್ಠಾನಚಕ್ರದಳಗಳಲ್ಲಿ ಬ, ಭ, ಮ, ಯ, ರ, ಲ, ಮಣಿಪೂರಕ ಚಕ್ರದಳಗಳಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ, ಅನಾಹತ ಚಕ್ರದ ದಳಗಳಲ್ಲಿ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ವಿಶುದ್ಧಿ ಚಕ್ರದಳಗಳಲ್ಲಿ ಅ, ಆ, ಇ, ಈ, ಉ, ಊ, ಋ, ೠ, ಎ, ಏ, ಐ, ಒ, ಓ, ಔ, ಅಂ, ಅಃ, ಆಜ್ಞಾಚಕ್ರದಳಗಳಲ್ಲಿ ಹಂ, ಕ್ಷಂ, ಎಂಬ ಪ್ರಣವಗಳಿರುವುವು. ಹಾಗೂ ಇವುಗಳ ಮಧ್ಯದ ದಳಗಳಲ್ಲಿ ಯ, ವಾ, ಶಿ, ಮ, ನ, ಓಂ, ಎಂಬ ಪ್ರಣವಗಳು ನೆಲಸಿರುವುವು. ಇವುಗಳೊಳಗಿನ "ನ" ಕಾರಕ್ಕೆ ಆಚಾರಲಿಂಗವೆಂತಲೂ, ಮಕಾರಕ್ಕೆ ಗುರುಲಿಂಗವೆಂತಲೂ ಶಿಕಾರಕ್ಕೆ ಶಿವಲಿಂಗವೆಂತಲೂ, ವಾಕಾರಕ್ಕೆ ಜಂಗಮಲಿಂಗವೆಂತಲೂ ಯಕಾರಕ್ಕೆ ಪ್ರಸಾದಲಿಂಗವೆಂತಲೂ, ಓಂಕಾರಕ್ಕೆ ಮಹಾಲಿಂಗವೆಂತಲೂ ಸಂಜ್ಞೆಗಳುಂಟು. ಇವುಗಳಿಗೇ ಷಡ್ಲಿಂಗಗಳೆನ್ನುವರು. ಮತ್ತು ಈ ಷಟ್ಪ್ರಣವಗಳಲ್ಲಿಯ ಓಂಕಾರವೇ ತ್ವಕ್ಕಿನಲ್ಲಿಯೂ, ನಕಾರವೇ ರಕ್ತದಲ್ಲಿಯೂ, ಮಕಾರವೇ ಮಾಂಸದಲ್ಲಿಯೂ, ಶಿಕಾರವೇ ಮೇಧಸ್ಸಿನಲ್ಲೂ, ವಾಕಾರವೇ ಅಸ್ಥಿಯಲ್ಲಿಯೂ, ಯಕಾರವೇ ಮಜ್ಜದಲ್ಲೂ ವ್ಯಾಪಿಸಿಕೊಂಡಿರುವುವು. ಇವುಗಳಿಂದ ತಿಳಿವುದೇನೆಂದರೆ, ಈ ಶರೀರವೆಲ್ಲಾ ಮಂತ್ರಮಯವಾಗಿದೆಯೆಂದು ಅರಿಯಬೇಕು. ಅಂತೇ ನಮ್ಮ ವೀರಶೈವರು ಮಂತ್ರಮಯ ಶರೀರಿಗಳೆಂದು ಹೇಳಿಕೊಳ್ಳುವರು. ಅಂದರೆ ಶರೀರದೊಳಗಣ ಜೀವಾ

ತ್ಮನು ಹಾರಿಹೋದರೂ ಅದಕ್ಕೆ ಅಪವಿತ್ರತೆಯುನ್ನೀಯುದೇ ಆ ಪವಿತ್ರ ಮಂತ್ರಸಂಸರ್ಗದಿಂದ ದೇಹವೂ ಕೂಡ ಪಾವಿತ್ರ್ಯವೆಂದೇ ಪ್ರೇತಸೂತಕವಿಲ್ಲೆಂದು ಹೇಳಿಕೊಳ್ಳುವರು. ಇದಿರಲಿ.

ಈ ಪೂರ್ವೋಕ್ತ ವಿಷಯಗಳನ್ನೆಲ್ಲಾ ಸಂಗ್ರಹಿಸಿ ಉಪಾಸ್ಯೋಪಾಸಕ ಲಕ್ಷಣಾದಿ ಕ್ರಮಗಳನ್ನು ಸರಿಪಡಿಸಿನೋಡಿ ಮುಖ್ಯಾಂಶವನ್ನು ವಿಚಾರಪೂರ್ವಕ ಹೊರಹೊರಡಿಸಿದರೆ? :—

ಭಕ್ತನು--ಆಧಾರಚಕ್ರದಲ್ಲಿ ಶ್ರದ್ಧಾಭಕ್ತಿಯೊಡನೆ ಕ್ರಿಯಾಶಕ್ತಿಸಮೇತವಾದ ಆಚಾರಲಿಂಗವನ್ನು ಸುಚಿತ್ತ ಹಸ್ತದಿಂದ ಪೂಜೆಗೈದು ನಾಸಿಕಮುಖೇಣ ಗಂಧದ್ರವ್ಯವನ್ನು ಆಚಾರಲಿಂಗಕ್ಕರ್ಪಿಸಿ ತತ್ಪ್ರಸಾದಸೇವನೆಯಿಂದ ಸದ್ಭಕ್ತಿಯೆಂಬ ಸಿದ್ಧಿಯನ್ನು ಪಡೆದು ಪೃಥ್ವ್ಯಂಗದಲ್ಲಿ ತದಾನಂದ ಸುಖವನ್ನನುಭವಿಸುವನು.

ಮಾಹೇಶ್ವರನು--ಸ್ವಾಧಿಷ್ಠಾನಚಕ್ರದಲ್ಲಿ ನಿಷ್ಠಾಭಕ್ತಿಯೊಡನೆ ಜ್ಞಾನಶಕ್ತಿಸಮೇತವಾದ ಗುರುಲಿಂಗವನ್ನು ಸುಬುದ್ಧಿಯೆಂಬ ಹಸ್ತದಿಂದ ಪೂಜೆಗೈದು ಜಿಹ್ವಾಮುಖೇಣ ರಸಪದಾರ್ಥವನ್ನು ಆ ಗುರುಲಿಂಗಕ್ಕರ್ಪಿಸಿ ತತ್ಪ್ರಸಾದಸೇವನೆಯಿಂದ ಕರ್ಮಕ್ಷಯವೆಂಬ ಸಿದ್ಧಿಯನ್ನು ಪಡೆದು ಜಲಾಂಗದಲ್ಲಿ ತದಾನಂದ ಸುಖವನ್ನನುಭವಿಸುವನು.

ಪ್ರಸಾದಿಯು– ಮಣಿಪೂರಕ ಚಕ್ರದಲ್ಲಿ ಅವಧಾನಭಕ್ತಿಯೊಡನೆ ಇಚ್ಛಾಶಕ್ತಿಸಮೇತವಾದ ಶಿವಲಿಂಗವನ್ನು ನಿರಹಂಕಾರ ಹಸ್ತದಿಂದ ಪೂಜೆಗೈದು ನೇತ್ರಮುಖೇಣ ರೂಪದ್ರವ್ಯವನ್ನು ಆ ಶಿವಲಿಂಗಕ್ಕರ್ಪಿಸಿ ತತ್ಪ್ರಸಾದಸೇವನೆಯಿಂದ ನಿರ್ಮಲಮತಿಯೆಂಬ ಸಿದ್ಧಿಯನ್ನು ಪಡೆದು ಅಗ್ನ್ಯಂಗದಲ್ಲಿ ತದಾನಂದ ಸುಖವನ್ನು ಅನುಭವಿಸುವನು.

ಪ್ರಾಣಲಿಂಗಿಯು– ಅನಾಹತ ಚಕ್ರದಲ್ಲಿ ಅನುಭಾವಭಕ್ತಿಯೊಡನೆ ಆದಿಶಕ್ತಿಸಮೇತವಾದ ಜಂಗಮಲಿಂಗವನ್ನು ಸುಮನೋಹಸ್ತದಿಂದ ಪೂಜೆಗೈದು ತ್ವಚಮುಖೇಣ ಸ್ಪರ್ಶದ್ರವ್ಯವನ್ನು ಆ ಜಂಗಮಲಿಂಗಕ್ಕರ್ಪಿಸಿ ತತ್ಪ್ರಸಾದ ಸೇವನೆಯಿಂದ ಸುವಿಚಾರವೆಂಬ ಸಿದ್ಧಿಯನ್ನು ಪಡೆದು ವಾಯ್ವಾಂಗದಲ್ಲಿ ತದಾನಂದ ಸುಖವನ್ನನುಭವಿಸುವನು.

ಶರಣನು-- ವಿಶುದ್ಧಿಚಕ್ರದಲ್ಲಿ ಆನಂದಭಕ್ತಿಯೊಡನೆ ಪರಾಶಕ್ತಿಸಮೇತವಾದ ಪ್ರಸಾದಲಿಂಗವನ್ನು ಸುಜ್ಞಾನ ಹಸ್ತದಿಂದ ಪೂಜೆಗೈದು

ಶ್ರೋತ್ರ ಮುಖೇಣ ಶಬ್ದದ್ರವ್ಯವನ್ನು ಆ ಪ್ರಸಾದಲಿಂಗಕ್ಕರ್ಪಿಸಿ ತತ್ಪ್ರಸಾದ ಸೇವನೆಯಿಂದ ದರ್ಪಸಂಕ್ಷಯವೆಂಬ ಸಿದ್ಧಿಯನ್ನು ಪಡೆದು ಆಕಾಶಾಂಗ ದಲ್ಲಿ ತದಾನಂದಸುಖವನ್ನನುಭವಿಸುವನು.

ಐಕ್ಯನು-- ಆಜ್ಞಾಚಕ್ರದಲ್ಲಿ ಸಮರಸಭಕ್ತಿಯೊಡನೆ ಚಿಚ್ಛಕ್ತಿ ಸಮೇತ ವಾದ ಮಹಾಲಿಂಗವನ್ನು ಸದ್ಭಾವಹಸ್ತದಿಂದ ಪೂಜೆಗೈದು ಹೃದಯ ಮು ಖೇಣ ಪರಿಣಾಮ ದ್ರವ್ಯವನ್ನು ಆ ಮಹಾಲಿಂಗಕ್ಕರ್ಪಿಸಿ ತತ್ಪ್ರಸಾದ ಸೇವ ನೆಯಿಂದ ಸಮ್ಯಜ್ಞಾನವೆಂಬ ಸಿದ್ಧಿಯನ್ನು ಪಡೆದು ಆತ್ಮಾಂಗದಲ್ಲಿ ತದಾ ನಂದಸುಖವನ್ನನುಭವಿಸಿ ತದನಂತರ ಮೂವತ್ತಾರನೆಯ ತತ್ವವಾದ ಶಿವತ ತ್ವದಲ್ಲಿ ಬೆರೆಯುವುದೇ ಕ್ರಿಯಾಜ್ಞಾನೈಕ್ಯ ಶ್ರೀ ಲಿಂಗಾಂಗಸಾಮರಸ್ಯವು.

ಏತದ್ವಿಷಯವು ಸಂಪೂರ್ಣ ವೇದ್ಯವಾಗಬೇಕಾಗಿದ್ದರೆ ಶ್ರೀ ಸದ್ಗುರು ನಾಥನ ಕೃಪೆಯ ಹೊರತು ಗತ್ಯಂತರವೇ ಇಲ್ಲ- ಮುಖ್ಯಾಂಶವಿಷ್ಟೆ

ತತ್ಪದೇನೋಚ್ಯತೇ ಲಿಂಗಂ ತ್ವಂ ಪದೇನಾಂಗಮೀರಿತಂ।
ಅನಯೋರೈಕ್ಯ ಭಾವೋ ಽಯಂಸಂಬಂಧೋಽ ಸಿಪದೇನಚ॥

ಎಂಬಂತೆ, ಲಿಂಗ ಶಬ್ದಕ್ಕೆ "ತತ್" ಪದವಾಚ್ಯ ಬ್ರಹ್ಮ (ಲಿಂಗ) ಎಂದರ್ಥ. ಅಂಗಶಬ್ದಕ್ಕೆ "ತ್ವಂ" ಪದವಾಚ್ಯ ಜೀವ (ಅಂಗ) ಎಂದರ್ಥ. ಲಿಂಗ, ಅಂಗ ಅಥವಾ ಶಿವ, ಜೀವ ಇವುಗಳ ಸಂಯೋಗಕ್ಕೆ "ಅಸಿ" ಅಥವಾ ಸಾಮರ ಸ್ಯವು. ಲಿಂಗವೇ ಸನ್ಮಾತ್ರ, ಅಂಗವೇ ಚಿನ್ಮಾತ್ರ ಇವುಗಳ ಸಾಮರಸ್ಯವೇ ಆನಂದ ಮಾತ್ರವು. ಲಿಂಗವೇ ನಾದ, ಅಂಗವೇ ಬಿಂದು. ಇವೆರಡರ ಸಾಮ ರಸ್ಯವೇ ಕಳೆಯು. ಲಿಂಗವೇ ಮಂತ್ರ, ಅಂಗವೇ ಕ್ರಿಯೆ ಇವೆರಡರ ಕೂಡು ವಿಕೆಯೇ ಸಾಮರಸ್ಯವು. ಲಿಂಗವೇ ಪುರುಷ, ಅಂಗವೇ ಪ್ರಕೃತಿ ಇವೆರಡರ ಸಂಯೋಗವೇ ಸಾಮರಸ್ಯವು. ಲಿಂಗವೇ ಅಕಾರ, ಅಂಗವೇ ಉಕಾರ ಇವೆ ರಡರ ಸಾಮರಸ್ಯವೇ ಮಕಾರವಾಗಿ ಓಂಕಾರ ಪ್ರಣವವಾಗಿರುವುದು. ಲಿಂ ಗವೇ ಕ್ಷೇತ್ರ, ಅಂಗವೇ ಬೀಜ ಇವುಗಳ ಸಂಯೋಗವೇ ವೃಕ್ಷವು. ಕ್ಷೇತ್ರ, ಬೀಜ, ವೃಕ್ಷಗಳಿಗೆ ಸದಾ ಸಂಯೋಗವೇ ಹೊರತು ವಿಯೋಗವಿಲ್ಲ. ಇದ ರಂತೆ ಲಿಂಗಾಂಗಗಳಿಗೆ ಸದಾ ಸಾಮರಸ್ಯವೇ ಹೊರತು ವಿಯೋಗವಿಲ್ಲ ಸಾಮರಸ್ಯವೆಂದರೆ, ದ್ವೈತಭಾವನಾಶ ಆ ನಾಶವೇ ನಿವೃತ್ತಿ, ಆ ನಿವೃ ತ್ತಿಯೇ ವಿಶ್ರಾಂತಿ, ಆ ವಿಶ್ರಾಂತಿಯೇ ಐಕ್ಯ ಅಥವಾ ಮುಕ್ತಿ.

"ನಿರ್ಭಾವೋ ನಿಜಲಿಂಗೈಕ್ಯಶ್ಶಿಖಿಕರ್ಪೂರಯೋಗವತ್"

ಎಂಬ ಹಾಗೆ ಉರಿಕರ್ಪೂರಗಳೆರಡೂ ಬೆರೆದಂತೆ ಶಿವಜೀವತ್ವಗಳೆರಡೂ ಬೆರೆದು ತದ್ರೂಪತ್ವವಳಿವುದೇ ಮುಕ್ತಿ ಸುಖಾನಂದವೆನಿಸಿಕೊಳ್ಳುವುದು. ಈ ಮುಕ್ತಿಸುಖವೆನಿಸಿದ ಲಿಂಗಾಂಗ ಸಾಮರಸ್ಯಕ್ಕೆ ಶ್ರೀ ಶಿವಯೋಗವೆಂಬ ಮತ್ತೊಂದು ಪರ್ಯಾಯನಾಮವುಂಟು. ಶಿವಯೋಗವೆಂದರೂ ಲಿಂಗಾಂಗ ಸಾಮರಸ್ಯಕ್ಕೆ ವ್ಯತಿರೇಕವಿಲ್ಲವೆಂಬುವುದನ್ನಿಷ್ಟು ವಿವೇಚಿಸಿ ನೋಡುವೆನು. "ಶಿವಯೋಗ" ಎಂಬ ಶಬ್ದದಲ್ಲಿ ಶಿವ ಮತ್ತು ಯೋಗ ಎಂಬೆರಡು ಪದಗಳಿ ನಯುಷ್ಟೆ. ಇವುಗಳಲ್ಲಿಯ ಯೋಗ ಶಬ್ದವು "ಯುಜ್" ಎಂಬ ಮೂಲಧಾತುವಿನಿಂದ ಹುಟ್ಟಿ ರೂಪಾಂತರವ ಪಡೆದು ಕೂಡಿಸು ಅಥವಾ ಜೋಡಿಸು ಎಂಬರ್ಥವನ್ನು ಬೋಧಿಸುವುದು. ಈ ಯೋಗ ಶಬ್ದವನ್ನು ಬೇಕಾದ ಶಬ್ದಗಳೊಂದಿಗೆ ಸೇರಿಸಿಕೊಂಡು ಬೇಕಾದ ಹಾಗೆ ಅರ್ಥ ಮಾಡಿಕೊಳ್ಳಬಹುದು. ಇಲ್ಲಿ ಶಿವ ಶಬ್ದದೊಡನೆ ಯೋಗ ಶಬ್ದವು ಕೂಡಿಕೊಂಡಿರುವುದರಿಂದ "ಶಿವಯೋಗ" ವೆನಿಸಿಕೊಂಡಿದೆ. ಶಿವಯೋಗವೆಂದರೇ, ಜೀವಾತ್ಮ ಪರಮಾತ್ಮರ ಐಕ್ಯ ಅಥವಾ ಶಿವಜೀವೈಕ್ಯ ಅಂದರೆ, ಶಿವನಲ್ಲಿ ಜೀವನು ಕೂಡುವಿಕೆಗೆ ಶಿವಯೋಗ. ಅಂದಮೇಲೆ ಈ ಶಿವಯೋಗಕ್ಕೂ ಪೂರ್ವೋಕ್ತಲಿಂಗಾಂಗ ಸಾಮರಸ್ಯಕ್ಕೂ ಏನು ಭೇದವಿದೆ? "ಹಾಡಿದ್ದೇ ಹಾಡೋ ಕಿಸುಬಾಯಿದಾಸಾ" ಎಂಬ ಹಾಗೆ ಬರೆದುದ್ದನ್ನೇ ಬಾರಿ ಬಾರಿಗೂ ಬರೆವುದಕ್ಕೆಂತಲೂ ಒಂದೇ ಮಾತಿನಿಂದ ಉಭಯತಾಪಿ ತಿಲಾಂಶವಾದರೂ ಭೇದವಿಲ್ಲೆಂದು ಹೇಳಿಬಿಡುವೆನು.

ಕೀಟೋ ಭ್ರಮರಯೋಗೇನ ಭ್ರಮರೋಭವತಿ ಧ್ರುವಂ
ಮಾನವಶ್ಶಿವಯೋಗೇನ ಶಿವೋಭವತಿ ನಿಶ್ಚಯಾತ್ ॥

ಎಂಬುವಂತೆ, ಈ ಶಿವಯೋಗ ಸಾಧಕನು ತಾನೇ ಶಿವನಾಗಿ ಹೋಗುವನು. ಈ ಶಿವಯೋಗವೆಂದರೇನು, ಸಾಮಾನ್ಯವೇ? ಬರೇ ಬಾಯಿಮಾತಿಗೇನು ಬರುವವೇ? ಅಬ್ಬಬ್ಬಾ! ಅಬ್ಬಬ್ಬಾ!! ಅಧೋಮುಖವಾಗಿ ಹರಿಯುವ ಪ್ರವಾಹವನ್ನು ತಡೆದು ಊರ್ಧ್ವಗತಿಗೊಯ್ಯುವುದೆಂತೋ? ಅಂತೇ ಸ್ವಭಾವತಃ (ಜನ್ಮತಃ) ಬಾಹ್ಯಾಕಾರವುಳ್ಳ ಚಿತ್ತವೃತ್ತಿಗಳನ್ನು ನಿರೋಧಿಸಿ ಅಂತರಾಕಾರವೆನಿಸಿದ ಶಿವಾಕಾರ ವೃತ್ತಿಗೊಯ್ಯಬೇಕಾದರೆ ಸುಲಭ ಸಾಧ್ಯವೇ? ಹಾಯ್! ಹಾಯ್!! ಇದು ಗಾಳಿಯನ್ನು ಮೊಟ್ಟೆಗಟ್ಟಿದಂತೆಯೇ ಸರಿ. ಈ ದುರ್ಗಮವಾದ ಶ್ರೀ ಶಿವಯೋಗವು ಆರಿಗೆ ಸಾಧ್ಯವೋ ಅವರೇ ವೀರಗುರು. ಶೂರಚರ, ಧೀರಶಿವಯೋಗಿ. ಹೆಚ್ಚೇನು? ಅವರೇ ನಿಜ ವೀರಶೈವರು. ಅಂಥವರಿಗೆ--

ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರೀ।
ಇತರೇಷಾಂತು ಶೈವಾನಾಂ ಮುಕ್ತಿರ್ಜನ್ಮತ್ರಯೆಽಭವೇತ್ ॥

ಎಂದಾಗಮ ವಾಕ್ಯವು ಸಾರುತ್ತಿಹುದು. ತದಿತರೆಯುವರು ವೀರಶೈವ ರೇಗೆಹಾಗುವರು. ಇಂಥವರಿಗೆ ಶಿವಯೋಗದ ಮುಕ್ತಿ ಸುಖವು ತಾನೇ ಹ್ಯಾಗೆ ಸಾಧ್ಯವಾದೀತು? ಶಿವಯೋಗಿಯೆಂಬ ನಾಮಧೇಯವಾದರೂ ಹ್ಯಾಗೆ ಬಂದೀತು? ಮದ್ಬಾಂಧವರೇ, ಈ ಶಿವಯೋಗಸಿದ್ಧಿಯಿಂದ ಆವುದು ತಾನೇ ಅಸಾಧ್ಯ? "ಕ್ರಿಯಾಸಿದ್ಧಿಃ ಸತ್ವೇ ಭವತಿ ಮಹತಾಂನೋಪ ಕರಣೆ" ಎಂಬುವಂತೆ ಈ ಶಿವಯೋಗ ಸಿದ್ಧಿಯಿಂದ ಎಲ್ಲಾ ಕಾರ್ಯ ಗಳೂ ಮಹತ್ಫಲದಾಯಕಗಳಾಗುವವು. ವಿಷಯ ಮೋಹದಿಂದ ವಿವೇಕ ಭ್ರಷ್ಟರಾದ ನಮ್ಮಂಥವರಿಗೆ ಇಂಥಾ ಯೋಗ್ಯ ಮಾರ್ಗದರ್ಶಕರೊಬ್ಬರು ಮಾತ್ರ ನಮಗೆ ಬೇಕೇ ಬೇಕು. ಅವರ ಮಾರ್ಗವನ್ನು ನಿರೀಕ್ಷಿಸುತ್ತಾ ತಲೆಯಮೇಲೆ ಕೊಯ್ಯೊತ್ತುಕೊಂಡು ಸೋಮಾರಿಯಂತೆ ನಾವು ವೃಥಾ ಕೂಡುವುದಕ್ಕಿಂತಲೂ ತಿಳಿದಷ್ಟು ನಿಜವಾದ ಮಾರ್ಗವನ್ನು ಹಿಡಿದು ನಡೆಯುತ್ತಿದ್ದರೆ ಸತ್ಯವಾಗಿ ಮಾರ್ಗದರ್ಶಕರು ( ಸಿಕ್ಕುವರು ) ಬರುವರು. ಅಂಥವರ ಆಜ್ಞಾ ಪರಿಪಾಲನೆಯಿಂದ ಇಲಿಯು ಹೋಗಿ ಹುಲಿಯಾಗು ವೆವು. ಬಹೂನೋಕ್ತೈನಕಿಲ? ದಿವ್ಯ ಜೀವಜ್ಯೋತಿಗಳೇ ನಾವಾಗುವೆವು. ಆ ಸತ್ಯ ತತ್ವಜ್ಞರ ಆಜ್ಞೆಯೇ ನಮ್ಮಯ ತಾರಕವಾದ ಜ್ಞಾನದರ್ಶಕವು. ನಾವು ತಾದಾತ್ಮ್ಯ ವಿಚಾರದಿಂದಿದ್ದರೆ ನಮ್ಮ ಧರ್ಮವು ಜಾಗ್ರತೆಗೊಂಡು ಕ್ಷುದ್ರಭೇದಭಾವಗಳೆಲ್ಲಾ ಅಳಿದು ಹೋಗುವವು. ಇವಳಿಯದ ವಿನಹ ಧರ್ಮಸುಧಾರಿಸುವೆವೆಂದು ಬಡಬಡಿಸುವುದು ಶಿವಪೂಜೆಯಲ್ಲಿ ಕರಡೀ ಮರಿ ಬಿಟ್ಟಂತೆ ಬರೇ ಗಡಬಿಡಿಯೇ ಸರಿ. ನಮ್ಮ ಧರ್ಮ ಸುಧಾರ ಣಕ್ಕೆ ಶಿವಯೋಗಸಾನಂದವೇ ಬೇಕು. ಶ್ರೀ ಕಲ್ಯಾಣ ಬಸವೇಶ್ವರನೂ ಕೂಡ ಈ ಶಿವಯೋಗದಲ್ಲಿದ್ದುಕೊಂಡು ಸಾನಂದನಾಗಿ ಇತರೆಯುವರಿಗೂ ಇದನ್ನು ತೋರಿಸಿ ಪರಮತಾರಕನಾಗಿರುವುದರಿಂದ ಶ್ರೀ ಶಿವಯೋಗಿ ಯಾಗದೇ, ಶ್ರೀ ಸದ್ಗುರುವಾಗದೇ ಏನು ಮಾಡ್ಯಾನು? ಬಹಳವೇಕೆ? ನಮ್ಮ ಧರ್ಮದಲ್ಲಿ ಯಾರೇ ಇರಲೊಲ್ಲರೇಕೆ? (ಬ್ರಹ್ಮಚಾರಿಗಳಾಗಿರಲಿ, ಗ್ರಹಸ್ಥರಿರಲಿ, ವಾನಪ್ರಸ್ಥರಿರಲಿ, ಯತಿಗಳಿರಲಿ, ಅಥವಾ ಸ್ತ್ರೀಯರೇ ಆಗಿ ರಲೊಲ್ಲರೇಕೆ? ಆ ಕುಲ, ಈ ಕುಲ, ಗೋಕುಲವೆನ್ನದೇ) ಬಾಹ್ಯವ್ಯವ ಹಾರಗಳನ್ನು ಮರೆತು ಅಂತರ್ವ್ಯವಹಾರಗಳಲ್ಲಿ ತೊಡಗಿರುವರೋ ಅವರೇ

ಶ್ರೀ ಗುರು, ಅವರೇ ಶ್ರೀ ಶಿವಯೋಗಿಗಳು. ತದಿತರೆಯುವರಲ್ಲೆಂಬುದಕ್ಕೆ ನಾನೇಕೆಬೇಕು? ಈ ಶ್ಲೋಕಗಳೇ ಪ್ರಾಮಾಣ್ಯವಾಗಿವೇ.

ಯೋಽಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವಯೋಗತಃ
ನಿರ್ಧೂತಮಲಸಂಸ್ಪರ್ಶಾಸ್ತೇಸ್ಮೃತಾಶ್ಶಿವಯೋಗಿನಃ ॥೩೭॥
ಘೋರ ಸಂಸಾರ ತಿಮಿರ ಪರಧ್ವಂಸನ ಕಾರಣಂ
ಯೇಷಾಮಸ್ತಿ ಶಿವಜ್ಞಾನಂ ತೇಮತಾಶ್ಶಿವಯೋಗಿನಃ ॥೩೮॥

ಸಿ॥ ಶಿ॥ ೧೧ ಪರಿ

ಜಿತಕಾಮಾಜಿತಕ್ರೋಧಾ ಮೋಹಗ್ರಂಥಿವಿಭೇದಿನಃ
ಸಮಲೋಷ್ಟಾಶ್ಮಕನಕಾಃ ಸಾಧವಶ್ಶಿವಯೋಗಿನಃ ॥
ಸಮಾಶತ್ರೌಚ ಮಿತ್ರೇಚ ಸಾಕ್ಷಾತ್ಕೃತ ಶಿವಾತ್ಮಕಾಃ
ನಿಸ್ಪೃಹಾನಿರಹಂಕಾರಾ ವರ್ತಂತೇತೇ ಶಿವಯೋಗಿನಃ ॥

ಓ ನಾಮಧೇಯು ನಾ ಜಗದ್ಗುರು, ನಾ ಗುರುಪಟ್ಟ, ನಾ ಸ್ಥಿರಪಟ್ಟ, ನಾ ಸ್ವಾಮಿ, ನಾ ಶಿವಯೋಗಿ, ನಾ ಶ್ರೇಷ್ಠ, ನಾ ಉಚ, ನಾ ಹೆಚ್ಚು ಎಂದೊದರಾಡುವ ಖೊಟ್ಟಿಗಳೇ, ನಿಮ್ಮ ನಾಮ ಧೇಯುವು ಅರ್ಥವಿಲ್ಲದ ಮಾತಿನಂತೆ ವ್ಯರ್ಥವಲ್ಲವೇ? ಹೆಸರು ಮಾತ್ರ ಹಸನು, ಮನಸ್ಸು ಮಾತ್ರ ಕಸುಗು, ಅರ್ಥಮಾತ್ರ ಯುಸುಗು. ಇದರಿಂದ ನಿಮಗೆ ಬಂದ ಫಲ ವೇನು? ಇನ್ನು ಮೇಲಾದರೂ ನಿಮ್ಮ ನಿಮ್ಮ ನಾಮಧೇಯುದ ಯಥಾರ್ಥವನ್ನು ಸಿದ್ಧಮಾಡಲೋಸುಗ ಸನ್ನದ್ಧರಾಗಿ ನಿಲ್ಲಿರಿ. ಇಲ್ಲೆಂದರೆ, ನಿಮ್ಮ ನಿಮ್ಮ ದುರಭಿಮಾನವನ್ನು ದೂರು ಮಾಡಿಕೊಂಡು ಸತ್ಪಥಗಾಮಿಗಳಾಗಿರಿ. ನಮ್ಮ ವೀರಶೈವರೆಲ್ಲರೂ ಸಮಾನಸ್ಕಂದರೆಂದು ತಿಳಿದು ಸಾಮರಸ್ಯಗೊಳಿಸಲು ಸಿದ್ಧರಾಗಿರಿ. ಇದಾರಪ್ಪಗೂ ಬಿಟ್ಟಿದ್ದಲ್ಲವೆಂಬುದನು ಮಾತ್ರ ಸರ್ವಥಾ ಎಂದೆಂದಿಗೂ ಮರೆಯಬೇಡಿರಿ. ಈ ಪೂರ್ವೋಕ್ತಲಿಂಗಾಂಗ ಸಾಮರಸ್ಯರೂಪ ಶಿವಯೋಗದಿಂದ ಭಕ್ತನೇ ಪ್ರಭೇದನಾಗುವನೆಂದೂ ಮತ್ತು "ತನ್ನ ಬಿಟ್ಟು ದೇವರಿಲ್ಲ ಮಣ್ಣು ಬಿಟ್ಟು ಮಡಿಕೆಯಿಲ್ಲ" ಎಂಬ ಗಾಥೋಕ್ತಿಯಂತೆ ಭಕ್ತಾದ್ವ್ಯತಿರಿಕ್ತ ಆದ ಆವರಣವೂ ಇಲ್ಲೆಂಬುದನ್ನೂ ಪುಷ್ಟೀಕರಿಸಿದ್ದೇನೆ. ಇದನು ನೋಡಿ ಇನ್ನು ಮೇಲಾದರೂ ಅ ಭೇದಾತ್ಮಕ ನಿಶ್ಚಯು ಬುದ್ಧಿಯುಳ್ಳವರಾಗಿರಿ. ವೀರಶೈವಭಾಂಧವರಿರಾ, ನಮ್ಮಲ್ಲಿ ಭೇದವೇ ಇಲ್ಲೆಂದು ಇಪ್ಪುಸಾರಿ ಹ್ಯಾಗೆ ಹ್ಯಾಗೆ

ಜಯಭೇರಿಯನ್ನು ಬಾರಿಸಲೀ? ಅಂತೇ, ನಮ್ಮಾರ್ಯ ಮಹಾತ್ಮಶಿವ ಶರಣರು ಬಹು ವರ್ಣಾತ್ಮಕ ಭಿನ್ನ ಭಾವದ ವೈದಿಕ ಧರ್ಮಕ್ಕೆ ಮಹ ತ್ವಕೊಡದೆ ಬಗ್ಗ ಹೊಡೆದು ಅಲ್ಪ ಶ್ರಮಕ್ಕೆ ಮಹತ್ಫಲದಾಯಕವಾದ ಅಂದರೆ,

ಅಲ್ಪಕ್ರಿಯಾ ಬಹುಫಲಂ ವೀರಶೈವಂ ಮಹೇಶ್ವರಿ।
ಇತರೇಷಾಂತು ಶೈವಾನಾಂ ಫಲಮಲ್ಪಂ ಬಹುಕ್ರಿಯಾ॥

ಎಂಬ ಹಾಗೆ ಕರ್ಮಗಳ ವಿಶೇಷತೊಡಕಿಲ್ಲದೇ ಜ್ಞಾನಪ್ರಧಾನವಾದ ಬಹುಜನ ಶುಲಭತಾರಕವಾದ ಏಕವರ್ಣಾತ್ಮಕ ವೈದಿಕ ಧರ್ಮವನ್ನು ಸ್ಥಾಪಿಸಿರುವರು. ಈ ಏಕವರ್ಣಾತ್ಮಕ ವೈದಿಕ ಧರ್ಮದಲ್ಲಿ ಜಾತ್ಯತಃ ಚತುರ್ವರ್ಣಗಳಿಲ್ಲದಿದ್ದರೂ ವೃತ್ಯತಃ ಚತುರ್ವರ್ಣದವರೂ ಆಗಬಹುದು. ಆದರೆ, ಭೇದಮಾತ್ರವಿಲ್ಲ. ಇಂತಿಂಥವರೇ ಹೀಗಾಗಬೇಕೆಂಬ ನಿಯ ಮನಿರ್ಬಂಧವೇನೂ ಇಲ್ಲ. ಯಾರಿಗೆ ಯಾವುವರಲ್ಲಿ ಆಸಕ್ತಿಯಿದೆಯೋ ಆ ಕಾಯಕೋದ್ಯೋಗವನ್ನು ಅವರು ಕೈಕೊಳ್ಳಬಹುದು. ಆದರೂ ಧಾರ್ಮಿಕ ಏಕವರ್ಣಾತ್ಮಕ ಕ್ರಿಯಾಜ್ಞಾನ ಕಟ್ಟಳೆಗಳನ್ನು ಮೀರದಿದ್ದ ರಾಯಿತು.

ಭಿನ್ನಭಾವಗಳನ್ನಳಿಸುವ ನಮ್ಮ ಧಾರ್ಮಿಕ ಕಟ್ಟೆಂದರೆ, "ದೀಕ್ಷೆ ಯು. ಈ ದೀಕ್ಷಾಕ್ರಮವು ನಮ್ಮ ಆಬಾಲವೃದ್ಧ ಸ್ತ್ರೀಪುರುಷರಾದಿಯಾಗಿ ಸರ್ವರಿಗೂ ಆಗಲಿಕ್ಕೇಬೇಕು. ದೀಕ್ಷೆಯಿಲ್ಲದೇ ಮೋಕ್ಷವಿಲ್ಲೆಂಬುದೇ ಶಾಸ್ತ್ರ ಕಾರರ ಮತ. ಇದಾದ ಮೇಲೆ ನಮ್ಮಲ್ಲಿ ಭೇದವಿನ್ನೆಲ್ಲಿಬಂತು? ಈ ದೀಕ್ಷೆ ಯಿಂದ ಗುರುವರನು ನೀನು ಪ್ರಕೃತಿ ತೊಡಕಿಗೆ ಸಿಲುಕಿದ ಜೀವನಲ್ಲ. ಹಾರಿನಿಂತ ಶಿವಸ್ವರೂಪಿಯೇ ನೀನೆಂದು ಬೋಧಿಸಿ ಜಾಡ್ಯವನ್ನು ಪರಿಹ ರಿಸಿದ ಮೇಲೆ ಭಿನ್ನಭಾವದ ಜಾತ್ಯಾದಿರೋಗವೆಲ್ಲಿ ಬರಬೇಕು? ಜ್ಯೋತಿಯು ವಿಡಿದು ಕತ್ತಲೆಯುನರಸುವರೇ? ಅಲ್ಲ! ಅಲ್ಲ!! ಹಲವು ತೆರನ ಕಟ್ಟಿಗೆ ಗಳಿಗೆ ಅಗ್ನಿ ತಗಲಿ ದಹನದಿಂದ ಎಲ್ಲವೂ ಏಕಸ್ವರೂಪವಾದ ಬೆಂಕಿಯೇ ಆಗಿತೋರುವಂತೆ ಪ್ರಾಕೃತ ಜೀವಿಗಳಿಗೆ ಗುರುಸಂಸ್ಕೃತ ದೀಕ್ಷೆಯೆಂಬ ಅಗ್ನಿಯು ತಗಲಿದ್ದೇ ಆದರೆ, ಪ್ರಾಕೃತ ಗುಣಸ್ವರೂಪಗಳು ಸುಟ್ಟು ಅಪ್ರಾ ಕೃತ ಗುಣಸ್ವರೂಪಗಳು ಬರುವುದರಿಂದ ಶಿವಸ್ವರೂಪಿಗಳೇ ಅವರಾಗು ವುರೆಂಬುದನ್ನಾರೂ ಮರೆಯಬಾರದು. ದೀಕ್ಷಾಪ್ರಭಾವವೇ ಇಂಥಾದ್ದ ಲ್ಲವೇ? ಅಂತೇ, ಇದು "ದೀಕ್ಷೆ" ಎಂದು ಪೆಸರ್ಗೊಂಡಿತು.

"ದೀಯತೇಚ ಶಿವಜ್ಞಾನಂ ಕ್ಷೀಯತೇ ಪಾಶುಬಂಧನಂ"

"ದೀಯತೇ" ಎಂದರೆ, ಯಾವುದರಿಂದ ಮಹಾಲಿಂಗದ (ಬ್ರಹ್ಮದ) ಜ್ಞಾನವನ್ನು ಉಂಟುಮಾಡುತ್ತದೆಯೋ "ಕ್ಷೀಯತೇ" ಎಂದರೆ, ಯಾವುದರಿಂದ ಮಲಮಾಯಾಕಾರ್ಮಿಕ ಬಂಧಗಳ ಪಾಶವು ನಾಶಮಾಡಲ್ಪಡುತ್ತದೆಯೋ ಮುಖ್ಯಾಂಶ, ಯಾವ ಕಾರಣದಿಂದ ಕ್ರಿಯಾಜ್ಞಾನಾತ್ಮಕ ಶಕ್ತಿಯನ್ನುಂಟುಮಾಡಿಕೊಡುತ್ತದೆಯೋ ಆ ಕಾರಣದಿಂದಲೇ "ದೀಕ್ಷೆ" ಯೆಂದು ಹೇಳಿಸಿಕೊಳ್ಳಲ್ಪಡುವುದು. ಸಾಲದೇನು? ಅಭೇದಭಾವಕ್ಕೆ ಇನ್ನೆಷ್ಟುಬೇಕು? ಅಸ್ತು.

ಈ ದೀಕ್ಷಾಕ್ರಮವನ್ನು ಹಲವರು (ಆಜ್ಞಾ, ಉಪಮಾ, ಸ್ವಸ್ತಿಕಾರೋಹಣ, ಕಲಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ) ಸಪ್ತಪ್ರಕಾರವೆನ್ನುವರು. ಕೆಲಬರು (ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ) ಷಟ್‌ಪ್ರಕಾರವೆನ್ನುವರು. ಮತ್ತಲವರು [ಕ್ರಿಯಾಯೋಗ, ಜ್ಞಾನ, ವಿಜ್ಞಾನ] ಚತುಃಪ್ರಕಾರವೆನ್ನುವರು. ಪುನರಲವರು ತ್ರಿಪ್ರಕಾರವೆನ್ನುವರು. ಈಗಂತೂ ಇವುಗಳನ್ನು ಹೇಳಿ ತೋರಿಸುವುದೇ ವಿನಹ ಮಾಡಿತೋರಿಸುವರೊಬ್ಬರೂ ಇಲ್ಲ. ನಮ್ಮ ಪಟ್ಟದಪ್ಪಗಳು ಈಗ ಮಾಡುವ ಕ್ರಮವನ್ನು ನೋಡಿದರೆ, ನಾಚಿಕೆಯೇ ಬರುವುದು. ಕುರುಬನು ಕುರಿಗಳನ್ನೆಲ್ಲಾ ನೀರಿನಲ್ಲಿ ಹಾಕಿ ಉಣ್ಣೆಯನ್ನೆಲ್ಲಾ ಕತ್ತರಿಸಿಬಿಡುವಂತೆ ಏನೂ ಅರಿಯದ ದ್ವಿಪಾದಕುರಿ, ಅಲ್ಲ ಅಲ್ಲ, ಮರಿಗಳ ತಲೆಯನ್ನೆಲ್ಲಾ ಬೋಳಿಸಿ ಬಿಳಿಯ ಬಟ್ಟೆಯಟ್ಟು [ಎದ್ದಮುದ್ದಸ್ವರೂಪಾಯಂ ಎಮ್ಮೇ ಕೋಣಾಯ ಮಂಗಳಂ ಎನ್ನಟ್ಲಿಗೆ] ಏನೇನೋ ಮಾಡಿಬಿಡುವರು. "ಆಗಲಿಲ್ಲ ಹೋಗಲಿಲ್ಲ ಇಳಿಯಜ್ಜ" ಎಂಬ ಗಾಥೋಕ್ತಿಯಂತಲ್ಲವೆ? ಮಾಡುವುದು ಬಂದರೆ ತಾನೆ, ಮಾಡುವುದು. ಇದನು ಕಲಿಯಬೇಕಾದರೆ ನಮ್ಮ ಪಟ್ಟದಪ್ಪಗಳೆಲ್ಲಾ ಘಟ್ಟವನ್ನೇ ಸೇರಬೇಕು. ಏಕೆ? ತಪಸ್ಸನ್ನಾಚರಿಸಲಿಕ್ಕೆ. ಇದರ ವಿನಹ ಮುಂದಕ್ಕೆ ದಾರಿಯೇ ಹತ್ತುವುದಿಲ್ಲ. ಪಟ್ಟದಪ್ಪಗಳೇ, ಪಟ್ಟದಪ್ಪಗಳೇ, ಈ ಪಟ್ಟವು ಆರಿಗೆ ಯೋಗ್ಯ, ತಲ್ಲಕ್ಷಣವೇನು? ಇದು ನಿಮಗಿಲ್ಲ. ನೋಡಿ, ಮಾಡಿ, ಕಲೆತಿಳಿದು ಪಟ್ಟದಪ್ಪಗಳೆನಿಸಿಕೊಳ್ಳಿರಿ. ಅಸ್ತು.

ದೀಕ್ಷಾಧಿಕಾರಿಗಳೆ, ಈ ದೀಕ್ಷಾವಿಧಾನವೂ ಎಷ್ಟು ಪ್ರಕಾರವಿದ್ದರೂ ಐಕ್ಯರಕ್ಕೆ ಒಂದೇ ಆಗುವುದು. ಆದರೂ ದೀಕ್ಷೆಯಲ್ಲಿ ಆದಿ, ಮಧ್ಯ,

ಅಂತ್ಯಜೋವಾ ಶಿವೇ ಭಕ್ತಶ್ಶಿವವನ್ಮಾನ್ಯ ಏವಸಃ ॥೫॥
ಶಿವಭಕ್ತಿಸಮಾವೇಶೇ ಕ್ವಜಾತಿ ಪರಿಕಲ್ಪನಾ
ಇಂಧನೇಷ್ವಗ್ನಿ ದಗ್ಧೇಷು ಕೋವಾಭೇದಃ ಪ್ರಕೀರ್ಯತೇ ॥೫॥

ಶಿ॥ ಶಿ॥ ೧೧ ಪರಿ

ಮೂರ್ಖೋವಾ ಪಂಡಿತೋವಾಪಿ ಬ್ರಾಹ್ಮಣೋವಾನ್ಯ ಏವವಾ
ಶಿವಲಿಂಗಾರ್ಚನಾ ನಿಷ್ಠಶ್ಶಿವವನ್ಮಾನ್ಯ ಏವಸಃ ॥

ಶಿವ ಧರ್ಮೋತ್ತರೆ.

ಅಂತ್ಯಜೋ ವಾಧಮೋವಾಪಿ ಮೂರ್ಖೋವಾ ಪಂಡಿತೋಪಿವಾ
ಶಿವಭಾವ ಪ್ರಸನ್ನಶ್ಚೇತ್ ಪೂಜ್ಯಸ್ಸರ್ವಸುರಾ ಸುರೈಃ ॥
ಭಸ್ಮೋದ್ಧೂಳಿತ ಸರ್ವಾಂಗಾ ಧೃತರುದ್ರಾಕ್ಷ ಮಾಲಿಕಾಃ
ಯೇಭವಂತಿ ಮಹಾತ್ಮಾನಸ್ತೇ ರುದ್ರಾನಾತ್ರ ಸಂಶಯಃ ॥೬॥

ಶಿ॥ ಶಿ॥ ೭ ಪರಿ

"ಯಸ್ತ್ರಿ ಪುಂಡ್ರಧಾರೀ ಪುರುಷಸ್ಸರುದ್ರಃ"

ಜಾಬಾಲಶ್ರುತಿಃ

"ಕದಾಚಿದ್ಭಸ್ಮನಾ ಕುರ್ಯಾತ್ ಸ ರುದ್ರೋನಾತ್ರ ಸಂಶಯಃ"
"ಯೋ ರುದ್ರಾಕ್ಷಂ ಧತ್ತೆಸ ಸತ್ಯಂ ಪರಮಶ್ಶಿವಃ"
"ಶಿವನಾಮಸ್ಮರಣಾತ್ ಶಿವಸ್ವರೂಪೋ ಭವತಿ ಶಿವಸ್ವರೂಪೋ ಭವತಿ"

ವೃದ್ಧಜಾ ಬಾಲೋಪ

ಶಿವೇತಿ ಮಂಗಲಂ ನಾಮಯಸ್ಯವಾಚಿ ಪ್ರವರ್ತತೇ
ಸಪ್ತಜನ್ಮ ಕೃತಂ ಪಾಪಂ ಭಸ್ಮೀಭವತಿ ತಸ್ಯವೈ॥
"ಅಪಿವಾಯಶ್ಚಂಡಾಲ ಶಿವಇತಿವಾಚಂದದೇತ್ತ್ತೇನಸಹ ಸಂವದೇತ್"

ಸಾಮವೇದ

ಭ್ರಮದ್ಭ್ರಮರ ಚಿಂತಾಯಾಂ ಕೀಟೋಪಿ ಭ್ರಮರಾಯತೇ
ಮಮಚಿಂತಾ ಸಮಾಕ್ರಾಂತೊ ಮಮರೂಪೋ ಭವೇಧ್ರುವಂ॥

ವೀರಾ

ಲಿಂಗಾಂಗೀಚ ಮಮಪ್ರಾಣೋ ಲಿಂಗಾಂಗೀ ಮಮರಕ್ಷಕಃ
ಲಿಂಗಾಂಗೀ ಮಮಕರ್ತಾಚ ಲಿಂಗಾಂಗೀಚ ಮಮಪ್ರಭೋ॥

ವೀರಾಗಮೆ

"ವರ್ಣಾಶ್ರಮವಿಭಾಗೋಯಂ ವೃತ್ತಿತೋನತುಜಾತಿತಃ" ಎಂಬ ವಚನಾನುಸಾರವಾಗಿ ಆಚಾರವೃತ್ಯತಃ ಈ ಭೇದಗಳಲ್ಲದೇ ಜಾತ್ಯತಃ

ಇವಲ್ಲ. ಏಕೆಂದರೆ, ಈ ಜಾತ್ಯಾಶ್ರಮಾದಿ ಕುಲಗೋತ್ರಗಳು ಕಲ್ಪಿತವಾದವುಗಳೇ ವಿನಹ ಸತ್ಯವಾದವುಗಳಲ್ಲ. ಆದ್ದರಿಂದ ಸತ್ಯಜ್ಞಾನಾನಂದ ಸ್ವರೂಪನಾದ ಶ್ರೀ ಪರಮೇಶ್ವರನಲ್ಲಿ ಲೀನವಾಗಲಿಚ್ಛಿಸುವ ವೀರಶೈವರಿಗೆ ಭೇದವೇ ಇಲ್ಲೆಂದು ಒತ್ತೊತ್ತಿ ಹೇಳುವೆನು.

ಯಥಾ ಹಿರಜತಂ ತಾಮ್ರಂ ರಸಯೋಗಾತ್ಸುವರ್ಣತಾಂ
ತಥಾ ಶಿವಜ್ಞಾನರಸಾ ಚ್ಛೂದ್ರಾದಿ ಶಿವತಾಂವ್ರಜೇತ್ ॥

ಸುಕ್ಷ್ಮಾಗಮ

"ವಿಭೂತಿ ರುದ್ರಾಕ್ಷ ಲಿಂಗಧಾರಣ ಬೋಧಕ ಶ್ರುತಿಭಿಸ್ತದ್ಧಾರಕಾಣಾಂ ಸರ್ವೇಷಾಂ ಶಿವತ್ವೇ ಪ್ರತಿಪಾದಿತೇ ಸರ್ವಾಸಾಂ ಮಹಾನದೀನಾಂ ಸಮುದ್ರಂ ಪ್ರಾಪ್ತಾನಾಂ ಇಯಮಿಯಂ ನದೀತಿ ಭೇದಾಪ್ರತೀತಿವತ್ ಬ್ರಾಹ್ಮಣಾದಿ ವರ್ಣಾನಾಂ ವೀರಶೈವ ಮತಪ್ರವಿಷ್ಟಾನಾಂ ವರ್ಣಭೇದೋನಾಸ್ತೀತಿ ಪ್ರತೀಯತೇ. ಕಿಂತು ಸಮುದ್ರತ್ವವಚ್ಛಿವತ್ವಮೇವ ಪ್ರತೀಯತೇ ರಸವಿದ್ಧಸ್ಯ ತಾಮ್ರಸ್ಯ ರಸಸಂಪರ್ಕಾತ್ಸುವರ್ಣತಾಂ ಪ್ರಾಪ್ತಸ್ಯ ಪುನಸ್ತಾಮ್ರತ್ವದಶಾವತ್. ಶುಕ್ತಿಸಂಪುಟೇ ಮಧ್ಯ ಪತಿತಸ್ಯ ಮೌಕ್ತಿಕಭಾವಂ ಪ್ರಾಪ್ತಸ್ಯ ಪುನರ್ಜಲತ್ವದಶಾವತ್ ಲಿಂಗಧಾರಣ ವೈಭವಾದುತ್ತರೋತ್ತರ ಶಿವಜ್ಞಾನಾತಿರೇಕಾಚ್ಚ ಶಿವತ್ವಂ ಪ್ರಾಪ್ತಾನಾಂ ನಪುನಃ ಪಶುತ್ವ ಭೇದದಶಾ"

ವೀರಶೈವಧರ್ಮ ಶಿರೋಮಣಿ

ಎಂಬಿತ್ಯಾದಿ ಎಷ್ಟೋ ಪ್ರಮಾಣೋದಾಹರಣೆಗಳನ್ನು ವೀರಶೈವರಲ್ಲಿ ಶ್ರೇಷ್ಠ ಕನಿಷ್ಠದ ಜಾತಿಭೇದವಿಲ್ಲವೆಂಬ ಬಗ್ಗೆ ಹಿಂದುದಾಹರಿಸಿದ್ದೇನೆ. ಲಿಂಗಾಂಗಸಾಮರಸ್ಯರೂಪ ಶಿವಯೋಗದಿಂದ ಜಾತಿಗಲ್ಲದೇ ವ್ಯಕ್ತಿಗೆ ಮಾತ್ರ ಶ್ರೇಷ್ಠತೆಯು ಬರುವುದೆಂಬಂಶವನ್ನೂ ತೋರಿಸಿದ್ದೇನೆ. ಅಂಥಾ ಲಿಂಗಾಂಗ ಸಾಮರಸ್ಯರೂಪ ತಪಸ್ಸಿನ ಗುರುತ್ವದ ಕರ್ತೃತ್ವವನ್ನೇ ಹಾಳು ಮಾಡಿಕೊಂಡು ಸ್ವಾರ್ಥತೆಗೆ ಬಿದ್ದು ತೇಜೋಹೀನರಾಗಿ ನಾ ಶ್ರೇಷ್ಠರೆಂದರೆ, ಯಾರಿಗೆ ಯಾರು ಶ್ರೇಷ್ಠರಾಗುವರು? ಈ ಹಚ್ಚುತನವನ್ನಿಷ್ಟು ಕಟ್ಟಿಡಬೇಕು. ತಮ್ಮ ಶ್ರೇಷ್ಠಕ್ಕೆ ತಾವು ಶ್ರೇಷ್ಠರೆಂದುಕೊಂಡರೆ ಇತರೆಯವರೂ ಕೂಡ ತಮ್ಮ ಗುರುತ್ವವು ತಮ್ಮಲ್ಲೇ ಗುರುಗುಟ್ಟಲಿಯೆನ್ನದೇ ಬಿಡರು. ಈ ಭೇದ ಭಾವವುಳ್ಳವರು ಸ್ವಲ್ಪ ಒಳಹೊಕ್ಕು ನೋಡಿದರೆ ಎಲ್ಲವೂ ತಿಳಿದೀತು. ಇದಿಲ್ಲದೆ ಮೇಲೆ ನಿಂತು ಮಾತನಾಡುವವರಿಗೆ ಹ್ಯಾಗೆ ತಿಳಿಯಬೇಕು? ಹೀಗೆ ನಾವು ಅಂತರ್ಜ್ಞಾನವನ್ನು ಕಳೆದುಕೊಂಡಿದ್ದರಿಂದಲೇ

ಇಷ್ಟು ಮೂರ್ಖತೆಯ ಅನಾಹುತಕ್ಕೆ ಸಂಭವವಾಯಿತು. ನಮ್ಮವರ ಬಾಹ್ಯಾಚರಣೆಯಲ್ಲೇ ಆಗಲಿ, ಅಂತರಾಚರಣೆಯಲ್ಲೇ ಆಗಲಿ, ಧರ್ಮಾಚರಣೆಯಲ್ಲೇ ಆಗಲಿ, ತಿಲಾಂಶವಾದರೂ ಭೇದವೇ ಆಗಲಿ, ವ್ಯತ್ಯಾಸವೇ ಆಗಲಿ, ಇರುವುದಿಲ್ಲ. ಭಕ್ತಿಜ್ಞಾನ ವೈರಾಗ್ಯಗಳಲ್ಲಂತೂ ಎಲ್ಲರಿಗೂ ಒಂದೇ ವಿಧವಾದ ಗೌರವಾನಂದ ಸುಖಗಳಾಗಿರುವವು. ಅಂದಮೇಲೆ ಉದರ ನಿಮಿತ್ತಕ್ಕಾಗಿ ಆಚರಿಸುವ ಕಾಯಕೋದ್ಯೋಗಗಳಿಗೆ ಎಲ್ಲಿಯ ಮಹತ್ವ? ಕಾಯಕವು ಬೇರೆಬೇರೆಯಾದರೇನು? ಅಥವಾ ದೇಹಭೇದವಾದರೇನು? ಮನಸ್ಸಿನ ಆಚಾರ ವಿಚಾರಗಳು ಒಂದಾದರೆ ಸಾಲದೇ? ಮನಸ್ಸಿನ ಶ್ರೇಷ್ಠತೆಯೇ ಬಲು ಅಗಾಧವಾದ್ದು "ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ?" ಎಂಬುವ ನಿಷದ್ವಾಕ್ಯದಂತೆ ಮನುಷ್ಯರ ಬಂಧಮೋಕ್ಷಾದಿಗಳಿಗೆ ಮನಸ್ಸೇ ಕಾರಣವಲ್ಲವೇ? ಇದನರಿಯದೇ ಅವನು ತನ್ನ ಲಿಂಗಾಂಗಿಗಳಲ್ಲೇ ಭೇದಭಾವವುಳ್ಳ ಪಂಗಡಗಳನ್ನು ಮಾಡಿಕೊಂಡು ಶ್ರೇಷ್ಠ ಕನಿಷ್ಠತ್ವಗಳನ್ನು ಕಲ್ಪಿಸುತ್ತಾನೋ ಅವನು ಗುರುವಲ್ಲ, ಜಂಗಮನಲ್ಲ ಭಕ್ತನಲ್ಲವೆಂದು ನಮ್ಮಾರ್ಯರ ವಚನಗಳುಂಟು. ಈ ಅಭೇದಭಾವವುಳ್ಳ ಆರ್ಯರ ವಾಕ್ಯಗಳನ್ನು ನಮ್ಮ ಧಾರ್ಮಿಕರೆಲ್ಲರೂ ಅಕ್ಷರಶಃ ಪರಿಪಾಲಿಸಲೇ ಬೇಕಾಗಿದೆ. ಭೇದಭಾವವೇ ಬಂಧುದ್ರೋಹಕ್ಕೆ ಕಾರಣವು. ಆದ್ದರಿಂದ ಭಕ್ತಿ ಜ್ಞಾನ ವೈರಾಗ್ಯತೆಗೆ ಸುಸಂಪನ್ನರಾದ ವೀರಶೈವರಿಗೆ ಪರಕೀಯ ಭಾವವೇ ಇಲ್ಲೆಂದು ನಿರ್ವಿವಾದವಾಗಿ ಹೇಳುವೆನು. ನಮ್ಮವರಲ್ಲೇ ನಮ್ಮವರು ಪರಕೀಯತ್ವವನ್ನು ಕಲ್ಪಿಸುವುದು ತನ್ನಂಗವನ್ನು ತಾನೇ ತೆರತೆರದು ತೋರಿಸಿದಂತೆ ಎನ್ನಲೋ ಅಥವಾ ಇದು ಗಾಳಿಗುದ್ದಿ ಮೈನೋಯಿಸಿಕೊಂಡಂತೆ ಎನ್ನಲೋ? ಇದಲ್ಲ. ಸನಾತನ ವೈದಿಕವೆನಿಸಿದ ನಮ್ಮ ವೀರಶೈವ ಧರ್ಮವು ಪತಿತರನ್ನು ಉದ್ಧರಿಸತಕ್ಕದ್ದಲ್ಲವೇ? ಉದ್ಧೃತರನ್ನು ಪತಿತರನ್ನಾಗಿ ಮಾಡತಕ್ಕದ್ದಲ್ಲ. ಈ ತೆರನ ಧರ್ಮಹೀನಭಾವವು ನಮ್ಮಲ್ಲಿರಬಾರದು. ಬಿದ್ದವರನ್ನು ಎಬ್ಬಿಸುವುದೇ ನಮ್ಮ ಧರ್ಮ. ಬಿದ್ದವರ ಮೇಲೆ ಎಷ್ಟು ಶಸ್ತ್ರ ಪ್ರಯೋಗಿಸುವುದು ನಮ್ಮ ಧರ್ಮವಲ್ಲ. ಇಂಥಾ ತಪ್ಪುಗಳನ್ನು ತಿದ್ದಿಕೊಳ್ಳಲಿಕ್ಕಾಗಿ ಪ್ರಾಯಶ್ಚಿತ್ತರಾಗುತ್ತಾಗುತ್ತಾ ಚಿತ್ತೈಕಾಗ್ರತೆಯ ವಿಷಯದಲ್ಲಿ ತದ್ರೂಪತೆಯನ್ನು ಹೊಂದಿ ಶುದ್ಧರಾಗುತ್ತಾ ಹೋಗುವುದುತ್ತಮ. ಪುಟಕ್ಕೆಹಾಕಿ ಶುದ್ಧಮಾಡದೇ ಇದ್ದ ಭಂಗಾರವನ್ನು ವ್ಯಾಪಾರ ಮಾಡ

ಲಿಕ್ಕೆ ಹೋದರೆ ಚೊಕ್ಕ ಭಂಗಾರದ ಕ್ರಯವು ಹ್ಯಾಗೆ ಬರುವದಿಲ್ಲವೋ ತದ್ವತ್ ಲಿಂಗಾಂಗ ಸಾಮರಸ್ಯರೂಪ ತಪಶ್ಚರ್ಯವನ್ನು ಮಾಡಿ ಚಿತ್ತವೃತ್ತಿಗಳ ದೋಷವನ್ನು ದೂರುಮಾಡಿಕೊಂಡು ಶುದ್ಧರಾಗದೇ ಹೋದರೆ ನಾ ಹೆಚ್ಚೆಂಬ ಪದವಿಯು ಸರ್ವಥಾ ಬರಲಾರದು. ಹೀನ ಭಂಗಾರವನ್ನು ಹೀಯಾಳಿಸುವಂತೆ ಚಿತ್ತಶುದ್ಧಿಯಿಲ್ಲದವನನ್ನು ಹಿಯಾಳಿಸುವುದೇ ಸತ್ಯ. ಆದ್ದರಿಂದ ಲಿಂಗಾಂಗಸಾಮರಸ್ಯರೂಪ ಶಿವಯೋಗದಿಂದ ಹೃದಯವನ್ನು ಶುದ್ಧಮಾಡಿಕೊಂಡು ಮಹಿಮರಾದ ಪ್ರಮಥರು ಹಾಕಿಕೊಟ್ಟ ಅಭೇದ ಧರ್ಮಮಾರ್ಗದಿಂದ ಜಾರಿಹೋಗದಂತೆ ಮನಸ್ಸನ್ನು ಬಿಗಿಹಿಡಿಯುತ್ತಾ ಹೋಗಬೇಕೆಂದು ಸವಿನಯ ಪೂರ್ವಕ ಪ್ರಾರ್ಥಿಪೆ.

ಶ್ರೀಮದ್ವೀರಶೈವ ಬಂಧುಗಳೇ? ನಮ್ಮಲ್ಲಿರುವ ಒಳಪಂಗಡದವರ ಜಾತಿ, ನೀತಿ, ಧರ್ಮಪಂಥಾದಿಗಳೆಲ್ಲವೂ ಒಂದೇ ಇದ್ದು, ನಾವೆಲ್ಲರೂ ಒಬ್ಬ ಧರ್ಮಮಾತೆಯ ಉದರದಿಂದ ಜನಿಸಿ, ಆ ಮಾತೃವಿನಿಂದಲೇ ಪೋಷಿತರಾಗಿ ಒಂದೇ ಮನೆಯ ವಿಷಯದಲ್ಲಿರುವುದರಿಂದ ನಾವೆಲ್ಲರೂ ಬಂಧುಗಳಲ್ಲವೊ, ಸಹೋದರರಲ್ಲವೋ? ಒಟ್ಟುಗೂಡಿದ ಬೆರಳಿನ ಹಸ್ತದಂತೆ ನಾವೆಲ್ಲರೂ ಐಕ್ಯರಾದರೆ, ಧರ್ಮೋದ್ಧಾರಕ್ಕೆ ಬಹು ಬಲವಾಗುವುದಿಲ್ಲವೇ? ಬುಡವೇ ಸುಟ್ಟು ಬೂದಿಯಾಗುತ್ತಿರಲು ಟೊಂಗೆಗಳುಳಿಯುವವೇ? ನಮ್ಮ ಧರ್ಮವು ಪರಧರ್ಮದವರ ದ್ವೇಷಾಗ್ನಿಯಿಂದ ಸುಡುತ್ತಿರುವಾಗ ನಮ್ಮಿ ನಮ್ಮಲ್ಲೇ ಆ ಪಂಗಡ ಈ ಪಂಗಡ ಆ ಪಂಥ, ಈ ಪಂಥ, ಆ ಜಾತಿ, ಈ ಜಾತಿ, ನಾ ಹೆಚ್ಚು, ನೀ ಕಮ್ಮಿ ಎಂಬಿತ್ಯಾದಿ ಅವಿಚಾರಗಳಿಂದ ಕಡಿದಾಡಿ ಬೇರೆ ಬೇರೆಯಾಗುತ್ತಿದ್ದರೆ ಈ ದ್ವೇಷಾಗ್ನಿಯಿಂದ ಧರ್ಮವು ಸುಟ್ಟು ಬೂದಿಯಾಗದೇ ಇದ್ದೀತೇ? ಇದರಿಂದ ಪರಧರ್ಮದವರ ದ್ವೇಷಾಗ್ನಿಯು ಪ್ರಖರವಾಗುವುದಿಲ್ಲವೇ? ಮುಂದೆ ನಾವಾದರೂ ಉಳಿವುದುಂಟೆ? ಸಾಕು! ಸಾಕು!! ಇನ್ನೀಭೇದ ಭಾವನನ್ನು ಬಿಟ್ಟು ಬಿಡಿರಿ. ಸ್ವಾರ್ಥಮೂಲವಾದ ಒಳಪಂಗಡಗಳ ಭೇದ ಭಾವವು ನಮ್ಮಲ್ಲಿದ್ದುದ್ದೇ ಆದರೆ, ನಮ್ಮನ್ನು ಹೆತ್ತ ತಾಯಿ ತಂದೆಗಳಿಗೂ ಮಾತೃವಾಗಿರುವ ಧರ್ಮಮಾತೆಯ ದ್ರೋಹವು ಪರಾತ್ಪರ ಮಾತೃದ್ರೋಹಿಗಳೇ ನಾವೆಂದು ಹೇಳಿ ಈ ಏಕವರ್ಣಾತ್ಮಕ ವೈದಿಕ ಧರ್ಮವಿಷಯದ ಪ್ರಕರಣವನ್ನಿಲ್ಲಿಗೆ ವಿರಮಿಸುವೆನು. ಶುದ್ಧಾತ್ಮನು ಸರ್ವರಿಗೂ ಶುದ್ಧೈಕ್ಯವನ್ನೀಯಲೀ.

# ವೀರಶೈವ ವರ್ಣಭೇದ ವಿದಾರಿಕಾ.

ಲೇಖಾಂಕ ೪.

ಲೇಖಕ:—ಸಿದ್ಧರಾಮಪ್ಪ ದುಂಡಪ್ಪ ಪಾವಟೆ ಬಿ. ಎ. ಎಲ್. ಎಲ್. ಬಿ.
ಅಡ್ವೋಕೇಟ ಹುಬ್ಬಳ್ಳಿ.

---

## ಪ್ರಮಾಣ ಪರೀಕ್ಷಣ.

ಇನ್ನು ಶರ್ಮರುಗಳು ಊರಿನಿಲ್ಲುವ ಪ್ರಮಾಣಗಳನ್ನು ಓದುವ.

"ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿ ದ್ವಿಧಾಮತಾ।
ಏಕಾಶಿವೇನ ನಿರ್ದಿಷ್ಟಾ ಬ್ರಹ್ಮಣಾಕಥಿತಾ ಪರಾ॥

ಈ ಶ್ಲೋಕವು ಶರ್ಮರ ಅಭಿಪ್ರಾಯಕ್ಕೆ ಪೋಷಕವಾಗಿಲ್ಲ. ಶೋಷಕವಾಗಿದೆ. 'ದ್ವಿಧಾಮತಾ' ಎರಡು ಪ್ರಕಾರವಾಗಿ ತಿಳಿಯಲ್ಪಡುತ್ತದೆ, ಎಂಬುವದರಿಂದ, ಶಿವಧರ್ಮವೂ, ಬ್ರಹ್ಮಧರ್ಮವೂ ಒಂದಕ್ಕೊಂದು ವಿಲಕ್ಷಣವಾದವೆಂಬರ್ಥ. ಅದರಂತೆಯೆ, 'ನಿರ್ದಿಷ್ಟ' ಮತ್ತು 'ಕಥಿತಾ' ಎಂಬ ಶಬ್ದಗಳಿಂದಲೂ ಈ ಎರಡು ಧರ್ಮಗಳು ಪರಸ್ಪರ ವಿಲಕ್ಷಣವಾದವುಗಳೆಂದು ಕಂಡುಬರುತ್ತದೆ.

ಇನ್ನು 'ದ್ವಿದಾ' 'ಮತಾ' 'ನಿರ್ದಿಷ್ಟಾ' 'ಕಥಿತಾ' ಎಂಬ ನಾಲ್ಕು ಶಬ್ದಗಳನ್ನು ವ್ಯಾಕರಣದುತ್ಪತ್ತಿಯಿಂದ ಪರೀಕ್ಷಿಸಿ ಶ್ಲೋಕದ ಅರ್ಥವನ್ನು ಮಾಡುವ. 'ದ್ವಿಧಾ' ಪದವು ದ್ವಿ—(ಎರಡು) ಎಂಬ ಸಂಖ್ಯಾವಾಚಕಕ್ಕೆ ಧಾ—ಎಂಬ ಪ್ರಕಾರಾರ್ಥವನ್ನು ಬೋಧಿಸುವ ತದ್ಧಿತ ಪ್ರತ್ಯಯವು ಹತ್ತಿ ಆಗಿದೆ. 'ಸಂಖ್ಯಾಯಾ ವಿಧಾರ್ಥೆಧಾ' (ಪಾ. ೫-೩-೪೨) "ಕ್ರಿಯಾ ಪ್ರಕಾರಾರ್ಥ ವರ್ತಮಾನಾತ್ ಸಂಖ್ಯಾ ಶಬ್ದಾತ್ ಸ್ವಾರ್ಥಧಾಸ್ಯಾತ್" ಎಂದು ಸಿದ್ಧಾಂತ ಕೌಮುದಿಯು. ಕ್ರಿಯೆಯು ಎಷ್ಟು ಪ್ರಕಾರವಾದುದೆಂದು ಹೇಳಬೇಕಾದಲ್ಲಿ ಸಂಖ್ಯಾವಾಚಕ ಶಬ್ದಕ್ಕೆ ಧಾ ಪ್ರತ್ಯಯವು ಹತ್ತಿ ಕ್ರಿಯೆಯು ಅಷ್ಟು ಪ್ರಕಾರವಾದುದೆಂದು ಬೋಧಿಸುತ್ತದೆಂಬರ್ಥ.

'ಮತಾ' ಎಂಬ ಪದದಲ್ಲಿ ಮನು-ಎಂಬ ಧಾತುವು ಉಂಟು. ಅದಕ್ಕೆ 'ಕ್ತ' ಪ್ರತ್ಯಯವು ಹತ್ತಿದೆ. ಮನು ಧಾತುವಿನ ಅರ್ಥವು ನಿಶ್ಚಯವಾಗಿ ತಿಳಿ-ಎಂದುಂಟು. ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾ ದ್ವಿಧಾ

ಮತಾ' ಎಂದರೆ ವರ್ಣಾಶ್ರಮಾದಿ ಧರ್ಮಗಳ ವ್ಯವಸ್ಥೆಯು ಎರಡು ವಿಧವಾಗಿ ಬೇರೆ ಬೇರೆ ತಿಳಿಯಲ್ಪಡುವದು ಎಂಬರ್ಥವು. ಈ ಎರಡು ವಿಧವು ತಿಳುವಳಿಕೆಯದು. ಒಂದು ವ್ಯವಸ್ಥೆಯ ತಿಳುವಳಿಕೆಯು ಒಂದು ಪ್ರಕಾರದ್ದು; ಮತ್ತೊಂದು ವ್ಯವಸ್ಥೆಯ ತಿಳುವಳಿಕೆಯು ಮತ್ತೊಂದು ಪ್ರಕಾರದ್ದು ಎಂಬ ಅರ್ಥವು.

ಇದನ್ನು ಸ್ಪಷ್ಟೀಕರಿಸುವೆನು. 'ದ್ರವ್ಯಂ ನವಧಾಮತಂ' 'ಗುಣೋ ಬಹುಧಾಮತಃ'. ದ್ರವ್ಯವು ಒಂಭತ್ತು ತೆರನಾಗಿ ಪಂಡಿತರಿಂದ ತಿಳಿಯಲ್ಪಟ್ಟಿದೆ. ಗುಣವು ಬಹುಪ್ರಕಾರವಾಗಿ ತಿಳಿಯಲ್ಪಟ್ಟಿದೆ, ಎಂಬ ವಾಕ್ಯಗಳಲ್ಲಿ, ಆತ್ಮ ಆಕಾಶ ವಾಯು ಅಗ್ನಿ ಅಪ್ಪು ಪೃಥ್ವಿ ಮನ ಕಾಲ ದಿಕ್ಕು ಎಂಬ ನೈಯಾಯಿಕರ ಒಂಭತ್ತು ದ್ರವ್ಯಗಳೂ ಬುದ್ಧಿ ಇಚ್ಛಾ ಪ್ರಯತ್ನ ಮುಂತಾದ ಗುಣಗಳೂ, ಒಂದು ದ್ರವ್ಯವು ಮತ್ತೊಂದು ದ್ರವ್ಯದಿಂದಲೂ ಒಂದು ಗುಣವು ಮತ್ತೊಂದು ಗುಣದಿಂದಲೂ ಒಂದಕ್ಕೊಂದು ವಿಲಕ್ಷಣವಾಗಿ ಇರುವವೆಂದು ಹೇಗೆ ತಿಳಿಯುತ್ತದೆಯೋ, ಅದರಂತೆಯೆ, ಈ ಎರಡು ಧರ್ಮ ವ್ಯವಸ್ಥೆಗಳು ಪರಸ್ಪರ ವಿಲಕ್ಷಣವಾದುವೆಂದು 'ದ್ವಿಧಾ ಮತಾ' ಎಂಬುದರಿಂದ ಬೋಧವಾಗುತ್ತದೆ. ಏಕಂದರೆ, 'ಮತಾ' ಎಂಬಲ್ಲಿಯ ತಿಳುವಳಿಕೆಯ ಕ್ರಿಯೆಯು ಎರಡು ಪ್ರಕಾರದ್ದಾಗಬೇಕಾದರೆ, ಆಯಾ ವಿಧ ತಿಳುವಳಿಕೆಯ ವಿಷಯವಾದ ವರ್ಣ ವ್ಯವಸ್ಥೆಯು ಆಕಾಶಾದಿ ದ್ರವ್ಯಗಳಂತೆ ಪರಸ್ಪರ ವಿಲಕ್ಷಣವಾಗಿರಬೇಕು- ವಿಷಯಭೇದವಿಲ್ಲದೆ ಜ್ಞಾನಪ್ರಕಾರಭೇದವಿಲ್ಲ. 'ನಿರ್ದಿಷ್ಟಾ' ಎಂಬಲ್ಲಿ 'ದಿಶ' ಧಾತುವು 'ನಿರ್' ಎಂಬ ಉಪಸರ್ಗದಿಂದ ಕೂಡಿ 'ಕ್ತ' ಕೃದಂತ ಪ್ರತ್ಯಯವನ್ನು ಹೊಂದಿರುತ್ತದೆ. ನಿರ್ ಎಂಬ ಉಪಸರ್ಗದರ್ಥವು ನಿಶ್ಚಯವು. ಅಥವಾ ನಿಷೇಧವು. ದಿಶ ಎಂಬ ಧಾತುವಿನರ್ಥವು ಆಜ್ಞೆಯು ಅಥವಾ ದಾನವು. 'ನಿರ್ದಿಷ್ಟಾ' ಎಂದರೆ ನಿಶ್ಚಯಿಸಿ ಆಜ್ಞಾಪಿಸಿದ ಅಥವಾ ಅನುಗ್ರಹಿಸಿದ [ದಾನಮಾಡಿದ] ಪ್ರಾಕೃತ ಧರ್ಮಗಳನ್ನು ನಿಷೇಧಿಸಿ ಆಜ್ಞಾಪಿಸಿದ ಎಂಬರ್ಥವು. 'ಕಥಿತಾ' ಎಂದರೆ ಹೇಳಿದ ಎಂಬರ್ಥವು. ಶಿವನು ಧರ್ಮವನ್ನು ತನ್ನ ಭಕ್ತರಿಗೆ ನಿಶ್ಚೈಸಿ ಆಜ್ಞಾಪಿಸಿದನು. ಬ್ರಹ್ಮನು ಮಾನವರಿಗೆ ಗುಣಕರ್ಮಾನುರೋಧದಿಂದ ಅವರವರ ಜಾತಿಗಳನ್ನು ತಿಳಿದು ಆ ಜಾತಿಗಳ ಪ್ರಕೃತಿಯಿಂದ ಬಂದ ಧರ್ಮಗಳನ್ನು ಹೇಳಿದನು-ಎಂಬರ್ಥ. ಅದರಿಂದ ಬ್ರಹ್ಮನು ಹೇಳಿದ ಧರ್ಮವು ಪ್ರಾಕೃತ ಧರ್ಮವು. ಪ್ರಕೃತಿಯ ಗುಣಗಳನ್ನು

ಪಲ್ಲಟಿಸುವ ಸಾಮರ್ಥ್ಯವು ಬ್ರಹ್ಮನಿಗಿಲ್ಲದರಿಂದ ಪ್ರಕೃತಿಯ ಗುಣಗಳನ್ನ ನುಸರಿಸಿಯೇ ಪ್ರಾಕೃತ ಧರ್ಮವನ್ನು ಅವನು ಹೇಳಿದನು. ಇದೇ ಪ್ರಾಕೃತ ಚಾತುರ್ವರ್ಣ್ಯಧರ್ಮವು.

ಶಿವನು ಹಾಗಲ್ಲ. ಅನುಗ್ರಹದಿಂದ ತನ್ನ ಶರಣಾಗತರ ಪ್ರಕೃತಿ ಗುಣಕರ್ಮಗಳನ್ನು ಕಳೆದು ಅವರ ಧರ್ಮವನ್ನು ಆಜ್ಞಾಪಿಸಲು ಅಥವಾ ಅನುಗ್ರಹಿಸಲು ಸಮರ್ಥನು. "ಅಸ್ಮಾತ್ಪ್ರವಿತತಾತ್ಪ್ರಂಧಾತ್ಪರ ಸಂಸ್ಥಾನಿ ರೋಧಕಾತ್। ದೀಕ್ಷೈವಮೋಚಯತ್ಯೇನಂ ಶೈವಂಧಾಮ ನಯತ್ಯಪಿ॥" ಎಂಬ ಶಿವಾಗವ ವಾಕ್ಯವು ಈ ಹಬ್ಬಿದ ಪ್ರಕೃತಿಯ ಬಂಧದಿಂದ ಶಿವನ ಅನುಗ್ರಹವೆಂಬ ದೀಕ್ಷೆಯು ಈ ಪಶುವನ್ನು ಎತ್ತಬಲ್ಲುದು. ಮತ್ತು ಶಿವಬೋಧಪಮರವೆಯಿಂದ ದಾಟಿಸಿ ಶಿವ ಪ್ರಕಾಶವನ್ನು ಬೆಳಗಬಲ್ಲುದು- ಎಂದು ಹೇಳುತ್ತಿದೆ. ಶಿವಧರ್ಮವು ಪ್ರಾಯಶ್ಚಿತ್ತವಿಲ್ಲದ್ದರಿಂದ ನಿಶ್ಚೈಸಿ ಆಜ್ಞಾಪಿಸಲ್ಪಟ್ಟದೆನಿಸುತ್ತದೆ. ಅಥವಾ ತನ್ನ ಭಕ್ತರನ್ನು ನಿಶ್ಚಯಿಸಿ ಅನುಗ್ರಹಿಸಲ್ಪಟ್ಟದು ಎಂದು ಆಗುತ್ತದೆ.

ಆದದರಿಂದ ಶರ್ಮರು ತಮ್ಮದೆಂದು ಭ್ರಮಿಸುವ ಶ್ಲೋಕಾರ್ಥವಿದು. "ವರ್ಣಾಶ್ರಮಾದಿ ಧರ್ಮಾಣಾಂ" ವರ್ಣಾಶ್ರಮಾದಿ ಧರ್ಮಗಳ, 'ವ್ಯವಸ್ಥಾ' ವಿಭಾಗವು, ಅಥವಾ ವ್ಯವಸ್ಥೆಯು, 'ದ್ವಿಧಾ' ಪರಸ್ಪರ ವಿಲಕ್ಷಣವಾದ ಎರಡು ಬಗೆಯಾಗಿ, 'ಮತಾ' ವಿದ್ವಾಂಸರುಗಳಿಂದ ತಿಳಿಯಲ್ಪಟ್ಟಿದೆ. 'ಏಕಾ' ಮೊದಲನೆಯದಾದ ಅತಿವರ್ಣಷಡಾಶ್ರಮ ಧರ್ಮವು 'ಶಿವೇನ' ಪರಶಿವನಿಂದ, 'ನಿರ್ದಿಷ್ಟಾ' ಭಕ್ತರಿಗಾಗಿ ನಿಶ್ಚೈಸಿ ಆಜ್ಞಾಪಿಸಿದುದು, ಅಥವಾ ಅನುಗ್ರಹಿಸಿದುದು. ಪ್ರಾಕೃತ ಧರ್ಮಗಳನ್ನು ನಿಷೇಧಿಸಿ ಆಜ್ಞಾಪಿಸಿದುದು. ಬ್ರಹ್ಮಣಾ ಚತುರ್ಮುಖ ಬ್ರಹ್ಮನಿಂದ 'ಕಥಿತಾ' ಹೇಳಲ್ಪಟ್ಟದು. "ಅಪರಾ" ಅಥವಾ "ಪರಾ" ಮತ್ತೊಂದು ಅಥವಾ ಅನ್ಯವು 'ಹಿ' ಇದು ಶಾಸ್ತ್ರಪ್ರಸಿದ್ಧವು.

ಇಲ್ಲಿ ಏಕಾ ಮತ್ತು ಅಪರಾ ಅಥವಾ ಪರಾ ಎಂಬ ಶಬ್ದಗಳು ಸಾಭಿಪ್ರಾಯವಾಗಿವೆ. "ಏಕೇ ಮುಖ್ಯಾನ್ಯ ಕೇವಲಾಃ" ಎಂಬ ಕೋಶಾನುಗತಿಯಿಂದ ಏಕ ಶಬ್ದವು ಮುಖ್ಯತ್ವವನ್ನೂ ಕೇವಲತ್ವವನ್ನೂ ಸೂಚಿಸುತ್ತಿ ಏಕಾ ಎಂಬ ಪದವು ಶಿವನಿರ್ದಿಷ್ಟ ಧರ್ಮವು ಮುಮುಕ್ಷುಗಳಿಂದ ಆದರಣೀಯವಾದುದರಿಂದ ಮುಖ್ಯವೆಂದೂ, ಪ್ರಾಯಶ್ಚಿತ್ತವಿಲ್ಲದರಿಂದ ಕೇವಲ [ಮಿಶ್ರವಿಲ್ಲದ್ದು] ವೆಂದೂ ತೋರಿಸುತ್ತದೆ. ಅಪರಾ ಎಂಬ

ಶಬ್ದವು ಕಡಿಮೆಯ ತರದ್ದೆಂಬ ಅರ್ಥವನ್ನು ಸೂಚಿಸುತ್ತ ಮುಮುಕ್ಷುಗಳಿಂದ ಅನಾದರಣೀಯುವೆಂದೂ ಪ್ರಾಯಶ್ಚಿತ್ತಾದಿಗಳಿಂದ ಕೂಡಿದುದರಿಂದ ಮಿಶ್ರವೆಂದೂ ಜನ್ಮಮರಣಕ್ಕೆ ಕಾರಣವಾದುದರಿಂದ ಹೇಯುವೆಂದೂ ಬೋಧಿಸುತ್ತದೆ. ಪರಾ ಎಂಬ ಪಾಠದಲ್ಲಿ ಬಾಹ್ಯವಾದುದು ಎಂಬರ್ಥವನ್ನು ಸೂಚಿಸುತ್ತ ಮುಕ್ತಿಪಥದಿಂದ ದೂರವಾದುದೆಂಬರ್ಥವನ್ನು ಬೋಧಿಸುತ್ತದೆ.

ಶಿವನಿರ್ದಿಷ್ಟ ಧರ್ಮವು ಬ್ರಹ್ಮಕಥಿತ ಧರ್ಮದಿಂದ ವಿಲಕ್ಷಣವಾದುದೆಂಬುದನ್ನು ಶಾಬ್ದಿಕವಾಗಿ ತೋರಿಸಿದೆನು. ಆ ವೈಲಕ್ಷಣ್ಯವು ಅತಿವರ್ಣತ್ವವೆಂಬುದನ್ನು ಹಿಂದಿನ ಲೇಖದಲ್ಲಿ ಉದಾಹರಿಸಿದ ಸೂಕ್ಷ್ಮಾಗ್ರವಾದಿ ಪ್ರಮಾಣವಾಕ್ಯಗಳಿಂದ ತೋರಿಸಿರುವೆನು.

ಶರ್ಮರುಗಳು ವೀರಶೈವರಲ್ಲಿ ಅತಿವರ್ಣತ್ವವನ್ನು ಒಡಂಬಡುವದಿಲ್ಲ. ಅವರೆನ್ನುವದಿದು- ಈಗಿನ ಕಾಲದಲ್ಲಿ ಅಪ್ರಾಕೃತಚತುರ್ವರ್ಣಾಶ್ರಮಕ್ಕೆ ಅತಿ ವರ್ಣಾಶ್ರಮವೆಂಬ ಹಂಬಲದಿಂದ ವೀರಶೈವ ಮತದಲ್ಲಿ ಬ್ರಾಹ್ಮಣಾದಿ ವರ್ಣಾಶ್ರಮಗಳೇ ಇಲ್ಲವೆಂದು ಸಾಧಿಸುವರು! ಅತಿವರ್ಣಾಶ್ರಮ ಶಬ್ದವು ಸಿಂಹೋ ಮಾಣವಕಃ ಅಗ್ನಿರ್ಮಾಣವಕಃ ಎಂಬ ಸಿಂಹಾಗ್ನಿಶಬ್ದಗಳಂತೆ ಗೌಣವೇ ಹೊರತು ಮುಖ್ಯವಾದುದಲ್ಲ."

ಶರ್ಮರ ಈ ವಾಕ್ಯವು ಸ್ಪಷ್ಟವಾಗಿಲ್ಲ. ಅತಿವರ್ಣಾಶ್ರಮ ಶಬ್ದವು ಗೌಣವು ಎನ್ನುವದರ ಅಭಿಪ್ರಾಯವೇನು? ಅದು ಆರೊಬ್ಬರ ವಿಷಯದಲ್ಲಿಯೂ ಗೌಣವೊ? ವೀರಶೈವರ ವಿಷಯದಲ್ಲಿ ಮಾತ್ರವೆ ಗೌಣವೊ? ಆರೊಬ್ಬರ ವಿಷಯದಲ್ಲಿಯೂ ಗೌಣವೆಂದರೆ ಅದಕ್ಕೆ ಮುಖ್ಯಾರ್ಥವೆ ಇಲ್ಲವೆಂಬರ್ಥವು. ಮುಖ್ಯಾರ್ಥವೆಂದರೆ ಆವುದೊಂದು ಶಬ್ದವನ್ನು ಕೇಳಿದೊಡನೆಯೇ ಬೋಧವಾಗುವ ಅರ್ಥವು. ಉದಾಹರಣೆ ಸಿಂಹ ಶಬ್ದವನ್ನು ಕೇಳಿದೊಡನೆಯೆ ಒಂದು ವಿಶಿಷ್ಟ ಪಶುವೆಂಬ ಬೋಧವಾಗುವದು. ಮಯೂರವರ್ಮನು ಸಿಂಹನು ಎಂಬಲ್ಲಿ ಸಿಂಹ ಶಬ್ದದ ಮುಖ್ಯಾರ್ಥವು ಹೊಂದದರಿಂದ ಸಿಂಹದಲ್ಲಿರುವ ಶೌರ್ಯಗುಣದಿಂದ ಮಯೂರವರ್ಮನ ಶೌರ್ಯವು ಒಳ್ಳೆ ಒಡೆದು ಬೋಧವಾಗುವದಕ್ಕಾಗಿ ಸಿಂಹ ಶಬ್ದವನ್ನು ಮಯೂರವರ್ಮನ ವಿಷಯವಾಗಿ ಬಳಸಿದೆಯೆಂದು ಅರಿಕೆಯಾಗುವದು. ಅದರಿಂದ ಇದು ಗೌಣಪ್ರಯೋಗವು. ಮುಖ್ಯಾರ್ಥವಿಲ್ಲದ ಶಬ್ದವು ಗೌಣ ಪ್ರಯೋಗವನ್ನು ಹೊಂದಲಾರದು.

ಹೀಗಲ್ಲದೆ ಆಶಿವರ್ಣಾಶ್ರಮ ಶಬ್ದವು ವೀರಶೈವರಲ್ಲಿ ಗೌಣವೆಂದರೆ ಅದು ಮತ್ತಾರ ವಿಷಯದಲ್ಲಿ ಮುಖ್ಯವೆಂದೂ ಆವ ಗುಣಯೋಗದಿಂದ ವೀರಶೈವರಲ್ಲಿ ಅದು ಗೌಣವೆಂದೂ ತೋರಿಸಿರೆಂದು ಶರ್ಮರಿಗೆ ಬಾಳ್ವಾಸೆಯು. (Challenge)

ವೀರಶೈವರಲ್ಲಿ ಅದು ಮುಖ್ಯ ಪ್ರಯೋಗವುಳ್ಳದೆಂಬಲ್ಲಿ ವೀರಶೈವದ ಅಷ್ಟಾವರಣ ಪಂಚಾಚಾರಯುಕ್ತ ದೀಕ್ಷೆಯಲ್ಲಿ ಪೂರ್ವ ಜಾತಿ ಗುಣಗಳು ನಷ್ಟವಾಗುವವೆಂಬ ಸೂಕ್ಷ್ಮಾಗವಾದಿ ಪ್ರಮಾಣಗಳು ಜಾಗರೂಕವಾಗಿವೆ. ನಿರ್ದಿಷ್ಟಾಪದವೂ ಸಮರ್ಥವಿದೆ.

ಇನ್ನು ಈ ಶ್ಲೋಕದ ಸಂದರ್ಭದಿಂದ ಶರ್ಮರ ಅಭಿಪ್ರಾಯಕ್ಕೆ ಇದು ಪ್ರತಿಕೂಲವಾಗಿದೆಂಬುದನ್ನು ತೋರಿಸುವೆನು. ಸಿದ್ಧಾಂತ ಶಿಖಾಮಣಿಯ ಪೂರ್ವಾಶ್ರಯ ನಿರಸನ ಸ್ಥಳದಲ್ಲಿ ಈ ಶ್ಲೋಕವನ್ನು ಶಿವಯೋಗೀಶ್ವರನು ಶ್ರೀ ರೇಣುಕರ ವಾಕ್ಯವೆಂದು ಸಂಗ್ರಹಿಸಿರುವನು. ಆ ಸ್ಥಳದ ಒಂಬತ್ತು ಶ್ಲೋಕಗಳಲ್ಲಿ ಎಂಟನೆಯ ಶ್ಲೋಕವಿದು.

ಪೂರ್ವಾಶ್ರಯ ನಿರಸನವೆಂಬ ಪ್ರಕರಣದಿಂದ ಪೂರ್ವದ ಬ್ರಾಹ್ಮಣಾದಿ ಜಾತಿಗಳನ್ನು ಈ ಪ್ರಕರಣವು ನಿಷೇಧಿಸಿರುವದು. ಅಲ್ಲದೆ ಶಿವಭಕ್ತರಿಗೆ ಬ್ರಾಹ್ಮಣಾದಿ ಚಾತುರ್ವರ್ಣ್ಯವನ್ನು ಹೇಳುವ ಒಂದು ಶ್ಲೋಕವಾದರೂ ಈ ಪ್ರಕರಣದಲ್ಲಿಲ್ಲ. ಲಿಂಗೈಕನಿಷ್ಠ ಹೃದಯಃ ಸದಾ ಮಾಹೇಶ್ವರೋಜನಃ ಪೂರ್ವಾಶ್ರಮಗತಾನ್ ಧರ್ಮಾಂಸ್ತ್ಯಜೇನ್ಮಾಹೇಶ್ವರೋಜನಃ ॥೧॥ ಸ್ವಜಾತಿ ಕುಲಜಾನ್ ಧರ್ಮಾನ್ ಲಿಂಗನಿಷ್ಠಾವಿರೋಧಿನಃ। ತ್ಯಜನ್ಮಾಹೇಶ್ವರೋಜ್ಞೇಯಃ ಪೂರ್ವಾಶ್ರಯ ನಿರಾಸಕಃ ॥೨॥ ಶಿವಸಂಸ್ಕಾರಯೋಗೇನ ವಿಶುದ್ಧಾನಾಂ ಮಹಾತ್ಮನಾಂ। ಕಿಂಪೂರ್ವ ಕಾಲಿಕೈರ್ಧರ್ಮೈಃ ಪ್ರಾಕೃತಾನಾಂ ಹಿತೇಮತಾಃ ॥೩॥ ತಸ್ಮಾತ್ಸರ್ವ ಪ್ರಯತ್ನೇನ ಶಿವಸಂಸ್ಕಾರ ಸಂಯುತೇ। ಜಾತಿ ಭೇದಂ ನಕುರ್ವೀತ ಶಿವಭಕ್ತೇ ಕದಾಚನ ॥೪॥ ಶಿವಸಂಸ್ಕಾರ ಯುಕ್ತೇಷು ಜಾತಿ ಭೇದೋನವಿದ್ಯತೇ। ಕಾಷ್ಠೇಷು ವಹ್ನಿದಗ್ಧೇಷು ಯಥಾ ರೂಪಂ ನವಿದ್ಯತೇ ॥೫॥ ಶಿವಸಂಸ್ಕಾರ ಯೋಗೇನ ಶಿವಧರ್ಮಾನುಷಂಗಿಣಾಂ। ಪ್ರಾಕೃತಾನಾಂ ನಧರ್ಮೇಷುಪ್ರವೃತ್ತಿರುಪಜಾಯತೇ ॥೬॥ ವಿರುದ್ಧಾಃ ಪ್ರಾಕೃತಾಶ್ಚೇತಿದ್ವಿವಿಧಾ ಮಾನುಷಾಃ ಸ್ಮೃತಾಃ। ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾಇತರೇ ಮತಾಃ ॥೭॥ ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾಹಿದ್ವಿಧಾಮತಾ। ಏಕಾ ಶಿವೇನನಿರ್ದಿಷ್ಟಾ ಬ್ರಹ್ಮಣಾ

ಕಥಿತಾ ಪುರಾ॥೮॥ ಶಿವೋಕ್ತಧರ್ಮನಿಷ್ಠಾತು ಶಿವಾಶ್ರಮನಿಷೇವಿಣಾಂ। ಶಿವ ಸಂಸ್ಕಾರ ಹೀನಾನಾಂಧರ್ಮಃ ಪೈತಾಮಹಃ ಸ್ಮೃತಃ॥೯॥

ಈ ಸಮಗ್ರ ಸ್ಥಲದ ಭಾವವು ಶಿವಭಕ್ತನು ಲಿಂಗನಿಷ್ಠೆಗೆ ವಿರುದ್ಧವಾದ ತನ್ನ ಜಾತಿಧರ್ಮಗಳನ್ನು ಬಿಡಬೇಕು. ಅವುಗಳನ್ನು ಬಿಡುವುದರಿಂದ ಧರ್ಮಭ್ರಷ್ಟನಾಗುವೆನೆಂಬ ಭಯವನ್ನು ತ್ಯಜಿಸಬೇಕು. ಜಾತಿಧರ್ಮಗಳು ಶಿವಸಂಸ್ಕಾರ ವಿಲ್ಲದವರಿಗೆ ಹೇಳಿದುವು. ಶಿವಸಂಸ್ಕಾರಯುಕ್ತರಲ್ಲಿ ಜಾತಿಭೇದವಿಲ್ಲ. ಬೆಂಕಿಯಿಂದ ಸುಟ್ಟ ಕಟ್ಟಿಗೆಗಳಲ್ಲಿ ಮೊದಲಿನ ರೂಪವಿಲ್ಲ. ಶಿವಸಂಸ್ಕಾರಿಗಳು ಶುದ್ಧರು. ಅದಿಲ್ಲದವರು ಪ್ರಾಕೃತರು. ವರ್ಣಾಶ್ರಮಾದಿ ಧರ್ಮಗಳ ವ್ಯವಸ್ಥೆಯು ಎರಡು ವಿಧವು. ಶಿವನು ಭಕ್ತರಿಗೆ ಅನುಗ್ರಹಿಸಿದುದೊಂದು. ಬ್ರಹ್ಮನು ಪ್ರಾಕೃತರಿಗೆ ಹೇಳಿರುವುದು ಬೇರೊಂದು. ಶಿವಾಶ್ರಮಿಗಳು ಶಿವಧರ್ಮನಿಷ್ಠರು ಶಿವಸಂಸ್ಕಾರವಿಲ್ಲದವರು ಬ್ರಹ್ಮಧರ್ಮನಿಷ್ಠರು. ಇಂತೆಂಬುದು. ಇಂತಪ್ಪ ಶ್ಲೋಕದಿಂದಲೂ ಸಂದರ್ಭದಿಂದಲೂ ಶರ್ಮವರ್ಗದ ವೀರಶೈವ ಚಾತುರ್ವರ್ಣ್ಯವು ಸಿದ್ಧಿಸುವುದೆಂದರೆ ಶಶಿಕಾಂತದಿಂದ ಅಗ್ನಿಯ ಕಿಡಿಗಳು ಹುಟ್ಟುವುವೆಂಬರ್ಥವು.

ವೀರಶೈವರು ತಮಗಾಗಿ ಶಿವನು ನಿರ್ದೇಶಿಕಾದ ಅತಿವರ್ಣಷಡಾಶ್ರಮ ಧರ್ಮಗಳನ್ನು ಮೀರಿ ಶರ್ಮರ ಮಾರ್ಗದಿಂದ ಬ್ರಾಹ್ಮಣಾದಿವರ್ಣಗಳನ್ನು ಕಲ್ಪಿಸಿ ಶಿವಧರ್ಮವನ್ನುಲ್ಲಂಘಿಸುವರಿಗೆ "ವರ್ಣಾಶ್ರಮಸಮಾಚಾರಾಃ ಶಿವೇನಕಥಿತಾಪುರಾ। ಯೇತಾನುಲ್ಲಂಘ್ಯವರ್ತಂತೇಶಿವಸ್ಯಾಜ್ಞಾಪಲಾಪಿನಃ॥ ರಾಜಾಜ್ಞಾಭಂಗಕೃನ್ನೃಣಾಂಯಥಾ ದಂಡೋಭವಿಷ್ಯತಿ। ಶಿವಾಜ್ಞಾಭಂಗ ಕನ್ನೃಣಾಂ ದಂಡೋಹಿನರಕಸ್ತಥಾ॥ ಎಂಬ ಶ್ಲೋಕವು ನರಕವನ್ನೇ ಸೂಚಿಸುತ್ತದೆ.

ಶರ್ಮವರ್ಗದವರು ವೀರಶೈವರಲ್ಲಿ ಜಾತಿಭೇದವನ್ನು ಕಲ್ಪಿಸುವ ಭರದಲ್ಲಿ ಪಾರಮೇಶ್ವರಾಗಮದ ೧೭ನೆಯ ಪಟಲದ ಶ್ಲೋಕಗನ್ನುದಾಹರಿಸುವರು ಅವುಗಳ ವಿಮರ್ಶವನ್ನು ಮುಂದೆ ಮಾಡುವೆನು.

ಮುಂದೆ ಸಾಗುವದು.



# ಶಿವತತ್ವ ರತ್ನಾಕರದ ವಿಮರ್ಶೆಯು.

ಲೇಖಾಂಕ– ೧.

(ಲೇ.— ಚಂದ್ರಶೇಖರ ಶಾಸ್ತ್ರೀ ವ್ಯಾಕರಣತೀರ್ಥ ಪ್ರಿನ್ಸಿಪಾಲ ಶಂಕರ ಕಾಲೇಜು ಯಾದಗಿರಿ)

---

ಶಿವ ತತ್ವರತ್ನಾಕರವೆಂಬುವ ಗ್ರಂಥದ ಅಲ್ಪ ಪರಿಚಯುವನ್ನು ಈ ಮೊದಲು ಶಿವಾನುಭವದ ವಾಚಕ ವರ್ಗಕ್ಕೆ ರಾ॥ ಸಾ॥ ಹಳಕಟ್ಟಿಯವರು ಮಾಡಿಕೊಟ್ಟು ಮುಂದೆ ವಿಸ್ತಾರವಾಗಿ ಇದರ ವಿಷಯಕ್ಕೆ ಬರೆಯುತ್ತೇವೆಂದು ವಾಗ್ದಾನವನ್ನು ಮಾಡಿದ್ದರಷ್ಟೆ? ಅವರ ವಾಗ್ದಾನವನ್ನು ಪೂರೈಸುವದೇ ಪ್ರಸ್ತುತ ಲೇಖದ ಪ್ರಕಟನೆಗೆ ಕಾರಣವು. ಈ ಗ್ರಂಥವನ್ನು ರಚಿಸಿದವರಾರು, ಇದರಲ್ಲಿರತಕ್ಕ ವಿಷಯುಗಳೇನು, ಎಂಬುವದನ್ನು ಮೊದಲು ತಿಳಿಯತಕ್ಕದ್ದಾಗಿದೆ. ಈ ಗ್ರಂಥದಲ್ಲಿ ಒಂಭತ್ತು ಕಲ್ಲೋಲಗಳಿಂದ ಒಟ್ಟು ೧೦೮ ತರಂಗಗಳಿರುತ್ತವೆ. ಅಂತೂ ಒಂದುನೂರಾಎಂಟು ವಿಷಯುಗಳಿರುತ್ತವೆಂದು ಹೇಳುವದೇ ಬೇಡ! ಈ ಎಲ್ಲಾ ವಿಷಯುಗಳ ಪರಿಚಯುವನ್ನು ಮಾಡಿಕೊಡುವದು ಶಕ್ಯವಿಲ್ಲದಿದ್ದರೂ, ವಿಹಂಗಮದೃಷ್ಟಿಯಿಂದ ಅಲ್ಲಲ್ಲಿಯ ಮುಖ್ಯ ವಿಷಯುಗಳ ವಿವೇಚನೆಯನ್ನು ಮಾಡುತ್ತೇನೆ. ಇದರಲ್ಲಿರತಕ್ಕ ವಿಷಯುಗಳ ಖಂಡನೆ ಮಂಡನೆಯನ್ನು ಮಾಡದೇ ಅವರಲ್ಲಿದ್ದಂತೆ ವಾಚಕರ ಎದುರಿಗಿಡುವದೇ ಮುಖ್ಯ ಉದ್ದೇಶವಾಗಿರುತ್ತದೆಂದು ಸರ್ವರೂ ತಿಳಿಯತಕ್ಕದ್ದು. ಸಂಸ್ಕೃತ, ಕನ್ನಡ ವಾಙ್ಮಯದಲ್ಲಿ ಅನೇಕ ಜನ ವೀರಶೈವ ಕವಿಪುಂಗವರು ಜನಿಸಿ, ಬಹಳ ಮಹತ್ವವುಳ್ಳ ಗ್ರಂಥಗಳನ್ನು ರಚಿಸಿ, ಅಜರಾಮರವಾದ ಕೀರ್ತಿಯನ್ನು ಸಂಪಾದಿಸಿ, ಸಮಾಜಕ್ಕೆ ಬಹಳ ಉಪಕಾರವನ್ನು ಮಾಡಿರುತ್ತಾರೆ. ಆದರೆ ಇವರು ರಚಿಸಿದ ಗ್ರಂಥಗಳನ್ನು ಉಳಿಸಿಕೊಳ್ಳುವ ಶಕ್ತಿಯು ಈಗಿನ ಕಾಲದ ವೀರಶೈವರಲ್ಲಿ ರದಿರ.ವದನ್ನು ನೋಡಿದರೆ ಸ್ವಾಭಿಮಾನಿಯಾದ ಪ್ರತಿಯೊಬ್ಬನಿಗೆ ವಿಷಾದವಾಗದೆ ಇರದು. ಯಾಕಂದರೆ ಅಪಾರವಾದ ವೀರಶೈವರ ಸಾಹಿತ್ಯ ಭಾಂಡಾಗಾರವು ಹುಳಹತ್ತಿ ಹೋಗಿರುವದು. ಆದರೂ ಸ್ವ, ಮತ್ತು ಅನ್ಯ ಸಮಾಜದ ಮಹಾನುಭಾವರು ವೀರಶೈವ ಕವಿಗಳು ಮಾಡಿದ ಕೆಲವು ಮಹತ್ವದ ಗ್ರಂಥಗಳನ್ನು ಹೊರಗೆಡಹುತ್ತಿರುವದು ಅವರಿಗೆ ಅತ್ಯಂತ ಭೂಷಣವಾಗಿರುತ್ತದೆ. ಯಾಕಂದರೆ ಕರ್ನಾಟಕ ವಾಙ್ಮಯದ ಕೋಲಂಬಸ

ರಾವ ರಾವಬಹದ್ದೂರ್ ಆರ್ ನರಸಿಂಹಾಚಾರ್ಯರು ಪ್ರಾಕ್ತನವಿಮರ್ಶನ ವಿಚಕ್ಷಣ ಇವರು ಕರ್ನಾಟಕ ಕವಿಚರಿತ್ರೆಯ ಮೂರು ಭಾಗಗಳನ್ನು ರಚಿಸಿ ಸಾಧಾರಣವಾಗಿ ೮೦೦ ೯೦೦ ಜನ ವೀರಶೈವ ಕವಿಗಳ ಹೆಸರನ್ನು ಹೊರಗೆಡವಿರುತ್ತಾರೆ. ಯಾವ ವೀರಶೈವನೂ, ತನ್ನ ಸಮಾಜದ ಸಲುವಾಗಿ ಇವರಷ್ಟು ವಾಙ್ಮಯ ಸೇವೆಯನ್ನು ಮಾಡಿಲ್ಲವೆಂದು ಧಾರಾಳವಾಗಿ ಹೇಳಬಹುದು! ಹುಳಹತ್ತಿ ಹೋಗುತ್ತಿರುವ ತಾಳವಾಲೆಯ ಗ್ರಂಥಗಳನ್ನು ವಿಶ್ರಾಂತಿ ಇಲ್ಲದೆ ಹುಡುಕಿರುವ ಈ ಮಹನೀಯರಿಗೆ ವೀರಶೈವ ಸಮಾಜವು ಅತ್ಯಂತ ಋಣಿಯಾಗಿರುತ್ತದೆ. ಮತ್ತು ವೀರಶೈವರಿಂದ ಈ ಮಹನೀಯರು ನೋಬಲ್ ಪ್ರೈಜನ್ನು ಹೊಂದಲಿಕ್ಕೆ ಯೋಗ್ಯರಿರುತ್ತಾರೆ. ಇವರಂತೆಯೇ ಮದ್ರಾಸಿನ ಪ್ರಸಿದ್ಧ ವಿದ್ವಾಂಸರೂ, ಮದ್ರಾಸ ಸರಕಾರದ ಕನ್ನಡ ಭಾಷಾಂತರಕಾರರೂ ಆದ ಬೆನಗಲ್ಲು ರಾಮರಾಯರು ಎಮ್. ಎ. ಎಲ್. ಎಲ್. ಬಿ. ಇವರೂ, ಮತ್ತು ಮದ್ರಾಸ ಗವ್ಹರ್ನಮೆಂಟಿನ ಲಾಯಬ್ರರಿಯ ಮ್ಯಾನೇಜರರಾದ ವಿದ್ವಾನ್, ಪಿ, ಸುಂದರಶಾಸ್ತ್ರಿಗಳವರೂ, ಶಿವತತ್ವರತ್ನಾಕರವನ್ನು ಶೋಧಿಸಿ ಪ್ರಕಟಿಸಿರುತ್ತಾರೆ. ಜಾತಿಯ ದ್ವೇಷದಿಂದ ತುಂಬಿ ತುಳುಕುತ್ತಲಿರುವ ಕರ್ನಾಟಕದಲ್ಲಿ ಜಾತಿಯ ದ್ವೇಷಕ್ಕೆ ಸಿಲುಕದೆ ವಾಙ್ಮಯ ಸೇವೆಯನ್ನು ಮಾಡುವಂತಹ ಮಹನೀಯರು ಕರ್ನಾಟಕದಲ್ಲಿರುವದು ಭೂಷಣಾಸ್ಪದವಾದ ಸಂಗತಿಯು ಆಗಿರುತ್ತದೆ. ಇಂತಹ ಮಹನೀಯರಿಗೆ ಅನೇಕ ಧನ್ಯವಾದಗಳು. ಈ ಶಿವತತ್ವ ರತ್ನಾಕರವನ್ನು ರಚಿಸಿದವರೆಂದರೆ— ಕೆಳದಿಯ ಅರಸರಲ್ಲಿ ಪ್ರಸಿದ್ಧರಾದ ಬಸರಾಜರೆಂಬುವರು. ಕೆಳದಿಯ ಅರಸರು ದಕ್ಷಿಣದೇಶದಲ್ಲಿ ಆಳಿಹೋದ ರಾಜರಲ್ಲಿ ಬಹು ಪ್ರಸಿದ್ಧರು. ಇವರು ೨೫೦ ವರ್ಷಗಳವರೆಗೆ ಕೆಳದಿಯ ಪ್ರಾಂತವನ್ನು ಆಳಿರುವರು. ಇವರು ವೀರಶೈವರಾದಾಗ್ಯೂ ಜಾತಿಯ ದ್ವೇಷದಿಂದ ಅಲಿಪ್ತರಾಗಿ ಪ್ರಜಾಪಾಲನೆಯನ್ನು ಮಾಡಿರುವರು. ಇದಕ್ಕೆ ಪ್ರಬಲವಾದ ಉದಾಹರಣೆಯೆಂದರೆ ಶೃಂಗೇರಿಯ ಶ್ರೀ ಶಂಕರಾಚಾರ್ಯರ ಮಠವನ್ನೂ, ಮತ್ತು ಬೇರೆ ಬೇರೆ ಸಮಾಜಗಳ ಮಠ ದೇವ ಮಂದಿರಗಳನ್ನೂ, ಕಟ್ಟಿಸಿಕೊಟ್ಟಿದ್ದೆ ಇವರ ಸಮಾನತ್ವ ಬುದ್ಧಿಯ ಹೆಗ್ಗುರುತಾಗಿರುತ್ತದೆ. ಆದ್ದರಿಂದಲೇ ಕೆಳದಿಯ ಅರಸರಲ್ಲಿ ಅನೇಕರು ವಿದ್ವಾಂಸರಾಗಿ ವೀರಶೈವ ಮತಗ್ರಂಥಗಳನ್ನೂ, ಕನ್ನಡ ವಾಙ್ಮಯ ಗ್ರಂಥಗಳನ್ನೂ, ರಚಿಸಿರುತ್ತಾರೆ. ಅವುಗಳಲ್ಲಿ ವೀರಶೈವ ಧರ್ಮ ಶಿರೋಮಣಿಯೂ, ಕ್ರಿಯಾಸಾರದ ಟೀಕೆಯೂ, ಶಿವತತ್ವರತ್ನಾಕರವೂ, ಮುಖ್ಯ

ವಾದವುಗಳಿರುತ್ತವೆ. ಈ ಶಿವತತ್ತ್ವರತ್ನಾಕರವೆಂಬುವ ಗ್ರಂಥವನ್ನು ರಚಿಸಿದ ಬಸವರಾಜ ಅರಸರು ಕನ್ನಡ, ಮತ್ತು ಸಂಸ್ಕೃತ ಈ ಉಭಯ ಭಾಷೆಗಳಲ್ಲಿಯೂ, ಅಗಾಧವಾದ ಪಾಂಡಿತ್ಯವನ್ನು ಸಂಪಾದಿಸಿದ್ದರೆಂದು ಅವರು ರಚಿಸಿದ ಗ್ರಂಥಗಳಿಂದಲೇ ತಿಳಿದು ಬರುತ್ತದೆ.

ಮತ್ತು ಕೆಳದಿಯನೃಪ ವಿಜಯದಲ್ಲಿ ಈ ಗ್ರಂಥಕಾರರ ವಿಷಯಕ್ಕೆ
ಮೆರೆವ ಶಿವತತ್ವರತ್ನಾಕರ। ಮೆಂದೆನಿಪಾಸುಭಾಷಿತಸುರದ್ರುಮ
ಮೆಂ। ಬುರುತರ ಕಾವ್ಯದ್ವಯಮುಂ। ವಿರಚಿಸಿ ಸನೃಪವನಾಂತನಾ
ಬಸವನೃಪಂ॥ ಇಂತು ಸಂಸ್ಕೃತಗ್ರಂಥ ನಿಬಂಧದ್ವಯಮುಂ।
ವಿರಚಿಸಿ ಮತ್ತಮದಲ್ಲದನಂತರಂ ಗೀರ್ವಾಣ। ಕರ್ನಾಟಕ ಭಾಷೆಗಳಿಂ
ಅನುಪಮಸೂಕ್ತಿಸುಧಾಕರ। ಮೆನಿಪಾವಸ್ತು ಸುಕಾವ್ಯಮಂ ವಿರಚಿ
ಸಿಸೂ। ರಿನಿಕರಕಲ್ಪದ್ರುಮನೆಂ। ದೆನಿಸೀಬಿರುದಾಂತು ಮೆರೆದನಾ
ಬಸವನೃಪಂ॥

ಅಂದರೆ ಈ ಬಸವರಾಜರು ಸಂಸ್ಕೃತದಲ್ಲಿ ೧. ಶಿವತತ್ವರತ್ನಾಕರ ೨. ಸುಭಾಷಿತಸುರದ್ರುಮ ಕರ್ನಾಟಕದಲ್ಲಿ ೩. ಸೂಕ್ತಿಸುಧಾಕರ ಎಂಬುವ ಕಾವ್ಯಗಳನ್ನು ರಚಿಸಿ "ಸೂರಿನಿಕರ ಕಲ್ಪದ್ರುಮ" ಎಂದು ಬಿರುದನ್ನು ಹೊಂದಿರುತ್ತಾರೆ. ಆದ್ದರಿಂದ ಬಸವರಾಜ ಅರಸರು ಉಭಯ ಭಾಷೆಗಳಲ್ಲಿಯೂ, ಪಾಂಡಿತ್ಯವನ್ನು ಸಂಪಾದಿಸಿದ್ದರೆಂದು ಸ್ಪಷ್ಟವಾಗುತ್ತದೆ. ಇವರು ರಚಿಸಿದ ಶಿವತತ್ವರತ್ನಾಕರಕ್ಕೆ ಅನೇಕ ಜನ ಪಂಡಿತರು "ವಿಶ್ವಕೋಶ" ವೆಂದು ಕರೆದಿರುತ್ತಾರೆ. ಯಾಕಂದರೆ ಮಹಾಭಾರತದಲ್ಲಿರುವಂತೆ ಇದರಲ್ಲಿಯೂ, ಅನೇಕ ವಿಷಯಗಳಿರುತ್ತವೆ. ಸಂಸ್ಕೃತದಲ್ಲಿ ಕಾಳಿದಾಸ, ಭವಭೂತಿ, ಮಾಘ, ಮೊದಲಾದ ಕವಿಗಳು ಒಂದೊಂದು ವಿಷಯದಲ್ಲಿ ಕಾವ್ಯಗಳನ್ನು ರಚಿಸಿ ಕೀರ್ತಿಯನ್ನು ಪಡೆದಿದ್ದಾರೆ. ಅನೇಕ ಶಾಸ್ತ್ರಗಳಲ್ಲಿ ಜ್ಞಾನವನ್ನು ಪಡೆದು ಶಿವತತ್ವರತ್ನಾಕರದಂಥ ಗ್ರಂಥಗಳನ್ನು ರಚಿಸುವವರು ಅತಿ ವಿರಳರೆಂದು ಹೇಳಬಹುದಾಗಿದೆ. ಮನುಷ್ಯನಿಗೆ ಒಂದು ವಿಷಯದಲ್ಲಿ ಪಾಂಡಿತ್ಯವು ಬರಬಹುದು. ಆದರೆ ಅನೇಕ ವಿಷಯಗಳಲ್ಲಿ ಸಂಪೂರ್ಣಜ್ಞಾನವನ್ನು ದೊರಕಿಸುವದು ಅತಿ ಕಷ್ಟದಾಯಕವಾದದ್ದು. ಸರ್ವವಿಷಯಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಬೇಕಾದರೆ ಈಶ್ವರನ ಕೃಪೆಯು ಬೇಕಾಗುತ್ತದೆ. ಆದ್ದರಿಂದಲೇ ಶಿವತತ್ವರತ್ನಾಕರದ ಗ್ರಂಥಕಾರರು ತಮ್ಮ ಗ್ರಂಥವನ್ನು ಪ್ರಾರಂ

ಭವಮಾಡುವ ಕಾಲಕ್ಕೆ ತಮಗೆ ಶಿವನ ಕೃಪೆಯು ಇರುವದರಿಂದಲೇ ಈ ಗ್ರಂಥವನ್ನು ರಚಿಸಿರುತ್ತೇನೆಂದು ಹೇಳಿರುತ್ತಾರೆ.

ಲೋಕಾನಾಂತು ಹಿತಾಯಸಾರಕೆಳದೀ ಸಿಂಹಾಸನಾಧೀಶ್ವರೊ।
ಗೌರೀನಾಥಕೃಪಾರ್ಜಿತಾಖಿಲ ಕಲಾಪಾಂಡಿತ್ಯವಿಭ್ರಾಜಿತಃ ॥
ಕುರ್ವೇಽಹಂ ಬಸವೇಂದ್ರಭೂಮಿರಮಣೋರತ್ನಾಕರಾಖ್ಯಾಂಕೃತಿಂ।
ಸರ್ವಂಪ್ರೇಕ್ಷ್ಯಚವಾಕ್ಪ್ರಪಂಚ ಮುಸಕೃತ್ಪುತ್ರತ್ವಮಾಕರ್ಣಯ॥

ಅಂದರೆ— ಗ್ರಂಥಕಾರರು ತಮ್ಮ ಒಬ್ಬ ಶಿಷ್ಯನಿಗೆ ಪುತ್ರನೆಂದು ಸಂಬೋಧಿಸಿ ಈ ಗ್ರಂಥವನ್ನು ರಚಿಸಿರುತ್ತಾರೆ. ಅವರು ಹೇಳುವದೇನಂದರೆ ಲೋಕಕಲ್ಯಾಣಕ್ಕಾಗಿರುವ ಕೆಳದೀ ಸಿಂಹಾಸನಾಧೀಶನೂ, ಬಸವರಾಜನೂ, ಆದ ನಾನು ಈಶ್ವರನ ಕೃಪೆಯಿಂದ ಎಲ್ಲಾ ಕಲೆಗಳಿಂದ ಪಾಂಡಿತ್ಯವನ್ನು ಸಂಪಾದಿಸಿ ಈ ರತ್ನಾಕರವೆಂಬುವ ಗ್ರಂಥವನ್ನು ರಚಿಸಿರುತ್ತೇನೆ. ಈ ಗ್ರಂಥಕಾರರು ಶಿವಭಕ್ತರಾದ ಕಾರಣದಿಂದಲೂ, ಶಿವಸಂಬಂಧದ ತತ್ವಗಳನ್ನು ತಿಳಿದವರಾದದ್ದರಿಂದಲೂ, ಇವರಿಗೆ "ಶಿವಾದ್ವೈತರತ್ನ" ಎಂಬುವ ಬಿರುದು ಇದ್ದಂತೆ ತೋರುತ್ತದೆ. ಆದ್ದರಿಂದಲೇ ಪ್ರತಿಯೊಂದು ಕಲ್ಲೋಲದ ಅಂತ್ಯದಲ್ಲಿ ಶಿವಾದ್ವೈತರತ್ನ ಬಸವರಾಜವೆಂದು ಇರುತ್ತದೆ. ಅಂತೂ ಈ ಗ್ರಂಥಕಾರರ ಅಗಾಧವಾದ ವಿದ್ವತ್ತೆಯು ಈ ಗ್ರಂಥವನ್ನು ಸಂಪೂರ್ಣವಾಗಿ ಓದಿ ನೋಡಿದವರಿಗೆ ತಿಳಿಯುತ್ತದೆ. ಈ ಗ್ರಂಥವು ಪ್ರಕಟವಾದ ಕೂಡಲೇ ಅನೇಕಜನ ವಿದ್ಯಾವಂತರು ಉತ್ತಮ ಅಭಿಪ್ರಾಯವನ್ನು ಪಟ್ಟಿರುತ್ತಾರೆ. ಮುಂದಿನ ಲೇಖಾಂಕದಲ್ಲಿ ಗ್ರಂಥದೊಳಗೆ ಇರತಕ್ಕ ಮಹತ್ವದ ವಿಷಯಗಳನ್ನು ಪ್ರಕಟಿಸುತ್ತೇನೆ. ಅಂತೂ ಈ ಶಿವತತ್ವರತ್ನಕರವು ಒಂದು ಜ್ಞಾನಭಾಂಡಾಗಾರವೆಂದು ಹೇಳಲಿಕ್ಕೆ ಯೋಗ್ಯವಾಗಿರುತ್ತದೆ. ಸಶೇಷ



# ವೀರಶೈವನು ನವಗ್ರಹಗಳನ್ನು ಅಂಗೀಕರಿಸುವನು.

**ಲೇಃ—ದೈವಜ್ಞ ವಿನೋದ ಶಿರೋಃ ಬೃಹನ್ಮಠ ಜ್ಯೋತಿಷ್ಯ ಆಶ್ರಮ**

(ಶಿವಾನುಭವ ೩ನೇ ಸಂಚಿಕೆಯಲ್ಲಿಯ ಪ್ರಶ್ನೆಗೆ ಉತ್ತರ.)

ಜ್ಯೋತಿಷ್ಯವು ಕರ್ಮವನ್ನೇ ಬೋಧಿಸುತ್ತದೆಂಬುವದು ತಪ್ಪು ಗ್ರಹಿಕೆಯು. ಈ ಶಾಸ್ತ್ರವು ಜ್ಞಾನದ ಜ್ಯೋತಿಯಾಗಿರುವದು. ಉಳಿದ ಶಾಸ್ತ್ರಗಳಾದ ವ್ಯಾಕರಣ, ನಿರುಕ್ತ, ಛಂದಸ್ಸು ಮೊದಲ ದವುಗಳು ಕೇವಲ ವಿವಾದಾಸ್ಪದವಿರುತ್ತವೆ. ಜ್ಯೋತಿಷವು ಪ್ರತ್ಯಕ್ಷ ಶಾಸ್ತ್ರವು. "ಅಪ್ರತ್ಯಕ್ಷಾಣಿ ಶಾಸ್ತ್ರಾಣಿ ವಿವಾದಸ್ತೇಷು ಕೇವಲಂ। ಪ್ರತ್ಯಕ್ಷಂ ಜ್ಯೋತಿಷಂ ಶಾಸ್ತ್ರಂ ಚಂದ್ರಾರ್ಕಮೇವ ಸಾಕ್ಷಿಣೌ॥ ಎಂಬ ಗಾರ್ಗೋಕ್ತಿಯಂತೆ ಇದು ಪ್ರಮಾಣ ಶಾಸ್ತ್ರವಾಗಿದೆ. ವೀರಶೈವರ ಸಕಲ ಸಂಸ್ಕಾರ ಕ್ರಿಯೆಗೂ ಜ್ಯೋತಿಷ್ಯವು ಅವಶ್ಯ ಬೇಕಾದದ್ದು. ವೀರಶೈವನು ಕರ್ಮಠನಲ್ಲವೆಂಬುವದು ಸಹಜವು. ಆದರೆ ಪತಿಕರ್ಮಗಳಾದ ಶಿವಾರ್ಚನಾದಿಗಳನ್ನು ಆಜನ್ಮಪರ್ಯಂತ ಪಾಲಿಸಬೇಕೆಂದು ಕಟ್ಟು. ಶಿವಾ (ಲಿಂಗಾ) ರ್ಚನೆಗೆ ಅಧಿಕಾರಿಯನ್ನಾಗಿ ಮಾಡುವ ದೀಕ್ಷಾಸಂಸ್ಕಾರವು ಜ್ಯೋತಿಷ್ಯಶಾಸ್ತ್ರೋಕ್ತ ಶುಭಮಾಸ, ಶುಭದಿವಸಗಳಲ್ಲಿಯೇ ಮಾಡಬೇಕೆಂದು ಪಾರಮೇಶ್ವರ ತಂತ್ರದಲ್ಲಿ ದೀಕ್ಷಾಕಾಲನಿರ್ಣಯವು ಉಲ್ಲೇಖಿಸಲ್ಪಟ್ಟಿದೆ. ಇದೇ ವಿಷಯವನ್ನು ಪಾರಮೇಶ್ವರಾಗಮ, ವೀರಶೈವಾಚಾರಪ್ರದೀಪಿಕಾ, ವೀರಶೈವಸದಾಚಾರಸಂಗ್ರಹ, ವಿವೇಕ ಚಿಂತಾಮಣಿ ಮುಂತಾದ ಪ್ರಮಾಣ ಗ್ರಂಥಗಳಲ್ಲಿ ಪ್ರತಿಪಾದಿಸಿರುತ್ತದೆ. ವೀರಶೈವರ ಮುಖ್ಯ ಸಂಸ್ಕಾರಗಳಾದ ಗರ್ಭಾದಾನ ಪುಂಸವನ, ಸೀಮಂತ, ಗರ್ಭಲಿಂಗಧಾರಣ, ಜಾತಕರ್ಮ, ನಾಮಕರಣ, ಕೇಶಖಂಡನ, ವಿದ್ಯಾರಂಭ, ದೀಕ್ಷಾ, ವಿವಾಹಾದಿ ಪ್ರತಿಸಂಸ್ಕಾರಗಳೂ ಜ್ಯೋತಿಷ್ಯ ಶಾಸ್ತ್ರಾವಲಂಬನೆಯಿಂದಲೇ ನಡೆಯುತ್ತವೆ. ಈ ಶಾಸ್ತ್ರವನ್ನು ಕೈ ಬಿಟ್ಟರೆ ಮೋಕ್ಷಾಧಿಕಾರಿಯ ತಳಹದಿಗಳಾದ ಸಂಸ್ಕಾರ ಕ್ರಿಯೆಗಳು ಸಶಾಸ್ತ್ರೀಯವಾಗಿ ಸಾಗದಿದ್ದರೆ ವೀರಶೈವನು ಮೋಕ್ಷಾಧಿಕಾರಿಯಾಗಲಾರನು. ಆದ್ದರಿಂದ ವೀರಶೈವನಿಗೆ ಜ್ಯೋತಿಷ್ಯಶಾಸ್ತ್ರವು ಬೇಕು. ಇನ್ನು ನವಗ್ರಹಗಳು ಸಕಲ ಪ್ರಾಣಿಗಳಿಗೂ ಕರ್ಮಬದ್ಧಫಲವನ್ನು ಕೊಡುವವು. ವೀರಶೈವನು ಎಲ್ಲಿಯವರೆಗೆ "ವೀರಶೈವ" ನಾಗುವದಿಲ್ಲವೋ ಅಲ್ಲಿಯವ

ರೆಗೆ ಕರ್ಮಬದ್ಧನಾಗಿರುತ್ತಾನೆ. ಈತನು ನಿಜವಾಗಿ ಲಿಂಗಾಂಗ ಸಾಮರಸ್ಯಾನಂದಸಾಗರದಲ್ಲಿಯೇ ಈಸಾಡುತ್ತಿದ್ದರೆ ಆತನಿಗೇಕೆ ಈ ಜ್ಯೋತಿಷ್ಯವೂ ನವಗ್ರಹಗಳೂ, ಇಷ್ಟೇ ಅಲ್ಲ ಅಂಥಾ ಲಿಂಗಾಂಗಿಯಾದ ಶಿವಯೋಗಿಗೆ ಜಡವಾದ ದೇಹವೂ ನಿಮಿತ್ಯ ಬಾಂಧವರಾದ ಮಾತಾಪಿತೃಗಳೂ ಧನಕನಕಾದಿಗಳಾದ ನಶ್ವರವಸ್ತುಗಳೂ, ಇವೆಲ್ಲವನ್ನು ತೊರೆದು ಕೇವಲ ಮುಕ್ತಾವಸ್ಥೆಯಲ್ಲಿರುವವರಿಗೆ ಮಾತ್ರ ಜ್ಯೋತಿಷ್ಯವು ಬೇಕಾಗಿರಲಿಲ್ಲ. ಇವರ ಸಾಧನ ಕ್ರಿಯಗಳಾದ ಸಕಲಕ್ಕೂ ಜ್ಯೋತಿಷ್ಯವು ಬೇಕು. ಈ ಶಾಸ್ತ್ರಾಧಾರದಿಂದ ನೆರವೇರಿವ ದೀಕ್ಷಾದಿ ಸಂಸ್ಕಾರದಿಂದಲೇ ಲಿಂಗಾಂಗ ಸಾಮರಸ್ಯಾನಂದಕ್ಕೆ ಪಾತ್ರರಾಗುವರು. ವೀರಶೈವ ಮತೀಯರು ಅಂಥಾ ಘನತರವಾದ ಮತ್ತು ಅತ್ಯಂತ ಸುಲಭವಾದ ಮುಕ್ತಿಫಲವನ್ನು ಹೊಂದುವವರು ಆಗಿರುತ್ತಾರೆ. ಅದರ ಸಾಧನ ಕ್ರಿಯೆಗಳೂ ಜ್ಞಾನಯುಕ್ತವಾಗಿ ಕ್ರಿಯಾ-ಜ್ಞಾನ-ಯೋಗದಿಂದ ಕ್ರಮವಾಗಿ ಸಪ್ತ ಸೋಪಾನಗಳನ್ನು ಹತ್ತಿ ಮುಕ್ತಿ ಸಾಮ್ರಾಜ್ಯವನ್ನು ಹೊಂದುವರು. ಸಾಧನ ಕ್ರಿಯಾನಿರತರಾದವರು ನವಗ್ರಹಗಳನ್ನು ನಂಬಲೇಬೇಕು. ಧ್ರುವಬದ್ಧಂ ನಕ್ಷತ್ರಂ ನಕ್ಷತ್ರೈಶ್ಚ ಗ್ರಹಾಃ ಪ್ರತಿನಿಬದ್ಧಾಃ। ಗ್ರಹಬದ್ಧಂ ಕರ್ಮಫಲಂ ಶುಭಾಶುಭಂ ಸರ್ವಜಂತೂನಾಂ॥ ಯೆಂಬ ಪ್ರಮಾಣದಂತೆ ಸಕಲ ಪ್ರಾಣಿಗಳ ಶುಭಾಶುಭಜ್ಞಾನವು ನವಗ್ರಹಗಳಿಂದಲೇ ವ್ಯಕ್ತವಾಗುತ್ತದೆ. ಇಂಥ ಪರಮ ಪ್ರಮಾಣ ಶಾಸ್ತ್ರವಾದ ಜ್ಯೋತಿಷ್ಯಶಾಸ್ತ್ರವನ್ನು ೧೨ನೇ ಶತಮಾನದ ಇತ್ತೀಚಿನ ವಚನಕಾರರು ಯಾಕೆ ದೂಷಿಸಿರುವರೋ ತಿಳಿಯದು. ಈ ವಚನಕಾರರಲ್ಲಿ ಕೆಲವರು ವೇದಾಗಮ ಪುರಾಣಗಳನ್ನು ಖಂಡಿಸಿರುವಂತೆ ಈ ಜ್ಯೋತಿಷ್ಯಶಾಸ್ತ್ರವನ್ನಾದರೂ ಖಂಡಿಸಿರಬೇಕು. ಅದು ಏನೇ ಇರಲಿ, ಜ್ಯೋತಿಷ್ಯಶಾಸ್ತ್ರವು ವೀರಶೈವರಿಗೆ ಅತ್ಯಗತ್ಯವಾಗಿ ಬೇಕಾದದ್ದು.



# ಚೋಳರೇಣುಕ ಸಂವಾದ.

ಲೇಖಕಃ—ಶ್ರೀ. ವೀರಭದ್ರಪ್ಪ ಹಾಲಭಾವಿ ಬಿ. ಎ. ಎಲ್. ಎಲ್. ಬಿ.
ಸಬಜಡ್ಜ ಧಾರವಾಡ.

ಈ ಗ್ರಂಥವು ಸಂಸ್ಕೃತದಲ್ಲಿದ್ದು ಇದನ್ನು ಮೈಸೂರು ನಮಃಶಿವಾಯ ಮಠದ ಚರಮೂರ್ತಿಗಳಾದ ಶ್ರೀ ಸೋಮಶೇಖರ ಸ್ವಾಮಿಗಳು ಪರಿಷ್ಕರಿಸಿ ಸ್ವಕೃತ ಕನ್ನಡ ಟಿಪ್ಪಣಿಯೊಡನೆ ಕಳೆದ ವರ್ಷ ಮುದ್ರಿಸಿ ಪ್ರಸಿದ್ಧಿಸಿರುವರು. ಈ ಗ್ರಂಥಕ್ಕೆ ಶಿವಾಧಿಕ್ಯಶಿಖಾಮಣಿಯೆಂಬ ಹೆಸರೂ ಉಂಟು. ಈ ಗ್ರಂಥದ ಕರ್ತನಾದ ರೇವಣಾರಾಧ್ಯನು ಮೈಸೂರು ಸಂಸ್ಥಾನದೊಳಗಿನ ನರಸೀಪೂರ ತಾಲೂಕಿನ ಸೋಸಲೆ ಎಂಬ ಗ್ರಾಮದವನು. ಇವನು ಶ್ರೀ ರೇಣುಕಾಚಾರ್ಯರ ವಂಶದಲ್ಲಿ ಹುಟ್ಟಿದವನೆಂದು ತನ್ನ ಗ್ರಂಥದ ಅಂತ್ಯದಲ್ಲಿ ಹೇಳಿಕೊಂಡಿರುತ್ತಾನೆ. ಈತನು ಗ್ರಂಥಾರಂಭದ ಎರಡು ಶ್ಲೋಕಗಳಲ್ಲಿ ಶಿವನನ್ನೂ, ಮೂರನೇ ಶ್ಲೋಕದಲ್ಲಿ ರೇಣುಕಾಚಾರ್ಯನನ್ನೂ ಸ್ತುತಿಸಿ, ನಾಲ್ಕನೇ ಶ್ಲೋಕದಲ್ಲಿ ರಘುನಾಯಕನಿಗೆ ಬೋಧೆಮಾಡುವ ಉದ್ದಿಶ್ಯದಿಂದ ಶತವಾದಗಳಿಂದ ಕೂಡಿದಂಥ ಶಿವಾಧಿಕ್ಯಶಿಖಾಮಣಿಯೆಂಬ ಗ್ರಂಥವನ್ನು ರಚಿಸುತ್ತೇನೆಂಬದಾಗಿ ಹೇಳುತ್ತಾನೆ. ಆ ಮೇಲೆ ಇವನು ಶ್ರೀ ರೇಣುಕನ ವಿಷಯವಾಗಿಯೂ ಆತನು ರಚಿಸಿದ ಇತರ ಮತಕೋಲಹಲವೆಂಬ ಗ್ರಂಥದ ವಿಷಯವಾಗಿಯೂ ಹೇಳಿರುವದೇನಂದರೆ.--

ಅಪ್ರಾಕೃತ ಗುಣರಮಣೀಯನಾದ ಪ್ರಮಥ ಸಮಾಜಾಧ್ಯಕ್ಷನಾದ ರೇಣುಕಗಣೇಶನು ಶಿವಾಜ್ಞೆಯಿಂದ ಮರ್ತ್ಯಲೋಕದಲ್ಲಿ ಕೊಲ್ಲಿಪಾಕಿಯೆಂಬ ಕ್ಷೇತ್ರದಲ್ಲಿ ವಿರಾಜಮಾನವಾದ ಸೋಮೇಶ್ವರಲಿಂಗದಿಂದ ಆವಿರ್ಭವಿಸಿ ವೀರಶೈವ ಮತವನ್ನು ಸ್ಥಾಪಿಸಿ, ಅಗಸ್ತ್ಯ ಮುನಿಗೆ ಶಿವಾದ್ವೈತ ತತ್ವವನ್ನು ಉಪದೇಶಿಸಿ ಶ್ರೀ ಶಂಕರಾಚಾರ್ಯರಿಗೆ ಶಿವಲಿಂಗವನ್ನು ಕೊಟ್ಟು ಅವರ ಅಭೀಷ್ಟವನ್ನು ನೆರವೇರಿಸಿ, ಲಂಕಾಪಟ್ಟಣದಲ್ಲಿ ಏಕಕಾಲಕ್ಕೆ ಮೂರು ಕೋಟಿ ಲಿಂಗಗಳನ್ನು ಸ್ಥಾಪಿಸಿ, ಕುಂಭಕೋಣ ಮುಂತಾದ ಸ್ಥಾನಗಳಲ್ಲಿ ಪ್ರಸಿದ್ಧರಾಗಿರುವ ನವಕೋಟಿಸಿದ್ಧರನ್ನು ನಿಮಿಷ ಮಾತ್ರದಲ್ಲಿ ಹೋತುಗಳನ್ನಾಗಿ ಮಾಡಿ, ಮಹಾನವಸಿದ್ಧರನ್ನು ಆ ಹೋತುಗಳ ಪಾಲಕರನ್ನು

ಮಾಡಿ, ಸಿದ್ಧಕುಲಚಕ್ರವರ್ತಿಯಾದ ರಾಜಾಧಿರಾಜ ವಿಕ್ರಮಾದಿತ್ಯನಿಗೆ ಗಗನಮಾರ್ಗಗಮನ ಸಾಹಾಯ್ಯಕವಾದ ಪಾದುಕಾದ್ವಯವನ್ನೂ, ಬೇಡಿದ್ದನ್ನು ಕೊಡುವ ಕಂಥೆಯನ್ನೂ, ಅಕ್ಷಯ ಭಿಕ್ಷಾಪಾತ್ರವನ್ನೂ, ವಿಶ್ವಕರ್ಮನಿರ್ಮಿತವಾದ ಅಭೀಷ್ಟಪ್ರದವಾದ ಕ್ಷುರಿಕಾಯುಧವನ್ನೂ, ಭುಕ್ತಿಮುಕ್ತಿಯನ್ನು ಕೊಡುವ ಮರಕತಮಯ ಶಿವಲಿಂಗವನ್ನೂ ಕೊಟ್ಟು ವಿಷ್ಣುಕಾಂಚೀಪುರದಲ್ಲಿ ಕಂಸಮಾನ ಶಿರಸ್ಸುಳ್ಳ ಕೇಶವನ ಮೂರ್ತಿಯನ್ನು ಸ್ಥಿರಗೊಳಿಸಿ, ಭೂಮಂಡಲದಲ್ಲಿ ಪ್ರಕಾಶನಾಗಿಯೂ, ಅಪ್ರಕಾಶನಾಗಿಯೂ, ಹದಿನಾಲ್ಕುನೂರು ವರ್ಷಗಳ ವರೆಗೆ ಇದ್ದು ಹನ್ನೆರಡು ಸಹಸ್ರ ಶ್ಲೋಕಗಳುಳ್ಳ ಇತರ ಮತಕೋಲಾಹಲವೆಂಬ ಗ್ರಂಥವನ್ನು ರಚಿಸಿದನು.

ಈ ಗ್ರಂಥದ ಸಾರವೇ ಶಿವಾಧಿಕ್ಯಶಿಖಾಮಣಿಯು. ಇದರಲ್ಲಿ ಶತ ಸಂವಾದಗಳನ್ನೊಳಕೊಂಡ ೧೨ ಉಪದೇಶಗಳಿರುವವು. ಇವುಗಳ ಕ್ರಮವು ಕೆಳಗೆ ಬರೆದಂತೆ.

೧ನೆಯ ಉಪದೇಶದಲ್ಲಿ ೧ ರಾಜಪಟ್ಟಾಭಿಷೇಕ ೨ ಷೋಡಶಮಹಾದಾನೋದ್ದೇಶ ೩ ೧೮ ವಿದ್ಯೆಗಳ ಉತ್ಪತ್ತಿ ೪ ವೇದಭೇದಗಳು ೫ ಉಪವೇದಗಳು ೬ ವೇದಾಂಗಗಳು ೭ ವೇದೋಪಾಂಗಲಕ್ಷಣವು ೮ ಪುರಾಣೋದ್ದೇಶ ೯ ಧರ್ಮಶಾಸ್ತ್ರ ಲಕ್ಷಣ ೧೦ ಮೀಮಾಂಸಾ ಶಾಸ್ತ್ರ ಲಕ್ಷಣ ೧೧ ಶೈವತಂತ್ರಲಕ್ಷಣ ೧೨ ವೇದಾಗಮಪ್ರಾಮಾಣ್ಯ ೧೩ ನಿಗಮಾಗಮೈಕ್ಯ ೧೪ ನಿಗಮಾಗಮಾರ್ಥ ೧೫ ವೇದಾರ್ಥನಿರ್ಣಯದಲ್ಲಿ ನೂತನಕವಿವಾಕ್ಯ ನಿರಾಕರಣ ಹೀಗೆ ೧೫ ಸಂವಾದಗಳಿರುವವು.

೨ನೆಯ ಉಪದೇಶದಲ್ಲಿ ೧ ಶಿವನಿಗೆ ಪರಮಾಪ್ತನಿರ್ಣಯವು ೨ ಪರಮಾಪ್ತನಾದ ರುದ್ರನಿಗೆ ಸಾತ್ವಿಕತ್ವನಿರ್ಣಯವು ೩ ಶಿವನಿಂದಸಕಲವೇದೋತ್ಪತ್ತಿಯು ೪ ಸರ್ವವೇದಪ್ರೋಕ್ತನ್ಯಾಯವಿಚಾರವು ೫ ವೇದವರಪ್ರದಾನವು ೬ ವೈದಿಕ ಷಣ್ಮತ ಷಟ್ತಂತ್ರ ಷಡ್ದರ್ಶನ ಲಕ್ಷಣವು ೭ ಶಿವಶಾಸ್ತ್ರಪ್ರತಿಷ್ಠಾಫಲ ೮ ಗಣಪತಿ ಪಟ್ಟಾಭಿಷೇಕ ೯ ಗಣಪತಿಮಂತ್ರಜಪಸ್ತೋತ್ರವು ಹೀಗೆ ೯ ಸಂವಾದಗಳಿರುವವು.

೩ನೆಯ ಉಪದೇಶದಲ್ಲಿ ೧ ಶೈವಾವೈದಿಕಕಾಪಾಲಿಕಮತನಿರ್ಣಯವು ೨ ವೈಷ್ಣವಾವೈದಿಕಪಾಂಚರಾತ್ರಮತ ನಿರ್ಣಯವು ೩ ವೈದಿಕಾವೈದಿಕ ಮಾಯಾವಾದ ಮತಭೇದವು ೪ ಬೌದ್ಧಮತನಿರ್ಣಯವು ೫ ಜೈನಮತ

ನಿರ್ಣಯವು ೬ ಚಾರ್ವಾಕಮತಭೇದವು ೭ ಸರ್ವಮತದರ್ಶನಗವ್ಯಾಸ್ಥಾ ೮
ನವಾದ ಶಿವಪದಸ್ವರೂಪ ನಿರ್ಣಯವು ಹೀಗೆ ೭ ಸಂವಾದಗಳಿರುವವು.

೪ ನೆಯ ಉಪದೇಶದಲ್ಲಿ ೧ ವಿಷ್ಣುಪದ ವಿಗ್ರಹ ನಿರ್ಣಯವು. ೨ ನಾರಾಯಣ ಶಬ್ದವಿಗ್ರಹ ನಿರ್ಣಯವು ೩ ಕೇಶವ ಶಬ್ದವಿಗ್ರಹ ನಿರ್ಣಯವು. ೪ ಪುರುಷ ಶಬ್ದನಿರ್ಣಯವು. ೫ ಶಿವನಿಗೆ ಅವ್ಯೃತ ಶಬ್ದ ವಾಚ್ಯತ್ವ ನಿರ್ಣಯವು. ಹೀಗೆ ೫ ಸಂವಾದಗಳಿರುವವು.

೫ನೆಯ ಉಪದೇಶದಲ್ಲಿ ೧ ಶಿವನಿಗೆ ಭವ, ವೃಡ, ಹರ ನಾಮಧೇಯ ನಿರ್ಣಯವು ೨ ಭಗವಚ್ಛಬ್ದ ವಾಚ್ಯತ್ವ ನಿರ್ಣಯವು ೩ ಶಿವನ ಸ್ವಭಾವಸಿದ್ಧ ವಿರುದ್ಧ ಸ್ವರೂಪ ನಿರ್ಣಯವು ೪ ದೇವತಾಂತರ ಪ್ರತಿಷೇಧ ಮುಖದಿಂದ ಶಿವಾಧಿಕ್ಯ ವಿಧಿಯು ಹೀಗೆ ೪ ಸಂದೇಶಗಳಿರುವವು.

೬ನೆಯ ಉಪದೇಶದಲ್ಲಿ ೧ ಪರಶಿವನ ಸಕಲನಿಷ್ಕಲ ಮೂರ್ತಿಸ್ವರೂಪ ನಿರ್ಣಯವು ೨ ತ್ರಿಮೂರ್ತ್ಯುತ್ಪತ್ತಿಕಾರಣ ಮಹೇಶ್ವರ ಸ್ವರೂಪ ವಿಧಿಯು ೩ ಮಾಹೇಶ್ವರಾಧಿಕ್ಯ ನಿರ್ಣಯವು ೪ ಮಹೇಶ್ವರನಿಗಿರುವ ಪರಬ್ರಹ್ಮಾದಿ ಪರ್ಯಾಯ ನಾಮಗಳ ವಿಚಾರವು ಹೀಗೆ ೪ ಸಂವಾದಗಳಿರುವವು.

೭ನೆಯ ಉಪದೇಶದಲ್ಲಿ೧ ಶಿವೇತರ ದೇವತಾ ಪರಿತ್ಯಾಗ ಪೂರ್ವಕವಾಗಿ ಶಿವಾಧಿಕ್ಯ ನಿರ್ಣಯವು ೨ ಶಿವನಿಗೆ ಸರ್ವದೇವತಾ ಜನಕತ್ವ ನಿರ್ಣಯವು ೩ ದೃಷ್ಟಾಂತ ಪೂರ್ವಕ ತ್ರಿಮೂರ್ತಿಭೇದ ನಿರ್ಣಯವು ೪ ತ್ರಿಮೂರ್ತಿ ಸ್ವರೂಪ ಭೇದವು ೫ ಸಶಕ್ತಿ ತ್ರಿಲೋಕ ತ್ರಿಮೂರ್ತಿಭೇದ ನಿರ್ಣಯವು ೬ ತ್ರಿಮೂರ್ತಿಗಳಲ್ಲಿ ರುದ್ರಾಧಿಕ್ಯವು ೭ ದ್ವಿಮೂರ್ತಿ ಮಧ್ಯದಲ್ಲಿ ವಿಷ್ಣುವಿಗಿಂತ ರುದ್ರಾಧಿಕ್ಯ ನಿರ್ಣಯವು ೮ ರುದ್ರನಿಗೆ ಏಕತ್ವ ಸಂಖ್ಯಾ ನಿರ್ಣಯವು ೯ ವಿಶ್ವಾಧಿಕತ್ವ ನಿರ್ಣಯವಿಧಿಯು ಹೀಗೆ ೯ ಸಂವಾದಗಳಿರುವವು.

೮ನೆಯ ಉಪದೇಶದಲ್ಲಿ ೧ ರುದ್ರನಿಗೆ ಬ್ರಾಹ್ಮಣ್ಯ ನಿರ್ಣಯ ವಿಧಿಯು ೨ ಆದಿ ರುದ್ರನದೆಶೆಯಿಂದ ಬ್ರಹ ವಿಷ್ಣುಗಳ ಉತ್ಪತ್ತಿ ವಿಧಿಯು ೩ ನಾರಾಯಣನ ಲಲಾಟದಲ್ಲಿ ರುದ್ರ ಪ್ರಸನ್ನತಾ ವಿಧಿಯು ೪ ಬ್ರಹ್ಮ ಲಲಾಟದಲ್ಲಿ ರುದ್ರಪ್ರಸನ್ನತಾ ವಿಧಿಯು ೫ ಅನಸೂಯ ಕರಾಂಜಲಿ ಪುಷ್ಪದಲ್ಲಿ ರುದ್ರ ಪ್ರಸನ್ನತಾ ವಿಧಿಯು ೬ ಮಹಾ ಬ್ರಾಹ್ಮಣ ರುದ್ರಪಿಂಡ ಪ್ರದಾನದಿಂದ ಸರ್ವ ಬ್ರಾಹ್ಮಣೋತ್ಪತ್ತಿವಿಧಿಯು ೭ ಸರ್ವ ಬ್ರಾಹ್ಮಣರಿಂದ ಮಹಾ ಬ್ರಾಹ್ಮಣ ನಾಮ ರುದ್ರನ ಪೂಜಾ ವಿಧಿಯು ೮ ರುದ್ರಪೂಜಾ ನಮಸ್ಕಾರ ಸ್ತೋತ್ರಗ

ಅವಶ್ಯ ಆಚರಣೀಯಗಳೆಂದು ಷಟ್ಸ್ಥಲ ತದವಾನ್ತರ ನೂರಾವೊಂದುಸ್ಥಲ, ಅಷ್ಟಾವರಣ, ಪಂಚಾಚಾರಗಳೆನಿಸುವ ಧರ್ಮಗಳನ್ನು ಏತಕ್ಕೆ ಹೇಳಿದರು? ಹೇಳುವ ಪ್ರಯೋಜನವೇನು? “ಪ್ರಯೋಜ ಮನುದ್ದಿಶ್ಯ ನ ಮಂದೋಪಿ ಪ್ರವರ್ತತೆ” ಮೂರ್ಖನು ಕೂಡ ಪ್ರಯೋಜನವಿಲ್ಲದೆ ಕಾರ್ಯದಲ್ಲಿ ಪ್ರವರ್ತಿಸುವದಿಲ್ಲ. ಅಂದಬಳಿಕ ಬುದ್ಧಿವಂತರು ವೃಥಾ ಬೋಧಿಸಲು ಹೇಗೆ ಪ್ರವೃತ್ತರಾಗುವರು? ಎಂದೂ ಆಗುವದಿಲ್ಲ. ಗುರುದೀಕ್ಷೋಪಹಿತನಾದ ಸಾಧಕನಿಗೆ (ಭಕ್ತನಿಗೆ ಅವು ಜ್ಞಾನದಾರ್ಢ್ಯಕ್ಕೆ ಅತ್ಯಂತ ಪ್ರಯೋಜಕಗಳಾಗಿರುತ್ತವೆ. ಆಂತೆ ಷಟ್ಸ್ಥಲಗಳಲ್ಲಿ ಭಕ್ತ, ಮಹೇಶ, ಪ್ರಸಾದಿಸ್ಥಲಗಳು ಕ್ರಿಯಾಪ್ರಧಾನಗಳೆಂತಲು (ಇವುಗಳಲ್ಲಿಯಾದರೂ ಕ್ರಮೇಣ ಕ್ರಿಯೆಗೆ ಶೈಥಿಲ್ಯವು, ಜ್ಞಾನಕ್ಕೆ ವೃದ್ಧಿಯು ಸೂಕ್ಷ್ಮದೃಷ್ಟಿಗೆ ತೋರುವದು) ಪ್ರಾಣಲಿಂಗಿ, ಶರಣ, ಐಕ್ಯಸ್ಥಲಗಳು ಜ್ಞಾನಪ್ರಧಾನವೆಂತಲೂ, (ಕ್ರಮೇಣ ಕ್ರಿಯೆಗೆ ಲೋಪವಿದ್ದು ಜ್ಞಾನಕ್ಕೆ ಕ್ರಮೇಣ ಪೂರ್ಣಾವಸ್ಥೆಯು ಭಾಸವಾಗುತ್ತೆ) ಸೂಕ್ಷ್ಮದೃಷ್ಟಿಯಿಂದ ವಿಂಗಡಿಸಿರುವದಾದರೂ ಸಂಗತವಾಗುತ್ತದೆ. ಆದುದರಿಂದ ಗುರುಕೃತಶಿವದೀಕ್ಷೋಪಹಿತರೂ, ಷಟ್ಸ್ಥಲಗಳ ಅಭ್ಯಾಸಾನುಭವವುಳ್ಳವರೂ, ಲಿಂಗಾಂಗಸಾಮರಸರೂ ಪಾ ಪರೋಕ್ಷಶಿವತಾದಾತ್ಮ್ಯಜ್ಞಾನಪಂತರೂ, ಅಭಿಮಾನಶೂನ್ಯವಾದ ಶರೀರೇಂದ್ರಿಯಾದಿ ವ್ಯಾಪಾರವಿಶಿಷ್ಟರೂ, (ಜೀವನ್ಮುಕ್ತರೂ) ಆದ ವೀರಶೈವರು ಯಾವ ಜಾತಿಯವರಿದ್ದರೂ ಅವರಲ್ಲಿ ಆದನ್ನೆಣಿಸಕೂಡದೆಂತಲೂ ಅವರು ಶಿವಸ್ವರೂಪರೆಂತಲೂ ಸರ್ವರಿಂದಲೂ ವಂದ್ಯರೂ, ಪೂಜ್ಯರೂ, ಎಂತಲೂ ಹೇಳಿರುವದು ಸದಾಚಾರ ಶರಣ್ಯರಿಗೆ ಅತ್ಯಂತ ಮಾನ್ಯವಿರುತ್ತದೆ. ಮತ್ತು ಗುರುಕೃತಶಿವದೀಕ್ಷೋಪದೇಶದಿಂದ ಪರಿಶುದ್ಧರಾಗಿ ಗುರೂಪದಿಷ್ಟಾಚಾರದಲ್ಲಿ ಪ್ರವೃತ್ತಿಯುಳ್ಳವರೂ, ಅಷ್ಟಾವರಣ ಸಂಪನ್ನರೂ, (ಸಾಧಕರೂ) ಆದ ವೀರಶೈವರ ಪ್ರಾಕೃತಜಾತ್ಯಾದಿಗಳನ್ನೆಣಿಸದೆ ಸಜಾತೀಯ ಸಹೋದರಭಾವದಿಂದ ಆಚರಿಸುವದು ವೀರಶೈವರ ಮುಖ್ಯ ಧರ್ಮವಿರುತ್ತದೆ. ಅಂತವರಲ್ಲಿ ಪೂರ್ವ ಜಾತಿಭೇದವನ್ನು ಕಲ್ಪಿಸಿದರೆ ಪಾಪಪ್ರಾಪ್ತಿವಾಗುವದೆಂದು ಮತದ ಸಿದ್ಧಾಂತವು. ಅಪರೋಕ್ಷಶಿವತಾದಾತ್ಮ್ಯ ಜ್ಞಾನಿಗೆ ಜಾತಿಕೃತ ಭೇದವಿಲ್ಲೆಂದು ಕೇವಲ ವೀರಶೈವರೆ ಹೇಳುತ್ತಾರಂತಲ್ಲವು. ಅದ್ವೈತಾದಿ ಮತದವರಲ್ಲಿ ಕೂಡ ಇಂತಹ ಸಿದ್ಧಾಂತವಿರುತ್ತದೆ. “ಚಂಡಾಲೋಸ್ತು ಸತುದ್ವಿಜೋಸ್ತುಗುರುರಿತ್ಯೈಷಾ ಮನೀಷಾ ಮಮ” ಸ್ವಸ್ವರೂಪದಿಂದ ಅಪ

ಶೋಕ್ಷಪರವಸ್ತುಜ್ಞಾನಸಂಪನ್ನನು ಚಂಡಾಲನಿರಲಿ ಅಥವಾ ಬ್ರಾಹ್ಮಣನಿರಲಿ ಅವನಲ್ಲಿ ಯಾವದೊಂದನ್ನು [ಜಾತ್ಯಾದಿಭೇದವನ್ನು] ಎಣಿಸದೆ ನಾನು ಗುರುವೆಂದು ತಿಳಿಯುತ್ತೇನೆ ಎಂದು ಶ್ರೀ ಶಂಕರಾಚಾರ್ಯರು ತಮ್ಮ ಮನೀಷಾಪಂಚಕದಲ್ಲಿ ಹೇಳಿರುವರು. ಅಂತಹ ವೀರಶೈವರಲ್ಲಿಯೇ ಜಾತಿ ಮೊದಲಾದುದರ ಭೇದವಿಲ್ಲವೆಂದು ಹೇಳಬೇಕಲ್ಲದೆ ದೀಕ್ಷಾಶೂನ್ಯರಾಗಿ ಮತಾಚಾರವಿಲ್ಲದ ಕೇವಲ ಲಿಂಗಧಾರಕರಲ್ಲಿ ಜಾತ್ಯಾಧಿಕೃತಭೇದವುಂಟೆಂದು ಸಿದ್ಧವಾಗುತ್ತದೆ

ವೀರಶೈವ ಧರ್ಮಶಿರೋಮಣಿ ೨ನೇ ಪರಿಚ್ಛೇದ ಪಾನು ೧೪೦

ಶ್ರೀ ಲಿಂಗಧಾರಣ ಮಹಾವಿಭವೇನ ಸರ್ವೇ ರುದ್ರಾ ಬಭೂವುರತ ಏವ ನ ತಾರತಮ್ಯಂ। ಏತನ್ಮತೆ ಸಜನನೀಕಸುತಾ ಇವ ಸ್ಯುರ್ವೀರಾಃ ಪರಸ್ಪರ ಸಹೋದರಭಾವಭಾಜಃ ॥೭೭॥ ಶ್ರೀ ವೀರಶೈವ ಮತಸದ್ಗುರು ದೀಕ್ಷಿತಾನಾಂ ಜೀವತ್ವ ವರ್ಣನವಿಧೌ ದೃಢಸಾಹಸಾನಾಂ। ಪುಂಸಾಂ ನಮೂಲಮಿಹ ವಚ್ಮಿವದಾಮಿ ತತ್ತ್ವಂ ಸಾಕ್ಷಾಚ್ಛಿವತ್ವಮಖಿಲಶ್ರುತಿಶಾಸನೇನ ॥೨೮॥ ಎರಡು ಪದ್ಯಗಳಿಂದ ಗುರುವಿನಿಂದ ದೀಕ್ಷಿತರಾದ ವೀರಶೈವರು ಓರ್ವ ತಾಯಿಯ ಮಕ್ಕಳಂತೆ ಸರ್ವದೂ ಪರಸ್ಪರ ಸಹೋದರ ಭಾವದಿಂದ ವರ್ತಿಸಬೇಕೆಂತಲೂ ಇವರು ಸಾಕ್ಷಾತ ಶಿವಸ್ವರೂಪರೆಂತಲೂ (ವ್ಯಾಖ್ಯಾನದಲ್ಲಿ) ಹೇಳಿ ಮುಂದೆ ಇದಮತ್ರಾಕೂತಂ" ಎಂದೆಂದು ಮೇಲಿನ ಪದ್ಯಗಳ ತಾತ್ಪರ್ಯದ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಅನೇಕ ಶ್ರದ್ಧೆಯ ಪ್ರಮಾಣಗಳಿಂದ ಸ್ಪಷ್ಟವಾಗಿ ಬರೆದಿರುವರು. ಅದನ್ನು ಇಲ್ಲಿ ಕೊಡುತ್ತೆ "ಇದಮತ್ರಾಕೂತಂ, ಸಾಕ್ಷಾನ್ಮೋಕ್ಷಸಾಧನ, ವಿಭೂತಿ, ರುದ್ರಾಕ್ಷ, ಲಿಂಗಧಾರಣಬೋಧಕ ಶ್ರುತಿಭಿಸ್ತದ್ಧಾರಕಾಣಾಂ ಸರ್ವೇಷಾಂ ಶಿವತ್ವೇ ಪ್ರತಿಪಾದಿತೆ ಸರ್ವಾಸಾಂ ಮಹಾನದೀನಾಂ ಸಮುದ್ರ ಪ್ರಪ್ತಾನಾಂ ಇಯಂಮಯಂ ನದೀತಿ ಭೇದಾಪ್ರತೀತಿವತ್ ಬ್ರಾಹ್ಮಣಾದಿವರ್ಣಾನಾಮೆತನ್ಮತಪ್ರವಿಷ್ಟಾನಾಂ ವರ್ಣಭೇದೋ ನಾಸ್ತೀತಿ ಪ್ರತೀಯತೆ ಕಿನ್ತು ಸಮುದ್ರತ್ವವಚ್ಛಿವತ್ವಮೇವ ಪ್ರತೀಯತೆ ರಸವಿದ್ಧಸ್ಯ ತಾಮ್ರಸ್ಯ ರಸಸಂಪರ್ಕಾತ್ಸುವರ್ಣತಾಂ ಪ್ರಾಪ್ತಸ್ಯ ಪುನಸ್ತಾಮ್ರತ್ವದಶಾವತ್ ತಾಪವಶಾತ್ ಘೃತಭಾವಂ ಪ್ರಾಪ್ತಸ್ಯ ಪುನರ್ನವನೀತತ್ವದಶಾವತ್ ಲಿಂಗಧಾರಣವೈಭವಾತ್ ಉತ್ತರೋತ್ತರ ಶಿವಜ್ಞಾನಾತಿರೇಕಾಚ್ಚ ಶಿವತ್ವಂ ಪ್ರಾಪ್ತಾನಾಂ ನ ಪುನಃ ಪಶುತ್ವದಶಾ 'ತಥಾಚ' ತ್ವಂ ಬ್ರಾಹ್ಮಣತ್ವದು

ಪಧಾವನಮೇವ ಕಾರ್ಯಂ ತದ್ಬ್ರಾಹ್ಮಣೈಸ್ತ್ವದಿತರೆ ನಭವನ್ತ್ಯುಪಾಸ್ಯಾಃ
ನ ಬ್ರಾಹ್ಮಣಾ ನವರವರ್ಣನಿಷಿವಣೇನ ಸಂಭಾವಯೆಮುಯುದಿನಃ ಪ್ರಪದಂ
ಪ್ರಮಾಣಂ ವಾತುಲಾಗಮೆ ಬ್ರಾಹ್ಮಣಃ ಕಥ್ಯತೆ ರುದ್ರಃ ಕ್ಷತ್ರಿಯಃ ಕಮ
ಲೇಕ್ಷಣಃ। ವೈಶ್ಯಃ ಕಮಲಜಾತಸ್ತು ಶೂದ್ರಃ ಸ್ಯಾತ್ಪಾಕಶಾಸನಃ॥ ಬ್ರಾಹ್ಮ
ಣಸ್ಯ ಶಿವೊ ದೇವಃ ಕ್ಷತ್ರಿಯಸ್ಯ ಜನಾರ್ದನಃ ವೈಶ್ಯಸ್ಯಭಾಸ್ಕರೊ ದೇವಃ
ಶೂದ್ರಾಣಾಂ ಸರ್ವದೇವತಾಃ ಪರಾಶರಪುರಾಣೆ ತತೊ ವಿಪ್ರಸ್ಯ ಸಂಬಂಧಃ
ಶಿವೆ ನೈವಹಿಯುಜ್ಯತೆ। ಸಂಕರಾಸ್ಸರ್ವದೇವಾಶ್ಚ ವೃಷಲಸ್ತು ಪುರಂದರಃ
ಪಿತಾಮಹಸ್ತು ವೈಶಃ ಸ್ಯಾತ್ಕ್ಷತ್ರಿಯಃ ಪರಮೊಹರಿಃ ಬ್ರಾಹ್ಮಣೊಭಗವಾನ
ರುದ್ರಃ ಸರ್ವೇಷಾಮುತ್ತಮೊತ್ತಮಃ॥ ಬ್ರಹ್ಮಭಾವೊ ಹಿರುದ್ರಸ್ಯ ಬ್ರಾಹ್ಮಣ್ಯಂ
ನೈವ ಹೇತುಜಂ। ಬ್ರಾಹ್ಮಣೊ ವೈ ಸದಾಲೋಕೆ ಬ್ರಾಹ್ಮಣಂ ಚೊಪ
ಧಾವತಿ॥ ಮಹಾಬ್ರಾಹ್ಮಣಮಿಶಾನಮುಪಧಾವೆನ್ನ ಚೆತರಂ ಸದಾ॥ ಮಹಾ
ನ್ತಮಾತ್ಮಾನಂ ವಿರೂಪಾಕ್ಷಂ ದ್ವಿಜೊತ್ತಮಂ ವಾತುಲತಂತ್ರೆ ರುದ್ರಏವ
ಸದಾ ಸಾಕ್ಷಾ ಬ್ರಾಹ್ಮಣೊ ಬ್ರಹ್ಮಭಾವತಃ ಬ್ರಾಹ್ಮಣೆ ಪಠಿತಸ್ತಸ್ಮಾ
ದ್ಬ್ರಾಹ್ಮಣೊ ರುದ್ರ ಏವಹಿ ಇತ್ಯಾದಿವಚನೈಃ "ತ್ವಂ ದೇವೇಷು ಬ್ರಾಹ್ಮ
ಣೊವಹಂ ಮನುಷ್ಯೇಷು ಬ್ರಾಹ್ಮಣಃ, ಬ್ರಾಹ್ಮಣೊವೈ ಬ್ರಾಹ್ಮಣಮುಪ
ಧಾವತ್ಯುಪಧಾವಾಮಿ" ಇತಿ ಶ್ರುತ್ಯಾ ಶಿವಾಭಿನ್ನಾನಾಂ ಲಿಂಗಾಂಗಸಾ
ಗಿನಾಂ ಬ್ರಾಹ್ಮಣ್ಯಮಪಿ ಸೂಚಿತಂ ಭವತಿ. ಏವಂಚ, ನ ತತ್ರಜಾತಿಭೇ
ದೊಸ್ತೀತಿ ವಚನಾನಾಂ ಲಿಂಗಾಂಗಸಾಮರಸ್ಯರೂಪ ಜೀವನ್ಮುಕ್ತಿಸಂ
ಪನ್ನ ಶಿವಾರೂಢಪರತ್ವಂ" ವಸ್ತುತಸ್ತು॥ ಯೆ ಶಿವಜ್ಞಾನಹೀನೈರುಕ್ತವಕ್ಷ್ಯ
ಮಾಣ ಬಹಿರಾಚಾರಾನ್ ತ್ಯಕ್ತ್ವಾ ಸ್ವೇಚ್ಛಾಚಾರಪರೈರದೀಕ್ಷಿತೈಃ ಸ್ವಾಪ
ಕೃಷ್ಟಜಾತಿಭಿರ್ಲಿಂಗಧಾರಣಮಾತ್ರ ಶಾಲಿಭಿಃ ಸಂಪ್ರದಾಯಶುದ್ಧ ವೀರ
ಶೈವ ಮತಾನುಗಾ ಬ್ರಾಹ್ಮಣಾದಯೊ "ನತತ್ರ ಜಾತಿಭೆದೊವಸ್ತೀತ್ಯಾದಿ'
ವಚನ ಪ್ರಮಾಣೈಕಶರಣಾ ಅಭೇವ ಬುದ್ಧ್ಯಾಭೋಜನಾದಿಕ ಸಂಬಂಧಂ
ಕುರ್ವನ್ತಿ ತೆ "ಶಿವೊಕ್ತಾಂ ಜಾತಿಮರ್ಯಾದಾಂ ಯೊತೀತ್ಯ ಭುವಿವರ್ತತೆ,
ಸ ಚಂಡಾಲ ಇತಿಜ್ಞೆಯಃ ಸರ್ವಕರ್ಮಬಹಿಷ್ಕೃತಃ" ಇತಿ ವಚನಾವ
ಗತ ಪ್ರತ್ಯವಾಯುಬದ್ಧಾ ದೇಹಾನ್ತೆ ನರಕಯಾತನಾಮನು ಭವಂತೀತಿ
ದಿಕ್" ನ ತತ್ರಜಾತಿಭೇದೊವಸ್ತೀತ್ಯಾದಿ ಪ್ರಮಾಣವಚನಗಳು, ಲಿಂಗಾಂ
ಗಸಾಮರಸ್ಯರೂಪ ಜೀವನ್ಮುಕ್ತಿಸಂಪನ್ನರೂ ಶಿವಾರೂಢರೂ ಆದ ವೀರ
ಶೈವರಲ್ಲಿಯೇ ಜಾತಿಭೇದವನ್ನು ಮಾಡಕೂಡದೆಂದು ಹೇಳುತ್ತವೆ. ಆದು

ದರಿಂದ ಶಿವಜ್ಞಾನಹೀನರೂ ಸ್ವಮತೋಕ್ತಾಚಾರ ವಿಚಾರರಹಿತರೂ ಸ್ವಗುರುವಿನಿಂದ ಶಿವದೀಕ್ಷೆಯನ್ನು ಹೊಂದದವರೂ ಸ್ವಾಪಕೃಷ್ಟಜಾತಿಯವರೂ ಆದ ಲಿಂಗಧಾರಿಗಳ ಕೂಡ ಸಂಪ್ರದಾಯಶುದ್ಧರಾದ ವೀರಶೈವರು ನ ತತ್ರೇತ್ಯಾದಿ ವಚನಗಳ ಯಥಾರ್ಥವನ್ನು ತಿಳಿಯದವರಾಗಿ ಸಹಪಂಕ್ತಿ ಭೋಜನಾದಿ ಸಂಬಂಧವನ್ನು ಮಾಡಬಾರದು. ಮಾಡಿದುದಾದರೆ, ಅವರು ಪ್ರತ್ಯವಾಯ ಬದ್ಧರಾಗುವರು ಅರ್ಥಾತ್ ದೋಷದೂಷಿತರಾಗುವರು. ಎಂದು ವೀರಶೈವಧರ್ಮಶಿರೋಮಣಿ ಗ್ರಂಥಕಾರರೂ ಅದರ ವ್ಯಾಖ್ಯಾನಕಾರರೂ ಆದ ಷಡಕ್ಷರ ಮಂತ್ರಿಗಳು ತಮ್ಮ ಅಭಿಪ್ರಾಯವನ್ನು ಈ ವಿಷಯದಲ್ಲಿ ಸ್ಪಷ್ಟ ಹೇಳಿರುವರು.

ಉಪಲಬ್ಧಗಳಾದ ಆಗಮ, ಪುರಾಣ, ಸಿದ್ಧಾಂತಶಿಖಾಮಣಿ ಮೊದಲಾದ ಅನೇಕ ವೀರಶೈವಸಿದ್ಧಾಂತ ಪ್ರತಿಪಾದಕ ಗ್ರಂಥಗಳ ವಿಷಯವಿಮರ್ಶೆಯಿಂದ, ಗುರುಕೃತದಿಕ್ಷೋಪದೇಶರಹಿತರಾಗಿ ಬರೇ ಲಿಂಗಧಾರಿಗಳಾದವರಲ್ಲಿ ವರ್ಣಾಶ್ರಮಗಳು ಉಂಟೇ ಉಂಟೆಂದೂ ಶ್ರೀಗುರುವಿನಿಂದ ಶಿವದೀಕ್ಷಾಸಂಸ್ಕಾರಪೂರ್ವಕ ಉಪದೇಶವನ್ನು ಹೊಂದಿ, ಲಿಂಗಾಂಗಸಾಮರಸ್ಯರೂಪ ಮೋಕ್ಷಮಾರ್ಗದ ಸೋಪಾನಗಳಂತಿರುವ ಭಕ್ತಾದಿಷಟ್ಸ್ಥಲಗಳನ್ನು ಆಚರಿಸುತ್ತಿರುವ ಸಾಧಕತಮರಾದ ವೀರಶೈವರ ಭಕ್ತಸ್ಥಲದಲ್ಲಿ ಅಪ್ರಾಕೃತಗಳಾದ ವರ್ಣಾಶ್ರಮಗಳು ಒಡೆದುತೋರುತ್ತವೆ. ಮುಂದೆ ಕ್ರಮೇಣ ಅವು ಶಿಥಿಲಗಳಾಗುತ್ತ ಶಿವಾರೂಢದಶೆಯಲ್ಲಿ ಲುಪ್ತಪ್ರಾಯಗಳಂತೆ ತೋರುತ್ತವೆ ಎಂದು ತಿಳಿಯುತ್ತದೆ. ಅದು ಕಾರಣ ಶಿವದೀಕ್ಷಾಸಂಪನ್ನರಾದ ವೀರಶೈವರಲ್ಲಿ ಅಪ್ರಾಕೃತ ವರ್ಣಾಶ್ರಮಗಳುಂಟೆಂದು ಸಿದ್ಧವಾಗುವದು.



# ನಿನ್ನನ್ನು ನೀನು ಅರಿ.

(ಲೇಖಕ:— ಶ್ರೀ ಮಡಿವಾಳಪ್ಪ ಸಾಸನೂರ ಮು. ಕಲಕೇರಿ ಜಿ. ವಿಜಾಪುರ)

———:○:———

ಸತ್ಯವಾದ ಧರ್ಮವೆಂಬುದು ಅನುಭವಾತ್ಮಕವಾಗಿದೆ. ಅನುಭವವೇ ಅದರ ಅಡಿಗಲ್ಲು ಹೊರತು ಬರಿ ಮಾತುಗಳಾಗಲಿ ಕಲ್ಪನೆಗಳಾಗಲಿ ಅಲ್ಲ. ಯಾಕಂದರೆ ಬರಿ ಮಾತುಗಳ ಅಥವಾ ಸಿದ್ಧಾಂತಗಳ ಕೊನೆಯೇ ಧರ್ಮದ ಮೊದಲು. ಸ್ವಭಾವವನ್ನು ಮಾರ್ಪಡಿಸಿಕೊಂಡು ಆತ್ಮನ ದೈವಿಕ ಸ್ವರೂಪವನ್ನು ಬೆಳಕಿಗೆ ತಂದು ಕೊಡುವದೂ ಅಧ್ಯಾತ್ಮಿಕ ಕ್ಷೇತ್ರದಲ್ಲಿನ ಇರುವಿಕೆಯನ್ನು ನಮ್ಮ ಅಳವಿನಲ್ಲಿ ತಂದುಕೊಡುವದೂ ಅದರ ಸಾಧ್ಯವಾಗಿದೆ. ಆತ್ಯಂತಿಕ ಪರಿಪೂರ್ಣ ಸತ್ಯದ ಅರಿವನ್ನು ಮಾಡಿಕೊಟ್ಟು ನಮ್ಮ ಪ್ರತಿದಿನದ ಕೆಲಸಗಳೆಲ್ಲವುಗಳಲ್ಲಿಯೂ ದೈವಿಕತೆಯನ್ನು ತೋರಿಸುವದು ಅದರ ಗುರಿ.

ಅಧ್ಯಾತ್ಮಿಕತೆಗೆ ಧರ್ಮಶಾಸ್ತ್ರಗಳನ್ನೋದುವದಾಗಲಿ, ವಾದವಿವಾದವಾಗಲಿ ಉಪಯೋಗದ್ದಲ್ಲ. ಅದಕ್ಕೆ ಬೇಕಾದದ್ದು ನಿರ್ವಿಕಾರ ಸತ್ಯದ ಅರಿವು. ಹಿಂದುಸ್ತಾನದಲ್ಲಿ ನಾವು ಯಾವನೊಬ್ಬನಿಗೆ ಧಾರ್ಮಿಕನೆಂದು ಕರೆಯುವದು, ಅವನು ಕೆಲವು ಪುಸ್ತಕಗಳನ್ನು ಬರೆದಿರುವನೆಂದಾಗಲಿ ಅಥವಾ ಒಳ್ಳೇ ಮಾತುಗಾರನಿರುವನೆಂದಾಗಲಿ ಅಲ್ಲ ಆದರೆ ಅವನು ದೈವಿಕಶಕ್ತಿಗಳನ್ನು ತನ್ನ ಮಾತುಗಳಲ್ಲಿಯೂ ಮಾಡುವಿಕೆಯಲ್ಲಿಯೂ ಹೊರಗೆಡಹುತ್ತಾನೆ. ತೀರ ನಿರಕ್ಷರ ಕುಕ್ಷಿಯಾದೊಬ್ಬನು ಶಾಲೆ ಅಥವಾ ವಿಶ್ವವಿದ್ಯಾಲಯುಗಳಿಗೆ ಹೋಗದೆ ಯಾವದೊಂದು ಧರ್ಮಶಾಸ್ತ್ರವನ್ನು ಓದದೆ ಆಧ್ಯಾತ್ಮಿಕ ಪರಿಪೂರ್ಣತೆಯ ಕಡೆಯ ಮೆಟ್ಟಲನ್ನು ಮುಟ್ಟಬಲ್ಲನು. ಅದಾಗುವ ಬಗೆಯೆಂದರೆ ತನ್ನ ಸ್ವರೂಪವನ್ನು ತನಗೂ ವಿಶ್ವಕ್ಕೂ ಇರುವ ಸಂಬಂಧವನ್ನೂ ಅರಿತುಕೊಂಡು ಪಾಶವೀವೃತ್ತಿಯನ್ನು ಜಯಿಸುವದು. ಎಂದರೆ ತನ್ನಲ್ಲಿಯೇ ಇದ್ದ ಸಚ್ಚಿದಾನಂದರೂಪವನ್ನು ತಿಳಿಯುವದು. ಎಲ್ಲ ಧರ್ಮಗ್ರಂಥಗಳನ್ನೂ, ತತ್ವದರ್ಶಗಳನ್ನೂ, ಶಾಸ್ತ್ರಗಳನ್ನೂ ಕಲಿತವನು ಮೀರಿದ ಪಂಡಿತನೆಂದು ಜನರಲ್ಲಿ ಮೆರೆಯಬಹುದು. ಆದರೂ ಆ ಆತ್ಯಂತಿಕ ಸತ್ಯವನ್ನು ತಿಳಿದು ಅದರೊಡನೆ ಒಂದಾಗಿ ಎಲ್ಲೆಲ್ಲಿಯೂ ಈಶ್ವರನನ್ನೇ ಕಾಣುವವನಾಗಿ ಈ ಪ್ರಪಂಚದಲ್ಲಿ ಆ ದೇವನ ಪ್ರತಿರೂಪವೆಂದೇ ಇನ್ನು ಬಿಡುವ ನಿರಕ್ಷರ ಕುಕ್ಷಿಗಿಂತ ಮೇಲು ಹರಿಯಲಾರನು.

ಇದಕ್ಕೆ ಉತ್ತಮ ಉದಾಹರಣೆ ಎಂದರೆ ರಾಮಕೃಷ್ಣಪರಮಹಂಸ. ಅವನೆಂದಿಗೂ ಸಾಲೆಗೆ ಹೋಗುತ್ತಿರಲಿಲ್ಲ. ಎಂದೂ ಧರ್ಮಗ್ರಂಥಗಳನ್ನಾಗಲಿ, ದರ್ಶನಗಳನ್ನಾಗಲಿ, ಭೌತಿಕಶಾಸ್ತ್ರಗಳನ್ನಾಗಲಿ, ಅಭ್ಯಸಿಸಲಿಲ್ಲ. ಆದರೂ ಆತ್ಮಿಕಬಲದಿಂದ ದೇವರನ್ನು ಕಾಣಿಸಿಕೊಂಡು ಪೂರ್ಣತೆ ಪಡೆದಿದ್ದನು. ಅವನು ತತ್ವಜ್ಞಾನದ ಅಥವಾ ವಿಜ್ಞಾನದ ಅತ್ಯಂತ ಗಹನವಾದ ಸಿದ್ಧಾಂತಗಳನ್ನು ಕೂಡ ಚಿಕ್ಕಮಕ್ಕಳಿಗೆ ತಿಳಿಯುವ ತಿಳಿವಿನಿಂದ ಹೇಳುತ್ತಿದ್ದನು. ಬಹಳ ತೊಡಕುಳ್ಳ ಪ್ರಶ್ನಗಳನ್ನು ಸಹ ಕೇಳುವವರ ಸಂಶಯಗಳೆಲ್ಲವೂ ದೂರಾಗುವ ಹಾಗೆ ಉತ್ತಮರೀತಿಯಿಂದ ಉತ್ತರಿಸುವ ಬಲವುಳ್ಳವನಾಗಿದ್ದನು. ಇದೆಲ್ಲವನ್ನೂ ಅವನು ಪುಸ್ತಕಗಳನ್ನೋದದೆ ಹೇಗೆ ಮಾಡಬಲ್ಲವನಾಗಿದ್ದನು ? ವಸ್ತುಗಳೆಲ್ಲವುಗಳ ನಿಜರೂಪವನ್ನು ಒಳಗಣ್ಣಿನಿಂದ ನೋಡಬಲ್ಲವನಾಗಿದ್ದನು. ಅವನ ಆಧ್ಯಾತ್ಮಿಕ ಚಕ್ಷುವು ತೆರೆದಿತ್ತು. ಸಾಮಾನ್ಯ ಜನರೆದುರಿನಲ್ಲಿ ಜೋತಾಡುತ್ತ ಇಂದ್ರಿಯ ಜ್ಞಾನದಾಚೆಗಿನದನ್ನು ತಿಳಿಯುವದನ್ನಸಾಧ್ಯವಾಗಿ ಮಾಡುವಂಥ ಅಜ್ಞಾನ ಪಟದೊಳಗಿಂದ ಅವನ ದೃಷ್ಟಿಯು ಮುಂದೆ ಹರಿಯುತ್ತಿತ್ತು.

ಆತ್ಯಂತಿಕ ಸತ್ಯವನ್ನರಿತ ಆತ್ಮನಲ್ಲಿಯೇ ಇಂಥ ಶಕ್ತಿಗಳು ತಲೆದೋರುವವು. ಆಗ ಒಮ್ಮೆಲೆ ಸ್ವತಂತ್ರವಾಗಿ ಹೆಚ್ಚಿನ ಸತ್ಯಗಳನ್ನರಿಯುವಂಥ ಶಕ್ತಿಯೊಂದು (ಇಂದ್ರಿಯ ಶಕ್ತಿಗಳಿಗೆ ಆಧೀನವಾಗದ್ದು) ತಲೆದೋರುವದು. ಈ ಜ್ಞಾನಚಕ್ಷುವು ಪ್ರತಿಯೊಬ್ಬರಿಗೂ ಉಂಟು. ಆದರೆ ಅದು ಲಕ್ಷಕ್ಕೊಬ್ಬನಲ್ಲಿ ತೆರೆದಿರುವದು. ಅವರೇ ಯೋಗಿಗಳು, ಶಿವಯೋಗಿಗಳು. ಬಹುತರ ಜನರಲ್ಲಿ ಅದು ಅಜ್ಞಾನವೆಂಬ ದಪ್ಪನ್ನ ಪರದೆಯಿಂದ ಮುಚ್ಚಲ್ಪಟ್ಟು ಇನ್ನೂ ಆರಂಭ ಸ್ಥಿತಿಯಲ್ಲಿರುತ್ತದೆ. ಯೋಗಾಭ್ಯಾಸದಿಂದ ಅದು ತೆರೆದೊಡನೆಯೇ ಉಚ್ಚತರವಾದ ಅದೃಶ್ಯಸೃಷ್ಟಿಯ ಹಾಗು ಅಧ್ಯಾತ್ಮಸೃಷ್ಟಿಯ-ಲ್ಲಿನ ಪ್ರತಿಯೊಂದು ಪದಾರ್ಥದ ಅರಿವು ಅವನಿಗಾಗುತ್ತಿದೆ. ಅವನು ಹೇಳಿದ್ದೆಲ್ಲವು ಪ್ರತಿಯೊಂದು ಯುಗದ ಹಾಗು ಪ್ರತಿಯೊಂದು ದೇಶದ ಮಹಾತ್ಮರಾದ ಸತ್ಯದೃಷ್ಟೃಗಳ ಮಾತುಗಳನ್ನು ಹೋಲುತ್ತದೆ. ಅವನು ಪುಸ್ತಕಗಳನ್ನೋದುವದಿಲ್ಲ. ಹಾಗೆ ಮಾಡುವ ಆಗತ್ಯವೂ ಅವನಿಗಿಲ್ಲ. ಯಾಕಂದರೆ ಮಾನವೀ ಬುದ್ಧಿಗೆ ನಿಲುಕುವಂತಹದೆಲ್ಲವೂ ಅವನಿಗೆ ಗೊತ್ತಿರುತ್ತದೆ. ಯಾವದೊಂದು ಗ್ರಂಥವನ್ನೋದದೆ ಅದರ ಮಥಿತಾರ್ಥವನ್ನು ತಿಳಿಯಬಲ್ಲನು. ಮಾನವೀ ಮನಸ್ಸು ಶಬ್ದರೂಪವಾಗಿ

ಹೇಳುವದೆಲ್ಲವನ್ನೂ ಅವನು ತಿಳಿದಿರುವನು. ವಿಚಾರಗಳಿಗೆ ಸಿಲುಕದಂಥ ಶಬ್ದಗಳಿಂದ ಹೇಳಲಿಕ್ಕೆ ಬಾರದಂತಹದನ್ನು ಅವನು ಅರಿತಿರುವನು. ಹ್ಯಾಗೂ ಅವನು ಇಂದ್ರಿಯ ಜ್ಞಾನದ ಎಲ್ಲೆಯೊಳಗೆ ಇಳಿಯಲಾಶಿಸು ವದಿಲ್ಲ. ಹಾಗು ಸಾಂಬಂಧಿಕ ಸತ್ಯ (*Relative reality*) ವನ್ನು ಬುದ್ಧಿಬಲದಿಂದ ತಿಳಿಯುವಷ್ಟರಿಂದಲೇ ತೃಪ್ತನಾಗುವದಿಲ್ಲ. ವಿಶ್ವದ (ದೃಶ್ಯ ಜಗತ್ತು) ಮೊದಲು ಕೊನೆಯಾದ ಆ ಪೂರ್ಣತತ್ವದ ನಾಡನ್ನು ಸೇರುವದೇ ಅವನ ಹೆಗ್ಗುರಿ. ಈ ರೀತಿ ಸತ್ತತ್ವ ಜ್ಞಾನಕ್ಕಾಗಿ ಹೆಣಗಾಡುತ್ತಿರುವ ಅವನು ತನಗಡ್ಡಿಮಾಡುವ ಸಕಲ ದೃಶ್ಯ ಜಗತ್ತಿನ ಜ್ಞಾನವನ್ನು ತನ್ನ ಆತ್ಮಸ್ವರೂಪಜ್ಞಾನವೆಂಬ ಧ್ಯೇಯದ ಕಡೆಗೆ ಸಾಗುತ್ತಿರುವಾಗ ಮಾಡಿ ಕೊಳುವನು.

ನಮ್ಮ ನಿಜವಾದ ಸ್ವರೂಪನಾದ ಆತ್ಮನು ಸರ್ವಜ್ಞನಿದ್ದಾನೆ. ಅವನು ನಮ್ಮೊಳಗಿನ ಅನಂತ ಜ್ಞಾನದ ಉಗಮಸ್ಥಾನವಾಗಿದ್ದಾನೆ. ದೇಶಕಾಲ ಪರಿಸ್ಥಿತಿಗಳಿಂದ ಬದ್ಧಿತನಾಗಿದ್ದುದರಿಂದ ನಾವು ನಮ್ಮಲ್ಲಿನ ಶಕ್ತಿಗಳೆಲ್ಲವನ್ನೂ ನಿಜನಾಗಿ ಹೊರಗೆಡವಲಾರೆವು. ಈ ಬಂಧನಗಳನ್ನು ಹೆಚ್ಚು ಹೆಚ್ಚು ಬಿಸು ಟಿದಂತೆ ಸರ್ವಜ್ಞತ್ವ ಮತ್ತು ಸರ್ವಶಕ್ತಿತ್ವಗಳೆಂಬ ದೈವೀಗುಣಗಳು ಹೆಚ್ಚು ಹೆಚ್ಚು ತಲೆದೋರುವವು. ಅದಕ್ಕೆ ವಿರುದ್ಧವಾಗಿ ದೃಶ್ಯ ಜಗತ್ತಿನ ಮೇಲೆ ಯೇ ನಮ್ಮಮನಸ್ಸನ್ನಿಟ್ಟು ಇಂದ್ರಿಯ ಜ್ಞಾನವನ್ನು ಅವಲಂಬಿಸಿರುವ ಜ್ಞಾನವನ್ನೇ ದೊರಕಿಸುವದರಲ್ಲಿ ಬಲವನ್ನು ವೆಚ್ಚಮಾಡುತ್ತ ಇದ್ದು ಬಿಟ್ಟರೆ ಈ ದೃಶ್ಯ ಜಗತ್ತಿನ ಜ್ಞಾನದ ಕೊನೆಯನ್ನು ನಾವು ಎಂದಾದರು ಮುಟ್ಟು ವೆವೋ? ಎಂದಾದರು ಈ ವಿಶ್ವದ ಸತ್ಯಸ್ವರೂಪವನ್ನು ಅರಿಯಲು ಸಮ ರ್ಥರಾಗುವೆವೋ? ಇಲ್ಲ. ಯಾಕಂದರೆ ಇಂದ್ರಿಯಗಳು, ಇಂದ್ರಿಯ ವಿಷ ಯಗಳ ಪೊಳ್ಳು ಜ್ಞಾನವನ್ನು ದೊರಕಿಸುವ ಆಚೆಗೆ ನಮ್ಮನ್ನೊಯ್ಯುವ ದಿಲ್ಲ. ಅದೃಶ್ಯ ಜಗತ್ತಿನಲ್ಲಿ ಆಳವಾಗಿ ಹೋಗಬೇಕಾದರೆ ನಾವು ಉಪಕ ರಣಗಳನ್ನು ಉಪಯೋಗಿಸುತ್ತೇವೆ. ಅವುಗಳ ಬೆಂಬಲದಿಂದ ಸ್ವಲ್ಪ ದೂ ರಹೋಗಬಲ್ಲೆವು. ಆದರೆ ಈ ಉಪಕರಣಗಳಿಗೂ ಎಲ್ಲೆಯುಂಟು. ಒಂದು ಬಗೆಯ ಸಾಧನವನ್ನು ಉಪಯೋಗಿಸಿದನಂತರ ಆ ಪರಿಣಾಮಗಳಿಂದ ನಮಗೆ ತೃಪ್ತಿಯಾಗದು. ಮತ್ತು ಹೆಚ್ಚು ಹೆಚ್ಚಿನದಕ್ಕಾಗಿ ಶೋಧಿಸಹ ತ್ತವೆವು. ಪೂರ್ಣತತ್ವದ ಜ್ಞಾನದ ಹಾದಿಯಲ್ಲಿ ಇಂದ್ರಿಯ ಶಕ್ತಿಗಳು

ಎಷ್ಟು ದುರ್ಬಲವಾಗಿರುತ್ತವೆಯೆಂಬದು ತಿಳಿದು ಹೆಣಗಾಡಹತ್ತುತ್ತೇವೆ. ಕಟ್ಟಕಡೆಗೆ ಎಷ್ಟು ಸೂಕ್ಷ್ಮವಾಗಿದ್ದ ಉಪಕರಣವು ಕೂಡ ಇಂದ್ರಿಯಜ್ಞಾನ ಬುದ್ಧಿ ಹಾಗೂ ವಿಚಾರಗಳಿಗೆ ಮೀರಿದ್ದನ್ನು ತಿಳಿಯುವದಕ್ಕೆ ಸಹಾಯ ಕಾರಿಯಾಗಲಾರವೆಂದು ತಿಳಿದುಕೊಳ್ಳುವನು.

ಈ ರೀತಿ ನಮ್ಮ ಕಾಲಬಲಗಳನ್ನು ದೃಶ್ಯ ಜಗತ್ತನ್ನಭ್ಯಯಿಸುವ ದರಲ್ಲಿಯೇ ಕಳೆದು ಬಿಟ್ಟರೆ ನಾವು ಯಾವುದೊಂದು ತೃಪ್ತಿಕರವಾದ ಪರಿ ಣಾಮವನ್ನು ನೋಡಲಾರೆವು. ಅಥವಾ ಪದಾರ್ಥಗಳ ನಿಜರೂಪವನ್ನ ರಿಯಲಾರೆವು. ಇಂದು ಕೆಲವು ಸಾಧನಗಳ ಸಹಾಯದಿಂದ ದೊರಕಿ ಸಿದ ಜ್ಞಾನವು ನಾಳೆ ಬೇರೆ ಹೆಚ್ಚಿನ ಸಾಧನಗಳು ದೊರೆತರೆ ಅದೇ ಅಜ್ಞಾನವಾಗುವದು. ಹೋದ ವರುಷ ಸರಿಯಾದದ್ದು ಇಂದು ಆಗಲೇ ಸುಳ್ಳು ಆಗಿದೆ. ಈ ಶತಮಾನದ ಶೋಧನಗಳು ಹೊಸ ಶತಮಾನದ ಹೊಸ ಶೋಧಗಳಿಂದ ಸುಳ್ಳಾಗಿ ಹೋಗುವವು. ಆದ್ದರಿಂದ ಮನುಷ್ಯ ಜೀವನವು ದೃಶ್ಯ ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳ ಸತ್ಯಜ್ಞಾನವನ್ನು ದೊರಕಿಸಲಿಕ್ಕೆ ಯತ್ನಿಸಲು ಕೂಡ ಸಣ್ಣದಾಗಿದೆ. ಜಗತ್ತಿನಲ್ಲಿಯ ವಿವಿ ಧತೆಯನ್ನೂ, ಜ್ಞಾನಸಂಪಾದನೆಗೆ ಮೊದಲು ತಿಳಿಯಬೇಕಾದ ವಸ್ತು ಗಳ ಅಸಂಖ್ಯತೆಯನ್ನೂ ವಿಚಾರಿಸಿದರೆ ಲಕ್ಷೋಪಲಕ್ಷ ಜೀವನಗಳು ಸಾಲವು. ಯಾವನೊಬ್ಬ ಮನುಷ್ಯನು ಲಕ್ಷೋಪಲಕ್ಷ ದಿನಗಳ ವರೆಗೆ ಬಾಳಿಯೂ ಆ ದೊಡ್ಡ ಕಾಲದಲ್ಲೆಲ್ಲ ತನ್ನ ಇಂದ್ರಿಯಗಳೆಲ್ಲವನ್ನೂ ಅಂಕೆ ಯಲ್ಲಿಟ್ಟುಕೊಂಡರೂ ಪ್ರಕೃತಿಯನ್ನಭ್ಯಸಿಸುವದರಲ್ಲಿಯೂ ದೃಶ್ಯ ಜಗತ್ತಿನ ವಸ್ತುಗಳ ಸೂಕ್ಷ್ಮತಮಭೇದಗಳನ್ನು ತಿಳಿಯುವದಕ್ಕಾಗಿಯೇ ಕಾಲ ಕಳೆ ದರು. ಆ ಕಾಲ ತೀರುವದರಲ್ಲಿ ಆ ಶೋಧವು ಮುಗಿಯುವದೇ? ನಿಜ ವಾಗಿಯೂ ಇಲ್ಲ. ಅವನಿಗಿನ್ನು ಹೆಚ್ಚು ಕಾಲವೂ, ಸೂಕ್ಷ್ಮತರಗ್ರಹಣ ಶಕ್ತಿಯೂ, ತೀಕ್ಷ್ಣತರ ಬುದ್ಧಿಯೂ, ಬೇಕಾಗುವವು. ಆ ಮೇಲೆ ಅವನು ಅವಿರತ ಶೋಧನೆಯಲ್ಲಿಯೇ ಕಾಲ ಕಳೆದ ನಂತರ ಸರ್. ಐಝಾಕ್ ನ್ಯೂಟನ್ನನು ಅಂದಂತೆ "ನಾನು ಜ್ಞಾನೋದಧಿಯ ದಂಡೆಯ ಮೇಲಿನ ಹರಳುಗಳನ್ನು ಮಾತ್ರ ಕಲೆ ಹಾಕಿದ್ದೇನೆಂದು ಅನ್ನಬಹುದು. ಇಂಥ ಬುದ್ಧಿಸಾಗರನಾದ ನ್ಯೂಟನ್ನನು ಕೂಡ ಆ ಜ್ಞಾನೋದಧಿಯ ನೀರ ದಂಡೆಯನ್ನು ಕೂಡ ಮುಟ್ಟಲಾರದೆ ಹೋದರೆ ಸ್ವಲ್ಪ ವರ್ಷಗಳಲ್ಲಿಯೇ ಆ ಸಮುದ್ರವನ್ನು ನಾವು ಹೇಗೆ ದಾಟಬಲ್ಲೆವು? ಸಾವಿರಾರು ಸಂತತಿ

ಗಳು ಹೋಗಿವೆ. ಇನ್ನೂ ಸಾವಿರಾರು ಹೋಗುವವು. ಆದರೂ ವಿಶ್ವದ ಲ್ಲಿಯ ದೃಶ್ಯ ಜಗತ್ತಿನ ವಿಷಯವಾದ ಜ್ಞಾನವು ಅಪೂರ್ಣವಾಗಿಯೇ ಉಳಿಯುವದು. ಒಂದೊಂದು ಪರದೆಗಳನ್ನು ತೆಗೆಯುತ್ತ ಹೋದರೂ ಮತ್ತೆಷ್ಟೋ ಉಳಿಯುವವು. ಇದೆಲ್ಲವನ್ನೂ "ಜ್ಞಾನದ ಶಾಖೆಗಳು ಅಸಂಖ್ಯವಾಗಿವೆ. ಆದರೆ ಕಾಲವು ಸ್ವಲ್ಪ. ಹಾದಿಯ ವಿಘ್ನಗಳು ಬಹಳ. ಆದುದರಿಂದ ಜ್ಞಾನಿಗಳಾದವರು ಉಚ್ಚತಮವಾದದ್ದನ್ನು ತಿಳಿಯಲಿಕ್ಕೆ ಹೆಣಗುತ್ತಾರೆ,, ಎಂದು ಹೇಳಿದ ಹಿಂದೂದೇಶದ ಜ್ಞಾನಿಗಳೂ ಅರಿತಿದ್ದರು.

ಉಚ್ಚತಮವಾದ ಜ್ಞಾನವಾವುದು ಎಂಬದೊಂದು ಪ್ರಶ್ನವು ಇಲ್ಲಿ ಬರುವದು. ಈ ಪ್ರಶ್ನವು ಇತಿಹಾಸದಷ್ಟೇ ಪ್ರಾಚೀನವಾಗಿದೆ. ಇದು ಎಲ್ಲ ನಾಡುಗಳ ಹಾಗು ಎಲ್ಲ ಯುಗಗಳ ತತ್ವಜ್ಞಾನಿಗಳನ್ನೂ, ವೈಜ್ಞಾನಿಕರನ್ನೂ, ಪಂಡಿತರನ್ನೂ, ಬೆರಗು ಮಾಡಿದೆ. ಕೆಲವರು ಅದಕ್ಕೆ ಉತ್ತರವನ್ನು ದೊರಕಿಸಿದ್ದಾರೆ. ಬೇರೆ ಕೆಲವರು ದೊರಕಿಸಿಲ್ಲ. ಡೆಲ್ಫಿಯಲ್ಲಿಯ ಆಕಾಶವಾಣಿಯನ್ನು ಕೇಳಹೋದಾಗ ಸಾಕ್ರೇಟೀಸನು ಇದೇ ಪ್ರಶ್ನವನ್ನೇ ಎತ್ತಿದನು. 'ಎಲ್ಲ ಜ್ಞಾನಗಳಲ್ಲಿ ಯಾವದು ಹೆಚ್ಚಿನದು? ಅದಕ್ಕುತ್ತರವಾಗಿ 'ನಿನ್ನನ್ನು ತಿಳಿ,, ಎಂದು ಶಬ್ದವಾಯಿತು.

ಒಂದು ಉಪನಿಷತ್ತಿನಲ್ಲಿ ಈ ರೀತಿ ಓದುತ್ತೇವೆ "ಒಬ್ಬ ವಿಚಾರಶೀಲನು ಎಲ್ಲ ತತ್ವಜ್ಞಾನಗಳನ್ನೂ ಆ ಕಾಲಕ್ಕೆ ಗೊತ್ತಿದ್ದ ಎಲ್ಲ ಶಾಸ್ತ್ರಗಳನ್ನೂ ಕಲಿತು, ಒಬ್ಬ ಸತ್ಯದೃಷ್ಟ್ಯವಿನ ಬಳಿ ಬಂದು ಅಂದನು---ಸ್ವಾಮಿ ಪುಸ್ತಕಗಳಿಂದ ಅಥವಾ ದೃಶ್ಯಜಗತ್ತಿನ ಅಧ್ಯಯನದಿಂದ ದೊರಕಿಸುವ ಜ್ಞಾನವು ನನಗೆ ಸಾಕಾಗಿದೆ. ಅದು ನನಗೇನು ತೃಪ್ತಿಯನ್ನೇ ಕೊಡುವದಿಲ್ಲ. ಯಾಕಂದರೆ ವಿಜ್ಞಾನವು ಅಂತಿಮ ಸತ್ಯವನ್ನು ತೋರಿಸಲಾರದು. ಉಚ್ಚತಮವಾದದನ್ನು ತಿಳಿಯಬೇಕೆಂದು ನನ್ನ ಹಂಬಲ ಯಾವದನ್ನು ತಿಳಿಯುವದರಿಂದ ವಿಶ್ವದ ಸತ್ತತ್ವವನ್ನು ತಿಳಿಯಬಹುದೋ ಅಂತಹ ಜ್ಞಾನವುಂಟೋ? ಆದಕ್ಕೆ ಆ ಯೋಗಿಯು 'ಹೌದು' ಉಂಟು. ಯಾವದನ್ನರಿಯುವದರಿಂದ ವಿಶ್ವದೊಳಗಣ ಎಲ್ಲ ಪದಾರ್ಥಗಳ ಸತ್ಯಸ್ವರೂಪವು ತಿಳಿಯುವದೋ ಅದೇ ಹೆಚ್ಚಿನ ಜ್ಞಾನವು. ನಿನ್ನನ್ನು ತಿಳಿದುಕೋ. ನಿನ್ನ ಆತ್ಮಸ್ವರೂಪವನ್ನು ನೀನು ತಿಳಿಯಬಲ್ಲೆಯಾದರೆ ವಿಶ್ವದ ನಿಜರೂಪವು ತಿಳಿಯುವದು. ನಿನ್ನ ಸ್ವರೂಪದಲ್ಲಿಯೇ ಎಲ್ಲ ದೃಶ್ಯ ಜಗತ್ತಿನ

ಅನಂತ ಉಗಮವಾದ ಶಾಶ್ವತ ಸತ್ಯವನ್ನು ದೊರಕಿಸುವಿ. ಇದನ್ನರಿತರೆ ದೇವರನ್ನೂ, ಅವನ ಸೃಷ್ಟಿಯನ್ನೂ ತಿಳಿಯುವಿ." ನೀರಿನ ಒಂದು ಹನಿಯ ರಸಾಯನಿಕ ಗುಣಗಳನ್ನರಿಯುವದರಿಂದ, ಎಲ್ಲೆಲ್ಲಿಯೂ ಕಾಣುವ ನೀರಿನ ಗುಣಗಳನ್ನು ತಿಳಿಯುವಂತೆ, ನಾವು ಯಾರು, ಏನು, ಎಂಬದರ ಸತ್ಯಜ್ಞಾನವನ್ನು ಮಾಡಿಕೊಂಡರೆ ಅಂತಿಮ ಸತ್ಯದ ಜ್ಞಾನವು ನಮಗಾಗುವದು. ಮನುಷ್ಯನೆಂದರೆ ವಿಶ್ವದ ಒಂದು ಸಣ್ಣ ಪ್ರಮಾಣದ ಮೇಲಿನ ಪ್ರತಿಕೃತಿ ಇರುತ್ತದೆ. ಬ್ರಹ್ಮಾಂಡದಲ್ಲಿದ್ದದ್ದೇ ಪಿಂಡಾಂಡದಲ್ಲುಂಟು. ಆದ್ದರಿಂದ ಒಬ್ಬನ ಸ್ವಸ್ವರೂಪ ಜ್ಞಾನವೇ ಎಲ್ಲ ಜ್ಞಾನಗಳಲ್ಲಿ ಹೆಚ್ಚಿನದು. ನಮ್ಮ ನಿಜವಾದ ರೂಪವು ದೈವಿಕವೂ, ಈಶ್ವರನೊಡನೆ ಒಂದಾದದ್ದೂ ಇರುತ್ತದೆ. ಮೊದಮೊದಲು ಇದು ಪೊಳ್ಳು ತರ್ಕವೆಂದು ತೋರಬಹುದು. ಆದರೆ ಅಂತಿಮ ಸತ್ಯವನ್ನು ನಾವು ಹೆಚ್ಚು ಹೆಚ್ಚು ಸಮೀಪಿಸಿದಂತೆ, "ಅದು ಬರಿ ಊಹೆಯಲ್ಲ, ನಿಜವಾದ ಸ್ಥಿತಿಯೇ" ನಾವು ಈಗ ಅಜ್ಞಾನ ನಿದ್ರೆಯಲ್ಲಿ ಕನಸು ಕಾಣುತ್ತಿದ್ದು ಈ ಅಥವಾ ಆ ಮನುಷ್ಯನೆಂದು ತಿಳಿದುಕೊಳ್ಳಹತ್ತಿದ್ದೇವೆ. ಎಂದು ನಮಗೆ ಹೊಳೆಯುತ್ತದೆ. ಕನಸಿನಲ್ಲಿಯ ಅನುಭವವು ತರುವಾಯ ಬೆಲೆ ಹೀನವಾಗಿ ತೋರುವಂತೆ, ಈ ಅಜ್ಞಾನನಿದ್ರೆಯಿಂದ ಎಚ್ಚೆತ್ತ ಮೇಲೆ ನಾವು ಈ ರೀತಿ ಮಹತ್ವ ಕೊಡುವ ದೃಶ್ಯ ಜಗತ್ತು ಮಹತ್ವದ್ದಲ್ಲವೆಂದು ತಿಳಿಯುತ್ತದೆ. ಎಲ್ಲ ಶಾಸ್ತ್ರಗಳಲ್ಲಿಯ ವಿಧವಿಧವಾದ ಶೋಧನವು ಈ ಆತ್ಮಜ್ಞಾನವನ್ನೇ ಅವಲಂಬಿಸಿರುತ್ತದೆ; ಮತ್ತು ಈ ಆತ್ಮಜ್ಞಾನವೇ ಬಾಹ್ಯಜಗತ್ತಿನ ತಳಹದಿಯು ಎಂದು ನಮಗೆ ಜ್ಞಾನವಾಗುತ್ತದೆ.

ಆದ್ದರಿಂದ ತನ್ನ ಅಥವಾ ಆತ್ಮನ ಜ್ಞಾನವೇ ಹೆಚ್ಚಿನದು. ಇದೇ ಪ್ರತಿಯೊಬ್ಬನ ಜೀವನದ ಸಾಧ್ಯವಾಗಿರಬೇಕು. ಇಂದ್ರಿಯ ವಿಷಯಗಳನ್ನು ತಿಳಿಯಲಿಕ್ಕೆ ಯತ್ನಿಸುವ ಮೊದಲು ಈ ಆತ್ಮಜ್ಞಾನವನ್ನು ಸಂಪಾದಿಸುವದೇ ನಮ್ಮ ಆದ್ಯಕರ್ತವ್ಯವಾಗಿದೆಯೆಂದು ತಿಳಿಯಬೇಕು. ಅದನ್ನು ದೊರಕಿಸುವ ಬಗೆಯಾವದು? ಪುಸ್ತಕಗಳಿಂದಲೂ ಅಲ್ಲ. ಬಾಹ್ಯಜಗತ್ತಿನ ಅಭ್ಯಾಸದಿಂದಲೂ ಅಲ್ಲ. ಆದರೆ ನಮ್ಮ ಸ್ವಭಾವವನ್ನೇ ಅಭ್ಯಸಿಸುವದರಿಂದ ಇದು ಶಕ್ಯವಾಗುತ್ತದೆ.



# ಶಿವತತ್ವ ರತ್ನಾಕರದ ವಿಮರ್ಶನವು.

ಲೇಖಾಂಕ. ೨

ಲೇ:—ಚಂದ್ರಶೇಖರ ಶಾಸ್ತ್ರೀ ವ್ಯಾಕರಣತೀರ್ಥ, ಪ್ರಿನ್ಸಿಪಾಲ
ಶಂಕರಕಾಲೇಜ, ಯಾದಗಿರಿ.

ಮೊದಲನೆಯ ನನ್ನ ಲೇಖಾಂಕದಲ್ಲಿ ಶಿವತತ್ವರತ್ನಾಕರದ ಗ್ರಂಥಕಾರರಾದ ಶ್ರೀ ಬಸವರಾಜ ಕವಿಗಳು ಸಂಸ್ಕೃತ ಮತ್ತು ಕನ್ನಡದಲ್ಲಿ, ಪಂಡಿತರಿದ್ದರೆಂಬುವದೂ, ಮತ್ತು ಈ ಗ್ರಂಥದ ಪ್ರಕಟನೆಗೆ ಯಾರು ಕಾರಣರೆಂಬುವದೂ, ವಿವೇಚಿಸಲ್ಪಟ್ಟಿರುವದಷ್ಟೆ. ಕೆಳದಿಯ ಅರಸರು ಅವಿಚ್ಛಿನ್ನವಾಗಿ ಕನ್ನಡನಾಡನ್ನು ೨೫೦ ವರ್ಷಗಳ ವರೆಗೆ ಪಕ್ಷಪಾತವಿಲ್ಲದೆ ಆಳಿರುವದು ನಿರ್ವಿವಾದವಾದದ್ದು. ಆದರೆ ಶಿವತತ್ವರತ್ನಾಕರ ಗ್ರಂಥಕಾರರಾದ ಬಸವಪ್ಪನಾಯಕರು ಸನ್ ೧೬೯೮ರಿಂದ ೧೭೧೫ರ ವರೆಗೆ ಅಂದರೆ ೧೭ವರ್ಷ ಮಾತ್ರ ಆಳಿದರೆಂದು ಶಿವತತ್ವರತ್ನಾಕರದಿಂದಲೂ, ಕೆಳದಿಯ ನೃಪವಿಜಯವೆಂಬುವ ಕಾವ್ಯದಿಂದಲೂ, ತಿಳಿಯ ಬರುತ್ತದೆ. ಇನ್ನು ಈ ಗ್ರಂಥದಲ್ಲಿ ಯಾವ ವಿಷಯಗಳಿರುತ್ತವೆಂಬುದನ್ನು ನೋಡೋಣ. ಈ ಗ್ರಂಥದ ಹೆಸರು "ಶಿವತತ್ವರತ್ನಾಕರವಷ್ಟೆ ಅಂದರೆ ಶಿವನ ತತ್ವಗಳಿಗೆ ಸಮುದ್ರವೆಂದರ್ಥವು. ಸಮುದ್ರದ ನೆಲೆಯು ಜನರಿಗೆ ತಿಳಿಯುವದು ಹೇಗೆ ಅಸಾಧ್ಯವೋ, ಹಾಗೆಯೇ ಈ ಗ್ರಂಥದ ಸಮಗ್ರ ಪರಿಚಯವು ಶಿವಾನುಭವದ ವಾಚಕರಿಗೆ ಆಗುವದು ಸಾಧ್ಯವಲ್ಲದ ವಿಷಯವಾಗಿದೆ. ಯಾಕಂದರೆ— ವೇದ, ಪುರಾಣ, ನೀತಿಶಾಸ್ತ್ರ, ಜ್ಯೋತಿಷ, ಯೋಗಶಾಸ್ತ್ರ, ಮಂತ್ರಶಾಸ್ತ್ರ, ಶಕುನಶಾಸ್ತ್ರ, ಶಿಲ್ಪಶಾಸ್ತ್ರ, ವೈದ್ಯಶಾಸ್ತ್ರ, ಸಾಮುದ್ರಿಕಾ, ಇತಿಹಾಸ, ಅಲಂಕಾರ, ಗಜಪರೀಕ್ಷಾ, ಅಶ್ವಪರೀಕ್ಷಾ, ಸಂಗ್ರಾಮಲಕ್ಷಣ, ಮಲ್ಲಯುದ್ಧ, ರಸವಾದ, ವಶೀಕರಣ, ತಾಳ, ನೃತ್ಯ, ನಾಟಕ, ಭೂಮಿಪರೀಕ್ಷಾ, ಮೊದಲಾದವುಗಳು (ಚೌಷಷ್ಟಿಕಲಾ) ೬೪ ವಿದ್ಯೆಗಳಲ್ಲಿ ಬರುತ್ತವೆ. ಮೇಲೆ ಬರೆದವುಗಳೆಲ್ಲಾ ಈ ಗ್ರಂಥದಲ್ಲಿ ಇರುತ್ತವೆ. ಅಂದ ಮೇಲೆ ಈ ಗ್ರಂಥಕಾರರು, ಚೌಷಷ್ಟಿವಿದ್ಯೆಗಳಲ್ಲಿ ನಿಪುಣರಿದ್ದರೆಂದು ಸ್ಪಷ್ಟವಾಗುತ್ತದೆ. ಇರಲಿ. ಗ್ರಂಥದಲ್ಲಿರತಕ್ಕ ವಿಷಯಗಳನ್ನು ಮಂಡೂಕ ಪ್ಲುತಿನ್ಯಾಯದಂತೆ ನೋಡೋಣ.

ಗ್ರಂಥದ ಪ್ರಾರಂಭದಲ್ಲಿ ಶಿವನ ಮಂಗಳವನ್ನು ಮಾಡಿ, ಆಮೇಲೆ, ವೇದ, ವೇದಾಂತಾಗಮಾದಿ ಎಲ್ಲಾ ವಿದ್ಯೆಗಳ ಹೆಸರನು ಹೇಳಿ ವೀರ

ಶೈವ ಮತದ ಪದ್ಧತಿಯಂತೆ ಸೃಷ್ಟಿಯ ಕ್ರಮದ ನಿರೂಪಣೆಯನ್ನು ಮಾಡುತ್ತಾನೆ.

## ಸೃಷ್ಟಿಯ ಕ್ರಮವು.

ಶ್ರೀಮನ್ಮಹಾನಾದಿಭಕ್ತಃ। ಸ್ವಪ್ರಕಾಶೋಽದ್ವಿತೀಯಕಃ।
ಯೋಽಸೌಬ್ರಹ್ಮೇತಿ ಸಂಪ್ರೋಕ್ತಃ। ಶಿವತತ್ವಾರ್ಥವೇದಿಭಿಃ॥
ತಸ್ಮಾತ್ಸ್ವಯಂ ಪ್ರಾದುರಭೂತ್। ಸನಿರಂಜನ ಜಂಗಮಃ।
ತಚ್ಛಿಖಾಯಾಂ ಶೂನ್ಯ ಲಿಂಗಂ। ಸಂಜಾತಂ ವಿಶ್ವಕಾರಣಮ್॥
ತಸ್ಮಾನ್ನಿಷ್ಕಲ ಲಿಂಗಂತು। ಸಂಜಾತಂ ಸ್ವೇಚ್ಛಯಾ ಪುನಃ।
ತಸ್ಮಾನ್ನಿಷ್ಕಲ ಲಿಂಗಾಚ್ಚ। ಮಹಾಲಿಂಗ ಮಭೂತ್ಸ್ವಯಂ॥
ತಸ್ಮಾತ್ಪ್ರಣವಲಿಂಗಂತು। ಸೃಷ್ಟ್ಯುನ್ಮುಖ ಮಜಾಯತ।
ಏತಸ್ಮಾಚ್ಛಿವತತ್ವಂತು। ಸಾದಾಖ್ಯಂಚ ತತೋಽಭವತ್॥
ತಸ್ಮಾನ್ಮಹೇಶ್ವರೋಽಜಾತ। ಸ್ತಸ್ಮಾಜ್ಜಾತಃ ಪಿತಾಮಹಃ।
ಪಿತಾಮಹಾತ್ಸಮುದ್ಭೂತಂ। ಜಗದೇತಚ್ಚರಾಚರಂ॥

ಅಂದರೆ— ಶಿವತತ್ವವನ್ನು ಬಲ್ಲಂಥವರಿಂದ ಯಾವದಕ್ಕೆ ಬ್ರಹ್ಮನೆಂದು ಕರೆಯುತ್ತಾರೆಯೋ ಅಂತಹ ಅನಾದಿ ಭಕ್ತನು ಅದ್ವಿತೀಯನಾಗಿ ಸ್ವಪ್ರಕಾಶನಾದನು. ಅದರಿಂದಲೇ ನಿರಂಜನ ಜಂಗಮವು ತನ್ನಷ್ಟಕ್ಕೆ ತಾನೇ ಉತ್ಪತ್ತಿಯಾಯಿತು. ಆ ಜಂಗಮದ ಶಿಖೆಯಿಂದ ಜಗತ್ತಿಗೆ ಕಾರಣವಾದ ಶೂನ್ಯ ಲಿಂಗವು ಹುಟ್ಟಿತು. ಅದರಿಂದ ನಿಷ್ಕಲಲಿಂಗವೂ, ನಿಷ್ಕಲಲಿಂಗದಿಂದ ಮಹಾಲಿಂಗವೂ, ಇದರಿಂದ ಪ್ರಣವಲಿಂಗವೂ, ಪ್ರಣವಲಿಂಗದಿಂದ ಸೃಷ್ಟಿಯ ಉನ್ಮುಖಕ್ಕೆ ಕಾರಣವಾಯಿತು. ಇದರಿಂದ ಶಿವತತ್ವವು ಹುಟ್ಟಿತು. ಶಿವತತ್ವದಿಂದ ಸಾದಾಖ್ಯವೂ, ಸಾದಾಖ್ಯದಿಂದ ಮಹೇಶ್ವರನೂ, ಮಹೇಶ್ವರನಿಂದ ರುದ್ರನೂ, ರುದ್ರನಿಂದ ಜನಾರ್ದನನೂ, ಇವನಿಂದ ಬ್ರಹ್ಮನೂ, ಈ ಬ್ರಹ್ಮನಿಂದ ಚರಾಚರಾತ್ಮಕವಾದ ಸೃಷ್ಟಿಗೆ ಕಾರಣವಾಯಿತು. ಚರಾಚರಾತ್ಮಕವಾದ ಸೃಷ್ಟಿಗೆ ಅನಾದಿಭಕ್ತರೇ ಕಾರಣವಾದಂತಾಯಿತು. ಅನಾದಿಭಕ್ತನ ಲಕ್ಷಣವನ್ನು ಗ್ರಂಥಕಾರರು ಕೆಳಗೆ ಬರೆದ ಪ್ರಕಾರ ವರ್ಣಿಸಿರುತ್ತಾರೆ.

## ಅನಾದಿ ಭಕ್ತನು.

ಯದಸ್ತಿತತ್ಪರಂ ಬ್ರಹ್ಮ। ತದನಾದಿ ಭಜೇದ್ಯತಃ।
ತಸ್ಮಾದನಾದಿ ಭಕ್ತೋಯ। ಮಿತ್ಯುಕ್ತಸ್ತತ್ವವೇದಿಭಿಃ।

ಲಿಂಗಂಜಂಗಮ ಆದಿಸ್ಯಾ। ದ್ಭಕ್ತಶ್ಚಾನಾದಿರೂಪಕಃ।
ಅಂಗಂಲಿಂಗ ಮಿತಿಪ್ರೋಕ್ತಂ। ಪ್ರಾಣೋ ಜಂಗಮ ಉಚ್ಯತೇ॥
ಲಿಂಗಜಂಗಮಯೋರೈಕ್ಯ। ಸ್ವರೂಪೊ ಭಕ್ತ ಉಚ್ಯತೆ।
ಜಂಗಮೊ ಲಿಂಗರೂಪಸ್ಯಾ। ಲ್ಲಿಂಗಂ ಜಂಗಮರೂಪಕಂ॥
ಲಿಂಗಜಂಗಮಸಂಯೋಗೊ। ನಾದಿಭಕ್ತಸ್ಯಲಕ್ಷಣಮ್।
ಲಿಂಗಜಂಗಮಭಕ್ತಾಶ್ಚ। ತ್ರಯಸ್ತ್ವೇಕಸ್ವರೂಪಕಾಃ॥
ದೇಹಃ ಪ್ರಾಣಸ್ತಥಾತ್ಮಾ। ಚೇತ್ಯಾಗಮಾನ್ವಯ ನಿರ್ಣಯಃ।
ನಿತ್ಯಂ ಪೂರ್ಣಚಿದಾನಂದಂ। ಸದ್ರೂಪಂ ಬ್ರಹ್ಮ ಕೀರ್ತಿತಂ।
ಯದೇವಾಖಂಡರೂಪಂ ಸ್ಯಾದೆತದ್ಭಕ್ತಸ್ಯಲಕ್ಷಣಮ್॥

ಅಂದರೆಃ—ಶಿವತತ್ವವನ್ನು ಬಲ್ಲಂಥವರು ಶ್ರೇಷ್ಠವಾದ ಪರಬ್ರಹ್ಮಕ್ಕೆ ಅನಾದಿಭಕ್ತನೆಂದೆನ್ನುವರು. ಲಿಂಗವೂ, ಜಂಗಮವೂ ಆದಿಯು, ಭಕ್ತನೇ ಅನಾದಿರೂಪನು, ಅಂಗವೇ ಲಿಂಗವು ಪ್ರಾಣವೇ ಜಂಗಮವೆಂದು ಹೇಳಲ್ಪಡುತ್ತದೆ. ಜಂಗಮವೇ ಲಿಂಗರೂಪವು, ಲಿಂಗವೇ ಜಂಗಮರೂಪವು, ಲಿಂಗಜಂಗಮದ ಸಂಯೋಗವೇ ಅನಾದಿಭಕ್ತನ ಲಕ್ಷಣವು. ಲಿಂಗ, ಜಂಗಮ, ಭಕ್ತನು, ಮೂರು ಒಂದೇ ಸ್ವರೂಪರು. ನಿತ್ಯತ್ವವೂ, ಪರಿಪೂರ್ಣತ್ವವೂ, ಅಖಂಡಸ್ವರೂಪತ್ವವೂ ಅನಾದಿ ಭಕ್ತನ ಲಕ್ಷಣವು. ಹೀಗೆಯೇ ಇನ್ನೂ ಕೆಲವು ಶ್ಲೋಕಗಳಿಂದ ಅನಾದಿ ಭಕ್ತನ ಲಕ್ಷಣವನ್ನು ಹೇಳಿರುತ್ತಾನೆ. ಅನಾದಿ ಭಕ್ತನ ಲಕ್ಷಣವನ್ನು ಹೇಳಿದಾನಂತರ ಜಂಗಮದ ವರ್ಣನೆಯನ್ನು ಮಾಡಿರುತ್ತಾನೆ.

## ಜಂಗಮನು.

ಭಕ್ತಸ್ಯ ಪಶ್ಚಿಮಹೃದಿಸ್ಥಿತೊ। ಯೋಽನಾದಿ ಜಂಗಮಃ॥
ತಸ್ಯಸ್ವರೂಪ ಮಧುನಾ। ಸಮಾಸೇನಪ್ರಕಾಶ್ಯತೇ॥
ಪಶ್ಚಾದನಾದಿಭಕ್ತಸ್ಯ। ಹೃಚ್ಚಿತ್ಪದ್ಮಾಂತರೇಸದಾ।
ಚಿನ್ಮಂಡಲತ್ರಯೋಪೇತಂ। ಪ್ರಣವಾಸನ ಮಧ್ಯಗಃ॥
ನಿರಂಜನಸ್ಯಾತ್ಪ್ರಣವ। ಸ್ವರೂಪೋತ್ರನಿಗದ್ಯತೆ।
ನಿರಾಕೃತಂ ರಂಜನಂ। ಯನ್ಮಾಯಾಮೋಹ ವಿಜೃಂಭಿತಂ॥
ಏಕ ಸ್ವರೂಪ ಸಿದ್ಧೇನ। ಸಭವೇದ್ಧಿನಿರಂಜನಃ।

ತದೇವನಿಷ್ಕಲಂಬ್ರಹ್ಮ। ನಿರ್ವಿಕಲ್ಪಂ ನಿರಂಜನಂ॥
ನಿಸ್ಸಂಜ್ಞಂ ನಿರವಗ್ರಹಂ ನಿರ। ಶನಂ ನಿಷ್ಕಾರಣಂ ನಿಷ್ಫಲಂ।
ನಿಸ್ಸಂಗಂ ನಿರುಪಾಧಿಕಂ ನಿರು। ಪಮಂ ನಿಷ್ಪ್ರಕ್ರಿಯಂ ನಿಶ್ಚಲಂ॥
ನಿಷ್ಪುಣ್ಯಂ ನಿರನುಗ್ರಹಂ ನಿರ। ಧಿಕಂ ನಿರ್ವಾಸನಂ ನಿರ್ವಹಂ।
ನಿರ್ಭೇದ್ಯಂ ನಿರಘಂ ನಿರಂಜನ। ಪದಂ ಚೈತಂಭಜೇಜಂಗಮಮ್॥

ಅಂದರೆ— ಭಕ್ತನ ಪಶ್ಚಿಮ ಹೃದಯದಲ್ಲಿರತಕ್ಕ ಅನಾದಿ ಜಂಗಮನು ಚಿನ್ಮಂಡಲ ತ್ರಯೋಪೇತನೂ, ಸಾಕ್ಷಾತ್ ಬ್ರಹ್ಮಸ್ವರೂಪನೂ, ಪ್ರಣವಾಸನ ಸ್ವರೂಪನೂ, ಉಪಾಧಿಯಿಂದ ಶೂನ್ಯನಾದವನೂ, ನಿಷ್ಕಲಂಕನೂ, ನಿರ್ವಿಕಲ್ಪನೂ, ಇರುವನೆಂದು ಅನೇಕ ಶ್ರೇಷ್ಠ ವಿಶೇಷಣಗಳಿಂದ ವರ್ಣಿಸಿರುವನು. ಜಂಗಮನ ವಿಷಯಕ್ಕೆ ಇನ್ನೂ ಎಷ್ಟೋ ವಿಷಯಗಳಿರುತ್ತವೆ.

## ಲಿಂಗವು.

ಚರಚರಾತ್ಮಕಮಿದಂ। ಗಮ್ಯತೇಯತ್ರಲೀಯತೇ।
ಉತ್ಪದ್ಯತೇ ಯತೋಭೂಯಾ। ಸ್ತಲ್ಲಿಂಗಂ ಪರಮಿಷ್ಯತೇ॥
ಬ್ರಹ್ಮಾಂಡಕೋಟಯಸ್ತಸ್ಯ। ಸಿಮೂರ್ತುರ್ಲಿಂಗರೂಪಿಣಃ।
ಶಿವಸ್ಯಕುಕ್ಷಿ ಜಲಧೌ। ಜಾಯಂತೇಬುದ್ಬುದೋಪಮಾ॥
ಬ್ರಹ್ಮ ವಿಷ್ಣ್ವಾದ ಯಸ್ಸರ್ವೇ। ದೇವಾವೇದಾವಯಸ್ತಥಾ।
ಲೀಯಮಾನಸ್ತುಗಮ್ಯಂತೇ॥ ತಲ್ಲಿಂಗಂ ಬ್ರಹ್ಮಕೇವಲಂ॥
ದಕ್ಷಿಣೇಲೀಯತೇ ಬ್ರಹ್ಮಾ। ವಾಮತಶ್ಚ ಜನಾರ್ದನಃ।
ಹೃದಯೇಚೈವಗಾಯ ತ್ರೀ। ಸರ್ವೇದೇವೋತ್ತಮಾಸ್ತಥಾ॥

ಅಂದರೆ— ಚರಾಚರಾತ್ಮವಾದೀ ಪ್ರಪಂಚವು ಎಲ್ಲಿ ಹುಟ್ಟುವದೋ ಮತ್ತೂ ಎಲ್ಲಿ ಲೀನವಾಗುವದೋ, ಅದಕ್ಕೆ ಲಿಂಗವೆಂದು ಹೇಳುವರು. ಜಗತ್ತನ್ನು ಸೃಷ್ಟಿಸಿದಂಥ, ಲಿಂಗರೂಪಿಯಾದಂಥ, ಶಿವನ ಕುಕ್ಷಿ ಎಂಬುವ ಸಮುದ್ರದಲ್ಲಿ ಬ್ರಹ್ಮಾಂಡಕೋಟಿಗಳು ಬುದ್ಬುದಾಕಾರವಾಗಿರುತ್ತವೆ. ದಕ್ಷಿಣಭಾಗದಲ್ಲಿ ಬ್ರಹ್ಮನು ಲೀನನಾಗುತ್ತಾನೆ. ವಾಮಭಾಗದಲ್ಲಿ ಜನಾರ್ದನನೂ ಹೃದಯದಲ್ಲಿ ಎಲ್ಲಾ ದೇವತೆಗಳೂ ಲೀನವಾಗುತ್ತಾರೆ. ಇದಕ್ಕೇ ಲಿಂಗವೆಂದು ಹೆಸರು. ಹೀಗೆಯೇ ಲಿಂಗದ ಪರವಾಗಿ ಇನ್ನೂ ಎಷ್ಟೋ ಶ್ಲೋಕಗಳಿರುತ್ತವೆ.

ಲಿಂಗದ ವರ್ಣನೆಯನ್ನು ಮಾಡಿದ ಮೇಲೆ ಷಡಧ್ವಗಳನ್ನು ಕವಿಯು ಹೃದಯಂಗಮವಾಗಿ ವಿವರಿಸಿರುತ್ತಾನೆ. ಈ ಗ್ರಂಥಕಾರರು ವೀರಶೈವರಿ ದ್ದಾಗ್ಯೂ ತಮ್ಮ ಗ್ರಂಥದಲ್ಲಿ ಕೇವಲ ವೀರಶೈವರ ವಿಷಯವನ್ನು ಹೇಳದೆ ಸರ್ವ ಹಿಂದೂ ಜನರಿಗೆ ಉಪಯೋಗವಾಗುವಂತೆ ಜಗತ್ತಿನಲ್ಲಿರತಕ್ಕ ಸರ್ವ ವಿಷಯಗಳನ್ನು ಪ್ರತಿಪಾದಿಸಿರುತ್ತಾರೆ.

ಇದೂ ವರೆಗೂ ವೀರಶೈವ ಮತದ ವಿಷಯಗಳನ್ನು ಸಂಕ್ಷಿಪ್ತವಾಗಿ ಹೇಳಿ ರೋಗಗಳಂದರೇನು ಎಂಬುವದನ್ನು ವಿವರಿಸುತ್ತಾನೆ. ಗ್ರಂಥದಲ್ಲಿ ರತಕ್ಕ ವಿಷಯಗಳನ್ನು ಸಂಕ್ಷಿಪ್ತವಾಗಿ ತೋರಿಸುವದೇ ನಮ್ಮ ಉದ್ದೇಶವು. ಇದರಿಂದ ಗ್ರಂಥಕಾರರಿಗೆ ಎಲ್ಲಾ ವಿಷಯಗಳಲ್ಲಿಯೂ ಜ್ಞಾನವಿತ್ತೆಂದು ಸ್ಪಷ್ಟವಾಗಿ ತೋರದಿರದು.

## ರೋಗಗಳು.

"ಪೂರ್ವ ಜನ್ಮಕೃತಂ ಪಾಪಂ ವ್ಯಾಧಿರೂಪೇಣಪಿ ದ್ಯಕ್ತೇ।"

ಪೂರ್ವಜನ್ಮದಲ್ಲಿ ಮನುಷ್ಯನು ಮಾಡಿದ ಪಾಪವೇ ವ್ಯಾಧಿರೂಪದಿಂದ ಈ ಜನ್ಮದಲ್ಲಿ ಪೀಡಿಸುತ್ತದೆ. ಯಾವ ಯಾವ ರೋಗಗಳು ಎಂಥಾ ಪಾಪ ವನ್ನು ಮಾಡಿದರೆ ಬರುತ್ತವೆಂಬುವದು ಕೆಳಗಿನ ಶ್ಲೋಕಗಳಿಂದ ತಿಳಿಯು ಬರುತ್ತದೆ.

ಬ್ರಹ್ಮಹಾಕ್ಷಯ ರೋಗೀಸ್ಯಾತ್ಸುರಾಪೀ ಶ್ಯಾವದಂತಕಃ।
ಸುವರ್ಣ ಚೋರೊಕುನಖೀ। ದುಶ್ಚರ್ಮಾ ಗುರುತಲ್ಪಗಃ।
ರಾಜಘ್ನೋ ರಾಜಯಕ್ಷ್ಮೀಸ್ಯಾ। ತ್ಕಷ್ಮಿಹರ್ತಾಪ್ಯಪಾಂಡುಕಃ।
ಬ್ರಹ್ಮಘ್ನಃ ಕ್ಷಯಖಾಸೀಸ್ಯಾತ್। ಕ್ಷಯಸ್ತ್ರೀವಂತ್ರಿಥಾಮತಃ॥
ಅನ್ನಹರ್ತಾಭವೇದ್ಗುಲ್ಮೀ। ಧಾನ್ಯಸ್ತೆಯಾತುದದುರಃ।
ಶಾಕಹರ್ತಾಭವೇತ್ಕಾರೇ। ಪಿಟಕೀ ಪುಷ್ಪಹಾರಕಃ॥
ಭಗಿನೀಗಮನಾನ್ಮರ್ತ್ಯ। ಜಾಯತೇ ಬಹುಮೂತ್ರವಾನ್।
ಮಾತೃಗಾಮೀಭವೇದ್ಯಸ್ತು। ತಸ್ಯಲಿಂಗಂ ವಿನಶ್ಯತಿ॥
ಸ್ನುಷಾಭಿಗಮನಾಲ್ಲೋಕೇ। ಶುಕ್ಲಮೇಹೀಭವೇನ್ನರಃ।
ಇಕ್ಷುಮೇಹೀಭವೇತ್ಪಾಪೀ। ಕನ್ಯಾಭಿಗಮನಾದ್ಭುವಿ॥

ಅಂದರೆ—ಬ್ರಹ್ಮಹತ್ಯವನ್ನು ಮಾಡಿದವನು ಕ್ಷಯರೋಗಿಯಾಗಿಯೂ, ಸುರಾಪಾನವನ್ನು ಮಾಡಿದವನು ಕುತ್ಸಿತವಂತಯುಳ್ಳವನಾಗಿಯೂ, ಬಂಗಾ

ರವನ್ನು ಕದ್ದವನು ಗುರುಪತ್ನಿಯ ಗಮನವನ್ನು ಮಾಡಿದವನು ಚರ್ಮ ರೋಗಿಯಾಗಿಯೂ, ರಾಜನನ್ನು ಕೊಂದವನು ಗಿನ್ನಿಯ ರೋಗಿಯಾಗಿಯೂ, ಅನ್ಯರ ಭೂಮಿಯನ್ನು ಅಪಹರಣಮಾಡಿದವನು ಕ್ಷಯ ಮತ್ತು ಪಾಂಡುರೋಗಿಯಾಗಿಯೂ, ಅನ್ನವನ್ನು ಕದ್ದವನು ಗುಲ್ಮರೋಗಿಯಾಗಿಯೂ, ಧಾನ್ಯವನ್ನು ಕದ್ದವನು ಕುಷ್ಟರೋಗಿಯಾಗಿಯೂ, ಭಗಿನಿಯ ಗಮನವನ್ನು ಮಾಡಿದ ಮನುಷ್ಯನು ಬಹುಮೂತ್ರರೋಗಿಯಾಗಿಯೂ, ತಾಯಿಯ ಗಮನವನ್ನು ಮಾಡಿದ ಮನುಷ್ಯನು ಲಿಂಗವಿಹೀನನಾಗಿಯೂ, ಹೀಗೆಯೇ ಬೇರೆ ಬೇರೆ ಪಾಪಗಳನ್ನು ಮಾಡಿದ ಮನುಷ್ಯನು ಬೇರೆ ಬೇರೆ ರೋಗವುಳ್ಳವನಾಗಿಯೂ, ಆಗುತ್ತಾನೆಂದು ನೂರಾರು ಶ್ಲೋಕಗಳಿಂದ ವರ್ಣಿಸುತ್ತಾರೆ.

ಇನ್ನು ಮುಂದಿನ ಲೇಖಾಂಕದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯರು ಶ್ರೀ ಆದಿ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ದಯಪಾಲಿಸಿದ ವಿಷಯುವೇ ಮೊದಲಾದವುಗಳು ಬರುತ್ತವೆ. ನನ್ನ ಈ ಲೇಖಾಂಕಗಳಲ್ಲಿ ತೋರಿಸುವ ವಿಷಯಗಳೆಲ್ಲ ಗ್ರಂಥಕಾರರ ಅಭಿಪ್ರಾಯಗಳೆಂದೇ ತಿಳಿಯತಕ್ಕದ್ದು. ಗ್ರಂಥಕಾರರ ವಿದ್ವತ್ತೆಯನ್ನು ಶಿವಾನುಭವದ ವಾಚಕರಿಗೆ ತೋರಿಸಿಕೊಡುವದು ಮಾತ್ರ ಲೇಖಕನ ಕರ್ತವ್ಯವು.

ಮುಂದೆ ಸಾಗುವದು.



## ಹರಿಹರ ಕವಿಯ

# ಬಸವರಾಜ ದೇವರ ರಗಳೆ.

ಲೇಖಕಃ— ಫ. ಗು. ಹಳಕಟ್ಟಿ.

—೦—

ಹರಿಹರ ಕವಿಯಿಂದ ವಿರಚಿತವಾದ ಬಸವರಾಜ ದೇವರ ರಗಳೆ ಎಂಬ ಗ್ರಂಥವನ್ನು ಮೈಸೂರ ಮಹಾರಾಜಾ ಕಾಲೇಜಿನ ಕನ್ನಡ ಪ್ರೊಫೆಸರರಾದ ಶ್ರೀಯುತ ಟಿ. ಎಸ್. ವೆಂಕಣ್ಣಯ್ಯ ಎಮ್. ಎ. ಇವರು ಈಗ ಅಚ್ಚುಹಾಕಿಸಿ ಪ್ರಸಿದ್ಧಿಸಿರುತ್ತಾರೆ. ಈ ವರೆಗೆ ಕನ್ನಡವಲ್ಲಿ ಪ್ರಚುರುಗೊಳಿಸಲ್ಪಟ್ಟ ಮಹತ್ವದ ಪುರಾತನ ಗ್ರಂಥಗಳಲ್ಲಿ ಈ ಗ್ರಂಥವು ಹೊಸತರದ್ದಿದ್ದು, ರಗಳೆಯ ವಾಙ್ಮಯದ ಮಹತ್ವವನ್ನು ನಿದರ್ಶಕ್ಕೆ ತರಲು ಬಹು ಉಪಯುಕ್ತವಾಗಿರುತ್ತದೆ. ಇಂಥ ಗ್ರಂಥವನ್ನು ಪ್ರಸಿದ್ಧಿಸಿದ್ದಕ್ಕೆ ಶ್ರೀಯುತ ವೆಂಕಣ್ಣಯ್ಯನವರನ್ನು ನಾವು ಬಹಳ ಅಭಿನಂದಿಸುತ್ತೇವೆ. ಅವರು ಗ್ರಂಥಾರಂಭದಲ್ಲಿ ಮೂವತ್ತೊಂದು ಪುಟಗಳುಳ್ಳ ಒಂದು ವಿಸ್ತೃತ ಪೀಠಿಕೆಯನ್ನು ಬರೆದಿರುವರು. ಇದರಲ್ಲಿ ಅವರು ಬಸವಣ್ಣನವರ ಚರಿತ್ರೆಯ ವಿಷಯವಾಗಿಯೂ ಹರಿಹರನ ರಗಳೆಯ ಕೃತಿಗಳ ಸ್ವರೂಪದ ವಿಷಯವಾಗಿಯೂ ಈ ಬಸವರಾಜದೇವರ ರಗಳೆಯ ಗುಣದೋಷಗಳ ಬಗ್ಗೆಯೂ ಅನೇಕ ವಿಚಾರಾರ್ಹವಾದ ವಿಷಯಗಳನ್ನು ಲಿಖಿಸಿರುವರು. ಮತ್ತು ಕಡೆಗೆ ಗ್ರಂಥದಲ್ಲಿ ಬಂದ ಕೆಲವು ಕಠಿಣ ಪದಗಳ ಅರ್ಥವನ್ನು ಸೇರಿಸಿರುವರು ಈ ಬಗೆಯ ಉಪಯುಕ್ತ ಗ್ರಂಥವನ್ನು ಬಹು ಸುಂದರವಾಗಿ ಅಚ್ಚುಹಾಕಿಸಿ ಕನ್ನಡಿಗರ ಎದುರಿಗೆ ಇಟ್ಟದ್ದಕ್ಕೆ ಕನ್ನಡಿಗರೆಲ್ಲರೂ ಶ್ರೀಯುತ ವೆಂಕಣ್ಣಯನವರಿಂದ ಬಹಳ ಉಪಕೃತರಾಗಿರುವರು.

ಈ ರಗಳೆಯ ಕಾವ್ಯವು ಶ್ರೀಯುತ ವೆಂಕಣ್ಣಯ್ಯನವರು ತಮ್ಮ ಪೀಠಿಕೆಯಲ್ಲಿ ಹೇಳಿದಂತೆ ಒಂದು ಹೊಸರೂಪದ ಸಾಹಿತ್ಯ ಗ್ರಂಥವಾಗಿದೆ. ಈ ರಗಳೆಯ ಛಂದಸ್ಸನ್ನು ಪುರಾತನ ಜೈನಕವಿಗಳು ತಮ್ಮ ಕಾವ್ಯಗಳಲ್ಲಿ ಅಲ್ಲಲ್ಲಿ ಕೆಲಮಟ್ಟಿಗೆ ಮಾತ್ರ ಉಪಯೋಗಿಸಿದ್ದು ತೋರಿಬರುತ್ತದೆ. ಆದರೆ ಈ ಛಂದಸ್ಸಿನಲ್ಲಿ ಅವರು ಯಾವ ಗ್ರಂಥವನ್ನೂ ಸಮಗ್ರವಾಗಿ ಬರೆದಿರುವದಿಲ್ಲ. ಅವುಗಳ ಉಪಯೋಗವನ್ನು ಹೀಗೆ ಮೊದಲು ಮಾಡಿದವರು ವೀರಶೈವ ಕವಿಗಳೇ. ಮತ್ತು ಇವರಲ್ಲಿ ಹರಿಹರನೇ ಎಲ್ಲರಿಗೂ

ಅಗ್ರಗಣ್ಯನು. ಈ ಛಂದಸ್ಸಿನಲ್ಲಿ ಅವನು ಬರೆದ ಕಾವ್ಯಗಳು ಅನೇಕ ವಿರುವದರಿಂದ ಅವನಿಗೆ ರಗಳೆಯು ಕವಿ ಎಂಬ ಹಾಸ್ಯವಾಚಕ ಹೆಸರು ಬೀಳಲು ಇದನ್ನು ದೂರ ಮಾಡಲು ಅವನು ಗಿರಿಜಾಕಲ್ಯಾಣವನ್ನು ಬರೆದನೆಂಬ ಐತಿಹ್ಯವದೆ. ಆದರೆ ಶ್ರೀಯುತ ವೆಂಕಣ್ಣಯ್ಯನವರು ಹೇಳಿದಂತೆ "ರಗಳೆಗಳನ್ನು ಬರೆದದ್ದಕ್ಕಾಗಿ ಹರಿಹರನು ತಲೆಬಗ್ಗಿಸಬೇಕಾದದ್ದೇನೂ ಇರಲಿಲ್ಲ. ಒಂದು ವೇಳೆ ಆತನು ಗಿರಿಜಾಕಲ್ಯಾಣವನ್ನು ರಚಿಸದೆಯೇ ಹೋಗಿದ್ದರೂ ಆತನಿಗೆ ಕನ್ನಡಸಾಹಿತ್ಯದಲ್ಲಿ ದೊರೆತಿರುವ ಸ್ಥಾನಕ್ಕೆ ಏನೂ ಚ್ಯುತಿಬರುತ್ತಿರಲಿಲ್ಲ. ಸಾಹಿತ್ಯ ದೃಷ್ಟಿಯಿಂದ ಈ ರಗಳೆಗಳು ಅನೇಕ ಚಂಪೂ ಗ್ರಂಥಗಳಿಗಿಂತಲೂ ಹೆಚ್ಚು ಆದರಣೀಯವೂ ಗೌರವಾರ್ಹವೂ ಆಗಿವೆ. ಬಸವರಾಜದೇವರ ರಗಳೆಯನ್ನು ಓದುವವರು ಇದನ್ನು ಮನಗಾಣಬಹುದು." ಈ ಅಭಿಪ್ರಾಯವು ಸರಿಯಾಗಿದೆಯೆಂದು ನಾವು ಮನಃಪೂರ್ವಕವಾಗಿ ಒಪ್ಪಿಕೊಳ್ಳುತ್ತೇವೆ. ಈ ಬಸವರಾಜರಗಳೆಯು ಕಾವ್ಯದೃಷ್ಟಿಯಿಂದ ಅತ್ಯಂತ ಗೌರವಾರ್ಹವಾಗಿದೆ. ಇದರಲ್ಲಿ ಬಂದ ವರ್ಣನೆಗಳು, ಭಾಷಾಶೈಲಿ ಸ್ವಾಭಾವಿಕವಾಗಿದ್ದು ವಾಚಕರ ಮನಸ್ಸನ್ನು ಬಹು ಆಕರ್ಷಿಸುವಂತೆ ಇವೆ ಈ ಗ್ರಂಥವನ್ನು ಓದಲಿಕ್ಕೆ ಪ್ರಾರಂಭ ಮಾಡಿದ ಬಳಿಕ ಮುಗಿಯುವ ವರೆಗೂ ಸಮಗ್ರ ಓದುವದನ್ನು ವಾಚಕರು ಬಿಡಲಾರದಷ್ಟು ಇದು ಹೃದಯಂಗಮವಾಗಿದೆ. ಇದರಲ್ಲಿ ಉಪಯೋಗಿಸಲ್ಪಟ್ಟ ಭಾಷೆಯು ಬಿಡುನುಡಿಯ ತಿರುಳುಗನ್ನಡವಾಗಿದೆ. ಪ್ರತಿಯೊಂದು ಪದ್ಯದಲ್ಲಿ ಅಂತ್ಯ ಅಡಿ ಎರಡೂ ಪ್ರಾಸಗಳಿರುವದರಿಂದ ಈ ಕಾವ್ಯಕ್ಕೆ ಮಧುರತೆಯೂ ಲಾಲಿತ್ಯವೂ ಉಂಟಾಗಿವೆ. ವರ್ಣನೆಗಳಲ್ಲಿ ಅಸ್ವಾಭಾವಿಕವಾದ ಅತಿಶಯೋಕ್ತಿಗಳೇನೂ ಇರುವದಿಲ್ಲ. ಬೇರೆ ಚಂಪೂಗ್ರಂಥಗಳಲ್ಲಿರುವಂತೆ ಬೀಭತ್ಸವರ್ಣನೆಗಳೂ ಇರುವದಿಲ್ಲ. ಗ್ರಂಥದ ಅನೇಕ ಭಾಗಗಳಲ್ಲಿ ಕವಿಯು ಮನಸ್ಸಿನಲ್ಲಿ ಒಡಮೂಡಿದ ಭಾವಗಳು ಬಹು ಹೃದಯಂಗಮವಾಗಿ ವಿವರಿಸಲ್ಪಟ್ಟಿವೆ. ಅವುಗಳಲ್ಲಿ ಬಸವೇಶ್ವರನು ಸಂಗಮೇಶ್ವರ ಪೂಜೆಯಲ್ಲಿ ತೊಡಗಿದಾಗ್ಗೆ ಮಾಡಿದ ವರ್ಣನೆಗಳು ಅತ್ಯುನ್ನತವಾಗಿದ್ದು ಅವು ಎಂಥವನ ಮನಸ್ಸನ್ನಾದರೂ ಭಕ್ತಿಭಾವದಿಂದ ಪೂರಿತ ಮಾಡದೆ ಬಿಡಲಾರವು. ರಗಳೆಗಳ ಒಂದೊಂದು ಅಧ್ಯಾಯದ ತರುವಾಯ ಗದ್ಯಭಾಗಗಳೂ ಕವಿಯಿಂದ ರಚಿಸಲ್ಪಟ್ಟಿವೆ. ಇವಾದರೂ ಕವಿಯ ಮರ್ಮಜ್ಞತೆಯನ್ನು ಭಾಷಾಭಿಜ್ಞತೆಯನ್ನು ಬಹು ಚನ್ನಾಗಿ ವ್ಯಕ್ತಪಡಿಸುತ್ತವೆ. ಈ

ಗ್ರಂಥವನ್ನು ವಾಚಕರು ಅವಶ್ಯವಾಗಿ ತರಿಸಿ ಅದರ ಮಧುರತೆಯನ್ನು ಆಸ್ವಾದಿಸುವರೆಂದು ನಮ್ಮ ಆಗ್ರಹದ ಸೂಚನೆ ಇದೆ.

ಈ ಗ್ರಂಥದಲ್ಲಿ ಬಸವೇಶ್ವರನಿಗೆ ಸಂಬಂಧಪಟ್ಟ ಅನೇಕ ಅಪರಿಚಿತ ವಿಷಯಗಳು ಹೊರಪಟ್ಟಿರುವದರಿಂದ, ಐತಿಹಾಸಿಕ ದೃಷ್ಟ್ಯಾ ಇದರ ಮಹತ್ವವು ಬಹಳವಿದೆ. ಬಸವೇಶ್ವರನ ನಿಜವಾದ ಇತಿಹಾಸವು ಇನ್ನೂ ಶೋಧಕದಿಂದ ಪೂರ್ಣವಾಗಿ ಸಂಶೋಧಿಸಲ್ಪಟ್ಟಿಲ್ಲ. ಇದು ಬಹು ಖೇದಕರವಾದದ್ದು. ಅವನ ಆಯುಷ್ಯದಲ್ಲಿ ವರ್ತಿಸಿದ ಸಂಗತಿಗಳ ಬಗ್ಗೆ ಬರೀ ಜೈನ ಗ್ರಂಥಕಾರರಲ್ಲಷ್ಟೇ ಅಲ್ಲ, ವೀರಶೈವ ಗ್ರಂಥಕಾರರಲ್ಲಿಯೂ ಬಹಳ ಮತಭೇದಗಳಿವೆ. ಬಸವೇಶ್ವರನ ಸಮಕಾಲೀನ ಗ್ರಂಥಕಾರರಾರೂ ಅವನ ಚರಿತ್ರೆಯನ್ನು ಬರೆದಿಡದ್ದರಿಂದ ಅನೇಕ ಕಟ್ಟುಕಥೆಗಳು ಅವನ ಚರಿತ್ರೆಯಲ್ಲಿ ಕೂಡಿಕೊಳ್ಳಲು ಅವಕಾಶಉಂಟಾಗಿರುತ್ತದೆ. ಬಸವಪುರಾಣವನ್ನು ಬರೆದ ಭೀಮಕವಿಯ ವೃತ್ತಾಂತವು ಪಾಲ್ಕುರಿಕೆಯ ಸೋಮಾರಾಧ್ಯನು ಬರೆದ ಬಸವಚರಿತೆಯ ಮೇಲವಲಂಬಿಸಿದೆ. ಸೋಮಾರಾಧ್ಯನು ಪುರಾತನ ಭಕ್ತರಿಂದ ಕೇಳಿದ ಕಥೆಯನ್ನು ಅವಲಂಬಿಸಿ ತಾನು ತನ್ನ ಬಸವಪುರಾಣವನ್ನು ರಚಿಸಿದೆನೆಂದು ಅವನೇ ತನ್ನ ಗ್ರಂಥದಲ್ಲಿ ಹೇಳಿಕೊಂಡಿರುತ್ತಾನೆ. ಸಿಂಗಿರಾಜನು ಮಲಬಸವಚಾರಿತ್ರ್ಯೆಯನ್ನು ಬರೆದಿದ್ದು ಇವನ ಕಾಲವಾದರೂ ಕ್ರಿ. ಶ. ೧೫೦೦ ಎಂದು ಕರ್ನಾಟಕ ಕವಿಚರಿತ್ರೆಯಲ್ಲಿ ಹೇಳಿದೆ. ಆತನಾದರೂ ಅಷ್ಟು ಪ್ರಾಚೀನನಲ್ಲವೆಂದು ತೋರುತ್ತದೆ. ಹರಿಹರನು ಬಸವೇಶ್ವರನ ಸಮಕಾಲಿನನಲ್ಲದಿದ್ದರೂ ವೀರಶೈವ ಕವಿಗಳಲ್ಲಿ ಬಹು ಪುರಾತನನು. ಆದ್ದರಿಂದ ಅವನು ಬಸವಣ್ಣನ ವಿಷಯಕ್ಕೆ ಹೇಳುವ ಸಂಗತಿಗಳ ಬಗ್ಗೆ ನಾವು ಹೆಚ್ಚು ಮಹತ್ವಕೊಡಬೇಕಾಗಿರುತ್ತದೆ. ಇದಲ್ಲದೆ ಇವುಗಳಲ್ಲಿ ಮನುಷ್ಯನ ಸ್ವಭಾವಕ್ಕೆ ಅನುಗುಣವಾದಂಥ ಸಂಗತಿಗಳು ಬಹಳವಿರುವದರಿಂದ ಮತ್ತು ಹರಿಹರನು ಅತಿಶಯೋಕ್ತಿಯ ಕಡೆಗೆ ಮನಸ್ಸು ಹಾಕಿರುವದಿಲ್ಲಾದ್ದರಿಂದ ಅವನು ಹೇಳುವ ಸಂಗತಿಗಳ ಬಗ್ಗೆ ನಾವು ವಿಶೇಷ ಲಕ್ಷಕೊಡಬೇಕಾಗುತ್ತದೆ.

## ಬಸವೇಶ್ವರನು ನಂದೀ ಅವತಾರನಲ್ಲ.

ನಂದಿಯು ಶಿವಧರ್ಮವನ್ನು ಪುನರುಜ್ಜೀವನಗೊಳಿಸಲು ಪರಮೇಶ್ವರನಿಂದ ಅಪ್ಪಣೆಯನ್ನು ಹೊಂದಿ ಪೃಥ್ವಿಯಲ್ಲಿ ಬಸವೇಶ್ವರನೆಂಬ ಹೆಸರಿನಿಂದ ಅವತರಿಸಿದನೆಂದು ಪುರಾಣಗಳಲ್ಲಿ ಹೇಳಿರುವದುಂಟು. ಆದರೆ

ಈ ರಗಳೆಯಲ್ಲಿ ಹೇಳಿದ ಕಥೆಯು ಇದಕ್ಕೆ ತೀರ ಭಿನ್ನವಾಗಿದೆ. ಇದರಿಂದ ಬಸವೇಶ್ವರನು ನಂದಿಯು ಅವತಾರವೆಂದು ಹರಿಹರನ ಕಾಲದಲ್ಲಿ ಜನರು ತಿಳಿಯುತ್ತಿದ್ದಿಲ್ಲವೆಂಬ ಊಹೆಗೆ ಆಸ್ಪದವಾಗಿದೆ. ಈ ಗ್ರಂಥದಲ್ಲಿ ಹೇಳಿರುವದೇನೆಂದರೆ, ಶಿವನು ಕೈಲಾಸದಲ್ಲಿ ಒಡ್ಡೋಲಗಂಗೊಟ್ಟು ಇರುತ್ತಿರಲು ಒಬ್ಬ ಮಾಲೆಗಾರನು ಹೂಗಳನ್ನು ತೆಗೆದುಕೊಂಡು ಅಲ್ಲಿಗೆ ಬಂದು ಶಿವನ ಕೈಯಲ್ಲಿ ಕೊಡಲು ಆತನು ಅವುಗಳನ್ನು ಎಲ್ಲ ಗಣಾಧೀಶ್ವರರಿಗೆ ಸಮರ್ಪಿಸೆಂದು ವೃಷಭಮುಖನೆಂಬ ಗಣೇಶ್ವರನ ಕೈಯಲ್ಲಿ ಕೊಡಲು ಆವನು ಪರಮಾತ್ಮನ ಪುತ್ರನಾದ ಷಣ್ಮುಖನನ್ನು ಬಿಟ್ಟು ಎಲ್ಲರಿಗೂ ಒಪ್ಪಿಸಿದನು. ಆಗ ಶಿವನು ಎಲ್ಲ ಗಣಂಗಳಿಗೆ ಪುಷ್ಪಗಳನ್ನು ಅರ್ಪಿಸಿದಿಯೋ ಹೇಗೆ ಎಂದು ಕೇಳಲು ವೃಷಭಮುಖನು ಹಾಗೆ ಮಾಡಿದೆನೆಂದು ಸುಳ್ಳು ಹೇಳಲಾಗಿ ಷಣ್ಮುಖನು ತನಗೆ ಕೊಡಲಿಲ್ಲೆಂದು ದೂರು ಹೇಳಿದನು. ಆಗ ಶಿವನು ವೃಷಭಮುಖನು ಮಾಡಿದ ಈ ತಪ್ಪಿಗಾಗಿ ನೀನು ಪೃಥ್ವಿಯಲ್ಲಿ ವೃಷಭನಾಮವನ್ನು ಹೊಂದಿ, ಅಲ್ಲಿ ಬಾಳೆಂದು ಹೇಳಿಕಳಿಸಿದನು. ಈ ಪ್ರಕಾರ ಹರಿಹರಾಚಾರ್ಯನು ಬಸವೇಶ್ವರನ ಜನನದ ಬಗ್ಗೆ ಕಥೆಯನ್ನು ಹೇಳಿದ್ದಾನೆ. ಇದಕ್ಕೂ ಅವನ ತರುವಾಯದ ಪುರಾಣಗಳಲ್ಲಿಯ ಕಥೆಗೂ ಬಹಳ ವ್ಯತ್ಯಾಸವಿರುತ್ತದೆ. ಇದರಿಂದ ಹರಿಹರನ ಕಾಲದಲ್ಲಿ ಬಸವೇಶ್ವರನು ನಂದೀ ಅವತಾರವೆಂದು ತಿಳಿಯುತ್ತಿದ್ದಿಲ್ಲವೆಂದು ತೋರುತ್ತದೆ.

## ಬಸವೇಶ್ವರನ ಜನನ.

ಮುಂದೆ ಕವಿಯು ಹೇಳಿರುವದೇನಂದರೆ ಬಾಗೇವಾಡಿ ಎಂಬ ಗ್ರಾಮವು ವಿಪ್ರಸಮುದಾಯದಿಂದ ಕೂಡಿದಂಥಾದ್ದೂ, ಶಿವಪುರಾಣಾಗಮಜ್ಞಾನಿಗಳಿಂದ ತುಂಬಿಕೊಂಡಂಥಾದ್ದೂ, ಆದ ಒಂದು ಅಗ್ರಹಾರವಾಗಿತ್ತು. ಅದಕ್ಕೆ ಮಾದಿರಾಜನೆಂಬ ಕಮ್ಮೆ ಕುಲದ ವಿಪ್ರನು ಅಗ್ರೇಶ್ವರನಾಗಿದ್ದು ಆತನ ಸತಿಯಾದ ಮಾದಲಾಂಬೆಯು ಗರ್ಭದಲ್ಲಿ ಬಸವನೆಂಬ ಹೆಸರಿನಿಂದ ವೃಷಭಗಣಾಧೀಶ್ವರನು ಜನಿಸಿದನು. ಈ ಗ್ರಂಥದಲ್ಲಿ ಮಾದಲಾಂಬಿಕೆಯು ಮಕ್ಕಳಿಲ್ಲೆಂದು ನಂದೀವ್ರತವನ್ನು ಕೈಕೊಂಡಿದ್ದೂ, ನಂದಿಯು ಆಶೀರ್ವಾದದಿಂದ ಗರ್ಭವತಿಯಾದದ್ದೂ, ಮೂರೊಂಭತ್ತು ತಿಂಗಳು ಪ್ರಸವಿಸದೆ ಹಾಗೆಯೇ ಇದ್ದದ್ದೂ ಏನೂ ಉಲ್ಲೇಖವಿರುವದಿಲ್ಲ. ಆಕೆಯು

ಇತರ ಸ್ತ್ರೀಯರಂತೆ ಗರ್ಭವತಿಯಾಗಿ ಒಂಭತ್ತು ತಿಂಗಳುಗಳ ತರುವಾಯ ಸ್ವಾಭಾವಿಕವಾಗಿ ಹಡದಳೆಂದು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ.

## ಸಂಗಮೇಶ್ವರನಿಂದ ಬಸವೇಶ್ವರನ ಲಿಂಗಧಾರಣೆ.

ಬಸವೇಶ್ವರನು ಹುಟ್ಟಿದ ಬಳಿಕ, ಸಂಗಮೇಶ್ವರನು ಆತನಿಗೆ ಲಿಂಗ ಧಾರಣ ಮಾಡಿದನೆಂದು ಈಚೆಯ ಕವಿಗಳೆಲ್ಲರೂ ತಮ್ಮ ಗ್ರಂಥಗಳಲ್ಲಿ ವರ್ಣಿಸಿರುವರು. ಮತ್ತು ಮಲಬಸವ ಚರಿತ್ರೆಯಲ್ಲಿ ಜಾತವೇದಿ ಮುನಿ ಗಳೆಂಬವರು ಶಿಶುವಿನ ಕಂಠದಲ್ಲಿ ಲಿಂಗಧಾರಣೆಯನ್ನು ಮಾಡಿದರೆಂದು ಹೇಳಿದೆ. ಆದರೆ ಹರಿಹರನು ಕೊಟ್ಟ ವೃತ್ತಾಂತದಲ್ಲಿ ಈ ಯಾವ ಉಲ್ಲೇ ಖಗಳೂ ಇರುವದಿಲ್ಲ. ಆಗ ಬಸವೇಶ್ವರನಿಗೆ ಇತರ ವಿಪ್ರರಂತೆ ಜಾತ ಕರ್ಮಗಳು ಮಾಡಲ್ಪಟ್ಟವು. ಮತ್ತು ಆತನಿಗೆ ಲಿಂಗಧಾರಣೆಯೂ ಆಗಿ ರಲಿಲ್ಲ. ಈ ವಿಷಯವನ್ನು ಕವಿಯು ಈ ಪ್ರಕಾರ ವರ್ಣಿಸಿರುತ್ತಾನೆ.

''ಆಗಳಾ ಪುತ್ರಂಗೆ ಜಾತಕರ್ಮವಮಾಡಿ
ರಾಗದಿಂ ಬಸವನೆಂಬಭಿಧಾನದಿಂ ಕೂಡಿ
ಹರನಿತ್ತ ಪೆಸರೆ ವಂಶಾವಳಿಯ ಪೆಸರಾಗೆ
ಧರೆಯ ಭಕ್ತಾಳಿಗ ನಿಮಿತ್ತವುತ್ಸವವಾಗೆ
ಲಿಂಗಮುಂತೋರೆ ಕಣ್ದೆರೆದು ಸುಖಿಯಾಗುತಂ
ಲಿಂಗಪ್ರಸಾದಮುಂ ಕೊಂಡು ಹೊರೆಯೇರುತಂ
ಮಾತೆಯು ಮನೋರಾಜ್ಯಸಿತನಕಣ್ಗಳ ಸೊಂಪು
ಆತುರದೆ ಪಾಡುತ್ತಲಿಹರ ಜೋಗುಳಜೊಂಪು. ಇತ್ಯಾದಿ

ಇವರಲ್ಲಿ ೫ನೇ ೬ನೇ ಓಳಿಗಳ ಮೇಲಿಂದ ಬಸವೇಶ್ವರನಿಗೆ ಹುಟ್ಟಿ ದಕೂಡಲೆ ಲಿಂಗಧಾರಣವಾಯಿತೆಂದು ತರ್ಕಿಸಲಿಕ್ಕೆ ಅವಕಾಶವಿದೆ. ಆದರೆ ಕಥೆಯ ಮುಂದಣ ಸಂದರ್ಭಗಳನ್ನು ನೋಡಿದರೆ ಹಾಗೆ ಅವನಿಗೆ ಲಿಂಗಧಾರಣವಾಗಲಿಲ್ಲೆಂದು ತೋರುತ್ತದೆ. ಅವುಗಳನ್ನು ನಾವು ಮುಂದೆ ವಿವರಿಸುವೆವು.

## ಬಸವನು ಮೌಂಜೀ ಬಂಧನವನ್ನು ತಿರಸ್ಕರಿಸಿದ್ದು.

ಬಸವ ಪುರಾಣ ಮೊದಲಾದ ಗ್ರಂಥಗಳಲ್ಲಿ ಬಸವೇಶ್ವರನಿಗೆ ಅವನ ತಾಯಿ ತಂದೆಗಳು ಅವನ ೮ ನೇ ವರ್ಷದ ವಯಸ್ಸಿನಲ್ಲಿ ಯಜ್ಞೋಪವೀತ ಧಾರಣ ಮಾಡಿಸಲು ಪ್ರವೃತ್ತರಾಗಲು ಅವನು ಅದನ್ನು ತಿರಸ್ಕರಿಸಿ

ಸಂಗಮೇಶ್ವರನಲ್ಲಿಗೆ ಹೋದದ್ದು ಉಲ್ಲೇಖವಿರುತ್ತದೆ. ಈ ವಿಷಯದ ಲ್ಲಾದರೂ ಹರಿಹರಾಚಾರ್ಯರ ವರ್ಣನೆಯು ತೀರಭಿನ್ನವಾಗಿರುತ್ತದೆ. ಬಸವೇಶ್ವರನು ಸಣ್ಣವನಿರುವಾಗಲೇ ಅವನ ತಾಯಿ ತಂದೆಗಳು ತೀರಿ ಕೊಂಡರು, ಆಗ ಅವನ ಮುತ್ತಬ್ಬೆಯು (ಅಜ್ಜಿಯು) ಅವನನ್ನು ಜೋಪಾ ನಮಾಡಿದಳೆಂದು ಈ ಗ್ರಂಥದಲ್ಲಿ ಹೇಳಲ್ಪಟ್ಟಿದೆ. ಬಸವನು ಅವಳಿಂದ ಪೋಷಿಸಲ್ಪಟ್ಟು ಹದಿನಾರು ವರ್ಷ ವಯಸ್ಸಿನವನಾಗುವವರೆಗೂ ಬಾಗೇ ವಾಡಿಯಲ್ಲಿಯೇ ಕಾಲ ಕಳೆದನು. ಆದರೆ ಈ ಅವಧಿಯಲ್ಲಿ ಆತನು ಕೇವಲ ಶಿವಭಕ್ತಿಯುತನಾಗಿ ಶೈವಾಚಾರ ಮಾರ್ಗಕ್ಕೆ ಅನುಸರಿಸಿ ವರ್ತಿ ಸುತ್ತಿದ್ದನೆಂದು ಕವಿಯು ಅವನನ್ನು ಬಹಳ ವರ್ಣಿಸಿದ್ದಾರೆ. ಹೀಗೆ ಬಸ ವನು ಬಾಗೇವಾಡಿಯಲ್ಲಿ ೧೬ ವರ್ಷ ಕಳೆದ ಬಳಿಕ ಅವನ ಮನಸ್ಸಿನಲ್ಲಿ ತನ್ನ ಜನಿವಾರವನ್ನು ತ್ಯಜಿಸಿ ಬಂಧುಗಳನ್ನೂ ತನ್ನ ವೃತ್ತಿಯನ್ನೂ ಬಿಟ್ಟು ಕೊಟ್ಟು ಬಾಗೇವಾಡಿಯಿಂದ ಹೊರಟು ಕಪ್ಪಡಿಯ ಸಂಗಮನಲ್ಲಿ ಇರ ತೊಡಗಿದನು. ಈ ಸಂದರ್ಭವನ್ನು ಕವಿಯು ಕೆಳಗೆ ಬರೆದ ಪ್ರಕಾರ ವರ್ಣಿ ಸಿದ್ದಾನೆ.

"ಜನನವ ಬಳಿವಿಡಿದೆಂತಕ್ಕೆ ಬಂದ ಜವ್ವನಂ ಶಿವಪೂಜೆಯಲ್ಲಿ ಸವೆಯುವೇಳ್ಕುಂ. ಇಂತಲ್ಲಲ್ಲಿ ಶಿವಭಕ್ತಿಯುಂ ಕರ್ಮವುಂ ಎಂದು ಮೊಂದಾಗಿರದು- ಎಂದೊಲ್ಲದೆ, ಪರವೈರಾಗ್ಯಯುಕ್ತಂ ಶಿವಲಿಂಗಾರ್ಚನಾ ಯತ್ತಚಿತ್ತಂ ಕರ್ಮಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಪರಿದು ಬಿಸುಟು ನವ್ಯದು ಕೂಲಮಂ ತೆಗೆದುಟ್ಟು ದಿವ್ಯವಸ್ತ್ರಮಂ ಪೊದೆದು, ಮನೆನೆಳಲಂ ನೆನೆಯದೆ ಅರ್ಥಂ ಲೆಕ್ಕಿಸದೆ ವೃತ್ತಿಯಂ ವಿಚಾರಿಸದೆ ಬಂಧುಗಳಂ ಬಗೆಯದೆ ಪುರ ಜನಮುಂ ಪರಿಕಿಸದೆ, ಹರಭಕ್ತಿಯೊಳಾತುರದಿಂ ಬಾಗೆವಾಡಿಯಂ ಪೊರ ಮಟ್ಟು ಪೂರ್ವದಿ ಅಮುಖನಾಗಿ ಕಿರಿದಂತರಂ ನಡೆದು ಬಂದು, ಮಲಪ್ರ ಹರಿ ಕೃಷ್ಣವೇಣಿಗಳ ಸಂಗಸುಖಮುಂ ಪಿಂಗದ ಕೂಡಲಸಂಗಮೇಶ್ವರನಿಪ್ಪ ಕಪ್ಪಡಿಯ ಸಂಗಮಮಂ ಪೊಕ್ಕು ಕೇರಿಕೇರಿಯೊಳು ನಡೆತಪ್ಪಾಗಳು ಶಂಕ ರಾಲಯಮುಂ ಭೋಂಕನೆಕಂಡು ಪೂರ್ವಸ್ಮರಣೆ ಕೈಗೂಡಿ, ಕಣ್ ಬಂದಂತೆ ಉಸಿರ್ ಬಂದಂತೆ ಪರಿತಂದು ರಂಗಮಂಟಪದೊಳು ದೊಪ್ಪನೆ ಬಿದ್ದೆಂತಕ್ಕೆ ದ್ದುನಿಂದು-" ಇತ್ಯಾದಿ.

ಇವರ ಮೇಲಿಂದ ಬಸವೇಶ್ವರನಿಗೆ ಮೌಂಜೆ ಬಂಧನವು ಆಗಿತ್ತೆಂತಲೂ ಅವನಿಗೆ ೧೬ನೇ ವರ್ಷದಲ್ಲಿ ವಿರಕ್ತಿಯು ಪ್ರಾಪ್ತವಾಗಲಾಗಿ ಜನ್ನಿವಾರವನ್ನು ಬಿಸುಟಿ ಸಂಗಮೇಶ್ವರನಲ್ಲಿಗೆ ಬಂದನೆಂತಲೂ ತಿಳಿಯುತ್ತದೆ.

## ಸಂಗಮೇಶ್ವರನಲ್ಲಿ ಬಸವನ ವಾಸ.

ಆಗ ಸಂಗಮೇಶ್ವರ ದೇವರ ಸ್ಥಾನಪತಿಗಳಾದವರು ಈಶಾನ್ಯ ಗುರುಗಳೆಂಬವರು ಇದ್ದು ಅವರು ಬಸವನನ್ನು ಕಂಡು ಇವನು ಕಾರಣ ಪುರುಷನಾಗುವನೆಂದು ತಿಳಿದು ನೀನೆಲ್ಲಿಗೂ ಹೋಗಬೇಡ, ಸಂಗಮೇಶ್ವರನನ್ನು ಪೂಜಿಸುತ್ತ ಇಲ್ಲಿಯೇ ಸುಖವಾಗಿರು ಎಂದು ಹೇಳಲು ಬಸವೇಶ್ವರನು ಅವರ ಮಾತನ್ನು ಕೈಕೊಂಡು ಅಲ್ಲಿಯೇ ಇರತೊಡಗಿದನು.

ಮುಂದೆ ಬಸವೇಶ್ವರನು ಸಂಗಮೇಶ್ವರನನ್ನು ಪೂಜಿಸುತ್ತ ಹ್ಯಾಗೆ ಹ್ಯಾಗೆ ಕಾಲಕಳೆಯುತ್ತಿದ್ದನೆಂಬದನ್ನು ಹರಿಹರನು ಇಲ್ಲಿ ಬಹಳ ಸರಸಾಗಿ ವರ್ಣಿಸಿದ್ದಾನೆ. ಇಡೀ ಗ್ರಂಥದಲ್ಲಿ ಈ ಭಾಗವು ಅತ್ಯಂತ ಸುಂದರವಾಗಿರುತ್ತದೆ. ಬಸವೇಶ್ವರನು ಪ್ರಭಾತ ಸಮಯದಲ್ಲಿ ಏಳುವನು. ಮತ್ತು ಹೂದೋಟವನ್ನು ಹೊಕ್ಕು ಪುಷ್ಪಗಳನ್ನು ತಿರಿತಂದು ಶಿವನಿಳಯವನ್ನು ಹೊಕ್ಕು ಸಂಗಮೇಶ್ವರನನ್ನು ನಾನಾವಿಧವಾಗಿ ಪೂಜಿಸುವನು, ಅವನನ್ನು ಭಕ್ತಿಭಾವದಿಂದ ನಾನಾಬಗೆಯಾಗಿ ಸ್ತುತಿಸುವನು. ಹರಿಹರನು ಮಾಡಿದ ವರ್ಣನೆಗಳ ಕೆಲ ವಂಶಗಳನ್ನು ವಾಚಕರ ಅವಗಾಹನೆಗಾಗಿ ನಾವು ಕೆಳಗೆ ಉದಹರಿಸಿದ್ದೇವೆ.

"ಒಲವಿಂದ ನಡೆತಂದು ಶಿವನಿಳಯಮಂ ಪೊಕ್ಕು
ನಲಿನಲಿದು ನೇಹವಂ ಕುರಿಸುತಿರೆ ಕೈಮಿಕ್ಕು।
ಲಿಂಗ ಶರಣೆನುತ ಘಂಟೆಯನೊಲವಿಂದಿಳಿಪಿ
ಸಂಗಮೇಶ್ವರನ ಹತ್ತಿರೆ ಹದುಳದಿಂದಿಳಿಪಿ।
ಬರವನೆಳಸಿರ್ದಯ್ಯ ದೇವ ತಳುವಿದೆನೆಂದು
ಉರವಣಿಸಿ ಬರುತಿರ್ದೆ ತಂದೆ ಮುಳಿಯದಿರೆಂದು।
ಎನ್ನಯ್ಯ ಎನ್ನರಸ ಎನ್ನ ಬಂಧುವೆ ಎನುತೆ
ಎನ್ನ ಕಣ್ಣಿಂ ಗತಿಯೆ ಮತಿಯೆ ಕರುಣಿಪುದೆನುತೆ।
ಅಲ್ಲಿ ಕಸ್ತುರಿಯು ಶ್ರೀಗಂಧಗಳಿಂ ಪೊರೆದ
ಸಲ್ಲಲಿತದಿರವಂತಿ ಸಂಪಗೆಗಳಿಂ ಪೊರೆದ।

ನುತಶೀತಳಂಗಳಂ ಪೊಂಗಳಸದೊಳು ತೀವಿ
ಅತಿಶಯಾನಂದಾಶ್ರುವಂ ಕಣ್ಗಳೊಳು ತೀವಿ।
ಕೊಂಡಾಡಿ ಕೊಂಡಾಡಿ ಮಜ್ಜನಕ್ಕೆರೆವುತಂ
ಮುಂಡಾಡಿ ಮುಂಡಾಡಿ ನೊಸಲೊಳಚ್ಚೊತ್ತುತ್ತಂ।

ಗುರುಸಂಗ ಶಿವಲಿಂಗ ಸತ್ಯಶರಣರ ಸಂಗ
ವರಸಂಗಲಿಂಗ ಶರಣಾಗು ಬಸವನ ಸಂಗ।
ಕರುಣರಸನಿಧಿ ಘನತರಂಗ ಸಂಗಮದೇವ
ಗಿರಿಸುತೆಯ ಸಮಸುಖಾಲಿಂಗ ಸಂಗಮದೇವ।
ಸುಕುಮಾರ ಶಶಿಕಳಾಚೂಡ ಕೂಡಲಸಂಗ
ಸಕಲ ನಿರ್ಮಾಯಿಕಕ್ರೀಡ ಕೂಡಲಸಂಗ।
ನಿತ್ಯ ನಿರ್ಮಳನೆ ನಿಃಕಳನೆ ಕೂಡಲಸಂಗ
ನಿತ್ಯ ನಿರ್ಭಯನೆ ನಿರುಪಮನೆ ಕೂಡಲಸಂಗ।

ಎಂದು ಸ್ತುತಿಗೆಯ್ವುತಂ ಸ್ನೇಹರಸದೊಳ್ ಕೂಡಿ
ಇಂದುಧರನೊಳ್ ಸಲುಗೆಯಿಂ ಭಕ್ತಿಯಂ ಬೇಡಿ।
ನೋಂದು ಭೀತಿಯು ತೋರಿ ತೊದಳಿಂದ ನುಡಿವುತಂ
ಸಂದ ಗದುಗದಿಕೆಯಿಂದಾನಂದವೇರುತಂ।
ಪುಟನೆದ್ದು ಹೊಂಗುತಂ ದಳವೇರಿ ಹಿಗ್ಗುತಂ
ನಟ್ಟೆರ್ಪ ನೋಟದಿಂದೋಜೆಯಂ ಮೀರುತಂ।
ಭವದಿಂದ ಹಿಂಗುತಂ ನೆನಹಿಂದ ಹಿಗ್ಗುತಂ
ಬೆವರುತಂ ಬಿಕ್ಕುತಂ ತೇಗುತಂ ತೂಗುತಂ।
ಕ್ರಮವಳಿದು ಸುಳಿದು ಸುಖಿಯಾಗುತಂ ಬೀಗುತಂ।
ನಮಿಸುತಂ ಕಂಪಿಸುತೆ ಮನವೊಲೆದು ಹೊಗಳುತಂ।
ಪುಳಕಂಗಳಿದಿರೇರೆ ಸುಖಜಲಂ ಕಣ್ತೀವೆ
ಬೆಳೆವ ಗದುಗದವಲರೆ ಭಕ್ತಿ ಚಿತ್ತಮನೋವೆ।
ಕಂಪಿಸುತೆ ನಡೆಯುಡುಗೆ ಮನವಕ್ಕರಿಂ ಕರಗೆ
ಜೊಂಪಿಸುತೆ ತನು ಜೋಲೆ ಸಾತ್ವಿಕರಸಂ ಮಸಗೆ।
ಮಣಿಮಣಿದು ಕುಣಿಕುಣಿದು ಕೆಲೆಕೆಲೆದು ನಲಿದಾಡಿ

ತಣಿತಣಿದು ತಕ್ಕೈಸಿ ಮಿಕ್ಕು ಮುಲೆಮುಲೆದಾಡಿ।
ಆಡುತಾಡುತ್ತಲ್ಲಿ ಪೊಗಳ್ವುದಂ ನೆರೆಮುರಿದು
ನೋಡನೋಡುತ್ತಲ್ಲಿ ನೋಟಮುಂ ಮಿಗೆಮುರಿದ।
ಕಣ್ಮುಚ್ಚಿ ಗದುಗದಿಸಿ ಜೋಲ್ದು ಜೊಂಪಿಸಿ ಬಿದ್ದು
ಉಣ್ಮುವ ಶಿವಾನಂದರಸದ ಹೊನಲೊಳಗದ್ದು
ಈಸಾಡಿ ಗಂಗಾಧರನ ಚರಣಮುಂ ಪಿಡಿದು
ಲೇಸಾಗಿ ಚಿತ್ತದೊಳು ಸಂಗನಂ ನೆರೆಪಿಡಿದು।
ಮನದೊಳಚ್ಚೊತ್ತಿ ಸುಖಮೂರ್ಛೆಯೊಳ್ ಸಃದಿರ್ದು
ಘನಸುಖದೊಳಿರಡಿಲ್ಲದೊಂದಲ್ಲದಿರುತಿರ್ದು।
ನೆನೆದು ಚೇತರಿಸಿ ಮೆಲ್ಲನೆ ಮೆಲ್ಲನೆಚ್ಚತ್ತು
ಅನುಪಮ ಶಿವೈಕ ಸ ಖಮುಖ ತೃಪ್ತಿಯಂ ಹೊತ್ತು।
ಕಣ್ದೆರೆದು ಕುಳ್ಳಿರ್ದು ಸಂಗನಂ ನಡೆ ನೋಡಿ
ನುಣ್ದನಿಯೊಳರ್ಚನೆಯ ನೇಹಮುಂ ಮಾತಾಡಿ।
ಪಾದೋದಕ ಪ್ರಸಾದಂಗಳಂ ಕೈಕೊಂಡು
ಸಾದರಂ ಸಂಗನೊಲುಮೆಯುನೊಚ್ಚತಂಗೊಂಡು।
ದಿನದಿನಕೆ ಘಳಿಗೆ ಘಳಿಗೆಗೆ ಭಕ್ತಿ ಮಿಗಿಲಾಗೆ
ಅನುದಿನಂ ನೇಹಮಿಮ್ಮಡಿಸಿ ನೂರ್ಮಡಿಯಾಗೆ।
ಸಂಗನಾಮಂಗಳಂ ಸುರಜನಕೆ ಕಲಿಸುತಂ
ಸಂಗ ಶರಣೆಂದವರ ಪದತಳಕ್ಕೆರಗುತಂ।
ನಡೆವಲ್ಲಿ ನುಡಿವಲ್ಲಿ ಸಂಗ ಶರಣೆಂದೆನುತೆ
ಉಡುವಲ್ಲಿ ಉಂಬಲ್ಲಿ ಸಂಗ ಶರಣೆಂದೆನುತೆ।
ಕೊಡುವಲ್ಲಿ ಕೊಂಬಲ್ಲಿ ಸಂಗ ಶರಣೆಂದೆನುತೆ
ತೊಡುವಲ್ಲಿ ಪೊಡೆವಲ್ಲಿ ಸಂಗ ಶರಣೆಂದೆನುತೆ।

ಅಂಬಕತ್ರಯನ ಸುತ್ರಂ ಪೂಜಿಸುತ್ತಮಿರೆ
ಬಸವಣ್ಣನ ಪ್ರತಿಮನೊಲಿದು ಪೂಜಿಸುತ್ತಮಿರೆ
ಬಸವರಾಜಂ ಮುಚ್ಚಿ ಪೂಜಿಸುತ್ತಿರೆಯಿರೆ॥

## ಬಸವೇಶ್ವರನಿಗೆ ಲಿಂಗಧಾರಣವು.

ಈ ಪ್ರಕಾರ ಬಸವನು ಸಂಗಮೇಶ್ವರನಲ್ಲಿ ಅತಿ ಭಕ್ತಿಯುಳ್ಳವನಾಗಿ ಅವನನ್ನೇ ಅರ್ಚಿಸುತ್ತ, ಪೂಜಿಸುತ್ತ ಇರಲು ಒಂದು ದಿವಸ ದೇವಾಲ

ಯಾದ ರಂಗಮಂಟಪದಲ್ಲಿ ಪರಮಾತ್ಮನನ್ನೇ ಧ್ಯಾನಿಸುತ್ತ ನಿದ್ರೆಗೊಳಗಾದನು. ಆಗ ಸಂಗಮೇಶ್ವರನು ಅವನ ಕನಸಿನಲ್ಲಿ ಬಂದು ಬಸವಿದೇವನೇ ನೀನು ಬಿಜ್ಜಳರಾಯನಿರುವಂಥ ಮಂಗಳವಾಡ ಪುರಕ್ಕೆ ಹೋಗಿ ನಿಲ್ಲು ಎಂದು ಆಜ್ಞಾಪಿಸಿದನು. ಆಗ ಬಸವಣ್ಣನು ನಿದ್ರೆ ತಿಳಿದೆದ್ದು ಕನಸಿನಲ್ಲಿ ಸಂಗಮೇಶ್ವರನು ಅಪ್ಪಣೆ ಇತ್ತುದಕ್ಕೆ ಬೆಚ್ಚಿ ಅನುತಾಪಗೊಂಡು ಸಂಗಮೇಶ್ವರನನ್ನು ಬಿಟ್ಟುಹೋಗುವ ಪ್ರಸಂಗವು ಒದಗಿತಲ್ಲಾ ಎಂದು ದುಃಖಿಸಿ ಅತ್ಯಂತವಾಗಿ ರೋದಿಸಹತ್ತಿದನು. ಈ ಪ್ರಕಾರ ಅವನು ರಂಗಮಂಟಪದಲ್ಲಿಯೇ ಮರುದಿನ ಕಾಲಕಳೆದನು. ಆ ದಿನ ರಾತ್ರಿ ಸಂಗಮೇಶ್ವರನು ಅವನ ಕನಸಿನಲ್ಲಿ ಪುನಃ ಬಂದು ಅಂದದ್ದುಃ— ಎಲೆ ಮಗನೆ, ಬಸವೇಶ್ವರನೇ, ನಿನ್ನನ್ನಗಲಿ ನಾನೂ ಇರಲಾರೆ. ನಿನ್ನೊಡನೆ ನಾನೂ ಬರುವೆನು. ನಾಳೆ ಮಧ್ಯಾನ್ಹದಲ್ಲಿ ನೀನು ಶುದ್ಧಾಂಗನಾಗಿ ಬಂದು ನಂದಿಕೇಶ್ವರನ ಮುಂದೆ ನನ್ನನ್ನು ನೆನೆಯುತ್ತ ಕುಳಿತರೆ ಆ ವೃಷಭನ ಮುಖಾಂತರ ನಾನು ನಿನ್ನೊಡನೆ ಬರುವೆನು. ಆತನೇ ನಿನಗೆ ಸದ್ಗುರುವು. ಆ ಬಳಿಕ ನನ್ನನ್ನು ಅರ್ಚಿಸುತ್ತ ಇರು ಎಂದು ಹೇಳಿದನು. ಆಗ ಬಸವನು ನಿದ್ರೆತಿಳಿದೆದ್ದು ಸಂಗಮೇಶ್ವರನು ಹೇಳಿದ ಪ್ರಕಾರ ಶುದ್ಧಾಂಗನಾಗಿ ಸಂಗಮೇಶ್ವರನ ಧ್ಯಾನಾರೂಢನಾಗಿ ನಂದಿಕೇಶ್ವರನ ಸಮೀಪದಲ್ಲಿಯೇ ಕುಳ್ಳಿರಲು ಆಗ ಕೆಳಗೆ ಕಾಣಿಸಿದ ಸಂಗತಿಯು ವರ್ತಿಸಿತು. ಏನೆಂದರೆಃ—ಒಂದು ದಿವ್ಯವಾದ ಶಿವಲಿಂಗವು ನಂದಿಯ ಹೃದಯದೊಳಗಿಂದ ಹೊರಹೊರಟು ನಾಲಿಗೆಯ ತುದಿಯಲ್ಲಿ ಬರಲು ಬಸವೇಶ್ವರನು ಅಲ್ಲಿ ಕೈಯೊಡ್ಡಲು, ವೃಷಭರಾಜನು ತನ್ನ ಮುಖಮಂಡಲವನ್ನು ಬಸವನ ಮಸ್ತಕದಲ್ಲಿಟ್ಟು ಪಂಚಾಕ್ಷರಿಯನ್ನು ಅರುಹಿ ಸತ್ಯೋಪದೇಶವನ್ನು ಮಾಡಿದನು. ಕವಿಯು ಇದನ್ನು ವರ್ಣಿಸಿರುವದು ಹ್ಯಾಗೆಂದರೆ "ವೃಷಭನ ಮುಖವಿಕಾಸಮುನ್ನೈದೆ ಜಿಹ್ವೆ ಸಿಂಹಾಸನಂಗೊಂಡು ನಂದಿಯ ಮುಖದಿಂದೊಗೆತಪ್ಪ ದಿವ್ಯಲಿಂಗಮಂ ಸಂಗನಬಸವಂ ಸ್ನೇಹ ರಸಭರಿತನಾಗಿ ಸಾತ್ವಿಕ ದೃಷ್ಟಿಯಿಂದಾ ಲಿಂಗಿಸುವಂತೆ ನೋಡಿ ನೋಡಿ ಮನದಳೋವಿ ಹೃತ್ಕಮಳದೊಳು ಬೆಳೆದ ಲಿಂಗಕ್ಕೆ ಕರಕಮಳಮನಾಂತು ನಂದಿಯ ನಾಲಗೆಯ ತುದಿಗಂ ತನ್ನ ಕರಪಲ್ಲವಕಂ ಸಂದಿಲ್ಲದಂತೆ ಕೊಯೊಡ್ಡಿರೆ ವೃಷಭರಾಜಂ ಪತಿಯನುಜ್ಞೆಯೊಡನೆ ಬಸವಣ್ಣನ ಹಸ್ತದೊಳು ಸಂಗಮೇಶ್ವರಲಿಂಗಮಂ ಭೋಂಕನೆ ಬಿಜಯಂಗೈಸಿಕೊಂಡು ಮೃದು ಮೃದಂಗ ಪಟಹ ಕಹಳಾ

ನಿನಾದ ಸುಮನಸ ವೃಷ್ಟಿಗಳ ನಡುವೆ ಸುಪುತ್ರನಂ ನಿಜ ಜನಕಂ ಮೂರ್ಧ್ನಿ ಘ್ರಾಣಮಂ ಮಾಡುವಂತೆ ವೃಷಭರಾಜಂ ಮುಖಮಂಡಲಮಂ ಬಸವನ ಮಸ್ತಕದೊಳಿಟ್ಟು ಪಂಚಾಕ್ಷರಿಯ ಸಂಜಮ ನರಿಪಿ ಅಮೃತಮಯಲಾಲಾ ಜಳದೊಳಭಿಷೇಕಮನಲಂಕರಿಸಿ ಸತ್ಯೋಪದೇಶಮಂ ಶಾಂತಮಯಂಗೆ ಮಾಡಿ ಸ್ನೇಹದಿಂ ನೋಡಿ ಕಾರುಣ್ಯಮಂ ನೀಡಿ ಸಾಮರ್ಥ್ಯಮಂ ಕೊಡಿ ನಂದೀಶ್ವರಂ ಸಂಗಮೇಶ್ವರಂಗೆರಗಿ ಮುನ್ನಿನಂತೆ ಶಿವಲಿಂಗ ಶ್ರೀಪಾದ ನಿರಂತರಾವಳೋಕನಾಗಿರೆ."

ಈ ಮೇರೆಗೆ ಬಸವೇಶ್ವರನಿಗೆ ಲಿಂಗಧಾರಣ ಮಾಡಿದವನು ಸಂಗಮೇಶ್ವರನಲ್ಲ, ಆದರೆ ನಂದಿಕೇಶ್ವರನೆಂದು ಇಲ್ಲಿ ಹೇಳಲ್ಪಟ್ಟಿದೆ.

## ಕಲ್ಯಾಣಕ್ಕೆ ಬಸವನ ಆಗಮನ

ಈ ಪ್ರಕಾರ ಬಸವನು ಸಂಗಮೇಶ್ವರನ ಅನುಜ್ಞೆಯನ್ನು ಹೊಂದಿ ಮಂಗಳವಾಡ ಪಟ್ಟಣಕ್ಕೆ ಬಂದು ಬಿಜ್ಜಳರಾಯನ ಅರಮನೆಗೆ ನಡೆದು ಬರುತ್ತಿರಲು ಅವನು ಲೆಕ್ಕದ ಕಾರಕೂನರು ಕುಳ್ಳಿರುವ ಸ್ಥಳಕ್ಕೆ ಬಂದನು. ಅಷ್ಟರಲ್ಲಿ ಈ ಲೆಕ್ಕವನ್ನು ನೋಡುವ ಉದ್ದಿಶ್ಯವಾಗಿ ದಂಡಾಧಿಪತಿಯಾದ ಸಿದ್ಧಣ್ಣನು ಅಲ್ಲಿಗೆ ಬರಲು ಅವನಿಗೆ ಗಣಕರು ಲೆಕ್ಕವನ್ನು ಒಪ್ಪಿಸಲು ಅದರಲ್ಲಿ ತಪ್ಪಿದ್ದದ್ದನ್ನು ಬಸವನು ಕಂಡು ಹಿಡಿದು ಸಿದ್ಧಣ್ಣ ದಂಡಾಧಿಪತಿಗೆ ತಿಳಿಸಿದನು. ಆಗ ದಂಡಾಧಿಪತಿಯು ಬಸವೇಶ್ವರನ ಬುದ್ಧಿವಂತಿಕೆಗೆ ಮೆಚ್ಚಿ ಒಂದು ವರ್ಷಕ್ಕೆ ೧೦೧ ಹೊನ್ನು ಸಂಬಳದ ಮೇಲೆ ಅಧಿಕಾರಿಯನ್ನಾಗಿ ಮಾಡಿ ಅವನನ್ನು ತನ್ನ ಅರಮನೆಯಲ್ಲಿಯೇ ಇಟ್ಟು ಕೊಂಡನು.

## ಬಸವೇಶ್ವರನು ಮಂತ್ರಿಯಾದದ್ದು

ಈ ಪ್ರಕಾರ ಬಸವೇಶ್ವರನು ಸಿದ್ಧಣ್ಣ ಭಂಡಾರಿಯ ಅರಮನೆಯಲ್ಲಿರುತ್ತಿರಲು ಬಸವೇಶ್ವರನ ಕುಲಗೋತ್ರಗಳು ತನ್ನ ಕುಲಗೋತ್ರಗಳು ಒಂದೇ ಎಂದು ತೋರಲು ಸಿದ್ಧಣ್ಣನು ತನ್ನ ಯಾವತ್ತೂ ಧನಕನಕ ವಸ್ತುಗಳನ್ನು ಬಸವನ ವಶಕ್ಕೆ ಕೊಟ್ಟನು. ಮುಂದೆ ಕೆಲವು ದಿವಸಗಳ ಮೇಲೆ ಈ ಸಚಿವ ಸಿದ್ಧಣ್ಣನಿಗೆ ಮರಣವು ಪ್ರಾಪ್ತವಾಗಲು ಬಿಜ್ಜಳ ಅರಸನು ಬಸವನನ್ನು ಕರೆಯಿಸಿ ಸಿದ್ಧದಂಡಾಧಿಪತಿಯು ಅಪುತ್ರಕನಾಗಿ ಮರಣ ಹೊಂದಿದ ಕಾರಣ ಅವನ ಸಂಪತ್ತಿಗೆಲ್ಲ ಬಸವನನ್ನೇ ಒಡೆಯ

ನನ್ನಾಗಿ ಮಾಡಿದನು. ಇಷ್ಟೇ ಅಲ್ಲ, ಅವನ ಜಾಣತನವನ್ನೂ ಬುದ್ಧಿ ವಿಶೇಷವನ್ನೂ ಕಂಡು ತನ್ನ ರಾಜ್ಯದ ಶಿಕ್ಷೆ ರಕ್ಷೆ ಯಾವತ್ತನ್ನೂ ಬಸವೇಶ್ವರನಿಗೊಪ್ಪಿಸಿ ಆತನನ್ನು ತನ್ನ ಸಚಿವನನ್ನು ಮಾಡಿಕೊಂಡನು.

ಈ ಎಲ್ಲ ವೃತ್ತಾಂತದಲ್ಲಿ ಹರಿಹರನು ಬಲದೇವ ಮಂತ್ರಿಯ ಹೆಸರನ್ನು ಸಹ ತೆಗೆದುಕೊಂಡಿಲ್ಲ. ಮತ್ತು ಬೇರೆ ಪುರಾಣಗಳಲ್ಲಿ ವಿವರಿಸಿದಂತೆ ಬಸವೇಶ್ವರನು ಬಿಜ್ಜಳನನ್ನು ಓಲಗದಲ್ಲಿ ಕಂಡಾಗ್ಗೆ ಅಲ್ಲಿ ಒಂದು ಲಿಪಿಯು ಆಕಾಶದಿಂದ ಬಿದ್ದದ್ದೂ ಅವನು ಅದನ್ನು ಓದಿದ್ದೂ ಅದರ ಮೂಲಕ ಬಿಜ್ಜಳನಿಗೆ ಅನಂತ ಐಶ್ವರ್ಯ ದೊರಕಿದ್ದೂ, ಅದಕ್ಕೆ ಬಿಜ್ಜಳನು ಪ್ರೀತನಾಗಿ ಬಸವನಿಗೆ ಮಂತ್ರಿಪದವನ್ನು ಕೊಟ್ಟದ್ದು ಇವಾವೂ ಉಲ್ಲೇಖವಿಲ್ಲ.

## ಬಸವನ ಹೆಂಡಂದಿರು

ಹರಿಹರನು ತನ್ನ ಈ ಗ್ರಂಥದಲ್ಲಿ ಗಂಗಾದೇವಿ ಮತ್ತು ಮಾಯಿದೇವಿ ಎಂಬಿಬ್ಬರು ಬಸವೇಶ್ವರನಿಗೆ ಹೆಂಡರಿದ್ದರೆಂದು ಹೇಳಿದ್ದಾನೆ. ಆದರೆ ಇವರು ಯಾರ ಕನ್ನಿಕೆಯರು ಎಂಬದರ ಬಗ್ಗೆ ಯಾವುದನ್ನು ಉಲ್ಲೇಖಿಸಿರುವದಿಲ್ಲ. ಇವರಲ್ಲಿ ಮಾಯಿದೇವಿ ಎಂಬ ಹೆಸರು ತೀರ ಹೊಸದಿರುತ್ತದೆ. ನೀಲಾಂಬಿಕೆಯ ಉಲ್ಲೇಖವು ಏನೂ ಇರುವದಿಲ್ಲ. ಮುಂದೆ ಈ ಗಂಗಾದೇವಿಗೆ ಸಿದ್ಧರಸನೆಂಬ ಪುತ್ರನು ಹುಟ್ಟಿದ ಹಾಗೆ ಇದರಲ್ಲಿ ಉಲ್ಲೇಖವಿದೆ. ಆದರೆ ಬೇರೆ ಗ್ರಂಥಗಳಲ್ಲಿ ಬಸವೇಶ್ವರನ ಮಗನ ಹೆಸರು ಬಾಲಸಂಗಣ್ಣನೆಂದು ಹೇಳಲ್ಪಟ್ಟಿದೆ.

## ಬಸವನ ಮಂತ್ರಿಪದತ್ವ

ಇಷ್ಟರಲ್ಲಿ ಬಸವೇಶ್ವರನ ಭಕ್ತಿ, ಅವನ ಔದಾರ್ಯ ಇವೆಲ್ಲವು ದೇಶಾಂತರಗಳಲ್ಲಿ ಪಸರಿಸಿದ್ದರಿಂದ ಅನೇಕ ದೇಶಗಳ ಮಾಹೇಶ್ವರರು ಕಲ್ಯಾಣಪಟ್ಟಣಕ್ಕೆ ಬರತೊಡಗಿದರು. ಮತ್ತು ಅವರನ್ನು ಬಸವೇಶ್ವರನು ಬಹು ಭಕ್ತಿಯಿಂದ ಕಂಡು ಉಪಚರಿಸುತ್ತಿದ್ದನು. ಆ ಕಾಲಕ್ಕೆ ಬಸವೇಶ್ವರನಲ್ಲಿಯ ಅದ್ಭುತ ಶಕ್ತಿಯ ಮೂಲಕ ಅನೇಕ ಪವಾಡಗಳು ಸಂಭವಿಸಿದವು. ಆದರೆ ಬಸವೇಶ್ವರನು ತನ್ನ ಶೀಲ, ನಡೆನುಡಿಗಳಿಂದ ಸರ್ವರಲ್ಲಿಯೂ ತನ್ನ ವಿಲಕ್ಷಣ ಪ್ರಭಾವವನ್ನು ಬೀರಿದನು. ಈ ನಡೆನುಡಿಗಳನ್ನು ಹರಿಹರನು ಕೆಳಗೆ ಬರೆದ ಪ್ರಕಾರ ವರ್ಣಿಸಿರುವನು.

“ಎಲೆ ಬಸವ, ಬಸವಣ್ಣ, ಬಸವಯ್ಯ, ಬಸವರಸ, ಬಸವರಾಜ, ಬಸವಿದೇವ, ಕೇಳಯ್ಯ. ನಿನ್ನ ನೇಮ ವಿದಾಗುರ್ಗಂಟು? ಗುರುಲಿಂಗದೊಳೆರಡಿಲ್ಲದಿಪ್ಪೆ. ಶರಣರಂ ಸಂಗನೆಂದೆ ಕಾಣ್ಬೆ. ಬಂದ ಭಕ್ತರನತ್ಯಾದರಿಪೆ. ಬಪ್ಪ ಭಕ್ತರಂ ಹರುಷದೊಳಿದಿರ್ಗೊಂಬೆ. ಬೇಡಿದುದ ಶರಣರ್ಗಿಲ್ಲೆನ್ನದೀವೆ. ಬೇಡಲೊಲ್ಲದವರ್ಗೆ ಮಿಗಿಲಾಗಿ ಆರಾಧಿಪೆ. ಜಾಗ್ರತ್ಸ್ವಪ್ನ ಸುಷುಪ್ತಿಯವಸ್ಥಾತ್ರಯಂಗಳೊಳು ಶರಣರಂ ಸಂಗನೆಂದಲ್ಲದೆ ಕಾಣೆ. ನಿಚ್ಚಶಿವರಾತ್ರಿಯು ನಚ್ಚರಿಯಿಂ ಮಾಳ್ಪೆ. ಜಂಗಮ ಪ್ರಾಣಿಯಾಗಿಪ್ಪೆ. ಶಿವಲಿಂಗಾರ್ಪಿತವಲ್ಲದುದನಾಘ್ರಾಣಿಸೆ, ನೊಡೆ, ನುಡಿಯೆ, ಮುಟ್ಟೆ, ಕೇಳೆ, ಶಿವಸಮಯವನುದ್ಧರಿಸುವೆ. ಪರಸಮಯವಂ ಸಂಹರಿಸುವಿಯೆ. ಲಿಂಗದಲ್ಲಿ ಕಠಿನವಂ ಕೇಳೆ. ಜಂಗಮದಲ್ಲಿ ಜಾತಿಯನರಸೆ. ಪ್ರಸಾದದಲ್ಲಿ ಅಪವಿತ್ರತೆಯನರಿಯೆ. ಪರಾಂಗನೆಯರಂ ಹೆತ್ತ ತಾಯ್ಗಳೆಂಬೆ ಪರದ್ರವ್ಯಮಂ ಕಿಲ್ಬಿಷವೆಂದು ಮುಟ್ಟೆ. ನಡೆದು ತಪ್ಪೆ, ನುಡಿದು ಹುಸಿಯೆ, ಹಿಡಿದು ಬಿಡೆ, ಬಿಟ್ಟು ಹಿಂಗಲೀಯೆ, ಕೊಟ್ಟು ನೆನೆಯೆ, ನಟ್ಟು ಕೀಳೆ, ಮುಟ್ಟಿ, ಪೆರಪಿಂಗೆ, ಕೂಡಿ ತಪ್ಪೆ, ನೋಡಿ ನಿರಾಕರಿಸೆ, ನೆನೆದು ಮರೆಯೆ. ಮನದೊಳೋವರಿಯಿಲ್ಲ. ಬುದ್ಧಿಯೊಳು ವಿಸಂಚವಿಲ್ಲ, ಅಹಂಕಾರದೊಳು ಗರ್ವವಿಲ್ಲ. ಚಿತ್ತದೊಳು ಹೊರೆಯಿಲ್ಲ, ಕಾಮವಿಲ್ಲ. ಕೋಪದ ಮಾತೇಕೆ? ಲೋಭದ ಗಾಳಿ ತೀಡದು, ಮೋಹಕೆ ತೆರಹಿಲ್ಲ, ಮದದ ಸೊಗಡು ಹೊದ್ದದು, ಮತ್ಸರಕ್ಕೆಂಬಿಲ್ಲ. ಬಸವರಾಜ, ನಿನ್ನ ಗುಣಂಗಳಂ ಬಣ್ಣಿಸಲೆಮ್ಮಳವಲ್ಲ. ಈಶನವೊಸಲಪ್ಪ ಭಕ್ತ, ನಿನಗೆಣೆಯಿಲ್ಲ ಪಡಿಯಿಲ್ಲ ಪಾಸಟಿಯಾವಂ? ಪಾಷಂಡಿ ಭೂಮಿಯೊಳು ಶಿವಭಕ್ತಿಯನಾರಂಭಿಸಿ ಸಾಮರ್ಥ್ಯವಂ ಬಿತ್ತಿ ಪ್ರತ್ಯಕ್ಷಂಗಳಂ ಬೆಳೆದು ಗಣಪರ್ವಂಗಳಂ ಸುಫಲಂ ಮಾಡಲೆಂದು ಬಂದ ಕಾರಣಿಕ ಬಸವ, ನಿನ್ನ ದೆಸೆಯಿಂದೆಮ್ಮ ಭಕ್ತಿ ಬಣ್ಣವೇರಿತು, ಎಂದಡಿಗಡಿಗೆ ಮೆಚ್ಚಿ ತೂಗಾಡುವ ಗಣಂಗಳ ಚರಣಂಗಳಂ ಬಿಗಿಯಪ್ಪಿ ಬಸವರಾಜಂ ಪೊಗಳ್ತೆಗೆ ತಲ್ಲಣಿಸಿ ತಗ್ಗಿ ಮೆಲ್ಲನೆಗೊಂಡಾಗಳಾಗಳಿನ ಸಂಗತಿಗೆ ಹೊಸ ಹೊಸ ಗೀತಮಂ ಕೇಳಿಸುತ್ತಿರ್ದ ಸಮಯದೊಳು”

## ಬಸವನ ಪವಾಡಗಳು

ಬಸವನು ರಾಜಧಾನಿಯಲ್ಲಿರುವಾಗ ಅನೇಕ ಪವಾಡಗಳು ಸಂಭವಿಸಿದ್ದು ಅವುಗಳನ್ನು ಹರಿಹರನು ತನ್ನ ಗ್ರಂಥದಲ್ಲಿ ಬಹು ಸರಸಾಗಿ

ವರ್ಣಿಸಿದ್ದಾನೆ. ಅವನು ಕೇತಕೀ ಕುಸುಮಗಳಿಂದ ಮಂಗಳವಾಡದ ಶಿವ ಲಿಂಗಗಳೆಲ್ಲವನ್ನೂ ಶೋಭಿತ ಮಾಡಿದ್ದೂ ಕೊಂಡೆಯರು ಹೊರಿಸಿದ ದೋಷಕ್ಕೋಸ್ಕರ ಬಿಜ್ಜಳನಿಗೆ ಭಂಡಾರದ ಲೆಖ್ಖವನ್ನು ಸರಿಮಾಡಿ ತೋರಿ ಸಿದ್ದೂ ಡಂಭರು ಬದನೆಯಕಾಯಿಗಳನ್ನು ಕೊರಳಲ್ಲಿ ಕಟ್ಟಿಕೊಂಡು ಬರಲು ಬಸವೇಶ್ವರನು ಅವುಗಳನ್ನ ಲಿಂಗವಾಗಿ ಮಾಡಿದ್ದೂ, ಒಬ್ಬ ಶರಣನು ಅರಮನೆಯನ್ನು ಬಿಟ್ಟು ಹೋಗಲು ಅವನೊಡನೆ ಬಸವೇಶ್ವರನ ಪ್ರಾಣ ವೂ ಹೋದದ್ದೂ, ಅಸ್ಪೃಶ್ಯನಾದ ಕಂಬಳಿಯ ನಾಗಿದೇವನೆಂಬವನಲ್ಲಿ ಊಟ ಮಾಡಿದ್ದೂ, ಕಿನ್ನರಯ್ಯನು ಪಟ್ಟಣಕ್ಕೆ ಬರಲು ಅವನ ಕೋಪ ವನ್ನು ದೂರಮಾಡಲು ಉಳ್ಳಿಯ ಹಬ್ಬವನ್ನು ಮಾಡಿದ್ದೂ, ಇವೇ ಮೊದ ಲಾದ ಪವಾಡಗಳು ಇದರಲ್ಲಿ ಉಲ್ಲೇಖಿಸಲ್ಪಟ್ಟಿವೆ. ಇವೆಲ್ಲವುಗಳು ಬಹು ಸುಂದರವಾಗಿ ಈ ಗ್ರಂಥದಲ್ಲಿ ವರ್ಣಿಸಲ್ಪಟ್ಟಿದ್ದು ವಾಚಕರು ಅವುಗ ಳನ್ನು ಓದಿ ಆನಂದಪಡಬಹುದಾಗಿದೆ.

## ಬಸವೇಶ್ವರನ ಅಂತ್ಯ

ಗ್ರಂಥದಲ್ಲಿ ಈಗ ಹದಿಮೂರು ಸ್ಥಲಗಳು ಮಾತ್ರ ಪ್ರಸಿದ್ಧಿಸಲ್ಪ ಟ್ಟಿರುತ್ತವೆ ಶ್ರೀಯುತ ವೆಂಕಣ್ಣಯ್ಯನವರಿಗೆ ದೊರೆದ ಕೈಬರಹದ ಪ್ರತಿ ಗಳಲ್ಲಿ ಇಷ್ಟೇ ಸ್ಥಲಗಳಿದ್ದು ಕಡೆಯ ೧೩ನೇ ಸ್ಥಲದ ಅಂತ್ಯವು ಸಂಪೂ ರ್ಣವಾಗಿರದ್ದರಿಂದ ಈ ಗ್ರಂಥವು ಇನ್ನು ಮುಂದೆ ಬಹಳವಿರಬೇಕೆಂದು ಅವರ ಅಭಿಪ್ರಾಯವಿದೆ. ಹೀಗೆ ಅವರು ಅಭಿಪ್ರಾಯಪಡಲಿಕ್ಕೆ ರಾಘ ವಾಂಕ ಕಾವ್ಯದಲ್ಲಿ ಕಂಡುಬರುವ ಕೆಳಗಿನ ಪದ್ಯವೂ ಬಲಕೊಡುತ್ತದೆ. ಅದು ಯಾವದೆಂದರೆ.—

ಮತ್ತೆ ಕೇಳೆಲೆ ಕುಮಾರವ್ಯಾಸ ಬಸವನಿ
ಪ್ಪತ್ತೈದು ಸ್ಥಲದ ರಗಳೆಯ ಮಾಡಿ ನಲಿವುತ್ತು
ದಾತ್ತ ಭಕ್ತಿಯೊಳು ವಿರುಪಾಕ್ಷನೆಡೆಗೊಯ್ಯಲಿನಿದು ಮಿಗಿಲಾದುದೆಂದು।
ಹೊತ್ತಗೆಯ ತೆಗೆದುಕೊಂಡುರೆ ನುಂಗಿದಂ ಚೆನ್ನೆ
ಯಿತ್ತ ಪಾಲ್ಗುಡಿದಂತೆ ಸರ್ವರುಂ ಪೊಗಳಿದರು
ಚಿತ್ತಜ ಮದರಣ್ಯದಾವ ಹರಿಹರದೇವ ಕವಿಚಕ್ರವರ್ತಿಯೆಂದು॥

ಇದರಿಂದ ಹರಿಹರನು ಬರೆದ ಬಸವಣ್ಣನವರ ಚರಿತ್ರೆಯಲ್ಲಿ ಇಪ್ಪ ತ್ತೈದು ಸ್ಥಲಗಳಿರಬೇಕೆಂದು ಗೊತ್ತಾಗುತ್ತದೆ. ಆದ್ದರಿಂದ ಈ ಗ್ರಂಥದ

ಇನ್ನೂ ಅನೇಕ ಪ್ರತಿಗಳನ್ನು ಹುಡುಕಿ ಈ ಸಂಗತಿಯ ನಿಜತ್ವವನ್ನು ಕಂಡು ಹಿಡಿಯುವದು ಅವಶ್ಯವಿದೆ. ನಮ್ಮ ಹತ್ತರ ಈ ಬಸವರಾಜ ರಗಳೆಯ ಒಂದು ಕೈಬರಹದ ಗ್ರಂಥವಿದ್ದು ಅದರಲ್ಲಿಯಾದರೂ ಹದಿಮೂರು ಸ್ಥಲಗಳು ಮಾತ್ರ ಇರುತ್ತವೆ. ಆದರೆ ಅದರ ಅಂತ್ಯ ಭಾಗವು ಸಂಪೂರ್ಣವಾಗಿದ್ದು ಅದು ಈ ಪ್ರಕಾರ ಇದೆ.

ಎಂದು ಗೀತಂಗಳಂ ಹೊರೆಯೇರಿ ಪಾಡುತಂ।
ಸಂದಣಿಪ ಶರಣ ಕಾರುಣ್ಯಮಂ ತಾಳುತಂ।
ಇಂತು ಬಸವಂ ಮರ್ತ್ಯದೊಳಗೆ ಮಹಿಮೆಯಂ ಬೀರಿ।
ಸಂತತಂ ಕೆಲಕಾಲ ಶಿವ ಸುಖದೊಳೋಲಾಡಿ।
ಶಿವದ್ರೋಹವಂ ಗೈದ ಬಿಜ್ಜಳನ ಕೊಲಿಸುತಂ।
ಭವಹರನ ಶರಣ ಸದ್ಗೋಷ್ಠಿಯಂ ಸಲಿಸುತಂ।
ಕಪ್ಪಡಿಯ ಸಂಗಮೇಶ್ವರನಲ್ಲಿಗೈತಂದು।
ನಿಷ್ಠೆಯಿಗೆ ತುತಿಗೈದು ಪೊಡವಟ್ಟು ಕೈ ಮುಗಿದು।
ದೇವ ಎನ್ನಂ ಬಿಡದೆ ಪೊರೆದ ಕೂಡಲಸಂಗ।
ದೇವ ಎನ್ನೊಡೆಯ ಮತ್ತಾತ ಕೂಡಲಸಂಗ।
ಷಟ್ ತ್ರಿಂಶ ತತ್ವಕ್ಕತೀತ ಕೂಡಲಸಂಗ।
ನಿತ್ಯ ನಿರ್ಮಳ ನಿಷ್ಕಳಂಕ ಕೂಡಲಸಂಗ।
ದೇವ ಭವದೀಯಾಜ್ಞೆಯಂ ಕೊಂಡು ಶಂಕರ।
ದೇವ ಮರ್ತ್ಯದಲೀಲೆ ಪೂರೈಸೆ ಶಶಿಧರ।
ಸಾಕು ಮಾಡೈ ತಂದೆ ಲೋಕದಾಟವನಿನ್ನು।
ಸಾಕಾರ ವಲ್ಲದ ನಿರಕಾರ ವೆಡೆಗೊಂಡೆ।
ತೆರಪುಗೊಡು ತಂದೆಬಂದಿಹೆನು ಬಸವನು ನೊಂದೆ।
ತೆರಪುಗೊಡು ಕರುಣಾಬ್ಧಿ ತೆರಪುಗೊಡು ಭಕ್ತ್ಯಾರ್ಥಿ।
ತರಪುಗೊಡು ತಂದೆ ಕೂಡಲಸಂಗಭಕ್ತಾಂಗ।
ಎನಲು ಸಂಗಮದೇವ ಬಸವನ ನಿರೀಕ್ಷಿಸುತ।
ತೆರಹು ತನ್ನೊಳು ಕೊಟ್ಟು ಬಸವನಂ ಸೈಪಿಟ್ಟು।
ನೋಡುತಿರೆ ಭಕ್ತರೆಲ್ಲರ ಮುಂದೆ ಬಸವಣ್ಣ।
ಗಾಢದಿಂ ಶಿವನೊಳಗೆ ಬೆರೆದು ತಾಬಯಲಾದ।
ಆದಿ ಮೂರುತಿ ಧರ್ಮರೂಪ ವೃಷಭನನಂದು।

ಮೇದಿನಿಯೊಳ್ಮೆರಸಿ ಬಳಿಕಾತನಂ ಒಳಕೊಂಡು।
ಕೈಲಾಸದೊಳಗೆ ಶ್ರೀಶೈಲಯುಗೆ ಪೇಳುತಂ ।
ಉಲ್ಹಾಸದಿಂ ಶರಣ ಜನಕ್ಕೆ ತಾಂ ಪೇಳ್ವದಂ।
ವೃಷಭ ಮುಖನಾಗಿರ್ದು ಮೊದಲ ಅಭಯುದ ತೆರದಿ ।
ಬಸವನಂ ವೃಷಭ ಮುಖನಾಗಿ ಸೈತಿರಿಸುತಂ ।
ಹೆಂಪಿನಿಂ ಹೆಚ್ಚಿನಿಂ ಅವ್ಯತಮುಯು ನೊಪ್ಪಿದಂ।
ಸಂತತಂ ಹಂಪೆಯು ವಿರೂಪಾಕ್ಷನೊಪ್ಪಿದಂ॥

ಕಂದ॥ ಧರೆಯೊಳಗರಿದರಿದೆಂದೆನೆ।
ಪುರಹರ ಸದ್ಭಕ್ತಿಯಂ ಮೆರೆಯಿಸಿಸಂದ॥
ತ್ಯರು ವೃಷಭಾಂಕನ ಮೋಹದ ತರಳಂ।
ಹರಪಿಂಗೆ ಭಕ್ತಿಯನಿರದೀಗೆ ಹಂಪೆಯು ವಿರೂಪಾಕ್ಷಂ ॥

**ಶ್ರೀ ಬಸವೇಶ್ವರ ಕಥನಂ ಸಮಾಪ್ತಂ"**

ಎಂದು ನಮ್ಮ ಪ್ರತಿಯಲ್ಲಿ ಇದ್ದು ಇದರಿಂದ ಹರಿಹರನು ಇಷ್ಟಕ್ಕೆಯೇ ತನ್ನ ಕಥನಕನ್ನು ಮುಗಿಸಿದಂತೆ ಭಾಸವಾಗುತ್ತದೆ.

ಈ ರಗಳೆಯಲ್ಲಿ ಇದ್ದ ಬಸವೇಶ್ವರನ ಚರಿತ್ರೆಗೂ, ಬೇರೆ ಪುರಾಣಗಳಲಿದ್ದ ಚರಿತ್ರೆಗೂ ಎಷ್ಟು ಮಹದಂತರವಿದೆಂಬದು ವಾಚಕರಿಗೆ ಕಂಡುಬರದೆ ಇರಲಾರದು. ಆದರೆ ಹರಿಹರನು ವೀರಶೈವರಲ್ಲಿ ಆಗಿ ಹೋದ ಪುರಾತನ ಪ್ರಸಿದ್ಧ ಕವಿಯಾಗಿರುವದರಿಂದ ಅವನು ಉಲ್ಲೇಖಿಸಿದ ಈ ವಿಷಯ ಗಳಿಗೆ ನಾವು ವಿಶೇಷ ಮಹತ್ವ ಕೊಡಬೇಕಾಗಿದೆ. ಆದರೆ ಇವುಗಳು ಎಷ್ಟರ ಮಟ್ಟಿಗೆ ನಿಜವೆಂಬುದನ್ನು ಬೇರೆ ಬೇರೆ ಪುರಾಣ ಗ್ರಂಥಗಳ ತುಲನಾತ್ಮಕ ವಿವೇಚನೆಯಿಂದಲೂ, ಸ್ಥಳಿಕ ಕುರುಹುಗಳು ಸೂಕ್ಷ್ಮ ನಿದರ್ಶನೆಯಿಂದಲೂ, ಶಿಲಾಲೇಖಗಳಿಂದಲೂ, ಸಮಕಾಲೀನ ವಾಙ್ಮಯುದಿಂದಲೂ, ಗೊತ್ತುಪಡಿಸುವದು ಅವಶ್ಯವಿರುತ್ತದೆ. ಯಾವದಾದರೊಂದು ಗ್ರಂಥವನ್ನು ಆಧಾರವಾಗಿಟ್ಟುಕೊಂಡು ಅದರಲ್ಲಿ ಹೇಳಿದ್ದನ್ನೆಲ್ಲ ನಿಜವೆಂದು ತಿಳಿಯಲಿಕ್ಕೆ ಬರಲಾರದು. ಈ ರೀತಿಯ ಸಂಶೋಧನ ಕಾರ್ಯಗಳು ಬಸವೇಶ್ವರನ ಬಗ್ಗೆ ಇನ್ನೂ ಆಗಿರುವದಿಲ್ಲ. ಇತ್ತಕಡೆಗೆ ನಮ್ಮ ವಿದ್ಯಾವಂತರು ಹೆಚ್ಚಿಗೆ ಲಕ್ಷಕೊಡುವದು ಅವಶ್ಯವಿದೆ. ಅವರು ಶ್ರೀಯುತ ವೆಂಕಣ್ಣಯ್ಯನವರಂತೆ ವೀರಶೈವ ವಾಙ್ಮಯುವನ್ನು ಸಂಶೋಧಿಸಿ ಬಸವೇಶ್ವರನ ಬಗ್ಗೆ ಕಂಡುಬರುವ ಮಹತ್ವದ ವಿಷಯಗಳನ್ನು ಗುರ್ತಿಸಬೇ

ಕಾಗಿರುತ್ತವೆ. ವೀರಶೈವ ಗ್ರಂಥಗಳಲ್ಲಿ ಕಲಜ್ಞಾನದ ವಚನಗಳೆಂಬ ಗ್ರಂಥಗಳು ಇವೆ. ಇವುಗಳಲ್ಲಿಯಾದರೂ ಅನೇಕ ಐತಿಹಾಸಿಕ ವಿಷಯುಗಳು ಕಂಡುಬರುತ್ತವೆ. ಇವುಗಳನ್ನೂ ನಾವು ಶೋಧಿಸತಕ್ಕದ್ದಾಗಿದೆ. ಹಾಗೆಯೇ ವಚನ ವಾಙ್ಮಯುವನ್ನೂ ಹುಡುಕಿ ಅದನ್ನು ಐತಿಹಾಸಿಕ ದೃಷ್ಟಿಯಿಂದ ಪರಿಶೋಧಿಸುವದೂ ಅವಶ್ಯವಿದೆ. ಈ ವಾಙ್ಮಯುದ ಅತ್ಯಲ್ಪ ಭಾಗವು ಈಗ ಪ್ರಸಿದ್ಧಿಸಲ್ಪಟ್ಟಿದೆ. ಬಸವೇಶ್ವರನ ವಚನಗಳನ್ನು ಶ್ರೀಯುತ ಶ್ರೀನಿವಾಸ ಮೂರ್ತಿಗಳು ಬಹು ಸೂಕ್ಷ್ಮದೃಷ್ಟಿಯಿಂದ ಅಭ್ಯಾಸಿಸಿ ಕೆಲವು ಮಹತ್ವದ ಲೇಖಗಳನ್ನು ಪ್ರಬುದ್ಧಕರ್ನಾಟಕದಲ್ಲಿ ಈ ವೊಲಿಗೆ ಪ್ರಸಿದ್ಧಿಸಿರುವರು. ಹಾಗೆಯೇ ಇತರ ವಚನಕಾರರ ವಚನಗಳನ್ನೂ ಪರೀಕ್ಷಿಸುವದೂ ಅವಶ್ಯವಿದೆ. ಕಲ್ಯಾಣ ಬಾಗೇವಾಡಿ ವ.ತ್ತು ನಿಜಾಮ ಇಲಾಖೆಯಲ್ಲಿಯ ಶಿವಶರಣರ ಸ್ಥಲಗಳನ್ನು ಗೊತ್ತುಪಡಿಸಿ ಅವುಗಳನ್ನು ನಿರೀಕ್ಷಿಸುವ ಕಾರ್ಯವನ್ನಾದರೂ ನಾವು ಕೈಕೊಳ್ಳತಕ್ಕದ್ದು. ಅಲ್ಲಿಯೂ ನಮಗೆ ಅನೇಕ ವಿಷಯಗಳು ದೊರೆಯುಬಹುದಾಗಿವೆ. ಹೀಗೆ ನಾವು ಸಂಶೋಧಿಸಿದ ಹೊರ್ತು ಈ ಮಹಾತ್ಮನ ನಿಜಾಂಶಗಳು ಪ್ರಕಾಶಕ್ಕೆ ಬೀಳಲಾರವು. ಇತ್ತ ಕಡೆಗೆ ನಮ್ಮ ವಿದ್ಯಾವಂತರು ಅದರಲ್ಲಿ ವಿಶೇಷವಾಗಿ ವೀರಶೈವರು ಗಮನಕೊಡುವರೆಂದು ನಾವು ಹಾರೈಸುತ್ತೇವೆ.

ಶ್ರೀಯುತ ವೆಂಕಣ್ಣಯ್ಯನವರು ಈ ಬಸವರಾಜ ರಗಳೆಯನ್ನು ಬಹು ಪರಿಶ್ರಮಪಟ್ಟು ಸಂಶೋಧಿಸಿ ಅಚ್ಚು ಹಾಕಿಸಿದ್ದಕ್ಕಾಗಿ ನಾವು ಅವರನ್ನು ಬಹಳವಾಗಿ ಶ್ಲಾಘಿಸಿ ಈ ಲೇಖವನ್ನು ಮುಗಿಸುತ್ತೇವೆ.



ಟೀಕು:—ನಿರ್ಜನ ಪ್ರದೇಶವಪ್ಪ ಭವಾರಣ್ಯದೊಳಗೆ ಎಂಬುದೀಗ ಆರೂ ಇಲ್ಲದಾರಣ್ಯದೊಳಗೆ ಎಂಬ ಶಬ್ದಕ್ಕರ್ಥ. ಪಂಚಭೂತ ಸಪ್ತಧಾತೆಂಬ ಪಿಂಡವನಾಶ್ರಯುವ ಮಾಡಲು, ಎಂಬುದೀಗ ಅಲ್ಲಿ ಮನೆಯ ಕಟ್ಟಿ ಎಂಬ ಶಬ್ದಕ್ಕರ್ಥ. ಆ ಭವಾರಣ್ಯದೊಳಗೆ ತಾಪತ್ರಯಾಗ್ನಿ ಎದ್ದು ಆ ಪಿಂಡವನಾವರ್ತಿಸಿಕೊಂಡು ಸುಡುತ್ತಿದ್ದಿತ್ತೆಂಬುದೀಗ ಕಾಡು ಕಿಚ್ಚು ಬಂದು ಹತ್ತಿತ್ತಲ್ಲಾ ಎಂಬ ಶಬ್ದಕ್ಕರ್ಥ. ಆ ತಾಪತ್ರಯಾಗ್ನಿಯಲ್ಲಿ ತನು ಉರಿದು ಬೇವಲ್ಲಿ, ಜೀವನ ನಿಲವು ಕಾಣಬಾರದೆಂಬುದೀಗ ಆ ಮನೆ ಬೇವಲ್ಲಿ ಮನೆಯೊಡೆಯನೆತ್ತ ಹೋದನು ಎಂಬ ಶಬ್ದಕ್ಕರ್ಥ. ಆ ತಾಪತ್ರಯಾಗ್ನಿಯಲ್ಲಿ ದಗ್ಧವಾದ ಪಿಂಡದ ತನುಗುಣ ಲಕ್ಷಣಂಗಳಾವಾವು ಅಳಿಯದೆ ಪ್ರವರ್ತಿಸುತ್ತಿರ್ದವೆಂಬುದೀಗ ಆ ಮನೆ ಬೆಂದು ದೆಗೆಯಾಗದುದ ಕಂಡೆನೆಂಬ ಶಬ್ದಕ್ಕರ್ಥ. ಇಂತಾದ ಕಾರಣ ಆ ಜೀವನು ಸಂಸಾರದೊಳು ಅಳಲುತ್ತ ಬಳಲುತ್ತಿರ್ದನೆಂಬುದೀಗ, ಮನೆಯೊಡೆಯನಳಲುತ್ತ ಬಳಲುತ್ತಿದ್ದಾನೆ ಎಂಬ ಶಬ್ದಕ್ಕರ್ಥ. ಇಂತಪ್ಪ ಠಾವಿನಲ್ಲಿ ಗುರುಕರುಣ ಎಡೆಗೊಳ್ಳದೆ ಇರಲು ಅದ ಕಂಡು ನಿವೃತ್ತಿಯ ಮಾಡಿದನೆಂಬುದೀಗ ನಿಮ್ಮ ಒಲವಿಲ್ಲದ ಠಾವ ಕಂಡು ಮನದಲ್ಲಿ ಹೇಸಿ ತೊಲಗಿದೆನೆಂಬ ಶಬ್ದಕ್ಕರ್ಥ.

೭೭. ಅಣೋರಣೀಯಾನ್ ಮಹತೋ ಮಹಿಯಾನ್ ಎಂಬ ಶ್ರುತಿ ಹುಸಿ. ಲಿಂಗವಿರ್ದ ಠಾವಿನಲ್ಲಿ ಪ್ರಳಯ ಉಂಟೆ? ಭಕ್ತರ ಭಾವದಲ್ಲಿರ್ಪನಲ್ಲದೆ ಮತ್ತೆಲ್ಲಿಯೂ ಇಲ್ಲ ಗುಹೇಶ್ವರಾ.

ಟೀಕು:—ಅಣು, ರೇಣು, ತೃಣ, ಕಾಷ್ಠದೊಳಗೆ ಶಿವನಿರ್ಪನೆಂದಡೆ ಆ ಮಾತು ಹುಸಿ. ಅದೇನು ಕಾರಣವೆಂದಡೆ, ಆ ಶಿವನಿರ್ಪ ಕಾಯಕ್ಕೆ ಮುಕ್ತಿಯುಂಟಾಗಬೇಕೆಂದರೆ, ಅವಕ್ಕಿಲ್ಲಾಗಿ, ಆ ಶಿವನಿರ್ಪ ಕಾಯಕ್ಕೆ ಜ್ಞಾನ ಉಂಟಾಗಬೇಕೆಂದರೆ, ಅವಕ್ಕೆ ಜ್ಞಾನವಿಲ್ಲಾಗಿ, ಆ ಶಿವನಿರ್ಪ ಕಾಯ ನಿತ್ಯ ಕಾಯವಾಗಬೇಕೆಂದಡೆ, ಅದಕ್ಕೆ ನಿತ್ಯತ್ವವಿಲ್ಲಾಗಿ, ಅದು ಕಾರಣ ಸದ್ಭಕ್ತರಲ್ಲಿ ಶಿವನಿರ್ಪನಲ್ಲದೆ ಮತ್ತೆಲ್ಲಿಯೂ ಇಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೭೮. ಪ್ರಣತೆಯು ಇದೆ. ಬತ್ತಿಯು ಇದೆ. ಜ್ಯೋತಿಯ ಬೆಳಗುವಡೆ ತೈಲವಿಲ್ಲದೆ ಪ್ರಭೆ ತಾನೆಲ್ಲಿಯದೊ? ಗುರುವಿದೆ, ಲಿಂಗವಿದೆ, ಶಿಷ್ಯನ ಸುಜ್ಞಾ

ನೋದಯುವಾಗದನ್ನಕ್ಕರ ಭಕ್ತಿ ಎಲ್ಲಿಯದೊ? ಸೋಹಂವೆಂಬುದ ಕೇಳಿ ದಾಸೋಹವ ಮಾಡದಿರ್ದಡೆ ಅತಿಗಳವೆ ಗುಹೇಶ್ವರಾ.

ಟೀಕು:— ಬೆಳಗುವ ಜ್ಯೋತಿಗೆ ತೈಲವೆ ಜೀವಾಳವೆಂಬಂತೆ, ಗುರು ಲಿಂಗ ಸಂಬಂಧಕ್ಕೆ ಶಿಷ್ಯನ ಜ್ಞಾನವೇ ಜೀವಾಳ. ಸೋಹಂವೆಂದು ಬಂದ ಜಂಗಮಕ್ಕೆ ಆ ಜಂಗಮ ಬಂದ ಬರವನರಿದು ದಾಸೋಹವ ಮಾಡುವುದೆ ಜೀವಾಳ. ಈ ನಿರ್ಣಯವನರಿಯದಿರ್ದರೆ ಅದು ಭಕ್ತಸ್ಥಲಕ್ಕೆ ಸಲ್ಲದೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೭೯. ಘನತರದ ಚಿತ್ರದ ರೂಹ ಬರೆಯಬಹುದಲ್ಲದೆ ಪ್ರಾಣವ ಬರೆಯಬಹುದೆ ಅಯ್ಯಾ? ದಿವ್ಯಾಗಮಂಗಳು ಹೇಳಿದ ಕ್ರಿಯಲು ದೀಕ್ಷೆಯ ಮಾಡಬಹುದಲ್ಲದೆ ಭಕ್ತಿಯ ಮಾಡಬಹುದೆ ಅಯ್ಯಾ? ಪ್ರಾಣವಹ ಭಕ್ತಿ ತನ್ಮಯ ನೀನು ಈ ಗುಣವುಳ್ಳಲ್ಲಿ ನೀನಿಹೆ ಇಲ್ಲದಲ್ಲಿ ನೀನಿಲ್ಲ ಗುಹೇಶ್ವರಾ.

ಟೀಕುಃ— ಚಿತ್ರಿಕನು ಚಿತ್ರವ ಬರೆದಡೇನು? ಪ್ರಾಣವ ತುಂಬಲರಿಯನೆಂಬ ಹಾಗೆ, ಶಿಷ್ಯಂಗೆ ಶ್ರೀ ಗುರು ದೀಕ್ಷೆಯ ಮಾಡುವನಲ್ಲದೆ, ಜ್ಞಾನವ ತುಂಬಲರಿಯನು. ಅದು ಕಾರಣ ಜ್ಞಾನವು ಶಿಷ್ಯನಿಂದವೆ ಆಗಬೇಕು. ಇಂತಪ್ಪ ಜ್ಞಾನ ಸನ್ನಿಹಿತವಾದ ಭಕ್ತಿಯಲ್ಲಿ ಲಿಂಗವಿರ್ಪನು. ಅಲ್ಲದುದ್ದೇಶ ಭಕ್ತಿಯಲ್ಲಿ ಲಿಂಗವೆಡೆಗೊಳ್ಳನೆಂಬುದೀ ವಚನದ ತಾತ್ಪರ್ಯಾರ್ಥ.

೮೦. ಗಂಡಗಿಂದ ಮುನ್ನ ಹೆಂಡತಿ ಹುಟ್ಟಿ, ಗಂಡಗಿಂದ ಕಿರಿಯಳಾದಳು. ಆ ಹೆಂಡತಿ ಒಡಹುಟ್ಟಿದಳಾದಳೆಂಬುದ ಕೇಳಿ ಆ ಗಂಡ ಸಂಗವ ಮಾಡಿದಡೆ, ಇಬ್ಬರಿಗೊಂದು ಮಗುವು ಹುಟ್ಟಿತಲ್ಲಾ. ಆ ಹುಟ್ಟಿದ ಮಗುವ ತಾಯಿ ಮುದ್ದಾಡಿಸಿದಡೆ ತಾಯ ತರ್ಕೈಸಿತ್ತಿದೇನು ಹೇಳಾ? ತಾ ಎದ್ದು ಪತಿಭಕ್ತಿಯ ಮಾಡಿತ್ತ ಕಂಡು ಗುಹೇಶ್ವರ ಲಿಂಗಕ್ಕೆ ಭಕ್ತಿ ಪರಿಣಾಮವಾಯಿತ್ತು

ಟೀಕುಃ—ಗುರುವೆ ಪತಿಯಾಗಿ, ಶಿಷ್ಯನೆ ಸತಿಯಾದ ಕಾರಣ ಗಂಡನೆಂಬ ಶಬ್ದಕ್ಕರ್ಥ. ಆ ಗುರುವಿಂದ ಮುನ್ನ ಶಿಷ್ಯಂಗೆ ಜ್ಞಾನೋದಯವಾಗಿ, ಸಂಸಾರ ಪಾಶಚ್ಛೇದನವ ಮಾಡಿದ ಬಳಿಕ ಬಂದು ಗುರುವನಾಶ್ರಯಿಸುವ ಕಾರಣದಿಂದ, ಗಂಡಗಿಂದ ಮುನ್ನ ಹೆಂಡತಿ ಹುಟ್ಟಿದಳೆಂಬ ಶಬ್ದಕ್ಕರ್ಥ. ಆ ಗುರುವಿಂದವೆ ಮುನ್ನವುಳ್ಳ ಶಿಷ್ಯನಾದಡೆಯೂ ನ ಗುರೋರಧಿಕಂ ನ ಗುರೋರಧಿಕಂ ಎಂಬುದನರಿದು, ಗುರುಪುತ್ರನಾಗಿ,

ಶಿಶ್ರೂಷೆಯ ಮಾಳ್ಪ ಗುಣದಿಂದ ಗಂಡಗಿಂದ ಹೆಂಡತಿ ಕಿರಿಯಳಾದಳೆಂಬ ಶಬ್ದಕ್ಕರ್ಥ. ಆ ಶಿಷ್ಯನು ಶ್ರೀಗುರು ತತ್ವದಿಂ ಭಿನ್ನವಿಲ್ಲದೆ, ಆ ಗುರು ತತ್ವ ಸಹಿತವೆ ಉದಯವಾದನೆಂಬುದೀಗ, ಆ ಹೆಂಡತಿಯೆ ಒಡಹುಟ್ಟಿದಳಾದ ಳೆಂಬ ಶಬ್ದಕ್ಕರ್ಥ. ಆ ಶಿಷ್ಯನಲ್ಲಿ ಗುರು ಅವಿರಳ ಸಂಗವ ಮಾಡಲಾಗಿ, ಲಿಂಗವೆಂಬ ಶಿಸು ಹುಟ್ಟಿತ್ತೆಂಬುದೀಗ, ಇಬ್ಬರಿಗೊಂದು ಮಗುವು ಹುಟ್ಟಿತ್ತೆಂಬ ಶಬ್ದಕ್ಕರ್ಥ. ಆ ಲಿಂಗಭಾವ ಜ್ಞಾನಶಕ್ತಿಯಿಂದ ಹುಟ್ಟಿತ್ತಾಗಿ, ಆ ಜ್ಞಾನಶಕ್ತಿಯನೆ ಆಲಿಂಗಿಸಿ, ಭಕ್ತ್ಯಾಂಗನೆ ಎನಿಸಿಕೊಂಡು, ಲಿಂಗಭಕ್ತಿಯ ಮಾಡುತ್ತಿರ್ದಳೆಂಬುದೀಗ, ಹುಟ್ಟಿದ ಮಗುವ ತಾಯ ಮುದ್ದಾಡಿಸಿದರೆ, ತಾಯ ತಕ್ಕೈಸಿತ್ತಿದೇನು ಹೇಳಾ? ತಾ ಎದ್ದು ಪತಿಭಕ್ತಿಯ ಮಾಡುತ್ತಿರ್ದಳೆಂಬ ಶಬ್ದಕ್ಕರ್ಥ. ಇಂತಪ್ಪ ಸದ್ಭಕ್ತಿ ಲಿಂಗಕ್ಕೆ ಪರಿಣಾಮವಾದ ಕಾರಣ ಗುಹೇಶ್ವರ ಲಿಂಗಕ್ಕೆ ಭಕ್ತಿ ಪರಿಣಾಮವಾಯಿತ್ತೆಂಬ ಶಬ್ದಕ್ಕರ್ಥ.

೮೧. ಮುನ್ನಿನ ಪರಿಯಂತುಟಲ್ಲ. ಆದಡೆಂತಹುದು, ಆಗದಡಿಂತಾಯಿತ್ತು. ಹಲವು ಪರಿಯ ಬಯಕೆ ತಾರ್ಕಣೆಯಾದಂತೆ ಗುಹೇಶ್ವರ ಲಿಂಗವು ತನುವ ತನ್ನತ್ತಲೊಯ್ದನು.

ಟೀಕು:— ಅಂಗದ ಮೇಲೆ ಲಿಂಗಸಂಬಂಧಿಯಾದ ಭಕ್ತನು ತನ್ನ ತಾ ವಿವೇಕಿಸಿ ನೋಡಿ, ನಾನು ಅನಾದಿಯಲ್ಲಿ ಭಕ್ತನಲ್ಲಾ ಎಂಬುದನರಿದು, ವಿವೇಕಿಸಿ ನಾನು ಹಿಂದಣ ಭವಿ ಜನ್ಮದಂತಹನಲ್ಲವೆಂಬುದೀಗ, ಮುನ್ನಿನ ಪರಿಯಂತುಟಲ್ಲವೆಂಬ ಶಬ್ದಾರ್ಥ. ತಾನೆ ಭವಿಯಾದಡೆ, ಇಂತಪ್ಪ ಸದ್ಭಕ್ತಿ ಘಟಿಸುವದೆ ಎಂದು ವಿವೇಕಿಸುತ್ತಿರಲು ಆದಡೆ ಇಂತಹುದೆ ಎಂಬ ಶಬ್ದಾನ್ವಯ. ಅದು ಕಾರಣ ಆ ಭವಿಯಾಗದ ಸಂಬಂಧದಿಂ ಇಂತಪ್ಪ ಸದ್ಭಕ್ತಿ ಸಾಧ್ಯಯಾಯಿತ್ತೆಂಬುದೀಗ, ಆಗದಡಿಂತಾಯಿತ್ತೆಂಬ ಶಬ್ದಕ್ಕರ್ಥ. ಇಂತು ಶೃತ, ದೃಷ್ಟ, ಅನುಮಾನಂಗಳಿಂ ತಿಳಿದು ನೋಡಿ, ಲಿಂಗದಲ್ಲಿ ನಾನು ಸಂಬಂಧಿಯಾದೆನೆಂಬ ಕೃತ ನಿಶ್ಚಯ ಭಾವವೀಗ ಹಲವು ಪರಿಯ ಬಯಕೆ ತಾರ್ಕಣೆ ಗಂಡಂತಾಯಿತ್ತು. ಗುಹೇಶ್ವರ ಲಿಂಗವು ತನುವ ತನ್ನತ್ತಲೊಯ್ದನೆಂಬ ಶಬ್ದಕ್ಕರ್ಥ.

೮೨. ಕಾಯಕ್ಕೆ ಮಜ್ಜನ, ಪ್ರಾಣಕ್ಕೆ ಓಗರ ಇವ ಮಾಡಲೆಬೇಕು. ಸುಳಿವ ಸುಳುಹು ಉಳ್ಳನ್ನಕ್ಕ ಇವ ಮಾಡಲೆ ಬೇಕು. ಗುಹೇಶ್ವರನೆಂಬ ಲಿಂಗಕ್ಕೆ ಆತ್ಮನುಳ್ಳನ್ನಕ್ಕರ ಭಕ್ತಿಯ ಮಾಡಲೇಬೇಕು.

ಟೀಕು:--ಲಿಂಗವಿಡಿದು ಭಕ್ತ ನಾನು ಎಂಬದುಳ್ಳನ್ನಕ್ಕರ, ಒಡಲು ವಿಡಿದು ಸುಳಿವ ಸುಳುಹು ಉಳ್ಳನ್ನಕ್ಕರ, ಅಂತರಂಗದೊಳಗೆ ಲಿಂಗವ ನರಿವ ಅರಿವುಳ್ಳನ್ನಕ್ಕರ, ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ, ಷೋಡಶೋಪಚಾರವನು, ಪ್ರಾಣಸ್ವರೂಪವುಪ್ಪ ಜಂಗಮಲಿಂಗಕ್ಕೆ ಸಕಲ ಪದಾರ್ಥವನು ನೀಡಿ, ಭಕ್ತಿಯ ಮಾಡುತ್ತಿರಬೇಕೆಂಬುದೀ ವಚನದ ಬಹುಶಬ್ದಕ್ಕೇಕಾರ್ಥ ನಿರ್ವಚನ.

೮೩. ಬಂದ ಬಟ್ಟೆಯ ನಿಂದು ನೋಡದೆ, ಬಂದ ಬಟ್ಟೆಯ ಕಂಡು ಸುಖಿಯಾದೆ. ನಿಂದ ನಿಲವ ಮುಂದುಗೆಡಿಸಿ, ನಿಂದ ನಿಲವ ಮುಂದುಗೊಂಡಿತ್ತು. ತಂದೆಮಕ್ಕಳ ಗುಣ ಒಂದೆ ಭಾವದಲಡಗಿ, ಸಂದಿಲ್ಲದ ಕಾಲೊಳಗೆ ಕೈಮೂಡಿತ್ತು. ಒಂದನೆ ಹಿಡಿದು, ಒಂದನೆ ಬಿಟ್ಟರೆ ಇಂದು ನಮ್ಮ ಗುಹೇಶ್ವರನ ಸದ್ಭಕ್ತಿಯಾಯಿತ್ತೈ ಸಂಗನಬಸವಣ್ಣಾ॥

ಟೀಕು:—ತಾಯ ಯೋನಿ ಎಂಬ ದ್ವಾರವನು ತಾನು ತಿರುಗಿ ನೋಡದೆ ಎಂಬುದೀಗ ಬಂದ ಬಟ್ಟೆಯ ನಿಂದು ನೋಡದೆ ಎಂಬ ಶಬ್ದಕ್ಕರ್ಥ. ಅಂತು ಮಾಯಾ ಯೋನಿ ಸಂಬಂಧ ನಾನಲ್ಲವೆಂದರಿದು, ಅನಾದಿ ಶಿವತತ್ವದ್ವಾರದಿಂ ಬಂದೆನೆಂದರಿದು, ಪರಿಣಾಮಿಸುತ್ತಿರಲು, ಬಂದ ಬಟ್ಟೆಯ ಕಂಡು ಸುಖಿಯಾದೆನೆಂಬ ಶಬ್ದಕ್ಕರ್ಥ. ಶರೀರವಿಡಿದು, ನಿಂದ ನಿಲವ ಮುಂದುಗೆಡಿಸಿ ತನ್ನ ಸ್ವಭಾವದಿಂ ನಿಂದ ನಿಲವ ಮುಂದುಗೊಂಡಿರ್ದನೆಂಬುದೀಗ ನಿಂದ ನಿಲವ ಮುಂದು ಗೆಡಿಸಿ, ನಿಂದ ನಿಲವ ಮುಂದುಗೊಂಡಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಸದ್ವಿವೇಕ ಶಿಷ್ಯನ ಹೃದಯವು ಆ ಶ್ರೀಗುರುವಿನ ಹೃದಯವು ಏಕೋಭಾವವಾಗಿ ಎಂಬುದೀಗ, ತಂದೆಮಕ್ಕಳ ಗುಣ ಒಂದೆ ಭಾವದಲಡಗಿ ಎಂಬ ಶಬ್ದಕ್ಕರ್ಥ. ಇಂತಪ್ಪ ಸದ್ವಿವೇಕ ಶಿಷ್ಯನ ಸದಾಚಾರ ವರ್ತನೆಯ ಚರಿಯವೆ, ಭಿನ್ನವಿಲ್ಲದ ಚರಣವಾಗಿಪ್ಪದೆಂಬುದೀಗ, ಸಂದಿಲ್ಲದ ಕಾಲೆಂಬ ಶಬ್ದಕ್ಕರ್ಥ. ಆ ಸದಾಚಾರ ಕ್ರಿಯಾಚಾರದೊಳಗೆ, ಕೃತನಿಶ್ಚಯವೆಂಬ ದೃಢ ಹಸ್ತ ಹುಟ್ಟಿತ್ತೆಂಬುದೀಗ ಸಂದಿಲ್ಲದ ಕಾಲೊಳಗೆ ಕೈಮೂಡಿತ್ತೆಂಬ ಶಬ್ದಕ್ಕರ್ಥ. ಆ ಕೃತನಿಶ್ಚಯ ಹಸ್ತದೊಳು ಸದ್ಭಕ್ತಿ ಕ್ರಿಯನೆ ದೃಢವಿಡಿದು, ಆ ಭಕ್ತಿ ಕ್ರಿಯನೆ, ವಿಸರ್ಜಿಸಿಪ್ಪುದೀಗ, ಒಂದನೆ ಬಿಟ್ಟು, ಒಂದನೆ ಹಿಡಿದು ಎಂಬ ಶಬ್ದಕ್ಕರ್ಥ. ಇಂತು

ಕೃತನಿಶ್ಚಯವಾದ ಭಕ್ತಿ ಲಿಂಗದ ಪರಿಣಾಮವೆಂಬುದೀಗ ಇಂದು ನಮ್ಮ ಗುಹೇಶ್ವರ ಸದ್ಭಕ್ತಿಯಾಯಿತ್ತೆಂಬ ಶಬ್ದಕ್ಕರ್ಥ.

೮೪. ತಂದೆಯು ಸದಾಚಾರ ಮಕ್ಕಳದೆಂಬರು. ಗುರು ಮಾರ್ಗಾಚಾರ ಶಿಷ್ಯನದೆಂಬರು. ಮೇಲುಪಂಕ್ತಿಯ ಕಾಣರು ನೋಡಾ! ತತ್ವದ ಮೇಲುಪಂಕ್ತಿಯತ್ತಲೆ ಉಳಿಯಿತ್ತು. ಕತ್ತಲೆಯ ಮರೆಯಲ್ಲಿ ಕಾಣರು ನೋಡಾ. ತತ್ವದ ಹಾದಿಯನು ಭಕ್ತಿಯ ಭೇದವನು ಇವರೆತ್ತ ಬಲ್ಲರೈಯ್ಯಾ ಗುಹೇಶ್ವರಾ?

ಟೀಕು:— ತಂದೆಯ ವರ್ಣಾಶ್ರಮ ಧರ್ಮ ಆಚಾರ ಮಗನದು ಎಂಬ ಹಾಗೆ, ಆ ಶ್ರೀಗುರುವಿನ ಸನ್ಮಾರ್ಗ ಸದಾಚಾರ ಸದ್ಭಕ್ತಿ ಶಿಷ್ಯನದು. ಅದೆಂತೆಂದಡೆ "ಗುರೂಕ್ತಿ ಮಾರ್ಗ ತೆ ಲಿಂಗಂ ವ್ರತಸ್ಥಂ ಪರಮೇಶ್ವರಿ" ಎಂದುದಾಗಿ ಈ ವರ್ಮವನರಿದು ಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡುವುದು ಕ್ರಮ, ಉಳಿದುದು ಅಕ್ರಮವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೮೫. ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ! ಬ್ರಹ್ಮವ ನುಡಿದು ನಾನು ಭ್ರಮಿತನಾದೆನಯ್ಯಾ! ಶೂನ್ಯವ ನುಡಿದು ನಾನು ಸುಖ ದುಃಖಕ್ಕೆ ಗುರಿಯಾದೆನಯ್ಯಾ! ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಸಾನ್ನಿಧ್ಯದಿಂದಾನು ಸದ್ಭಕ್ತನಾದೆನಯ್ಯಾ.

ಟೀಕು:— ತನುವೆಂಬ ಭಾವ ಮನದಲ್ಲಿ ಉಳ್ಳನ್ನಕ್ಕರ ಮನ ಉಂಟೆಂಬ ಭಾವ ತನುವಿನಲ್ಲಿ ಉಳ್ಳನ್ನಕ್ಕರ ಶ್ರೀಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡುವುದೇ ಸತ್ಪಥ. ಇಂತಲ್ಲದೆ ವಾಗದ್ವೈತವ ನುಡಿವುದೆಲ್ಲವು ಮಿಥ್ಯೆ ಎಂದರಿವುದೀಗ ಈ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೮೬. ಹಳೆಗಾಲದಲೊಬ್ಬ ಪುರುಷಂಗೆ ಎಳೆಯ ಕನ್ನಿಕೆಯ ಮದುವೆಯ ಮಾಡಲು ಕೆಳದಿಯರೈವರು ನಿಬ್ಬಣ ಬಂದರು. ಹಸೆಯ ಮೇಲೆ ಮದುವಣಿಗನ ತಂದು ನಿಲಿಸಲೊಡನೆ ಶಶಿವದನೆ ಬಂದು ಕೈವಿಡಿದಳು. ಮೇಲುದಾಯದಲೊಬ್ಬ ಸತಿ ಕಣ್ಣಸನ್ನೆಯ ಮಾಡುತ್ತಿರೆ ಕೂಡೆ ಬಂದ ನಿಬ್ಬಣಗಿತ್ತೆಯರೆಲ್ಲ ಹೆಂಡಿರಾದರು. ದೂರವಿಲ್ಲದ ಗಮನಕ್ಕೆ ದಾರಿಯ ಪಯಣ ಹಲವಾಯಿತ್ತು. ಸಾರಾಯ ನಿರ್ಣಯವ ನಾನೇನೆಂಬೆ ಗುಹೇಶ್ವರಾ?

ಟೀಕು.— ಪೂರ್ವಸಂಸ್ಕಾರ ಕರ್ಮವಳಿದು, ಶಿವಸಂಸ್ಕಾರಿಯಾದ

ಒಬ್ಬ ಶರಣನು ತನ್ನ ಪೂರ್ವಾಪರವ ವಿಚಾರಿಸಿ ನೋಡಲು ತಾನು ಅನಾದಿ ಸಂಸಿದ್ಧವಹ ಪರಶಿವನಲಾ ಎಂದು ಅರಿದನೆಂಬುದೀಗ ಹಳಿಗಾಲದಲೊಬ್ಬ ಪುರುಷನೆಂಬ ಶಬ್ದಾರ್ಥ. ಸದ್ವಿವೇಕ ಭಾಗೆಯಿಂ ಸದ್ವಾಸನಾ ಸ್ವರೂಪಿಯಪ್ಪ ಚಿತ್‌ಶಕ್ತಿಯುದಯವಾಗಲು, ಆ ಚಿತ್‌ಶಕ್ತಿ ಪ್ರಥಮ ವಿವೇಕ ಭಾಗೆಯಿಂ ಬಾಲ್ಯ ವಿವೇಕಿ ಎನಿಸಿಕೊಂಡ ಕಾರಣದಿಂ ಎಳೆಯ ಕನ್ನಿಕೆ ಎಂಬ ಶಬ್ದಾರ್ಥ. ಆ ಚಿತ್‌ಶಕ್ತಿಯೂ ಆ ಶರಣಂಗೆ ಜ್ಞಾನ ವಿಷಯ ಸಂಗ ಒಂದೆ ಎಂದರಿದು, ಸತಿಪತಿಭಾವವ ಸಂಬಂಧಿಸುವಲ್ಲಿ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಮಂತ್ರಶಕ್ತಿ, ಆದಿಶಕ್ತಿ, ಪರಾಶಕ್ತಿ ಎಂಬ ಐವರು ಸಖಿಭಾವದಿಂ ತತ್ಸಂಬಂಧಕ್ಕೆ ಅನುಗುಣಂಗಳಾಗಿರಲು, ಕೆಳದಿಯರೈವರು ನಿಬ್ಬಣ ಬಂದರೆಂಬ ಶಬ್ದಕ್ಕರ್ಥ. ಆ ಸದಾಚಾರ ಸತ್ಕ್ರಿಯೆ ಎಂಬುದೇ ಆಧಾರ ಸ್ಥಲವಾಗಿಪ್ಪುದರಿಂ ಅದು ಹಸೆ ಎಂಬ ಶಬ್ದಾರ್ಥ. ಆ ಸತ್ಕ್ರಿಯಾಸಂಪತ್ತೆಂಬ ನೆಲಗಟ್ಟಿನ ಮೇಲೆ ಆ ಶರಣ ಸ್ವಸ್ಥವಾಗಿ ನಿಲ್ಲಲು ಅದೀಗ ಹಸೆಯ ಮೇಲೆ ಮದವಣಿಗನ ತಂದು ನಿಲಿಸಲೊಡನೆ ಎಂಬ ಶಬ್ದಾರ್ಥ. ಅಂತು ಕೃತನಿಶ್ಚಯದಿಂ ಸ್ವಸ್ಥ ಭಾವಿಯಾದ ತತ್‌ಶರಣನು ಆ ಶಕ್ತಿ ಕೈವಿಡಿದಳೆಂಬುದೀಗ ಶಶಿವದನೆ ಬಂದು ಕೈವಿಡಿದಳೆಂಬ ಶಬ್ದಕ್ಕರ್ಥ. ಆ ಚಿತ್ತಿನ ಸಂಗದಿಂ ಸಹಜ ಕ್ರಿಯಾಸಂಪನ್ನನಾಗಿರ್ಪ ಶರಗೆಂಣ ಉತ್ತರ ಕಕ್ಷವಪ್ಪ ಪರಾಶಕ್ತಿ ಮುಂದುದೋರುತ್ತಿರಲು, ಮತ್ತಂ ಭಕ್ತಿಯೊಳು ಅತ್ಯಂತ ಅರ್ಥವಿಶೇಷವಾಗಿ ಇರ್ದನು. ಆ ಅರ್ಥಕ್ಕೆ ಪಂಚ ಶಕ್ತಿಯರೆಲ್ಲರೂ ಸದ್ಭಕ್ತಿ ವಿವೇಕದೊಳು ಸಂಗಿಗಳಾದರೆಂಬುದೀಗ ಮೇಲು ದಾಯದಲೊಬ್ಬ ಸತಿ ಕಣ್ಣಸನ್ನೆಯ ಮಾಡುತ್ತಿರಲು ಕೂಡೆ ಬಂದ ನಿಬ್ಬಣಗಿತ್ತಿಯರೆಲ್ಲ ಕೇಡಿರಾದರೆಂಬ ಶಬ್ದಕ್ಕರ್ಥ. ಇಂತಪ್ಪ ಶಿವತತ್ವವ ಕಂಡಿಹೆನೆಂಬ ಶರಣಂಗೆ ಆ ವಸ್ತು ಸಮೀಪಸ್ಥವಾಗಿಹ ಕಾರಣ ದೋರ ವಿಲ್ಲದ ಗಮನವೆಂಬ ಶಬ್ದಕ್ಕರ್ಥ. ಇಂತು ಸಮೀಪಸ್ಥವಾಗಿಪ್ಪ ನಿಜವ ನರಿವುದಕ್ಕೆ ಸತ್ಪಥ ಅನೇಕವಾಗಿರ್ಪುದೆಂಬುದನರಿದು ಆಚರಿಸಲು ಅದು ದೂರವಿಲ್ಲದ ಗಮನಕ್ಕೆ ದಾರಿಯ ಪಯಣ ಹಲವಾಯಿತ್ತು, ಸಾರಾಯ ನಿರ್ಣಯವನೇನೆಂಬೆನೆಂಬ ವಚನಾರ್ಥ.

೮೭. ದೇವ ಕಂಡಾ. ಭಕ್ತ ಕಂಡಾ. ಮರಳಿ ಮರಳಿ ಶರಣೆಂಬ ಕಂಡಾ. **ಹೋಯಿತ್ತಲ್ಲಾ** ಭಕ್ತಿ ಜಲವ ಕೂಡಿ. ಸಾವನ್ನಕ್ಕರ ಸರಸ ಉಂಟೇ ಗುಹೇಶ್ವರಾ?

ಟೀಕು:— ದೇವನು ಭಕ್ತನು ಎಂಬ ಉಭಯನಾಮವಿಡಿದು ಚರಿಸಿ, ತಾವೆ ಶಿವತತ್ವವೆಂದರಿದು ಸಹಜ ಭಕ್ತಿಯ ಮಾಡುತ್ತಿಹುದು ಕ್ರಮವಲ್ಲದೆ, ಈ ಭೇದವನರಿಯದೆ ಭಿನ್ನ ವಿವೇಕದಿಂ ಮಾಡುವ ಜಡ ಕ್ರಿಯಾ ಕರ್ಮ ಭಕ್ತಿ ಲಿಂಗವ ಮುಟ್ಟಲರಿಯದೆಂಬುದೀ ವಚನದ ತಾತ್ಪರ್ಯಾರ್ಥ.

೮೮ ಮುಂದು ಜಾವದಲೆದ್ದು, ಲಿಂಗದಂಘ್ರಿಯ ಮುಟ್ಟಿ, ಸುಪ್ರಭಾತ ಸಮಯದಲ್ಲಿ ಸದ್ಭಕ್ತರ ಮುಖವ ನೋಡುವುದು. ಹುಟ್ಟಿದುದಕ್ಕಿದೆ ಸಫಲ ನೋಡಾ! ಸತ್ಯವಚನವಿಂತೆಂದುದು. ಇದಿಲ್ಲದವರ ಕಂಡಡೆ ನಾನೊಲ್ಲೆ ಗುಹೇಶ್ವರಾ.

ಟೀಕು:— ಉದಯಕಾಲದಲೆದ್ದು ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಮಾಡಿ, ಸದ್ಭಕ್ತ ಶರಣರುಗಳಿಗೆರಗಿ ದಾಸೋಹವ ಮಾಡುವದೆ ಕ್ರಮ, ಅದೇ ಸದ್ಭಕ್ತಿ. ಈ ಕ್ರಮವನರಿಯದೆ ಮಾಡುವುದೆಲ್ಲವು ದುಶ್ಚರಿಯವೆನಿಸುವದೀಗ ಈ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೮೯. ಉಲುಹಿನ ವೃಕ್ಷದ ನೆಳಲಡಿಯಲಿದ್ದರ್ದು, ಗಲಭೆಯನೊಲ್ಲೆನೆಂಬುದೆಂತಯ್ಯಾ! ಪಟ್ಟದ ರಾಣಿಯ ಮುಖವ ಮುದ್ರಿಸಿ, ಮೆಟ್ಟಿ ನಡೆವ ಸತಿಯ ಶಿರವ ಮೆಟ್ಟಿ ನಿಲುವ ಪರಿ ಎಂತಯ್ಯ. ಆದಿಯ ಹೆಂಡತಿಯನುಲ್ಲಂಘಿಸಿದ ಕಾರಣ, ಮೇದಿನಿಯ ಮೇಲೆ ನಿಲಬಾರದು. ಸಾಧಕರೆಲ್ಲರು ಮರುಳಾದುದ ಕಂಡು ನಾಚಿ ನಗುತಿರ್ದೆನು ಗುಹೇಶ್ವರಾ.

ಟೀಕು:—ಅಧೋಮುಖ ಶಾಖೋಪಶಾಖೆಗಳಿಂ ಶಿರಸ್ಸೆಂಬ ಮೂಲದಿಂದಿರ್ಪ ಶರೀರವೆಂಬ ವೃಕ್ಷ ಪ್ರಾಣವಾಯು ವಿಕಾರದಿಂ ಶಬ್ದಜಾಲಂಗಳನುಚ್ಚರಿಸುತ್ತಿರಲು, ಆ ಶರೀರದ ಮಾಯಾಚ್ಛಾಯದೊಳಿರ್ದು ಶಬ್ದ ಮುಗ್ಧನಾದಿಹೆನೆಂದೊಡೆ, ಆ ಪರವು ಸಾಧ್ಯವಾಗದೆಂಬುದೀಗ, ಉಲುಹಿನ ವೃಕ್ಷದ ನೆಳಲಡಿಯಲ್ಲಿರ್ದು ಗಲಭೆಯನೊಲ್ಲೆನೆಂಬುದೆಂತಯ್ಯ ಎಂಬ ಶಬ್ದಕ್ಕರ್ಥ. ಭಕ್ತಿ, ಜ್ಞಾನ, ವೈರಾಗ್ಯ ಮುಖ್ಯವಾದ ಸಕಲ ಕ್ರಿಯಗಳೆಲ್ಲಕ್ಕೂ ಇಚ್ಛೈಸುವುದೆ ಮುನ್ನ ಅದೆಂತೆಂದಡೆ, ಇಚ್ಛೆ ಇಲ್ಲದೆ, ಆವುದು ಸಾಧ್ಯವಾಗದಾಗಿ, ಅದು ಕಾರಣ ಗುರುಕಾರುಣ್ಯ ಪಟ್ಟವ ಕಟ್ಟುವ ಕಾಲದಲ್ಲಿ ಇಚ್ಛಾಶಕ್ತಿಯ ಸಂಗ ಮುನ್ನವಾದ ಕಾರಣ, ಇಚ್ಛಾಶಕ್ತಿಗೆ ಪಟ್ಟದ ರಾಣಿವಾಸವೆಂಬ ನಾಮವಾಯಿತ್ತು. ಅಂತಪ್ಪ ಇಚ್ಛಾಶಕ್ತಿಯಲ್ಲಿ ಶ್ರದ್ಧೆ

ಇಲ್ಲದೆ, ಇಚ್ಛೆಯ ಮುಖವ ಮುದ್ರಿಸಿಪ್ಪುದರಿಂ ಪಟ್ಟದ ರಾಣಿವಾಸದ ಮುಖವ ಮುದ್ರಿಸಿ ಎಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾವರ್ತನೆಯಲ್ಲಿ ವರ್ತಿಸಿ, ಚರಿಸುತ್ತಿರ್ಪುದರಿಂ ಕ್ರಿಯಾಶಕ್ತಿಗೆ ನಡೆವ ಸತಿ ಎಂಬ ನಾಮ ವಾಯಿತ್ತು. ಆ ಕ್ರಿಯಾಶಕ್ತಿಯ ವಿವೇಕದ ಮೇಲೆ ಸ್ವಸ್ಥನಾಗಿರಬೇಕೆಂಬುದೀಗ ಮೆಟ್ಟಿ ನಡೆವ ಸತಿಯ ನೆತ್ತಿಯ ಮೇಲೆ ನಿಲ್ಲುವ ಪರಿ ಎಂತಯ್ಯ ಎಂಬ ಶಬ್ದಕ್ಕರ್ಥ. ಜ್ಞಾನಶಕ್ತಿ ಎಂಬ ಸ್ತ್ರೀ ಶರಣಂಗೆ ಆದಿಯಿಂದ ಉಳ್ಳ ಸತಿಯಾದ ಕಾರಣ, ಆ ಜ್ಞಾನಶಕ್ತಿಯ ಸಂಗ ಹಿಂಗಲು ಅಜ್ಞಾನವರ್ತನೆ ಎಡೆಗೊಂಡು ಮಾಡುವ ಕ್ರಿಗಳೆಲ್ಲವು ಅಜ್ಞಾನ ಕ್ರಿಗಳಾಗಿ ಜಡಭಾವವನೆಯ್ದಲು ಭಕ್ತಿಸ್ಥಲದ ಮೇಲೆ ಚರಿಯಿಸಬಾರದೆಂಬುದೀಗ, ಆದಿಯ ಹೆಂಡತಿಯನುಲ್ಲಂಘಿಸಿದ ಕಾರಣ ಮೇದಿನಿಯ ಮೇಲಿನ್ನು ಇರಬಾರದೆಂಬ ಶಬ್ದಕ್ಕರ್ಥ. ಇಂತು ಕ್ರಮವನರಿಯದೆ, ಭ್ರಮೆಯಳಿಯದೆ, ಮಾಡುವ ಭಕ್ತಿ ಎಲ್ಲವು ಹಾಸ್ಯಕ್ಕೊಳಗಾಯಿತ್ತೆಂಬುದೀಗ, ಸಾಧಕರೆಲ್ಲರು ಮರುಳಾದುದ ಕಂಡು ನಾಚಿ ನಗುತ್ತಿರ್ದನೆಂಬ ಶಬ್ದಕ್ಕರ್ಥ.

೯೦ ಆಚಾರವನರಿಯದೆ, ವಿಭವವಳಿಯದೆ, ಕೋಪವಡಗದೆ, ತಾಪ ಮುರಿಯದೆ, ಬರಿದೆ ಭಕ್ತರಾದೆವೆಂದು ಬೆಬ್ಬನೆ ಬೆರೆವವರ ಕೇಡಿಂಗೆ ನಾನು ಮರುಗುವೆ ಕಾಣಾ ಗುಹೇಶ್ವರಾ.

ಟೀಕು:—ಅಂಗದ ಮೇಲೆ ಆಚಾರ ಸ್ವಾಯತವಾಗದೆ ತನುಗುಣಾದಿಗಳಡಗದೆ, ಬರಿದೆ ನಾನು ಭಕ್ತನೆಂಬ ವಿಕಳತೆಯ ನುಡಿ ಪ್ರಯೋಜನವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

೯೧. ಆಸೆಗೆ ಸತ್ತುದು ಕೋಟಿ. ಆಮಿಷಕ್ಕೆ ಸತ್ತುದು ಕೋಟಿ. ಹೊನ್ನು ಹೆಣ್ಣು ಮಣ್ಣಿಂಗೆ ಸತ್ತುದು ಕೋಟಿ. ಗುಹೇಶ್ವರಾ ನಿನಗಾಗಿಸತ್ತವರನಾರನು ಕಾಣೆ.

ಟೀಕು:—ಆಸೆಯಾಮಿಷ ಹೊನ್ನು, ಹೆಣ್ಣು, ಮಣ್ಣೆಂಬ ದುರಾಶೆಯಲ್ಲಿ ಪಾಶಾಬದ್ಧರಾಗಿ, ಅಳಿದು ಹೋಗುತ್ತಿರ್ದವರು ಸಂಪೂರ್ಣ ಸುಲಭ ಸದ್ಭಕ್ತಿಯಲ್ಲಿ ಕೃತನಿಶ್ಚಯವಾಗಿ ಲಿಂಗತತ್ವದೊಳು ಲೀಯವಪ್ಪವರಾರು ಇಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೯೨. ಆದಿಯಲ್ಲಿ ಬಸವಣ್ಣನುತ್ಪತ್ಯವಾದ ಕಾರಣ ನಾಗಲೋಕದ ನಾಗಗಣಂಗಳಿಗೆಯೂ ಬಸವಣ್ಣನ ಪ್ರಸಾದ. ಮರ್ತ್ಯಲೋಕದ ಮಹಾಗಣಂ

ಗಳಿಗೆಯೂ ಬಸವಣ್ಣನ ಪ್ರಸ ದ. ದೇವಲೋಕದ ದೇವಗಣಂಗಳಿಗೆಯೂ ಒಸವಣ್ಣನ ಪ್ರಸಾದ. ಗುಹೇಶ್ವರಾ ನಿಮ್ಮಾಣೆ: ಎನಗೆಯೂ, ನಿನಗೆಯೂ, ಬಸವಣ್ಣನ ಪ್ರಸಾದ.

ಟೀಕು:— ಸಮಸ್ತ ವಿಶ್ವಕ್ಕೆ ಚಿತ್‌ಶಕ್ತಿಯೇ ಉದಯಸ್ಥಾನ, ಆಧಾರಸ್ಥಾನ, ವಿಶ್ರಾಂತಿಸ್ಥಾನವಾದ ಕಾರಣ, ಆ ಚಿತ್‌ಶಕ್ತಿಯೇ ಬಸವಣ್ಣನೆಂಬ ರೂಪ ಕೈಕೊಂಡ ಕಾರಣ ಸಮಸ್ತ ವಿಶ್ವವೆಲ್ಲವು ಬಸವಣ್ಣನೊಳಗಡಗಿರ್ಪವಾಗಿ ವಿಶ್ವವೆಲ್ಲಕ್ಕೆಯೂ ಬಸವಣ್ಣನ ಕರುಣ ಪ್ರಸಾದವಲ್ಲದಿಲ್ಲ. ಮಹಾಲಿಂಗವು ಬಸವಣ್ಣನ ಭಕ್ತಿ ಸವಿಯೊಳಗೆ ಸನ್ನಿಹಿತವಾಗಿರ್ಪುದಾಗಿ ಆ ಮಹಾಲಿಂಗಕ್ಕೂ ಆ ಲಿಂಗವೇದಿಗಳಾಗಿರ್ಪ ಶಿವಶರಣರಿಗೂ ಬಸವಣ್ಣನ ಪ್ರಸಾದವಲ್ಲದಿಲ್ಲವೆಂಬುದೀಗ ಈ ವಚನಾರ್ಥ.

೯೩. ಕಬ್ಬುನದ ಗುಂಡಿಗೆಯಲ್ಲಿ ರಸದ ಭಂಡವ ತ ಂಬಿ, ಹೊನ್ನ ಮಾಡಬಲ್ಲಡೆ, ಅದು ಪರುಷ ಕಾಣಿರಣ್ಣಾ! ಲಿಂಗ ಬಂದುಂಬಡೆ ಪ್ರಸಾದ ಕಾಯವಪ್ಪೊಡೆ ಅಂದಂದಿಂಗೆ ಭವಕರ್ಮ ಮುಟ್ಟಲಮ್ಮವು ಕಾಣಿರೆ. ಆದಿಯ ಪ್ರಸಾದಕ್ಕೆ ಬಾಧೆ ಇಲ್ಲ ಕಾಣಿರೆ. ಶಶಿಯಲ್ಲಿ ಕರಗದು. ಬಿಸಿಲಲ್ಲಿ ಕೊರಗದು ರಸಉಂಡ ಹೊನ್ನು ಗುಹೇಶ್ವರಾ ನಿಮ್ಮ ಶರಣಾ.

ಟೀಕು:— ಆವ ಲೋಹದ ಕರಡಿಗೆಯೊಳಗೆ ಸಿದ್ಧರಸದ ಭಂಡವ ತುಂಬಿ, ಹೊನ್ನ ಮಾಡುವಂತೆ ಎಂಬುದೀಗ ಕಬ್ಬುನದ ಗುಂಡಿಗೆಯಲ್ಲಿ ರಸದ ಭಂಡವ ತುಂಬಿ ಹೊನ್ನ ಮಾಡಬಲ್ಲಡೆ, ಅದು ಪರುಷ ಕಾಣಿರಣ್ಣಾ ಎಂಬ ಶಬ್ದಕ್ಕರ್ಥ. ಸರ್ವಾಂಗ ಸುಖವನು ಲಿಂಗಗ್ರಾಹಕತ್ವಮಂ ಮಾಡಲು ಎಂಬುದೀಗ ಲಿಂಗ ಬಂದುಂಬಡೆ ಎಂಬ ಶಬ್ದಕ್ಕರ್ಥ. ಆ ಲಿಂಗಗ್ರಾಹಕತ್ವದಿಂ ಅಲ್ಲಿ ಪ್ರಸಾದ ನಿಕ್ಷೇಪವಪ್ಪುದು. ಆ ಪ್ರಸಾದ ನಿಕ್ಷೇಪದಿಂ ತನ್ನ ದೇಹ ಮನ ಪ್ರಾಣೇಂದ್ರಿಯಂಗಳು ಸಹಿತ, ಪ್ರಸಾದ ಕಾಯವಾಗಿ, ಭವಚ್ಛೇದನವಪ್ಪುದೆಂಬುದೀಗ ಪ್ರಸಾದ ಕಾಯುವಪ್ಪಡೆ, ಅಂದಂದಿಂಗೆ ಭವಕರ್ಮ ಮುಟ್ಟಲಮ್ಮವು ನೋಡಿರೆ ಎಂಬ ಶಬ್ದಾನ್ವಯ. ಅಂತಪ್ಪ ಪ್ರಸಾದವೆ ಅನಾದಿ ಸಂಸಿದ್ಧ ಪ್ರಸಾದವೆಂಬುದೀಗ ಆದಿಯ ಪ್ರಸಾದಕ್ಕೆ ಬಾಧೆ ಇಲ್ಲ ಕಾಣಿರೆ ಎಂಬ ಶಬ್ದಕ್ಕರ್ಥ. ಅಂತಪ್ಪ ಪ್ರಸಾದ ಕಾಯ ಚಂದ್ರ ಸೂರ್ಯರ ಪ್ರಭೆಯೊಳಗೆ ಸಿಲ್ಕದೆ ಸಿದ್ಧಸರ ಉಂಡ ಮಿಸುನಿಯಂತಿರ್ಪುದೆಂಬುದೀಗ, ಶಶಿಯಲ್ಲಿ ಕರಗದು, ಬಿಸಿಲಲ್ಲಿ ಕೊರಗದು, ರಸ ಉಂಡ ಹೊನ್ನ ಗುಹೇಶ್ವರಾ ನಿಮ್ಮ ಪ್ರಸಾದ ಎಂಬ ಶಬ್ದಕ್ಕರ್ಥ.

೯೪. ನಚ್ಚುಮಚ್ಚಿನ ಲಿಂಗವ ಗ್ರಹಿಸಿ, ಮಚ್ಚು ಒಳಕೊಂಡಿತ್ತಯ್ಯ. ಕರ್ಪುರದ ಕರಡಿಗೆಯು ಗಾಸಿಮಾಡಿದಂತಾಯಿತ್ತು. ಲಿಂಗಾನುಭಾವಿಗಳ ಸಂಗದಿಂದಾನು ಕಣ್ದೆರೆದೆನು ಕಾಣಾ ಗುಹೇಶ್ವರಾ.

ಟೀಕು:—ಅಂಗದ ಮೇಲೆ ಲಿಂಗವ ಧರಿಸಿ, ಆ ಲಿಂಗವನು ಲೋಲುಪ್ತಿಯಿಂದ ಗ್ರಹಿಸುತ್ತಿರಲು, ಶರಣರ ಸಂಸರ್ಗದಿಂದ ಲಿಂಗವು ಪ್ರಾಣವು ಒಂದಹ ಅನುಭಾವಗ್ರಾಹಕವಾಗಲು, ಮಹಾ ವಿವೇಕದೊಳಗೆ ಹೃದಯ ಮಥನವಾಗಿ, ಪ್ರಾಣಲಿಂಗ ಸಂಬಂಧ ಕಂದೆರವಾಯಿತ್ತು. ಎಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೯೫. ಹೃದಯ ಕಮಲದೊಳಗೊಂದು ಮರಿದುಂಬಿ ಹುಟ್ಟಿತ್ತು. ಹಾರಿ ಹೋಗಿ, ಆಕಾಶವ ನುಂಗಿತ್ತಯ್ಯಾ! ಆ ತುಂಬಿಯ ಗರಿಯ ಗಾಳಿಯಲ್ಲಿ ಮೂರುಲೋಕವೆಲ್ಲವು ತಲೆ ಕೆಳಗಾಯಿತ್ತು. ಪಂಚವರ್ಣದ ಹಂಸೆ, ಪಂಜರವ ಖಂಡಿಸಿದರೆ ಗರಿ ಮುರಿದು ತುಂಬಿ ನೆಲಕ್ಕೆ ಉರುಳಿತ್ತು. ನಿಜ ದುದಯದ ಬೆಡಗಿನ ಕೀಲ ಗುಹೇಶ್ವರಾ ನಿಮ್ಮ ಶರಣರನುಭಾವ ಸಂಗದಲ್ಲಿರ್ದು ಕಂಡೆನಯ್ಯಾ.

ಟೀಕು:—ಹೃತ್ಕಮಲ ಕರ್ಣಿಕಾ ಕುಹರ ಮಧ್ಯದಲ್ಲಿ ಅಜ್ಞಾನತಮೋ ವರ್ಣದಿಂ ಭ್ರಮೆ ಯುಕ್ತದಿಂ ಭ್ರಮರ ನಾಮದಿಂದುದಯಿಸಲು, ಅದೀಗ, ಹೃತ್ಕಮಲದಲ್ಲಿ ಒಂದು ಮರಿದುಂಬಿ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನ ಆತ್ಮತತ್ವವನಾವರಿಸಿದ ತಮೋ ವಿವರ್ಧತ್ವಮಂ ಪುಟ್ಟಿಸಲು, ಅದು ಹಾರಿ ಹೋಗಿ ಆಕಾಶವ ನುಂಗಿತ್ತೆಂಬ ಶಬ್ದಕ್ಕರ್ಥ. ಆ ಅಜ್ಞಾನ ಭ್ರಮರನ ಪ್ರಪಂಚಕ್ರೀಡೆಯಿಂ ಜಗವೆಲ್ಲವು ಮರವೆಯನೆಯ್ದಿತ್ತೆಂಬುದೀಗ, ಆ ತುಂಬಿಯ ಗರಿಯ ಗಾಳಿಯಲ್ಲಿ ಮೂರುಲೋಕವೆಲ್ಲವು ತಲೆ ಕೆಳಗಾಯಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಅಜ್ಞಾನ ಭ್ರಮೆಯ ಕೆಡಿಸುವ ಪರಿ ಎಂತೆಂದಡೆ, ಪಂಚೀಕರಣಂಗಳ ವರ್ಣ ಧರ್ಮಂಗಳನುಳ್ಳ ಜೀವಹಂಸನ ಆಶ್ರಯ ನೆನಿಸುವ ಪಿಂಡಮಂ ಅನಿತ್ಯವೆಂದರಿದು ಸದ್ವಿವೇಕದಿಂ ಖಂಡಿಸಲು, ಎಂಬುದಿಗ ಪಂಚವರ್ಣದ ಹಂಸೆಯ ಪಂಜರವ ಖಂಡಿಸಿದರೆ ಎಂಬ ಶಬ್ದಕ್ಕರ್ಥ. ಇಂತು ಶರಣನು ಅನುಭಾವ ಮುಖದಿಂ ಶರೀರಭಾವವಮಂ ಖಂಡಿಸಲು, ಆ ಅಜ್ಞಾನ ಭ್ರಮರನ ಪ್ರಪಂಚೆಂಬ ರೆಕ್ಕೆಗಳು ಲೋಪವಾಗಿ, ಆತನು ಮಧ್ಯದಲ್ಲಿ ಲಯವಾಯಿತ್ತೆಂಬುದೀಗ, ಆ ತುಂಬಿಯ ಗರಿ ಮುರಿದು ನೆಲಕ್ಕೆ ಬಿದ್ದವೆಂಬ ಶಬ್ದಕ್ಕರ್ಥ. ಇಂತು ಭ್ರಮೆಯಳಿಯಲು, ನಿಜಸ್ವಯಂಭುವಪ್ಪ ಪರ

ತ್ತ್ವದ ನಿಲವಿನ ಭೇದವ ಶಿವಶರಣರಪ್ಪ ಮಹಾನುಭಾವಿಗಳ ಸಂಗದಿಂದ ಕಂಡೆನೆಂಬುದೀಗ, ನಿಜದುದಯದ ಬೆಡಗಿನ ಕೀಲು ಗುಹೇಶ್ವರಾ ನಿಮ್ಮ ರಣರ ಅನುಭಾವ ಸಂಗದಲ್ಲಿರ್ದು ಕಂಡೆನಯ್ಯಾ ಎಂಬ ಶಬ್ದಕ್ಕರ್ಥ.

೯೬. ಲಿಂಗವನು ಪ್ರಾಣವನು ಒಂದು ಮಾಡಿ ತೋರಿದ ಗುರು ರ್ದನಲ್ಲಾ! ಲಿಂಗವಿರ್ದನಲ್ಲಾ. ಇದಕ್ಕೆ ಸಾಕ್ಷಿ. ಮುಂದೆ ಜಂಗಮವಿ ರ್ದನಲ್ಲಾ! ಈ ತ್ರಿವಿಧ ದೃಷ್ಟವ ಕಂಡು ಬೇರೆಂಬ ಅಜ್ಞಾನಕ್ಕೆ ನಾನು ವೆರಗಾದೆನು ಗುಹೇಶ್ವರಾ.

ಟೀಕು.— ಲಿಂಗದಲ್ಲಿ ಪ್ರಾಣಗುಣವಳಿದು ಲಿಂಗಗುಣ ಉಳಿದರೆ ಃದೀಗ ಪ್ರಾಣಲಿಂಗ ಸಂಬಂಧ. ಇಂತಪ್ಪ ಪ್ರಾಣಲಿಂಗ ಸಂಬಂಧವ ಶ್ರೀಗುರು ಬೋಧೆಯಿಂದ ಕರಸ್ಥಲದ ಇಷ್ಟಲಿಂಗ ದರ್ಶನ ವಿವೇಕದಿಂದ ಜಂಗಮಲಿಂಗದ ಶಿಕ್ಷಾಬೋಧೆಯಿಂದ ಕಾಣಬಂದಿತ್ತೆಂಬುದೀಗ ದೃಷ್ಟ. ಇದಲ್ಲದೆ ಬೇರೆ ಬೇರೆ ಅನ್ಯಪದವಿಲ್ಲವೆಂಬುದೀ ವಚನದ ಬಹು ಶಬ್ದ ಕ್ಕೇಕಾರ್ಥ ನಿರ್ವಚನ.

೯೭. ಕಬ್ಬಿನ ಬಿಲ್ಲ ಮಾಡಿ, ಪರಿಮಳದಲ್ಲಿ ಅಂಬ ಮಾಡಿ, ನಿಲ್ಲೊ ಬಲ್ಲಾಳೆ. ಎನ್ನ ಮನದಲ್ಲಿ ಎಸೆಯ ಬಲ್ಲೆಯಲ್ಲಾ ಗುಹೇಶ್ವರನೆಂಬ ಲಿಂಗವ.

ಟೀಕು:— ಲಿಂಗದ ಮೇಲಣ ರತಿ ಮನ ಪ್ರವೇಶಿತವಾಗಿ, ಶರಣ ನೆಂಬ ಸತಿ, ಆ ಲಿಂಗ ಸಂಗದ ಸಮರಸವನು ಅತ್ಯಂತ ಶ್ರದ್ಧೆಯಿಂದ ಬಯಸಿ, ಕಾಮಾತುರೆಯಾಗಿದ್ದಳೆಂಬುದೀ ವಚನದ ತಾತ್ಪರ್ಯಾರ್ಥ.

೯೮. ಕಂಗಳೇಕೆ ನೋಡಬೇಡವೆಂದರೆ ಮಾಣವು. ಶ್ರೋತ್ರಂಗ ಳೇಕೆ ಆಲಿಸಬೇಡವೆಂದಡೆ ಮಾಣವು. ಜಿಹ್ವೆ ಏಕೆ ರುಚಿಸಬೇಡವೆಂದಡೆ ಮಾಣವು. ನಾಸಿಕವೇಕೆ ವಾಸಿಸಬೇಡವೆಂದಡೆ ಮಾಣವು. ತ್ವಕ್ಕೇಕೆ ಸೋಂಕಬೇಡವೆಂದಡೆ ಮಾಣವು. ಈ ಭೇದವನರಿದು ನುಡಿಯಲು, ಸಮ ಧಾತುವಾಯಿತ್ತು. ಗುಹೇಶ್ವರ ಲಿಂಗಕ್ಕೆ ಒಲಿದ ಕಾರಣ ಅಭಿಮಾನ ಲಜ್ಜೆ ಬೇಸತ್ತು ಹೋಯಿತ್ತು.

ಟೀಕು:— ಪಂಚೇಂದ್ರಿಯಂಗಳು ತಮ್ಮ ತಮ್ಮ ಸ್ವಗುಣ ಧರ್ಮಂ ಗಳ ಬೇಡೆಂದಡೆ ಬಿಡವು. ಅದುಕಾರಣ ಪಂಚೇಂದ್ರಿಯಂಗಳ ತೊರೆದು ಲಿಂಗ ಸಂಗವ ಮಾಡಬಾರದು. ಮತ್ತೆಂತೆಂದಡೆ ಆ ಪಂಚೇಂದ್ರಿಯಂಗಳ

ಸುಖವನೆ ಲಿಂಗದೊಳಗೆ ವೇಧಿಸಿ ಸಾಮರಸ್ಯವ ಮಾಡಿಕೊಳ್ಳಲು, ದೇಹೇಂದ್ರಿಯಾದಿ ಅಭಿಮಾನಂಗಳು ಲಯವಪ್ಪವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೯೯. ಬಿಸುಜಂತೆ ಜವಳಿಗಂಭ ಲೇಸಾಯಿತ್ತು. ಮನ ಲೇಸಾಯಿತ್ತು. ಮೇಲುವೊದಕೆ ಮಗುಳೆ ಆ ಅಂಗಕ್ಕೆ ಕಿಚ್ಚನಿಕ್ಕಿ ಸುಟ್ಟು ಮನೆಯ ನಿಂಬು ಮಾಡುವೆ. ಲಿಂಗಜಂಗಮಕ್ಕೆ ಹುಟ್ಟುಗೆಟ್ಟು ಬಟ್ಟಬಯಲಲ್ಲಿ ನಾನಿದೇನೆ ಗುಹೇಶ್ವರಾ.

ಟೀಕು:— ಸಕಲ ಕ್ರಿಯೆಗಳೆಲ್ಲವು ಬಿಸುಜಂತೆಯಾಗಿ ಲಿಂಗನಿಷ್ಠೆಯು. ಭಾವವು ಆ ಕ್ರಿಯೆಗಳೆಲ್ಲಕ್ಕೆಯು ಆಧಾರವಾದ ಕಾರಣ ಬಿಸುಜಂತೆ ಜವಳಿಗಂಭವೆಂಬ ಶಬ್ದಕ್ಕರ್ಥ. ಆಚಾರವೆಂಬ ಮೇಲುವೊದಕೆ ಆವರಿಸಲು ಅದೀಗ ಮೇಲುವೊದಕೆ ಎಂಬ ಶಬ್ದಕ್ಕರ್ಥ. ಇಂತು ಲಿಂಗಕ್ಕೆ ಭಕ್ತನು ತನ್ನ ತನುವೆಂಬ ಗ್ರಹವನಿಂಬು ಮಾಡಿದನಾಗಿ, ಮತ್ತಾ ಕ್ರಿಗಳ ಜ್ಞಾನಾಗ್ನಿಯಿಂ ದಹಿಸಿ, ಸುಜ್ಞಾನ ಕ್ರಿಗಳ ಮಾಡಿ. ಆ ಲಿಂಗ ನಿಷ್ಠೆಯನು ಭಾವವನು ಜ್ಞಾನಾಗ್ನಿಯಿಂ ದಹಿಸಿ, ಮಹಾಜ್ಞಾನ ನಿಷ್ಠೆಯ ಮಹಾಜ್ಞಾನ ನಿಭಾರವಮಂ ಮಾಡಿ, ಮೇಲುವೊದಕೆ ಎಂಬ ಆಚಾರಮಂ ಜ್ಞಾನಾಗ್ನಿಯಿಂ ದಹಿಸಿ, ಜ್ಞಾನಾಚಾರವಂ ಮಾಡಿ, ಇಂತು ಸರ್ವಾಚಾರ ಸಂಪತ್ತುವಿಡಿದ ಶರಣನ ತನುವೆಂಬ ಗ್ರಹಮಂ ಸುಜ್ಞಾನ ಗ್ರಹಮಂ ಮಾಡಿ, ಮಹಾಲಿಂಗಕ್ಕೆ ಇಂಬು ಮಾಡಿದನೆಂಬುದೀಗ ಮಗುಳೆ ಆ ಅಂಗಕ್ಕೆ ಕಿಚ್ಚನಿಕ್ಕಿ ಸುಟ್ಟು ಮನೆಯನಿಂಬು ಮಾಡಿದೆನೆಂಬ ಶಬ್ದಕ್ಕರ್ಥ. ಇಂತಾದ ಶರಣನ ತನುಮನಪ್ರಾಣಭಾವಂಗಳಳಿದು ಭವಂ ನಾಸ್ತಿಯಾಗಿ ಸದ್ಯನ್ಮುಕ್ತನಾದನೆಂಬುದೀಗ ಹುಟ್ಟುಗೆಟ್ಟು ಬಟ್ಟಬಯಲಲ್ಲಿ ನಾನಿದ್ದೇನೆ ಗುಹೇಶ್ವರಾ ಎಂಬ ಶಬ್ದಕ್ಕರ್ಥ.

೧೦೦ ತನು ತರತರಂಬೋಗಿ, ಮನವು ನಿಮ್ಮಲ್ಲಿ ಸಿಲುಕಿತ್ತಯ್ಯ. ನೋಟವೇ ಪ್ರಾಣವಾಗಿ ಆಪ್ಯಾಯನ ನಿಮ್ಮಲ್ಲಿ ಅರತುದಯ್ಯ. ಸಿಲುಕಿತ್ತು ಶೂನ್ಯದೊಳಗೆ. ಗುಹೇಶ್ವರ ನಿರಾಳವಯ್ಯಾ.

ಟೀಕು:— ಮಹಾಲಿಂಗದ ಮೂರ್ತಿ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬರಲು, ಆ ಲಿಂಗನಿಷ್ಠೆಯ ನಿಬ್ಬರದ ತುರೀಯದಿಂದ ತನುವೆಂಬ ಭಾವ ಮರೆದು ಹೋಯಿತ್ತೆಂಬುದೀಗ, ತನು ತರತರಂಬೋಗಿ ಎಂಬ ಶಬ್ದಕ್ಕರ್ಥ. ಇಂತು ತನುವೆಂಬ ಭಾವ ನಷ್ಟವಾಗಲು, ಮನವಾ ಘನಲಿಂಗ ಧ್ಯಾನದೊ

ಳಗೆ ಸಿಲುಕಿತ್ತೆಂಬುದೀಗ ಮನವು ನಿಮ್ಮಲ್ಲಿ ಸಿಲುಕಿತ್ತೆಂಬ ಶಬ್ದಕ್ಕರ್ಥ. ಇಂತು ಲಿಂಗಧ್ಯಾನದೊಳಗೆ ಮನ ಸಿಕ್ಕಿದ ಬಳಿಕ ನೋಡುವ ಕಂಗಳ ಮುಂದಣ ಮೂರ್ತಿ ಆ ಕಂಗಳೊಳಗೆ ಪರವಶವನೆಯ್ದಲು ನೋಟವೆ ಪ್ರಾಣವಾಗಿರ್ದಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗದಲ್ಲಿ ಅವಿರಳ ಸಂಗಿಯಾದ ಶರಣನ ಸುಖಪ್ರಸನ್ನ ತನಗೆ ಅನ್ಯವಿಟ್ಟು ತೋರದೆ ಆ ಲಿಂಗದೊಳಗೆ ವಿಶ್ರಮಿಸಿತ್ತೆಂಬುದೀಗ, ಆಪ್ಯಾಯನ ನಿಮ್ಮಲ್ಲಿ ಅರತುದಯ್ಯಾ ಎಂಬ ಶಬ್ದಕ್ಕರ್ಥ. ಇಂತು ಅಂಗದಾಪ್ಯಾಯನವಳಿದು, ಲಿಂಗದಾಪ್ಯಾಯನವಾದ ಕಾರಣ ಸರ್ವಾಂಗವು ನಿರ್ವಯಲೊಳಗೆ ನಿಂದಿತ್ತೆಂಬುದೀಗ, ಸಿಲುಕಿತ್ತು ಶೂನ್ಯದೊಳಗೆ ಗುಹೇಶ್ವರ ನಿರಾಳವೆಂಬ ಶಬ್ದಕ್ಕರ್ಥ.

೧೮೧. ಮನ ಬಸುರಾದರೆ ಕೈ ಬೆಸಲಾಯಿತ್ತ ಕಂಡೆ. ಕರ್ಪುರದ ಕಂಪ ಕಿವಿ ಕುಡಿಯಿತ್ತ ಕಂಡೆ. ಮುತ್ತಿನ ಡಾಳವ ಮೂಗು ನುಂಗಿತ್ತ ಕಂಡೆ. ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ. ಒಂದು ನಿಲದೊಳಗೆ ಮೂರು ಲೋಕವಡಗಿತ್ತ ಕಂಡೆ ಗುಹೇಶ್ವರಾ.

ಟೀಕು:—ಕಾಷ್ಠದೊಳಗಂತರ್ಗತವಾದ ಅಗ್ನಿ ಮಥನದಿಂ ಬಹಿರ್ಗತ ಪ್ರಕಾಶವಾಗಿ ತೋರಿದಂತೆ, ಶರಣನ ಮನೋಮಧ್ಯದಲ್ಲಿರ್ಪ ಮಹಾಲಿಂಗದ ನಿಜವು ಗುರುಕಾರುಣ್ಯ ಮಹಾನುಭಾವ ಸಂಯೋಗದಿಂದ ಅಂತರಂಗದಿಂದುದಯಿಸಿ, ಬಹಿರ್ಗತವಾಗಿ, ಇಷ್ಟಲಿಂಗ ರೂಪಿಂ ಕರತಳಾಮಳಕವಾಗಿ ಕರಸ್ಥಲದಲ್ಲಿ ತೊಳಗಿ, ಬೆಳಗಿ, ತೋರುತ್ತಿರಲು, ಅದೀಗ ಮನ ಬಸುರಾದರೆ ಕೈ ಬೆಸಲಾಯಿತ್ತೆಂಬ ಶಬ್ದಕ್ಕರ್ಥ. ಕರ್ಪುರವೆಂದರೆ ಸ್ವಾನುಭಾವಕ್ಕೆ ಪೆಸರು. ಅದೆಂತೆಂದಡೆ ಕರ್ಪುರ ತಾನು ನಿರ್ಮಲತ್ವದಿಂ ಸುಗಂಧ ಸುರುಚಿ ಸುಶೈತ್ಯ ಸ್ವಾತ್ಮಹಿತ ಸಂಬಂಧ ಗುಣಂಗಳನುಳ್ಳ ಹಾಗೆ ಸ್ವಾನುಭಾವವೇಬುದು ನಿರ್ಮಲ ಗುಣದಿಂ ಸದ್ವಾಸನಾ ಸಂಬಂಧದಿಂ ಅಮೃತಕರವಪ್ಪ ರುಚಿಯಿಂ, ಪರಮಶಾಂತಿಯಿಂ ಶ್ರೋತ್ರಂಗಳ ಹೃದಯಕ್ಕೆ ಸ್ವಾತ್ಮ ಸಂಬಂಧದಿಂದಿನಿತು ಗುಣಂಗಳು ನರ್ತಿಸುತ್ತಿಪ್ಪವಾಗಿ ಆ ಕರ್ಪುರಕ್ಕೂ ಸ್ವಾನುಭಾವಕ್ಕೂ ಒಂದೇ ಸಾಮ್ಯ. ಇಂತಪ್ಪ ಸ್ವಾನುಭಾವ ಸದ್ವಾಸನಾ ಸಂಬಂಧದಿಂ ಬೋಧಾರಸವನು ಕರ್ಣದ್ವಾರದಿಂ ಸ್ವೀಕರಿಸುತ್ತಿರಲು ಅದೀಗ ಕರ್ಪುರದ ಕಂಪ, ಕಿವಿ ಕುಡಿಯಿತ್ತ ಕಂಡೆನೆಂಬ ಶಬ್ದಕ್ಕರ್ಥ. ಮುತ್ತಿಂಗೆ ಮುಕ್ತಿ ಎಂಬ ನಾಮ ಸಾಮ್ಯದಿಂ ಮುತ್ತಿಂಗೂ ಮುಕ್ತಿಗೂ, ಒಂದೇ ನಾಮ ಪ್ರವರ್ತಕವಾದ ಕಾರಣ ಮುತ್ತೆಂದಡೆ ಮುಕ್ತಿ ಎಂಬ

ಪರಿ, ಆ ಮುಕ್ತಿಯ ನಿರ್ಮಲ ಪ್ರಭೆಯನು ಎಂಬುದೀಗ ಮುತ್ತಿನ ಕಾಂತಿ ಎಂಬ ಶಬ್ದಕ್ಕರ್ಥ. ನಾಸಿಕ ತಾನು ಸುಗಂಧ ವಾಸನಾ ವಿಷಯ ಸಂಬಂಧರೂಪವಾದ ಕಾರಣ ಸದ್ವಾಸನೆ ಎಂಬುದು ಸ್ವಾನುಭಾವ ಗಂಧ ಸ್ವರೂಪಾದ ಕಾರಣ. ನಾಶಿಕವೆಂದಡೂ ಸದ್ವಾಸನೆ ಎಂದಡೂ ಒಂದೇ ಸಾಮ್ಯವಾದ ಕಾರಣ ಆ ಮುಕ್ತಿಯ ನಿರ್ಮಲ ಪ್ರಭೆಯನು ಸ್ವಾನುಭಾವ ಸುಗಂಧವನವಗ್ರಹಿಸಿತ್ತೆಂಬುದೀಗ ಮುತ್ತಿನ ಕಾಂತಿಯು ಮೂಗು ನುಂಗಿತ್ತ ಕಂಡೆನೆಂಬ ಶಬ್ದಕ್ಕರ್ಥ. ಕಂಗಳೆಂದರೆ ಸುಜ್ಞಾನ ದೃಷ್ಟಿ ಎಂಬ ಪರಿ. ಅಂತಪ್ಪ ಸುಜ್ಞಾನ ದೃಷ್ಟಿಯೊಳಗೆ ಮಹಾಘನದ ಅರ್ಥವೆಡೆಗೊಂಡಿರಲು ಅದೀಗ ಕಂಗಳು ಹಸಿದು ಎಂಬ ಶಬ್ದಕ್ಕರ್ಥ. ವಜ್ರವೆಂದಡೆಯೂ ಶಿವತತ್ವವೆಂದಡೆಯೂ ಒಂದೇ ಸಾಮ್ಯ. ಅದೆಂತೆಂದಡೆ ವಜ್ರವತ್ಯಂತ ನಿರ್ಮಲ ಪ್ರಭೆಯಾಗಿಯೂ ಆವುದಾನೊಂದರಿಂ ಭೇದಿಸಿಹೆನೆಂದಡೆಯೂ ಭೇದ್ಯವಾಗದಾಗಿಯೂ, ವಿರಳವ ಮಾಡಿಹೆನೆಂದಡೆಯೂ ವಿರಳವಾಗದಾಗಿಯೂ- ಉತ್ತಮ ರತ್ನವಾಗಿಯೂ ಆ ಶಿವತತ್ವವು ಆ ಹಾಗೆ ನಿರ್ಮಲ ಪ್ರಭೆಯಾಗಿಯೂ ಅಭೇದ್ಯವಾಗಿಯೂ, ಅವಿರಳವಾಗಿಯೂ, ಅಭೇದ್ಯವಾಗಿಯೂ, ಅನರ್ಘ್ಯವಾಗಿಯೂ, ಇಂತು ವಜ್ರಕ್ಕೂ ಶಿವತತ್ವಕ್ಕೂ ಒಂದೇ ಸಾಮ್ಯವಾದ ಕಾರಣ ಆ ಸುಜ್ಞಾನದೃಷ್ಟಿಯು ಅರ್ಥವು ಆ ಶಿವತತ್ವನನವಗ್ರಹಿಸಿತ್ತೆಂಬುದೀಗ ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆನೆಂಬ ಶಬ್ದಕ್ಕರ್ಥ. ನೀಲವೆಂದಡೆ ಮಾಯೆ ಎಂಬ ಪರಿ. ಅದೆಂತೆಂದಡೆ ನೀಲ ತಾನು ಕೃಷ್ಣವರ್ಣ ಸಂಬಂಧದಿಂ ತಾಮಸಾಂಶೀಭೂತ ಮಪ್ಪುದರಿಂ ಮಾಯೆಯೂ ತಮೋರೂಪಿಂದಿರ್ಪುದರಿಂ ನೀಲವೆಂದಡೂ ಮಾಯೆ ಎಂದಡೂ ಒಂದೇ ಸಾಮ್ಯ. ಅದು ಕಾರಣದಿಂ ಅಂತಪ್ಪ ಮಾಯೆಯು ನಿಲವಿನೊಳಗೆ ತ್ರಿಜಗವಡಗಿತ್ತೆಂಬುದೀಗ ಒಂದು ನಿಲದೊಳಗೆ ಮೂರು ಲೋಕವಡಗಿತ್ತ ಕಂಡೆನೆಂಬ ಶಬ್ದಕ್ಕರ್ಥ.

೧೮೨. ಕಾಲ ಸಡಗರ ಕೈಯ್ಯಲದೆ. ಕೈಯ್ಯ ಸಡಗರ ಕಂಗಳಲದೆ. ಅದೇನು ಕಾರಣವೆಂದಡೆ ಕಂಗಳೆ ಕಾರಣವಾಗ ಒಂದು ಮಾತಿನೊಳಗೆ ವಿಚಾರವದೆ. ಕನ್ನಡಿಯೊಳಗೆ ಕಾಯುವದೆ. ಇವೇನು ಕಾರಣ ತಿಳಿಯಲರಿಯರು ಹೇಳಾ ಗುಹೇಶ್ವರಾ.

ಟೀಕು:—ಗುರು ಕಾರುಣ್ಯ ಲಿಂಗ ಸ್ವಾಯತವುಳ್ಳ ಶಿವಶರಣಂಗೆ ಸದಾಚಾರದ ಸತ್ಕ್ರಿಯೆಯೆ ಚರಣವಾಗಿ, ಸತ್ಪಥವಲ್ಲಿ ಶಿವಲೀಲೆಯಿಂ ನಡೆ

ವೃತ್ತಿಪರ್ದೀಗ, ಕಾಲಸಪಗರವೆಂಬ ಶಬ್ದಕ್ಕರ್ಥ. ಅಂತಪ್ಪ ಸದಾಚಾರ ಸಚ್ಚರಿಯಕ್ಕೆ ಕರ್ತ ಸ್ಥಾನವಾವುದೆಂದಡೆ ಇಷ್ಟಲಿಂಗವೆ ಆಚಾರಲಿಂಗ ವಾವ ಕಾರಣ ಆ ಲಿಂಗಪ್ರವರ್ತನೆ ಕರಸ್ಥಲದಲ್ಲಿರ್ಪವೆಂಬುದೀಗ, ಕಾಲ ಸಡಗರ ಕೈಯ್ಯಲೆಲದೆ ಎಂಬ ಶಬ್ದಕ್ಕರ್ಥ. ಆ ಕರಸ್ಥಲದ ಲಿಂಗಕ್ಕೆ ನೋಟವೆ ಆಶ್ರಯಸ್ಥಾನ. ಅದೆಂತೆಂದಡೆ, ಕೂಟಕ್ಕೆ ನೋಟವೆ ಕಾರಣವಾಗಿ ಎಂಬು ದೀಗ ಕೆಯ್ಯ ಸಡಗರ ಕಂಗಳಲದೆ ಅದೇನು ಕಾರಣವೆಂದಡೆ ಕಂಗಳೇ ಕಾರಣವಾಗಿ ಎಂಬ ಶಬ್ದಕ್ಕರ್ಥ. ಈ ಪಥವನರಿದು ನಿಜದಲ್ಲಿ ನಿಂದು ಆ ಅರಿವನಿದಿರಿಂಗೆ ತೋರಿ ಮಾತನಾಡಿದಡೆ ತನ್ನ ಮಾತು ತನ್ನನಾಲಿಂಗಿಸಿ ಕೊಂಬ ಹಾಂಗೆ ಮಾತನಾಡಲು ಅದು ಏಕವಾಕ್ಯ ಪ್ರತಿಷ್ಠೆ ಎನಿಸಿಕೊಂಡ ಕಾರಣದಿಂ ಅದೀಗ ಒಂದು ಮಾತಿನೊಳಗೆ ವಿಚಾರವದೆ ಎಂಬ ಶಬ್ದಕ್ಕರ್ಥ. ಕನ್ನಡಿಯ ನೋಡಲು ತನ್ನಿಂದ ಭಿನ್ನವಿಲ್ಲವೆಂಬುದ ತನ್ನ ತಾನಿದಿರಿಟ್ಟು ನೋಡಿ ಕಂಡು ತನ್ನನರಿವುದೆ ಸದ್ವಿವೇಕವೆಂಬುದೀಗ ಕನ್ನಡಿಯೊಳು ಕಾಯುವದೆ ಎಂಬ ಶಬ್ದಕ್ಕರ್ಥ. ಇಂತಪ್ಪ ವಿವೇಕವ ತಿಳಿಯದವರು ಅಕ್ರ ಮಿಗಳೆಂಬುದೀಗ ಇದೇನು ಕಾರಣ ತಿಳಿಯಲರಿಯರೆಂಬ ಶಬ್ದಕ್ಕರ್ಥ.

೧೬೩ ಅಮೃತಸಾಗರದೊಳಗಿರ್ದು, ಆಕಳ ಚಿಂತೆ ಏಕೆ? ಮೇರು ಮಂದಿ ರದೊಳಗಿರ್ದು ಜರಗ ಲೋಕದ ಚಿಂತೆ ಏಕೆ? ಶ್ರೀ ಗುರುವಿನೊಳಗಿರ್ದು ತತ್ವ ವಿದ್ಯೆಯ ಚಿಂತೆ ಏಕೆ? ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆ ಏಕೆ? ಕರಸ್ಥಲದೊಳಗೆ, ಲಿಂಗವಿರ್ದ ಬಳಿಕ, ಮತ್ತಿನ್ನಾವ ಚಿಂತೆ ಏಕೆ ಹೇಳಾ ಗುಹೇಶ್ವರಾ?

ಟೀಕು:— ಅಮೃತಶರಧಿಯೊಳಗಿರ್ದು, ಆ ಅಮೃತವನೆ ಸ್ವೀಕರಿಸಲ ರಿಯದೆ, ಆಕಳ ಬಯಸುವದು ಅಜ್ಞಾನ. ಸುವರ್ಣದ ಗಿರಿಯಮೇಲಿರ್ದು, ಆ ಸುವರ್ಣವನೆ ತೆಗೆದುಕೊಂಡು, ಬಳಸುವದಲ್ಲದೆ ಜರಗ ತೊಳೆದಿಹೆ ನೆಂಬುದು ಅಜ್ಞಾನ. ತಾ ಬಯಸುವ ಮಹಾಲಿಂಗವೇ, ಗುರೂಪದೇಶದಿಂ ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬಂದು ಕರತಳಾಮಳಕವಾಗಿರುತ್ತಿರಲು ಆ ಲಿಂಗದಲ್ಲಿ ತಾನು ಸಮ್ಯಸ್ಮೃಕ್ತನಹುದಲ್ಲದೆ ಬೇರೆ ಮುಕ್ತಿಯೆ ಬೇರೆ ಶಿವ ತತ್ವ ಯೋಗಾಭ್ಯಾಸ ಮೊದಲಾದವರಿಂ ಬಳಲುವುದು ಅಜ್ಞಾನಭಾವವೆಂ ಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೦೪. ಈಶ್ವರನನರಿದೆನೆಂದು ನುಡಿದು, ಬೇಸರವೋದರ್ಣ್ಣಗಳೆಲ್ಲ ಪ್ರಾಣಲಿಂಗವೆ·ಬರಯ್ಯಾ! ಮನ ಘನವೆಂದರಿಯದೆ ಮರುಳುಗೊಂಡರು. ಈಶ್ವರನನರಿದಡೆ ತಾ ಶಿವನು. ಗುಹೇಶ್ವರನೆಂಬುದು ಬೇರಿಲ್ಲ.

ಟೀಕುಃ— ಶಿವತತ್ವವನರಿದೆನೆಂದು ನುಡಿವ ನುಡಿ ಭಿನ್ನ ಶಬ್ದ. ಅದೇನು ಕಾರಣವೆಂದರೆ ತಾನರಿದುದು ತನಗನ್ಯವಾಗಿ ತೋರುವುದಾಗಿ ಅದನನ್ಯವಿಟ್ಟು ನುಡಿಯಲಾಗದು. ತಥಾಪಿಸಿ ನುಡಿದಡೆ ಅದು ಶಬ್ದ ಬೇಸರವಪ್ಪುದೆಂಬುದೀಗ, ಈಶ್ವರನನರಿದೆನೆಂದು ನುಡಿದು, ಬೇಸರವೋದರಣ್ಣಗಳೆಲ್ಲರೂ, ಎಂಬ ಶಬ್ದಕ್ಕರ್ಥ. ಅದು ಲಿಂಗಸಂಬಂಧ ಪ್ರಾಣವಲ್ಲವೆಂಬುದೀಗ ಪ್ರಾಣಲಿಂಗವೆಂಬರಯ್ಯಾ ಎಂಬ ಶಬ್ದಕ್ಕರ್ಥ. ಸಂಶಯಸಂಬಂಧವಳಿದು ಮನದೊಳಗೆ ಮಹಾ ಘನಲಿಂಗವಿಂಬುಗೊಂಡು, ನೆನಹು ನಷ್ಟವಾಯಿತ್ತಾಗಿ, ನುಡಿವಾತ ತಾನೆ ಶಿವತತ್ವವೆಂದರಿವುದೀಗ, ಮನ ಘನವೆಂದರಿಯದೆ ಮರುಳುಗೊಂಡರು. ಈಶ್ವರನನರಿದಡೆ ತಾ ಶಿವನೆಂಬ ಶಬ್ದಕ್ಕರ್ಥ.

೧೦೫. ಕರ್ಮ ನಾಸ್ತಿ ಎಂಬೆ. ಅನಾಸ್ತಿ ಎಂಬೆ. ಜ್ಞಾನ ಕೊಬ್ಬಿನ ಲುಲಿವೆ. ಉಲಿದಂತೆ ನಡೆವೆ. ಸಂಗಡ ಸಹಿತ ಕರಸ್ಥಲಕ್ಕೆ ಬಂದು ನೀನು ಬಯಲಾಗೆ ಎನ್ನನು ಬಯಲು ಮಾಡಿದೆ ಗುಹೇಶ್ವರಾ.

ಟೀಕುಃ— ಆಚರಿಸುವ ಸತ್ಕ್ರಿಯಾ ಕರ್ಮಂಗಳೆಲ್ಲವು ನಾಸ್ತಿಯಾಯಿತ್ತೆಂಬುದೀಗ ಕರ್ಮನಾಸ್ತಿಯಾಯಿತ್ತೆಂಬ ಶಬ್ದಕ್ಕರ್ಥ. ಆ ಸತ್ಕ್ರಿಯಾ ಕರ್ಮವ ಅದ್ವೈತವನರಿದೆನೆಂದು ದುರ್ವಿವೇಕದಿಂ ಬಿಡದೆ ಆ ಸತ್ಕ್ರಿಯಾ ಕರ್ಮಂಗಳೆಲ್ಲವು ಲಿಂಗ ಪ್ರಭೆಯೊಳಡಗಿ, ದಗ್ಧ ಪಟ ನ್ಯಾಯದಂತೆ, ಶಿವಲಿಂಗ ಕ್ರಿಗಳಾಗಿರ್ದವೆಂಬುದೀಗ, ಅನಾಸ್ತಿ ಎಂಬೆನೆಂಬ ಶಬ್ದಕ್ಕರ್ಥ. ಇಂತಪ್ಪ ಸುಜ್ಞಾನ ಕ್ರಿಯಾವರ್ತನೆಯನು ಇದಿರಿಂಗೆ ನುಡಿದು ತೋರದೆ, ತನ್ನ ಲೀಲಾ ವಿನೋದದಿಂ ತನಗೆ ತಾ ನುಡಿದೆನೆಂಬುದೀಗ, ಜ್ಞಾನ ಕೊಬ್ಬಿನಲುಲಿವೆನೆಂಬ ಶಬ್ದಕ್ಕರ್ಥ. ಆ ನುಡಿಯಂತೆ ಎರಡಿಲ್ಲದೆ, ನಡೆವೆನೆಂಬುದೀಗ, ಆ ನುಡಿಯಂತೆ ನಡೆವೆನೆಂಬ ಶಬ್ದಕ್ಕರ್ಥ. ಇಂತು ನಡೆನುಡಿ ಒಂದಾದ ಶರಣನ ಸರ್ವಾಂಗದೊಳಗೆ ಲಿಂಗವು ಸಮರಸವಾಗಿ, ಕರಸ್ಥಲದಲ್ಲಿ ಲಿಂಗವು ಕುರುಹಳಿದು ಕುರುಹಾಕಿ, ಸಿಂದಿತ್ತೆಂಬುದೀಗ ಸಂಗಡ ಸಹಿತ ಕರಸ್ಥಲಕ್ಕೆ ಬಂದು ಎಂಬ ಶಬ್ದಕ್ಕರ್ಥ. ಇಂತಪ್ಪ ನಿರ್ಣಯವುಳ್ಳ ಶರಣಂಗೆ ನಿರ್ವಯಲ ಸಮಾಧಿಯುಳವಡಬೇಕೆಂಬುದೀಗ, ನೀನು ಬಯಲಾಗೆ, ಎನ್ನನು ಬಯಲು ಮಾಡಿದೆ ಎಂಬ ಶಬ್ದಕ್ಕರ್ಥ.

೧೦೬. ನಿಚ್ಚಕ್ಕೆ ನಿಚ್ಚ ಒತ್ತೆಯ ಬೇಡಿದಡೆ, ಅಚ್ಚಗವಾಯಿತ್ತವ್ವ ನವ್ಮ್ಮ ನಲ್ಲಂಗೆ. ಕಿಚ್ಚನೆ ಹೊತ್ತುಕೊಂಡು ಅರ್ಚನೆಯನಾಡಲು ಅಚ್ಚಗ ವಾಯಿತ್ತವ್ವಾ ನವ್ಮ್ಮ ನಲ್ಲಂಗೆ. ಅರ್ಚನೆಯ ಗಳಿಹವನಿಳುಹಿದರೆ ಬಳಿಕ ನಿಶ್ಚಿಂತವಾಯಿತ್ತು ಗುಹೇಶ್ವರಾ.

ಟೀಕುಃ— ಅಂಗದ ಮೇಲೆ ಲಿಂಗವಧರಿಸಿ, ನಿಜದಿಂದರಿದು ಪೂಜಿ ಸಲರಿಯದೆ, ಉಪಾಧಿಯಿಂದ ಪೂಜಿಸಿ ಕಾವಿ ಸಿ ಮುಕ್ತಿಯನು ಬಯ ಸುತ್ತಿರಲು, ಅದು ನಿಚ್ಚಕ್ಕೆ ನಿಚ್ಚ ಒತ್ತೆಯ ಬೇಡಿದರೆ ಎಂಬ ಶಬ್ದಕ್ಕರ್ಥ. ಆ ಮುಕ್ತಿಯ ಬಯಸುವ ಬಯಕೆ ಲಿಂಗಕ್ಕೆ ಭಿನ್ನವಾದುದಾಗಿ, ಅಚ್ಚ ಗವಾಯಿತ್ತೆಂಬ ಶಬ್ದಕ್ಕರ್ಥ. ಆ ಉಪಾಧಿಯ ಬಿಟ್ಟು ಜ್ಞಾನಾಗ್ನಿಯನು ಸರ್ವಾಂಗದಲ್ಲಿ ಧರಿಸಿ ಪರಮಾನಂದ ಲೀಲೆಯಲ್ಲಿರುತಿರಲು ಅದು ಲಿಂಗಕ್ಕೆ ಸುಖವಾಗಿದ್ದಿತೆಂಬುದೀಗ ಕಿಚ್ಚನೇ ಹೊತ್ತುಕೊಂಡು ಅರ್ಚನೆಯ ನಾ ಡಲು ಅಚ್ಚಗವಾಯಿತ್ತೆಂಬ ಶಬ್ದಕ್ಕರ್ಥ. ಇಂತು ಧರಿಸಿಕೊಂಡಿಪ್ಪ ವೃತ್ತಿ ಜ್ಞಾನಕ್ರಿಯಾ ಭೇದವನು ನಿವೃತ್ತಿ ಮಾಡಲು, ನಿಜವು ಸಾಧ್ಯವಾಯಿ ತ್ತೆಂಬುದೀಗ ಅರ್ಚನೆಯ ಗಳಿಹವನಿಳುಹಿದರೆ ಬಳಿಕ ನಿಶ್ಚಿಂತವಾಯಿ ತ್ತೆಂಬ ಶಬ್ದಕ್ಕರ್ಥ.

೧೦೭. ಆಸೆ ಎಂಬ ಕೂಸನೆತ್ತಲು, ರೋಷವೆಂಬ ತಾಯಿ ಮುಂದೆ ಬಂದಿರ್ಪಳು ನೋಡಾ. ಇಂತೀ ಎರಡಿಲ್ಲದ ಕೂಸನೆತ್ತಬಲ್ಲಡೆ ಆತನೆ ಲಿಂಗೈಕ್ಯನು ಗುಹೇಶ್ವರಾ.

ಟೀಕುಃ—ಲಿಂಗವನರಿಯಬೇಕೆಂಬ ಆಸೆಯುಳ್ಳನ್ನಕ್ಕರ ಅರಿಯೆನೆಂಬ ವೈರಾಗ್ಯ ಮುಂದುಗೊಂಡಿಪ್ಪುದು. ಆ ಅರಿವಿನ ಆಸೆ ಅರಿಯೆನೆಂಬ ವೈರಾಗ್ಯ ವೆರಡನು ಅತಿಗಳೆದು ನಿಂದ ನಿಲವು ನಿಜ ಸ್ವಾನುಭಾವದುದಯ. ಆ ಸ್ವಾನು ಭಾವವ ಸರ್ವಾಂಗದಲ್ಲಿ ಧರಿಸಲು ಆದೇ ಲಿಂಗೈಕ್ಯವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೦೮. ತಾಯಿ ಬಂಜೆಯಾದಲ್ಲದೆ ಶಿಸು ಗತವಾಗದು. ಬೀಜನಷ್ಟ ವಾದಲ್ಲದೆ, ಸಸಿ ಗತವಾಗದು. ನಾವು ನಷ್ಟವಾದಲ್ಲದೆ ನೇಮ ನಷ್ಟವಾ ಗದು. ಮೊದಲು ಗೆಟ್ಟಲ್ಲದೆ ಲಾಭದಾಸೆ ಬಿಡದು. ಗುಹೇಶ್ವರನೆಂಬ ಲಿಂಗದ ನಿಜವನೆಯ್ದುವಡೆ ಪೂಜೆಯ ಫಲ ಮಾದಲ್ಲದೆ ಭವಂ ನಾಸ್ತಿಯಾಗದು.

ಟೀಕು:— ತಾಯಿ ಬಂಜೆಯಾದರೆ ಗರ್ಭ ನಾಸ್ತಿ ಎಂಬ ಹಾಗೆ, ಬೀಜ ನಾಸ್ತಿಯಾದಡೆ ವೃಕ್ಷ ನಾಸ್ತಿ ಎಂಬ ಹಾಗೆ, ನಾಮನಾಸ್ತಿಯಾದಡೆ ನೇಮ ನಾಸ್ತಿ ಎಂಬ ಹಾಗೆ, ಮೊದಲ ಧನವಿಲ್ಲದಲ್ಲಿ ವೃದ್ಧಿ ಇಲ್ಲವೆಂಬ ಹಾಗೆ ಲಿಂಗವನರಿದೆನೆಂದಡೆ ಉಪಾಧಿಯ ಪೂಜೆಯ ಮರೆದು ಫಲಪದದ ಬಯಕೆ ಹಿಂಗಿ ನಿಃಫಲದಾಯಕನಾದಲ್ಲದೆ ಭವಂ ನಾಸ್ತಿ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

೧೧೯. ಬೆಟ್ಟಕ್ಕೆ ಚಳಿಯಾದಡೆ ಏನ ಹೊದ್ದಿಸುವರಯ್ಯಾ. ಬಯಲು ಬತ್ತಲೆ ಇದ್ದರೆ ಏನ ನುಡಿಸುವರಯ್ಯಾ. ಭಕ್ತನು ಭವಿಯಾದಡೆ, ಅದೇನನುಪಮಿಸುವೆನಯ್ಯ ಗುಹೇಶ್ವರಾ.

ಟೀಕು:—ಮಹಾ ಮೇರುವಿಗೆ ಶೈತ್ಯವಾವರಿಸಿದಡೆ, ಅದಕ್ಕೊಂದಾವರಣವ ಮಾಡಲಿಲ್ಲವೆಂಬ ಹಾಗೆ, ನಿರಾಕಾರ ನಿರ್ವಯಲು ನಿರ್ಲಜ್ಜೆಯಿಂದಿರಲು, ಅದಕ್ಕೊಂದಾವರಣವ ಮಾಡಲಿಲ್ಲವೆಂಬ ಹಾಗೆ, ಲಿಂಗಕ್ಕೆ ಭಕ್ತಿಯ ಮಾಡುತ್ತಿಪ್ಪ ಶರಣನ ಭಕ್ತಿಕ್ರಿಗಳಳಿದು ತಾನೆ ಲಿಂಗವಾದ ಬಳಿಕ ಆಪಾಚಾರವನು ಆವರಣವ ಮಾಡಿಕೊಂಡು ಆಚರಿಸಲಿಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೨೦. ಸತ್ತ ಬಳಿಕ ಮುಕ್ತಿಯ ಹಡಿದಿಹೆನೆಂದು ಪೂಜಿಸಹೋದರೆ, ಆ ದೇವರೇನ ಕೊಡುವರೋ? ಸಾಯದೆ ನೋಯದೆ ಸ್ವತಂತ್ರನಾಗಿ ಸಂದುಭೇದವಿಲ್ಲದಿರ್ಪ ಗುಹೇಶ್ವರ ನಿಮ್ಮ ಶರಣ.

ಟೀಕು:—ಇಹದಲ್ಲಿ ಭಕ್ತಿಯ ಮಾಡಿ, ಸತ್ತ ಬಳಿಕ ಪರದಲ್ಲಿ ಮುಕ್ತಿಯ ಹಡಿದಿಹೆನೆಂದರೆ, ಮುಕ್ತಿ ಘಟಿಸದು. ಅದೇನು ಕಾರಣವೆಂದಡೆ, ಸಾವಿನ ಬೀಜ ಮುಂದೆ ಜನನಕ್ಕೆ ಕಾರಣವಾಗಿ. ಇಂತಲ್ಲದೆ ತನು ವಿಡಿದಲ್ಲಿಯೆ ನಿತ್ಯ ನಿರಂಜನ ಪರಶಿವನು ತಾನೆಂದರಿದಡೆ, ಆತ ಸ್ವತಂತ್ರ ಶಿವೈಕ್ಯನೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೨೧. ನೀರು ನೆಳಲನೆ ಕಡಿದು ಮೇರುವೆಂಬುದ ನುಂಗಿ ಶಾರದೆ ಎಂಬವಳ ಬಾಯ ಕಟ್ಟಿ ಕಾರಮೇಘದ ಬೆಳಸ ನಿರಹರಿ ನುಂಗಲು, ದಾರಿ ಮೃತ್ಯುವ ನುಂಗಿ ನಗುತ್ತಿರ್ದಿತ್ತು. ನಾರಿಯ ಬೆನ್ನ ಮೇಲೆ ಗಂಡ ಬಂದು ಕುಳ್ಳಿರಲು ನೀರತೊಳೆಯುವರೆಲ್ಲರ ಕೊಡನೊಡೆದವು. ಕಾರೆಯ ಮುಳ್ಳಿದ್ದು ಕಲಿಗಳನಟ್ಟಿ ಸದೆವಾಗ ಸೋರುಮುಡಿ ಯಾಕೆ ಗೊರವನ ನೆರೆದವಳು. ಬಳ್ಳು

ಆನೆಯ ನಂಗಿ ಒಳ್ಳೆಯ ಸಮುದ್ರವ ಕುಡಿದು ಕುಳ್ಳಿರ್ದ ಶಿಸು ಹಲಬರ ನೆಯ್ದೆ ನುಂಗಿ ಅತ್ತೆ ಅಳಿಯನ ಕೂಡಿ ಕೋಡಗನ ಹಡೆದಲ್ಲಿ ಹತ್ತಿರ್ದ ಹಾವಡಿಗನನದು ನುಂಗಿತ್ತು. ಕಪ್ಪೆ ಸರ್ಪನ ಹಿಡಿದು ಒತ್ತಿ ನುಂಗುವಾಗ ಕಪ್ಪೆಯ ಕೊರಳಲ್ಲಿ ಬಿಳಿದು ಕೆಂಪಡರಲು ನಿಶ್ಚಿಂತವಾಯಿತ್ತು ಗುಹೇಶ್ವರನ ಶರಣಂಗೆ ಕಟ್ಟಿದಿರ ಕಪ್ಪುರದ ಜ್ಯೋತಿಯಂತೆ.

ಟೀಕು:— ಸಂಸಾರ ವಿಷಯ ರಸೇಂದ್ರಿಯ ಸುಖ ಸಂಕಲ್ಪ ಬದ್ಧ ರೂಪಿಂ ಪ್ರಾಣವಾಯು ಸ್ಪಂದದಿಂ ಸಾಂಚಲ್ಯ ಸಂಬಂಧದಿಂ ಮನಸ್ಸು ನೀರೆಂಬ ಶಬ್ದಕ್ಕೆ ಸಂಬಂಧ ಆ ಮನದೊಳಗೆ ಮರವೆ ಒಳಕೊಂಡಿಪ್ಪುದರಿಂ ಅದು ನೆಳಲೆಂಬ ಶಬ್ದಕ್ಕರ್ಥ- ಇಂತಪ್ಪ ಮನದ ಮರವೆಯನು ಆ ಮನ ದಿಂ ಭಿನ್ನವ ಮಾಡುತ್ತಿರಲು ನೀರ ನೆಳಲನೆ ಕಡಿದು ಎಂಬ ಶಬ್ದಕ್ಕರ್ಥ. ತನು ಮಧ್ಯದಲ್ಲಿ ಮೂಲಾಹಂಕಾರವು ಶಿಖರಿಯಾಗಿಪ್ಪ ಕಾರಣದಿಂ ಅದು ಮೇರುವೆಂಬ ಶಬ್ದಕ್ಕರ್ಥ. ಆ ಅಹಂಕಾರವು ತನ್ನ ನವಗ್ರಹಿಸಿ ಆ ಅಹಂ ಕಾರದ ವಶ ವೃತ್ತಿಗೆ ಸಿಲ್ಕದೆ ತಾನಾಹಂಕಾರವಂ ಅವಗ್ರಹಿಸಿ ತನ್ನೊಳ ಗಡಗಿಸಿಕೊಂಡುದೀಗ ಮೇರುವೆಂಬುದ ನುಂಗಿ ಎಂಬ ಶಬ್ದಕ್ಕರ್ಥ. ವಾಗ್ವೃತ್ತಿಯ ನಿವೃತ್ತಿಯ ಮಾಡುತ್ತಿರಲು, ಅದು ಶಾರದೆ ಎಂಬವಳ ಬಾಯ ಕಟ್ಟಿ ಎಂಬ ಶಬ್ದಕ್ಕರ್ಥ. ಅಭ್ರಚ್ಛಾಯಾ ಮಾತ್ರವಪ್ಪುದು ತನುವಾದ ಕಾರಣ ಕಾರಮೇಘನೆಂಬ ಶಬ್ದಕ್ಕರ್ಥ. ಆ ತನುವಿಂದ ಉದ ಯಿಸಿ ಬೆಳೆದ ತನುಧರ್ಮಕರ್ಮಂಗಳನು ಸ್ವಚ್ಛಾನಂದ ಜಲಪ್ರವಾಹವ ನವಗ್ರಹಿಸಿತ್ತೆಂಬುದೀಗ ಕಾರಮೇಘದ ಬೆಳಸ ನಿರಹರಿ ನುಂಗಲು ಎಂಬ ಶಬ್ದಕ್ಕರ್ಥ. ಇಂತು ಗುರು ಕೃಪಾರಸವಾವರ್ತಿಸಿಪ್ಪ ಸತ್ಪಿಂಡ ಚರಿಸುವ ಮುಮುಕ್ಷು ಮಾರ್ಗ ಆ ಶರೀರದ ಮರಣವ ಕೆಡಿಸಿ ನಿತ್ಯತ್ವವಳವಟ ತ್ತೆಂಬ ಪರಮ ಹರುಷದಿಂದಿರಲು ಅದು ದಾರಿ ಮೃತ್ಯುವ ನುಂಗಿ, ನಗು ತ್ತಿರ್ದಿತ್ತೆಂಬ ಶಬ್ದಕ್ಕರ್ಥ. ಇಂತು ಸುಜ್ಞಾನೋದಯವಾಗಿರ್ಪ ಶರಣಸ ತಿಯ ಸತ್ಕ್ರಿಯಾ ಕರ್ಮವೆಂಬ ಪೂರ್ವ ಭಾಗೆಯನುಳಿದು, ಸುಜ್ಞಾನ ವರ್ತನೆ ಎಂಬ ಅಪರ ಭಾಗೆಯೊಳು ಲಿಂಗವೆಂಬ ಪತಿ ಬಂದು ಮೂರ್ತಿ ಗೊಳಲು, ಎಂಬುದೀಗ, ನಾರಿಯ ಬೆನ್ನ ಮೇಲೆ ಗಂಡ ಬಂದು ಕುಳ್ಳಿ ರಲು, ಎಂಬ ಶಬ್ದಕ್ಕರ್ಥ. ಇಂತು ಶರಣನಲ್ಲಿ ಲಿಂಗ ಸಂಗವಾಗಲು, ಮನೋಧರ್ಮ ಮಾರ್ಗದೊಳು ಚರಿಸುತ್ತಿಪ್ಪ ಸಕಲಕರಣಂಗಳ ಘಟಂ ಗಳು ಭಿನ್ನವಾದವೆಂಬುದೀಗ ನೀರ ಹೊಳೆಯುವರೆಲ್ಲರ ಕೊಡನೊಡೆದವು

ಎಂಬ ಶಬ್ದಕ್ಕರ್ಥ. ಆ ವಿಷಯಾದಿ ಕಂಟಕಂಗಳಿಂ ದೇವದಾನವ ಮಾನವಾದಿಗಳು ಯತಿ ವ್ರತಿ ಯೋಗಿಗಳೆಲ್ಲ ಮುಂದುಗೆಡುತ್ತಿರಲು, ಆ ಸಮಯದಲ್ಲಿ ಶಿವಶರಣನು, ವಿಷಯಾಸಕ್ತನಲ್ಲದಿರುತ್ತಿರಲು, ಆ ಶರಣನಂತರಂಗದ ಚಿತ್‌ಶಕ್ತಿ, ಭಿನ್ನ ಸಂಗವಳಿದು, ಸುಜ್ಞಾನ ಲಿಂಗದಲ್ಲಿ ಅಭಿನ್ನ ಸಂಗವ ಮಾಡಿದಳೆಂಬುದೀಗ ಕಾರೆಯ ಮುಳ್ಳಿದ್ದು ಕಲಿಗಳನಟ್ಟಿ ಸದೆವಾಗ ಸೋರು ಮುಡಿಯಾಕೆ ಗೊರವನ ನೆರೆದಳೆಂಬ ಶಬ್ದಕ್ಕರ್ಥ. ಆರು ಇಲ್ಲದ ಏಕಾಂತ ಸ್ಥಲದಲ್ಲಿ ಧ್ವನಿಗೆಯ್ವ ಬಳ್ಳುವಿನ ಹಾಗೆ ತಾನಲ್ಲದೆ ಏನೂ ಇಲ್ಲದ ಸ್ಥಾನದೊಳಗೆ ಇದ್ದು, ಶಿವೋಹಂ ಶಿವೋಹಂ ಎಂಬ ಧ್ವನಿ ಅಹಂಬ್ರಹ್ಮನೆಂಬುದ ನವಗ್ರಹಿಸಲು, ಅದೀಗ ಬಳ್ಳು ಆನೆಯ ನುಂಗಿ, ಎಂಬ ಶಬ್ದಕ್ಕರ್ಥ. ಉದಕದೊಳಗಿದ್ದು ವಿಷೋಪದ್ರವಿಲ್ಲದೆ, ಸರ್ವ ಭಯ ಭೀತಿಯಿಂದಿರ್ಪ ಜಲ ಸರ್ಪನ ಹಾಗೆ, ಭಕ್ತಿ ರಸಾಂಬುಧಿಯೊಳು ನಿರ್ವಿಷಯಯುಕ್ತವಪ್ಪ ಭಯ ಭೀತಿ ಭೃತ್ಯ ಭಾವದೊಳು ಭವಾಂಬುಧಿಯುಡಗಿತ್ತೆಂಬುದೀಗ ಒಳ್ಳೆ ಸಮುದ್ರವ ಕುಡಿದು, ಎಂಬ ಶಬ್ದಕ್ಕರ್ಥ. ಇಂತಪ್ಪ ಸಕಲ ಕರ್ಮಾವಶೇಷವಾಗಿ ಸ್ಥಿರಚಿತ್ತದಿಂ ಸ್ವಸ್ಥನಾಗಿರ್ಪ ಶಿಷ್ಯನೆಂಬ ಶಿಸು ಬಹುವರ್ಣ ಧರ್ಮಂಗಳ ತನ್ನೊಳಗವಗ್ರಹಿಸಿದನೆಂಬುದೀಗ ಕಳ್ಳಿರ್ದ ಶಿಸು ಹಲಬರನೆಯ್ದೆ ನುಂಗಿ ಎಂಬ ಶಬ್ದಕ್ಕರ್ಥ. ಆ ಪರಾಶಕ್ತಿಯಿಂದುದಯಿಸಿದ ಜ್ಞಾನಶಕ್ತಿಯ ಪುರುಷನಪ್ಪ ಶಿವಶರಣನು ಪರಶಿವತತ್ವ ಸ್ವರೂಪನಪ್ಪ ಕಾರಣದಿಂ ಆ ಪರಶಕ್ತಿಯ ಸಂಗವ ಮಾಡಿ, ಸ್ವಭಾವ ತತ್ವವೆಂಬ ಉನ್ಮನಿ ತತ್ವವು ಉದಯವಾಗಿ ಪಂಚೇಂದ್ರಿಯಂಗಳೆಂಬ ಹೆಡೆಗಳನುಳ್ಳ ಶಂಕಾ ವಿಷಸಂಬಂಧಿಯಪ್ಪ ಸರ್ಪನ ಹಿಡಿದಿರ್ಪ ಜೀವನನು ಅವಗ್ರಹಿಸಿ ಜೀವನ್ಮುಕ್ತನಾಗುತ್ತಿರಲು ಅದೀಗ ಅತ್ತೆಯುಳಿಯನ ಕೂಡಿ ಕೋಡಗವ ಹಡವಲ್ಲಿ ಹತ್ತಿರಿರ್ದ ಹಾವಡಿಗನನದು ನುಂಗಿತ್ತೆಂಬ ಶಬ್ದಕ್ಕರ್ಥ. ಇಂತು ಜೀವನ್ಮುಕ್ತನಾದ ದಿವ್ಯ ಶಿವಯೋಗಿಯ ಸಗುಣ ಬ್ರಹ್ಮದ ಮೂಲ ಕುಂಡಲಿಯು ಬ್ರಹ್ಮರಂಧ್ರದ ಪರಮ ಶಾಂತಿ ಬಿಂದುವಿನಲ್ಲಿ ಅಳಿದು, ಸಾತ್ವಿಕ ರಾಜಸವೆಂಬೆರಡು ನಿವೃತ್ತಿಯಾಯಿತ್ತೆಂಬುದೀಗ ಕಪ್ಪೆ ಸರ್ಪನ ಹಿಡಿದು, ಒತ್ತಿ ನುಂಗುವಾಗ ಕಪ್ಪೆಯ ಕೊರಳಲ್ಲಿ ಬಳದು ಕೆಂಪಡರಲು, ಎಂಬ ಶಬ್ದಕ್ಕರ್ಥ. ಇಂತು ಅಂತರಂಗ ಬಹಿರಂಗದೊಳಗುಳ್ಳ ಸಮಸ್ತ ವ್ಯಾಕುಳ ಚಿಂತೆಗಳೆಲ್ಲವಳಿದ, ನಿಶ್ಚಿಂತೆಯಾಗಿ ಶಿಖಿ ಕರ್ಪುರ ಸಂಯೋಗದಂತೆ ಇರ್ದ್ದನೆಂಬುದೀಗ ನಿಶ್ಚಿಂತ

ಮಾಯಿತ್ತು. ಗುಹೇಶ್ವರನ ಶರಣಂಗೆ ಕಟ್ಟಿದಿರ ಕರ್ಪುರದ ಜ್ಯೋತಿಯಂತೆ ಎಂಬ ಶಬ್ದಕ್ಕರ್ಥ.

೧೧೨. ಪೃಥ್ವಿ ಕುಳ ಮಂಟಪದ ಮೇಲೆ ಪದ ಶಿಲೆ ಬಿಗಿದು, ತಳಕಂಭ ಕಳಸದ ಮೇಲೆ ಕೆಸರುಗಲ್ಲು, ಒಂದು ಮರಕ್ಕೊಂಬತ್ತು ತುಂಬಿಯೊಳಾಪ ಒಗೆಯು ಬಣ್ಣದ ಮೇಲೆ ಹಿರಿದಪ್ಪ ಸಂಯೋಗ, ಅಂಗ ಜನ ಪಡೆ ಕೋಟಿ ಮುಂಡವದ್ದು, ಕುಣಿವಲ್ಲಿ ರಣ ಉಂಡ ಭೂಮಿ ಯುನು ಮಾರಿದ ಗುಹೇಶ್ವರನು.

ಟೀಕು:—ಪೃಥ್ವಿ ಕುಳ ಮಂಟಪವೆಂದರೆ, ಪಂಚಭೂತ ಸಮ್ಮಿಶ್ರ ವಾದ ದೇಹವೆಂಬ ಪರಿ, ಆ ಪೃಥ್ವಿಯಂಶದ ತನುವಿನ ಮೇಲೆ ಸುಚಿ ತ್ತವೆಂಬ ನೆಲಗಟ್ಟನು ಸಿದ್ಧವ ಮಾಡಿ, ಆಧಾರಸ್ಥಲವನನುಗೊಳಿಸಲು, ಅದೀಗ ಪೃಥ್ವಿಕುಳ ಮಂಟಪದ ಮೇಲೆ ಪದಶಿಲೆ ಬಿಗಿದು ಎಂಬ ಶಬ್ದ ಕ್ಕರ್ಥ. ಇಂತಪ್ಪ ಸುಚಿತ್ತವೆಂಬ ಆಧಾರಸ್ಥಲದ ಮೇಲೆ ಏಕೋಭಾವ ವೆಂಬುದೆಂದು ಸ್ತಂಭ ಉಂಟಾಗಿರಲು ಅದು ತಳಕಂಭವೆಂಬ ಶಬ್ದಕ್ಕರ್ಥ. ಆ ಏಕೋಭಾವ ಸ್ತಂಭದ ಮೇಲೆ ಸುಜ್ಞಾನವೆಂಬುದೊಂದು ತೋರುತ್ತಿ ಪ್ಪುದಾಗಿ, ಅದು ಕಳಸವೆಂಬ ಶಬ್ದಕ್ಕರ್ಥ. ಆ ಸುಜ್ಞಾನದ ಮೇಲೆ ಜ್ಞಾನವಿಶ್ರಾಂತಿ ಎಂಬುದೊಂದು ಜ್ಞೇಯಸ್ಥಲವು ಸರ್ವಕಳಾ ವಿಶ್ರಾಮ ಸ್ಥಾನವೆನಿಸಿ ಸಕಲವನು ತಾನೆ ಧರಿಸಿಕೊಂಡಿಪ್ಪುದರಿಂ ಆಧಾರ ನಾಮವ ನಿಪ್ಪುಲು, ಅದು ಕಳಸದ ಮೇಲೆ ಕೆಸರುಗಲ್ಲು ಎಂಬ ಶಬ್ದಕ್ಕರ್ಥ. ಇಂತಪ್ಪ ಒಪ್ಪ ದಿವ್ಯ ಶಿವಯೋಗಿಯ ಪಿಂಡದೊಳಗೆ ನವನಾಳಂಗಳೆಂಬವು ಒಂಭತ್ತು ದ್ವಾರಂಗಳಿಪ್ಪವು. ಆ ನವನಾಳಂಗಳೊಳಗೆ ತುಂಬಿ ಎಂದರೆ ಪರಿಪೂ ರ್ಣಕ್ಕೆ ಹೆಸರು, ಆಳಾಪವೆಂದರೆ ಧ್ವನಿಗರ್ಥ, ಇಂತು ಒಂದೇ ದೇಹ ದೊಳಗಿರ್ಪ ನವದ್ವಾರಂಗಳೊಳಗೆ ಪರಿಪೂರ್ಣವಾಗಿಪ್ಪ ಪ್ರಾಣಲಿಂಗದ ಪ್ರಭೆ ಶಿವೋಹಂ, ಶಿವೋಹಂ ಎನುತಿರ್ದಿತೆಂಬುದೀಗ, ಒಂದು ಮರಕ್ಕೊಂ ಭತ್ತು ತುಂಬಿಯಾಳಾಪವೆಂಬ ಶಬ್ದಕ್ಕರ್ಥ. ಇಂತಪ್ಪ ಬಗೆಯ ಪ್ರಭೆಯು ಮೇಲೆ ಮಹಾ ಘನದ ರತಿ ಸಂಗ ಅಭಿನ್ನಸಂಯೋಗವಾಗುತ್ತಿರಲು, ಕಾಮವಿಕಾರದ ಪರಿಕರವಾಗಿರ್ಪ ನಾನಾ ಕರಣಂಗಳೆಲ್ಲವು ಅಹಂಕಾರ ವೆಂಬ ಶಿರಹರಿದು ಭಿನ್ನವಾದ ಕಾರಣ, ಅಂಗಜನ ಪಡೆಕೋಟಿ ಮುಂಡ ವೆಂಬ ಶಬ್ದಕ್ಕರ್ಥ. ಇಂತಪ್ಪ ಕರಣಂಗಳ ಅಹಂಮಮತೆಗಳಳಿದು ದಗ್ಧ ಪಟದಂತೆ, ಆ ಲಿಂಗ ಶರಣ ಲೀಲಾಮಾತ್ರದಲ್ಲಿ ಇರ್ದನೆಂಬುದೀಗ,

ಮುಂಡವೆದ್ದು ಕುಣಿವಲ್ಲಿ ಎಂಬ ಶಬ್ದಕ್ಕರ್ಥ. ಇಂತಪ್ಪ ಪಿಂಡದೊಳಗೆ ಸಕಲ ಭೂತೇಂದ್ರಿಯಂಗಳೆಲ್ಲವು ಅಳಿದು ಭೂಗತವಾದವೆಂಬುದೀಗ, ರಣ ಉಂಡ ಭೂಮಿ ಎಂಬ ಶಬ್ದಕ್ಕರ್ಥ. ಆ ದೇಹಭಾವವನು ಮೀರಿ ನಿಜ ದಲ್ಲಿ ನಿಂದಾತನೆ ಶಿವಶರಣನೆಂಬುದೀಗ ರಣ ಉಂಡ ಭೂಮಿಯನು ಮಾರಿ ದನೆಂಬ ಶಬ್ದಕ್ಕರ್ಥ.

**ಭಕ್ತಸ್ಥಲ ಸಮಾಪ್ತ.**



# ಮಹೇಶ್ವರ ಸ್ಥಲ

ಸೂತ್ರಃ— ಇಂತು ಭಕ್ತಸ್ಥಲದಲ್ಲಿ ಸದಾಚಾರ ಸಂಪತ್ತುವಿಡಿದು ಆಚರಿಸಿ ಐಕ್ಯನಾದ ಸದ್ಭಕ್ತನು ಮುಂದೆ ಮಹೇಶ್ವರ ಸ್ಥಲದಲ್ಲಿ ನಿಷ್ಠಾಮುಖದಿಂದ ಆಚರಿಸಿ ಬೆರಸುವ. ಭೇದವೆಂತೆಂದೊಡೆ ಮುಂದೆ ಮಹೇಶ್ವರ ಸ್ಥಲವಾದುದು.

೧. ಆಗಮ ಪುರುಷರಿರಾ, ನಿಮ್ಮ ಆಗಮವಾಯವಾಗಿ ಹೋಯಿತ್ತಲ್ಲಾ! ವಿದ್ಯಾ ಪುರುಷರಿರಾ, ನಿಮ್ಮ ವಿದ್ಯೆ ಅವಿದ್ಯೆಯಾಗಿ ಹೋದಲ್ಲಿ ಬರುಮುಖರಾಗಿರ್ದಿರಲ್ಲಾ! ವೇದ ಪುರುಷರಿರಾ, ನಿಮ್ಮ ವೇದ ಹೊಲಬು ದಪ್ಪಿ ಹೋದಲ್ಲಿ ನಿಮ್ಮ ವೇದವೆ ದೈವವೆಂದು ಕೆಟ್ಟಿರಲ್ಲಾ! ಪುರಾಣ ಪುರುಷರಿರಾ, ನಿಮ್ಮ ಪುರಾಣ ವಿಚಾರ ಭ್ರಷ್ಟಾಗಿ ಹೋದಲ್ಲಿ ನೀವು ಒಡನೆ ಭ್ರಷ್ಟಾಗಿ ಹೋದಿರಲ್ಲಾ! ಶಾಸ್ತ್ರ ಪುರುಷರಿರಾ, ನಿಮ್ಮ ಶಾಸ್ತ್ರ ಮಹಾಪದದ ಹೊನಲಲ್ಲಿ. ಹೋದಲ್ಲಿ ಭಕ್ತ ದೇಹಿಕ ದೇವನೆಂದರಿಯದೆ ಕೆಟ್ಟಿರಲ್ಲಾ! ಯತ್ರ ಶಿವಸ್ತತ್ರ ಮಾಹೇಶ್ವರನೆಂದು ಹೇಳಿತ್ತು ಮುನ್ನ. ಅಂತು ಭಕ್ತ ನಿತ್ಯ ಸತ್ಯ ಸನ್ನಿಹಿತ ಗುಹೇಶ್ವರಾ ನಿಮ್ಮ ಶರಣ.

ಟೀಕುಃ— ವೇದ ಶಾಸ್ತ್ರ ಪುರಾಣಾಗಮಾದಿಯಾದ ಸಕಲ ವಿದ್ಯಂಗಳು ಶಿವನ ನಿಲುಕಡೆಯನರಿಯುವಾಗಿ, ಅವನೋದಿದವರೆಂತೂ ಅರಿಯರು. ಸತ್ಯ ಸದಾಚಾರವುಳ್ಳ ಮಾಹೇಶ್ವರರಲ್ಲಿ ಶಿವನಿರ್ಪನಾಗಿ, ಆ ಮಾಹೇಶ್ವರರೆ ಆ ಶಿವನ ನಿಲವ ಬಲ್ಲರೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೨. ಕಲ್ಲ ಹೋರಿನೊಳಗೊಂದು ಕಿಚ್ಚು ಹುಟ್ಟಿತ್ತ ಕಂಡೆ. ಹುಲ್ಲ ಮೇಲೆರಳೆಯ ಹುಲಿಯು ಸರಸವ ಕಂಡೆ. ಎಲ್ಲರೂ ಸತ್ತು ಆಡುತ್ತಿರ್ಪುದ ಕಂಡೆ. ಇನ್ನೆಲ್ಲಿಯ ಭಕ್ತಿ ಹೇಳಾ ಗುಹೇಶ್ವರಾ?

ಟೀಕುಃ— ಕಲ್ಲೆಂದರೆ ಕಲ್ಲು ಹೃದಯವೆಂಬ ಪರಿ. ಆ ಕಲ್ಲು ಹೃದಯದಂತಪ್ಪ ಜಡ ಪಿಂಡ ಮಧ್ಯದೊಳಗೆ, ಅಹಂಕಾರವೆಂಬ ಕಿಚ್ಚು ಬಲಿದಿರ್ಪುದಾಗಿ, ಅದೀಗ ಕಲ್ಲ ಹೋರಿನೊಳಗೊಂದು ಕಿಚ್ಚು ಹುಟ್ಟಿತ್ತ ಕಂಡೆನೆಂಬ ಶಬ್ದಕ್ಕರ್ಥ. ಹುಲ್ಲೆಂದಡೆ ತೃಣ ಪ್ರತಿಪತ್ತಾಗಿ, ಸಂಸಾರ ವಿಷಯ ಸುಖವು ಅಂತಪ್ಪ ಸಂಸಾರ ವಿಷಯಸುಖವ ಸವಿವುತ್ತಿಹುದು. ಜೀವನೆಂಬ ಎರಳೆ, ಅದೆಂತೆಂದಡೆ, ಆ ಮೃಗದ ಗುಣಧರ್ಮಕರ್ಮಗಳಲ್ಲಿ ಜೀವಂಗುಂಟಾದ ಕಾರಣ, ಅಂತಪ್ಪ ಜೀವನೆಂಬ ನಾಮವನುಳ್ಳ ಮೃಗವು

ಕಾಲ ವ್ಯಾಘ್ರನೆಂಬ ಹುಲಿಯು ಕೂಡೆ ಸಖ್ಯತ್ವದಿಂದಿರ್ದವಾಗಿ, ಆದೀಗ ಹುಲ್ಲ ಮೇವರೆಳೆಯ ಹುಲಿಯು ಸರಸವ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಜೀವ ಭಾವ ಭ್ರಾಂತಿಯಿಂ ಸಮಸ್ತ ಜೀವರುಗಳು ಜೀವನ್ಮೃತರಾಗಿ ಚರಿಸುತ್ತಿರ್ದರೆಂಬುದೀಗ, ಎಲ್ಲರೂ ಸತ್ತು ಆಡುತ್ತಿರ್ಪವ ಕಂಡೆನೆಂಬ ಶಬ್ದಕ್ಕರ್ಥ. ಅದು ಕಾರಣ ಅಂತಪ್ಪ ಅಜ್ಞಾನ ಸಂಸಾರಿಗಳಿಗೆ ಭಕ್ತಿ ಇಲ್ಲವೆಂಬುದೀಗ ಇನ್ನೆಲ್ಲಿಯ ಭಕ್ತಿ ಹೇಳಾ ಎಂಬ ಶಬ್ದಕ್ಕರ್ಥ.

೩. ಕುರೂಪಿ ಸುರೂಪಿಯ ನೆನೆದಡೆ ಸುರೂಪಿಯಪ್ಪನೆ? ಆ ಸುರೂಪಿ ಕುರೂಪಿಯ ನೆನೆದಡೆ ಕುರೂಪಿಯಪ್ಪನೆ? ಧನವುಳ್ಳವರ ನೆನೆದರೆ ದಾರಿದ್ರ್ಯ ಹೋಹುದೆ? ಪುರಾತನರ ನೆನೆದು ಕೃತಾರ್ಥರಾದೆವೆಂಬರು. ತಮ್ಮಲ್ಲಿ ಭಕ್ತಿ ನಿಷ್ಠೆ ಇಲ್ಲದವರ ಕಂಡಡೆ ಮೆಚ್ಚನು ಗುಹೇಶ್ವರಾ.

ಟೀಕು:--ಲಿಂಗನಿಷ್ಠೆವಿಡಿದು ಪುರಾತನರ ಮೇಲುಪಂಕ್ತಿಯ ನೋಡಿ ಸತ್ಯ ಸದಾಚಾರದಲ್ಲಿ ನಡೆವಾತನು ಆ ಪುರಾತನರ ನೆನೆದಡೆ ಹೊಗಳಿದಡೆ ಕೃತಾರ್ಥನಹನಲ್ಲದೆ ಬರು ಮಾತಿನಲ್ಲಿ ಪುರಾತನರ ನೆನೆದಿಹೆನೆಂದಡೆ ಮುಕ್ತಿ ಇಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೪. ಕಾರಣವಿಲ್ಲ ಕಾರ್ಯವಿಲ್ಲ. ಏತಕ್ಕೆ ಭಕ್ತರಾದೆವೆಂಬಿರೋ? ಅಯ್ವರ ಬಾಯ ಎಂಜಲನುಂಬಿರಿ. ಐಯ್ವರ ಸ್ತ್ರೀಯರ ಮುಖವನರಿಯಿರಿ. ಮೂರು ಸಂಕೋಲೆಯ ಕಳೆಯಲರಿಯಿರಿ. ಕಾಯವಿಡಿದು ಲಿಂಗವ ಮುಟ್ಟಿಹೆನೆಂಬ ಭ್ರಮೆಯ ನೋಡಾ ಗುಹೇಶ್ವರಾ.

ಟೀಕು:--ತನ್ನ ನಿಜವನರಿಯದೆ ಭಕ್ತಿಯ ಮಾಡಿಹೆನೆಂಬುದು ಅಪ್ರಯೋಜನವಾದ ಕಾರಣ ಆದೀಗ ಕಾರಣವಿಲ್ಲ, ಕಾರ್ಯವಿಲ್ಲ ಏತಕ್ಕೆ ಭಕ್ತರಾದೆವೆಂಬಿರೋ ಎಂಬ ಶಬ್ದಕ್ಕರ್ಥ. ಪಂಚಭೂತ ಉಚ್ಛಿಷ್ಟವಪ್ಪ ಪಂಚೇಂದ್ರಿಯ ಸುಖವ ಸುಖಿಸುತ್ತಿರ್ಪುದೀಗ, ಅಯ್ವರ ಬಾಯ ಎಂಜಲನುಂಬಿರಿ ಎಂಬ ಶಬ್ದಕ್ಕರ್ಥ ಇಚ್ಛಾಶಕ್ತಿ, ಕ್ರಿಯಾಶಕ್ತಿ, ಮಂತ್ರಶಕ್ತಿ, ಆದಿಶಕ್ತಿ, ಪರಾಶಕ್ತಿ ಎಂಬ ಪಂಚಶಕ್ತಿಯರ ಸ್ವರೂಪವನರಿಯರೆಂಬುದೀಗ ಐಯ್ವರ ಸ್ತ್ರೀಯರ ಮುಖವನರಿಯಿರಿ ಎಂಬ ಶಬ್ದಕ್ಕರ್ಥ. ಹೊನ್ನು ಹೆಣ್ಣು ಮಣ್ಣೆಂಬ ಮೂರು ಬಂಧನವ ಹಿಂಗಿಸಲರಿಯರೆಂಬುದೀಗ ಮೂರು ಸಂಕೋಲೆಯ ಕಳೆಯಲರಿಯಿರಿ ಎಂಬ ಶಬ್ದಕ್ಕರ್ಥ. ಇದು ಕಾರಣ ಅಂಗಗುಣವಿಡಿದು ಲಿಂಗವ ಮುಟ್ಟಿಹೆನೆಂಬುದು ಅಜ್ಞಾನವಾದ ಕಾರಣ ಕಾಯವಿಡಿದು ಲಿಂಗವ ಮುಟ್ಟಿಹೆನೆಂಬ ಭ್ರಮೆಯ ನೋಡಾ ಎಂಬ ಶಬ್ದಕ್ಕರ್ಥ.

# ಶಿವಾನುಭವ

(ಮಾಸಿಕವು.)



ಸಂಪಾದಕ

**ರಾ|| ಸಾ|| ಫ. ಗು. ಹಳಕಟ್ಟಿ.**

ಬಿ. ಎ. ಎಲ್. ಎಲ್. ಬಿ.



**ವಿಜಾಪುರ.**

**೬ನೇ ಸಂಚಿಕೆ**

ಸಪ್ಟಂಬರ ೧೯೩೦

# ವಿಷಯಾನುಕ್ರಮಣಿಕೆ.


| ವಿಷಯ. | ಲೇಖಕರು. | ಪುಟ. |
|---|---|---|
| ೧. ಶಿವಾಗಮಗಳ ಕಾಲ ಮತ್ತು ಬಸವಾದಿ ಪ್ರಮಥರ ವಚನಗಳು. | ಮಿ॥ ಜೇರಿಗೆ ಬಸವಲಿಂಗಪ್ಪ ಹೈಕೋರ್ಟ ಟ್ರಾನಸ್ಲೇಟರ್ ಅರಳೇಪೇಟೆ ಬೆಂಗಳೂರಸಿಟಿ. | ೧೫೭-೧೬೦ |
| ೨. ವಚನಗ್ರಂಥಗಳ ಪ್ರಕಟನೆ ಮತ್ತು ಅವುಗಳ ಪ್ರಸಾರದ ಅವಶ್ಯಕತೆ. | ರಾ॥ ಸಾ॥ ಫ. ಗು. ಹಳಕಟ್ಟಿ ವಕೀಲ ಬಿ. ಎ. ಎಲ್. ಎಲ್. ಬಿ. ವಿಜಾಪುರ. | ೧೬೧-೧೬೫ |
| ೩. ಶಿವತತ್ವ ರತ್ನಾಕರದ ವಿಮರ್ಶನವು. | ವೇ॥ ಮೂ॥ ಚಂದ್ರಶೇಖರ ಶಾಸ್ತ್ರಿ ವ್ಯಾಕರಣತೀರ್ಥ ಪ್ರಿನ್ಸಿಪಾಲ ಶಂಕರ ಕಾಲೇಜುಯಾದಗಿರಿ. | ೧೬೬-೧೭೩ |
| ೪. ವೀರಶೈವ ವರ್ಣಭೇದ ವಿದಾರಿಕಾ. | ಮಿ॥ ಸಿ. ದು. ಪಾವಟೆ | ೧೭೪-೧೮೯ |
| ೫. ವಚನಭಾಂಡಾರ. | | ೧೯೦-೧೯೨ |
| ೬. ಬಸವಣ್ಣನವರ ವಚನಗಳು. | | ೧೯೩ |
| ೭. ಪ್ರಭುದೇವರ ವಚನಗಳು. | | ೭೩-೯೬ |


---

ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು. ಮತ್ತು ಅವರು ವಿಜಾಪುರದಲ್ಲಿ ಉಪಲೀಬುರುಜದ ಹತ್ತರ ತಮ್ಮ ೧೬೨೦ (ಅ) ಮನೆಯಲ್ಲಿ ಪ್ರಕಟಿಸಿದರು.

# ಶಿವಾನುಭವ.

ವರ್ಷ ೫] ಸಪ್ಟಂಬರ ೧೯೩೦ [ಸಂಚಿಕೆ ೬

## ಶಿವಾಗಮಗಳಕಾಲ ಮತ್ತು ಬಸವಾದಿ ಪ್ರಮಥರ ವಚನಗಳು.

(ಲೇಖಕ:— ಜೀರಿಗೆ ಬಸವಲಿಂಗಪ್ಪ, ಹೈಕೋರ್ಟ ಟ್ರಾನ್ಸ್ಲೇಟರ್, ಅರಳೇಪೇಟೆ, ಬೆಂಗಳೂರಸಿಟಿ.)



ಶಿವಾಗಮಗಳ ಕಾಲದ ವಿಚಾರದಲ್ಲಿ ಬಹಳ ಶೋಧನೆಗಳನ್ನು ಮಾಡಬೇಕಾಗಿರುತ್ತದೆ. ಪ್ರೊಫೆಸರ್ ಹೆಚ್. ಹೆಚ್ ವಿಲ್ಸನ್‌ರವರು ತಮ್ಮ Hindu Religion" ಎಂಬ ಪುಸ್ತಕದಲ್ಲಿ ಲಿಂಗಪೂಜೆಯ ವಿಚಾರದಲ್ಲಿ ಹೀಗೆ ಬರೆಯುತ್ತಾರೆ. "*The worship of Linga is perhaps the most ancient form of object of homage adopted in India, subsequently to the ritual of the Vedas which was chiefly addressed to elements spceially fire*"......

ಅಂದರೆ— ಲಿಂಗಪೂಜೆಯು ಬಹು ಪುರಾತನವಾದದ್ದು, ಆದರೆ ಅದು ವೇದಗಳಕಾಲಂದೀಚೆಗೆ ಆದದ್ದು ಎಂದು ಹೇಳುತ್ತಾರೆ. ಮತ್ತು ವೇದಗಳು ಪಂಚಭೂತ ಪೂಜೆಯನ್ನು. ಅದರೊಳಗೂ ಅಗ್ನಿಪೂಜೆಯನ್ನು ಬೋಧಿಸುತ್ತಿದ್ದವೆಂದು ಹೇಳುತ್ತಾರೆ. ಆದರೆ ಲಿಂಗಪೂಜೆಯ ಇತರ ಸ್ಥಾನಗಳ ವಿಷಯದಲ್ಲಿ ಹೀಗೆ ಬರೆಯುತ್ತಾರೆ.

"*But the particular modifications under which the several types received the local designations and became entitled to special reverence are not in every case of remote antiquity*"

ಅಂದರೆ:— ಲಿಂಗಪೂಜೆಯ ಬೇರೆ ಬೇರೆ ವಿಧಾನಗಳು ಬಹಳ ಪುರಾತನವಾದವುಗಳಲ್ಲವೆಂದು ಹೇಳುತ್ತಾರೆ.

ಪ್ರಸ್ತುತದಲ್ಲಿ ವೀರಶೈವರ ವಿಧಾನವಾದ ಲಿಂಗಧಾರಣವು ಯಾವಕಾಲದಲ್ಲಿ ಹುಟ್ಟಿತು ಈ ವಿಚಾರವನ್ನು ನಿರ್ಧರಿಸಲು ಬಹಳ ಕಷ್ಟವಾಗಿರುತ್ತದೆ.

ಲಿಂಗಧಾರಣವು ಕ್ರಿ. ಶ. ೮೦೦ನೆ ಶತಮಾನದಲ್ಲಿದ್ದ ಶ್ರೀ ಶಂಕರಾಚಾರ್ಯರಿಗಿಂತಲೂ ಮುಂಚೆ ಇತ್ತೆಂಬುದಕ್ಕೆ ಮೇಲ್ಕಂಡ *Professor H. H. Wilson*ರವರು—ಶಂಕರಾಚಾರ್ಯರ ಸನ್ನಿಧಿ ಶಿಷ್ಯನಿಂದ ಬರೆಯಲ್ಪಟ್ಟ ಶಂಕರದಿಗ್ವಿಜಯದಲ್ಲಿ ಆರುವಿಧ ಶೈವಗಳೊಳಗೆ ಮಸ್ತಕದ ಮೇಲೆ ಲಿಂಗವನ್ನು ಧರಿಸುತ್ತಿದ್ದ ಜಂಗವೆಂಬುದೊಂದು ಭೇದವಿತ್ತೆಂದೂ ಮತ್ತು ಅದನ್ನು ನಂಬಬಹುದೆಂದೂ ಹೇಳುತ್ತಾರೆ. ಆವರೆ ಈ ಲಿಂಗಧಾರಣವು ಯಾವ ಕಾಲದಲ್ಲಿ ಪ್ರಾರಂಭವಾಯಿತು, ಇದರ ತತ್ವಗಳು ಹೇಗಿದ್ದವು, ಎಂಬುದನ್ನು ನಿರ್ಧರಿಸಲು ಚಾರಿತ್ರ ಪ್ರಮಾಣಕ್ಕೆ ನಿಲಕತಕ್ಕ ಯಾವ ಸ್ವತಂತ್ರ ಗ್ರಂಥಗಳೂ ಇರುವದಿಲ್ಲ. ಅಂತೂ ಸ್ಥಾವರ ಲಿಂಗಪೂಜೆಯಿಂದ ಲಿಂಗಧಾರಣವು ಈಚಿನದೆಂದು ಹೇಳುವದಕ್ಕೆ ವೀರಶೈವ ವಿಚಾರದಲ್ಲಿ ಸಿದ್ಧಾಂತ ಶಿಖಾಮಣಿಯಲ್ಲಿ ಹೀಗೆ ಬರೆದಿರುತ್ತದೆ.

"ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇಶಿವೋದಿತೇ॥
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಂ॥"

ಅಂದರೆ—ಸಿದ್ಧಾಂತವೆಂಬ ಪರ್ಯಾಯ ನಾಮವುಳ್ಳ ಶಿವಾಗಮಗಳ ಉತ್ತರಭಾಗದಲ್ಲಿ ಸರ್ವೋತ್ಕೃಷ್ಟವಾದ ವೀರಶೈವಮತವು ಪರಶಿವನಿಂದ ನಿರ್ದೇಶಿಸಲ್ಪಟ್ಟಿತು.

ಆಗಮಗಳಲ್ಲಿ ಶೈವವು ಮೊದಲು ಹೇಳಲ್ಪಟ್ಟು ವೀರಶೈವವು ಉತ್ತರದಲ್ಲಿ ಹೇಳಲ್ಪಟ್ಟಿತೆನ್ನುವದರಿಂದ ಶೈವವು ಮೊದಲಾಗಿ ಆ ಮೇಲೆ ವೀರಶೈವವಾಯಿತೆಂದು ಹೇಳಬೇಕಾಗುತ್ತದೆ.

ನಾವು ಸುಮ್ಮನೆ ಹೆಚ್ಚುಗಾರಿಕೆಗಾಗಿ ಚಾರಿತ್ರ ದೃಷ್ಟಿಯಿಂದ ವೀರಶೈವವು ವೇದಗಳ ಕಾಲದಿಂದಲೂ ಬಂತೆಂದು ದೃಢಪಡಿಸುವದು ಬಹಳ ಕಷ್ಟವಾಗಿರುತ್ತದೆ. ಶ್ರೀ ಶಂಕರಾಚಾರ್ಯರಿಗಿಂತಲೂ ಮೊದಲು ಲಿಂಗಧಾರಣವಿತ್ತೆಂಬುದಕ್ಕೆ ಶಂಕರ ದಿಗ್ವಿಜಯದಲ್ಲಿ ಒಂದು ಕಡೆ ಲಿಂಗಧಾರಣವು

ಸೂಚಿಸಲ್ಪಟ್ಟಿರುವುದು ತಕ್ಕನುಟ್ಟಿನ ಪ್ರಮಾಣವನ್ನಾಗಿ ತೆಗೆದುಕೊಳ್ಳಬಹುದು. ಆದರೆ ಇದಕ್ಕೆ ಸುಸ್ಪಷ್ಟೀಕರವಾಗಿ ಸ್ವತಂತ್ರ ಗ್ರಂಥಗಳು ಸಿಗುವದಿಲ್ಲ. ಆಗಮಗಳೂ, ಪುರಾಣಗಳೂ, ಇವೆಯೆಂದರೆ- ಆ ಆಗಮಗಳ ಮತ್ತು ಪುರಾಣಗಳ ಕಾಲಗಳು ಗೊತ್ತಾಗಿ ಹೇಳುವದಕ್ಕಾಗುವದಿಲ್ಲ. ಆಗಮಗಳ ಮತ್ತು ಪುರಾಣಗಳ ಕಾಲದ ವಿಚಾರದಲ್ಲಿ *Professor H. H. Wilson* ಸಾಹೇಬರು ಹೀಗೆ ಬರೆದಿರುತ್ತಾರೆ.

"*But the date of the Puranas themselves is far from determined and whilst some parts of them may be of considerable antiquity other portions are undoubtedly subsequent to the tenth century of the Christian Era. Some of the Tantras are the earlier compositions- On the other hand, there appears no indication of Tantrika notion in the Mahabharata and the name Tantra in the sense of a religious text book, does not accur in the vocabulary of Amarasimha. It may therefore be inferred that the system originated at some period in the early centuries of Christianity.*"

ಅರ್ಥಃ - ಕೆಲವು ಪುರಾಣಗಳು ಸ್ವಲ್ಪ ಮುಂಚಿನವುಗಳಾದಾಗ್ಯು ಇತರ ಭಾಗಗಳು ಕ್ರಿಸ್ತಶಕ ಹತ್ತನೇ ಶತಮಾನದಲ್ಲಿ ಪ್ರಾರಂಭವಾದವುಗಳಾಗಿರುತ್ತವೆ. ಕೆಲವು ತಂತ್ರಗಳು (ಆಗಮಗಳು) ಕೊಂಚ ಪೂರ್ವದವುಗಳಾದಾಗ್ಯು ಆಗಮ ವಿಚಾರಗಳು ಮಹಾಭಾರತದಲ್ಲಿರುವದಿಲ್ಲ. ತಂತ್ರ ಶಬ್ದವು ಅಮರಸಿಂಹನ ಶಬ್ದಕೋಶದಲ್ಲಿರುವದಿಲ್ಲ. ಆದದರಿಂದ ಆಗಮಗಳು ಕ್ರಿಸ್ತಶಕದ ಪ್ರಥಮ ಶತಮಾನಗಳಲ್ಲಿ ಉಂಟಾಗಿರಬೇಕು ಎಂದು ಬರೆದಿರುತ್ತಾರೆ.

ಇದನ್ನೆಲ್ಲಾ ನೋಡಿದರೆ ವೀರಶೈವ ಪರವಾದ ಆಗಮಗಳು ಬಸವೇಶ್ವರನಿಗಿಂತಲೂ ಮುಂಚೆ ಸುಮಾರು ನೂರು ವರ್ಷಗಳಲ್ಲಿ ಆಗಿರಬೇಕೆಂದು ಯೋಚಿಸುತ್ತೇನೆ. ಅದಕ್ಕಿಂತಲೂ ಮೊದಲು ಶಂಕರಾಚಾರ್ಯರ ಕಾಲದಿಂದ ಶಂಕರದಿಗ್ವಿಜಯಪ್ರಮಾಣದ ದೆಶೆಯಿಂದ ಲಿಂಗಧಾರಣವು ಸಾಧಾರಣ ರೀತಿಯಲ್ಲಿ ಶೈವದಲ್ಲಡಗಿಯೊ ಅಥವಾ ಭಿನ್ನವಾಗಿಯೊ ಇರ

ಬೇಕೆಂದು ಕಾಣುತ್ತದೆ. ಏತಕ್ಕೆಂದರೆ:— ಉದಾರತತ್ವನಿಯುಕ್ತ ಲಿಂಗಧಾರಣರೂಪ ಷಟ್ಸ್ಥಲ ಪರಿಶ್ರಮವು ಬಸವೇಶ್ವರನಿಗೆ ಮುಂಚೆ ಸುಮಾರು ನೂರು ಅಥವಾ ಐವತ್ತು ವರ್ಷಗಳ ಹಿಂದೆ ಪ್ರಾರಂಭವಾದಂತೆ ಕಾಣುತ್ತದೆ. ಮ. ರಾ. ಆರ್. ನರಸಿಂಹಾಚಾರ್ಯರು ಕವಿಚರಿತ್ರೆಯೊಳಗೆ ಬಸವೇಶನಿಗಿಂತಲೂ ಮೊದಲು ಸುಮಾರು ಐವತ್ತು ವರ್ಷಗಳ ಹಿಂದೆ ಶೈವದಲ್ಲಿ ಒಂದು ಚಳವಳಿ ನಡಿಯಿತ್ತೆಂತಲೂ, ಅದರಲ್ಲಿ ಬ್ರಹ್ಮಶಿವನೆಂಬ ಶೈವನು ಜೈನನಾದನೆಂತಲೂ, ಬ್ರಹ್ಮಶಿವನು ತನ್ನ ಗ್ರಂಥದಲ್ಲಿ ಬೇಡರದಾಸಿಮಯ್ಯನ ವಿಚಾರವಾಗಿ ಬರದಿರುತ್ತಾನೆಂತಲೂ ಬರದಿರುತ್ತಾರೆ. ಇದಕ್ಕನುಸಾರವಾಗಿ ಶಂಕರ ದಾಸಿಮಯ್ಯ, ಸಕಳೇಶಮಾದರಸ ಮೊದಲಾದ ಕೆಲವರ ವಚನಗಳು ಸಿಕ್ಕುತ್ತವೆ. ಈ ವಿಚಾರವನ್ನು ಪರಿಶೀಲಿಸಿದರೆ ಬಸವೇಶ್ವರನಿಗಿಂತಲೂ ಮೊದಲು ಸುಮಾರು ೧೦೦ ಅಥವಾ ೫೦ ವರ್ಷಗಳ ಹಿಂದೆ ಲಿಂಗಧಾರಣ ಪೂರ್ವಕ ಜಾತಿವರ್ಣಾಶ್ರಮಗಳನ್ನು ಹೊಡೆದು ಹಾಕಿ ಬ್ರಾಹ್ಮಣರ ಕಠಿಣ ಕರ್ಮಗಳನ್ನು ನಿರಾಕರಿಸಿ, ಯಜ್ಞಾದಿಗಳನ್ನು ದೂರೀಕರಿಸಿ, ಒಂದು ಸುಧಾರಣೆಯು ನಡೆಯುವದಕ್ಕೆ ಬಹಳ ಜೋರಿನಿಂದ ಪ್ರಾರಂಭವಾಯಿತೆಂದು ಈ ಸುಧಾರಣಾ ತತ್ವಗಳನ್ನು ಆಚರಿಸುವದಕ್ಕೆ ಭಕ್ತಿ, ಯೋಗ, ಕ್ರಿಯಾ, ಜ್ಞಾನಗಳಿಂದ ಕೂಡಿದಂತ ಲಿಂಗಧಾರಣರೂಪ ಷಟ್ಸ್ಥಲವು ನಿರ್ಮಾಣವಾಯಿತೆಂದು ಬಹುತರವಾಗಿ ಕಾಣುತ್ತದೆ.

ಈ ಸುಧಾರಣಾತತ್ವವು ಶಂಕರದಾಸಿಮಯ್ಯನವರೇ ಮೊದಲಾದ ಕೆಲ ಅಗೋಚರರಿಂದ ಕಲ್ಯಾಣ ಪ್ರದೇಶದಲ್ಲಿ ಪ್ರಾರಂಭಿಸಲ್ಪಟ್ಟು ಶ್ರೀ ಬಸವೇಶ್ವರನಿಂದ ಪ್ರಬಲವಾಗಿ ಪರಿಪೂರ್ತಿಗೊಳಿಸಲ್ಪಟ್ಟಿತು. ಯಾವ ಜಾತಿಯವನಾಗಲಿ ಲಿಂಗಧಾರಣವನ್ನು ಹೊಂದಿದರೆ ಶ್ರೇಷ್ಠನಾಗುವನೆಂಬ, ಲಿಂಗಧಾರಣವನ್ನು ಹೊಂದಿದವರೆಲ್ಲರೂ ಸಮಾನರೆಂಬ, ಲಿಂಗಧಾರಿಗಳಾದವರೆಲ್ಲರೂ ಯಾವ ಉದ್ಯೋಗವನ್ನು ಮಾಡಿದರೂ ಸಮಾನತ್ವವುಳ್ಳವರೆಂಬ, ಲಿಂಗಧಾರಿಗಳಾದ ಸರ್ವರೂ ಓರ್ವರೋರ್ವರಲ್ಲಿ ಭೋಜನಗಳನ್ನು ಮಾಡಬೇಕೆಂಬ, ಓರ್ವರೋರ್ವರಲ್ಲಿ ವಿವಾಹ ಸಂಬಂಧ ಮಾಡಬೇಕೆಂಬ ಬ್ರಾಹ್ಮಣರ ಸೂತಕಗಳನ್ನು ಬಿಟ್ಟುಬಿಡಬೇಕೆಂಬ, ಇವೇ ಮೊದಲಾದ ಉದಾರ ತತ್ವಗಳು ಭಕ್ತಿ-ಜ್ಞಾನ-ಕ್ರಿಯೆಗಳೊಡನೆ ಸಮ್ಮಿಳಿತವಾಗಿ ಷಟ್ಸ್ಥಲರೂಪವಾಗಿ ಪ್ರಚರಿಸಲ್ಪಟ್ಟವು. ಈ ತತ್ವಗಳೆಲ್ಲವೂ ಬಸವೇಶ್ವರನ ವಚನದಲ್ಲಿ ವಿಶೇಷವಾಗಿ [illegible]ಟಿಸಲ್ಪಟ್ಟವು. ಬಸವಸ್ವಾಮಿಯು ಈ ತತ್ವ

ಗಳನ್ನು ತಾನೊಬ್ಬನು ಪ್ರಸರಣ ಮಾಡಿದ್ದಲ್ಲದೆ ತನ್ನನ್ನು ಪರಿವರ್ತಿಸಿದ್ದ ಅಸಂಖ್ಯಾತ ಸ್ತ್ರೀಪುರುಷ ಶರಣರಿಂದ ಪ್ರಸರಣ ಮಾಡಿಸಿದನು. ಈ ಕಾರಣದಿಂದ ಬಸವೇಶನ ಕಾಲದಿಂದಲೇ ಷಟ್ಸ್ಥಲವು ಗಟ್ಟಿಕೊಂಡು ಅತ್ಯಂತ ಪ್ರಸಾರವಾಗುತ್ತ ಬಂತು.

ಈ ವಿಧವಾದ ಧರ್ಮಸುಧಾರಣದ ಮತ್ತು ಸಮಾಜ ಸುಧಾರಣದ ತತ್ವಗಳು ಬಸವೇಶನಗಿಂತಲೂ ಮುಂಚೆ ೫೦ ವರ್ಷಗಳಿಂದ ಅಲ್ಪವಾಗಿ ಪ್ರಾರಂಭಿಸಲ್ಪಟ್ಟು ಬಸವೇಶನ ಕಾಲದಿಂದ ಪ್ರಬಲಮಾಡಲ್ಪಟ್ಟು ಶಿವಾಗಮಗಳಲ್ಲಿ ಲೇಖಿಸಲ್ಪಡವದಕ್ಕುಪಕ್ರಮವಾದಂತೆ ಸ್ಪಷ್ಟವಾಗಿ ಕಾಣುತ್ತದೆ.

ಮೇಲೆ *Professor H. H. Wilson* ಸಾಹೇಬರು ಹೇಳಿರುವ ಕಾರಣದಿಂದ--ಶಿವಾಗಮಗಳು ಎಲ್ಲವುಗಳೂ ಪುರಾತನವಾದವುಗಳಲ್ಲ. ಬಸವೇಶ್ವರನಿಗಿಂತಲೂ ಮುಂಚೆ ಚಳವಳಿ ಪ್ರಾರಂಭವಾದಾಗ ಹುಟ್ಟಿದ ಆಗಮಗಳು ಕೆಲವು, ಬಸವೇಶನ ಜತೆಗೆ ಹುಟ್ಟಿದ ಆಗಮಗಳು ಕೆಲವು. ಬಸವೇಶ, ಪ್ರಭುದೇವರು ಮೊದಲಾದವರು ಶಿವೈಕ್ಯರಾದನಂತರ ಕೆಲವಾಗಮಗಳು ಹುಟ್ಟಿರಬಹುದೆಂಬುದಕ್ಕೆ ಅವಕಾಶವಿದೆ.

ಸ್ವಯಂಭುವಾಗಮದಲ್ಲಿಃ-- "ಅಥತಚ್ಚರಲಿಂಗಸ್ಯ ಮಾಹಾತ್ಮ್ಯಂ ಶೃಣುಪಾರ್ವತಿ ॥ ಆದೌತಚ್ಚರಲಿಂಗಂತು ನಿರಂಜನ ಮಿತಿಶೃತಂ ॥ ತ್ರೇತಾಯಾಂತು ತದ್ದೈವತ ನಿರ್ಮಾಯಮಿತಿಕೀರ್ತಿತಂ॥ ದ್ವಾಪರೆ ನಿಷ್ಕಳಶ್ಚೇತಿ॥ ವಿಶೃತಂಚತದೇವ ಹಿ ॥ ಕಲೌಪ್ರಭುರಿತಿಖ್ಯಾತಃ ॥ ತಸ್ಯನಾಮಾನಿವೈಕ್ರಮಾತ್ ॥ ಕಲೌತತ್ಪ್ರಭುದೇವಸ್ಯ॥ ಪೀಠಂ ಕಲ್ಯಾಣ ಪಟ್ಟಣೆ॥ ಶೂನ್ಯಸಿಂಹಾಸನಂಚೇತಿ ॥ ತದೇವಪ್ರಥಿತಂಭುವಿ ॥" ---------

ಇಲ್ಲಿ--ಪ್ರಭುದೇವರು ಕಲ್ಯಾಣ ಪಟ್ಟಣದಲ್ಲಿ ಶೂನ್ಯಸಿಂಹಾಸನವನ್ನೇರ್ಪಡಿಸಿದರೆಂದು ಹೇಳುವದರಿಂದ--ಬಸವೇಶನ ನಂತರ ಆಗಿರಬೇಕೆಂದು ಸ್ಪಷ್ಟವಾಗುತ್ತದೆ.

ಇದೇ ರೀತಿಯಲ್ಲಿ ಸ್ವಯಂಭುವಾಗಮದಲ್ಲಿ.

"ಅತಃ ಪರಂಪ್ರವಕ್ಷ್ಯಾಮಿ॥ ಪಂಚಾಚಾರ್ಯ ಸಮುದ್ಭವಂ॥ ತೇಷಾಂ ನಾಮಾನಿದೇವಿತ್ವಂ ಶೃಣು ನಿಶ್ಚಲ ಚಿತ್ತಸಃ॥ ಘಂಟಾಕರ್ಣ ಗಣೇಶಾದ್ಯೋ ಗಜಕರ್ಣೋದ್ವಿತೀಯಕಃ॥ ತ್ರಿತೀಯೋರೇಣುಕಾಖ್ಯಾತೋ॥ ಚತುರ್ಥೋ

ದಾರುಕಸ್ತಥಾ॥ ಪಂಚಮೋವಿಶ್ವಕರ್ಣೇತಿ॥ ಪಂಚಾರಾಧ್ಯ ಇತಿಸ್ಮೃತಾಃ॥ ತಯೋರ್ವಯುಗ ಭೇದೇನ.

\+ × + + × × + ×

ಏಕೋರಾಮಃ ಪಂಡಿತಾರ್ಯಸ್ತಥಾ॥ ರೇವಣಸಿದ್ಧರಾಟ್॥ ಕಲೌ ಮರುಳ ಸಿದ್ಧೇಶೊ॥ ವಿಶ್ವಾರಾಧ್ಯ ಇತಿಕ್ರಮಾತ್॥ ಕೃತಾದ್ಯುಗಚತುಷ್ವೇತೆ ಪಂಚಾರಾಧ್ಯಾಃ ಪ್ರಕೀರ್ತಿತಾಃ॥"

ಇಲ್ಲಿ:—ಬಸವೇಶ್ವರನ ಸಮಕಾಲದವರಾಗಿ ಬಹುದಾದ ರೇವಣಸಿದ್ಧರು, ಈಚಿನವರಾದ ಪಂಡಿತಾರಾಧ್ಯ, ಮರುಳಸಿದ್ಧ ಮೊದಲಾದವರು ಹೇಳಲ್ಪಡುವದರಿಂದ ಈ ಆಗಮ ಭಾಗವೂ ಬಸವೇಶನ ನಂತರ ಆದದ್ದಾಗಿ ಸ್ಪಷ್ಟವಾಗುತ್ತದೆ.

ಪಂಚಾಚಾರ್ಯರನ್ನು ಹೇಳುವ ವೀರಲೈಂಗ್ಯೋಪನಿಷತ್ತೂ ಕೂಡ ಬಸವೇಶನಿಂದೀಚಿನದಾಗಿರುತ್ತದೆ.

ವೀರಲೈಂಗ್ಯೋಪನಿಷತ್ತುಃ—

ಸದ್ಯೋಜಾತ ಮುಖಮಾಸೀತ್॥ ಘಂಟಾಕರ್ಣ ಗಣೇಶಾರಾಧ್ಯೋದ್ಭವತಿ॥ ವಾಮದೇವ ಮುಖಮಾಸೀತ್॥ ಗಜಕರ್ಣ ಗಣೇಶಾರಾಧ್ಯೋದ್ಭವತಿ॥ ಅಘೋರ ಮುಖಮಾಸೀತ್॥ ರೇಣುಕಾಚಾರ್ಯಾರಾಧ್ಯೋದ್ಭವತಿ॥ ತತ್ಪುರುಷ ಮುಖಮಾಸೀತ್॥ ದಾರುಕಾಚಾರ್ಯಾರಾಧ್ಯೋದ್ಭವತಿ। ಈಶಾನಮುಖಮಾಸೀತ್॥ ವಿಶ್ವಕರ್ಣ ಗಣೇಶಾರಾಧ್ಯೋದ್ಭವತಿ॥ ÷"

ಬಸವೇಶನ ಕಾಲಕ್ಕೀತಲೂ ಮೊದಲು ಕೆಲವು ವೀರಶೈವಾಗಮಗಳು ಇದ್ದು ಬಸವೇಶ್ವರನ ಕಾಲಕ್ಕೆ ಷಟ್ಸ್ಥಲೋದಾರತತ್ವ ಸಂಬಂಧವಾಗಿ ಅನೇಕವಾಗಿ ಹೊರಟು ಅವನಿಂದೀಚಿಗೆ ಕಲ ಕೆಲ ಭಾಗಗಳು ಸೇರಿಸಲ್ಪಟ್ಟಂತೆ ಕಾಣುತ್ತದೆ.

ಭಾರತವಲ್ಲಿ ಭೀಷ್ಮ ಪರ್ವವಲ್ಲಿ ಲಿಂಗಿಬ್ರಾಹ್ಮಣ, ಅಲಿಂಗಿ ಬ್ರಾಹ್ಮಣ ವಿಚಾರ ಬರದಿರುವದು ಈಚಿಗೆ (*Interpolation*) ಆಗಿರಬಹುದೆಂದು ಅನುಮಾನಪಡುವದಕ್ಕೆ ಕಾರಣವಿದೆ. ದಕ್ಷಿಣದೇಶದ ಭಾರತದಲ್ಲಿ ಈ ವಿಚಾರವಿದ್ದಾಗ್ಯು ಹಿಂದೆ ಕೈ. ಯಜಮಾನ ವೀರಸಂಗಪ್ಪನವರು ಕಾಶಿಗೆ ಹೋಗಿದ್ದಾಗ್ಯು ಅಲ್ಲಿ ಸಂಸ್ಕೃತ ಭಾರತ ಪ್ರತಿಗಳಲ್ಲಿ ಮೇಲ್ಕಂಡ ವಿಷಯವಿಲ್ಲವೆಂದು ಹೇಳುವರು.

ಮೇಲೆ ಹೇಳಿದ ಕಾರಣಗಳಿಂದ. ಆಗಮಗಳಿಗೂ ಪುರಾಣಗಳಿಗೂ ಕಾಲನಿರ್ಣಯ ಮಾಡುವದಕ್ಕಾಗುವದಿಲ್ಲ. ಅವುಗಳನ್ನು ಬರೆದ ಕರ್ತೃಗಳು ವಾಸಿಸಿದ ದೇಶಗಳು ಗೊತ್ತಾಗುವದಿಲ್ಲ. ಎಲ್ಲವೂ ಶಿವನಿಂದಲೂ, ವ್ಯಾಸರಿಂದಲೂ ಹೇಳಲ್ಪಟ್ಟಂತೆ ಬರೆದಿರುತ್ತವೆ.

ವೀರಶೈವಕ್ಕೆ ಪ್ರಥಮತಃ ಕ್ರಮವಾದ ಚಾರಿತ್ರಗ್ರಂಥಗಳು ಬಸವೇಶ್ವರನ ಮತ್ತು ಅವನ ಸಹೋದ್ಯೋಗಿ ಶರಣರ ವಚನಗ್ರಂಥಗಳಾಗಿರುತ್ತವೆ. ಇವುಗಳಿಗೆ ಕಾಲ, ದೇಶ, ಕರ್ತೃ ಮೊದಲಾದುವನ್ನು ನಿರ್ಧರಿಸಬಹುದು. ಈ ವಿಧದಲ್ಲಿ ವೀರಶೈವಾಗಮಗಳಿಗೆ ಪುಷ್ಟೀಕರವಾಗಿ ಬಸವಾದಿ ಪ್ರಮಥ ವಚನ ಗ್ರಂಥಗಳು ವೀರಶೈವತತ್ವ ಪ್ರಮಾಣ ಗ್ರಂಥಗಳೂ ಮತ್ತು ಚಾರಿತ್ರಪ್ರಮಾಣ ಗ್ರಂಥಗಳೂ ಆಗಿರುತ್ತವೆ.

ವೀರಶೈವ ತತ್ವಗಳು ಆಗಮಗಳಲ್ಲಿ ವಿಧಿರೂಪವಾಗಿ ಹೇಳಲ್ಪಟ್ಟು ಮನಸ್ಸಿನಲ್ಲಿ ಬದ್ಧವಾಗಿ ನಿಲ್ಲತಕ್ಕವುಗಳಾಗಿರುತ್ತವೆ.

ಬಸವಾದಿ ಪ್ರಮಥ ವಚನಗಳು ಬರೀ ವಿಧಿರೂಪವಾಗಿ ಹೇಳದೆ ಬೋಧ್ಯರ ಹೃದಯಗಳು ಆಕರ್ಷಿಸಲ್ಪಟ್ಟು ಉತ್ಸಾಹ ಪೂರಿತವೂ ಭಾವಪೂರಿತವೂ ಆಗುವಂತೆ ಹೇಳಲ್ಪಟ್ಟಿರುತ್ತವೆ. ಬಸವಾಧಿ ಪ್ರಮಥರ ವಚನಗಳು ಷಟ್‌ಸ್ಥಲದ ಉದಾರ ತತ್ವಗಳನ್ನು ಜನರ ಸರ್ವಾಂಗದಲ್ಲೂ ವ್ಯಾಪಿಸಿ ಹೊಸ ಜೀವ ಪುಷ್ಟಿಯನ್ನು ಕೊಡುವಂತೆ ಬೋಧಿಸುತ್ತವೆ. ನಿಷ್ಕಳಂಕ ಚಿತ್ತದಿಂದ ದೀನೋದ್ಧಾರಕ್ಕಾಗಿಯೂ ಭಕ್ತಿ ಪ್ರಸರಣಕ್ಕಾಗಿಯೂ ಪರವಶತೆಯಿಂದ ಹೇಳಿದವುಗಳಾಗಿರುತ್ತವೆ.

ಬ್ರಾಹ್ಮಣರಿಗೆ ವೇದಗಳು ಹೇಗೊ, ಕ್ರಿಸ್ತರಿಗೆ ಬೈಬಲ್ಲು ಹೇಗೊ, ಮಹಮ್ಮದೀಯರಿಗೆ ಖುರಾನ್ ಹೇಗೊ. ಬೌದ್ಧರಿಗೆ ತ್ರಿಪಟಿಕೆಯು ಹೇಗೊ, ಸಿಕ್ಕರಿಗೆ ಗ್ರಂಥವು ಹೇಗೊ, ಹಾಗೆ ಲಿಂಗವಂತರಿಗೆ ಬಸವಾದಿ ಪ್ರಮಥರ ವಚನಗಳು ಮುಖ್ಯ ಗ್ರಂಥಗಳಾಗಿರುತ್ತವೆ.

ಶಿವಾಗಮಗಳು ಲಿಂಗವಂತರಿಗೆ ವೀರಶೈವ ತತ್ವಗಳನ್ನು ಶಾಸನ ರೂಪವಾಗಿ ಹೇಳಿ ಮನಸ್ಸಿಗೆ ಅಂಟುವಂತೆ ಮಾಡುತ್ತವೆ.

ಬಸವಾದಿ ಪ್ರಮಥರ ವಚನಗಳು ಲಿಂಗವಂತರಿಗೆ ವೀರಶೈವ ತತ್ವಗಳನ್ನು ಮನಸ್ಸು ಕರಗುವಂತೆ ಹೇಳಿ ಅವರ ಜೀವದಲ್ಲೆಲ್ಲಾ ತುಂಬುವಂತೆ ಮಾಡುತ್ತವೆ.

ಇದರಿಂದ— ಬಸವಾದಿ ಪ್ರಮಥರ ವಚನವನ್ನು ವೀರಶೈವಕ್ಕೆ ಜೀವ ಗ್ರಂಥಗಳೆಂದು ತಿಳಿಯಬಹುದು.

ಈ ಕಾರಣದಿಂದ ಎಲ್ಲ ಶಿವಾಗಮಗಳನ್ನೂ ಬಸವಾದಿ ಪ್ರಮಥರ ಎರಡೆಂಬತ್ತು ಕೋಟಿ ವಚನ ರಾಶಿಯನ್ನೂ ಮುದ್ರಣಮಾಡಿಸಿ ಧನ್ಯ ಗೊಳಿಸುವದು ಎಲ್ಲ ವೀರಶೈವರ ಕರ್ತವ್ಯವಾಗಿರುತ್ತದೆ.

---

## ವಚನಗ್ರಂಥಗಳ ಪ್ರಕಟನೆ ಮತ್ತು ಅವುಗಳ ಪ್ರಸಾರದ ಅವಶ್ಯಕತೆ

(ಲೇಖಕ:—ರಾ॥ ಸಾ॥ ಫ ಗು. ಹಳಕಟ್ಟಿ ವಕೀಲ ಬಿ. ಎ. ಎಲ್. ಎಲ್. ಬಿ. ವಿಜಾಪುರ.)

---

ಮೇಲಿನ ಲೇಖದಲ್ಲಿ ಶ್ರೀಯುತ ಜೀರಗೆ ಬಸಲಿಂಗಪ್ಪನವರು ವೀರಶೈವ ಮತತತ್ವಗಳನ್ನು ತಿಳಿಯಲಿಕ್ಕೆ ವಚನಗಳು ಎಷ್ಟು ಮಹತ್ವದ ಗ್ರಂಥಗಳೆಂಬುದನ್ನು ವಿಸ್ತರಿಸಿದ್ದಾರೆ. ಈ ಬಗ್ಗೆ ಇರುವ ಅವರ ಅಭಿಪ್ರಾಯಗಳನ್ನು ನಾವು ಸಂಪೂರ್ಣ ಸಮರ್ಥಿಸುತ್ತೇವೆ. ಅವರು ಅನ್ನುವಂತೆ ವಚನ ಗ್ರಂಥಗಳು ವೀರಶೈವಕ್ಕೆ ಜೀವ ಗ್ರಂಥಗಳಾಗಿವೆ. ಇವುಗಳು ಕೇವಲ ವಾಙ್ಮಯ ದೃಷ್ಟಿಯಿಂದಷ್ಟೇ ಅಲ್ಲ, ಸಮಾಜದಲ್ಲಿ ಒಂದು ಕಾಲಕ್ಕೆ ಒಂದು ಮಹತ್ತರ ಕ್ರಾಂತಿಯನ್ನುಂಟುಮಾಡಿದ್ದರಿಂದ ಅವುಗಳ ಯೋಗ್ಯತೆಯು ಬಹಳ ಹೆಚ್ಚಿಗಿರುತ್ತದೆ. ಈ ರಚನೆಗಳು ಬಸವೇಶ್ವರನ ಕಾಲದಲ್ಲಿ ಅಂದರೆ ೧೨ನೇ ಶತಮಾನದಲ್ಲಿ ವಿಶೇಷವಾಗಿ ಅಭಿವೃದ್ಧಿಗೆ ಬಂದು ವೀರಶೈವ ಮತ ತತ್ವಗಳನ್ನು ದೇಶದಲ್ಲೆಲ್ಲ ಪ್ರಸಾರಪಡಿಸಲಿಕ್ಕೆ ಕಾರಣವಾದವು ಈ ವಚನಗಳ ಪದ್ಧತಿಯಾದರೂ ಒಂದು ವಿಶಿಷ್ಟಪ್ರಕಾರದ್ದು ಇರುತ್ತದೆ. ಈ ತರಹವು ಹಿಂದುಸ್ಥಾನದ ಬೇರೆ ಯಾವ ಭಾಷೆಯಲ್ಲಿಯೂ ಕಂಡು ಬರುವದಿಲ್ಲ. ಅವುಗಳಲ್ಲಿ ಹೊರಪಡುವ ವಿಚಾರಗಳು ಮನಸ್ಸಿನಲ್ಲಿ ಬಹು ಧಾಳವಾಗಿ ಮೂಡುವ ಹಾಗೆ ಆವೇಶಯುಕ್ತ ಭಾಷೆಯಲ್ಲಿ ಬರೆಯಲ್ಪಟ್ಟಿರುತ್ತವೆ. ಅವು

ಗಳನ್ನು ಓದಿದ ಕೂಡಲೆ ಎಂಥವನ ಮನಸ್ಸಿನಲ್ಲಿಯಾದರೂ ಧಾರ್ಮಿಕ ಸ್ಫೂರ್ತಿಯು ಉಕ್ಕುವಂತೆ ಇವೆ. ಇಂಥ ವಾಙ್ಮಯವನ್ನು ಕಾಯುವದು ವೀರಶೈವ ಸಮಾಜದ ಆದ್ಯ ಕರ್ತವ್ಯಕರ್ಮವಾಗಿದೆ.

ಆದರೆ ಈ ವರೆಗೆ ವಚನ ವಾಙ್ಮಯವು ಅತ್ಯಲ್ಪ ಪ್ರಮಾಣದಿಂದ ಪ್ರಕಟವಾಗಿರುತ್ತದೆ. ನಾನು ವಚನ ಶಾಸ್ತ್ರಸಾರವನ್ನು ರಚಿಸಿದಾಗ ನನಗೆ ೨೧೨ ವಚನಕಾರರ ಹೆಸರುಗಳು ಮಾತ್ರ ದೊರೆದಿದ್ದವು. ಆದರೆ ಈ ವಚನಕಾರರು ನಿಃಸಂದೇಹವಾಗಿ ಇನ್ನೂ ಅಸಂಖ್ಯರಿದ್ದು ಅವರ ಹೆಸರುಗಳನ್ನೂ ಅವರ ಗ್ರಂಥಗಳನ್ನೂ ಶೋಧಿಸುವದು ಅವಶ್ಯವಿದೆ. ಈಚೀಚೆಗೆ ನನಗೆ ದೊರೆದ ವಚನಕಾರರ ಸಂಖ್ಯೆಯು ೩೦೦ ರ ವರೆಗೆ ಹೋಗಿರುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಇನ್ನೂ ಹೆಚ್ಚಿಗೆ ಶೋಧಿಸಿದ್ದಾದರೆ ಇವರ ಸಂಖ್ಯೆಯು ಇನ್ನೂ ಎಷ್ಟೋ ಪಾಲು ಹೆಚ್ಚಾಗಬಹುದೆಂದು ತೋರುತ್ತದೆ.

ಈ ಮೇರೆಗೆ ವಚನವಾಙ್ಮಯವು ಬಹು ವಿಸ್ತೃತವಾದದ್ದೂ ಮಹತ್ತರವಾದದ್ದೂ ಇದ್ದರೂ ಇದಕ್ಕೋಸ್ಕರ ವೀರಶೈವ ಸಮಾಜದಲ್ಲಿ ಇನ್ನೂ ಸಂಪೂರ್ಣ ಉಪೇಕ್ಷಾಭಾವವಿರುವದು ಬಹು ಖೇದಕರವಾದದ್ದು. ಇವುಗಳನ್ನು ಓದುವ ಜನರ ಸಂಖ್ಯೆಯು ಅತ್ಯಲ್ಪವಾಗಿರುತ್ತದೆ. ಅವುಗಳನ್ನು ಅಭ್ಯಾಸಿಸಿ ಅವುಗಳ ಮರ್ಮವನ್ನು ತಿಳಿದವರ ಸಂಖ್ಯೆಯಂತೂ ಅತ್ಯಂತ ವಿರಳವಾಗಿರುತ್ತದೆ. ವೀರಶೈವ ಸಮಾಜದಲ್ಲಿ ಅಲ್ಲಲ್ಲಿ ವಿದ್ಯಾಶಾಲೆಗಳೂ ಧಾರ್ಮಿಕ ಪಾಠಶಾಲೆಗಳೂ ಇದ್ದರೂ ಅವುಗಳಲ್ಲಿ ವಚನ ವಾಙ್ಮಯದ ಅಭ್ಯಾಸಕ್ಕೆ ಸ್ಥಾನವಿಲ್ಲ!! ಅವುಗಳ ಚಾಲಕರಿಗೂ, ಶಿಕ್ಷಕವರ್ಗಕ್ಕೂ ಈ ವಚನಗಳೆಂದರೆ ವೀರಶೈವ ಧರ್ಮವನ್ನು ಬೋಧಿಸುವಂಥ ಮಹತ್ವದ ಗ್ರಂಥಗಳೆಂಬ ಅರಿಕೆಯು ಸಹ ಇದ್ದಂತೆ ತೋರುವದಿಲ್ಲ. ಈ ಬಗೆಯ ವೃತ್ತಿಯು ವೀರಶೈವ ಸಮಾಜದಲ್ಲಿ ಇನ್ನೂ ವ್ಯಾಪಿಸಿದ್ದು ಇದನ್ನು ದೂರಮಾಡಲು ಎಲ್ಲ ತಿಳಿದ ವೀರಶೈವರು ಪ್ರಯತ್ನಿಸತಕ್ಕದ್ದು ಅವಶ್ಯವಾಗಿರುತ್ತದೆ. ಹೀಗೆ ಪ್ರಯತ್ನಗಳನ್ನು ಹ್ಯಾಗೆ ಮಾಡಬೇಕೆಂಬುದರ ಬಗ್ಗೆ ನನಗೆ ತೋಚಿದ ಕೆಲವು ಸೂಚನೆಗಳನ್ನು ನಾನು ವಾಚಕರೆದುರಿಗೆ ಇಡುತ್ತೇನೆ.

೧. **ವಚನಗ್ರಂಥಗಳನ್ನು ಅಚ್ಚು ಹಾಕಿಸುವದು:**— ಇದು ನಾವು ಮಾಡತಕ್ಕ ಪ್ರಥಮ ಕಾರ್ಯವಾಗಿದೆ. ವಚನ ಗ್ರಂಥಗಳು

ಈಗ ದುರ್ಮಿಳವಾಗಹತ್ತಿವೆ. ಅವುಗಳಲ್ಲಿ ಪುರಾತನ ಶಿವಶರಣರ ವಚನಗಳಂತೂ ಒತ್ತಟ್ಟಿಗೆ ಎಲ್ಲಿಯೂ ಸಿಕ್ಕುವದಿಲ್ಲ. ಇವು ಎಲ್ಲಾ ವರು ಇದ್ದರೂ ಸಹ, ಅವುಗಳ ಮಾಲಕರು ಅವುಗಳ ಮಹತ್ವವನ್ನರಿಯು ದವರಾದ್ದರಿಂದ ಅವುಗಳನ್ನು ಎಲ್ಲಿಯೋ ಮೂಲೆಯಲ್ಲಿ ಅನಾದರದಿಂದ ಒಗೆದು ಬಿಟ್ಟಿರುತ್ತಾರೆ. ಜನರು ಕಟ್ಟುಕಥೆಗಳಿಂದ ತುಂಬಿದ ಶರಣರ ಮತ್ತು ಸಾಧುಸತ್ಪುರುಷರ ಪುರಾಣಗಳ ವಿಷಯವಾಗಿ ಮಾತ್ರ ಹೆಚ್ಚಿಗೆ ಆದರವನ್ನು ಮತ್ತು ಪ್ರೀತಿಯನ್ನು ತೋರಿಸುತ್ತಾರೆ ಹೊರತು ಅವರ ವಿಚಾರಗಳನ್ನೂ ತತ್ವಗಳನ್ನೂ ಬೋಧಿಸುವ ಅವರ ಅಧ್ಯಾತ್ಮಿಕ ಗ್ರಂಥ ಗಳಿಗೆ ಬೆಲೆ ಇಡದವರಾಗಿದ್ದಾರೆ. ಈ ಸ್ಥಿತಿಯು ಇನ್ನೂ ಹೀಗೆಯೇ ಉಳಿದದ್ದಾದರೆ ಸ್ವಲ್ಪ ದಿವಸಗಳಲ್ಲಿ ಈ ವೀರಶೈವ ಧಾರ್ಮಿಕ ವಾಙ್ಮಯವೇ ಅಡಗಿ ಹೋಗುವ ಸಂಭವವಿದೆ. ಈ ಸ್ಥಿತಿಯಲ್ಲಿ ನಾನು ವಚನಗ್ರಂಥಗಳನ್ನು ಸಂಗ್ರಹಿಸುವದು ಪ್ರಥಮಕಾರ್ಯವಾಗಿದೆ. ಹೀಗೆ ಸಂಗ್ರಹಿಸಿದ ಬಳಿಕ ಅವುಗಳನ್ನು ಆಯಾ ವಚನಕಾರರ ಪ್ರಕಾರ ಕ್ರಮಗೊಳಿಸ ತಕ್ಕದ್ದು, ಆಮೇಲೆ ಅವುಗಳನ್ನು ಶುದ್ಧಪಡಿಸತಕ್ಕದ್ದು, ಮತ್ತು ಸುಂದರವಾಗಿ ಮುದ್ರಣಗೊಳಿಸತಕ್ಕದ್ದು. ಈ ಕಾರ್ಯವನ್ನು ಮಾಡಿದ ಬಳಿಕ ಅವುಗಳನ್ನು ಓದುವ ಜನರು ಕ್ರಮೇಣ ಸಮಾಜದಲ್ಲಿ ಹೆಚ್ಚುತ್ತ ಹೋಗುವರು. ಶಿವಾನುಭವ ಗ್ರಂಥಮಾಲೆಯು ಈ ಕಾರ್ಯವನ್ನು ಕೈಕೊಂಡಿದ್ದು ಈ ವರೆಗೆ ಅದು ೨೩ ಮಹತ್ವದ ಗ್ರಂಥಗಳನ್ನು ಪ್ರಸಿದ್ಧಿಸಿದೆ. ಆದರೆ ಈ ಕಾರ್ಯವು ಇನ್ನೂ ಹೆಚ್ಚು ಒತ್ತರದಿಂದ ಸಾಗಿಸುವದು ಅತ್ಯಾವಶ್ಯಕ ವಾಗಿರುತ್ತದೆ.

**ವಚನಗ್ರಂಥಗಳನ್ನು ಕ್ರಮಿಕಪುಸ್ತಕಗಳಾಗಿ ಏರ್ಪಡಿಸುವದು:—** ಈ ಗ್ರಂಥಗಳನ್ನು ಹೀಗೆ ಸರಿಯಾಗಿ ಅಚ್ಚು ಹಾಕಿಸಿದ ಬಳಿಕ ಅವುಗಳನ್ನು ನಮ್ಮ ಶಾಲೆ ಕಾಲೇಜಗಳಲ್ಲಿ ಕ್ರಮಿಕಪುಸ್ತಕಗಳಾಗಿ ಏರ್ಪಡಿಸುವಂತೆ ಮಾಡುವದು ಅವಶ್ಯಕ. ಹೀಗೆ ಅವುಗಳನ್ನು ಉಪಯೋಗಿಸಲೂ ಅವು ಯೋಗ್ಯವಾಗಿವೆ. ಅವುಗಳ ಭಾಷೆ ಮತ್ತು ಶೈಲಿಗಳು ಎಲ್ಲರಿಂದಲೂ ಅನುಕರಣೀಯವಾಗಿದ್ದು, ಅವುಗಳನ್ನು ಪ್ರತಿಯೊಬ್ಬ ಕನ್ನಡಿಗನು ಮನಃಪೂರ್ವಕವಾಗಿ ಅಭ್ಯಾಸಮಾಡುವಂತೆ ಇವೆ. ಅವುಗಳಲ್ಲಿಯ ವಿಚಾರಗಳು ವೀರಶೈವ ಧರ್ಮದ ವಿಶಿಷ್ಟ ಪಾರಿಭಾಷಿಕ ಶಬ್ದಗಳಿಂದ ನಿರೂಪಿಸಲ್ಪಟ್ಟಿದ್ದರೂ ಅವುಗಳೆಲ್ಲವು ಎಲ್ಲ ಮತಸ್ಥರಿಂದ ಆದರ

ಕೋಯುವಾಗಿವೆ. ಈ ಸಂಗತಿಯು ಶಿವಾನುಭವ ಗ್ರಂಥಮಾಲೆಯ ಅನೇಕ ಪುಸ್ತಕಗಳನ್ನು ಮೈಸೂರು ಮತ್ತು ಮುಂಬಯಿ ವಿಶ್ವವಿದ್ಯಾಲಯದವರು ಕೆಲವು ಯುನಿವ್ಹರ್ಸಿಟಿ ಪರೀಕ್ಷೆಗಳಲ್ಲಿ ಪಠ್ಯಪುಸ್ತಕಗಳಾಗಿ ಏರ್ಪಡಿಸಿದ್ದೇ ದೃಷ್ಟಾಂತವಾಗಿದೆ. ಈ ಬಗೆಯ ಪ್ರಯತ್ನಗಳಿಂದ ವಚನಶಾಸ್ತ್ರದ ಅಭ್ಯಾಸವು ಕರ್ನಾಟಕದಲ್ಲಿ ಒತ್ತರದಿಂದ ಸಾಗಲು ಅವಕಾಶವು ಉತ್ಪನ್ನವಾಗುತ್ತದೆ.

**ವಚನಗಳ ಭಾಷಾಂತರಗಳು:—** ಈ ವಚನಗಳಲ್ಲಿ ಅನೇಕ ಮಹತ್ವದ ಧಾರ್ಮಿಕ ತತ್ವಗಳು ಅಡಕವಾಗಿದ್ದು, ಅವುಗಳನ್ನು ಇಂಗ್ಲಿಷ, ಮರಾಠಿ, ಆಂಧ್ರ, ತಮಿಳುಭಾಷೆಗಳಲ್ಲಿ ಪರಿವರ್ತಿಸುವದರಿಂದ, ಅವುಗಳ ಯೋಗ್ಯತೆಯು ಹಿಂದುಸ್ತಾನದ ಎಲ್ಲ ಜನರಿಗೂ ತಿಳಿಯಲಿಕ್ಕೆ ಅನುಕೂಲವಾಗುತ್ತದೆ. ವೀರಶೈವ ಸಮಾಜದಲ್ಲಿಯ ಆಂಗ್ಲ ವಿದ್ಯಾವಿಶಾರದವರು ಈ ಕಾರ್ಯದಲ್ಲಿ ಗಮನಕೊಟ್ಟಿದ್ದಾದರೆ ಸಮಾಜದ ಶ್ರೇಯಸ್ಸಿಗೆ ಅವರು ಬಹುಮಟ್ಟಿಗೆ ಕಾರಣರಾಗುವರು.

**ವಚನಗಳ ವಿಮರ್ಶೆಗಳು:—** ವಚನಗಳ ವಿಚಾರಗಳು ತಮಗೆ ತಿಳಿಯುವದಿಲ್ಲೆಂದು ಬಹು ಜನರು ಅನ್ನುತ್ತಾರೆ. ಈ ಸ್ಥಿತಿ ಇರುವದು ಸ್ವಾಭಾವಿಕವಿದೆ. ಯಾಕಂದರೆ ಷಟ್‌ಸ್ಥಲ ಶಾಸ್ತ್ರದ ವಿಚಾರಗಳು ವಾಡಿಕೆಯಲ್ಲಿ ರೂಢವಾಗಿರದ್ದರಿಂದಲೂ, ಅವುಗಳ ವಿವೇಚನಗಳು ಪಾರಿಭಾಷಿಕ ಶಬ್ದಗಳಿಂದ ತುಂಬಿ ಹೋಗಿರುವದರಿಂದಲೂ ಈ ಸ್ಥಿತಿಯು ಉತ್ಪನ್ನವಾಗಿರುತ್ತದೆ. ಆದ್ದರಿಂದ ಷಟ್‌ಸ್ಥಲವನ್ನು ತಿಳಿದವರು ಈ ವಚನಗಳನ್ನು ಓದಿ ಅವುಗಳ ವಿಮರ್ಶೆಗಳನ್ನು ಪತ್ರಿಕೆಗಳಲ್ಲಿ ಮೇಲಿಂದ ಮೇಲೆ ಮಾಡುವದರಿಂದಲೂ ಅವರು ಅವುಗಳ ಮೇಲೆ ಆಗಿಂದಾಗ್ಗೆ ಉಪನ್ಯಾಸ ಮಾಡುವದರಿಂದಲೂ ಈ ತೊಂದರೆಯು ಬೇಗನೆ ದೂರವಾಗುವದು.

**ವೀರಶೈವ ಪಾಠಶಾಲೆಗಳಲ್ಲಿ ಇವು ಆವಶ್ಯಕ ವಿಷಯುವಾಗಿರತಕ್ಕದ್ದು:—** ಈ ಮಹತ್ವದ ಗ್ರಂಥಗಳು ವೀರಶೈವರು ಸ್ಥಾಪಿಸಿದ ಪ್ರತಿಯೊಂದು ಪಾಠಶಾಲೆ ಮತ್ತು ಶಾಲೆಗಳಲ್ಲಿ ಆವಶ್ಯಕ ವಿಷಯಗಳಾಗಿ ಏರ್ಪಡಿಸುವದು ಮಹತ್ವದ್ದಿರುತ್ತದೆ. ಹೀಗೆ ಇವು ಇನ್ನೂ ಕಲಿಸಲ್ಪಡದೆ ಇರುವದು ಅತ್ಯಂತ ಖೇದಕರವಾಗಿರುತ್ತದೆ. ಈ ಸ್ಥಿತಿಯನ್ನು ಅವುಗಳ ಚಾಲಕರು ಶೀಘ್ರವೇ ದೂರಮಾಡತಕ್ಕದ್ದು. ಬಾಲಕರಿಗೆ ನೀತಿ, ತಿಳಿದವರಿಗೆ ಗಹನ ವಿಚಾರಗಳನ್ನು ಅರುಹುವ ಈ ಮಹತ್ತರ ಗ್ರಂಥಗಳನ್ನು

ಹೀಗೆ ಈ ಶಾಲೆಗಳು ಉಪೇಕ್ಷಿಸುವದು ಆಕ್ಷಮ್ಯವಾಗಿರುತ್ತದೆ. ಇದಕ್ಕೆ ಅಪವಾದವಾಗಿ ಈಗ ಆಚರಿಸುತ್ತಿರುವವರೆಂದರೆ ನಮ್ಮ ಶ್ರೀಯುತ ಹರ್ಡೇಕರ ಮಂಜಪ್ಪನವರೊಬ್ಬರೇ ಇದ್ದಾರೆ. ಇವರು ತಮ್ಮ ವೀರಶೈವ ವಿದ್ಯಾಲಯದಲ್ಲಿ ಧಾರ್ಮಿಕ ಶಿಕ್ಷಣಕೊಡುವವರಲ್ಲಿ ಈ ವಚನವಾಙ್ಮಯಕ್ಕೆ ಬಹಳ ಮಹತ್ವದ ಸ್ಥಾನವನ್ನು ಕೊಟ್ಟಿದ್ದಾರೆ. ಇದಕ್ಕೆ ಅವರು ಸಮಾಜದವರಿಂದ ಅಭಿನಂದನೀಯರಾಗಿದ್ದಾರೆ. ಅವರ ಅನುಕರಣವನ್ನು ಬೇರೆ ಪಾಠಶಾಲೆಯವರು ಮಾಡಿದ್ದಾದರೆ, ವೀರಶೈವ ಸಮಾಜಕ್ಕೆ ಶುಭ ದಿನವೆಂದು ನಾನು ತಿಳಿಯುತ್ತೇನೆ.

**ಶಿವಾನುಭವ ಸಂಘಗಳ ಸ್ಥಾಪನೆಃ**— ಹೀಗೆ ವಚನಗಳ ಅಭ್ಯಾಸವು ಪಾಠಶಾಲೆ ಶಾಲೆ ಕಾಲೇಜಗಳಲ್ಲಿ ನಡೆಯುವದಲ್ಲದೆ ಪ್ರತಿಯೊಂದು ಗ್ರಾಮದಲ್ಲಿಯೂ ಇವುಗಳ ಅಧ್ಯಯನವು ನಡೆಯುವದು ಆವಶ್ಯಕ. ಈ ಕಾರ್ಯವನ್ನು ಮೊದಲಿಗೆ ನಮ್ಮ ಮಠಾಧಿಪತಿಗಳು ಜರಗಿಸುತ್ತಿದ್ದರು. ಆದರೆ ಈಗ ಈ ಮಠಗಳ ಸ್ಥಿತಿಯು ಸಮಾಧಾನಕರವಾಗಿರುವದಿಲ್ಲ. ಆದರೂ ಯಾರಿಗೆ ಇವುಗಳ ಮರ್ಮವನ್ನು ತಿಳಿಯುವದು ಆಸಕ್ತಿ ಇರುತ್ತದೋ ಅವರು ದಿನಂಪ್ರತಿ ಇಲ್ಲವೆ ಕಡೆಗೆ ವಾರಕ್ಕೊಮ್ಮೆಯಾದರೂ ಒತ್ತಟ್ಟಿಗೆ ಸೇರಿ ಅವುಗಳನ್ನು ಓದಿದಲ್ಲಿ ಸಮಾಜದ ಮೇಲೆ ಸುಪರಿಣಾಮಗಳುಂಟಾಗದೆ ಇರಲಾರದು. ಈ ಬಗೆಯ ಶಿವಾನುಭವ ಸಂಘಗಳು ವೀರಶೈವರಿದ್ದ ಪ್ರತಿಯೊಂದು ಗ್ರಾಮದಲ್ಲಿಯೂ ಸ್ಥಾಪಿಸಲ್ಪಟ್ಟತಕ್ಕದ್ದು ಯೋಗ್ಯವಾಗಿರುವದು. ಈ ಮೇರೆಗೆ ನಾವು ಎಡೆಬಿಡದೆ ಪ್ರಯತ್ನ ಮಾಡಲಿಕ್ಕೆ ಹತ್ತಿದರೆ ಇವರ ಸುಪರಿಣಾಮಗಳು ಸಮಾಜದ ಮೇಲೆ ತೀವ್ರವೇ ಉಂಟಾಗದೆ ಇರದು. ಈಗಿನ ದಿನಗಳು ಮಾತಿನವಲ್ಲ, ಕೃತಿಯಿಂದಲೇ ನಿಜತ್ವವನ್ನು ಹೊರಗೆಡವಬೇಕಾಗಿರುತ್ತದೆ. ಇದರಲ್ಲಿ ಹೆರವರ ಹೀಯಾಳಿಕೆ ನಿಂದೆ ಇವುಗಳಿಗೆ ಲಕ್ಷಕೊಡದೆ ನಾವು ಮಾಡುವ ಕರ್ತವ್ಯಗಳಲ್ಲಿ ಎಸಗಿದರೆ, ಸಮಾಜದಲ್ಲಿ ನಿಜವಾದ ಸುಧಾರಣೆಯು ತಲೆದೊರದೆ ಇರಲಾರದು.



# ಶಿವತತ್ವರತ್ನಾಕರದ ವಿಮರ್ಶನವು.

ಲೇಖಾಂಕ ೩.

ಲೇಖಕ.— ಚಂದ್ರಶೇಖರಶಾಸ್ತ್ರೀ ವ್ಯಾಕರಣತೀರ್ಥ ಪ್ರಿನ್ಸಿಪಾಲ ಶಂಕರ
ಕಾಲೇಜು ಯಾದಗಿರಿ.

---

ಎರಡನೆಯ ಲೇಖಾಂಕದಲ್ಲಿ ಶಿವತತ್ವರತ್ನಾಕರದಲ್ಲಿದ್ದಂತೆ ಕೆಲವು ಸಂಸ್ಕೃತ ಶ್ಲೋಕಗಳನ್ನು ಕೊಟ್ಟಿರುವದರಿಂದ ಶಿವಾನುಭವದ ವಾಚಕರಿಗೆ ಸ್ವಲ್ಪ ತೊಂದರೆಯಾಗಿರಬಹುದೆಂದು ತಿಳಿದು ಈ ಲೇಖಾಂಕದಲ್ಲಿ ಶಿವತತ್ವರತ್ನಾಕರದ ಸಂಸ್ಕೃತ ಶ್ಲೋಕಗಳ ಸಾರವನ್ನೇ ಕನ್ನಡದಲ್ಲಿ ವಿವರಿಸುವೆನು. ಆದರೂ ಕೆಲವು ಮಹತ್ವದ ಶ್ಲೋಕಗಳನ್ನು ಅಲ್ಲಲ್ಲಿ ಬರೆಯುತ್ತ ಹೋಗುತ್ತೇನೆ. ಈ ಗ್ರಂಥಕಾರರು ತಮ್ಮ ನಾಲ್ಕನೆಯ ಕಲ್ಲೋಲದ ದಶಮತರಂಗದಲ್ಲಿ ಕಲಿಯುಗದ ಕೌತುಕವನ್ನು ಬಹು ರಮಣೀಯವಾಗಿ ವರ್ಣಿಸಿರುತ್ತಾರೆ.

## ಕಲಿಯುಗವು.

ಕಲಿಯುಗವು ಪ್ರಾಪ್ತವಾಗಲಾಗಿ ಧರ್ಮವು ಲೋಪವಾಗಿ ಕೃಷ್ಣನೂ ಕೂಡ ಈ ತಾಮಸಯುಗದಲ್ಲಿ ಕೃಷ್ಣತ್ವವನ್ನು ಹೊಂದುತ್ತಾನೆ. ಯಾವನಾದರೊಬ್ಬ ಧರ್ಮಾತ್ಮನು ಕ್ರಿಯಾಯೋಗದಲ್ಲಿ ತೊಡಗಿದರೆ ಅಂಥವನನ್ನು ಕಂಡು ಜನರು ಅಸೂಯೆಯನ್ನು ಮಾಡಲಿಕ್ಕೆ ಹತ್ತುತ್ತಾರೆ. ಯಜ್ಞಯಾಗಾದಿ ಕರ್ಮಗಳೂ, ಶಿವಪೂಜಾದಿ ವ್ರತಗಳೂ, ನಾಶವಾಗಿ ಅಧರ್ಮದ ಪ್ರವರ್ತನೆಯಿಂದ ಅನೇಕ ಉಪದ್ರವಗಳು ಹುಟ್ಟುತ್ತವೆ. ಎಲ್ಲ ಜನರು ಅಸೂಯೆಯಲ್ಲಿ ನಿರತರಾಗಿ ಡಂಭಾಚಾರಿಗಳಾಗಿರುತ್ತಾರೆ. ಈ ಕಲಿಯುಗದಲ್ಲಿ ಪ್ರಜೆಗಳು ಅಲ್ಪಾಯುಷಿಗಳಾಗಿ ಧರ್ಮಪರಾಂಗ್ಮುಖರಾಗುತ್ತಾರೆ. ಎಲ್ಲಾ ವರ್ಣದವರೂ ವ್ಯರ್ಥವಾಗಿ ಅಹಂಕಾರದಿಂದ ಕೂಡಿ ಸರ್ವರನ್ನೂ ನಿಂದಿಸುತ್ತ ನಾವೇ ಶ್ರೇಷ್ಠರೆಂದು ಹೇಳುತ್ತಾರೆ. ಮತ್ತು ದಯಾದಾಕ್ಷಿಣ್ಯಾದಿ ಗುಣಗಳಿಂದ ಹೀನರಾಗಿಯೂ, ತಪಸ್ಸು, ಸತ್ಯ ಮೊದಲಾದ ಶ್ರೇಷ್ಠ ಗುಣಗಳಿಂದ ದೂರೀಕೃತರಾಗಿ ನೀಚತ್ವವನ್ನು ಹೊಂದುತ್ತಾರೆ. ರಾಜರು ಯಾವಾಗಲೂ ಧನಲೋಲುಪರಾಗಿ ಪ್ರಜಾಪಾಲನೆಯನ್ನು ಮಾಡದೇ ಆತ್ಮಸುಖದಲ್ಲಿ ಕಾಲವನ್ನು ಕಳೆಯುವರು. ಈ ಯುಗ

ದಲ್ಲಿ ಮಕ್ಕಳು ತಂದೆಯನ್ನು ದ್ವೇಷಿಸುತ್ತಾರೆ. ತಂದೆಯು ಮಗನನ್ನು, ಹೆಂಡತಿಯು ಗಂಡನನ್ನೂ ದ್ವೇಷಿಸುತ್ತಾಳೆ. ಸರ್ವರೂ ಲೋಭಗುಣ ದಿಂದ ಆಕರ್ಷಿಸಲ್ಪಟ್ಟವರಾಗಿ ದುಷ್ಕರ್ಮಶೀಲರಾಗುತ್ತಾರೆ. ಮತ್ತು ಪರ ದ್ರವ್ಯಪರಾಯಣರಾಗಿಯೂ, ಅಪಾತ್ರದಲ್ಲಿ ದಾನವನ್ನು ಮಾಡತಕ್ಕವರಾ ಗಿಯೂ, ಪರಸ್ತ್ರೀಯರಲ್ಲಿ ನಿರತರಾಗಿಯೂ, ಹಾಲಿನ ನಿಮಿತ್ತದಿಂದ ಗೋ ವುಗಳನ್ನು ರಕ್ಷಿಸತಕ್ಕವರಾಗಿಯೂ, ಅನಾವೃಷ್ಟಿಯ ಭಯದಿಂದ ಆಕಾಶದ ಕಡೆಗೆ ದೃಷ್ಟಿಯುಳ್ಳವರಾಗಿಯೂ, ಯಾವಾಗಲೂ ಹಸಿವೆಯಿಂದ ಪೀಡಿ ತರಾಗಿಯೂ, ಇರುತ್ತಾರೆ. ಹೀಗೆಯೇ ಅನೇಕ ರೀತಿಯಿಂದ ವರ್ಣಿಸಿ ರುತ್ತಾರೆ. ಕಲಿಕೌತುಕದ ಕೆಳಗಿನ ಶ್ಲೋಕವು ಬಹು ರಮಣೀಯವಾ ಗಿರುತ್ತದೆ.

ಸೀದಂತಿಸಂತೊವಿಲಸಂತ್ಯಸಂತಃ॥
ಪರೇಷುಮೈತ್ರೀ ಸ್ವಜನೇಷುವೈರಮ್॥
ಪುತ್ರಾಮ್ರಿಯಂತೆ ಜನಕಶ್ಚಿರಾಯುಃ।
ಪಶ್ಯಂತಿಲೋಕಾ: ಕಲಿಕೌತುಕಾನಿ॥

ಅಂದರೆ— ಸತ್ಪುರುಷರು ನಾಶರಾಗುತ್ತಾರೆ. ದುರ್ಜನರು ಪ್ರಕಾಶಮಾನ ರಾಗುತ್ತಾರೆ. ಸ್ವಜನರಲ್ಲಿ ವೈರವನ್ನೂ, ಪರಜನರಲ್ಲಿ ಪ್ರೀತಿಯನ್ನೂ, ಮಾಡುತ್ತಾರೆ. ಮಕ್ಕಳು ಸಾಯುತ್ತಾರೆ. ತಂದೆಯು ಚಿರಾಯುಷ್ಯನಾ ಗುತ್ತಾನೆ. ಜನರು ಕಲಿಯುಗದ ಕೌತುಕವನ್ನು ನೋಡತಕ್ಕಂಥವರಾ ಗುತ್ತಾರೆ.

ಆದರೆ ಈ ಕಲಿಯುಗದಿಂದ ಜನರು ಹೇಗೆ ಪಾರಾಗಬೇಕೆಂದು ಕವಿಯು ತರ್ಕವನ್ನು ಮಾಡಿ ಯಾರು ಶಿವಪೂಜಾದಿ ಸತ್ಕರ್ಮಗಳಲ್ಲಿ ತೊಡಗಿ ಶಿವನಾಮಸ್ಮರಣೆಯನ್ನು ಮಾಡುತ್ತಾರೆಯೋ ಅಂಥವರನ್ನು ಈ ಕಲಿಯು ಪೀಡಿಸುವದಿಲ್ಲವು. ಶಿವನಾಮಸ್ಮರಣೆಯೇ ಈ ವಿಷಯದಲ್ಲಿ ಸಂಪೂರ್ಣ ಫಲದಾಯಕವಾದದ್ದಾಗಿರುತ್ತದೆಂದು ಹೇಳಿ ಕೆಳಗೆ ಬರೆ ದಂತೆ ಸ್ತೋತ್ರವನ್ನು ಮಾಡಿ ಕಲಿಯುಗದ ವರ್ಣನೆಯನ್ನು ಮುಗಿಸು ತ್ತಾನೆ.

ಶಿವಶಂಕರರುದ್ರೇತಿ ನೀಲಕಂಠ ತ್ರಿಲೋಚನ।
ಇತೀರಯಂತಿಯೇ ನಿತ್ಯಂ ನಹಿತಾನ್ಬಾಧತೇಕಲಿಃ।

# ಚಂದ್ರ ಮೌಳೀಶ್ವರಲಿಂಗವು.

ನಾಲ್ಕನೆಯ ಕಲ್ಲೋಲದ ಹನ್ನೆರಡನೆಯ ತರಂಗದಲ್ಲಿ ವಿದ್ಯಾರಣ್ಯ ಮುನಿಗಳ ವೃತ್ತಾಂತವನ್ನು ಪ್ರಾರಂಭಿಸಿ ಇವರಿಂದಲೇ ಚಕ್ರನಗರವು (ಹಂಪಿ) ನಿರ್ಮಿಸಲ್ಪಟ್ಟಿತೆಂದು ಹೇಳಿ ಶ್ರೀ ಶಂಕರಾಚಾರ್ಯರ ಪಾರಂಪರ್ಯದಿಂದ ಬಂದಿರತಕ್ಕ ಸನ್ಯಾಸವನ್ನೇ ಶ್ರೀ ವಿದ್ಯಾರಣ್ಯರು ಸ್ವೀಕರಿಸಿದರೆಂತಲೂ, ಅನಂತರ ಶ್ರೀ ಆದಿಶಂಕರಾಚಾರ್ಯರಿಗೆ ಶ್ರೀ ಜಗದ್ಗುರು ರೇಣುಕಾಚಾರ್ಯರಿಂದ ಕೊಡಲ್ಪಟ್ಟ ಚಂದ್ರಮೌಳೀಶ್ವರಲಿಂಗದ ವೃತ್ತಾಂತವನ್ನು ಕೆಳಗಿನ ಶ್ಲೋಕದಿಂದ ವಿವರಿಸುತ್ತಾನೆ.

ರೇವಣಾಸಿದ್ಧ ಸಂಪ್ರಾಪ್ತಂ ಚಂದ್ರ ಮೌಲೀಶ ಮಪ್ಯದಾತ್ ।<br>
ಆಖ್ಯಾಚ್ಚಾನೇನ ಲಿಂಗೇನತವಾಭೀಷ್ಟಾಪ್ತಿಂತ್ಯಪಿ॥

ಅಂದರೆ ಶ್ರೀ ಶಂಕರಾಚಾರ್ಯರು ವಿದ್ಯಾರಣ್ಯ ಮುನಿಗಳಿಗೆ ಸನ್ಯಾಸವನ್ನು ಕೊಡುವಕಾಲಕ್ಕೆ ತಮಗೆ ರೇವಣಸಿದ್ಧರಿಂದ ಪ್ರಾಪ್ತವಾದ ಚಂದ್ರಮೌಳೀಶ್ವರಲಿಂಗವನ್ನು ಕೊಟ್ಟು ಇದನ್ನು ಪ್ರತಿನಿತ್ಯ ಪೂಜಿಸಿದರೆ ನಿಮ್ಮ ಇಷ್ಟ ಸಿದ್ಧಿಯಾಗುವದೆಂದು ಹೇಳಿರುತ್ತಾರೆ. ಅದರಂತೆಯೇ ಸ್ವೀಕರಿಸಿ ವಿದ್ಯಾರಣ್ಯರು ಕೆಲವು ಕಾಲದನಂತರ ಬದರಿಕಾಶ್ರಮಕ್ಕೆ ದಯಮಾಡಿಸಿ ಅಲ್ಲಿ ವ್ಯಾಸಮಹರ್ಷಿಗಳ ಅನುಗ್ರಹವನ್ನು ಪಡೆದು ಪುನಃ ಹಂಪಿಗೆ ಬಂದು ದೇವಿಯನ್ನು ಪ್ರತ್ಯಕ್ಷಳನ್ನಾಗಿ ಮಾಡಿಕೊಂಡು ಹೊನ್ನಿನ ಮಳೆಯನ್ನು ಸುರಿಸಿ ಶಿಷ್ಯರಾದ ಹುಕ್ಕ ಬುಕ್ಕರೆಂಬುವ ಅರಸರನ್ನು ಉದ್ಧಾರಮಾಡಿದರೆಂಬುವ ವಿಷಯವನ್ನು ನಾಲ್ಕನೆಯ ಕಲ್ಲೋಲದ ಅಂತ್ಯದವರೆಗೂ ಇವರ ವೃತ್ತಾಂತವನ್ನೇ ವರ್ಣಿಸಿರುತ್ತಾರೆ. ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ದಯಪಾಲಿಸಿದ ವಿಷಯವನ್ನೇ ಹಿಂದು ಸ್ಥಾನದ ಆರ್ಚಿಲಾಜಿಕಲ್ ಡಿಪಾರ್ಟಮೆಂಟಿನ ಅಧ್ಯಕ್ಷರಾಗಿದ್ದ ಬೆಂಗಳೂರಿನ ರಾವಬಹದ್ದೂರು ಹೆಚ್. ಕೃಷ್ಣಶಾಸ್ತ್ರಿಗಳು ಬಿ, ಎ. ಇವರು ಶಿವತತ್ವರತ್ನಕರದ ತಮ್ಮ ಉಪೋದ್ಘಾತದಲ್ಲಿ ಚನ್ನಾಗಿ ವರ್ಣನೆಯನ್ನು ಮಾಡಿ ಇಂದಿಗೂ ಶ್ರೀ ಶಂಕರಾಚಾರ್ಯರ ಶ್ರೀ ಶೃಂಗೇರಿಯ ಮಠದಲ್ಲಿ ಇರುತ್ತದೆಂದು ಪ್ರತಿಪಾದಿಸಿ ಶ್ರೀ ರೇಣುಕಾಚಾರ್ಯರ ವಿಷಯ ಬಹಳ ಚನ್ನಾಗಿ ವರ್ಣಿಸಿರುತ್ತಾರೆ.

## ಸ್ವಪ್ನಫಲವು.

ಐದನೆಯ ಕಲ್ಲೋಲದ ಮೂರನೆಯ ತರಂಗದಲ್ಲಿ ಕವಿಯು ಸ್ವಪ್ನಗಳೆಷ್ಟು ವಿಧ ಅವುಗಳಿಂದಾಗತಕ್ಕ ಫಲಗಳೇನು? ಎಂಬುವ ವಿಷಯವನ್ನು ವಿವರಿಸಿರುತ್ತಾನೆ. ಸ್ವಪ್ನಗಳಲ್ಲಿ ದೃಷ್ಟ, ಶೃತ, ಅನುಭೂತ, ಪ್ರಾರ್ಥಿತ, ಕಲ್ಪಿತ, ಭಾವಿಕ, ದೋಷಜ, ಎಂದು ಏಳು ಭೇದಗಳಿರುತ್ತವೆ. ಮತ್ತು ಹಗಲಿನಲ್ಲಿ ಸ್ವಪ್ನಗಳನ್ನು ಕಂಡರೆ ಫಲವು ಇರುವದಿಲ್ಲವು. ಅರುಣೋದಯ ಕಾಲದಲ್ಲಿ ಸ್ವಪ್ನವನ್ನು ಕಂಡರೆ ತೀವ್ರವಾಗಿ ಅದರ ಫಲವನ್ನನುಭವಿಸುವನು. ಕಾಮವಿಕಾರದಿಂದ ಪೀಡಿತನಾದವನಿಗೂ, ಅತಿ ಧೂರ್ತನಿಗೂ, ಸ್ವಪ್ನದ ಫಲವು ಇರುವದಿಲ್ಲವು. ಸ್ವಪ್ನದಲ್ಲಿ ಯಾವ ಮನುಷ್ಯನು ರಾಜನನ್ನೂ, ಆನೆಯನ್ನೂ, ಕುದುರೆಯನ್ನೂ, ಬಂಗಾರ, ವೃಷಭ, ಗೋ ಇವುಗಳನ್ನು ಕಾಣುತ್ತಾನೆಯೋ ಅವನ ಕುಟುಂಬವು ವೃದ್ಧಿಯಾಗುತ್ತದೆ. ಹಾಲುಳ್ಳಂಥ, ಮತ್ತು ಫಲಗಳಿಂದ ಕೂಡಿವಂಥ ವೃಕ್ಷವನ್ನು ಒಬ್ಬವನೇ ಹತ್ತಿ ಅಲ್ಲಿಯೇ ಎಚ್ಚರವಾದದ್ದಾವರೆ ಅವನಿಗೆ ತೀವ್ರವಾಗಿ ದ್ರವ್ಯದ ಪ್ರಾಪ್ತಿಯಾಗುತ್ತದೆ. ಸ್ವಪ್ನದಲ್ಲಿ ಸೂರ್ಯಮಂಡಲವನ್ನಾಗಲೀ, ಚಂದ್ರಮಂಡಲವನ್ನಾಗಲೀ ಕಂಡದ್ದೇ ಆದರೆ ರೋಗದಿಂದ ಮುಕ್ತನಾಗಿ ಅಧಿಕ ಸಂಪತ್ತನ್ನು ಹೊಂದುತ್ತಾನೆ. ಮತ್ತು ಆದಿತ್ಯ ಮಂಡಲ ಮಂಡಲವನ್ನಾಗಲೀ ಚಂದ್ರಮಂಡಲವನ್ನಾಗಲೀ, ಕೈಗಳಿಂದ ಹಿಡಿದದ್ದೇ ಆದರೆ ಅವನಿಗೆ ರಾಜ್ಯಪ್ರಾಪ್ತಿಯಾಗುವದು. ಉನ್ನತಗಳಾದ ಸ್ಥಾನಗಳ ಮೇಲೆ ಹತ್ತಿದರೆ ವೃದ್ಧಿಯನ್ನು ಹೊಂದುತ್ತಾನೆ. ನೀರಡಿಕೆಯಾಗಿ ಯಾವಾತನಿಗೆ ಎಚ್ಚರವಾಗುತ್ತದೆಯೋ ಅವನಿಗೆ ಐಶ್ವರ್ಯಪ್ರಾಪ್ತಿಯಾಗುವದು. ಸಮುದ್ರಗಳನ್ನೇ ಆಗಲಿ ನದಿಗಳನ್ನೇ ಆಗಲಿ ದಾಟಿದ್ದೇ ಆದರೆ ಅವನು ತೀವ್ರವಾಗಿ ಭಯದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಸ್ವಪ್ನದಲ್ಲಿ ತಂದೆ ತಾಯಿಗಳನ್ನೂ, ಮಕ್ಕಳಗಳನ್ನೂ, ಬಂಧುಗಳನ್ನೂ, ಸಜ್ಜನನನ್ನೂ, ಕಂಡದ್ದೇ ಆದರೆ ವಿಪುಲವಾದ ದ್ರವ್ಯವನ್ನು ಹೊಂದುತ್ತಾನೆ. ಸುಂದರನಾದ ಮತ್ತು ಶುಭ್ರ ವಸ್ತ್ರಗಳನ್ನುಟ್ಟುಕೊಂಡಂಥ ಪುರುಷನನ್ನು ಕಂಡರೆ ಧನ ಪ್ರಾಪ್ತಿಯು ಆಗುತ್ತದೆ. ಶುಭ್ರಗಳಾದ ಆಭರಣಗಳು, ಬೆಳ್ಳಕ್ಕಿಗಳೂ, ಕೋಳಿಗಳೂ, ಇವುಗಳನ್ನು ಸ್ವಪ್ನದಲ್ಲಿ ಕಂಡರೆ ಅವನಿಗೆ ಶುಭವಾಗುತ್ತದೆ. ಅಶ್ವಗಳಿಂದ ಕೂಡಿದ ರಥದಲ್ಲಿ ಏಕಾಂಗಿಯಾಗಿ ಆರೋಹಣ ಮಾಡಿ ರಥದಲ್ಲಿಯೇ ಎಚ್ಚರವಾದದ್ದೇ ಆದರೆ ಬಹಳ ಸಂಪತ್ತನ್ನು ಹೊಂದುತ್ತಾನೆ. ದೀಪ

ಫಲ, ಛತ್ರಿ, ಧ್ವಜ, ಕನ್ನಿಕೆ, ಆಕಳಶಗಣಿ ಈ ವಸ್ತುಗಳನ್ನು ಸ್ವಪ್ನದಲ್ಲಿ ಕಂಡರೆ ಚಿಂತಿತಫಲವನ್ನು ತೀವ್ರವಾಗಿ ಹೊಂದುತ್ತಾನೆ. ಸ್ವಪ್ನದ ಅಂತ್ಯದಲ್ಲಿ ಬಹಳ ಹಾಲನ್ನು ಕುಡಿದು ಎಚ್ಚರವಾದದ್ದೇ ಆದರೆ ಅವನಿಗೆ ವಿಪುಲ ದ್ರವ್ಯದ ಪ್ರಾಪ್ತಿಯು ತಪ್ಪದೇ ಆಗುತ್ತದೆ. ಸರ್ಪಗಳಿಂದಾಗಲೀ, ನಾಯಿಗಳಿಂದಾಗಲೀ, ಕಚ್ಚಲ್ಪಟ್ಟು ರಕ್ತವು ಬಾರದೇ ಇದ್ದರೆ ಅವನಿಗೆ ತತ್ಕ್ಷಣದಲ್ಲಿಯೇ ಉತ್ತಮ ಫಲವು ಆಗುತ್ತದೆ. ಶ್ವೇತಮಾಲಿಕೆಗಳಿಂದಲಂಕರಿಸಲ್ಪಟ್ಟ ಬಂಗಾರದ ಛತ್ರಿಯುಳ್ಳಂಥ ಆಕಾಶವನ್ನು ನೋಡಿದ್ದೇ ಆದರೆ ಅವನಿಗೆ ನಿಧಿಯು ಪ್ರಾಪ್ತಿಯಾಗುವದು. ಶುಭ್ರವಾದ ಮಾಲಿಕೆಯಿಂದಲಂಕರಿಸಲ್ಪಟ್ಟ ಮೂರ್ತಿಯನ್ನು ದೇವಾಲಯದಲ್ಲಿ ಕಂಡರೆ ಉತ್ತಮ ಫಲವನ್ನು ಹೊಂದುತ್ತಾನೆ. ಬಿಳಿಯ ಆಕಳುಗಳನ್ನೂ, ಶುಭ್ರವಸ್ತ್ರಧಾರಣವನ್ನು ಮಾಡಿಕೊಂಡಿರತಕ್ಕ ವಿಪ್ರರನ್ನೂ, ಕಂಡರೆ ಇಷ್ಟಸಿದ್ಧಿಯು ಆಗುತ್ತದೆ. ಸಸಿಗಳ ಮೊಳಕೆಗಳನ್ನೂ ಶಂಖ, ಚಕ್ರ, ಧ್ವಜ, ಬೀಸಣಿಕೆ, ಚಾಮರ, ತುಂಬಿದಕೊಂಪುಕೊಡ, ತುಪ್ಪ, ಪಾಯಸ, ಅರಳಹಿಟ್ಟು, ಹಾಲು, ಸಕ್ಕರೆ, ಮೊಸರು, ದೇವತೆಗಳು, ಗುರುಗಳು, ಇವರ ಕೂಡ ಸಂಭಾಷಣ, ಇವುಗಳೆಲ್ಲ ಆದರೆ ಶುಭವೆಂದು ತಿಳಿಯತಕ್ಕದ್ದು. ಇಲ್ಲಿಯವರೆಗೆ ಒಳ್ಳೇ ಸ್ವಪ್ನಗಳನ್ನು ಹೇಳಿದಂತೆ ಆಯಿತು.

## ದುಸ್ವಪ್ನಗಳು

ನಾಯಿಯು, ನರಿಯು, ಹದ್ದು, ಕಾಗೆಗಳು, ಕಪ್ಪುಹುಳಗಳು, ಇವುಗಳನ್ನು ಮನುಷ್ಯನು ಸ್ವಪ್ನದಲ್ಲಿ ಕಂಡದ್ದೇ ಆದರೆ ದುಃಖವನ್ನು ಹೊಂದುತ್ತಾನೆ. ಸರ್ಪಗಳನ್ನೂ, ಕಪ್ಪುಆಕಳುಗಳನ್ನೂ ಕಂಡದ್ದೇ ಆದರೆ ಭಯವನ್ನು ಹೊಂದುತ್ತಾನೆ. ಕುದುರೆ, ಕತ್ತೆ, ಒಂಟೆ, ಕಪ್ಪುಬಣ್ಣದ ಸ್ತ್ರೀಯಳು, ಕೋಣ, ಇವುಗಳನ್ನು ಕಂಡದ್ದೇ ಆದರೆ ಶೋಕವನ್ನು ಹೊಂದುತ್ತಾನೆ ದೇವತೆಗಳ ಕುಣಿತವನ್ನೂ, ಅವರ ರೋದನಧ್ವನಿಯನ್ನೂ, ಮತ್ತು ಹಾಸ್ಯವನ್ನೂ ಎಲ್ಲಿ ಕಾಣುತ್ತಾರೆಯೋ ಆ ದೇಶವೇ ನಷ್ಟವಾಗುತ್ತದೆ. ಕೆಂಪುವಸ್ತ್ರವನ್ನುಟ್ಟುಕೊಂಡು, ಕೆಂಪುಗಂಧವನ್ನು ಲೇಪನಮಾಡಿಕೊಂಡಂಥ ಸ್ತ್ರೀಯಳನ್ನು ಯಾವ ಮನುಷ್ಯನು ಆಲಿಂಗನ ಮಾಡುತ್ತಾನೆಯೋ ಆ ರಾತ್ರಿಯೇ ಅವನಿಗೆ ಕಡಿಯುವೆಂದು ತಿಳಿಯತಕ್ಕದ್ದು ಅರ್ಥಾತ್ ಮರಣವು. ಕಪ್ಪುಹಾವುಗಳನ್ನೂ, ಘಾತುಕರನ್ನೂ, ಮ್ಲೇಂಛರನ್ನೂ, ಸ್ವಪ್ನದಲ್ಲಿ ಕಂಡರೆ ಮರಣವು. ಎಣ್ಣೆಯನ್ನು ಹಚ್ಚಿಕೊಂಡು ಎಚ್ಚರವಾದರೆ

ರೋಗಪ್ರಾಪ್ತಿಯಾಗುವದು. ಸ್ವಪ್ನದಲ್ಲಿ ಯಾವ ಮನುಷ್ಯನನ್ನು ಕೋಡು ಗಳುಳ್ಳ ಪ್ರಾಣಿಗಳೂ, ಕೋರೆದಾಡಿಗಳುಳ್ಳ ಪ್ರಾಣಿಗಳೂ, ವಾನರಗಳೂ, ಆಕ್ರಮಣಮಾಡಿದ್ದೇ ಆದರೆ ಅವನಿಗೆ ದೊಡ್ಡ ಸಂಕಟವು ಪ್ರಾಪ್ತಿಯಾ ಗುತ್ತದೆ. ತುಂಬಿದ ಕೊಡವು ಒಡೆದದ್ದನ್ನು ನೋಡಿದರೆ ದುಃಖವನ್ನು ಹೊಂದುತ್ತಾನೆ. ತೇಜೋಹೀನನಾದ ಸೂರ್ಯನನ್ನಾಗಲೀ, ಚಂದ್ರನ ನ್ನಾಗಲೀ, ಆಕಾಶದಿಂದ ಬೀಳತಕ್ಕ ನಕ್ಷತ್ರಗಳನ್ನಾಗಲೀ, ನೋಡಿದರೆ ಮರಣವು ಸಂಭವಿಸುವದು. ಒಣಗಿದ ನದಿ, ಸಮುದ್ರ, ಸರೋವರ, ಮಡುವು, ಇವುಗಳನ್ನು ಕಂಡರೆ ದ್ರವ್ಯವು ನಷ್ಟವಾಗುವದು. ಮತ್ತು ಹಲ್ಲುಗಳು ಹೋದಂತೆ ಆದರೆ ಬಂಧುಗಳ ನಾಶವೂ, ವ್ಯಸನವೂ, ಆಗು ತ್ತದೆ. ಹೀಗೆಯೇ ಇನ್ನೂ ಅನೇಕ ಶ್ಲೋಕಗಳಿಂದ ಕೆಟ್ಟ ಸ್ವಪ್ನಗಳ ಫಲವನ್ನು ವರ್ಣಿಸಿರುತ್ತಾನೆ.

## ರಾಜನೀತಿಯು.

ಐದನೆಯ ಕಲ್ಲೋಲದ ಆರನೆಯ ತರಂಗದಲ್ಲಿ ರಾಜನೀತಿಯನ್ನು ಪ್ರಕಟಿಸಿರುತ್ತಾನೆ. ಪ್ರಜೆಗಳೂ, ರಾಜರೂ, ಒಂದೇ ಆಕಾರವುಳ್ಳವರಾ ಗಿದ್ದರೂ, ರಾಜರಲ್ಲಿ ಕೆಳಗಿನ ಗುಣಗಳು ಅವಶ್ಯಬೇಕು. ಕ್ಷಮಾ, ಧೈರ್ಯ, ಆಜ್ಞಾ, ದಾನ, ಪರಾಕ್ರಮ, ಯಾವಾಗಲೂ ಪ್ರಜೆಗಳಲ್ಲಿ ಅನುರಾಗವುಳ್ಳ ವನಾಗಿ ಅವರ ರಕ್ಷಣೆಯಲ್ಲಿ, ತತ್ಪರನಾಗಿಯೂ, ನಮ್ರನಾಗಿಯೂ, ಇರ ತಕ್ಕ ರಾಜನೇ ಬಹಳ ಸಂಪತ್ತನ್ನು ಹೊಂದುತ್ತಾನೆ.

ಯಾವ ರಾಜನು ತನ್ನ ಪ್ರಜೆಗಳನ್ನು ದಯಾದಾಕ್ಷಿಣ್ಯಾದಿಗುಣಗ ಳಿಂದ ಕೂಡಿಕೊಂಡು ಪಾಲನೆಯನ್ನು ಮಾಡುವದಿಲ್ಲವೋ ಅಂತಹ ರಾಜನ ಜನ್ಮವು ವ್ಯರ್ಥವಾದದ್ದು. ಪ್ರಜೆಗಳ ಪೀಡನೆಯ ಸಂತಾಪದಿಂದ ಹುಟ್ಟಿದ ಅಗ್ನಿಯು ರಾಜರ ಕುಲವನ್ನೂ, ಸಂಪತ್ತನ್ನೂ, ಪ್ರಾಣಗಳನ್ನೂ, ಸುಡದೇ ಎಂದಿಗೂ ಬಿಡುವದಿಲ್ಲವು. ರಾಜನು ಉತ್ತಮ ಗುಣಗಳಿಂದ ಕೂಡಿ ಕೊಂಡದ್ದೇ ಆದರೆ ಪೂರ್ಣಚಂದ್ರನನ್ನು ನೋಡಿ ಜನರು ಹೇಗೆ ಸಂತು ಷ್ಟರಾಗುತ್ತಾರೆಯೋ ಹಾಗೆಯೇ ಪ್ರಜೆಗಳೂ ಕೂಡ ರಾಜನನ್ನು ನೋಡಿ ಸಂತೋಷಪಡುತ್ತಾರೆ. ರಾಜರೂ, ಪ್ರಜೆಗಳೂ ಕೂಡ ಕೆಳಗೆ ಬರೆದ ಗುಣಗಳನ್ನು ಆಯಾಯ ಪ್ರಾಣಿಗಳಿಂದ ಅವಶ್ಯವಾಗಿ ಕಲಿಯತಕ್ಕದ್ದು.

ಸಿಂಹಾದೇಕಂ ಬಕಾದೇಕಂ ।
ಷಿದ್ವಾಚ್ಚತ್ವಾರಿ ಕುಕ್ಕುಟಾತ್ ॥

ವಾಯುಸಾತ್ಪಂಚ ಶಿಕ್ಷೇಚ್ಛ ।
ಷಟ್‌ಶುನ ಸ್ತ್ರೀಣಿ ಗರ್ದಭಾತ್ ॥

ಸಿಂಹದಿಂದ ಒಂದು ಗುಣವನ್ನೂ, ಬಕದಿಂದ ಒಂದು, ಕೋಳಿಯಿಂದ ನಾಲ್ಕು ಗುಣಗಳನ್ನೂ, ನಾಯಿಯಿಂದ ಆರು ಗುಣಗಳನ್ನೂ, ಕಾಗೆಯಿಂದ ಐದು ಗುಣಗಳನ್ನೂ, ಮೂರು ಗುಣಗಳನ್ನು ಕತ್ತೆಯಿಂದಲೂ, ಕಲಿಯತಕ್ಕದ್ದು.

## ಗುಣಗಳು ಯಾವವೆಂದರೆ

ಸಣ್ಣಕಾರ್ಯವನ್ನೇ ಆಗಲಿ, ದೊಡ್ಡ ಕಾರ್ಯವನ್ನೇ ಆಗಲಿ ಮಾಡಬೇಕೆಂದು ಇಚ್ಛಿಸಿದರೆ ಸರ್ವ ಪ್ರಯತ್ನಗಳಿಂದ ಅದನ್ನು ಮಾಡಬೇಕು. ಈ ಗುಣವನ್ನು ಸಿಂಹದಿಂದ ಕಲಿಯಬೇಕಾಗುತ್ತದೆ. ಯಾಕಂದರೆ ಸಿಂಹವು ಒಂದು ಸಾರೆ ಬೇಟೆಯ ಉದ್ಯೋಗವನ್ನು ಕೈಕೊಂಡರೆ ಅದು ತನ್ನ ಕಾರ್ಯವನ್ನು ಸಾಧಿಸದೆ ಎಂದಿಗೂ ಬಿಡುವದಿಲ್ಲವು. ಮತ್ತು ಬಕಪಕ್ಷಿಯು ಧ್ಯಾನದಿಂದ ಇದ್ದುಕೊಂಡು ಹೇಗೆ ತನ್ನ ಕಾರ್ಯವನ್ನು ಸಾಧಿಸುತ್ತದೆಯೋ ಹಾಗೆಯೇ ಮನುಷ್ಯನಾದವನು ತನ್ನ ಇಂದ್ರಿಯಗಳನ್ನು ಸಂಯಮನಮಾಡಿಕೊಂಡು ದೇಶಕಾಲಗಳನ್ನು ತಿಳಿದು ತನ್ನ ಕಾರ್ಯಗಳನ್ನು ಸಾಧಿಸತಕ್ಕದ್ದು. ಈ ಗುಣವನ್ನು ಬಕಪಕ್ಷಿಯಿಂದ ಕಲಿಯತಕ್ಕದ್ದು. ಪ್ರಾತಃಕಾಲದಲ್ಲಿ ಏಳುವಿಕೆ, ಯುದ್ಧವು, ಬಂಧುಗಳಲ್ಲಿ ಪ್ರೀತಿಯು, ಭೋಗವು, ಈ ನಾಲ್ಕು ಗುಣಗಳನ್ನು ಕೋಳಿಯಿಂದ ಕಲಿಯತಕ್ಕದ್ದು ಕೋಳಿಯು ತಪ್ಪದೆ ನಾಲ್ಕು ಘಂಟೆಗೆ ಏಳುವದು. ಯುದ್ಧವನ್ನು ಪ್ರಾರಂಭಮಾಡಿದರೆ ಪ್ರಾಣಾಂತ್ಯದವರೆಗೂ ಕಾದಾಡುತ್ತದೆ. ಒಂದು ಸ್ಥಾನದಲ್ಲಿ ಆಹಾರವನ್ನು ಕಂಡರೆ ತನ್ನ ಬಳಗವನ್ನೆಲ್ಲ ಕರಿಯುತ್ತದೆ. ಈ ಗುಣಗಳು ಬಹಳ ಮಹತ್ವವಾದಂಥವುಗಳು ಇರುತ್ತವೆ. ಕಾಗೆಯು ನೀಚಪ್ರಾಣಿಯಷ್ಟೇ? ಇದರಿಂದಲೂ, ಮನುಷ್ಯನು ಐದು ಗುಣಗಳನ್ನು ಕಲಿಯಬೇಕಾಗುತ್ತದೆ. ಗೂಢವಾದ ಮೈಥುನ, ದೂರದೃಷ್ಟಿಯು, ಯೋಗ್ಯಕಾಲದಲ್ಲಿ ಮನೆಯಸಂಗ್ರಹ, ಯಾವಾಗಲೂ ಕಾಳಜಿಯಿಂದಿರುವಿಕೆಯು, ಆಲಸ್ಯವಿಲ್ಲದ ವರ್ತನವು. ಮತ್ತು ನಾಯಿಯಿಂದಬಹಳ ತಿನ್ನಬೇಕೆಂಬುವ ಆಶೆಯು, ಅಲ್ಪಸಂತುಷ್ಟತೆ, ಒಳ್ಳೇ ನಿದ್ರೆಯು, ತೀವ್ರ ಏಳುವಿಕೆಯು, ಸ್ವಾಮಿನಿಷ್ಠತೆಯು, ಶೂರತನವು, ಈ ಆರುಗುಣಗಳನ್ನು ಕಲಿಯತಕ್ಕದ್ದು. ಕತ್ತೆಯಿಂದಬಳ್ಳೇ ದಣಿದಿದ್ದರೂ ಭಾರವನ್ನು ಹೊರು

ವಿಕೆ, ಶೀತೋಷ್ಣಗಳ ಸಹನತೆಯು, ಯಾವಾಗಲೂ ತೃಪ್ತಿಯಿಂದಿರುವಿಕೆಯು, ಈ ಮೂರು ಗುಣಗಳನ್ನು ಅವಶ್ಯವಾಗಿ ಕಲಿಯತಕ್ಕದ್ದು. ಈ ಗುಣಗಳನ್ನು ರಾಜರೂ ಪ್ರಜೆಗಳು ಕೂಡಿಯೇ ಕಲಿಯತಕ್ಕದ್ದು.

ಮತ್ತು ಹಾಲನ್ನು ಅಪೇಕ್ಷಿಸುವಂಥ ಮನುಷ್ಯನು ಆಕಳಿನ ಕೆಚ್ಚಲವನ್ನು ಕೊಯಿದರೆ ಅವನಿಗೆ ಹೇಗೆ ಹಾಲು ಸಿಗುವದಿಲ್ಲವೋ, ಹಾಗೆಯೆ ಪ್ರಜೆಗಳನ್ನು ಪೀಡಿಸುವಂತಹ ರಾಜನ ರಾಷ್ಟ್ರವು ವೃದ್ಧಿಯಾಗುವದಿಲ್ಲವು.

ದುಷ್ಟಸ್ಯದಂಡಸ್ಸು ಜನಸ್ಯರಕ್ಷಾ । ನ್ಯಾಯೇನಕೋಶಸ್ಯಚ ಸಂಪ್ರವೃದ್ಧಿಃ॥
ಅಪಕ್ಷಪಾತಾರ್ಥಿಷು ರಾಷ್ಟ್ರರಕ್ಷಾ । ಪಂಚೈವಯಜ್ಞಾಕಥಿತಾನೃಪಾಣಾಂ॥

ಅಂದರೆ ಸತ್ಪುರುಷರ ರಕ್ಷಣೆಯು, ನ್ಯಾಯಮಾರ್ಗದಿಂದ ಕೋಶರಕ್ಷಣೆಯು, ಪ್ರಜೆಗಳಲ್ಲಿ ಪಕ್ಷಪಾತವನ್ನು ಮಾಡದಿರುವಿಕೆಯು, ಮತ್ತು ರಾಷ್ಟ್ರರಕ್ಷಣವು. ಈ ಐದು ರಾಜನಿಗೆ ಯಜ್ಞಗಳೆಂದು ಹೇಳಲ್ಪಟ್ಟಿವೆ. ಹೀಗೆಯೇ ರಾಜನಾದವನು ದುರ್ಗವನ್ನು ಹೇಗೆ ಕಟ್ಟಿಸಬೇಕು. ಸೇನೆಯು ಹೇಗೆ ಇರಬೇಕು. ಸಾಮ, ದಾನ, ಭೇದ, ದಂಡಗಳೆಂಬ ಚತುರೋಪಾಯಗಳನ್ನು ಹೇಗೆ ಪಾಲಿಸಬೇಕೆಂಬುವ ವಿಷಯಗಳೇ ಮೊದಲಾದವುಗಳನ್ನು ನೂರಾರು ಶ್ಲೋಕಗಳಿಂದ ಕವಿಯು ಬಹು ಮನೋಹರವಾಗಿ ವರ್ಣಿಸಿರುತ್ತಾನೆ. ನಾಲ್ಕನೆಯ ಲೇಖಾಂಕದಲ್ಲಿ ಅನೇಕ ಮಹತ್ವದ ವಿಷಯಗಳು ಬರುತ್ತವೆಂಬುವದನ್ನು ವಾಚಕರು ತಿಳಿಯತಕ್ಕದ್ದು.

ಸಶೇಷ



# ವೀರಶೈವ ವರ್ಣಭೇದ ವಿದಾರಿಕಾ.

ಲೇಖಾಂಕ ೫.

## ಪ್ರಮಾಣ ಪರೀಕ್ಷಣ

ಶರ್ಮರು ವೀರಶೈವರಲ್ಲಿ ವರ್ಣಭೇದವನ್ನು ಸಾಧಿಸಲಿಕ್ಕೆ ಉದಾಹರಿಸುವ ಪ್ರಮಾಣಗಳನ್ನೀಗ ಒಡೆದು ನೋಡುವ. ಶ್ರೀಮತ್ಪಾರಮೇಶ್ವರಾಗಮದ ಹದಿನೇಳನೆಯ ಪಟಲದ ವಾಕ್ಯಗಳನ್ನವರು ಮುಂದಿಟ್ಟಿರುವರು. ಸಂದರ್ಭದಿಂದ ತಪ್ಪಿಸಿ ಉದಾಹರಿಸಿದ ಶ್ಲೋಕಗಳು ನಿಚ್ಚಳವಾಗಿ ಬೋಧವನ್ನುಂಟುಮಾಡವು. ನಾನೀಗ ಸಸಂದರ್ಭವಾಗಿ ಅವುಗಳನ್ನು ಇಳಿಸಿ ಶರ್ಮರ ಕೋರಿಕೆಗೆ ಅವೆಷ್ಟು ಮಾತ್ರವೂ ಬೆಂಬಲವನ್ನೀಯವೆಂಬುದನ್ನು ತೋರಿಸುವೆನು.

ಶ್ರೀ ದೇವ್ಯುವಾಚ— ಸರ್ವಜ್ಞ ಸಕಲಾಧಾರ ಕಾಮಾರೇ ಕರುಣಾರ್ಣವ। ಪಾಹಿ ಶಂಕರ ಪಾಪಾರೇ ಭಕ್ತಾರ್ತಿಭಯನಾಶನ ।೧॥ ವದಲೋಕೋಪಕಾರಾಯ ವೀರಶೈವೇ ವಿಶೇಷಕಂ। ಇತಃಪರತರಂಕಿಂವಾಚಾಸ್ತಿಚೇದ್ಬ್ರೂಹಿಮೇ ಪ್ರಭೋ ॥೨॥ ಈಶ್ವರಉವಾಚ ಸಾಧುಸಾಧ್ವಿಮಹಾಭಾಗೇವಕ್ಷ್ಯಾಮಿಶೃಣುಸುವ್ರತೇ ॥ ರಹಸ್ಯಂಗೋಪನೀಯಂಹಿ ತವಸ್ನೇಹೇನ ಸುಂದರಿ ॥೩॥ ಶುದ್ಧಶೈವಂ ಮಿಶ್ರಶೈವಂ ಮಾರ್ಗಶೈವಂ ತೃತೀಯಕಂ॥ ಚತುರ್ಥಂವೀರಶೈವಂಚ ಪಂಚಮೋವಾಂತರಸ್ತಥಾ ॥೪॥ ತತ್ರತತ್ರವಿಭೇದೇನ ಜಾತಿಭೇದೇನ ಕೆನಚಿತ್। ವರ್ತಂತೇಲಿಂಗಿನೋದೇವಿ ಜಾತಿಕರ್ಮಸಮಾಶ್ರಿತಾಃ ॥೫॥ ಬ್ರಾಹ್ಮಣಾ ವೀರಶೈವಸ್ಥಾಃಶಿಖಾಯಜ್ಞೋಪವೀತಿನಃ। ಲಿಂಗರುದ್ರಾಕ್ಷಭಸ್ಮಾಂಕಾಬ್ರಹ್ಮಕರ್ಮಸಮಾಶ್ರಿತಾಃ ॥೬॥ ಶಿವಾಚಾರರತಾನಿತ್ಯಂ ಲಿಂಗಪೂಜಾ ಪರಾಯಣಾಃ। ಶಿವಾರಾಧ್ಯಾ:ಸದಾದೇವಿ ಮಮಾತಿ ಪ್ರಿಯಕಾರಿಣ: ॥೭॥ ಶುದ್ಧಶೈವಾಃಸಮಾಖ್ಯಾತಾಗೃಹಸ್ಥಾ ಗೃಹಿಣೀಯುತಾಃ। ಮಿಶ್ರಶೈವಾ ಮಹಾದೇವಿ ಕ್ಷತ್ರಿಯಾ ವೈಶ್ಯಶೂದ್ರಜಾಃ ॥೮॥ ಸುಶೀಲಾಚಾರಸಂಪನ್ನಾಃ ಶೀಲವಂತಶ್ಚಲಿಂಗಿನಃ। ಲಿಂಗಾರ್ಚನ ಪರಾನಿತ್ಯಮನ್ನದಾನಪರಾಯಣಾಃ ॥೯॥ ಅನ್ಯದೇವಾನ್ನಮಸ್ಕೃತ್ಯತೀರ್ಥಯಾತ್ರಾದಯಸ್ತಥಾ। ತತ್ತತ್ಕುಲಃಚಾರರತಾ ಗುರುಭಕ್ತಿರತಾಃ ಶಿವೇ ॥೧೦॥ ಶೂದ್ರಾದಿ ಭೇದ ಜಾತೀನಾಂಜಾತಿಕರ್ಮಾನುವರ್ತಿನಃ॥ ಏತೇವೈ ಮಿಶ್ರಶೈ

ವಾಶ್ಚಮಿಶ್ರಕರ್ಮಸಮಾಯುತಾಃ ॥ ೧೧ ॥ ಮಾರ್ಗಶೈವಾಪ್ರವಕ್ಷ್ಯೇಮಿಸ ಮಾನಾಚ್ಛೃಣುಪಾರ್ವತಿ ॥ ಪುತ್ರಮಿತ್ರಕಲತ್ರಾದಿ ಸಹಿತಾ ವಿಭವಾನ್ವಿತಾಃ॥ ದ್ವಿದೈವಾರಾಧನಪರಾರಾಜಾನೋಲಿಂಗಿನಃಪರೇ ॥ ರಕ್ಷಣಂ ಸರ್ವವರ್ಣಾ ನಾಂ ಯುದ್ಧೇ ಶತ್ರುವಧಸ್ತಥಾ ॥ ೧೦ ॥ ದುಷ್ಟ ಪಕ್ಷಿ ಮೃಗಾಣಾಂಚದು ಷ್ಟಾನಾಂ ಶಾಸನಂ ನೃಣಾಂ॥ ಅವಿಶ್ವಾಸಶ್ಚಸರ್ವತ್ರವಿಶ್ವಾಸಃಶಿವಯೋ ಗೀಷು ॥ ೧೪ ॥ ಸ್ತ್ರೀಸಂಸರ್ಗಾದಿ ಕಾಲೇಷು ಚಸೂರಕ್ಷಣಮೇವಚ ॥ ಸ ದಾಸಂಚಾರಿತೈಶ್ಚಾರೈರ್ಲೋಕ ವೃತ್ತಾಂತವೇದನಂ ॥ ೧೨ ॥ ಸದಾ ವಸ್ತ್ರಭ ರಣಂಚೈವಭಸ್ಮಕಂಚುಕಧಾರಣಂ ॥ ಗಜಾಶ್ವಾರೋಹಣಂ ದೇವಿ ದೇವಬ್ರಾ॥ ಹ್ಮಣ ಪೂಜನಂ। ದಾನಾನಿಶಿವಭಕ್ತೇ ಭ್ಯೋಬ್ರಾಹ್ಮಣೇ ಭ್ಯೋ ವಿಶೇಷತಃ ರಾಜ್ಞಾಂ ಶಿವಾಗಮಸ್ಥಾನಾಮೇಷಧರ್ಮಃಸನಾತನಃ ॥ ೧೭ ॥ ಬಹವೋ ಮಾರ್ಗಶೈವಾಶ್ಚವೀರಶೈವಾನುವರ್ತಿನಃ॥ ಶೈವಭೇದೇಷುಚಾನ್ಯೇಷು ವೀರ ಶೈವೋತ್ತಮೋತ್ತಮಃ ॥ ೧೮ ॥ ತತ್ರಾಪಿಬಹವೋದೇವಿ ಭೇದಾಃಸಂತಿ ನಿ ರಾಮಯ ॥ ಕೇಚಿದ್ಧ ಜಂತ್ಯನ್ಯದೈವಂ ಕೇಚಿನ್ನೇಚ್ಛಂತಿ ಪಾರ್ವತಿ ॥ ೧೯ ॥ ಕೇಚಿದ್ವಿವಾಹಮಿಚ್ಛಂತಿಕೇಚಿನ್ನೇಚ್ಛಂತಿಸ್ತ್ರೀಜೇ॥ ಸ್ತ್ರಿಯಸ್ತು ಲಿಂಗಧಾರಿ ಣ್ಯಃಪುರುಷಾವಿಷ್ಣುಸೇವಕಾಃ ॥ ೨೦ ॥ ಪುರುಷಾ ಲಿಂಗಿನಃ ಕೇಚಿದ್ವೈಷ್ಣ ವ್ಯಸ್ತುಸ್ತ್ರಿಯಸ್ತಥಾ॥ತಯೋರಹಂಗತಿಶ್ಚೈವಮುಕ್ತಿರಿತಿರುಭಯೋಃಸಮಾ॥೨೧॥ ಶಿರೋಮುಂಡಂ ಮುಖೇಮಂತ್ರಃಕಂಠೇರುದ್ರಾಕ್ಷಧಾರಣಂ। ಕಾಷಾಯಾಂ ಬರಧಾರೀಚಭಸ್ಮೋದ್ಧೂಲನಸಂಯುತಃ ॥೨೨॥ ಲಿಂಗಪೂಜಾಸದಾದೇವಿ ತೇಚೈವಾಂತರಶೈವಿನಃ। ಅಲಿಂಗಿಸ್ಪೃಷ್ಟಮನ್ನಂಚ ಭುಂಜತೇ ಲಿಂಗಧಾರಿ ಣಃ ॥ ೨೩ ॥ ಜಲಪಾನಂಚ ಸರ್ವತ್ರ ಮಹಾಶೈವಾಹಿ ಪಾರ್ವತಿ। ಲಿಂಗಾ ರ್ಚನಂ ಸದಾದೇವಿ ಭಸ್ಮರುದ್ರಾಕ್ಷ ಧಾರಿಣಃ ॥ ೨೪ ॥ ಷಡಕ್ಷರಜಪಸ್ತೇಷಾಂ ಹ್ಯನುಶೈವಾಃಪ್ರಕೀರ್ತಿತಾ ಪಿತಾರಜಕಾ ವೇಶ್ಯಾಃ ಕುಲಾಲಾಸ್ತಿಲ ಘಾತ ಕಾಃ ॥ ೨೫ ॥ ವೈಶ್ಯಾದ್ಯಾಶ್ಚಾಂತ್ಯಜಾತ್ಯಂತಾಸ್ತೇವೈಚಾಂತರಶೈವಿನಃ ॥

ಇದನ್ನೀಗ ಕನ್ನಡಿಸುವ:— ಶ್ರೀ ಪಾರ್ವತಿಯೆಂಬವಳು. ಎಲ್ಲವನು ಬಲ್ಲ, ಎಲ್ಲಕ್ಕು ನೆಲೆಯಾದ ಕಾಮನಿಗೆ ಹಗೆಯಾದ ಕನಿಕರದ ಕಡಲಾದ ಪಾಪಕ್ಕೆ ಪಗೆಯಾದ ಭಕ್ತರ ನೋವನ್ನೂ ಅಂಜಿಕೆಯನ್ನೂ ಅಣಗಿಸುವ ಶಂಕರನೆ ಕಾಯಿ. ವೀರಶೈವದಲ್ಲಿ (ಭಕ್ತರಮೇಲಣ ಅನುಕಂಪದಿಂದ ನೀ ನುಂಟುಮಾಡಿದ) ವಿಶೇಷವನ್ನು ಆಜ್ಞಾಪಿಸು. ಅದರಿಂದ ಲೋಕಹಿತ ಮುಂಟು. ಪ್ರಭುವೆ ಲೋಕೋಪಕಾರಕ್ಕಿಂತಲು ಹೆಚ್ಚಿನದಾವುದುಂಟು. ಹೇಳು.

ಪರಮಾತ್ಮನೆಂದನು— ಚಾಗು! ಗರತಿ ಧನ್ಯೆ. ಸುವ್ರತೆ ಸುಂದರಿ ನೀನೀಗ ಕೇಳಿದ ವಿಷಯವು ರಹಸ್ಯವಾಗಿದೆ. ಗೋಪ್ಯವಾಗಿದೆ. ಆದೊಡೆಯು ನಿನ್ನ ಮೇಲಣ ಪ್ರೀತಿಯುಂಟಲ್ಲ. ಹೇಳುವೆನು ಕೇಳು.

ಶುದ್ಧ ಶೈವವು, ಮಿಶ್ರ ಶೈವವು, ಮೂರನೆಯದು ಮಾರ್ಗಶೈವವು ನಾಲ್ಕನೆಯದು ವೀರಶೈವವು. ಅವಾಂತರ ಶೈವವೆ ಐದನೆಯದು. ಎಲೌ ದೇವಿ ಲಿಂಗಿಗಳು ಒಂದೊಂದು ಜಾತಿಭೇದದಿಂದ ಅಲ್ಲಲ್ಲಿ ವರ್ತಿಸಿ ಜಾತಿ ಕರ್ಮವನ್ನಾಚರಿಸುವರು. ಅದರಿಂದೀ ಭೇದಗಳಾಗಿವೆ· ಅವುಗಳ ವಿವರವನ್ನು ಕೇಳು.

ಬ್ರಾಹ್ಮಣರು ವೀರಶೈವಸ್ಥರಾಗಿ [ವೀರಶೈವ ಧರ್ಮದ ಬೆಂಬಳಿವಿಡಿದು ವೀರಶೈವರಾಗಿ ಅಲ್ಲ] ಜುಟ್ಟುಜನಿವಾರಗಳನ್ನಿಟ್ಟು ಲಿಂಗರುದ್ರಾಕ್ಷಭಸ್ಮಗಳನ್ನು ತಳೆದು ಬ್ರಹ್ಮಚರ್ಯವನ್ನಾಚರಿಸುತ್ತ ಶಿವಾಚಾರದಲ್ಲಿ ರತರಾಗಿ ನಿತ್ಯವೂ ಲಿಂಗಪೂಜಾಪರಾಯಣರಪ್ಪೊಡೆ ಅವರು ಶಿವಾರಾಧ್ಯರು. ಗೃಹಿಣಿಯಿಂದೊಡಗೂಡಿದ ಆ ಗೃಹಸ್ಥರು ಶುದ್ಧ ಶೈವರು. ಎನಗವರು ಅತ್ಯಂತ ಪ್ರೀತಿಯನ್ನಾಚರಿಸುವರು.

ಕ್ಷತ್ರಿಯ ವೈಶ್ಯ ಶೂದ್ರರು ಸುಶೀಲಾಚಾರಸಂಪನ್ನರಾಗಿ ಶೀಲವಂತರೆನಿಸಿ ಲಿಂಗಿಗಳಾಗಿ ಲಿಂಗಾರ್ಚನಪರರು. ನಿತ್ಯವು ಅನ್ನದಾನ ಪರಾಯಣರು· ಶಿವೇತರ ದೇವತೆಗಳನ್ನೂ ನಮಸ್ಕರಿಸುತ್ತ ತೀರ್ಥಯಾತ್ರೆಗಳನು ಮಾಡುತ್ತ ಆಯಾ ಕುಲಾಚಾರಗಳಲ್ಲಿ ಬಳಕೆಯುಳ್ಳವರಾಗಿ ಗುರುಭಕ್ತಿಯನ್ನು ಆಚರಿಸುತ್ತ ಶೂದ್ರಾದಿ ಜಾತಿಕರ್ಮಗಳನ್ನು ಮಾಡುವರಾಗಲು ಮಿಶ್ರಶೈವರು. ಇವರು ಮಿಶ್ರಕರ್ಮವನ್ನನುಸರಿಸುವರಹುದರಿಂದೆ ಮಿಶ್ರ ಶೈವರೆನಿಸುವರು

ಪಾರ್ವತಿ ಮಾತು ಬೆಳಸದೆ ಮಾರ್ಗಶೈವವನ್ನಿನ್ನು ಹೇಳುವೆನು ಕೇಳು. ಹೆಂಡಿರು ಮಕ್ಕಳು ಗೆಳೆಯರು ಇಂತಿವರೆಲ್ಲರೊಡಗೂಡಿ ವಿಭವದಿಂದೆ ಬಾಳುತ್ತ ಅನೇಕ ದೇವರುಗಳನ್ನು ಆರಾಧಿಸುತ್ತ ಲಿಂಗಿಗಳಾದ ರಾಜರುಗಳು ಮತ್ತು ಉಳಿದ ಕೆಲರು ಮಾರ್ಗಶೈವರು. ಈ ಅರಸರುಗಳಿಗೆ ಸರ್ವ ವರ್ಣಗಳನ್ನು ಕಾಪಾಡುವುದು ಕಾಳಗದಲ್ಲಿ ಹಗೆಗಳನು ಕೊಲ್ಲುವುದು, ಕೆಡುಕಾದ ಹಕ್ಕಿಗಳನ್ನು ಮತ್ತು ಮೃಗಗಳನ್ನು ಹಾಗು ದುಷ್ಟ ಮನುಷ್ಯರನ್ನು ಶಾಸನ ಮಾಡುವುದು ಧರ್ಮವಾಗಿದೆ. ಎಲ್ಲರಲ್ಲಿ ಅವಿಶ್ವಾಸವು ಆದರೆ ಶಿವಯೋಗಿಗಳಲ್ಲಿ ಮಾತ್ರ ವಿಶ್ವಾಸವು ಅವರಿಗುಂಟು.

ಋತುಕಾಲವಲ್ಲಿಯಲ್ಲದೆ ಸ್ತ್ರೀಸಂಗವಿಲ್ಲ. ಅವರು ಚಮೂರಕ್ಷಣಾದಿ ರಾಜ ಧರ್ಮನಿರತರಾಗಿ ವಿಶೇಷವಾಗಿ ಶಿವಭಕ್ತರಿಗೆ ದಾನವನ್ನು ಮಾಡುವರು. ಶಿವಾಗಮಸ್ಥರಾದ ರಾಜರುಗಳಿಗೆ ಇಂತಿದೆ ಸನಾತನ ಧರ್ಮವು. ಬಹು ಜನ ಮಾರ್ಗಶೈವರು ವೀರಶೈವವನ್ನು ಅನುವರ್ತಿಸುವರು.

ಇತರ ಶೈವಭೇದಗಳಲ್ಲಿ ವೀರಶೈವವು ಉತ್ತಮೋತ್ತಮವಾದುದು. ಆದ ರಲ್ಲಿಯೂ ಬಹಳ ಭೇದಗಳಿವೆ. ಕೇಳು. ಕೆಲರು ಅನ್ಯದೈವಪೂಜೆಯನು ಮಾಡುವರು. ಕೆಲರು ಅದನ್ನು ಒಪ್ಪುವುದಿಲ್ಲ. ಕೆಲರು ಮದುವೆಯಾ ಗುವರು. ಕೆಲರು ಆಗುವುದಿಲ್ಲ. ಸ್ತ್ರೀಯರು ಲಿಂಗಧಾರಿಗಳಾಗಿ ಅವರ ಗಂಡಂದಿರು ವಿಷ್ಣುಪೂಜಕರಾಗಿಹರು. ಇನ್ನು ಕೆಲವರು ಗಂಡಸರು ಲಿಂಗಿಗಳಾಗಿರಲು ಅವರ ಹೆಂಡಿರು ವೈಷ್ಣವಿಯರಾಗಿಯರು: ಅವರೀರ್ವ ರಿಗೂ (ವೈಷ್ಣವರ ಹೆಂಡಿರಾದ ಸ್ತ್ರೀಯರಿಗೂ, ವೈಷ್ಣವಿಯರ ಗಂಡಂದಿ ರಾದ ಪುರುಷರಿಗೂ) ನಾನೆ ಗತಿಯು. ಅವರೀರ್ವರಲ್ಲಿ ನನ್ನ ಅಕ್ಕರವು ಸಮನಾಗಿಯೆ ಇಹುದು. ಬೋಳುದಲೆಯು ಬಾಯಲ್ಲಿ ಮಂತ್ರವು, ಕೊರ ಲಲ್ಲಿ ರುದ್ರಾಕ್ಷಮಾಲೆಯು, ಕಾವಿಯ ಬಟ್ಟೆಗಳು, ಮೈಯಲ್ಲಿ ಭಸ್ಮಧಾರ ಣವು, ಆವಾಗಲು ಲಿಂಗಪೂಜೆಯು, ಇಂತಿವೆಲ್ಲವು ಅಂತರ ಶೈವಿಗಳ ಚಿಹ್ನಗಳು. ಇವರು ಲಿಂಗಿಗಳಾಗಿಹರಾದರು ಲಿಂಗವಿಲ್ಲದವರು ಮುಟ್ಟಿದ ಅನ್ನವನ್ನು ಉಂಬರು. ನೀರನ್ನು ಎಲ್ಲರ ಕೈಯಿಂದಲು ಕೊಂಬರು.

ಪಾರ್ವತಿ ಮಹಾಶೈವರು ಸದಾ ಲಿಂಗಾರ್ಚನವ ಮಾಡುವರು. ಭಸ್ಮರುದ್ರಾಕ್ಷಗಳನ್ನು ಧರಿಸುವರು. ಷಡಕ್ಷರ ಜಪವನ್ನು ಮಾಡುವರು.

ನಾವಲಿಗರು, ಅಗಸರು, ಸೂಳೆಯರು, ಕುಂಬಾರರು, ಗಾಣಿಗರು ಇಂತಿವರೆಲ್ಲ ಅನುಶೈವರೆನಿಸುವರು.

ವೈಶ್ಯರಿಂದ ಅಂತ್ಯಜಾತಿಯ ವರೆಗೆ ಅಂತರ ಶೈವರೆಂದು ಪ್ರಸಿದ್ಧ ರಹರು. *

ಶರ್ಮರು ಈ ಶ್ಲೋಕಗಳನ್ನು ಕನ್ನಡಿಸಿದುದನ್ನು ೪ನೆಯ ಸಂಪುಟದ ೧೧ನೆಯ ಅಂಕದಲ್ಲಿಂದ ಕೊಡುವೆನು. "ವೀರಶೈವಾಂತರ್ಗತ ಶುದ್ಧ

---

ಟೀಪು— ಈ ಅನುವಾದವನ್ನು ಸಮಗ್ರ ಪಾರಮೇಶ್ವರಾಗಮದ ಸಂದರ್ಭಕ್ಕನುಸರಿಸಿ ಮಾಡಿರುವೆನು. ಬರಿ ಹದಿನೇಳನೆಯ ಪಟಲಕ್ಕನುಸರಿಸಿ ಅಲ್ಲ. ಅದರಿಂದ ದೇವಿಯ ಪ್ರಶ್ನದ ಅನುವಾದ ಹೊಸತೆನಿಸಬಹುದು.

ಶೈವರೇ ಲಿಂಗಧಾರಿ ಬ್ರಾಹ್ಮಣರೆಂತಲೂ ವೀರಶೈವಾಂತರ್ಗತ ಮಿಶ್ರಶೈವರೇ ಲಿಂಗಧಾರಿ ಕ್ಷತ್ರಿಯ ಶೂದ್ರರೆಂತಲೂ, ವೀರಶೈವಾಂತರ್ಗತ ಮಾರ್ಗಶೈವರೇ ಲಿಂಗಧಾರಿ ರಾಜರೆಂತಲೂ, ವೀರಶೈವಾಂತರ್ಗತ ನಾಪಿತ ರಜಕಾದಿಗಳೇ ಅವಾಂತರ ಶೈವರೆಂತಲೂ ಇವುಗಳಿಂದ ಸಿದ್ಧವಾಗುತ್ತದೆ.

ಶರ್ಮರು ಸಂದರ್ಭವನ್ನು ಬದಿಗಿಟ್ಟು ಈ ಶ್ಲೋಕಗಳನ್ನು ಎತ್ತಿಕೊಂಡರು. ಕಾರ್ಯವು ಸಾಧಿಸದರಿಂದಲೊ ಅಥವಾ ಶ್ಲೋಕಾರ್ಥವು ತಿಳಿಯದರಿಂದಲೊ ಅವುಗಳ ಕನ್ನಡದ ಅನುವಾದವು ತಪ್ಪು ಆಗಿದೆ. ಮೂಲಶ್ಲೋಕಗಳಲ್ಲಿಯ "ವೀರಶೈವಸ್ಥಾಃ ಶಿವಾಗಮಸ್ಥಾನಾಂ" ವೀರಶೈವಾನು ವರ್ತಿನಃ ಎಂಬ ಶಬ್ದಗಳ ಅರ್ಥವು "ವೀರಶೈವಾಂತರ್ಗತ" ಎಂದು ಆಗಲಾರದು. ವಾಚಕರ ಬೋಧಕ್ಕಾಗಿ ಈ ಶ್ಲೋಕಗಳನ್ನು ಶರ್ಮರ ಪದ್ಧತಿಯಿಂದ ಕನ್ನಡಿಸಿ ಅವುಗಳ ನಿಜವಾದ ಅರ್ಥವನ್ನು ಇಲ್ಲಿ ಕೊಡುವೆನು. ಶುದ್ಧಶೈವಾಂತರ್ಗತ ಲಿಂಗಧಾರಿ ಬ್ರಾಹ್ಮಣರೇ ಶುದ್ಧ ಶೈವದೊಳಗಣ ವೀರಶೈವರೆಂತಲೂ ಮಿಶ್ರಶೈವದೊಳಗಣ ಲಿಂಗಧಾರಿ ಕ್ಷತ್ರಿಯ ಶೂದ್ರರು ಮಿಶ್ರಶೈವಗತ ವೀರಶೈವರೆಂತಲೂ, ಮಾರ್ಗಶೈವದೊಳಗಣ ಲಿಂಗಧಾರಿರಾಜರೇ ಮಾರ್ಗಶೈವಗತ ವೀರಶೈವರೆಂತಲೂ ಅವಾಂತರ ಶೈವಗತ ಲಿಂಗಧಾರಿಗಳೇ ಆ ಅವಾಂತರ ಶೈವರೊಳಗಣ ವೀರಶೈವರೆಂತಲೂ ಸಿದ್ಧವಾಗುವುದು.

ಸಮಗ್ರ ಸಂದರ್ಭದ ಕನ್ನಡವನ್ನು ಮೇಲೆ ಕೊಟ್ಟಿರುವೆನು. ನಾನು ಕೊಟ್ಟಿರುವ ಅನುವಾದವು ನಿಜವು, ಶರ್ಮರದು ನಿಜವಲ್ಲವೆಂಬುದನ್ನು ಚರ್ಚಿಸಿ ತೋರಿಸುವೆನು.

ಶರ್ಮರ ಅಭಿಪ್ರಾಯವು (ಅದೊಂದೆ ಪಟಲವನ್ನು ಹಿಡಿದರೂ) ಹದಿನೇಳನೆಯ ಪಟಲದ ಪ್ರಶ್ನೋತ್ತರ ವಿರುದ್ಧವು. ಶ್ರೀ ಪಾರ್ವತಿಯು "ವದ ಲೋಕೋಪಕಾರಾಯ ವೀರಶೈವೇ ವಿಶೇಷಕಂ। ಇತಃ ಪರತರಂಕಿಂವಾಚಾಸ್ತಿಚೇದ್ಬ್ರೂಹಿಮೇಪ್ರಭೋ" ಲೋಕೋಪಕಾರಕ್ಕಾಗಿ ವೀರಶೈವದಲ್ಲಿ ವಿಶೇಷಕವನ್ನು ಹೇಳು. ಇದಕ್ಕಿಂತಲು ಹೆಚ್ಚಿನದೇನಾದರು ಇದ್ದರೆ ಪ್ರಭುವೆ ನನಗೆ ತಿಳಿಸು. ಎಂದು ಕೇಳಿದುದಕ್ಕೆ ಪರಶಿವನು ಶುದ್ಧಶೈವ, ಮಿಶ್ರಶೈವ, ಮಾರ್ಗಶೈವ, ವೀರಶೈವ, ಅವಾಂತರಶೈವವೆಂಬ ಐದು ಶೈವಗಳನ್ನು ಹೇಳಿರಲು ಶರ್ಮರು ವೀರಶೈವಾಂತರ್ಗತವಾಗಿ ನಾಲ್ಕು ಶೈವಗ

ಳನ್ನು ವಿವರಿಸುವದು ಸರಿಹೊಂದದು. ನಾನು ಕೊಟ್ಟ ಅರ್ಥದಲ್ಲಿ ನಾಲ್ಕು ಶೈವಗಳಲ್ಲಿಯೂ ವೀರಶೈವವು ವ್ಯಾಪಕವಾಗಿ ತೋರುತ್ತಿರುವುದರಿಂದ ವ್ಯಾಪ್ಯಶೈವಗಳು ನಾಲ್ಕು ವ್ಯಾಪಕ ವೀರಶೈವವು ಒಂದು ಅಂತು ಪಂಚ ಶೈವಗಳು ಪರಮೇಶ್ವರನ ಉತ್ತರಾನುಗುಣದಿಂದ ವ್ಯಕ್ತವಾದಪುವು.

ಇದಕ್ಕೆ ಪಾರ್ವತಿಯು ವೀರಶೈವದಲ್ಲಿ ವಿಶೇಷವನ್ನು ಕೇಳಿರಲು ಪರಮೇಶ್ವರನು ಹೇಳಿದ ಪಂಚಶೈವವೆಂಬುದಕ್ಕೆ ಪ್ರಶ್ನಾನುಗುಣದಿಂದ ವೀರಶೈವದೊಳಗಣ ಚತುರ್ವಿಧವೆಂದು ತಿಳಿಯೋಣ ಎಂದರೆ ಅದಾಗದು. ಪರಮೇಶ್ವರನ ಉತ್ತರವು ಸಿದ್ಧಾಂತವಾಗಿದೆ. ತದನುಗುಣವಾಗಿ ಪ್ರಶ್ನದಲ್ಲಿ ಅರ್ಥಹಚ್ಚಬೇಕು. ಪ್ರಶ್ನವು ಶಿಷ್ಯವಾಕ್ಯವು ಉತ್ತರವು ಗುರುವಾಕ್ಯವು. ಹಾಗಾದರೆ ಪ್ರಶ್ನವನ್ನು ಮಾಡಿದ ಪಾರ್ವತಿಗೆ ಕೇಳಲಿಕ್ಕೆಯೆಬರಲಿಲ್ಲವೇನು ಎನಬಹುದು. ಪಾರ್ವತಿಯು ಪ್ರಶ್ನದ ಭಾವವನ್ನು ಸಮಗ್ರ ಆಗಮದ ಸಂದರ್ಭದಿಂದ ಇದೇಈಗ ಸ್ಪಷ್ಟೀಕರಿಸುವೆನು. ಈಗ ಒಂದೇ ಪಟಲವನ್ನು ನೋಡಿದರೂ ಆಕೆಯ ಪ್ರಶ್ನವು ಉತ್ತರಕ್ಕೆ ಅಸಂಗತವಾಗಿಲ್ಲ. ವೀರಶೈವದಲ್ಲಿಯ ವಿಶೇಷವನ್ನು ಕೇಳಃವಳು. ಆ ವಿಶೇಷವು ನಾಲ್ಕು ಶೈವಗಳಲ್ಲಿಯೂ ವ್ಯಾಪ್ತಿಯನ್ನುಳ್ಳುದಾಗಿರುವುದು. ಅಂದರೆ ಭಕ್ತಾದಿ ಐಕ್ಯಾಂತಷಟ್‌ಸ್ಥಲಾತ್ಮಕವಾಗಿ ವೀರಶೈವವನ್ನು ಹೇಳಿದೆ. ಇದು ಅದರ ಶುದ್ಧರೂಪವು. ಮತ್ತಾವ ಬಗೆಯಿಂದಾದರು ಅದು ಇರುವುದೊ? ಷಟ್ಸ್ಥಲ ವೀರಶೈವಸಿದ್ಧಾಂತವು ಪ್ರಸಿದ್ಧವು. ಹೀಗೆ ಪ್ರಸಿದ್ಧವಲ್ಲದೆ ಮತ್ತಾವುದೊಂದು ಬಗೆಯಿಂದ ವೀರಶೈವವಿದ್ದರೆ ಅದನ್ನು ತಿಳಿಸು ಅದು ಪ್ರಸಿದ್ಧವಿಲ್ಲ ಎಂಬುದು ಪ್ರಶ್ನಾರ್ಥವು. ಇದು "ವಿಶೇಷಕಂ" ಎಂಬ ಪದದಿಂದ ವ್ಯಕ್ತವಾಗಿದೆ. ಪಾರ್ವತಿಯು "ವೀರಶೈವೇ ವಿಶೇಷಂ ವದ" ಎನ್ನದೆ ವಿಶೇಷಕಂವದ" ಎಂದಿರುವಳು. "ಪ್ರಾಗಿವಾತ್ಕಃ ಪಾ ೫—೩—೭೦ ಎಂಬ ಸೂತ್ರದಿಂದ ವಿಹಿತವಾದ 'ಕ' ಪ್ರತ್ಯಯದ ಒಂದು ಅರ್ಥವು. "ಅಜ್ಞಾತೇ" ೫—೩—೭೩ ಎಂಬ ಸೂತ್ರ ಅಜ್ಞಾತ ಅಥವಾ ಅಪ್ರಸಿದ್ಧವಾದ ಎಂದಿರುವುದು. ಈ ಪ್ರಶ್ನಕ್ಕೆ ಪರಮಾತ್ಮನು ವೀರಶೈವವು ತನ್ನ ಶುದ್ಧರೂಪದಿಂದ ಒಪ್ಪುತ್ತಿರುವುದಲ್ಲದೆ ಶುದ್ಧಾದಿ ಚತುರ್ವಿಧ ಶೈವದಲ್ಲಿ ವ್ಯಾಪಿಸಿ ಅವುಗಳಿಗೆ ಉತ್ಕರ್ಷವನ್ನುಂಟುಮಾಡುತ್ತಿರುವುದೆಂದು ಹೇಳಿದನು. ಅಂದರೆ ವಾತೂಲಾಗಮದ ಹತ್ತನೆಯ ಪಟಲದಲ್ಲಿಯೂ ಸೂಕ್ಷ್ಮಾಗ್ರಮದ ಏಳನೆಯ ಪಟಲದಲ್ಲಿಯೂ, ಪಾರಮೇಶ್ವರಾಗಮದ ಏಳನೆಯ ಪಟಲದ

ಲ್ಲಿಯೂ ವಿವರಿಸಿದ ಶುದ್ಧಾದಿ ಶೈವರು ಷಟ್‌ಸ್ಥಲವಲ್ಲದಿದ್ದರು ಗುರುಲಿಂಗಜಂಗಮ ಭಕ್ತಿಯುಕ್ತರಾಗಿ ಲಿಂಗಿಗಳಾದಲ್ಲಿ ಆಯಾ ಶೈವದಲ್ಲಿ ಅಧಿಕರಹರೆಂಬ ಭಾವವು. ತಾಮ್ರಾದಿ ಧಾತುಗಳು ಸುವರ್ಣಮಿಶ್ರವಾದರೆ ಹೇಗೆ ಉಚ್ಚಭಾವವನ್ನು ಹೊಂದುವುವೊ ಅಂತೆ ಶುದ್ಧಾದಿ ಶೈವಗಳು ವೀರಶೈವಾನುವರ್ತನದಿಂದ ಎಂಬರ್ಥವು. ಈ ಭಾವವು ಉತ್ತರವಾಕ್ಯಗಳೊಳಗಿನ "ವೀರಶೈವಸ್ಥಾಃ" ಶಿವಾಗಮಸ್ಥಾನಾಂ" ವೀರಶೈವಾನುವರ್ತಿನಃ ಎಂಬ ಶಬ್ದಗಳಿಂದ ಹೊಳೆಯುತ್ತಿದೆ. ವೀರಶೈವಸ್ಥಃ ಎಂದರೆ ವೀರಶೈವದಲ್ಲಿರುವ ಎಂಬ ಅರ್ಥವು ವೀರಶೈವನೆಂಬ ಅರ್ಥವಲ್ಲ. ಉದಾಹರಣೆ ಗ್ರಾಮಸ್ಥಃ" ಗ್ರಾಮದಲ್ಲಿರುವವನು ಅಲ್ಲದೆ ಗ್ರಾಮವಲ್ಲ— "ಬ್ರಾಹ್ಮಣಾ ವೀರಶೈವಸ್ಥಾಃ" ಎಂದರೆ ವೀರಶೈವದಲ್ಲಿ ನಿಂತ=ವೀರಶೈವವನ್ನು ಅನುವರ್ತಿಸುವ ಬ್ರಾಹ್ಮಣರೆಂಬರ್ಥವು—"ರಾಜ್ಞಾಂ "ಶಿವಾಗಮಸ್ಥಾನಾಂ" ಶಿವಾಗಮಧರ್ಮದಲ್ಲಿ ನಿಂತ ರಾಜರ=ಕ್ಷತ್ರಿಯ ಜಾತಿಕರ್ಮಗಳನ್ನು ಮಾಡುತ್ತ ಅನುಕೂಲವಿದ್ದ ಶಿವಾಗಮ ಮಾರ್ಗವನ್ನು ಹಿಡಿದ "ವೀರಶೈವಾನುವರ್ತಿನಾಂ" ವೀರಶೈವವನ್ನು ಹಿಂಬಾಲಿಸುವ.

ಮೇಲೆ ಉದಾಹರಿಸಿದ ಲಿಂಗಿ ಗಂಡನು ಅಲಿಂಗಿ ಹೆಂಡತಿಯು ಲಿಂಗಿ ಹೆಂಡತಿಯು ಅಲಿಂಗಿ ಗಂಡನು ಅಲಿಂಗಿಗಳಲ್ಲಿ ಲಿಂಗಿಗಳು ಉಂಣುವುದು ಇತ್ಯಾದಿ ವಾಕ್ಯಗಳಿಂದಲು ಇದೆ ಅರ್ಥವು ವ್ಯಕ್ತವಾದಪುದು. ಇವು ಶುದ್ಧ ಷಟ್ಸ್ಥಲಾತ್ಮಕ ವೀರಶೈವದ ಉದಾಹರಣಗಳೆಂದು ಆರು ಅನ್ನಲಾರರು. ಶರ್ಮರು ಮಾತ್ರ ಅನ್ನಬಹುದು!!! ಆದುದರಿಂದ ಈ ಪ್ರಮಾಣಗಳು ಸಂದರ್ಭವನ್ನು ತಪ್ಪಿದರು ಶರ್ಮರಿಗೆ ಅನುಕೂಲವಿಲ್ಲ.

ಇನ್ನು ಮಹಾಸಂದರ್ಭಾನುಸಾರವಾಗಿ ಹದಿನೇಳನೆಯ ಪಟಲವನ್ನು ವಿಚಾರಿಸುವ. ಹದಿನಾರನೆಯ ಪಟಲದ ಬೊಡ್ಡಿಯಲ್ಲಿ ಅಮ್ಮನಾಡಿದುದು "ಉಕ್ತಂ ಮೇಸಕಲಂ ವೀರಶೈವಭೇದಗತಂ ಮತಂ। ತದವಾಂತರ ಭೇದಶ್ಚಕಥಿತೋ ಭವತಾನಘ॥ ನತತ್ರ ಮೇಸ್ತಿವೇದ್ಯಾಂಶಃ ಸಂಶಯೋವಾ ಮಹೇಶ್ವರ॥೩—೪॥ ಪಾಪಹರನೆ ನೀನೆನಗೆ ವೀರಶೈವವೆಂಬ ಶೈವಭೇದಗಳೊಳಗಿನ (ಮುಖ್ಯ) ಮತವನ್ನು ಸಮಗ್ರವಾಗಿ ಬೋಧಿಸಿದೆ. ಅದರ ಅವಾಂತರ ಭೇದವನ್ನೂ ಅರುಹಿದೆ. ಅಲ್ಲಿ ನಾನು ತಿಳಿಯಬೇಕಾದ ಅಂಶವೇನು ಉಳಿದಿಲ್ಲ. ಕೇಳಿದುದರಲ್ಲಿ ಸಂಶಯವಾದರು ಇಲ್ಲ. ಮಹೇಶನೆ.

ಹಿಂದಿನ ಹದಿನೈದು ಪಟಲಗಳಲ್ಲಿ ಪರಮಾತ್ಮನು ಒಡೆದು ಹೇಳಿದ ವೀರಶೈವ ಧರ್ಮವನ್ನು ಲಾಲಿಸಿ ತನ್ನ ಸಂಶಯಗಳು ಬಯಲಾದುವು. ಆ ಧರ್ಮದ ಅಂಗೋಪಾಂಗಗಳಲ್ಲಿ ತಿಳಿಯಬೇಕಾದ ಅಂಶವೇನು ಉಳಿಯಲಿಲ್ಲ ಎಂದು ಬ್ರಹ್ಮವಿದ್ಯಾಸ್ವರೂಪಿಣಿಯಾದ ಅಮ್ಮನು ಅಂದಳು. ಆದುದರಿಂದ ೧೭ ನೆಯ ಪಟಲದಲ್ಲಿ ಅಂಕುರಿಸಿದ ಪ್ರಶ್ನವು ಶುದ್ಧ ವೀರಶೈವ ಮಾರ್ಗವುದಲ್ಲ. ಈ ಪ್ರಶ್ನಕ್ಕೆ ಬೀಜವೇನು? ಪಾರಮೇಶ್ವರಾಗಮದ ಮೊದಲನೆಯ ಪಟಲದಲ್ಲಿ "ವೀರಶೈವಮತಂ ಸದ್ಯೋಭೋಗಮೋಕ್ಷೈಕ ಸಾಧನಂ। ಸರ್ವೋತ್ತಮಂ ಮಮಮತಂ ಯತಃ ಸರ್ವೋತ್ತಮೋಸ್ಮ್ಯಹಂ॥ ನವೀರಶೈವ ಸದೃಶಂ ಮತಮಸ್ತಿ ಜಗತ್ರಯೇ॥ ಸರ್ವಭೋಗ ಪ್ರದಂ ಪುಣ್ಯಂ ಶಿವಾಸಾಯುಜ್ಯದಾಯಕಂ॥೩೯-೪೦॥ ಎಂದು ಪರಮಾತ್ಮನು ಮೂರು ಲೋಕಗಳಲ್ಲಿಯು ವೀರಶೈವಕ್ಕೆ ಸರಿಯಾದ ಮತವಿಲ್ಲ ಸದ್ಯದಲ್ಲಿಯೆ ಭೋಗ ಮೋಕ್ಷಕರವಾಗಿ ತನ್ನಂತೆಯೆ ಸರ್ವೋತ್ಕೃಷ್ಟವಾದುದೆಂದು ಶಿವನು ಹೇಳಿದನು. ಆರನೆಯ ಪಟಲದಲ್ಲಿ 'ಭಗವಂತನ ಸರ್ವಜ್ಞತಾತೃಪ್ತಿರನಾದಿಬೋಧಃ ಸ್ವತಂತ್ರ ನಿತ್ಯಮಲುಪ್ತಶಕ್ತಿಃ। ಅನಂತ ಶಕ್ತಿಶ್ಚವಿಭೋರ್ವಿಧಿಜ್ಞಾಃ ಷಡಾಹುರಂಗಾನಿ ಮಹೇಶ್ವರಸ್ಯ॥ ಎಂಬ ಸರ್ವಜ್ಞತ್ವತೃಪ್ತಿ ಅನಾದಿಬೋಧ, ಸ್ವತಂತ್ರತಾ, ಅಲುಪ್ತಶಕ್ತಿತ್ವ ಅನಂತಶಕ್ತಿತ್ವವೆಂಬ ಪರಮಾತ್ಮನ ಷಡಂಗಗಳು ಭಕ್ತನ ಭಕ್ತಿ, ನಿಷ್ಠಾ, ಅವಧಾನ, ಅನುಭವ, ಆನಂದ, ಸಮರಸವೆಂಬ ಷಡಂಗಗಳು ಆಗಿ ಶಿವನೇ ವೀರಶೈವ ಭಕ್ತನು ವೀರಶೈವ ಭಕ್ತನೆ ಶಿವನು ಎಂತಹನೆಂಬುದನ್ನು ವಿವರಿಸಿ ಲಿಂಗಾಂಗ ಸಾಮರಸ್ಯವನ್ನರುಹಿದನು. ಏಳನೆಯ ಪಟಲದಲ್ಲಿ ಕೃಪಾಣಧಾರಾಗಮನಂ ವ್ಯಾಘ್ರಕರ್ಣಾವಲಂಬನಂ। ವೀರಶೈವ ಮತಂ ದೇವಿ ಸತ್ಯಂತ್ವವಿದುಷಾಂಮಮ॥೯೩॥ ದೇವಿ ತಿಳಿಗೇಡಿಗಳಿಗೆ ವೀರಶೈವ ಮತವು ಕತ್ತಿಯಬಾಯ್ಗೆ ಪಾಯ್ದಂತೆ ಹುಲಿಯ ಕಿವಿಯಲ್ಲಿ ಹಿಡಿವಂತೆ ಎಂದು ಅದರ ಗಂಭೀರತೆಯನ್ನು ತೋರಿಸಿರುವನು. ಶಿವಭಕ್ತಿಯು ವೀರಶೈವಕ್ಕೆ ಪರಮ ಸಾಧನವೆಂದು "ನಭಕ್ತೇಃ ಸಾಧನಂ ಪರಂ" ೧೦ ನೆಯ ಪಟಲದ ೪೯ ನೆಯ ಶ್ಲೋಕದಲ್ಲಿ ಹೇಳಿದನು. ಆ ಭಕ್ತಿಯು ಸಾಮಾನ್ಯ ಜನಕ್ಕೆ ದೊರೆವುದಲ್ಲ. "ಅಸ್ಪೃಷ್ಟವಿಷಯುವನ್ಯೇ ಹೋಯೋ ಮೋಹಃ ಶುದ್ಧ ಸಾತ್ವಿಕಃ ಮಯಿಶ್ವರೇ ಮಹಾದೇವಿ ಸದ್ಭಕ್ತಿರಭಿಧೀಯತೇ ॥೪೭॥ ಭಕ್ತಿರ್ವರ್ಣಿತಾಪಿತಾದೇವಿ ಕಾವ ಧೇನುಃ ಸುರದ್ರುಮಃ ಕರಸ್ಥಮಮೃತಗ್ರಾಸಂ

ವಿದ್ಧಿ ಭಕ್ತಿಂಕುಲೇಶ್ವರಿ ||೪೩|| ಆರನೆಯ ಪಟಲ ವಿಷಯುಗಳ ಲೋಲುಪ ತೆಯು ಇಲ್ಲದೆ ಪರಮಾತ್ಮನಲ್ಲಿ ಶುದ್ಧಸಾತ್ವಿಕ ಮೋಹವೆ ಭಕ್ತಿಯು. ಭಕ್ತನಿಗೆ ಭಕ್ತಿಯೆಂತಾಯಿತಂದೆ, ಕಲ್ಪತರು, ಕಾಮಧೇನುವು. ಅದುವೆ ಅವನಕ ಯ್ಯೊಳಗಣ ಅಮೃತದ ಉಣಿಸು. ಅಂದಬಳಿಕ ಸಾಮಾನ್ಯರಾದ ಪುಣ್ಯ ವಂತರಿಗೆ ಈ ಶಿವಪಥಕ್ಕೆ ಬರಲು ಮಾರ್ಗವನ್ನು ತನ್ನ ಪತಿಯು ಕಲ್ಪಿ ಸಲಿ. ಎಂಬ ಕಾರುಣ್ಯ ಭಾವವೆ ಈ ಪ್ರಶ್ನಕ್ಕೆ ಬೀಜವು. ಈ ಕರುಣಾ ಭಾವವನ್ನು "ವಿಶೇಷಕಂ" ಎಂಬ ಪದದೊಳಗಣ 'ಕ' ಪ್ರತ್ಯಯವು ಬೋಧಿ ಸುತ್ತಿದೆ. ಕ ಪ್ರತ್ಯಯಕ್ಕೆ ' ಅನುಕಂಪಾಯಾಮ್ ' ೫-೩-೭೬ ಎಂಬೀ ಸೂತ್ರವು ದಯಾರ್ಥವನ್ನು ಹೇಳುವುದು. ಅದರಿಂದಲೆ ಶ್ರೀಪಾರ್ವತಿಯು ಪ್ರಶ್ನದೊಳಗಣ ಪದಲೋಕೋಪಕಾರಾಯ ವೀರಶೈವೆ ವಿಶೇಷಕಂ ಇತಃ ಪರತರಂ ಕಿಂವಾಚಾಸ್ತಿ ಚೇದ್ಬ್ರೂಹಿಮೆ ಪ್ರಭೋ" ಎಂಬ ಶ್ಲೋಕ ವನ್ನು ಮೇಲೆ ಬರೆದ ರೀತಿಯಲ್ಲಿ ಕನ್ನಡಿಸಿರುವೆನು. ಆ ಶ್ಲೋಕದೊಳ ಗಣ "ಇತಃ ಪರತರಂ ಕಿಂವಾಚಾಸ್ತಿ ಚೇದ್ಬ್ರೂಹಿಮೇ ಪ್ರಭೋ" ಇದ ಕ್ಕಿಂತಲು ಹೆಚ್ಚಿನದೇನಾದರು ಇದ್ದರೆ ಹೇಳು ಪ್ರಭೋ" ಎಂಬ ಶಬ್ದ ಗಳ ಅರ್ಥವು ಶುದ್ಧ ವೀರಶೈವದಲ್ಲಿ ನಾನು ಈ ವರೆಗೆ ಕೇಳಿದುದಕ್ಕೆ ಮಿಗಿಲಾದುದೇನಿದ್ದರೆ ಹೇಳು ಎಂಬುದಲ್ಲ. ಶುದ್ಧ ವೀರಶೈವದಲ್ಲಿ ತಾನು ತಿಳಿಯತಕ್ಕ ಅಂಶವು ಉಳಿದಿಲ್ಲವೆಂದು ಅಮ್ಮನವರು ಹೇಳಿರುವರು. ಆದು ದರಿಂದ ಅಲ್ಲಿ ಪ್ರಶ್ನವೂ ಸಂಶಯವೂ ಸಂಭವಿಸುವುದಿಲ್ಲ ಆದುದರಿಂದ ಇತಃ ಎಂಬುದನ್ನು ಹಿಂದಿನ ಶ್ಲೋಕದಲ್ಲಿ "ಪದಲೋಕೋಪಕಾರಾಯ" ಎಂದು ನಿರ್ದೇಶವಾದ ಲೋಕೋಪಕಾರಕ್ಕೆಯೆ ಸಂಬಂಧಿಸಿ ಲೋಕೋ ಪಕಾರಕ್ಕಿಂತಲು ಎಂದು " ಅಸ್ತಿಚೇತ್ " ಇದ್ದರೆ ಎಂಬುವ ಚೇತ್‌ಶಬ್ದ ವನ್ನು ಸಂಭಾವನೆಯಲ್ಲಿ ಗ್ರಹಿಸದೆ ಅಸಂದೇಹೇಪಿ ಸಂದೇಹ ವಚನಾ ರ್ಥವಾಗಿ ಹಿಡಿದಿರುವೆನು " ಮುಗಿಲನ್ನು ಸುತ್ತಬಲ್ಲರೆ ಶಿವನನ್ನರಿಯದೆ ಮುಕ್ತಿಯಾಗಬಹುದು " ಎಂಬ ಮೊದಲಾದ ಪ್ರಯೋಗಗಳು "ಚೇತ್" ಎಂಬ ಸಂಸ್ಕೃತದ ಮತ್ತು 'ರೆ' ಎಂಬ ಕನ್ನಡ ಶಬ್ದದ ಅಸಂದೇ ಹೇಪಿ ಸಂದೇಹಾರ್ಥದ ಉದಾಹರಣಗಳಾಗಿವೆ.

ಆದುದರಿಂದ ಈ ಹದಿನೇಳನೆಯ ಪಟಲದ ತಾತ್ಪರ್ಯವು ಅಷ್ಟಾ ವರಣ ಪಂಚಾಚಾರಯುಕ್ತರಾದ ಶುದ್ಧವೀರಶೈವರಲ್ಲಿ ಜಾತಿ ಭೇದವನ್ನು ಹೇಳುವುದಲ್ಲ. ಶುದ್ಧಾದಿಶೈವರು ತಂತಮ್ಮ ಮಾರ್ಗಗಳಲ್ಲಿ ವೀರಶೈವ

ವನ್ನು ಅನುಸರಿಸಿದರೆ ಕ್ರಮೇಣ ಧನ್ಯರಾಗುವರೆಂಬುದು ಅಂದರೆ ಲಿಂಗ ವಂತನು ಅನ್ಯದೇವರನ್ನು ಪೂಜಿಸಬಾರದು. ಅನ್ಯಧರ್ಮದ ಬಳಕೆಯನ್ನು ಮಾಡಬಾರದು ಮಾಡಿದುದೆ ಆದರೆ ನರಕವು ಎಂಬ ಶಾಸ್ತ್ರ ಪ್ರಮಾಣ ಗಳು ಶುದ್ಧವೀರಶೈವರು ಹಾಗೆ ನಡೆದುದಾದರೆ ಪತಿತರಾಗುವರು ಎಂಬುವು. ಅಲ್ಲದೆ ಇತರಶೈವರು ಲಿಂಗಧಾರಿಗಳಾಗಲಿಕ್ಕೆ ಬಾರದೆನ್ನು ವುದಿಲ್ಲ. ಹಾಗಾದರೆ ಕಡಿಮೆಯ ಧರ್ಮದವನು ಹೆಚ್ಚಿನ ಧರ್ಮದ ಅನು ಷ್ಠಾನದಿಂದ ಪತಿತನಾಗುವನಲ್ಲ ಎಂದರೆ ಸರ್ವಧರ್ಮವು ಪರಮೇಶ್ವರ ವಾಕ್ಯದಿಂದಲೆ ಸಿದ್ಧವಾಗುವುದು. ಪರಮೇಶ್ವರನು ಶುದ್ಧ ಮಿಶ್ರಮಾರ್ಗ ಶೈವರು ಲಿಂಗಧಾರಣವನ್ನು ಮಾಡಬಹುದೆಂದು ಅನುಜ್ಞೆಯಿತ್ತಿತ್ತುದ ರಿಂದ ಅವರಿಗೆ ಪಾತಿತ್ಯವಿಲ್ಲ.

ನಾನಿಲ್ಲ ವಿವರಿಸಿದುದನ್ನು ಬಿಟ್ಟು ಶರ್ಮರ ಅಭಿಪ್ರಾಯದಂತೆ ಈ ಗ್ರಂಥಗಳನ್ನು ತಿಳಿದರೆ ಪಾರಮೇಶ್ವರಾಗಮದ ಪೂರ್ವಾಪರಸಂದರ್ಭಕ್ಕೆ ವಿರೋಧವಾಗುವುದು. ಪ್ರಥಮ ಪಟಲದಲ್ಲಿ ಅಷ್ಟಾವರಣ ಪಂಚಾಚಾರ ಯುಕ್ತವಾದ ಶುದ್ಧವೀರಶೈವವನ್ನು ಕುರಿತು ಯಸ್ಯಾಸ್ತಿಭಕ್ತಿರೀಶಾನಿ ವೀರ ಶೈವ ಮತಾಶ್ರಯೇ। ಭಕ್ತಿಮಾತ್ರ ಪವಿತ್ರಾಹಿ ಸರ್ವ ಯೇವಾಧಿಕಾ ರಿಣಃ ॥೬೦॥ ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಯೇ ಚಾನ್ಯ ಜಾತಯಃ। ಲಿಂಗಧಾರಣ ಮಾತ್ರೇಣ ಶಿವಾಯೇವನ ಸಂಶಯಃ ॥೫೭॥ ಎಂಬೀಶ್ಲೋಕಗಳಿಂದ ಶುದ್ಧವೀರಶೈವ ದೀಕ್ಷೆಗೆ ಅತಿತೀವ್ರವಾದ ಶಿವ ಭಕ್ತಿಯುಳ್ಳವರೆಲ್ಲರು ಅಧಿಕಾರಿಗಳೆಂತಲೂ ವಿಧ್ಯುಕ್ತ ದೀಕ್ಷೆಯನ್ನು ಹೊಂ ದಿದ ಬಳಿಕ ಅವರೆಲ್ಲರನ್ನು ಸಮನಾಗಿಯೇ ಶಿವತ್ವ ತೋರುವದೆಂತಲೂ ಹೇಳಿರುವನು.

೫ನೆಯ ಪಟಲದಲ್ಲಿ "ಯೇಪಂತಿ ಜಾತಿಭೇದ ಸ್ತ್ವಾನೇಕವಚ್ಛಿವಯೋ ಗಿನಃ। ಪಶ್ಯೇದಖಿಲ ಜಾತಿಸ್ಥಾನೇಕ ಮಾತ್ರ ಸಹೋದರಾನ್ ॥೪೦॥ ನಸ್ತ್ರೀ ಭೇದೋ ನಪುಂಭೇದೋ ಜಾತಿವರ್ಣಾಶ್ರಮಾದಿಕಮ್। ಸರ್ವಾತೀತ ಮಿದಂ ವಿದ್ಧಿ ವೀರಶೈವಮಿದಂ ಮಮ ॥೪೧॥ ಯದನಾಯಾಸತೊ ದೇವಿ ಭೋಗಮೋಕ್ಷೌ ಕರಸ್ಥಿತೌ। ಧಾರಣಾನ್ಮಮಲಿಂಗಸ್ಯ ಪೂಜನಾಚ್ಚ ನಿರಂ ತರಮ್ ॥೪೨॥ ನಾನ್ಯೈತ್ಕರ್ಮ ನ ವೈ ಕಾರ್ಯಂ ವ್ರತಮೇತನ್ಮಹತ್ ಶಿವೆ॥ ಇದರ ಕನ್ನಡವು— ಜಾತಿಭೇದಗಳಾವವುಂಟೊ ಅವನ್ನೆಲ್ಲ (ವೀರ ಶೈವ ದೀಕ್ಷಿತರಲ್ಲಿ) ಒಂದೇ (ಅತಿವರ್ಣ ಅಥವಾ ಅಪ್ರಾಕೃತ) ಜಾತಿಯೆಂದು

ಶಿವಯೋಗಿಯು ಅರಿಯಬೇಕು. (ದೀಕ್ಷಾಪೂರ್ವದಲ್ಲಿ) ಭಿನ್ನ ಭಿನ್ನ ಜಾತಿಯವರಿದ್ದವರನ್ನು (ಶಿವದೀಕ್ಷೆಯೆಂಬ ಶಿವಾನುಗ್ರಹ ಶಕ್ತಿಯಾದ) ಒಂದೇ ತಾಯಿಯ ಮಕ್ಕಳು ಒಡಹುಟ್ಟಿದವರು ಎಂದು ತಿಳಿಯಬೇಕು. (೪೦) (ಪ್ರಾಕೃತಸ್ಮಾರ್ತ ಶಾಸ್ತ್ರಗಳಲ್ಲಿರುವಂತೆ) ಸ್ತ್ರೀ ಪುರುಷ ಭೇದವಿಲ್ಲ. ಸ್ತ್ರೀಯರು ಉಪನಯನಕ್ಕರ್ಹರಲ್ಲ ಪುರುಷರು ಅರ್ಹರು ಎಂದು ಅನ್ನುವಂತೆ ಅಲ್ಲ. ಎಲ್ಲರೂ ದೀಕ್ಷೆಗೆ ಅಧಿಕಾರಿಗಳು) ಜಾತಿ ವರ್ಣಾಶ್ರಮಾದಿಗಳು ಇಲ್ಲ (ಯಾವ ವರ್ಣದವನಾಗಲಿ ಯಾವ ಆಶ್ರಮದವನಾಗಲಿ ವೀರಶೈವ ದೀಕ್ಷೆಯನ್ನು ಹೊಂದಿದರೆ, ಷಟ್‌ಸ್ಥಳ ಸಂಪತ್ತಿಯನ್ನು ಹೊಂದುವನು) ಈ ನನ್ನ ವೀರಶೈವ ಮತವು ಹೆಣ್ಣು ಗಂಡೆಂಬ ಶೂದ್ರ ಬ್ರಾಹ್ಮಣನೆಂಬ ಬ್ರಹ್ಮಚಾರಿ ಸನ್ಯಾಸಿ ಎಂಬ ನಾಮ ಸೀಮೆಯನ್ನು ಮೀರಿದುದೆಂದು ತಿಳಿ (೪೧) ಏಕೆಂದರೆ, ನನ್ನ ಲಿಂಗವನ್ನು ಅಂಗದಿಂದ ವಿಯೋಗಿಸದೆ ಸಾಮರಸ್ಯಭಾವದಿಂದ ಧರಿಸುವುದು ಮತ್ತು ಪೂಜಿಸುವುದು ಎಂಬೀ ಒಂದು ಧರ್ಮದಿಂದ ಅನಾಯಾಸದಿಂದ ಭೋಗ ಮೋಕ್ಷಗಳು ಎಲ್ಲರಿಗೂ ಸಮನಿಸುವುವು (೪೨) ಪಾರ್ವತಿ, ಇಲ್ಲಿ ಎಂದೆಂದಿಗೂ ಅಗಲದ ಬೆಸುಗೆಯಿಂದ ಶಿವಲಿಂಗ ಧಾರಣ ಶಿವಲಿಂಗ ಪೂಜೆ ಎಂಬುದೊಂದೇ ಕ್ರಿಯೆಯು. ಅದರ ಹೊರತು ಮತ್ತೊಂದು ಕರ್ಮವಿಲ್ಲ, ಕಾರ್ಯವಿಲ್ಲ. ಈ ವ್ರತವು ವ್ಯಾಪಕವಾದುದು.

ಪ್ರಾಕೃತ ಧರ್ಮದಲ್ಲಿ ವ್ಯಾಪಕ ಕ್ರಿಯೆಯು ಇಲ್ಲ. ಅಲ್ಲಿಯ ಕರ್ಮಗಳು ದೇಶಕಾಲಗಳಿಂದಲು ಸ್ತ್ರೀ ಪುರುಷ ಭೇದದಿಂದಲು ಬ್ರಾಹ್ಮಣ ಶೂದ್ರತ್ವಾದಿ ವರ್ಣದಿಂದಲು ಭಿನ್ನ ಭಿನ್ನವಾಗಿ ಕರ್ಮದಿಂದ ಜಾತಿಯು ಜಾತಿಯಿಂದ ಕರ್ಮವು ಅನ್ಯೋನ್ಯವಾಗಿ ಸಂಭವಿಸುತ್ತ, ಆ ಧರ್ಮದಲ್ಲಿ ಜಾತಿ ಭೇದಗಳುಂಟು. ಈ ಅಪ್ರಾಕೃತ ಮತದಲ್ಲಿ ವ್ಯಾಪಕವಾದ ಒಂದೇ ಒಂದು ಧರ್ಮವು ಇರುವದರಿಂದ ಇಲ್ಲಿ ಜಾತಿ ಭೇದಕ್ಕೆ ಅಸ್ಪದವಿಲ್ಲೆಂಬುದು ತಾತ್ಪರ್ಯ. ಅದರಿಂದ ವ್ರತಮೇತನ್ಮಹತ್ ಈ ವ್ರತವು ಮಹತ್ತಾದುದು ಎಂಬಲ್ಲಿ ಮಹತ್ತೆಂಬ ವಿಶೇಷಣವು ವೀರಶೈವರಲ್ಲಿ ಜಾತಿಭೇದವಿಲ್ಲವೆಂಬುದಕ್ಕೆ ಹೇತು ಸೂಚಕವಾಗಿದೆ. ಇಂಥ ವಿಶೇಷಣಗಳಿಗೆ ಹೇತು ಗರ್ಭವಿಶೇಷಣವೆನ್ನುವರು.

ಮುಂದೆ ೬ನೆಯ ಪಟಲದಲ್ಲಿ ಶಿವನ ಷಡಂಗಗತೀ ಭಕ್ತನ ಷಟ್‌ಸ್ಥಳಗಳಾಗಿ ಭಕ್ತನು ಸರ್ವಪ್ರಾಕೃತ ಧರ್ಮಗಳನ್ನು ಬ್ರಾಹ್ಮಣಾದಿ ಚತುರ್ವರ್ಣಗಳನ್ನು ಮೀರಿದ ಶಿವ ಸ್ಥಿತಿಯನ್ನು ಹೇಳಿರುವನು.

ಅಂಗೋಪಾಂಗಾತ್ಮಭಾವೇನಸ್ಥಲ ಷಟ್ಕಸ್ಯನಿರ್ಣಯಂ। ಯೊ ಜಾನಾತಿ ಸ ದೇವೇಶಿ ಶಿವ ಏವ ನ ಸಂಶಯಃ॥

ಆಮರಿಯುರೊಡತಿಯೆ, ಆವನೊಬ್ಬನು ಷಟ್ಸ್ಥಲವನ್ನು ಅಂಗೋಪಾಂಗವಾಗಿ ತಿಳಿವನೊ ಅವನು ಶಿವನೇ ಎಂಬುವಲ್ಲಿ ಸಂಶಯವಿಲ್ಲ.

೭ನೆಯ ಪಟಲದಲ್ಲಿ ಬ್ರಾಹ್ಮಣಾದಿ ವರ್ಣ ವೃತ್ತಿಗಳು ಶಿವಭಾವಕ್ಕೆ ವಿರುದ್ಧವಾಗಿರುವದರಿಂದ ಅಂಗೇಂದ್ರಿಯಗಳು ಲಿಂಗೇಂದ್ರಿಯಗಳಾದ ಶರಣನು ಸರ್ವ ವೃತ್ತಿಗಳನ್ನು ಶಿವಮಯವಾಗಿಯೆ ಮಾಡಬೇಕಲ್ಲದೆ, ಬ್ರಾಹ್ಮಣಾದಿ ಪಶು ವೃತ್ತಿಯಿಂದ ಮಾಡಬಾರದೆಂದು ಹೇಳಿರುವನು.

ನ ಬ್ರಹ್ಮವೃತ್ತ್ಯಾ ನ ಕ್ಷತ್ರವೃತ್ತ್ಯಾನೊವೈಶ್ಯವೃತ್ತಿತಾ। ನ ಶೂದ ವೃತ್ತ್ಯಾ ಜೀವೇತ ಯದಿಲಿಂಗೀ ಹತಿಸುಖಮ್. ॥೫೮॥

೮ನೆಯ ಪಟಲದಲ್ಲಿ ಸರ್ವೋತ್ತಮಾಹಿ ಮನುಜಾಸ್ತತ್ರ ವಿಪ್ರಾಮಹೋತ್ತಮಾಃ। ವೇದಿನಃ ಕರ್ಮಕರ್ತಾರಸ್ತದರ್ಥಜ್ಞಾ ವಿಶೇಷತಃ ॥೭೦॥ ತತೋವೇದಾಂತ ಸಾರಜ್ಞಾಸ್ತತಃ ಸನ್ಯಾಸಿನಃ ಪರಾಃ। ತತಃ ಪಾಶುಪತಾಃ ಶ್ರೇಷ್ಠಾಲಿಂಗಿನಸ್ತತೋಧಿಕಾಃ ।೭೧॥ ತತೋಧಿಕಾ ಮಹಾಶ್ರೇಷ್ಠಾ ವೀರಮಾಹೇಶ್ವರಾಃ ಶಿವೇ। ನತೇಭ್ಯೋಽಪ್ಯಧಿಕಃ ಕಶ್ಚಿದ್ವೀರಶೈವಾಶ್ರಯಾತ್ಪರಃ ॥೭೨॥ ತಾವನ್ಮಹಿಮ ಸಂಪನ್ನೋ ವೀರಶೈವಃ ಪರಃ ಶಿವಃ ॥ –ಪ್ರಾಣಿಗಳಲ್ಲಿ ಮನುಷ್ಯರು ಸರ್ವೋತ್ತಮರು. ಅವರಲ್ಲಿ ವಿಪ್ರರು ಮಹೋತ್ತಮರು. ಆ ವಿಪ್ರರಲ್ಲಿ ವೇದವನ್ನೋದುವವರಿಗಿಂತ ವೈದಿಕ ಕರ್ಮಗಳನ್ನು ಮಾಡುವರು, ಅವರಿಗಿಂತ ವೇದಾರ್ಥವನ್ನು ತಿಳಿದವರು, ಅವರಿಗಿಂತಲು ವೇದಾಂತಸಾರವನ್ನು ಬಲ್ಲವರು, ಅವರೊಳಗೆ ಸನ್ಯಾಸಿಗಳು ಅಧಿಕರು. ಅದಕ್ಕಿಂತಲು ಪಾಶುಪತರು ಅಧಿಕರು, ಅದಕ್ಕಿಂತಲು ಲಿಂಗಧಾರಿಗಳು ಹೆಚ್ಚಿನವರು ಅವರಿಗಿಂತಲು ವೀರಮಾಹೇಶ್ವರರು ಉತ್ಕೃಷ್ಟರಹರು, ಅವರು ವೀರಶೈವವನ್ನಾಶ್ರಯಿಸಿದವರಾದುದರಿಂದ ಅವರಿಗಿನ್ನಾರು ಮಿಗಿಲಲ್ಲ. ಅಷ್ಟುಮಹಿಮೆಯಿಂದೊಡಗೂಡಿದ ವೀರಶೈವರು ಪರಶಿವಸ್ವರೂಪ ಆಗಿಹರು. ಎಂದು ವಿಪ್ರರಿಗಿಂತಲು ವೀರಶೈವನು ಅತ್ಯಧಿಕಾಧಿಕನಹನೆಂದು ಹೇಳಿರುವರು.

ಇಂತನಂತ ಪ್ರಮಾಣಗಳನ್ನು ಲೇಖ ವಿಸ್ತಾರ ಭೀತಿಯಿಂದ ಉದಾಹರಿಸುವುದಿಲ್ಲ. ಇವೆಲ್ಲವುಗಳಿಂದ ಷಟ್ಸ್ಥಲಾತ್ಮಕ ವೀರಶೈವನು ಬ್ರಾಹ್ಮಣನಿಗಿಂತ ಅಧಿಕನೂ ವಿಲಕ್ಷ ಎಂದಾಗುತ್ತಿರಲು ಅಂತಪ್ಪ ವೀರಶೈವನಲ್ಲಿ ಶೂದ್ರತ್ವವನ್ನು ಕಲ್ಪಿಸುವುದು ಹೆಡ್ಡತನವು.

ಶರ್ಮರು ಹೇಳುವ ವರ್ಣವಿಭಾಗವನ್ನು ಹಿಡಿದರೆ ಶೂದ್ರತ್ವದ ಪಟ್ಟವು ಅವರಿಗೆಯೆ ಬರುತ್ತಿದೆ. ಹೇಗೆಂದರೆ, ವೀರಶೈವ ಬ್ರಾಹ್ಮಣ್ಯಕ್ಕೆ ಲಿಂಗಧಾರಣವು ಸಾಕಾಗದು. ಅದಕ್ಕೆ ಶರ್ಮರುದಾಹರಿಸಿದ ಪ್ರಮಾಣದಿಂದಲೆ ಶಿಖಾಯಜ್ಞೋಪವೀತಗಳೂ ಬೇಕು. ಶರ್ಮರು ಇತ್ತಲಾಗಿ ಜುಟ್ಟವನ್ನು ಬೆಳೆಯಿಸಹತ್ತಿರುವರು. ಆದರೆ ಅವರ ಪೂರ್ವಜರಾರು ಜುಟ್ಟವನ್ನು ಬೆಳೆಯಿಸಿದ್ದಿಲ್ಲ. ಶರ್ಮರಾದರು ಇತ್ತಿತ್ತ ಸ್ವಬುದ್ಧಿಯಿಂದ ಬೆಳಸಿದ ಜುಟ್ಟವು ಶಾಸ್ತ್ರಸಿದ್ಧವಾದ ಶಿಖೆಯೆನಿಸಲಾರದು. ಜನ್ನಿವಾರವನ್ನು ಶರ್ಮರುತೋರಿಸಬಲ್ಲರೊ? ಜನ್ನಿವಾರವು ಉಪನಯನವಿಲ್ಲದೆ ಬರುವುದೊ? ಶರ್ಮರಿಗೆ ಉಪನಯನವಾಗಿದೆಯೊ? ಶಿವದೀಕ್ಷೆಯಿಂದ ಬಂದ ಅತಿ ವರ್ಣತ್ವವನ್ನು ಶರ್ಮರು ಒಪ್ಪುವುದಿಲ್ಲ. ಅದರಿಂದ ದೀಕ್ಷೆಯು ನಷ್ಟವಾಯಿತು. ಜನ್ನಿವಾರವಿಲ್ಲದರಿಂದ ಬ್ರಾಹ್ಮಣ್ಯವಿಲ್ಲ. ಆದುದರಿಂದ ಶೂದ್ರತ್ವದ ಪಟ್ಟವು ಶರ್ಮರಿಗೆಯೆ ಸಲ್ಲುವದು.

ಷಟ್ಸ್ಥಲ ಸಿದ್ಧ ವೀರಶೈವರಲ್ಲಿ ವರ್ಣಭೇದವಿಲ್ಲೆಂಬುದೆ ಶಾಸ್ತ್ರ ನಿಶ್ಚಯವು.

ಇನ್ನು ಶರ್ಮರ ಷಡಧ್ವಶುದ್ಧಿ ಪ್ರಮಾಣವನ್ನು ನೋಡುವ. ಶೂದಾಣಾಮನ್ಯಜಾತೀನಾಂ ಪತಿತಾನಾಂ ವಿಶೇಷತಃ। ತಥಾಸಂಕರ ಜಾತೀನಾಂ ನಾಧ್ವಶುದ್ಧಿವಿಕಥೀಯತೆ॥ ಎಂಬುದನ್ನು ಶರ್ಮರು ದಾಹರಿಸುವರು ಇದನ್ನವರು ಕ್ರಿಯಾಸಾರದ ಹದಿಮೂರನೆಯ ಉಪದೇಶದಿಂದ ೬೯ ನೇಯ ಶ್ಲೋಕವನ್ನು ತಕ್ಕೊಂಡಿರುವರು. ಕ್ರಿಯಾಸಾರಕಾರನಾದ ಶ್ರೀನೀಲಕಂಠಾಚಾರ್ಯರು ಇದನ್ನು ವಾಯುವೀಯಸಂಹಿತೆಯ ಉತ್ತರಾರ್ಧದ ಹದಿನಾಲ್ಕನೆಯ ಅಧ್ಯಾಯದಿಂದ ತನ್ನ ಹದಿಮೂರನೆಯ ಉಪದೇಶವನ್ನು ಸಂಗ್ರಹಿಸಿರುವನು. ಈ ಶ್ಲೋಕವು ಹದಿನೇಳನೆಯ ಅಧ್ಯಾಯದ ೬೭ ನೆಯದಾಗಿದೆ. ವಾಯುವೀಯ ಸಂಹಿತೆಯು ವೀರಶೈವದೀಕ್ಷೆಯಲ್ಲಿ ಹೇಳುವುದಿಲ್ಲ ಅದು ಸಂಸ್ಕಾರಾದಿ ಪದಾರ್ಥಗಳ ಸಾಮಾನ್ಯ ಬೋಧಕ್ಕೆ ಸಹಾಯವಾಗಲೆಂದು ಶ್ರೀ ನೀಲಕಂಠನು ಉದಾಹರಿಸಿರುವನಲ್ಲದೆ ಅದರಿಂದ ವೀರಶೈವದೀಕ್ಷಾಧಿಕಾರಿಗಳನ್ನು ನಿರ್ಣಯಿಸಲಿಕ್ಕೆ ಅಲ್ಲ ಹಾಗಲ್ಲದೆ ವೀರಶೈವ ದೀಕ್ಷಾಧಿಕಾರನಿರ್ಣಯಕ್ಕಾಗಿ ಈ ಉಪದೇಶವೆಂದು ಹಿಡಿದರೆ 'ನಾಧಿಕಾರಃ ಸ್ವತೋನಾರ್ಯಾಃ ಶಿವಸಂಸ್ಕಾರ ಕರ್ಮಣಿ। ನಿಯೋಗಾದ್ಭರ್ತುರಸ್ತ್ಯೇವಯದಿಭಕ್ತಾ ಮಹೇಶ್ವರೇ ಕ್ರಿಯಾಸಾರ ೧೩-೬೭ ಸ್ತ್ರೀಗೆ ಸ್ವತಃ ಶಿವಸಂಸ್ಕಾರದಲ್ಲಿ ಅಧಿಕಾರ

ವಿಲ್ಲ ಶಿವಭಕ್ತೆಯಾದರೆ ಗಂಡನ ಅಪ್ಪಣೆಯಿಂದ ಶಿವಸಂಸ್ಕಾರವನ್ನು ಹೊಂದಬಹುದು ಎಂಬ ವಾಕ್ಯದಿಂದ ನಂಮ ಹೆಂಣುಮಕ್ಕಳಿಗೆ ಶಿವಸಂಸ್ಕಾರವನ್ನು ಮಾಡಿಸುವುದು ಬಿಡುವುದು ಗಂಡನ ಅನುಜ್ಞೆಯನ್ನು ಅವಲಂಬಿಸುವುದು ಅಥವಾ 'ಅಧಿಕಾರೋಭವತ್ಯೇವ ಕನ್ಯಾಯಾ ಪಿತುರಾಜ್ಞಯಾ' ಕ್ರಿ ೧೩-೬೮ ಎಂಬ ಪ್ರಮಾಣದಿಂದ ಕನ್ಯೆಗೆ ಲಿಂಗಧಾರಣಾದಿಯನ್ನು ಮಾಡಿಸುವುದು ಬಿಡುವುದು ತಂದೆಯ ಮನಸಿನ ಮೇಲೆ ಉಳಿಯಬೇಕಾಗುವುದು. ಅಂದರೆ ಹೆಂಣುಮಗಳಿಗೆ ಲಿಂಗಧಾರಣ ಮಾಡದೆ ಇರುವುದು ಅಧರ್ಮವಾಗಲಿಕ್ಕಿಲ್ಲ.

ಕ್ರಿಯಾಸಾರಕಾರನು ಪ್ರಥಮೋಪದೇಶದ ೩೦ನೆಯ ಶ್ಲೋಕದಲ್ಲಿ 'ಅಲಂಶಂಕರಭಕ್ತಾ ನಾಮನ್ಯಶಾಸ್ತ್ರಾವ ಲೋಕನೈಃ। ಅಗಂತವ್ಯಾಗ್ರಹಾರಸ್ಯ ಪದವೀಶ್ರವಣೇನಕಿಂ॥ ಶಿವಭಕ್ತರು ಶಿವಾಗಮಂಗಳವ್ಯತಿರಿಕ್ತ ಇತರಶಾಸ್ತ್ರಗಳನ್ನು ನೋಡುವುದು ಸಾಕು. ಹೋಗಬೇಕಾಗಿರದ ಅಗ್ರಹಾರದ ಹಾದಿಯನ್ನು ಕೇಳಿ ಮಾಡುವುದೇನು ಎಂದು ಹೇಳಿ ವೀರಶೈವಕ್ಕೆ ಪರಮ ಪ್ರಮಾಣವಾದುವುಗಳು ಶಿವಾಗಮಗಳೆ ಎಂದು ಸ್ಪಷ್ಟವಾಗಿ ತೋರಿಸಿರುವನು. ತನ್ನ ಶಾಸ್ತ್ರಕ್ಕೆ ಅಧಿಕಾರಿಯು ಅದಾವನು ಎಂಬುದನ್ನು ಪಿಂಡಾದಿಜ್ಞಾನಶೂನ್ಯಾಂತಮೇಕೋತ್ತರಶತಸ್ಥಲಂ। ಷಟ್‌ಸ್ಥಲಂ ಲಿಂಗಭೇದಂಚಜಿಜ್ಞಾಸುರ್ಭಕ್ತಿಪೂರ್ವಕಂ ॥೬॥ ಅಧಿಕಾರೀ ಸವಿಜ್ಞೇಯಸ್ತ್ಯಕ್ತಸರ್ವೇಷಣಃ ಸ್ವಯಂ। ಅಷ್ಟಾಂಗಯೋಗವಾನ್‌ಜ್ಞಾನೀ ಪಂಚಾಚಾರಪರಾಯಣಃ ॥೭॥ ಭಕ್ತಮಾಹಾತ್ಮ್ಯಶುಶ್ರೂಷುಶ್ಚಿರೇಷುರ್ಮೋಕ್ಷಸಾಧನಂ॥ ಪಿಂಡಾದಿಜ್ಞಾನಶೂನ್ಯಾಂತವಾದನೂರೊಂದು ಸ್ಥಳಗಳನ್ನು ಲಿಂಗವಿವರವನ್ನೂ ಷಟ್‌ಸ್ಥಲಗಳನ್ನೂ ಭಕ್ತಿ ಪೂರ್ವಕವಾಗಿ ತಿಳಿವಲಾಲಸೆಯುಳ್ಳಾತನೂ ಅಷ್ಟಾವರಣದಲ್ಲಿ ನಿಷ್ಠನೂ ಪಂಚಾಚಾರ ಪರಾಯಣನೂ ಭಕ್ತಮಾಹಾತ್ಮ್ಯವನ್ನು ತಿಳಿಯಬೇಕೆಂಬ ಕುತೂಹಲ ಉಳ್ಳಾತನೂ ಸರ್ವಈಷಣಗಳನ್ನು ಬಿಟ್ಟವನೂ ಅಧಿಕಾರಿಯು ಎಂದು ವಿವರಿಸಿದುದರಲ್ಲಿ ತನ್ನ ಗ್ರಂಥವು ಪಂಚಾಚಾರ ನಿಷ್ಠವಾದುದೆಂದೂ ವೀರಶೈವ ಭಕ್ತರ ಭಕ್ತಿಪಥವನ್ನೇ ಹಿಂಬಾಲಿಸುವುದೆಂದೂ ಸ್ಪಷ್ಟವಾಗಿ ತಿಳಿಸಿರುವನು. ಲಿಂಗಾಚಾರ, ಶಿವಾಚಾರ, ನಿಯತಾಚಾರ, ಸದಾಚಾರ, ಗಣಾಚಾರ ಎಂಬ ಪಂಚಾಚಾರಗಳಲ್ಲಿ ಶಿವಾಚಾರವೆಂಬುದೊಂದು ಶಿವಾಚಾರಕ್ಕೆ ಲಕ್ಷಣವನ್ನು "ಅಂಗಲಿಂಗ ಸಮಾಯುಕ್ತೇ ಭಕ್ತೇಜಾತಿವಿಕಲ್ಪನಾಂ। ನೈವಕುರ್ಯಾವಿ

ತಿಸ್ಪೃಜ್ಞಾ ಶಿವಾಚಾರಃ ಸಮೀರಿತಃ" ಲಿಂಗಾಂಗ ಸಮಾಸಕ್ತರಲ್ಲಿ ಜಾತಿ ಭೇದವನ್ನು ಮಾಡೆವೆಂಬ ನಿಶ್ಚಯವೆ ಶಿವಾಚಾರವು ಎಂದು ಅಭಿಯುಕ್ತರು ಮಾಡಿರುವರು. ಈ ಲಕ್ಷಣಕ್ಕೆ "ಪಾಷಾಣಾದಿಕೃತಂ ಲಿಂಗಂ ಯದ್ವತ್ಪೂಜ್ಯಂ ಪ್ರತಿಷ್ಠಿತಂ ॥೬೫॥ ನೀಚವಂಶೋದ್ಭವಶ್ಚಾಪಿ ಭಕ್ತಶ್ಚೈದೀಶ್ವರೇ ತಥಾ ॥ ಭಕ್ತಸ್ಯಪ್ರಾಕ್ತನಂ ಜನ್ಮನಾಮ ಜಾತ್ಯಾಧಿಕಂತುವಾ ॥೬೬॥ ಪೃಚ್ಛೇದ್ವಾಕಥಯೇದ್ವಾಪಿ ಸನ್ವೈಪಾತಕಿನಾಂ ವರಃ ॥ ತಸ್ಮಾತ್ಸರ್ವಪ್ರಯತ್ನೇನ ಮಮಲಿಂಗಾಂಗ ಸಂಗಿನಂ ॥೬೭॥ ಮಾಮೇವ ಮನುತೇಯಸ್ತು ಸೋಪಿ ಮುಚ್ಯೇತ ಬಂಧನಾತ್ । ಯಸ್ತುಲಬ್ಧ್ವಾ ಗುರೋರ್ಮಂತ್ರಂ ಜಪೇಲ್ಲಿಂಗಂ ಚಪೂಜಯೇತ್ ॥೬೮॥ ವೀರಶೈವ ಪರೋದೇವಿ ಸತ್ಯಂ ನಪುರುಷೋಭುವಿ ॥ ಏವಮುಕ್ತಂ ಸಮಾಸೇನ ಲಕ್ಷಣಂ ಗುರುಶಿಷ್ಯಯೋಃ ॥೬೯॥ ವೀರಶೈವ ಗುರುವಿನಿಂದ ಯಥಾ ವಿಧಿಯಾಗಿ ಲಿಂಗಸಂಸ್ಕಾರವನ್ನು ತಿಳಿದು ಅಂಗಲಿಂಗ ಸಮೇತನಾದವನಲ್ಲಿ ಜಾತಿ ಭೇದವನ್ನು ಮಾಡಬಾರದೆಂಬ ಸೂಕ್ಷ್ಮಾಗಮದ ೫ನೆಯ ಪಟಲದ ಶ್ಲೋಕಗಳೂ, ಮೇಲೆ ಉದಾಹರಿಸಿದ ನತತ್ರ ಜಾತಿಭೇದೋಸ್ತಿ" ಮುಂತಾದ ಪಾರಮೇಶ್ವರಾಗಮದ ವಾಕ್ಯಗಳೂ ಮೂಲಪ್ರಮಾಣವಾಗಿವೆ

ಈ ಪ್ರಮಾಣಗಳ ಸಾರವನ್ನೆ ಕ್ರಿಯಾ ಸಾರಕರ್ತೃವಾದ ಶ್ರೀ ನೀಲಕಂಠಾಚಾರ್ಯನು ಹದಿನೇಳನೆಯ ಉಪದೇಶದ "ಶಿವಭಕ್ತಾ ಮಹಾತ್ಮಾನಃ ಸಂತಿ ॥ ಮುನೀಶ್ವರೇಷು ಮರ್ತ್ಯೇಷು ಬಾಹ್ಮಣೇಷು ನೃಪೇಷ್ವಪಿ ಊರುಜೇಷ್ವಪಿ ಶೂದ್ರೇಷು ಸಂಕರೇಷ್ವಪಿ ಸರ್ವಶಃ ॥೧೭॥ ವರ್ಣಾಶ್ರಮ ವ್ಯವಸಾಶ್ಚನೈಷಾಂ ಸಂತಿ ಮುನೀಶ್ವರಾಃ । ಕೇವಲಂ ಶಿವರೂಪಾಸ್ತೇ ಸರ್ವೇ ಮಾಹೇಶ್ವರಾಃ ಸ್ಮೃತಾಃ ॥೧೮॥ ಅತಿವರ್ಣಾಶ್ರಮಾಃ ಪ್ರೋಕ್ತಾಃ ಸರ್ವೇ ವೇದೇಷುಸತ್ತಮಾಃ॥ ಮುನೀಶ್ವರರಲ್ಲಿಯೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಸಂಕರ ಜಾತಿಗಳಲ್ಲಿಯೂ, ಶಿವಸಂಸ್ಕಾರವನ್ನು ಹೊಂದಿ ಮಹಾತ್ಮರಾದ ಶಿವಭಕ್ತರಿರುವರು. ಅವರಲ್ಲಿ ವರ್ಣಾಶ್ರಮ ವ್ಯವಸ್ಥೆಯು ಇಲ್ಲ. ಎಲ್ಲರು ಅತಿವರ್ಣಿಗಳೆಂದು ನುಡಿದುದರಲ್ಲಿ ತುಂಬಿರುವನು. ಪೂರ್ವದಲ್ಲಿ ಬ್ರಾಹ್ಮಣಾದಿ ಸಂಕರಾಂತವಾದ ಆವ ಜಾತಿಯವನಿದ್ದರೂ ಅಷ್ಟಾವರಣ ಪಂಚಾಚಾರಯುಕ್ತವಾದ ವೀರಶೈವ ದೀಕ್ಷೆಯಿಂದ ಪುನೀತರಾದ ಬಳಿಕ ಜಾತ್ಯಾದಿಗಳು ಉಳಿಯದೆ ಎಲ್ಲರು ಒಂದೆ ಅತಿವರ್ಣದವರಾಗುವರೆಂಬರ್ಥವು. ಇಲ್ಲಿ " ಮಹಾತ್ಮಾನಃ" ಎಂಬುದು ಹೇತುಗರ್ಭವಿಶೇಷ

ಣವು. ಮುಂದೆ ೨೩ನೆಯ ಶ್ಲೋಕದಲ್ಲಿ 'ನಮಸ್ಕಾರಸ್ತು ಭಕ್ತಾನಾಮಷ್ಟ ಕಥಿತಂ ಖಲು। ನವಮಂ ಶಿವಭಕ್ತಾನಾಂ ಗೃಹಭೋಜನ ಮೀರಿತಂ" ಲಿಂಗಾಂಗಿಗಳಾದ ಶಿವಭಕ್ತರಿಗೆ ನಮಸ್ಕಾರವನ್ನು ಮಾಡುವುದು ವೀರಶೈವ ಭಕ್ತರ ಎಂಟನೆಯ ಲಕ್ಷಣವು. ಒಂಭತ್ತನೆಯದು ಶಿವಭಕ್ತರ ಗೃಹದಲ್ಲಿ ಭೋಜನವನ್ನು ಮಾಡುವದು ಎಂದು ಹೇಳಿ ಶ್ರೀ ನೀಲಕಂಠ ಶಿವಾಚಾರ್ಯರು ಜಾತಿಭೇದವನ್ನು ವೀರಶೈವರಲ್ಲಿ ಸಂಪೂರ್ಣವಾಗಿ ನಿರಾಕರಿಸಿರುವನು. ತಾನು ಹೆಚ್ಚಿನ ಜಾತಿಯುವನು ಈ ಕನಿಷ್ಠ ಜಾತಿಯ ಭಕ್ತನಿಗೆ ನಮಸ್ಕಾರವನ್ನು ಹೇಗೆ ಮಾಡಲಿ ಅವನಲ್ಲಿ ಹೇಗೆ ಉಂಣಲಿ ಎಂದು ಸಂದೇಹ ಪಡಬಾರದು ಎಂಬುದೇ ಶ್ಲೋಕದ ತಾತ್ಪರ್ಯವು.

ಇಂತಪ್ಪ ಕ್ರಿಯಾಸಾರ ಕರ್ತೃವು ವೀರಶೈವ ದೀಕ್ಷಾವಿಷಯದಲ್ಲಿ ಯೇಷು ಯೇಷು ಮಹಾದೇವಿ ಭಕ್ತಿರವ್ಯಭಿಚಾರಿಣೀ॥ ಯೋಗ್ಯಾಸ್ತ ಏವ ಮಂತ್ರಸ್ಯ ಭಕ್ತಿರೇವಾತ್ರಕಾರಣಂ ॥೨೪॥ ವಿಶೇಷಂ ಯತ್ರದೀಕ್ಷಾಸು ಪೂರ್ವಿಕಾಭಕ್ತಿರಸ್ತಿಹಿ॥ ನತತ್ರ ಜಾತಿಭೇದೋಸ್ತಿ ಸರ್ವೇರುದ್ರಸ್ವರೂಪಿಣಃ। ಯತ್ರಸ್ಯಾದ್ಜಾತಿಸಾಮಾನ್ಯಂ ತತ್ರಜಾತ್ಯಾದಿ ಕಲ್ಪನಾ ॥೨೭॥ ತಸ್ಮಾದಯೋಗ್ಯೋಯೋಗ್ಯಶ್ಚೇತ್ಯೇವಂಶಂಕಾನತತ್ರಹಿ॥ ಎಂಬೀ ವಾಕ್ಯಗಳಿಂದ ಸೂಕ್ಷ್ಮಾಗಮದ ಮೂರನೆಯ ಪಟಲದಲ್ಲಿ ದೃಢಭಕ್ತಿಯುಳ್ಳ ಎಲ್ಲರನ್ನು ಅಧಿಕಾರಿಗಳನ್ನು ಮಾಡಿದುದನ್ನು ಅತಿಕ್ರಮಿಸಲಾರನು. ಅತಿಕ್ರಮಿಸಲಿಲ್ಲವೆಂಬುದಕ್ಕೆ ನಾನೀಗ ಉದಾಹರಿಸಿದ ಕ್ರಿಯಾಸಾರದ ಪ್ರಥಮೋಪದೇಶದ ಮತ್ತು ಸಪ್ತಮೋಪದೇಶದ ವಾಕ್ಯಗಳು ಸಾಕಾಗಿವೆ. ಇನ್ನು ಅದರಿಂದ ಅನೇಕವಾಕ್ಯಗಳನ್ನುದಾಹರಿಸಿಲೇಖ ಬಳೆಯಿಸಲು ಕಾರಣವಿಲ್ಲ.



# ವಚನ ಭಾಂಡಾರ.

ಲೇಖಕ:— ತೆಗ್ಗಿನಮಠದ ಮಂಡಳಿ ಹುನಗುಂದ.

ಕರ್ನಾಟಕ ಇತಿಹಾಸದಲ್ಲಿ ೧೨ ನೆಯ ಶತಮಾನವು ಸ್ಮರಣೀಯದ್ದಾಗಿದೆ. ಆಗ ಜನರಲ್ಲಿ ಧರ್ಮಜಾಗ್ರತೆಯೂ, ಸ್ವತಂತ್ರ ವಿಚಾರ ಪ್ರಸಾರವೂ, ವಿಶೇಷ ನಡೆದು ಕ್ರಾಂತಿಗೆ ಬಹಳೇ ಅನುಕೂಲವಾಯಿತು. ಜನಾಂಗದ ಅಂತರಂಗ ಚಳವಳಿಯು ಜನರ ಜೀವನ ಚರಿತ್ರೆಯಲ್ಲಿಯೂ ವಾಙ್ಮಯದಲ್ಲಿಯೂ ತನ್ನ ಇರವನ್ನು ತೋರ್ಪಡಿಸಬೇಕಲ್ಲವೆ?

ಶ್ರೀ ಬಸವೇಶ್ವರನು ಮಧ್ವರಾಮಾನುಜರಂತೆ ಈ ಅಭ್ಯುದಯ ಕಾಲಕ್ಕೆ ಸಂಬಂಧಿಸಿದವನು. ವೀರಶೈವ ಧರ್ಮಪರವಾಗಿ ನಡೆದ ಚೈತನ್ಯಕ್ಕೆ ಪ್ರತಿನಿಧಿಯಿವನು. ಸಾಹಿತ್ಯಮಂಡಲದಲ್ಲಿ, ಬಸವನ ಜೊತೆಗೆ ವಚನಕಾರರೂಕೈಗೂಡಿ ವಿಶೇಷವಾದ ದೊಡ್ಡ ಸಾಹಿತ್ಯಭಾಗವನ್ನೇ ಸೃಜಿಸಿದ್ದಾರೆ. ಅವರಿಂದ ಪ್ರಚುರಪಡಿಸಿದ ವಾಙ್ಮಯವು ಜೈನಮತದ ನಾಸ್ತಿಕ್ಯದಿಂದಲೂ, ವರ್ಣಾಶ್ರಮ ಧರ್ಮದ ಯಜ್ಞಯಾಗಾದಿ ಹಿಂಸೆಗಳಿಂದಲೂ ದೂರವಿರುವಂಥದೂ, ಸಂಸ್ಕೃತಬಂಧದಿಂದ ಮುಕ್ತವಾದುದೂ- ಸಹಜೋಕ್ತಿಯೇ ಗುಣವುಳ್ಳದ್ದೂ, ಭಕ್ತಿಯನ್ನೇ ಜೀವಾಳವಾಗಿಟ್ಟುಕೊಂಡುದೂ, ರಾಜಾಸ್ಥಾನಗಳಿಗೆ ಹೊರತಾಗಿ ಜನಸಮುದಾಯವನ್ನೇ ಉದ್ದೇಶಿಸುವಂಥದೂ ಆದ ವಚನಗದ್ಯವೆಂಬ ಕನ್ನಡಕ್ಕೆ ವಿಶಿಷ್ಟವಾದೊಂದು ನವೀನ ಶೈಲಿಯು ಬೆಳೆಯಿತು. ಶ್ರೀ ಬಸವೇಶ್ವರನಲ್ಲಿಯೂ, ಅವನ ಸಂಗಡಿಗರಲ್ಲಿಯೂ ಅದು ಪೂರ್ಣತ್ವವನ್ನೈದಿತು. ಆ ಶೈಲಿಯ ಮುಖ್ಯ ಲಕ್ಷಣವೆಂದರೆ:—ಸ್ವಲ್ಪ ಶಬ್ದಗಳಲ್ಲಿ ಗೂಡಾರ್ಥವು ಮಾರ್ಮಿಕವಾದ ಮತ್ತು ದೈನಿಕ ಭಾಷೆಯಲ್ಲಿಯೇ ವಿಶದಪಡಿಸುವದು. ಕಾವ್ಯಗುಣವಾದ ನಾದಗುಣವು, ಮತ್ತು ಅದರ ( *Cabence* ) ಮುಕ್ತಾಯ ಸ್ವರವು ಓದಿದರೆ ಮನದಲ್ಲಿಯೂ, ಕೇಳಿದರೆ ಕರ್ಣದಲ್ಲಿಯೂ, ಉಳಿಯುವದು. ಯಾಕಂದರೆ ಅದರಲ್ಲಿ ಕಾವ್ಯಾತ್ಮಕ ಗದ್ಯವನ್ನೂ, ಕವಿತೆಯನ್ನೂ, ಸಮರಸವಾಗುವಂತೆ ಹೆಣೆದಿದೆ. ಇದು ನಮ್ಮ ಕನ್ನಡ ನುಡಿಗೊಂದು ವಾಗ್ವೈಖರಿಯೆನಿಸಿಕೊಳ್ಳುವದಲ್ಲದೆ ಜಗತ್ತಿನಲ್ಲಿ ಉಳಿದ ಸುಧಾರಿಸಿದ ಗದ್ಯ ಶೈಲಿಗಳಿಗೆ ಹೋಲಿಸಿದರೂ ಮಹತ್ವದ್ದಾಗಿ ಹೇಳಿಸಿಕೊಳ್ಳುವಂತಹದು. ಇದು ಮುಂದೆ ಸರ್ವಜ್ಞನ ವಚನಗಳಲ್ಲಿ ಫಲಿತ ಫಲವಾಗಿ ಪರಿಣಮಿಸಿದೆ.

ವಚನಕಾರರಲ್ಲಿ "ಕೆಲವರು ಬಸವನ ಕಾಲದವರೂ ಕೆಲವರು ಇತ್ತೀಚಿನವರೆ" ಎಂದು ಮೆ॥ ಆರ್. ನರಸಿಂಹಾಚಾರ್ಯರು ಅನ್ನುತ್ತಾರೆ. ಆದರೆ ವಚನರೂಪವನ್ನು ಕಂಡುಹಿಡಿದವನು ಶ್ರೀ ಬಸವೇಶ್ವರನು ಮೊದಲಿಗನಲ್ಲ. ಬಸವನ ಕಾಲಕ್ಕಿಂತ ಮೊದಲು ೧೦೦ ವರ್ಷಗಳ ಪೂರ್ವದಲ್ಲಿಯೇ ವಚನಕಾರರ ಅಸ್ತಿತ್ವದ ಬಗ್ಗೆ ಆಧಾರವಿದೆ. ಆದರೂ, ಇಂಥ ಮಹನೀಯರಿಂದಲೇ ಈ ತರದ ಉಚ್ಚ 'ಸಾಹಿತ್ಯರೂಪವು' ಹುಡುಕಿ ತೆಗೆದದ್ದೆಂದು ನಿರ್ದಿಷ್ಟವಾಗಿ ಹೇಳಲು ಬರುವದಿಲ್ಲ. ಸಂಗಮೇಶ್ವರನ ವಚನಗಳೂ, ಅಲ್ಲಮಪ್ರಭುವಿನ ವಚನಗಳೂ ಶ್ರೀ ಬಸವೇಶ್ವರನು ಯೌವನಕ್ಕೆ ಬರುವ ಪೂರ್ವದಲ್ಲಿಯೇ ರೂಢಿಯಲ್ಲಿರಬಹುದು. ಯಾಕಂದರೆ, ಈ ವಚನಕಾರರು ಶ್ರೀ ಬಸವೇಶ್ವರನಿಗಿಂತ ಹೆಚ್ಚು ವಯಸ್ಕರು. ಬಹುತರವಾಗಿ ಈ ವಚನಕಾರರ ದೀವಿಗೆಗಳಿಂದ ಶ್ರೀ ಬಸವೇಶ್ವರನು ತನ್ನ ಕಾಲದ ತೇಜಃಪುಂಜವಾದ ವಚನ ದೀವಟಿಗೆಗಳನ್ನು ಹೊತ್ತಿಸಿಕೊಂಡಿರಬಹುದು. ಅವನು ವಚನಕಾರರ ಮುಖಂಡನೇ ಹೊರತು, ವಚನಕಲೆಯನ್ನು ಹುಡುಕಿ ತೆಗೆದವನಲ್ಲ.

ಸಕಳೇಶ ಮಾದರಸನೆಂಬ ವಚನಕಾರನು ಶ್ರೀ ಬಸವೇಶ್ವರನ ಸಮಕಾಲೀಯನಾದ ಕೆರೆಯ ಪದ್ಮರಸನ ಪಿತಾಮಹನು.

ಕ್ರಿ. ಶ. ೧೧೧೬-೧೦೪೦ರ ವರೆಗೆ ಪೋಟಲ ಕೆರೆಯಲ್ಲಿ ಆಳಿದ ಚಾಲುಕ್ಯ ವಂಶದ ೩ನೆಯ ರಾಜನಾದ ಜಯಸಿಂಹನ ಕಾಲದಲ್ಲಿ ವರ್ಧಿಸಿದ ದೇವರದಾಸಿಮಯ್ಯನ ವಚನಗಳು ಶ್ರೀ ಬಸವೇಶ್ವರ ಕಾಲದಲ್ಲಿಯ ಉತ್ಕೃಷ್ಟ ಭಾಷೆಗೆ ಯಾವುದರಲ್ಲಿಯೂ ಕಡಿಮೆಯಿಲ್ಲ. ಈ ದೇವರದಾಸಿಮಯ್ಯನ ಹೆಸರನ್ನು ಬ್ರಹ್ಮಶಿವನೆಂಬ ಜೈನಕವಿಯು ತನ್ನ ಗ್ರಂಥದಲ್ಲಿ ಎತ್ತಿದ್ದಾನೆ. ಇವನು ಮೊದಲು ಶೈವನಿದ್ದು ಶ್ರೀ ಬಸವೇಶ್ವರನಿಗಿಂತ ೧೦೦ ವರ್ಷಗಳ ಪೂರ್ವದಲ್ಲಿ ನಡೆದ ಚಳವಳಿಯಲ್ಲಿ ಮತಾಂತರ ಹೊಂದಿದನಂತೆ.

ಆದರೂ ವೀರಶೈವರ ಪೂರ್ವದ ವಚನಗ್ರಂಥಕ್ಕೆ ಜನರು ಮೆಚ್ಚಿದಂತೆ ಕಾಣುವದಿಲ್ಲ. ಆದ್ದರಿಂದ ಶ್ರೀ ಬಸವೇಶ್ವರನಿಗಿಂತ ಮೊದಲು ಹುಟ್ಟಿದ ವಚನಗಳು ವಿಶೇಷ ಪ್ರಚುರವಾಗಿಲ್ಲ. ಮತ್ತು ಜೈನರ ಪ್ರೌಢಶೈಲಿಗೂ ಭಾಷಾಡಂಬರಕ್ಕೂ ಮರುಳಾದವರು ವಚನಗಳ ಸುಲಭ ಶೈಲಿಗೆ ರುಚಿಸದಿದ್ದುದು ಸಹಜವದೆ. ಅದಕ್ಕೆ ಆಗಿನ ವಾಚನಾಭಿರುಚಿಯಲ್ಲಿಯ ದೋಷವಲ್ಲದೆ, ಪೂರ್ವದ ವಚನಗಳು ದೋಷಯುಕ್ತವಾಗಿರಲಿಲ್ಲ. ವಿಚಾ

ರಿಸಿದರೆ, ದೇವರದಾಸಿಮಯ್ಯನ ವಚನಗಳು ನಿಜವಾಗಿ "ಹೃದಯಂಗಮವಾಗಿಯೂ, ಜ್ಞಾನಮಯವಾಗಿಯೂ, ಸುಲಲಿತವಾಗಿಯೂ, ಸರಳವಾಗಿಯೂ, ಸೂತ್ರರೂಪವಾಗಿಯೂ, ಸಿದ್ಧಾಂತಗರ್ಭಿತವಾಗಿಯೂ" ಇವೆ. ಅಂತವುಗಳ ಸೊಬಗಿನ ಗುಟ್ಟನ್ನರಿಯುವ ಮೊದಲು ಕಾವ್ಯಾಭಿಮಾನಿಗಳು "ಇವೇನು! ಪಾಮರರೋದತಕ್ಕವು" ಎಂದು ಅವುಗಳ ಸಹಜತೆಯು ಮನವೆಳೆವ ಗುಣವೆಂದರಿಯದೆ ದೂಷಿಸಿರಬಹುದು.

ವಚನಗಳಲ್ಲಿ ಸಂಸ್ಕೃತ ಮಿಶ್ರಿತ ಪ್ರೌಢ ಶೈಲಿಯು ತ್ಯಜಿಸಲ್ಪಟ್ಟಿದೆ. ವ್ಯವಹಾರಿಕ ಶಬ್ದಗಳೇ ಹೆಚ್ಚಾಗಿ ಪ್ರಯೋಗಿಸಲ್ಪಟ್ಟಿವೆ. ಇದನ್ನು ಬೆಳಸಿ 'ವಚನಕಾರರು' ಸಂಸ್ಕೃತ ಅರಿಯದವರೆಂದೂ ಪಾಂಡಿತ್ಯವಿಲ್ಲದವರೆಂದೂ ಗ್ರಹಿಸುವುದು ತಪ್ಪು. ಅವರು ಆಗಮೋಪನಿಷತ್ತುಗಳ ಗೂಢಾರ್ಥ ತಿಳಿದಿದ್ದರೆಂಬದಕ್ಕೆ ಅವರ ವಚನಗಳ ವಿಷಯವೇ ಸಾಕ್ಷಿಯು. ವಚನಗಳಲ್ಲಿ ಸಿದ್ಧಾಂತಗಳನ್ನು ಪ್ರತಿಪಾದಿಸುವ ರೀತಿಯು ಅವರ ಪಾಂಡಿತ್ಯವನ್ನು ವ್ಯಕ್ತಪಡಿಸುತ್ತದೆ. ಕಾರಣ, ಇವರು ಸಂಸ್ಕೃತ ಬಾಹಿರರೆಂದು ಎಂದೂ ತಿಳಿಯಲಾಗದು. ಸ್ವಭಾಷಪ್ರೇಮದಿಂದಲೂ, ಪಾಮರರನ್ನು ಸಹ ಉದ್ದೇಶಿಸಿದ್ದರಿಂದಲೂ, ವಚನಗಳಲ್ಲಿ ಸಂಸ್ಕೃತ ಶಬ್ದಗಳು ವಿರಳವಾದವಲ್ಲದೆ ಅವರ ಕೈಯಲ್ಲಿ ಗಿರ್ವಾಣ ಭಾಷೆಗೆ ಬಹಿಷ್ಕಾರವಿರಲಿಲ್ಲ. ಮತ್ತು ವಚನಗಳಲ್ಲಿ ಆಗಾಗ ಆಗಮ ವಾಕ್ಯಗಳನ್ನು ಉದಹರಿಸಿದ್ದದನ್ನು ಎಷ್ಟೋ ಕಡೆಗೆ ಕಾಣಬಹುದು.

ವಚನ ಪ್ರಪಂಚಕ್ಕೆ ಶಿವಶರಣೆಯರೂ ಮಾಡಿದ ಸಾಹಸವನ್ನು ನೋಡಿದರೆ ಅವರ ನೈತಿಕೋನ್ನತಿಯನ್ನೂ ಸಂಸ್ಕೃತಿಯನ್ನೂ ಸೂಚಿಸುತ್ತದೆ.

ಈ ರೀತಿಯಲ್ಲಿ ವಚನ ಭಾಂಡಾರದಿಂದ ಕನ್ನಡದಲ್ಲಿದ್ದ ಗದ್ಯವಿರಳತೆಯ ದೋಷವಡಗಿ ಕರ್ನಾಟಕ ಸರಸ್ವತಿಯ ಅಂಗವೊಂದು ಪೂರ್ಣವಾಯಿತು. ವಚನಗಳ ಮಹತ್ವವೂ ಇತ್ತಿತ್ತ ಸುಧಾರಿಸಿದ ಪಾಶ್ಚಿಮಾತ್ಯರಲ್ಲಿಯೂ ಪ್ರಸಾರವಾಗತೊಡಗಿದ್ದು ಕನ್ನಡಭಾಷೆಯ ಸುದೈವವೆಂದು ಆನಂದಪಡದಿರಲಾರೆವು.

# ಬಸವಣ್ಣನವರ ವಚನಗಳು.

ಈ ವಚನಗಳ ಸಂಬಂಧವಾಗಿ ಪ್ರಬುದ್ಧ ಕರ್ನಾಟಕ ಬೆಂಗಳೂರು ಈ ಪತ್ರಿಕೆಯ ಸಂಪಾದಕರು ತಮ್ಮ ಸಂಪಾದಕೀಯ ಟಿಪ್ಪಣೆಯಲ್ಲಿ ಉಲ್ಲೇಖ ಮಾಡಿರುವದೇನೆಂದರೆಃ—

ಕರ್ಣಾಟಕ ಸಂಘದಲ್ಲಿ ಈ ವರ್ಷ ಇದುವರೆಗೆ ನಡೆದಿರುವ ಕಾರ್ಯ್ಯಗಳಲ್ಲಿ ಮುಖ್ಯವಾದದ್ದು ಬಸವಣ್ಣನವರ ವಚನಗಳ ಮೇಲೆ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಮಾಡಿದ ಉಪನ್ಯಾಸ. ಮ॥ ವೆಂಕಟೇಶಯ್ಯಂಗಾರ್ಯರು ರಸಿಕರಾದ ಕವಿಗಳು, ಕಥೆಗಾರರು, ವಿಮರ್ಶಕರು, -ಕಸವನ್ನೂ ರಸಮಾಡ ಬಲ್ಲವರು. ಆದ್ದರಿಂದ ಅವರ ಪೀಠಿಕೆ ವಿಮರ್ಶೆಗಳೊಡನೆ ಬಂದಾಗ ಮೊದಲೇ ರಸವತ್ತಾದ ಬಸವಣ್ಣನವರ ವಚನಗಳು ರಸವತ್ತರವಾದದ್ದರಲ್ಲಿ ಆಶ್ಚರ್ಯ ವೇನಿದೆ?

ಬಸವಣ್ಣನವರು ಅಚ್ಚ ಕನ್ನಡಿಗರು; ಸಂಸ್ಕೃತ ಪ್ರಾಕೃತಗಳಲ್ಲಿ ಪಂಡಿತ ರೆನಿಸಿ ಆ ಪಾಂಡಿತ್ಯದ ಬಲದಿಂದ ವಾದಿಗಳನ್ನು ಗೆದ್ದು ವ್ಯಾಖ್ಯಾನಸಾಪೇಕ್ಷ ವಾದ ವಾದಗ್ರಂಥಗಳನ್ನು ಬರೆದವರಲ್ಲ; ಜನಸಾಮಾನ್ಯಕ್ಕೆ ಬೇಕಾದ ವಿಷ ಯವನ್ನು ಜನರಿಗಾಗಿ ಜನರ ಮಾತಿನಲ್ಲಿಯೇ ಹೇಳಿ ಕೇಳಿದವರು. ಇವರ ವಚ ನಗಳಲ್ಲಿ ಕಂಡುಬರುವ ಗುಣಗಳೊಳಗೆ ಸರಳತೆ, ಅಕೃತ್ರಿಮತೆ, ಋಜುತ್ವ ಇವು ಮುಖ್ಯವಾದವು. ಹೃದಯದಲ್ಲಿ ಹುಟ್ಟಿದ ಭಾವಗಳು ಮಧ್ಯೆ ಯಾವ ಮಜಲಿ ನಲ್ಲಿಯೂ ನಿಲ್ಲದೆ, ಯಾವ ಬಣ್ಣವನ್ನೂ ಪಡೆಯದೆ, ಆ ವೇಗವನ್ನು ಕಡಿಮೆ ಮಾಡಿಕೊಳ್ಳದೆ, ಉಕ್ಕಿ ಉಕ್ಕಿ ಬರುತ್ತವೆ. ಇವುಗಳಲ್ಲಿ, ಚಮತ್ಕಾರ ಮಾಡಿ ತೋರಿಸಬೇಕೆಂಬ ಕವಿಯ ಕೃತಕ ಪ್ರಯತ್ನವಿಲ್ಲ; ವಾದಿಯನ್ನು ಗೆಲ್ಲಬೇಕೆಂಬ ತಾರ್ಕಿಕನ ಕುತರ್ಕ ಪ್ರಯೋಗವಿಲ್ಲ. ಸಾಹಿತ್ಯದಲ್ಲಿಯೂ ಧರ್ಮದಲ್ಲಿಯೂ ಇವಕ್ಕಿಂತ ಅತಿಶಯವೇನುಬೇಕು?

ರಾವ್ ಸಾಹೇಬ್ ಫ. ಗು. ಹಳಕಟ್ಟಿಯವರು ಈ ವಚನಗಳು ಕನ್ನಡಿ ಗರೆಲ್ಲರಿಗೂ ಶುದ್ಧವಾದ ರೂಪದಲ್ಲಿ ದೊರೆಯುವಂತೆ ಅಚ್ಚುಹಾಕಿಸಿಕೊಟ್ಟು ಮಾಡಿದ ಉಪಕಾರವನ್ನು ಈ ಸಂದರ್ಭದಲ್ಲಿ ನೆನೆಸಿದರೆ ಅಪ್ರಸ್ತುತವಾಗಲಾ ರದು. ಮ॥ ಗಳಾದ ಎಂ. ಆರ್ ಶ್ರೀನಿವಾಸ ಮೂರ್ತಿಗಳು, ಎಂ. ವೆಂಕಟೇ ಶಯ್ಯಂಗಾರ್ಯರು ಮುಂತಾದ ವಿದ್ವಾಂಸರು, ರಾ. ಸಾ. ಹಳಕಟ್ಟಿಯವರ ಕೆಲ ಸವನ್ನು ಮುಂದುವರಿಸುತ್ತ ಈ ವಚನಗಳಿಗೆ ಸಲ್ಲಬೇಕಾದ ಪ್ರೀತಿ ಗೌರವ ಗಳು ಬರುವಂತೆ ಪ್ರಯತ್ನ ಪಡುತ್ತಿದ್ದಾರೆ. ಹುವ್ವಿಗೆ ಪರಿಮಳವನ್ನೇನು ತುಂಬ ಬೇಕಾಗಿಲ್ಲ; ಆದರೆ ಅದನ್ನು ಗಿಡ ಮರ ಪೊದರುಗಳಿಂದ ಕುಯ್ದು ತಂದು ಅಂದವಾಗಿ ಕಟ್ಟಿದ ಹೊರತು ಅದರ ಪೂರ್ತಿಯಾದ ಬೆಲೆ ಬರುವುದಿಲ್ಲ, ಸರಿ ಯಾದ ಸ್ಥಾನ ದೊರಕುವುದಿಲ್ಲ.

---

೫. ಉದಯವಾಯಿತ್ತ ಕಂಡು, ಉದರಕ್ಕೆ ಕುದಿವರಯ್ಯಾ. ಕತ್ತಲೆಯಾಯಿತ್ತ ಕಂಡು, ಮಜ್ಜನಕ್ಕೆರೆವರಯ್ಯಾ. ಲಿಂಗಕ್ಕೆ ನೇಮವಿಲ್ಲ. ಇರುಳಿಗೊಂದು ನೇಮ ಹಗಲಿಗೊಂದು ನೇಮ. ಲಿಂಗಕ್ಕೆ ನೇಮವಿಲ್ಲ. ಕಾಯ ಒಂದೆಸೆ ಜೀವ ಒಂದೆಸೆ ಗುಹೇಶ್ವರನೆಂಬ ಅಂಗವು ತಾನೊಂದೆಸೆ.

ಟೀಕು:—ಅಹೋರಾತ್ರಿ ಒಡಲಿಂಗೆ ಕುದಿವರು. ಲಿಂಗದ ವೇಳೆಯನರಿಯದೆ ಕಾಲವೇಳೆಗೆ ಮಜ್ಜನಕ್ಕೆರೆವರಾಗಿ, ಅದು ಕಾಲವೇಳೆಯ ನೇಮವಲ್ಲದೆ ಲಿಂಗದವೇಳೆಯ ನೇಮವಲ್ಲ ಇಂತಪ್ಪವರಲ್ಲಿ ಲಿಂಗಸಂಬಂಧವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

೬. ಅಗ್ಗವಣಿ ಪತ್ರೆ, ಪುಷ್ಪ, ಧೂಪ, ದೀಪ, ನಿವಾಳಿಯಲ್ಲಿ ಪೂಜಿಸಿ ಪೂಜಿಸಿ, ಬಳಲುತ್ತಿದ್ದಾರೆ. ಏನೆಂದರಿಯರು ಎಂತೆಂದರಿಯರು. ಜನ ಮರುಳೊ ಜಾತ್ರೆ ಮರುಳೊ ಎಂಬಂತೆ ಎಲ್ಲರೂ ಪೂಜಿಸಿ, ಏನನೂ ಕಾಣದೆ ಲಯಕ್ಕೊಳಗಾಗಿ ಹೋದರು ಗುಹೇಶ್ವರಾ.

ಟೀಕು:—ತಮ್ಮಲ್ಲಿ ಲಿಂಗನಿಷ್ಠೆ ಇಲ್ಲದೆ ಕಾಂಬವರ ಕಂಡು ಲಿಂಗವ ಪೂಜಿಸಿ ನಾನು ಮುಕ್ತನಾದಿಹೆನೆಂಬುದು ಬರಿಯ ಭ್ರಮೆ ಎಂಬುದೀ ವಚನದ ತಾತ್ಪರ್ಯಾರ್ಥ.

೭. ಮಜ್ಜನಕ್ಕೆರೆದು, ಫಲವ ಬೇಡುವರಯ್ಯಾ! ತಮಗೆಲ್ಲಿಯದೋ ಆ ಫಲವು ಸಿತಾಳಕ್ಕಲ್ಲದೆ? ಪತ್ರೆ ಪುಷ್ಪದಲ್ಲಿ ಪೂಜಿಸಿ ಫಲವ ಬೇಡುವರು. ತೆಮಗೆಲ್ಲಿಯದೊ ಆ ಫಲವು ಗಿಡುಗಳಿಗಲ್ಲದೆ? ಸುಯಿಧಾನವನರ್ಪಿಸಿ, ಪ್ರಸಾದದ ಫಲವ ಬೇಡುವರು. ತಮಗೆಲ್ಲಿಯದೋ ಆ ಫಲವು ಹದಿನೆಂಟು ಧಾನ್ಯಕ್ಕಲ್ಲದೆ? ಅಂಗದೊಡವೆಯ ಲಿಂಗಕ್ಕೆ ಕೊಟ್ಟು, ಫಲವ ಬೇಡುವ ಸರ್ವ ಅನ್ಯಾಯಿಗಳನೇನೆಂಬೆ ಗುಹೇಶ್ವರಾ?

ಟೀಕು:—ತಾವು ಲಿಂಗದಲ್ಲಿ ಲೋಲುಪ್ತರಾಗದೆ, ಅಷ್ಟವಿಧಾರ್ಚನೆಯ ಉಪಾಧಿವಿಡಿದು, ಲಿಂಗವ ಪೂಜಿಸಿ ವರವ ಬೇಡಿದರೆ, ಆ ಪೂಜೆ ಅನ್ಯೋನ್ಯಕ್ಕಲ್ಲದೆ ಆ ಪೂಜಾಫಲ ತಮಗಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

೮. ಹಾಲನೇಮವ ಹಿಡಿದಾತ ಬೆಕ್ಕಾಗಿ ಹುಟ್ಟುವ. ಕಡಲೆಯ ನೇಮವ ಹಿಡಿದಾತ ಕುದುರೆಯಾಗಿ ಹುಟ್ಟುವ. ಅಗವಣಿಯ ನೇಮವ ಹಿಡಿದಾತ ಕಪ್ಪೆಯಾಗಿ ಹುಟ್ಟುವ. ಪುಷ್ಪದ ನೇಮವ ಹಿಡಿದಾತ ತುಂಬಿ

ಯಾಗಿ ಹುಟ್ಟುವ. ಇವು ಷಟ್ಸ್ಥಲಕ್ಕೆ ಹೊರಗು. ಭಕ್ತಿ ನಿಷ್ಠೆ ಇಲ್ಲ ದವರ ಕಂಡಡೆ ಮೆಚ್ಚ ಗುಹೇಶ್ವರಾ.

ಟೀಕು:—ಲಿಂಗಕ್ಕೆ ನಿಯತವಹ ನಿಷ್ಠೆ ಛಲ ವ್ರತನಿಯಮವ ಹಿಡಿದರೆ, ಲಿಂಗದಲ್ಲಿ ಸಲುವನು. ಇದಲ್ಲದೆ, ಅನಾಯತ ನಿಯಮಂಗಳ ಹಿಡಿದಾತನು ಲಿಂಗದಲ್ಲಿಗೆ ಸಲ್ಲನೆಂಬುದೀ ವಚನದ ತಾತ್ಪರ್ಯಾರ್ಥ.

೯. ಅಗ್ನಿ ಸ್ತಂಭದ ರಕ್ಷೆ ಇದ್ದು, ಮನೆ ಬೆಂದಿತ್ತಯ್ಯಾ! ಬಲಮುರಿಯ ಶಂಖವಿದ್ದು ಪದ ಹೋಯಿತ್ತಯ್ಯಾ! ಏಕ ಮುಖದ ರುದ್ರಾಕ್ಷಿ ಇದ್ದು ವಿಘ್ನವಾಯಿತ್ತಯ್ಯಾ! ಇವೆಲ್ಲವ ಸಾಧಿಸಿದರೆ, ಏನೂ ಇಲ್ಲದಂತಾಯಿತ್ತು ಗುಹೇಶ್ವರಾ.

ಟೀಕು:— ಲಿಂಗವ ನಂಬಿ, ನಿಷ್ಠೆಯಿಂದ ಪೂಜಿಸಿದಡೆ, ಅಸಾಧ್ಯವೆಲ್ಲವೂ ಸಾಧ್ಯವಹುದು. ಲಿಂಗವ ನಂಬದೆ ಏನ ಸಾಧಿಸಿದಡೆಯೂ ಪ್ರಯೋಜನವಿಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೦. ಜಾತಿಗಾರನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ, ಸೂನೆಗಾರನ ಮನೆಯಲ್ಲಿ ಹೆಣ ಹೋಗಿ ಅಳುವಂತೆ, ಕನ್ನಗಳ್ಳನ ಮನೆಯಲ್ಲಿ ಬಟ್ಟಲು ಹೋಗಿ ಮರುಗುವಂತೆ, ಠಕ್ಕನ ಪೂಜೆಗೆ ಮೆಚ್ಚುವನೇ ನಮ್ಮ ಗುಹೇಶ್ವರನು?

ಟೀಕು:— ಲಿಂಗದಲ್ಲಿ ನಂಬುಗೆಯುಳ್ಳ ಲಿಂಗವಂತನು ಲಿಂಗಕ್ಕೆ ದೈನ್ಯ ಬಟ್ಟಡೆ, ಒಪ್ಪುವದಲ್ಲದೆ, ಲಿಂಗದಲ್ಲಿ ನಂಬುಗೆ ಇಲ್ಲದ ಠಕ್ಕನು ಲಿಂಗಕ್ಕೆ ದೈನ್ಯ ಬಟ್ಟಡೆ, ಅದು ಲಿಂಗ ಮೆಚ್ಚಲ್ಲವೆಂಬುದೀ ವಚನದ ಉಪ ಪ್ರಶ್ನೆಕ್ಕೆ ಏಕಾರ್ಥ ನಿರ್ವಚನ.

೧೧. ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ! ಗಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ. ತನ್ನನಿಕ್ಕಿ ನಿಧಾನವ ಸಾಧಿಸಿಹೆನೆಂದಡೆ, ಬಿನ್ನಾಣ ತಪ್ಪಿತ್ತು ಗುಹೇಶ್ವರಾ.

ಟೀಕು:—ಅಲ್ಪ ಸಂಸಾರ ಸುಖಕ್ಕೆ ಮಚ್ಚಿ, ಮರುಳಾಗಿ ಲಯವಾದ ಬಳಿಕ ಲಿಂಗವ ಕಂಡಿಹೆನೆಂದಡೆ, ಕಾಣಬಾರದೆಂಬುದೀ ವಚನದ ತಾತ್ಪರ್ಯಾರ್ಥ.

೧೨. ಜವನ ಕದ್ದ ಕಳ್ಳನು, ಅಗಲಿ ಮಿಕ್ಕು ಹೋದರೆ, ಅಗಲಕ್ಕೆ ಹಬ್ಬಿತ್ತು. ಅಲ್ಲಲ್ಲಿ ನೋಡಲು ಶರಣ ಸಂಗವನರಸುವರೆಲ್ಲ ಅಲ್ಲಲ್ಲಿಗೆ

ನೋಡಿರೆ ಸಾಧಗರೆಲ್ಲರು ಸಾಧಿಸ ಹೋಗಿ ಅಭೇದ್ಯವನರಿಯದೆ, ಕೆಟ್ಟರು ಗುಹೇಶ್ವರಾ.

ಟೀಕು:—ಮೃತ್ಯುವಿನ ಬಾಧೆಯನೊತ್ತರಿಸಿ ನಿಲಿಸಿ, ತನ್ನ ತಪ್ಪಿಸಿ ಕೊಂಡಿರ್ಪ ಶಿವನು ತನ್ನಿಂದಗಲಿ ಹೋದನೆಂದು ಶರಣರ ಸಂಗದಲ್ಲಿ ಅರಸಿ ಕಂಡೆಹೆನೆಂಬೆನ್ನಕ್ಕರ, ತಾನಾರೆಂದರಿಯದ ಭ್ರಮೆ ತನ್ನೊಳಗೆ ಬಳ್ಳಿವರಿ ಯಿತ್ತು. ಇಂತಪ್ಪ ಸಾಧನೆಯ ಸಾಧಿಸುತ್ತಿರ್ದಡೆ, ಅಸಾಧ್ಯ ಸಾಧ್ಯವಾ ಗಲರಿಯದೆಂಬುದೀ ವಚನದ ತಾತ್ಪರ್ಯಾರ್ಥ.

೧೩. ಭವ ಉಳ್ಳನ್ನಕ್ಕರ ಧಾವತಿ ಮಾಣದು, ಶರೀರ ಉಳ್ಳನ್ನಕ್ಕರ ಅವಸ್ಥೆ ಮಾಣದು, ಗುಹೇಶ್ವರನೆಂಬ ನೆನಹುಳ್ಳನ್ನಕ್ಕರ ಲಿಂಗವೆಂಬುದ ಬಿಡಲಾಗದು.

ಟೀಕು:—ಒಡಲುವಿಡಿದು ಸಂಸಾರ ಚಿನ್ಹವುಳ್ಳನಕ್ಕರ ಕಾಯ ವಿಕಾ ರಂಗಳು ಹಿಂಗವು. ಇದನುತ್ತರಿಸಬಲ್ಲಡೆ ದೃಢವಾಗಿ, ಲಿಂಗವ ನಂಬು ವುದು ಎಂಬುದೀ ವಚನಾರ್ಥ.

೧೪. ಮಜ್ಜನಕ್ಕೆರೆವರೆಲ್ಲ ಇದ್ದಲ್ಲಿ ಫಲವೇನು? ಮುದ್ರೆಧಾರಿಗಳ ಪ್ಪರಯ್ಯಾ! ಲಿಂಗದಲ್ಲಿ ನಿಷ್ಠೆ ಇಲ್ಲ. ಜಂಗಮದಲ್ಲಿ ಪ್ರೇಮಿಗಳಲ್ಲ. ವೇಷ ಧಾರಿಗಳಪ್ಪರಯ್ಯಾ! ನೋಡಿ ಮಾಡುವ ಭಕ್ತ ಸಜ್ಜನ ಸಾರಾಯನಲ್ಲ. ಗುಹೇಶ್ವರ ಮೆಚ್ಚನಯ್ಯಾ!

ಟೀಕು:—ಲಿಂಗದಲ್ಲಿ ನಿಷ್ಠೆ ಇಲ್ಲದ, ಜಂಗಮದಲ್ಲಿ ಪ್ರೇಮಿಗಳಲ್ಲದ ವೇಷಧಾರಿಗಳು ಲಿಂಗಕ್ಕೆ ಮಜ್ಜನಕ್ಕೆರೆದಡೆ, ಅದು ಲೋಕಾಚಾರವಲ್ಲದೆ, ಅದು ಲಿಂಗಾರ್ಚನೆಯಲ್ಲವೆಂಬುದೀ ವಚನಾರ್ಥ.

೧೫. ಕೊಟ್ಟ ಕುದುರೆಯನೇರಲರಿಯದೆ, ಮತ್ತೊಂದು ಕುದುರೆಯ ಬಯಸುವವರು ವೀರರೂ ಅಲ್ಲ, ಧೀರರೂ ಅಲ್ಲ. ಇದು ಕಾರಣ ನೆರೆ ಮೂರು ಲೋಕವೆಲ್ಲವು ಹಲ್ಲಣವ ಹೊತ್ತುಕೊಂಡು. ಬಳಲುತ್ತಿಪ್ಪಾರೆ. ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರು?

ಟೀಕು:— ಶ್ರೀಗುರು ಕರಸ್ಥಲಕ್ಕೆ ಅನುಗ್ರಹಿಸಿ ಕೊಟ್ಟ ಲಿಂಗಸ್ಥಲ ದಲ್ಲಿ ನೆನಹು ನಿಲಲರಿಯದೆ, ಬೇರೆ ಮತ್ತೆ ಲಿಂಗಪಥವನರಸುವರು. ಲಿಂಗ ನಿಷ್ಠಾ ಪರರಲ್ಲ. ಇದು ಕಾರಣ ಸರ್ವರೂ ದೇಹಭಾರವ ಹೊತ್ತುಕೊಂಡು ಸುಳಿವ ಸಂಸಾರಿಗಳಾದರೆಂಬುದೀ ವಚನಾರ್ಥ.

೧೬. ಜೀವವಿಲ್ಲದ ಹೆಣನ ಹಿಡಿದಾಡುವರಯ್ಯಾ! ಪ್ರತಿ ಇಲ್ಲದಪ್ರತಿಗೆ ಪ್ರತಿ ಮಾಡುವರಯ್ಯಾ! ಶಿರವಿಲ್ಲದ ಮುಂಡಕ್ಕೆ ಸೇಸೆಯನಿಕ್ಕುವರಯ್ಯಾ ಗುಹೇಶ್ವರಾ.

ಟೀಕು:— ಸಂಪೂರ್ಣ ಕಳೆ ಇಲ್ಲದೆ, ಕರಸ್ಥಲದಲ್ಲಿ ಧರಿಸಿ ಮಾಡುವ, ಲಿಂಗಾರ್ಚನೆ, ಜೀವವಿಲ್ಲದ ಹೆಣನ ಹಿಡಿದಾಡುವಂತೆ ಸಲ್ಲದೆಂಬುದೀ ವಚನದ ತಾತ್ಪರ್ಯಾರ್ಥ.

೧೭. ಆದ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲದ ಹಿರಿಯರು ನೋಡಾ! ತನು ವಿಕಾರ, ಮನವಿಕಾರ, ಇಂದ್ರಿಯ ವಿಕಾರದ ಹಿರಿಯರ ನೋಡಾ. ಶಿವ ಚಿಂತೆ, ಶಿವಜ್ಞಾನಿಗಳ ಕಂಡಡೆ, ಅಳಿವಾಡಿ ನುಡಿವರು ಗುಹೇಶ್ವರನನರಿಯದ ಕರ್ಮಿಗಳಯ್ಯ.

ಟೀಕು:—ಸ್ವಾನುಭಾವ ಸ್ವತಃಸಿದ್ಧರಲ್ಲದ ವಾಗದ್ವೈತಿಗಳು ತಮ್ಮ ಅಭ್ಯಾಸದ ಬಲದಿಂದ ಮಹಾಜ್ಞಾನಿಗಳ ಕಂಡಡೆ ಹಳಿದು ನುಡಿವರು. ಇಂತಪ್ಪ ಅನ್ಯಕಾರಿಗಳಿಗೆ ಭವವೇ ಪ್ರಾಪ್ತಿಯಲ್ಲದೆ, ಮುಕ್ತಿ ಇಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೧೮. ಅಳವರಿಯದ ಭಾಷೆ, ಬಹು ಕುಳವಾದ ನುಡಿ, ಇಂತೆರಡರ ನುಡಿ ಹುಸಿಯಯ್ಯಾ. ಬಹು ಭಾಷಿತರು ಸುಭಾಷಿತ ವರ್ಜಿತರು ಶರಣಸತಿ, ಲಿಂಗಪತಿಎಂಬರು. ಹುಸಿಯಯ್ಯಾ. ಇಂತಪ್ಪವರ ಕಂಡು ನಾಚುವೆನಯ್ಯಾ ಗುಹೇಶ್ವರಾ.

ಟೀಕು:—ತಮ್ಮಲ್ಲಿ ನಡೆ ಇಲ್ಲದೆ ತಮಗಳವಲ್ಲದ ಭಾಷೆ, ಅಳವಲ್ಲದ ಛಲ ನಿಯಮವ ಹಿಡಿದು ಬಹು ಭಾಷಿತರಾಗಿ, ಇಪ್ಪ ಲಾಂಛನ ಡಂಭಕರ ಶಿವನೊಲ್ಲನೆಂಬುದೀ ವಚನದ ತಾತ್ಪರ್ಯಾರ್ಥ.

೧೯. ಅಮರಾವತಿಯ ಪಟ್ಟಣದಲ್ಲಿ ದೇವೇಂದ್ರನಾಳುವ ನಂದನ ವನವಯ್ಯಾ! ಅತ್ತ ಸಾರಲೆ ಕಾಮಾ ಮೋಹವೆ? ನಿನಗೆ ಲೋಕಾದಿ ಲೋಕವನೆಲ್ಲವ ಮರುಳು ಮಾಡಿದೆ ಕಾಮಾ. ಗುಹೇಶ್ವರ ಲಿಂಗವನರಿ. ಭೋ.

ಟೀಕು:—ದೇವ ದಾನವ ಮಾನವಾದಿಗಳೆಲ್ಲರು ಕಾಮನ ಪಂಚ ಬಾಣವಲ್ಲಿ ಸಿಲ್ಕಿಪ್ಪರು. ಲಿಂಗದೇಹಿಗಳು ಲಿಂಗನಿಷ್ಠಾಪರರಾಗಿ ಲಿಂಗ ವಿರಹಿಗಳಾಗಿಪ್ಪರಾಗಿ ಅವರಲ್ಲಿ ಕಾಮ ವಿಕಾರವಿಲ್ಲವೆಂಬುದೀ ವಚನಾರ್ಥ

೨೦. ದೇಶ ಗುರಿಯಾಗಿ, ಲಯುವಾಗಿ ಹೋದವರ ಕಂಡೆ. ತಮ್ಮಂಥ ಗುರಿಯಾಗಿ, ಲಯುವಾಗಿ ಹೋದವರ ಕಂಡೆ. ಕಾಮ ಗುರಿಯಾಗಿ ಬೆಂದು ಹೋದವರ ಕಂಡೆ. ನೀ ಗುರಿಯಾಗಿ ಹೋದವರ ಕಾಣೆ ಗುಹೇಶ್ವರಾ.

ಟೀಕುಃ— ಅಜ್ಞಾನದಿಂದ ದೇಶಭ್ರಮಣೆಯಾಗಿ ಬಂದು ಕಾಮಬಾಣದಲ್ಲಿ ನೊಂದು, ಕೆಡುತ್ತಿರ್ಪವರೆಲ್ಲರು ಉಂಟು. ಲಿಂಗಕ್ಕೆ ಒಡಲನಿತ್ತು ಆ ಲಿಂಗದಲ್ಲಿಯೇ ಅಳಿವವರು ಅಲ್ಲಲ್ಲಿಗಪೂರ್ವವೆಂಬುದೀ ವಚನಾರ್ಥ.

೨೧. ಆ ಮಾತು ಈ ಮಾತು ಹೋ ಮಾತೆಲ್ಲವು ನೆರೆದು ಹೋಯಿತ್ತಲ್ಲಾ. ಭಕ್ತಿ ನೀರಲ್ಲಿ ನೆರೆದು ಜಲವ ಕೂಡಿ ಹೋಯಿತ್ತಲ್ಲಾ. ಸಾವನ್ನಕ್ಕವಸರ ಉಂಟೆ ಗುಹೇಶ್ವರಾ?

ಟೀಕುಃ—ನಿಜವಿಲ್ಲದ ಮಾತು ಬಾಯ್ಗೆ ಬಂದಂತೆ ನುಡಿದು ಕಡೆಯಲ್ಲಿ ಮಡಿದು ಹೋಹ ಪ್ರಾಣಿಗಳಿಗೆ ಲಿಂಗ ಸಂಬಂಧವಿಲ್ಲವೆಂಬುದೀ ವಚನಾರ್ಥ.

೨೨. ಅಗ್ನಿಗೆ ತಂಪುಂಟೆ? ವಿಷಕ್ಕೆ ರುಚಿಯುಂಟೆ ಹೇಳಾ? ಕಂಗಳಿಗೆ ಮರೆಯುಂಟೆ ಹೇಳಾ ಲಿಂಗವೆ? ದಾಳಿಕಾರಂಗೆ ಧರ್ಮ ಉಂಟೆ? ಕಂಗಳಿಗೆ ಕರುಳುಂಟೆ? ಗುಹೇಶ್ವರಾ ನಿಮ್ಮ ಶರಣರು ಮೂರು ಲೋಕವರಿಯೆ ನಿಶ್ಚಟರಯ್ಯಾ.

ಟೀಕುಃ— ನಚ್ಚಿ ಮಚ್ಚಿ ಒಲಿದ ಲಿಂಗದೇಹಿಗೆ ಲಿಂಗದಲ್ಲಿಯೆ ಲೋಲುಪ್ತಿಯುಂಟಾದ ಕಾರಣ, ಆತನ ತನುಗುಣವೆಲ್ಲವು ಲಿಂಗದ ತನುಗುಣವೆಯಾದ ಕಾರಣ ಆತನಲ್ಲಿ ಆವ ಗುಣ ಧರ್ಮವನರಸಲಿಲ್ಲವೆಂಬುದೀ ವಚನದ ಬಹು ಶಬ್ದಕ್ಕೇಕಾರ್ಥ ನಿರ್ವಚನ.

೨೩. ಲಿಂಗಭಕ್ತನೆಂದು ಜಗವೆಲ್ಲ ಸಾರುತಿಪ್ಪರು. ಲಿಂಗಭಕ್ತನ ಇಂಬಾವುದೆಂದರಿಯರು. ಲಿಂಗಭಕ್ತ ಹಮ್ಮು ಬಿಮ್ಮಿನವನೇ? ಲಿಂಗಭಕ್ತ ಸೀಮೆಯಾದವನೇ? ಪ್ರಾಣಲ್ಲದ ರೂಪು, ಒಡಲಿಲ್ಲದ ಜಂಗಮ, ಉಳಿದವೆಲ್ಲಾ ಶಠೆ ಎಂಬೆನು ಗುಹೇಶ್ವರಾ.

ಟೀಕುಃ— ಲಿಂಗಕ್ಕೆ ಒಲಿದ ಭಕ್ತಂಗೆ ಹೆಮ್ಮಿಲ್ಲ, ಬಿಮ್ಮಿಲ್ಲ, ಜಾತಿ ಇಲ್ಲ, ಸೂತಕವಿಲ್ಲ. ಅದೇನು ಕಾರಣವೆಂದಡೆ, ವಾಯು ಪ್ರಾಣವರತ ಒಡಲಿನಲ್ಲಿ ಉಪಾಧಿ ಇಲ್ಲದೆ, ಚರಿಸುವ ಕಾರಣ ಈ ಪಥ ಉಳ್ಳರೆ ಆತ

ಲಿಂಗದೇಹಿ, ಅಲ್ಲದೊಡೆ ಉಪಾಧಿಕ ದೇಹಿ, ಎಂಬುದೀ ವಚನದ ತಾತ್ಪರ್ಯಾರ್ಥ.

೨೪. ಭಕ್ತ ಭಕ್ತನೆಂಬರು. ಪೃಥ್ವಿಯ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ, ಅಪ್ಪುವಿನ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ ತೇಜದ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ, ವಾಯುವಿನ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ, ಆಕಾಶದ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ, ಸೋಮ ಸೂರ್ಯರ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ, ಆತ್ಮನ ಪೂರ್ವಾಶ್ರಯವ ಕಳೆಯಲರಿಯದನ್ನಕ್ಕರ ಭಕ್ತನೆಂದು ಲಿಂಗವ ಪೂಜಿಸುವವರ ಕಂಡು, ನಾನು ಬೆರಗಾದೆ ಗುಹೇಶ್ವರಾ॥

ಟೀಕು:— ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮರೆಂಬ ಅಷ್ಟತನುಗಳ ಪೂರ್ವಾಶ್ರಯಗಳ ಕಳೆಯಲರಿಯದೆ, ಲಿಂಗಕ್ಕೆ ಭಕ್ತಿಯ ಮಾಡುವ ಭೂತಪ್ರಾಣಿಗಳು ಲಿಂಗಪಥಕ್ಕೆ ಸಲ್ಲರೆಂಬುದೀ ವಚನದ ಬಹುಶಬ್ದಕ್ಕೇಕಾರ್ಥ ನಿರ್ವಚನ॥

೨೫. ಅನ್ಯರಜವ ಸೋಂಕದೆ, ತನ್ನ ರಜವ ಬಾಧಿಸದೆ, ರವಿಯ ಬೆಳಸ ಬಳಸದೆ, ಲಿಂಗದ ಬೆಳಸ ತಂದು, ಜಂಗಮದಲ್ಲಿ ಸವಿಸುತ್ತಿರ್ಪ ಲಿಂಗಭಕ್ತ ಆ ಭಕ್ತನಲ್ಲಿ ಗುಹೇಶ್ವರಲಿಂಗವಿಪ್ಪನು.

ಟೀಕು.— ಅನ್ಯಪಿಂಡವನಾಸೆವಿಡಿಯದೆ, ತನ್ನ ಪಿಂಡವ ನೋಯಿಸದೆ, ರೋಷದಾಸೆಯ ಬಳಸದೆ, ಲಿಂಗದಲುದಯವಾದ ಲಿಂಗದ್ರವ್ಯವನೆ ತಂದು ಜಂಗಮದಲ್ಲಿ ಸವಿಸುತ್ತಿರ್ಪ ಭಕ್ತನಲ್ಲಿ ನಿರಂತರ ಲಿಂಗವಿಪ್ಪನೆಂಬುದೀ ವಚನಾರ್ಥ.

೨೬. ತ್ರಿವಿಧದ ನಿತ್ಯವ ತ್ರಿವಿಧದ ಅನಿತ್ಯವ ಬಲ್ಲವರಾರೋ? ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲಡೆ ಆತನ ತ್ರಿವಿಧನಾಥನೆಂಬೆನು. ಆತನ ವೀರನೆಂಬೆ, ಆತನ ಧೀರನೆಂಬೆ, ಗುಹೇಶ್ವರ ಲಿಂಗದಲ್ಲಿ ಆತನಚ್ಚ ಪ್ರಸಾದಿ ಎಂಬೆ.

ಟೀಕು:— ಸ್ಥೂಲ, ಸೂಕ್ಷ್ಮ, ಕಾರಣವೆಂಬ ತ್ರಿವಿಧದ ಅನಿತ್ಯವ ಕೆಡಿಸಿ, ಆ ಕಾಯತ್ರಯದ ಮೇಲೆ ಗುರು, ಲಿಂಗ, ಜಂಗಮವೆಂಬ ತ್ರಿವಿ

ಧದ ನಿತ್ಯವ ನೆಲೆಗೊಳಿಸಿ, ಆ ಲಿಂಗತ್ರಯಕ್ಕೆ ತನು, ಮನ, ಧನವೆಂಬ ತ್ರಿವಿಧವನಿತ್ತು, ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸಾದವೆಂಬ ಪ್ರಸಾದತ್ರಯವ ಕೊಳಬಲ್ಲಾತನು ಆ ಲಿಂಗತ್ರಯಕ್ಕೆ ಒಡೆಯನು. ಆತನೇ ವೀರನು, ಆತನೇ ಧೀರನು, ಆತನೇ ಅಚ್ಚಪ್ರಸಾದಿ ಎಂಬುದೀ ವಚನದ ತಾತ್ಪರ್ಯಾರ್ಥ.

೨೭. ಪ್ರಣವ ಮಂತ್ರವ ಕರ್ಣದಲ್ಲಿ ಹೇಳಿ, ಶ್ರೀ ಗುರುಶಿಷ್ಯನ ಅಂಗದ ಮೇಲೆ ಲಿಂಗಪ್ರತಿಷ್ಠೆಯ ಮಾಡಿದ ಬಳಿಕ, ಪ್ರಾಣದಲ್ಲಿ ಲಿಂಗ ವಿಪ್ಪುದೆಂಬ ವ್ರತಗೇಡಿಗಳ ಮಾತ ಕೇಳಲಾಗದು. ಒಳಗಿಪ್ಪನೇ ಲಿಂಗ ದೇವನು? ಮಲಮೂತ್ರದ ಹೇಸಿಕೆಯ ಮಾಂಸದ ನಡುವೆ ಅಲ್ಲಿ ಪ್ರಾಣ ವಿಪ್ಪುದಲ್ಲದೆ ಲಿಂಗವಿಪ್ಪುದೆ? ಆ ಪ್ರಾಣನ ತಂದು ಇಷ್ಟಲಿಂಗದಲ್ಲಿ ಇರಿಸಿ ನೆರೆಯಬಲ್ಲಡೆ ಆತನೆ ಪ್ರಾಣಲಿಂಗ ಸಂಬಂಧಿ ಎಂಬೆ. ಅಲ್ಲದವರ ಮೆಚ್ಚುವನೆ ನಮ್ಮ ಗುಹೇಶ್ವರಲಿಂಗವು?

ಟೀಕು.— ಶ್ರೀಗುರುಕರುಣವ ಪಡೆದು ಅಂಗದ ಮೇಲೆ ಲಿಂಗ ಸಂಬಂಧವಾಗಿ, ಆ ಲಿಂಗದಲ್ಲಿ ಪ್ರಾಣ ಸಮರಸವಾದಡೆ ಅದೇ ಪ್ರಾಣ ಲಿಂಗ ಸಂಬಂಧ. ಇದಲ್ಲದೆ ಲಿಂಗಧಾರಣ ಮಾತ್ರದಿಂದ ಪ್ರಾಣಲಿಂಗ ಸಂಬಂಧಿಗಳೆಂಬ ನುಡಿ ಮಿಥ್ಯ ಎಂಬುದೀ ವಚನಾರ್ಥ.

೨೮. ಕಾಯದೊಳಗಣ ಜೀವವ ಮಿೞರಿ ಹೋಹ ಕಳ್ಳನ ಸಂಗ ಬೇಡ. ನಿಮ್ಮ ನಿಮ್ಮ ವಸ್ತುವ ಸುಯಿಧಾನವ ಮಾಡಿಕೊಳ್ಳಿ. ಗುಹೇಶ್ವರನೆಂಬ ಕಳ್ಳನ ಕೊಂದರೆ ಆಳುವವರಾರು?

ಟೀಕು.— ಕಾಯ ಭಾವ ಜೀವಭಾವವ ಹೊದ್ದದೆ ಬೇರ್ಪಡಿಸಿಪ್ಪ ಲಿಂಗದಲ್ಲಿ ನಾನು ಸಂಗವ ಮಾಡಿಹೆನೆನಬೇಡ. ಆ ಲಿಂಗವೆ ತಾನೆಂದರಿದಡೆ ಹಿಂದಣ ಮುಂದಣ ಚಿಂತೆ ಇಲ್ಲವೆಂಬುದೀ ವಚನಾರ್ಥ.

೨೯. ಅಕ್ಕಟಾ! ಜೀವನ ತ್ರಿವಿಧವೆ ಮೂರಕ್ಕೆ ಮುಟ್ಟದೆ ಹೋದೆಯಲ್ಲಾ. ಬಿಂದುವಿನ ಕೊಡನ ಹೊತ್ತುಕೊಂಡು, ಅಂದ ಛಂದಗೆಟ್ಟು ಆಡುವರಯ್ಯಾ! ಗುಹೇಶ್ವರ ಸಿರಾಳವೆ ಅಯ್ದರಿಂದ ಕೆಟ್ಟಿತ್ತು ಮೂರು ಲೋಕ.

ಟೀಕು:— ವಿಶ್ವ, ತೈಜಸ, ಪ್ರಾಜ್ಞರೆಂಬ ಜೀವತ್ರಯವು ಇಷ್ಟ, ಪ್ರಾಣ, ಭಾವವೆಂಬ ತ್ರಿವಿಧ ಲಿಂಗಸ್ಥಲದಲ್ಲಿ ಸಂಗವಿಲ್ಲದಕಾರಣ, ಮಾಂಸ

ಬಿಂದುವ ಧರಿಸಿಕೊಂಡು, ಚರಿಸುತ್ತ ಪಂಚಭೂತ ಗುಣಭ್ರಾಂತಿಯಿಂದ ತ್ರಿಜಗ ಕೆಡುತ್ತಿಹುದು. ಪ್ರಾಣಸ್ಥಾನದಲ್ಲಿ ಲಿಂಗ ನಿರಾಳ ವೇಧಿಸಿದಡೆ ಕೇಡಿಲ್ಲವೆಂಬುದೀ ವಚನಾರ್ಥ.

೩೦. ಅಷ್ಟದಳ ಕಮಲದ ಮೇಲಿಪ್ಪ ನಿಃಶೂನ್ಯನ ಮರ್ಮವ ನರಿಯದೆ, ಪ್ರಾಣಲಿಂಗವೆಂದೆಂಬರು. ಸಂದೇಹ, ಶುದ್ಧಿಯ ವಂಚಕರು ಅಂಗದಾಪ್ಯಾಯನಕ್ಕೆ ಲಿಂಗವನರಸುವ ಭಂಡರನೇನೆಂಬೆ ಗುಹೇಶ್ವರಾ?

ಟೀಕು:— ಹೃದಯ ಕಮಲ ಮಧ್ಯದಲ್ಲಿಪ್ಪ ಪ್ರಾಣಲಿಂಗವನರಿಯದೆ, ಬೇರೆ ಮತ್ತೆ ಪ್ರಾಣಲಿಂಗ ಸಂಬಂಧವ ಬಯಸಿ ಬಾಯಾರುವ ಅಜ್ಞಾನಿಗಳಿಗೆ ಪ್ರಾಣಲಿಂಗ ಸಂಬಂಧವಳವಡದೆಂಬುದೀ ವಚನಾರ್ಥ.

೩೧. ಲಿಂಗಾರ್ಚನೆ ಇಲ್ಲದ ಮುನ್ನ, ಸಿಂಗಿಯನಾರೋಗಿಸಿದಿರಿ. ಸಂಚೆ ಸಮಾಧಿಗಳಿಲ್ಲದ ಮುನ್ನ ಉಂಡಿರಿ. ಚೆನ್ನನ ಮನೆಯಲ್ಲಿ ಚಿತ್ರ ಗುಪ್ತರರಿಯದ ಮುನ್ನ ಎತ್ತಿದಿರಿ. ಕಾಂಚಿಯಪುರವ ಬೈಚಿಟ್ಟಿರಿ. ಕೈಲಾಸದಲ್ಲಿ ನಿಮ್ಮ ಚಿಕ್ಕಟುದರದಲ್ಲಿ ಈರೇಳು ಭುವನವೆಲ್ಲವು ನಿಮ್ಮ ರೋಮಕೂಪದಲ್ಲಡಗಿದವು, ಪ್ರಾಣಾಪಾನ, ವ್ಯಾನೋದಾನ, ಸಮಾನ, ರಹಿತ ಗುಹೇಶ್ವರಾ॥

ಟೀಕು:— ಲಿಂಗಾರ್ಚನೆಯ ಕ್ರಿಗಳನಾಚರಿಸದ ಮುನ್ನವೆ ಪ್ರಪಂಚವಡಗಿಸಿದ ಕಾರಣ, ಕಾಲಕಲ್ಪಿತ ಮಂತ್ರ ತಂತ್ರ ರಹಿತವಾಗಿ ಸುಖ ಪ್ರಸನ್ನ ಲೀಲಾ ವಿಲಾಸವನೆಯ್ದಿ, ಒಳಹೊರಗೆಂಬುದಿಲ್ಲದ ಭಕ್ತಿ ಪಿಂಡವ ಧರಿಸಿದ ಶರಣನ ಉದರದಲ್ಲ ಕೈಲಾಸವಡಗಿತ್ತು. ಈರೇಳು ಭುವನವು ರೋಮಕೂಪದೊಳಗಡಗಿದವು. ಇಂತಪ್ಪ ಶರಣನೆ ಪಂಚಪ್ರಾಣವಾಯು ವಿಕಾರವಳಿದ ಪ್ರಾಣಲಿಂಗಸಂಬಂಧಿ ಎಂಬುದೀ ವಚನದ ತಾತ್ಪರ್ಯಾರ್ಥ.

೩೨. ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳು ಭುವನಂಗಳಡಗಿದವು. ನಾಟಕ ನಾಟಕವ ನಟಿಸುತ್ತ, ಆಡಿಸುವ ಸೂತ್ರದ ಪರಿ, ಗುಹೇಶ್ವರಲಿಂಗ ನಿರಾಳ ಚೈತನ್ಯ.

ಟೀಕು:— ನೋಡುವ ನೋಟದ ಸೂಕ್ಷ್ಮ ನಾಳದಲ್ಲಿ ರೂಪಾದಿಯಾದ ವಿಶ್ವವಡಗಿದ ಹಾಗೆ ಶರಣನ ಸೂಕ್ಷ್ಮಾಂತರಂಗದಲ್ಲಿ ಲಿಂಗವಡಗಿಹುದೆಂಬುದೀ ವಚನಾರ್ಥ.

೨೩. ಮರನೊಳಗಣ ಪತ್ರ ಫಲಂಗಳು ಮರ ಕಾಲ ವಶದಲ್ಲಿ ತೋರುವಂತೆ, ಹರನೊಳಗಣ ಪ್ರಕೃತಿ ಸ್ವಭಾವಂಗಳು ಹರಭಾವದಿಚ್ಛೆಗೆ ತೋರುವವು. ಲೀಲೆಯಾದಡುಮಾಪತಿ, ಲೀಲೆ ತಪ್ಪಿದಡೆ ಸ್ವಯಂಭು ಗುಹೇಶ್ವರಾ.

ಟೀಕು:— ಶಿವನ ಭಾವದಿಚ್ಛೆಗೆ, ಶಿವನೊಳಗಡಗಿದ ವಿಶ್ವವು ಪ್ರಕಾಶಿಸಿ ತೋರಲು, ಆ ವಿಶ್ವಕ್ಕೆ ಶಿವನು ಉಮಾಪತಿಯಾಗಿರ್ದನು. ವಿಶ್ವ ಅಳಿದಡೆ, ಶಿವನು ಸ್ವಯಂಭುವಾದನೆಂಬುದೀ ವಚನಾರ್ಥ.

೨೪. ಓಡಿನಲುಂಟೆ ಕನ್ನಡಿಯ ನೋಟ? ಮರುಳಿನ ಕೂಟ ವಿಪರೀತ ಚರಿತ್ರ. ನೋಟದಸುಖ ತಾಗಿ ಕೋಟಲೆಗೊಂಡನು. ಗುಹೇಶ್ವರ ಲಿಂಗವು ಒಬ್ಬನೆ ಅಚಳ, ಉಳಿದವರೆಲ್ಲರೂ ಸೂತಕಿಗಳು.

ಟೀಕು:— ಅಜ್ಞಾನದಲ್ಲಿ ಜ್ಞಾನ ಮುಖ ದರ್ಶಣವಿಲ್ಲ. ಆ ಅಜ್ಞಾನದ ಕೂಟವೆ ವಿಪರೀತ ಭಾವ. ಅದನಳಿದು ಸುಜ್ಞಾನ ದೃಷ್ಟಿಯ ಸಂಗವಾದಡೆ, ಲಿಂಗ ವಿರಹ ಮಿಗಿಲಾಗಿ, ತದ್ಗತವಾದ ಕಾರಣ ಆವ ಸೂತಕವೂ ಇಲ್ಲವೆಂಬುದೀ ವಚನಾರ್ಥ.

೨೫. ಎಸೆಯದಿರು, ಎಸೆಯದಿರು ಕಾಮಾ ನಿನ್ನಬಾಣ. ಹುಸಿಯ ಬೇಕೋ? ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಇವು ಸಾಲವೆ ನಿನಗೆ? ಗುಹೇಶ್ವರಲಿಂಗದ ವಿರಹದಲ್ಲಿ ಬೆಂದವರ ಮರಳಿ ಸುಡಲುಂಟೆ ಮರುಳ ಕಾಮಾ?

ಟೀಕು:— ಅಂಗವಿಕಾರ ಮೊದಲಾದ ಕಾಮವಿಕಾರವಳಿದು ಜ್ಞಾನಾಗ್ನಿಯಲ್ಲಿ ದಗ್ಧವಾದ ಶರಣನ ಕಾಮವಿಕಾರ ಮುಟ್ಟಲಮ್ಮವೆಂಬುದೀ ವಚನಾರ್ಥ.

೨೬. ಸತಿ ಭಕ್ತೆಯಾದಡೆ ಹೊಲೆಗಂಜಲಾಗದು. ಪತಿ ಭಕ್ತನಾದಡೆ ಕುಲಕ್ಕಂಜಲಾಗದು. ಸತಿ ಪತಿ ಎಂಬ ಅಂಗ ಸುಖ ಹಿಂಗಿ ಲಿಂಗವೆ ಪತಿಯಾದ ಬಳಿಕ, ಸತಿಗೆ ಪತಿಯುಂಟೆ? ಪತಿಗೆ ಸತಿಯುಂಟೆ? ಪಾಲುಂಡು ಮೇಲುಂಬರೆ ಗುಹೇಶ್ವರಾ?

ಟೀಕು:— ಅಂಗ ಪ್ರಕೃತಿಯುಳಿದು, ಲಿಂಗ ಪ್ರಕೃತಿಯಾದ ಬಳಿಕ ಅಂಗ ಸೂತಕ ಹಿಂಗಬೇಕು. ಪ್ರಾಣ ಪ್ರಕೃತಿಯುಳಿದು ಲಿಂಗ ಪ್ರಾಣವಾದ ಬಳಿಕ ಪ್ರಾಣಿನ ಕುಳಸ್ಥಳ ಹಿಂಗಬೇಕು. ಇಂತು ಅಂಗಪ್ರಾ

ಣವೆಂಬ ಭಂಗ ಹಿಂಗಿದಲ್ಲಿ ಲಿಂಗವೇ ಪತಿಯಾಗಿರ್ದ ಕಾರಣ ಶರಣನೇ ಸತಿ, ಲಿಂಗವೇ ಪತಿಯಲ್ಲದೆ ಅನ್ಯವಿಷಯವಿಲ್ಲವೆಂಬುದೀ ವಚನಾರ್ಥ.

೩೭. ಉರಿಗೆ ಉರಿಯನೆ ತೋರುವೆನು. ಅಮೃತದ ಕಳೆಯಲ್ಲಿ ನಿಲಿಸುವೆನು. ನಾನು ಬ್ರಹ್ಮಸ್ಥಾನದಲ್ಲಿ ಗುಹೇಶ್ವರಲಿಂಗ ನಿರಂತರವಾಗಿ ಇರ್ದೆನಯ್ಯಾ.

ಟೀಕು:— ಲಿಂಗಜ್ಞಾನದಲ್ಲಿ ಶರಣನ ಜ್ಞಾನ ಸಂಬಂಧವಾಗಲು, ಪರಮ ಸುಖಾಮೃತ ಪ್ರಸನ್ನವಳವಟ್ಟು ಪರಬ್ರಹ್ಮದ ನೆಲೆಯಲ್ಲಿ ನಿರಂತರ ಶರಣನಿರುತಿರ್ದನೆಂಬುದೀ ವಚನಾರ್ಥ.

೩೮. ಅದ್ಭುತವೆಂಬ ಪಿಶಾಚಿ ಮೂರುಲೋಕವನವಗ್ರಹಿಸಿತ್ತಯ್ಯಾ. ಆ ಅದ್ಭುತದೊಳಗೊಂದು ಗ್ರಹ ನಿರಂತರ ನಲಿದಾಡುತ್ತಿರ್ದಿತ್ತು. ವಜ್ರಯೋಗಿ ಖಗ ರಂಧ್ರಪುರದಲ್ಲಿ ಗುಹೇಶ್ವರಲಿಂಗವು ತಾನೆ ನೋಡಾ.

ಟೀಕು:— ಮಾಯೆ ಎಂಬ ಅದ್ಭುತ ಮೂರುಲೋಕವನವಗ್ರಹಿಸಲು, ಆ ಮಾಯೆಯೊಳಗೆ ಜೀವನೆಂಬ ಭ್ರಮೆ ನಿರಂತರ ನಲಿದಾಡುತ್ತಿರ್ದಿತ್ತು. ಅದನರಿದಡೆ ಆ ಭ್ರಮೆ ಹಿಂಗಿ ಅಭೇದ್ಯ ಜ್ಞಾನಶಕ್ತಿ ಸಂಗವಾಗಿ, ಆ ಪರಬ್ರಹ್ಮರಂಧ್ರದಲ್ಲಿ ಪರಮ ಜ್ಞಾನಲಿಂಗವು ತಾನೆಯಾಗಿರ್ದ್ದಿತ್ತೆಂಬುದೀ ವಚನಾರ್ಥ.

೩೯. ಅನಲನರಣ್ಯದೊಳಗೆದ್ದಲ್ಲಿ ಮರದೆಡೆಯುಲಾರನು ಕಾಣೆ. ಸಂಗ್ರಾಮ ಧೀರರೆಲ್ಲರು ನೆಲೆಗೆಟ್ಟರಾಗಿ, ಮಾಯಾ ಮಂಜಿನ ಕೋಟೆಗೆ ರಂಜನೆಯ ಕೊತ್ತಳ, ಅಂಜನೆಯ ಕಟ್ಟಳೆ, ಗುಹೇಶ್ವರನ ಶರಣ ಐಕ್ಯಸ್ಥಲವ ಮೆಟ್ಟಲೊಡನೆ ಸರ್ವವು ಸಾಧ್ಯವಾಯಿತ್ತು.

ಟೀಕು:— ಭವವೆಂಬ ಅರಣ್ಯದೊಳಗೆ ತಾಪತ್ರಯಾಗ್ನಿ ಎದ್ದು ಸುಡುತ್ತಿರಲು, ಮಾಯೆಯ ಮಂಜಿನ ರಂಜನೆಯ ಕಾಹು ಕಟ್ಟಿನೊಳಗಿರ್ದು ಅದ್ವೈತವ ಸಾಧಿಸಿಹೆನೆಂಬ ವೀರರೆಲ್ಲರು ಮುಂದುಗೆಡುತ್ತಿರ್ದರು. ಅಸಾಧ್ಯ ಸಾಧಕ ನಿಜಲಿಂಗೈಕ್ಯ ಶರಣನು, ಸ್ವಭಾವ ಸ್ಥಲದಲ್ಲಿ ನಿಲ್ಲಲೊಡನೆ ನಿರಾಳವು ಸಾಧ್ಯವಾಯಿತ್ತೆಂಬುದೀ ವಚನಾರ್ಥ.

೪೦. ಪಂಚೇಂದ್ರಿಯ ಸಪ್ತಧಾತುವನತಿಗಳೆದಲ್ಲಿ ಫಲವೇನೋ? ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ವಿಷಯವನತಿಗಳೆದಲ್ಲಿ ಫಲವೇನೋ? ಇವೆಲ್ಲವ ಕೊಂದ ಪಾಪ ನಿಮ್ಮ ತಾಗುದು ಗುಹೇಶ್ವರಾ.

ಟೀಕು:— ಸಕಲ ಕರಣಂಗಳು ಲಿಂಗದಲ್ಲಿ ಅಡಗಿ, ಲಿಂಗೈಕ್ಯವಾದಡೆ, ಅದೇ ಲಿಂಗೈಕ್ಯವು. ಅದಲ್ಲದೆ ಕಳೆಯಬಾರದ ಇಂದ್ರಿಯ ವಿಷಯಕರಣಾದಿ ವೃತ್ತಿಗಳ ಕಳೆದು, ಪಿಡಿದು ನೋಯಿಸಿ, ಲಿಂಗವ ಬೆರಿಸಿಹೆನೆಂದಡೆ, ಎಂದೆಂದಿಗೂ ಅಸಾಧ್ಯವೆಂಬುದೀ ವಚನಾರ್ಥ.

೪೧. ಲಿಂಗ ಒಳಗೋ ಹೊರಗೋ ಬಲ್ಲಡೆ ನೀವು ಹೇಳಿರೆ? ಲಿಂಗ ಎಡನೊ ಬಲನೊ ಬಲ್ಲಡೆ ನೀವು ಹೇಳಿರೆ? ಲಿಂಗ ಹಿಂದೊ ಮುಂದೊ ಬಲ್ಲಡೆ ನೀವು ಹೇಳಿರೆ? ಲಿಂಗ ಸ್ಥೂಲವೊ, ಸೂಕ್ಷ್ಮವೊ ಬಲ್ಲಡೆ ನೀವು ಹೇಳಿರೆ? ಲಿಂಗ ಪ್ರಾಣವೊ, ಪ್ರಾಣ ಲಿಂಗವೊ ಬಲ್ಲಡೆ ನೀವು ಹೇಳಿರೆ ಗುಹೇಶ್ವರಲಿಂಗವನೂ.

ಟೀಕು:— ಸ್ಥೂಲ, ಸೂಕ್ಷ್ಮ, ಅಧೋ, ಊರ್ಧ್ವ ಅಂತರಂಗ ಬಹಿರಂಗ ಇದಾವುದರೊಳಗೆಯೂ ಲಿಂಗೈಕ್ಯವಿಲ್ಲ. ಇದಾವ ವಿಪರೀತವು? ತೊರೆದೊಡೆ ಅದೇ ಲಿಂಗೈಕ್ಯವು ಎಂಬುದೀ ವಚನಾರ್ಥ.

೪೨. ತನು ನಿಮ್ಮ ಪೂಜಿಸುವ ಕೃಪೆಗೆ ಸಂದುದು. ಮನ ನಿಮ್ಮ ನೆನೆವ ಧ್ಯಾನಕ್ಕೆ ಸಂದುದು. ಪ್ರಾಣ ನಿಮ್ಮ ರತಿಸುಖಕ್ಕೆ ಸಂದುದು. ಇಂತು ತನು ಮನ ಪ್ರಾಣ ನಿಮಗೆ ಸಂದಿಪ್ಪ ನಿಸ್ಸಂಗಿಯಾದ ನಿಶ್ಚಟ ಲಿಂಗೈಕ್ಯ ಕಾಣಾ ಗುಹೇಶ್ವರಾ.

ಟೀಕು:— ಅಂಗವಾಚಾರದಲ್ಲಿ ಐಕ್ಯವಾಗಿ, ಮನ ಧ್ಯಾನದಲ್ಲಿ ಐಕ್ಯವಾಗಿ, ಪ್ರಾಣ ಲಿಂಗರತಿ ಸುಖದೊಳಗೆ ಐಕ್ಯವಾಗಿ ಇಪ್ಪ ಶರಣನೆ ನಿಶ್ಚಟ ಲಿಂಗೈಕ್ಯನೆಂಬುದೀ ವಚನಾರ್ಥ.

೪೩. ತನುವಿಂಗೆ ತನುವಾಗಿ, ಮನಕ್ಕೆ ಮನವಾಗಿ, ಜೀವಕ್ಕೆ ಜೀವವಾಗಿ ಇರ್ದುದನಾರು ಬಲ್ಲರೋ? ಅದು ದೂರವೆಂದು, ಸಮೀಪವೆಂದು ಮಹಾಂತ ಗುಹೇಶ್ವರನೊಳಗೆಂದು ಹೊರಗೆಂದು ಬರುಸೂರೆವೋದರು.

ಟೀಕು:— ಶರಣನೊಳಗೆ ಲಿಂಗವಿಪ್ಪ ಭೇದವೆಂತೆಂದೊಡೆ, ತನುವಿನೊಳಗೆ ತನು ರೂಪಾಗಿ, ಮನದೊಳಗೆ ಮನ ರೂಪಾಗಿ ಜೀವದೊಳಗೆ ಜೀವರೂಪಾಗಿ ಇಪ್ಪನು. ಈ ಭೇದವನರಿಯದೆ ಲಿಂಗ ಅಂತರಂಗವೆಂದು ಬಹಿರಂಗವೆಂದು ದೂರವೆಂದು ಹತ್ತಿರೆಂದು, ಅರಸುವವರು ಅಜ್ಞಾನಿಗಳೆಂಬುದೀ ವಚನಾರ್ಥ.

೪೪. ಖೇಚರ ಪವನದಂತೆ ಜಾತಿಯೋಗಿಯ ನಿಲವು ಮಾತಿನೊಳು ಘಾತು ನುಂಗಿ ಉಗುಳ್ತುದಿಂನ್ನೆಂತೊ? ಭೂಚಕ್ರವಳಯವ ಆಚಾ

ರ್ಯ ರಚಿಸಿದ ಗ್ರಾಮವೆಲ್ಲವ ಸುಟ್ಟು ನೇಮ ನೆಲಗತವಾಯಿತ್ತು. ನೇಮ ನಾಮವ ನುಂಗಿ ಗ್ರಾಮ ಪ್ರಭುವನೆ ನುಂಗಿ ಗುಹೇಶ್ವರ ಗುಹೇಶ್ವರ ಎನುತ ನಿರ್ವಯಲಾಯಿತ್ತು.

ಟೀಕು:— ಬಯಲೊಳಗೆ ಚರಿಸುವ ಪವನದಂತೆ, ಒಡಲುವಿಡಿದು ವಿಡಿಯುದೆ ಚರಿಸುವ ಶರಣನು ಧಾತು ಮಾತುವ ನುಂಗಿ ಉಗುಳುವ ನಲ್ಲ. ಅದೆಂತೆಂದೊಡೆ ದೇಹಚಿನ್ಹವಡಗಿ ಗುರುಕರುಣದಿಂದಾದ ನಾನಾ ಕ್ರಿಗಳೆಲ್ಲ ಅರತು ನೇಮವೆಂಬ ನಾಮವಡಗಿ ತನುಮುಖ ತಾನೆಂದು ನಿಂದ ಕಾರಣ ಆ ಶರಣನು ಲಿಂಗೈಕ್ಯನೆಂಬುದೀ ವಚನಾರ್ಥ॥

**ಮಹೇಶ್ವರಸ್ಥಲ ಸಮಾಪ್ತ**



# ಪ್ರಸಾದಿಸ್ಥಲ

ಇಂತು ಮಹೇಶ್ವರಸ್ಥಲದಲ್ಲಿ ನೈಷ್ಠಿಕಾ ಮುಖದಿಂದ ಆಚರಿಸಿ, ಐಕ್ಯವಾದ ಮಹೇಶ್ವರನು ಮುಂದೆ ಪ್ರಸಾದಿಸ್ಥಲದಲ್ಲಿ ಸಾವಧಾನ ಮುಖದಿಂ ಆಚರಿಸಿ ಬೆರಸುವ ಭೇದವೆಂತಿರ್ದುದೆಂದೊಡೆ ಮುಂದೆ ಪ್ರಸಾದಿಸ್ಥಲ ವಾದುದು.

೧. ಬೇಡದ ಮುನ್ನ ಮಾಡಬಲ್ಲಡೆ ಭಕ್ತ. ಬೇಡುವನೆ ಲಿಂಗ ಜಂಗಮು? ಬೇಡುವರಿಗೆಯೂ ಬೇಡಿಸಿಕೊಂಬುವರಿಗೆಯೂ ಪ್ರಸಾದವಿಲ್ಲ ಗುಹೇಶ್ವರಾ.

ಟೀಕು.— ಬಂದ ಜಂಗಮದ ನಿಲವನರಿದು ಉಪಾಧಿರಹಿತನಾಗಿ, ಮಾಡುವಾತನೇ ಭಕ್ತ. ಆ ಮಾಡುವ ಭಕ್ತನೊಳಗನರಿದು ಮಾಡಿಸಿ ಕೊಳಬಲ್ಲಾತನೆ ಜಂಗಮ. ಈ ಸ್ಥಿತಿಯನರಿಯದೆ ಕಲ್ಪಿಸಿ ಮಾಡುವವರಿಗೆಯೂ, ಕಾಮಿಸಿ ಬೇಡುವವರಿಗೆಯೂ ಲಿಂಗಪ್ರಸಾದ ದೂರವೆಂಬುದೀ ವಚನಾರ್ಥ.

೨. ಲಿಂಗ ಜಂಗಮ ಒಂದೇ ಎಂದು ಕಂದೊಳಗೊಂಡಿರಲ್ಲಾ. ಮೂರೆಡೆಯಲ್ಲಿ ಮುಟ್ಟಿತ್ತು. ತ್ರಿವಿಧಾಚಾರಲಿಂಗ ಒಂದೆಡೆಯಲ್ಲಿ ಜಂಗಮ ಒಂದೆಡೆಯಲ್ಲಿ ಪ್ರಸಾದ ಒಂದೆಡೆಯಲ್ಲಿ ಇಂತು ಎಲ್ಲಿಯ ಪ್ರಸಾದವೋ ಗುಹೇಶ್ವರಾ?

ಟೀಕು.— ಲಿಂಗ ಜಂಗಮ ಒಂದೆ ಎಂದು ನುಡಿವಡೆ, ತ್ರಿಪುಟಿ ಭಿನ್ನವಾಗಿಹುದು. ಅದು ಕಾರಣ ಈ ಭಿನ್ನ ವಿವೇಕವುಳ್ಳವರಿಗೆ ಪ್ರಸಾದವಿಲ್ಲವೆಂಬುದೀ ವಚನಾರ್ಥ.

೩. ಹಸಿವಾಯಿತ್ತೆಂದು ಹಸಿದು ಮಜ್ಜನಕ್ಕೆರೆವರಯ್ಯಾ! ತೃಷೆಯಾಯಿತ್ತೆಂದು ಅರ್ಪಿತವ ಮಾಡುವರಯ್ಯಾ! ಇದೆಂತು ಭಕ್ತಿಸಂಬಂಧ? ಇದೆಂತು ಶರಣ ಸಂಬಂಧ? ಇದೆಂತು ಲಿಂಗ ಸಂಬಂಧ? ಕಾರಣವಿಲ್ಲದ ಭಕ್ತಿಯು ಕಂಡಡೆ ಹೋಗ ನೂಕುವನು ಗುಹೇಶ್ವರಾ.

ಟೀಕು.— ಲಿಂಗಾಪ್ಯಾಯನಕ್ಕಲ್ಲದೆ, ತಮ್ಮ ಅಂಗದ ಹಸಿವು ನಿಮಿತ್ಯ ಲಿಂಗಕ್ಕೆ ಬೋನವ ಹಿಡಿದು ಪ್ರಸಾದವ ಕೊಂಡೆನೆಂಬವರಿಗೆ

ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲ. ಇಂತಿವರು ಲಿಂಗಕ್ಕೆ ದೂರ ವೆಂಬುದೀ ವಚನದ ತಾತ್ಪರ್ಯಾರ್ಥ.

೪. ಪ್ರಾಣವ ಮಾರುವಂಗೆ ಪ್ರಾಣಲಿಂಗವೆಲ್ಲಿಯದೊ? ಇಷ್ಟ ಲಿಂಗಪೂಜಕರೆಲ್ಲ ನೇಮವ ಮಾಡುವರು. ಸೂನೆಗಾರಂಗೆ ಪ್ರಸಾದವೆ ಲ್ಲಿಯದೋ ಗುಹೇಶ್ವರಾ?

ಟೀಕು.— ತನ್ನ ಪ್ರಾಣನ ಸ್ಥಿತಿ ಅನ್ಯೋನ್ಯವಾಗಿ ಇರುತ್ತಿರಲು ಕರಸ್ಥಲದಲ್ಲಿ ಲಿಂಗವ ಧರಿಸಿಕೊಂಡು ಪೂಜಿಸುವ ಭಿನ್ನಯುಕ್ತರಿಗೆ ಪ್ರಸಾದವಿಲ್ಲವೆಂಬುದೀ ವಚನಾರ್ಥ.

೫. ಒಳಗೆ ತೊಳೆಯಲರಿಯದೆ, ಹೊರಗೆ ತೊಳೆದು ಕುಡಿವುತ್ತಿರ್ದರಯ್ಯಾ! ಪಾದೋದಕ ಪ್ರಸಾದವನರಿಯದೆ ಬಂದ ಬಟ್ಟೆಯಲ್ಲಿ ಮುಳುಗುತ್ತಿದ್ದಾರೆ ಗುಹೇಶ್ವರಾ.

ಟೀಕು:— ಅಂತರಂಗದ ಮಲತ್ರಯವ ತೊಳೆಯಲರಿಯದೆ ಬಹಿರಂಗದಲ್ಲಿ ಲಿಂಗವ ತೊಳೆದು ಪಾದೋದಕ ಪ್ರಸಾದವ ಕೊಂಬುವರಿಗೆ, ಭವ ಬಾಧೆ ಹಿಂಗದು ಎಂಬುದೀ ವಚನದ ತಾತ್ಪರ್ಯಾರ್ಥ.

೬. ಮಾಡಿದ ಓಗರ ಮಾಡಿದಂತೆ ಇರ್ದಿತ್ತು. ನೀಡಿದ ಕೈಗಳು ಎಡೆಯಾಡುತ್ತಿರ್ದ್ದವು. ಲಿಂಗಕ್ಕರ್ಪಿತವ ಮಾಡಿದೆವೆಂಬರು. ಒಂದರೊಳಗೊಂದು ಸವೆಯದು. ಲಿಂಗವಾರೋಗಣೆಯ ಮಾಡಿವೆವೆಂಬರು ತಾ ಉಂಡು ನಿಮ್ಮ ದೂರುವರು ಗುಹೇಶ್ವರಾ.

ಟೀಕು — ಬಂದ ಪದಾರ್ಥದ ಸಿಂದ ನಿಲವನರಿಯದೆ ಅಂಗವಿಕಾರದಿಂದ, ಲಿಂಗಕ್ಕರ್ಪಿಸಿ, ಲಿಂಗಕ್ಕೆ ಆರೋಗಣೆಯ ಮಾಡಿಸಿದೆವೆಂದು ತಮ್ಮೊಡಲ ಹೊರೆದು, ಅಸತ್ಯವ ನುಡಿವವರಿಗೆ ಪ್ರಸಾದವಿಲ್ಲ. ಅವರು ಭವಭಾರಿಗಳೆಂಬುದೀ ವಚನಾರ್ಥ.

೭. ತಮ್ಮ ತಮ್ಮ ಮುಖದಲ್ಲಿ ಲಿಂಗವನೊಲಿಸಿದವರು ಆರಾಧಿಸಿದವರು ಬೇಡಿದುದ ಪಡೆದವರು ಎಲ್ಲ ಲಿಂಗಭೋಗೋಪಭೋಗಿಗಳಾಗಿ ಭೋಗಿಸುವರಿಲ್ಲ. ಗಂಗೆ ವಾಳುಕರೆಲ್ಲ ವರಮುಖಿಗಳಾಗಿ ಮೂರ್ತಿಯ ಳಿದು ಹೋದರು ಗುಹೇಶ್ವರಾ.

ಟೀಕು — ರುದ್ರಾದಿಗಳು ಮೊದಲಾಗಿ ಎಲ್ಲರು ಲಿಂಗವ ಪೂಜಿಸಿ, ಬೇಡಿವ ಪದವ ಹಡೆದು ಪ್ರಳಯಕ್ಕೆ ಒಳಗಾಗಿ ಹೋದರಲ್ಲದೆ, ಲಿಂಗ

ಸುಖದಲ್ಲಿ ಲಿಂಗ ಭೋಗೋಪಭೋಗವ ಮಾಡುವವರು ಅಪೂರ್ವವೆಂಬುದೀ ವಚನಾರ್ಥ.

೮. ಬೆಳಗಿನೊಳಗಣ ರೂಪ ತಿಳಿದು ನೋಡಿಯೆ ಕಳೆದು, ಹಿಡಿಯದೆ ಹಿಡಿದು ಕೊಳಬಲ್ಲನಾಗಿ ಲಿಂಗಪ್ರಸಾದಿ. ಜಾತಿಸೂತಕವಳಿದು ಶಂಕೆ ತಲೆದೋರದೆ, ನಿಶ್ಶಂಕನಾಗಿ ಆತ ಸಮಯಪ್ರಸಾದಿ. ಸಕಲ ಭ್ರಮೆಯನೆ ಜರಿದು, ಗುಹೇಶ್ವರ ಲಿಂಗದಲ್ಲಿ ಬಸವಣ್ಣನೊಬ್ಬನೆ ಅಚ್ಚಪ್ರಸಾದಿ.

ಟೀಕು:— ತನ್ನ ಸರ್ವಾಂಗದಲ್ಲಿ ಸ್ವಾಯತವಾಗಿ ಬೆಳಗುವ ಲಿಂಗವ ಭಿನ್ನವಿಟ್ಟು ಧರಿಸದೆ ಅರ್ಪಿಸಿ ಸುಖಿಸುವಾತ ಲಿಂಗಪ್ರಸಾದಿ. ಸಮಯದಲ್ಲಿ ಅಂಗದ ಮೇಲೆ ಲಿಂಗವುಳ್ಳವರೆಲ್ಲರನು ಪೂರ್ವಜಾತಿ ಸೂತಕವ ವಿವರಿಸದೆ, ಪ್ರಸಾದವ ಕೊಳಬಲ್ಲಡೆ ಆತ ಸಮಯಪ್ರಸಾದಿ. ಅಂತರಂಗ ಬಹಿರಂಗದ ಸಕಲ ಭ್ರಮೆಯನೆ ಕಳೆದು, ಪ್ರಸನ್ನ ಪ್ರಸಾದವ ಪಡೆದಾತನಚ್ಚ ಪ್ರಸಾದಿ ಎಂಬುದೀ ವಚನಾರ್ಥ.

೯. ತನುವ ತಾಗದ ಮುನ್ನ, ಮನವ ತಾಗದ ಮುನ್ನ, ಆಪ್ಯಾಯನ ಬಂದು ಎಡೆಗೊಳ್ಳದ ಮುನ್ನ, ಅರ್ಪಿತವ ಮಾಡಬೇಕು. ಗುರುವಿನ ಕೈಯಲ್ಲಿ ಎಳತಟವಾಗದ ಮುನ್ನ, ಅರ್ಪಿತವ ಮಾಡಬೇಕು. ಎಡದ ಕೈಯ್ಯಲಿ ಕಿಚ್ಚು ಬಲದ ಕೈಯ್ಯಲಿ ಹುಲ್ಲು. ಉರಿ ಹತ್ತಿತ್ತು ಗುಹೇಶ್ವರಾ ನಿಮ್ಮ ಪ್ರಸಾದಿಯಾ ॥

ಟೀಕು:— ತನ್ನ ತನುವ ತಾಗದೆ, ತನ್ನ ಮನವ ತಾಗದೆ, ಲಿಂಗದ ತನು ಲಿಂಗದ ಮನವ ತಾಗಿ ಅರ್ಪಿಸಿದಡೆ ಆತ ಪ್ರಸಾದಿ. ಇಂತಪ್ಪ ಪ್ರಸಾದಿಗೆ ಅರ್ಪಿಸುವ ಕೈ ಎಳತಟವಿಲ್ಲ. ಅದೇನು ಕಾರಣ? ಉರಿಯೊಳಗೆ ತೃಣ ಬಿದ್ದಂತೆ ಮುಟ್ಟಲೊಡನೆ ಅರ್ಪಿತವಹ ಕಾರಣದಿಂ ಎಂಬುದೀ ವಚನಾರ್ಥ ॥

೧೦. ತನ್ನ ಮುಟ್ಟಿ ನೀಡಿದುದೆ ಪ್ರಸಾದ. ತನ್ನ ಮುಟ್ಟದೆ ನೀಡಿದುದೆ ಓಗರ. ಲಿಂಗಕ್ಕೆ ಕೊಟ್ಟು ಕೊಂಡಡೆ ಪ್ರಸಾದಿ. ಇದು ಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ಗುಹೇಶ್ವರಾ.

ಟೀಕು:— ತಾನು ಲಿಂಗಕ್ಕೆಂದು ಅರಿದು ಅರ್ಪಿಸಿದ ಸುಖವೆ ಪ್ರಸಾದ ತನ್ನನರಿಯದೆ ತಾನೆ ಲಿಂಗ ಲೀಯವಾದ ಅರ್ಪಿತವೆ ಲಿಂಗಮುಖದಿಂದಾದ ಓಗರ. ಈ ಅರ್ಪಿತವ ಬಲ್ಲಾತನೆ ಲಿಂಗಪ್ರಸಾದಿ ಎಂಬುದೀ ವಚನಾರ್ಥ.

೧೧. ಆದಿ ಇಲ್ಲದಿರ್ದಡೆ ಲಿಂಗಪ್ರಸಾದಿ ಎಂಬೆ. ವ್ಯಾಧಿ ಇಲ್ಲದಿರ್ದಡೆ ಜಂಗಮ ಪ್ರಸಾದಿ ಎಂಬೆ. ಲೌಕಿಕದ ಸೋಂಕದಿರ್ದಡೆ ಸಮಯ ಪ್ರಸಾದಿ ಎಂಬೆನು. ಇಂತೀ ಪ್ರಸಾದ ಸಂಬಂಧಿಯಾದಾತನನಚ್ಚ ಪ್ರಸಾದಿ ಎಂಬೆ ಕಾಣಾ ಗುಹೇಶ್ವರಾ,

ಟೀಕು.— ಆಧಿ, ವ್ಯಾಧಿ, ಲೌಕಿಕವೆಂಬ ತ್ರಿವಿಧ ಸೂತಕವಿಲ್ಲದಾತ ಲಿಂಗ ಜಂಗಮ ಸಮಯವೆಂಬ ತ್ರಿವಿಧ ಪ್ರಸಾದಿ ಎಂಬುದೀ ವಚನಾರ್ಥ.

೧೨, ಸರ್ವ ಸುಯಿಧಾನಿ ಎನಿಸಿಕೊಳಬಲ್ಲಡೆ, ಬಂದ ಕಾಮ ಕ್ರೋಧವ ಲಿಂಗಾರ್ಪಿತವ ಮಾಡಬೇಕು. ಅಲಗಿನ ಕೊನೆಯ ಮೊನೆಯ ಮೇಲಣ ಸಿಂಹಾಸನ ಹೊರಳಿ ಹೋಗಬಾರದು. ಶಿವಾಚಾರದ ಧಾರೆ ಮೀರಿ ಮುಟ್ಟದ ಮುನ್ನ ಅರ್ಪಿತವ ಮಾಡಬಲ್ಲಡೆ ಭಿನ್ನಭಾವವೆಲ್ಲಿಯದು ಗುಹೇಶ್ವರಾ ?

ಟೀಕು.— ನಿರಂತರ ಸುಯಿಧಾನದಲ್ಲಿ ನಿರಂತರ ಪಾವನವುಳ್ಳಾತನು ತನ್ನಲ್ಲಿ ತಲೆದೋರಿದ ತನುಗುಣಾದಿಗಳ ತನ್ನ ಸೋಂಕಲೀಯ್ಯದೆ ಅರ್ಪಿಸುವಾತನೆ ಅಭಿನ್ನಪ್ರಸಾದಿ ಎಂಬುದೀ ವಚನಾರ್ಥ.

೧೩. ಅಚ್ಚಪ್ರಸಾದಿ. ಅಚ್ಚಪ್ರಸಾದಿ ಎಂಬಿರಿ ಕೇಳಿರಯ್ಯಾ! ನಿಚ್ಚಕ್ಕೆ ನಿಚ್ಚ ಹುಸಿವ ಹುಸಿಗಳ ಕಂಡೆವಲ್ಲಾ! ನಿಮ್ಮಲ್ಲಿ ವಾಯು ಬೀಸದ ಮುನ್ನ ಆಕಾಶ ಬಲಿಯದ ಮುನ್ನ ಲಿಂಗಕ್ಕೆ ಅರ್ಪಿಸುವ ಮುಖವನರಿಯರಯ್ಯಾ ಭೋಜನವ ಮಾಡಿ ಭಾಜನವನಿಟ್ಟು ಹೋಹ ಹಿರಿಯರಿಗೆ ಭಂಗ ನೋಡಾ ಗುಹೇಶ್ವರಾ. •

ಟೀಕು.— ವೃಥಾ ಪ್ರಸಾದಿ ಎಂದೊಡೆ, ಅದು ಹುಸಿಮಾತು. ಅದೆಂತೆಂದೊಡೆ, ವಾಯು ಪ್ರಾಣವ ಚರಿಸದೆ ಆಕಾಶಭ್ರಮೆ ಬಲಿಯದೆ, ಸರ್ವಾಂಗವನರ್ಪಿಸಿ, ಪ್ರಸಾದ ಕಾಯುವಳವಟ್ಟಡೆ ಆತ ಅಚ್ಚಪ್ರಸಾದಿ. ಇದಲ್ಲದೆ ಅಂತರಂಗದಲ್ಲಿ ಪ್ರಸಾದವನುಂಡು ಬಹಿರಂಗದಲ್ಲಿ ತನುವ ಬಿಸಾಟಡೆ ಅದು ಪ್ರಸಾದಿಯ ಅಂಗವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

೧೪. ಅನುಭಾವದಿಂದ ಹುಟ್ಟಿತ್ತು ಲಿಂಗ, ಅನುಭಾವದಿಂದ ಹುಟ್ಟಿತ್ತು ಜಂಗಮ, ಅನುಭಾವದಿಂದ ಹುಟ್ಟಿತ್ತು ಪ್ರಸಾದ, ಅನುಭಾವವನುವಿನಲ್ಲಿ ಗುಹೇಶ್ವರಾ ನಿಮ್ಮ ಶರಣ ಅನುಪಮ ಸುಖಿ.

ಟೀಕು — ವಿವೇಕದಿಂದವೆ ಲಿಂಗ, ವಿವೇಕದಿಂದವೆ ಜಂಗಮ

ವಿವೇಕದಿಂದವೆ ಪ್ರಸಾದ, ಇಂತೀ ತ್ರಿವಿಧವು ವಿವೇಕದಿಂದಳವಟ್ಟಿತ್ತಾಗಿ ವಿವೇಕದಿಂದ ಶರಣ ಸುಖಿಯಾಗಿಪ್ಪನೆಂಬುದೀ ವಚನಾರ್ಥ.

೧೫. ಮನ ಬೀಸರವೆಂಬ ಗಾಳಿ ಬೀಸಿತ್ತು. ವಿದ್ಯಾ ಮುಖದ ಜ್ಯೋತಿ ನಂದಿತ್ತು. ಕತ್ತಲೆಯಲ್ಲಿ ಗತಿಯು ಕಾಣದೆ ದುಮ್ಮಾನ ನೆಲೆಗೊಂಡಿತ್ತು ನೋಡಾ. ಸುಮ್ಮಾನ ಹೋಯಿತ್ತು. ಸಕಳ ಕಳಾವಿದ್ಯಾ ಗುರುವಲ್ಲಿ ನುತಿ ತಾಳವೆಂಬ ಗುಹ್ಯ ತಾಗಿ, ಸುತಾಳವೆಂಬ ಶರಣನಂಗದಲ್ಲಿ ಬಿದ್ದು ಗುರುವಿಂಗೆ ಪ್ರಸಾದವಾಯಿತ್ತು. ಶಿಷ್ಯಂಗೆ ಓಗರವಾಯಿತ್ತು ನೋಡಾ! ಲೌಕಿಕ ನಾಯಕ ನರಕ ಅರ್ಪಿತ ಮುಖವನರಿಯದೆ ಅನರ್ಪಿತಮುಖವಾಯಿತ್ತು ಗುಹೇಶ್ವರಾ.

ಟೀಕು.— ಮನವಿಕಾರವೆಂಬ ಗಾಳಿ ಬೀಸಲು, ಜ್ಞಾನಜ್ಯೋತಿ ನಂದಿತ್ತು. ಜ್ಞಾನಜ್ಯೋತಿ ನಂದಿದ ಕಾರಣ ಅಜ್ಞಾನದಲ್ಲಿ ನಡೆವೆ. ಪಥ ಕಾಣಬಾರದಾಯಿತ್ತು. ಕಾಣಬಾರದ ಕಾರಣ ದುಮ್ಮಾನವೆ ಮುಖವಾಯಿತ್ತು. ದುಮ್ಮಾನವೆ ಮುಖವಾದ ಕಾರಣ ಸುಮ್ಮಾನ ಹೋಯಿತ್ತು. ಇದಲ್ಲದೆ ಮನವು ಮಹದಲ್ಲಿ ನಿಂದು, ಸಕಲ ಕಳೆ ಎಲ್ಲವು ತನ್ನ ಜ್ಞಾನಗುರು ಮುಖದಿಂದುದಯವಾಗಿ, ಶರಣನ ಗೋಪ್ಯಾಂತರಂಗದಲ್ಲಿ ಅವಿರಳವಾದ ಕಾರಣ ಶಿಷ್ಯ ರುಚಿಸಿದ ಸುಖವು ಗುರುವಿಂಗೆ ಪ್ರಸಾದಮುಖವಾಗಿ ಲೌಕಿಕ ನಾಸ್ತಿಯಾಗಿ ಅರ್ಪಿತವನರ್ಪಿತವೆಂಬೆರಡು ಅರತು ಅನರ್ಪಿತ ಮುಖವಾಯಿತ್ತೆಂಬುದೀ ವಚನಾರ್ಥ.

೧೬. ಪದವನರ್ಪಿಸಬಹುದಲ್ಲದೆ, ಪದಾರ್ಥವನರ್ಪಿಸಬಾರದು. ಓಗರವನರ್ಪಿಸಬಹುದಲ್ಲದೆ ಪ್ರಸಾದವನರ್ಪಿಸಬಾರದು. ಗುಹೇಶ್ವರಾ ನಿಮ್ಮ ಶರಣರು ಹಿಂದ ನೋಡಿ ಮುಂದನರ್ಪಿಸುವರು.

ಟೀಕು:— ಬಂದ ಪದಾರ್ಥದ ರೂಪನರ್ಪಿಸಬಹುದಲ್ಲದೆ ರೂಪಿನೊಳಗಣ ರುಚಿಯನರ್ಪಿಸಬಾರದು. ಇದನರಿದು, ಲಿಂಗ ಸಂಬಂಧಿಗಳು ರೂಪು ರುಚಿ ಎರಡನು ವಿರಳವಿಲ್ಲದೆ ಅರ್ಪಿಸುವರೆಂಬುದೀ ವಚನಾರ್ಥ.

೧೭. ಘನವಪ್ಪ ಬೋನವನು ಒಂದನುವಿನ ಪರಿಯಾಣದಲ್ಲಿ ಹಿಡಿದು, ಗುರುಲಿಂಗವಾರೋಗಣೆಯ ಮಾಡಿ, ಮಿಕ್ಕುದು ಪ್ರಸಾದ ಈ ತೆರದ ಘನವಪ್ಪ ಲಿಂಗವನು ಒಂದನುವಿನಲ್ಲಿ ತಂದಿರಿಸಿ, ಘನವಪ್ಪ ಬೋನ

ವನು ಲಿಂಗವಾರೋಗಣೆಯ ಮಾಡಿ, ಮಿಕ್ಕುದ ಕೊಳಬಲ್ಲಡೆ ಪ್ರಸಾದಿ. ಇಂತೀ ತೆರನ ಬೆಸಗೊಳಬಲ್ಲಡೆ ಎನ್ನ ಬೆಸಗೊಳ್ಳಿ ಗುಹೇಶ್ವರಾ.

ಟೀಕು:— ಪರಿಪೂರ್ಣ ಪ್ರಸಾದಿಯು ಪರಿಪೂರ್ಣವೆಂಬ ಅಂಗ ಭಾಜನದಲ್ಲಿ ಪರಿಪೂರ್ಣ ಬೋನವಳವಡಲು, ಅಲ್ಲಿ ಪರಿಪೂರ್ಣ ರೂಪು ಅರ್ಪಿತವಾದ ಪ್ರಸಾದವ ಕೊಂಬುದೀಗ ಗುರುಪ್ರಸಾದ. ಇಂತಪ್ಪ ಶರಣನ ಪರಿಪೂರ್ಣ ಪ್ರಾಣದ ಅಂಗಭಾಜನದಲ್ಲಿ ಪರಿಪೂರ್ಣ ರುಚಿ ಅಳವಡಲು ಆ ಪ್ರಸಾದವ ಕೊಂಬುದೀಗ ಲಿಂಗಪ್ರಸಾದ. ಈ ತೆರನ ಇಂತಪ್ಪ ಶರಣನೆ ಬಲ್ಲನೆಂಬುದೀ ವಚನಾರ್ಥ.

**ಪ್ರಸಾದಿಸ್ಥಲ ಸಮಾಪ್ತ.**



# ಪ್ರಾಣಲಿಂಗಿ ಸ್ಥಲ.

ಇಂತು ಪ್ರಸಾದಿ ಸ್ಥಲದಲ್ಲಿ ಸಾವಧಾನ ಮುಖದಿಂದಾ ಚರಿಸಿ, ಐಕ್ಯವಾದ ಪ್ರಸಾದಿಯು ಮುಂದೆ ಅನುಭಾವ ಮುಂತಾಗಿ, ಆಚರಿಸಿ, ಬೆರಸುವ ಭೇದವೆಂತಿರ್ದುದೆಂದೊಡೆ, ಮುಂದೆ ಪ್ರಾಣಲಿಂಗಿ ಸ್ಥಲವಾದುದು.

೧. ಕದಳಿಯ ಬನವ ಹೊಕ್ಕು, ಹೊಲಬು ತಿಳಿಯದನ್ನಕ್ಕ ಬಯಲ ಗಾಳಿಯ ಹಿಡಿದು, ಗಟ್ಟಿಮಾಡದನ್ನಕ್ಕ ಬರಿದೆ ಬಹುದೆ ಶಿವಜ್ಞಾನ? ಷಡುವರ್ಣ ವಳಿಯದನ್ನಕ್ಕ ಬರಿದೆ ಬಹುದೆ? ಅಷ್ಟ ಮದವಳಿಯದನ್ನಕ್ಕ ಮದ ಮತ್ಸರವ ಮಾಡಲಿಲ್ಲ, ಹೊದಕುಳಿಗೊಳಲಿಲ್ಲ, ಗುಹೇಶ್ವರ ಲಿಂಗವು ಕಲ್ಪಿತದೊಳಗಲ್ಲ.

ಟೀಕುಃ— ಕಾಯವಿಕಾರವೆಂಬ ಕದಳಿಯ ಹೊಕ್ಕು ಹೊಲಬು ತಿಳಿದು, ವಾಯು ವಿಕಾರವನಳಿದು ಷಡುವರ್ಣವ ಕೆಡಿಸಿ, ಅಷ್ಟಮದವ ನಷ್ಟವ ಮಾಡಿ ಮದ ಮತ್ಸರವ ಪರಿತ್ಯಜಿಸಿ, ಆವ ವಿಕಾರದಲು, ಹೊದಕುಳಿಗೊಳ್ಳದೆ, ಲಿಂಗಪ್ರಾಣವೆ ಕೃತನಿಶ್ಚಯುವಾಗಿಪ್ಪುದೆ, ಪ್ರಾಣಲಿಂಗ ಸಂಬಂಧವೆಂಬುದೀ ವಚನಾರ್ಥ.

೨. ಶಬ್ದ, ಸ್ಪರ್ಶ, ರೂಪು, ರಸ, ಗಂಧ ಪಂಚೇಂದ್ರಿಯ ಸಪ್ತ ಧಾತು, ಅಷ್ಟಮದದಿಂದ ಮುಂದುಗಾಣದವರು ನೀವು ಕೇಳಿರೆ. ಲಿಂಗ ವಾರ್ತೆಯ ವಚನದ ರಚನೆಯ ಮಾಡುವರಯ್ಯಾ. ಸಂಸಾರದ ಮಚ್ಚು ಬಿಡದನ್ನಕ್ಕರ ಸೂಕ್ಷ್ಮ ಶಿವಪದವು ಸಾಧ್ಯವಾಗದು. ಗುಹೇಶ್ವರ ಲಿಂಗದಲ್ಲಿ ವಾಕ್ಕು ಪಾಕವಾದಡೇನೋ ಮನ ಪಾಕವಾಗದನ್ನಕ್ಕರ?

ಟೀಕುಃ— ಲಿಂಗದಲ್ಲಿ ಪ್ರಾಣಸಂಬಂಧವಾಗದೆ, ನಾನಾ ತನು ವಿಕಾರದ ಉಬ್ಬಿನಲ್ಲಿ ಲಿಂಗವಾರ್ತೆಯ ರಚನೆಯ ಮಾತನಾಡುವುದು ಪ್ರಯೋಜನವಲ್ಲ. ಅದು ವಾಗ್ವಿಲಾಸವಾದ ಕಾರಣ, ಅವರು ಆಡುವ ಮಾತು ಲಿಂಗದ ಮನಕ್ಕೆ ಬಾರದೆಂಬುದೀ ವಚನಾರ್ಥ.

೩. ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದಡೆ ಆನು ಬೆರಗಾದೆನಯ್ಯಾ. ನಿಚ್ಚಕ್ಕೆ ನಿಚ್ಚ ಅರ್ಚನೆಯ ಪೂಜ

ನೆಯ ಮಾಡಿಸಿ ಭೋಗವ ಮಾಡುವವರ ಕಂಡು ನಾನು ಬೆರಗಾದೆನು. ಗುಹೇಶ್ವರಾ ನಿಮ್ಮ ಶರಣರು ಹಿಂದೆ ಲಿಂಗವನಿರಿಸಿ ಹೋದರು.

ಟೀಕು:— ಕಾಯವೇ ದೇಗುಲ ಪ್ರಾಣನೇ ಲಿಂಗವೆಂಬ ಭೇದವ ನರಿಯದೆ ಬೇರೆ ಮತ್ತೊಂದು ದೇವಾಲಯಕ್ಕೆ ಹೋಗಿ ಲಿಂಗಭಕ್ತಿಯ ಮಾಡಿ ತಾವು ಸತ್ತು ಆ ಲಿಂಗ ಉಳಿದು ಹೋಹ ಕಾರಣ ಜಗವೆಲ್ಲ ಭ್ರಾಂತು ಗೊಂಡಿತ್ತೆಂಬುದೀಗ ಈ ವಚನಾರ್ಥ.

೪. ಬರಿಯ ನಚ್ಚಿನ ಮಚ್ಚಿನ ಭಕ್ತಿಯ ಭಕ್ತರು ಲಿಂಗವಮುಟ್ಟಿಯೂ ಮುಟ್ಟದ ಒಳ ಲೊಟ್ಟೆಗಳು ನೆರೆದು, ಗಳಹುತಿಪ್ಪರು. ತಮತಮಗೆ ಅನುಭಾವವ ನುಡಿವರು. ಅನುಭಾವದನುವನರಿಯದಿರ್ದಡೆ, ಹಿಂದಣ ಅನುಭಾವಿಗಳು ಗುಹೇಶ್ವರಲಿಂಗದ ಸುಖವ ಮುಟ್ಟಿದಲ್ಲಿ ಮರಳಿ ಭವ ಕಲ್ಪಿತವೆಲ್ಲಿಯದೂ?

ಟೀಕು:— ಅಂಗದಲ್ಲಿ ಭಕ್ತಿಸ್ಥಲವಳವಡದೆ, ಲಿಂಗದಲ್ಲಿ ನಿಷ್ಠೆಮುಟ್ಟದೆ, ಬರಿಯ ಮಾತಿನ ಅನುಭಾವವ ನುಡಿವ ವಾಚಾಳಕರಿಗೆ ಭವ ಕಲ್ಪಿತವಲ್ಲದೆ ಲಿಂಗಸಂಬಂಧವಿಲ್ಲವೆಂಬುದೀ ವಚನಾರ್ಥ.

೫. ಭಾವದಲೊಬ್ಬ ದೇವರ ಮಾಡಿ ಮನದಲೊಂದು ಭಕ್ತಿಯ ಮಾಡಿ, ಕಾಯದ ಕಯ್ಯಲಿ ಕಾರ್ಯ ಉಂಟೆ? ವಾಯುಕ್ಕೆ ಬಳಲುವರು ನೋಡಾ! ಎತ್ತನೇರಿ ಎತ್ತನರಸುವರು ಎತ್ತ ಹೋದರೈ ಗುಹೇಶ್ವರಾ.

ಟೀಕು:— ಮನಸ್ಥಲದಲ್ಲಿ ಮನೋಮೂರ್ತಿಯಾದ ಲಿಂಗ ತಾನೆಂದರಿಯದೆ, ಮತ್ತೊಂದ ಭಾವಿಸಿ, ಲಿಂಗವೆಂದು ಮಾಡಿ ಮತ್ತೊಂದ ಕಾಮಿಸಿ ಭಕ್ತಿ ಎಂದು ಮಾಡಿ, ವಾಯಕ್ಕೆ ಬಳಲುವ ವಾಯು ಪ್ರಾಣಿಗಳಿಗೆ ಲಿಂಗ ಸಂಬಂಧವಳವಡದೆಂಬುದೀ ವಚನಾರ್ಥ.

೬. ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದರೇನು? ಹಸಿವು ಹೋಹುದೆ? ಅಂಗದ ಮೇಲೆ ಲಿಂಗ ಸ್ವಾಯತವಾದರೇನು? ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ, ಆ ಕಲ್ಲು ಲಿಂಗವೆ? ಆ ಮೆಳೆ ಭಕ್ತನೆ? ಇಟ್ಟಾತ ಗುರುವೆ? ಇಂತಪ್ಪವರ ಕಂಡಡೆ ನಾನು ನಾಚುವೆನಯ್ಯ! ಗುಹೇಶ್ವರಾ.

ಟೀಕು:— ಅಂಗದ ಮೇಲೆ ಲಿಂಗಸ್ವಾಯತವಾಗಿರ್ದು ಅಂಗವಿಕಾರ ಪ್ರಾಣವಿಕಾರ, ಹಿಂಗದಿರ್ದರೆ, ಆ ಕರಸ್ಥಲದಲ್ಲಿ ಇರ್ದುದು ಲಿಂಗವಲ್ಲ. ಆತ ಭಕ್ತನಲ್ಲ. ಇಂತಪ್ಪಾತಂಗೆ ಉಪದೇಶವ ಕೊಟ್ಟಾತ ಗುರುವಲ್ಲ ವೆಂಬುದೀ ವಚನಾರ್ಥ.

೭. ಅಸ್ತಿಗೆ ಚರ್ಮವಾಧಾರವಾಗಿ, ಪ್ರಾಣಕ್ಕೆ ಪ್ರಸಾದ ಮುಕ್ತಿಯಾಗಿ ಪ್ರಾಣಲಿಂಗವಲ್ಲೊ. ಪ್ರಾಣಲಿಂಗವೆಂಬುದು ಕರಕಷ್ಟ ನೋಡಾ! ಪ್ರಾಣಲಿಂಗವೆಂಬುದು ಕರ ನಾಚಿಕೆ ನೋಡಾ! ಒಡೆದ ಮಡಕೆಗೆ ಒತ್ತಿ ಮಣ ಮೆತ್ತಿದಡೆ, ಅದು ತರಹರವಹುದೇ ಗುಹೇಶ್ವರಾ?

ಟೀಕು:— ಕಾಯಪ್ರಸಾದವಳವಡದೆ, ಪ್ರಾಣಲಿಂಗ ಸಂಬಂಧ ನೆಲೆಗೊಳ್ಳದೆ, ಬರಿದೆ ಪ್ರಾಣಕ್ಕೆ ಪ್ರಸಾದವ ಕೊಂಡು ಮುಕ್ತವಾದೆನೆಂಬುದು, ಅದು ಪ್ರಾಣಲಿಂಗ ಸಂಬಂಧದ ಬಗೆಗೆ ದೂರವೆಂಬುದೀ ವಚನಾರ್ಥ.

೮. ಇಷ್ಟಲಿಂಗವನು ಪ್ರಾಣಲಿಂಗವೆಂಬ ಕಷ್ಟವೆಲ್ಲಿಯದೊ? ಇಷ್ಟಲಿಂಗ ಹೋದಡೆ, ಪ್ರಾಣಲಿಂಗ ಹೋಗದು ನೋಡಾ ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನು ಗುಹೇಶ್ವರಾ ನಿಮ್ಮ ಶರಣ ಬಲ್ಲ.

ಟೀಕು:— ಕರಸ್ಥಲದ ಲಿಂಗದಲ್ಲಿ, ಮನಸ್ಥಲ ಸಂಬಂಧವಾಗಿ, ಪ್ರಾಣ ಸಮರಸ ಸುಖವನೆಯ್ದಿ, ಪ್ರಾಣಲಿಂಗ ಸಂಬಂಧಿಗಳಾಗಲರಿಯದೆ, ಬರಿಯ ಮಾತಿನೊಳಗೆ ಅಂಗದ ಲಿಂಗವ ಪ್ರಾಣಲಿಂಗವೆಂಬುದು ಅಜ್ಞಾನವೆಂಬುದೀ ವಚನಾರ್ಥ.

೯. ವ್ರತಗೇಡಿ, ವ್ರತಗೇಡಿ ಎಂಬವ ತಾನೆ ವ್ರತಗೇಡಿ. ವ್ರತಗೆಡಲಿಕ್ಕೇನು ಹಾಲಂಬಿಬುವೆ? ವ್ರತಗೆಟ್ಟ ಬಳಿಕ ಘಟ ಉಳಿಯಬಲ್ಲುದೆ? ಕಾಯದೊಳಗೆ ಜೀವವುಳ್ಳನ್ನಕ್ಕರ ಅದೇ ಪ್ರಾಣಲಿಂಗವು ಕಾಣಾ ಗುಹೇಶ್ವರಾ.

ಟೀಕು:— ಕಾಯವೇ ಭಕ್ತ, ಪ್ರಾಣವೆ ಲಿಂಗವಾಗಿರ್ಪ ಭೇದವನರಿಯದೆ, ಜೇರೆ ಮತ್ತೆ ಲಿಂಗ ಬಿದ್ದಿತ್ತೆಂದು ನುಡಿವ ಮಾತು ಅಜ್ಞಾನವೆಂಬುದೀ ವಚನಾರ್ಥ.

೧೦. ಅಂಗದ ಕಳೆಯುಲೊಂದು ಲಿಂಗವ ಕಂಡೆ. ಲಿಂಗವ ಕಳೆಯುಲೊಂದು ಅಂಗವ ಕಂಡೆ. ಅಂಗ ಲಿಂಗ ಸಂದಣಿಯನರಸಿ, ಕಂಡೆ ನೋಡಿರೆ ಇಲ್ಲಿ ಅಯಿದಾನೆ ಶಿವನು. ಬಲ್ಲಡೆ ಇರಿಸಿಕೊಳ್ಳಿರೆ ಕಾಯವಳಿ

ಯೊದ ಮುನ್ನ ನೋಡ ಬಲ್ಲಡೆ, ಗುಹೇಶ್ವರಲಿಂಗಕ್ಕೆ ಬೇರೆ ಠಾವುಂಟೆ ಹೇಳಿರೆ?

ಟೀಕು:-- ಅಂಗದ ಕಳೆಯೆ ಲಿಂಗದ ಕಳೆ, ಲಿಂಗದ ಕಳೆಯೆ ಅಂಗದ ಕಳೆ, ಇಂತಾದ ಬಳಿಕ ಅಂಗಲಿಂಗವೆಂಬುಭಯ ನಾಮವಿಲ್ಲವೆಂಬ ಭೇದವನರಿದು ಲಿಂಗ ಸಂಬಂಧವ ಮಾಡಿಕೊಳಲು, ಆತನ ಪ್ರಾಣಲಿಂಗ ಸಂಬಂಧಿ ಎಂಬುದೀ ವಚನಾರ್ಥ.

೧೧. ಪೂಜಿಸಿ ಕೆಳಯಿಂದೆ ಇಳುಹಲದೇನೋ? ಅನಾಗತ ಪೂಜೆಯ ಮಾಡಲದೇನೋ? ದೇಹವೇ ಪೀಠಿಕೆ, ಜೀವನೇ ಲಿಂಗ ಗುಹೇಶ್ವರಾ.

ಟೀಕು:--ಲಿಂಗವೆಂದು ಪೂಜಿಸಿದ ಬಳಿಕ, ಆ ಲಿಂಗವೇ ಅಂಗವಾಗಿ, ಪ್ರಾಣವೇ ಲಿಂಗವಾಗಿರಬೇಕೆಂಬುದೀ ವಚನಾರ್ಥ.

೧೨. ಅಂದರಿವು ಬರುದೊರೆವೋಯಿತ್ತು. ಕುರುಹ ತೋರಿದ ಡೆಂಕು ನಂಬರು. ತೆರಹಿಲ್ಲದ ಘನವ ನೆನೆದು, ಗುರುಶರಣೆಂಬುದಲ್ಲದೆ, ಮರಹು ಬಂದಿಹುದೆಂದು ಗುರು ಕುರುಹ ಕೈಯ್ಯಲ್ಲಿ ತೋರಿಸ. ಅರಿಯ ಬಲ್ಲಡೆ ಗುಹೇಶ್ವರ ಲಿಂಗವು ಹೃದಯದಲ್ಲಿದ್ದಾನೆ.

ಟೀಕು:— ಮನದೊಳಗೆ ಅಳವಟ್ಟ ಘನಲಿಂಗದ ನಿಜವ ನೋಡ ಬೇಕೆಂದು ಕೈಯ್ಯೊಳಗೆ ಕನ್ನಡಿಯ ಕೊಡುವಂತೆ ಗುರುಸ್ವಾಮಿ ಕರಸ್ಥ ಲಕ್ಕೆ ಲಿಂಗವ ಕೊಟ್ಟನಲ್ಲದೆ ಮತ್ತೇನೂ ಮರೆಗನ್ನಡವಿಲ್ಲ. ಇದು ಕಾರಣ ಅರಿಯಬಲ್ಲಡೆ, ಲಿಂಗವೆಂಬುದು ಮನದೊಳಗೆ ಇಪ್ಪುದೆಂಬುದೀ ವಚ ನಾರ್ಥ.

೧೩. ಸಂಬಂಧ ಅಸಂಬಂಧವೆಂದು ಹೆಸರಿಟ್ಟುಕೊಂಡು ನುಡಿವಿರಿ. ಸಂಬಂಧವಾವುದು, ಅಸಂಬಂಧವಾವುದು, ಬಲ್ಲಡೆ ನೀವು ಹೇಳಿರೆ. ಕಾಯ ಸಂಬಂಧ ಜೀವ ಸಂಬಂಧ ಪ್ರಾಣ ಸಂಬಂಧ ಇಂತೀ ತ್ರಿವಿಧ ಸಂಬಂ ಧವನರಿದಡೆ ಆತನೇ ಸಂಬಂಧಿ ಕಾಣಾ ಗುಹೇಶ್ವರಾ.

ಟೀಕು:— ಲಿಂಗಸಂಬಂಧವಾವುದೆಂದಡೆ, ಕಾಯದೊಳಗೆ ಹುದು ಗಿಕೊಂಡಿರ್ದ ಜೀವ, ಜೀವದೊಳಗೆ ಹುದುಗಿಕೊಂಡಿರ್ದ ಪ್ರಾಣ, ಈ ತ್ರಿವಿಧವನು ವಿವರಿಸಿ ಕಳೆದು, ಪ್ರಾಣಮಯಲಿಂಗ ವೆಂದರಿವಡೆ ಆತ ಪ್ರಾಣಲಿಂಗ ಸಂಬಂಧಿ ಎಂಬುದೀ ವಚನಾರ್ಥ.

೧೪. ಭಾನು ಶಶಿ ಕಳೆಗುಂದಿ, ಪ್ರಾಣೋಪಾನ, ವ್ಯಾನೋದಾನ ಸಮಾನವೆಂಬ ವಾಯುವನರಿಯವೊ. ಆದಿ ಪ್ರಣಮುವನರಿದಿಹೆನೆಂಬವಂಗೆ ಬಯಲು, ಆಕಾಶದೊಳಗೊಂದು ರಸದ ಬಾವಿ ಮುನ್ನಾದವರೆಲ್ಲವರೆಂದೆ ನಬೇಡ. ಗುಹೇಶ್ವರಲಿಂಗವು ತಾನೆ ಕಂಡೆಲವೋ.

ಟೀಕು:-- ಈಡಾ ಪಿಂಗಳದಲ್ಲಿ ಹರಿವ ಸರವಡಗಿ, ಪಂಚ ಪ್ರಾಣ ವಾಯುಗಳು ನೆಲೆಗೆಟ್ಟು, ಲಿಂಗ ಪ್ರಾಣವಾದಡೆ ಆದೇ ಆದಿಪ್ರಣಮು. ಅದನರಿಯಲಿಲ್ಲ. ಅದು ಆತ್ಮ ತತ್ವದೊಳಗೆ ಪರಮಾಮೃತ ರೂಪವಾಗಿ ಇಪ್ಪುದು. ಇದನರಿದಡೆ, ಅದೇ ಪ್ರಾಣಲಿಂಗ ಸಂಬಂಧವೆಂಬುದೀ ವಚ ನಾರ್ಥ.

೧೫. ಗುದಸ್ಥಾನದಲ್ಲಿ ಆಧಾರಚಕ್ರ, ಪೃಥ್ವಿ ಎಂಬ ಮಹಾಭೂತ, ಚತುಃಕೋಣೆ, ಚವುದಳ ಪದ್ಮ, ಅಲ್ಲಿಹ ಅಕ್ಷರ ನಾಲ್ಕು, ವ, ಶ, ಷ, ಸ, ಅದರ ವರ್ಣ ಸುವರ್ಣ, ಅದಕ್ಕೆ ಅಧಿದೇವತೆ ದಾಕ್ಷಾಯಣಿ. ಲಿಂಗ ಸ್ಥಾನದಲ್ಲಿ ಸ್ವಾಧಿಷ್ಠಾನ ಚಕ್ರ, ಅಪ್ಪುವೆಂಬ ಮಹಾಭೂತ, ಧನುರ್ಗತಿ, ಷಡುದಳ ಪದ್ಮ,ಅಲ್ಲಿಹ ಅಕ್ಷರವಾರು ಬ, ಭ, ಮ, ಯ, ರ, ಲ, ಅದರ ವರ್ಣ ಪಚ್ಚೆಯ ವರ್ಣ, ಆದಕ್ಕೆ ಅಧಿದೇವತೆ ಬ್ರಹ್ಮನು. ನಾಭಿಸ್ಥಾನ ದಲ್ಲಿ ಮಣಿಪೂರಕವೆಂಬ ಚಕ್ರ, ತೇಜವೆಂಬ ಮಹಾಭೂತ, ತ್ರಿಕೋಣೆ, ದಶದಳ ಪದ್ಮ, ಅಲ್ಲಿಹ ಅಕ್ಷರ ಹತ್ತು. ಡ, ಢ, ಣ, ತ, ಥ, ದ, ಧ, ನ, ಪ, ಫ, ಅದರ ವರ್ಣ ಕೃಷ್ಣವರ್ಣ, ಅದಕ್ಕಧಿದೇವತೆ ವಿಷ್ಣು. ಹೃದಯ ಸ್ಥಾನದಲ್ಲಿ ಅನಾಹತ ಚಕ್ರ, ವಾಯುವೆಂಬ ಮಹಾಭೂತ, ಷಟ್ಕೋಣೆ, ದ್ವಾದಶ ದಳ ಪದ್ಮ, ಅಲ್ಲಿಹ ಅಕ್ಷರ ಹನ್ನೆರಡು, ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಅದರ ವರ್ಣ ಕುಂಕುಮ ವರ್ಣ, ಅದ ಕ್ಕಧಿದೇವತೆ ಮಹೇಶ್ವರನು. ಕಂಠಸ್ಥಾನದಲ್ಲಿ ವಿಶುದ್ಧಿ ಚಕ್ರ, ಆಕಾಶ ವೆಂಬ ಮಹಾಭೂತ, ವರ್ತುಳಾಕಾರ, ಷೋಡಶ ದಳ ಪದ್ಮ, ಅಲ್ಲಿ ಇಹ ಅಕ್ಷರ ಹದಿನಾರು, ಅ, ಆ, ಇ, ಈ, ಉ, ಊ, ಋ, ೠ, ಌ, ೡ, ಎ, ಏ, ಐ, ಒ, ಓ, ಔ, ಅಂ, ಅಃ, ಅದರ ವರ್ಣ ಶ್ವೇತ ವರ್ಣ ಅದಕ್ಕಧಿ ದೇವತೆ ಸದಾಶಿವನು. ಭ್ರೂ ಮಧ್ಯಸ್ಥಾನದಲ್ಲಿ ಆಜ್ಞಾಚಕ್ರ, ಮನವೆಂಬ ಮಹಾಭೂತ, ಶಮುಂಧಾಕಾರ, ದ್ವಿದಳ ಪದ್ಮ, ಅಲ್ಲಿಯ ಅಕ್ಷರವೆರಡು, ಹಂ, ಕ್ಷಂ, ಅದರ ವರ್ಣ ಮಾಣಿಕ್ಯ ವರ್ಣ, ಅದಕ್ಕಧಿದೇವತೆ ಶ್ರೀ ಗುರು. ಉನ್ಮನಿ ಜ್ಯೋತಿ, ಬ್ರಹ್ಮರಂಧ್ರದ ಮೇಲೆ, ಸಹಸ್ರದಳ ಪದ್ಮ ಅಲ್ಲಿ ಅವ್ಯ

ತವಿಹುದು. ಅಲ್ಲಿ ಓಂಕಾರ ಸ್ವರೂಪವಾಗಿ ಗುಹೇಶ್ವರ ಲಿಂಗವು ಸದಾಸನ್ನಿಹಿತನು.

ಟೀಕು:— ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುಧ್ಧಿ, ಆಜ್ಞೆಯೆಂಬ ಷಡು ಚಕ್ರ, ಆ ಸ್ಥಾನಕೆ ಪಂಚಭೂತ, ಮನ ವೆಂಬ ಆರು ಭೂತ ಚತುಃಕೋಣೆ ಧನುರ್ಗತಿ, ತ್ರಿಕೋಣೆ, ಷಟ್‌ಕೋಣೆ, ವರ್ತುಳಾಕಾರ, ತಮಂಧಾಕಾರವೆಂಬವಾರುಸ್ಥಾನ; ಚತುರ್ದಳ, ಷಡು ದಳ, ದಶದಳ, ದ್ವಾದಶದಳ, ಷೋಡಶದಳ, ದ್ವಿದಳವೆಂಬವಾರು ಚಕ್ರ ದಳ, ಐವತ್ತೊಂದು ಅಕ್ಷರ ಅದಕ್ಕೆ ಪೀತ, ಹರಿತ ಕೃಷ್ಣ ಶ್ಯಾಮ, ಶ್ವೇತ ಮಾಣಿಕ್ಯವೆಂಬವು ಆರು ವರ್ಣ, ದಾಕ್ಷಾಯಣಿ, ಬ್ರಹ್ಮ, ವಿಷ್ಣು, ಮಹೇ ಶ್ವರ, ಸದಾಶಿವನು, ಶ್ರೀಗುರುವೆಂಬವಾರು ಅಧಿದೇವತೆ, ಈ ಭೇದವನ ಲ್ಲವನು ತಿಳಿದು ನೋಡಿ ಉನ್ಮನಿ ಜ್ಯೋತಿ ಬ್ರಹ್ಮರಂಧ್ರದ ಮೇಲೆ ಇಪ್ಪ ಸಹಸ್ರ ದಳ ಪದ್ಮದ ಅಮೃತ ಬಿಂದುವಿನೊಳಗೆ ಪ್ರಣಮಸ್ವರೂಪಾಗಿಪ್ಪಲಿಂಗ ದಲ್ಲಿ ಒಡಗೂಡಬಲ್ಲಡೆ ಅದೇ ಪ್ರಾಣಲಿಂಗ ಸಂಬಂಧ ವೆಂಬುದೀವಚನಾರ್ಥ.

೧೬. ಆಧಾರ, ಸ್ವಾಧಿಷ್ಠಾನ ಮಣಿಪೂರಕ, ಸ್ಥಾನವನರಿಯರು. ಅಷ್ಟ ದಳ ಕಮಳದಲ್ಲಿ ಸೂಕ್ಷ್ಮ ನಾಳವೈದೊಡೆ. ಇನ್ನೇನನರಿವರಾರೊ? ಬೇರೆ ಮತ್ತೆ ಅರಿಯಲುಂಟೆ ಹೇಳಾ? ಸಹಸ್ರ ದಳ ಕಮಲ ಬ್ರಹ್ಮ ರಂಧ್ರದಲ್ಲಿಯ ಗುರುವನರಿದು ಒಳಗೆ ವೇಧಿಸಿ ಅಲ್ಲಿಪ್ಪ ಅಮೃತ ಸ್ವರವ ರಿದು ಹಿರಿದು ಕೊಂಬುದರಿದು ಗುಹೇಶ್ವರಾ.

ಟೀಕು:— ಷಡುಚಕ್ರ, ವರ್ಣ, ದಳ, ಅಕ್ಷರ, ಅಧಿದೇವತೆಯನ ರಿದು, ಹೃದಯ ಕಮಲ ಸೂಕ್ಷ್ಮ ನಾಳ ಮೂಲವನು, ಬ್ರಹ್ಮರಂಧ್ರದ ಸಹಸ್ರ ದಳ ಕಮಲದೊಳಗೆ ವೇಧಿಸಿ, ಅಲ್ಲಿಪ್ಪ ಅಮೃತ ಸ್ವರವ ಗ್ರಹಿ ಸಿದಡೆ, ಅದೇ ಪ್ರಾಣಲಿಂಗ ಸಂಬಂಧವೆಂಬುದೀ ವಚನಾರ್ಥ.

೧೭. ಆಧಾರ, ಲಿಂಗ, ನಾಭಿ, ಹೃದಯ, ಕಂಠ, ಮುಖದ ಮೇಲೆ ನಿಂದುದದೇನೊ? ನಿತ್ಯ, ನಿರಂಜನ, ನಿರುಪಾಧಿಕ, ರೇಖೆಯಾಗಿರ್ದುದ ದೇನೊ? ವಿದ್ರುಮ, ಕುಸುಮ, ಚಾಕ್ಷು, ಪರಿಮಳದಿಂದತ್ತವೆ, ಗುಹೇಶ್ವ ರನೆಂಬುದದೇನೊ?

ಟೀಕು:— ಷಡು ಚಕ್ರದಿಂದ ಮೇಲೆ, ನಿತ್ಯ ನಿರಂಜನವಾಗಿ, ಬ್ರಹ್ಮ ರಂಧ್ರದೊಳಗೆ, ತೊಳಗಿ ಬೆಳಗುವ ಪ್ರಭೆಯಲ್ಲಿ, ದೇಹ ಪ್ರಾಣ ಸಂಬಂಧ ಸಮರಸವಹಗಿದೊಡೆ, ಪ್ರಾಣಲಿಂಗ ಸಂಬಂಧವೆಂಬುದೀ ವಚನಾರ್ಥ.

# ಶಿವಾನುಭವ.

(ಮಾಸಿಕವು)



ಸಂಪಾದಕ

ರಾ|| ಸಾ|| ಫ. ಗು. ಹಳಕಟ್ಟಿ.

ಬಿ. ಏ. ಎಲ್. ಎಲ್. ಬಿ.



ವಿಜಾಪುರ.

೭ನೇ ಸಂಚಿಕೆ

ಅಕ್ಟೋಬರ ೧೯೩೦

# ವಿಷಯಾನುಕ್ರಮಣಿಕೆ.




| ವಿಷಯ | ಲೇಖಕರು | ಪುಟ |
|---|---|---|
| ೧ ಶ್ರೀ ಜಗದ್ಗುರು ರೇವಣಸಿದ್ಧ ವಿಜಯು | ವೀರಪ್ಪ ಬಸವಪ್ಪ ಬಿಳೆ ಅಂಗಡಿ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ | ೧೯೩-೨೦ |
| ೨ ಮನಸ್ಸಿನ ಮಹತ್ವವು | ಶ್ರೀ. ಗುರುಸಿದ್ಧ | ೨೦೬-೨೧೩ |
| ೩ ಬಸವೇಶ್ವರನೂ ಆತನ ನಡತೆಯೂ | ರುದ್ರಯ್ಯ ಮಹಂತಿನ ಮಠ ಕಂಪಲಿ ಶಂಕರ ಕಾಲೇಜ ಯಾದಗಿರಿ | ೨೧೪-೨೨ |
| ೪ ವೀರಶೈವರು ಮತ್ತು ಕಾಳಾಮುಖರು | ರಾ॥ ಸಾ॥ ಫ. ಗು. ಹಳಕಟ್ಟಿ ವಿಜಾಪುರ | ೨೨೨-೨೩ |
| ೫ ವೀರಬಣಂಜುಗಳು | ಸಂಪಾದಕ | ೨೨೭-೨೩ |
| ೬ ಎನ್ನ ಮರಿ | ಮುದ್ದಣ್ಣ | ೨೩೧-೨೩ |
| ೭ ಪ್ರಭುದೇವರ ವಚನಗಳು | ಸಂಪಾದಕ | ೯೭-೧೨ |




---


ಇದನ್ನು ವಿಜಾಪುರದಲ್ಲಿ ಇದರ ಸಂಪಾದಕರಾದ ರಾ॥ ಸಾ॥ ಫ. ಗು. ಹಳಕಟ್ಟಿ ಇವರು ತಮ್ಮ ಹಿತಚಿಂತಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು ಮತ್ತು ಅವರು ವಿಜಾಪುರದಲ್ಲಿ [illegible] ಪತ್ರದ ತಮ್ಮ ೧೯೩೦ (೪) ಮನೆಯ ಪ್ರಕಟಿಸಿದರು.

# ಶಿವಾನುಭವ

ವರ್ಷ ೫ ] ಅಕ್ಟೋಬರ ೧೯೩೦ [ ಸಂಚಿಕೆ ೭

## ಶ್ರೀ ಜಗದ್ಗುರು ರೇವಣಸಿದ್ಧ ವಿಜಯು.

ಲೇಖಕ:— ವೀರಪ್ಪ ಬಸವಪ್ಪ ಬಿಳಿಅಂಗಡಿ ಬಿ. ಎ. ಎಲ್. ಎಲ್. ಬಿ. ಹುಬ್ಬಳ್ಳಿ.

[ಈ ಲೇಖವು ದೇವಪುರದ ಚನ್ನಬಸವ ಕವಿಯಿಂದ ರಚಿಸಲ್ಪಟ್ಟ ರೇವಣಸಾಂಗತ್ಯವೆಂಬದರ ತಾತ್ಪರ್ಯವು. ಮೂಲಗ್ರಂಥದಲ್ಲಿದ್ದ ಹಾಗೆ ಕಥಾ ಸಂವಿಧಾನವನ್ನು ಈ ಲೇಖದಲ್ಲಿಳಿಸಿದೆ. ಇದರಲ್ಲಿಯ ಪ್ರತಿಯೊಂದು ಸಂಗತಿಗೂ ಲೇಖಕನ ಒಪ್ಪಿಗೆ ಇರುವದಾಗಿ ವಾಚಕರು ಊಹಿಸಬಾರದು. ಈ ಗುರುವರ್ಯರ ಚರಿತ್ರಾಂಶವನ್ನು ಲೇಖಕನು ತನ್ನ ಪೀಠಿಕೆಯಲ್ಲಿ ಊಹಾಪೋಹಮಾಡುವನು. ಇವರ ಕಾಲನಿರ್ಣಯವನ್ನೂ ಆದರಲ್ಲಿಯೇ ತಕ್ಕಮಟ್ಟಿಗೆ ಮಾಡತಕ್ಕವನಿರುವನು.]

೧. ಶಿವನ ಸನ್ನಿಧಾನದಲ್ಲಿರುವ ರೇಣುಕಾಚಾರ್ಯರೇ ದಾರುಕನನ್ನು ದಾಂಟಬಂದುದರಿಂದ ಆತನ ಶಾಪವಶದಿಂದ ರೇವಣಸಿದ್ಧನೆಂದು ಭೂಮಿಯಲ್ಲಿ ಅವತರಿಸಿದನು.

೨. ದ್ರಾವಿಡ ದೇಶದಲ್ಲಿರುವ ಪುಣ್ಯಭೂಮಿಯಾದ ಕೊಲ್ಲಿಪಾಕಿಯಲ್ಲಿರುವ ಸೋಮೇಶ್ವರ ಲಿಂಗದಲ್ಲಿ ಜ್ಯೋತಿಯಿಂದ ಜ್ಯೋತಿಯು ಹುಟ್ಟುವಂತೆ ಹಸ್ತದಲ್ಲಿ ಲಿಂಗವನ್ನು ಧರಿಸಿ ಸರ್ವಭಕ್ತರು ನೋಡುತ್ತಿರಲು ಜಂಗಮಾಕಾರವನ್ನು ಧರಿಸಿ ಲಿಂಗದಿಂದಲುದಯವಾಗಿ ಆಕಾಶಕ್ಕೆ ಹಾರಿದನು. ಆತನನ್ನು ಕಂಡು ಸರ್ವಭಕ್ತರು ಹೀಗೆ ಕೊಂಡಾಡಿದರು. “ಜಯ ಜಯ ಜಗದುದ್ಧಾರ ಜಗನ್ಮಯ। ಜಯಜಯ ಜಂಭಾರಿವರದ। ಜಯ ಜಯ ಜಲಜಾಂಬಕ ವಂದಿತಪದ। ಜಯ ಜಯ ಜಲಜ ಪೂಜ್ಯ ॥೧॥

ತ್ರಾಹಿಶರಣಾ ಹೃತ್ಕಮಲ ದಿವಾಕರ। ತ್ರಾಹಿಶರಣಾಸಂಜೀವ। ತ್ರಾಹಿಶರಣಾ ಹರುಷಾಂಬುಧಿ ಚಂದ್ರಮ। ತ್ರಾಹಿ ಮುನೀಂದ್ರ ಗಣೇಂದ್ರ ॥

೩. ಆಕಾಶಗಾಮಿಯಾಗಿರುವಾಗ ರೇವಣಸಿದ್ಧನು ಖಗಮೃಗಾದಿಗಳು ತಮ್ಮ ಜಾತಿವೈರತ್ವವನ್ನು ಮರೆತು ಒಂದುಗೂಡಿ ಆಡುತ್ತಿರುವ ಅಗಸ್ತ್ಯಾಶ್ರಮವನ್ನು ಕಂಡು ಅಲ್ಲಿ ಇಳಿದು ಅಗಸ್ತ್ಯಋಷಿಯಿಂದ ಸತ್ಕಾರಹೊಂದಿದರು.

೪. ಆ ನಂತರ ಅಗಸ್ತ್ಯಾಶ್ರಮಕ್ಕೆ ಅನೇಕ ದೇಶಗಳಿಂದ ಮುನಿಗಳು ಬಂದರು. ಆಗ್ಗೆ ಆಗಸ್ತ್ಯರು ಶಿವನ ಅವತಾರನಾದ ರೇವಣಸಿದ್ಧನಿಗೆ ಅಷ್ಟಾಂಗಯೋಗ, ವರ್ಣಾಶ್ರಮವಿಚಾರ, ಷಟ್ಚಕ್ರದ ವಿಚಾರ, ಪೂಜೆಯ ರೀತಿ, ಅಂಗತ್ರಯದ ಅರ್ಥ ಗುರುಶಿಷ್ಯರಲಕ್ಷಣ, ಜ್ಞಾನದಲ ಲಿಂಗದ ಮುಖ ಇವುಗಳ ಬಗ್ಗೆ ಉಪದೇಶಮಾಡಬೇಕೆಂದು ಬೇಡಿ ಕೊಳ್ಳಲು, ಆದರಂತೆ ಅವರು ಅಗಸ್ತ್ಯನಿಗೆ ಚನ್ನಾಗಿ ಉಪದೇಶಿಸಿದರು.

೫. ಶ್ರೀಗುರು ರೇಣುಕಾರ್ಯರು ಅಗಸ್ತ್ಯ ಮೊದಲಾದ ಮುನಿಗಳಿಗೆ ಶಿವಯೋಗನಿತ್ಯತ್ವವನ್ನು ಕರುಣಿಸಿ, ಅಲ್ಲಿಂದ ಆಕಾಶಮಾರ್ಗವಾಗಿ ರಾಮೇಶ್ವರಕ್ಕೆ ಬಂದು, ಜನರು ತಿಳಿಯದಂತೆ ಅಲ್ಲಿ ಎಂಟು ದಿನವಿದ್ದು ರಾಮನಾಥನಿಂದ ಬೀಳ್ಕೊಂಡು ಚೋಳ ಮಂಡಲಕ್ಕೆ ಬಂದನು. ಅಲ್ಲಿ ಚಂದ ಚಂದವಾದ ಶಿವಾಲಯಗಳನ್ನು ನೋಡುತ್ತ ಆ ಪ್ರಾಂತವನ್ನು ಪಾವನಗೊಳಿಸಿ, ಅಲ್ಲಿಂದ ಆಕಾಶಕ್ಕೆ ಜಿಗಿದು ತುಂಡೀರ ಮಂಡಲದಲ್ಲಿರುವ ಕಾಂಚೀಪುರಕ್ಕೆ ಬಂದನು. ಆ ನಗರದ ಅಧಿದೇವನಾದ ಏಕಾಮ್ರನಾಥಾಲಯವನ್ನು ಸೇರಿ ಭಸಿತ ತ್ರಿಪುಂಡ್ರವನ್ನು ಧರಿಸಿ ಬಾಲೋನ್ಮತ್ತನಹಾಗೆ ಜೀವನ್ಮುಕ್ತಿಸ್ಥಿತಿಯನ್ನು ಅಲ್ಲಿದ್ದ ಜನರಿಗೆ ತೋರ್ಪಡಿಸುತ್ತ ರೇವಣಸಿದ್ಧನೆಂತಲೂ ಶಿವಕುಮಾರನೆಂತಲೂ, ಪುಣ್ಯಾಂಕನೆಂತಲೂ, ಪಿಣ್ಯಾಕಮುನಿಯೆಂತಲೂ, ಅರುಳಾಳ ಮರುಳಯ್ಯನೆಂತಲೂ, ಹೆಸರು ಹೊಂದಿ ಅದನ್ನು ಪವಿತ್ರಗೊಳಿಸುತ್ತಿದ್ದನು. ಆ ಕಾಂಚಿದೇಶಕ್ಕೆ ಅರಸನಾದ ಚೋಳರಾಯನು ವರದರಾಜನೆಂಬ ಒಂದು ವಿಷ್ಣು ಪ್ರತಿಮೆಯನ್ನು ಮಾಡಿಸಿ, ಅನೇಕ ಹಣ ವೆಚ್ಚಮಾಡಿ ಒಂದು ಆಲಯವನ್ನು ಕಟ್ಟಿಸಿ, ಅದರಲ್ಲಿ ಆ ವಿಷ್ಣುಮೂರ್ತಿಯನ್ನು ಪ್ರಾಣಪ್ರತಿಷ್ಠೆ ಮಾಡಿಸಬೇಕೆಂದು, ಸ್ಮಾರ್ತನನ್ನು ... ನು. ಆಗ ಮುಂದಿನ ಶಾಂತಿಕ ವ...ಗ ... ದನು. ಆದರೂ ಕಾಂಚಿಕ್ಷೇತ್ರಕ್ಕೆ ಅಧಿಪತಿಯಾದ ಏಕಾ

ಮ್ರನಾಥನ ಎದುರಿಗೆ ತಾನು ದೇವರಾಗಿ ನಿಲ್ಲಲಿಕ್ಕೆ ಧೈರ್ಯತಾಳದೆ ಆ ವಿಷ್ಣುಮೂರ್ತಿಯು ಅಲ್ಲಾಡುತ್ತ, ಹೊಯದಾಡುತ್ತ ನಿಂತಿತು. ಇದರಿಂದ ಅರಸನಿಗೆ ಬಹಳ ವ್ಯಸನವುಂಟಾಗಿ ವ್ರತಸ್ಥನಾದನು. ಒಂದು ದಿನ ಏಕಾಮ್ರನಾಥನು ಆತನ ಕನಸಿನಲ್ಲಿ ಬಂದು, ಪಣ್ಯಾಕಮುನಿಯನ್ನು ಕರೆಯಿಸಿ ಪ್ರಾಣಪ್ರತಿಷ್ಠೆಮಾಡಿಸೆಂದು ಹೇಳಿ ಅಂತರ್ಧಾನನಾದನು. ಅದೇ ಪ್ರಕಾರ ಆತನು ಮೊದಲು ಮರೆತವನಾಗಿ ಹಿಂದಿನಿಂದ ನೆನಪಿಗೆ ತಂದು, ಆ ಪುಣ್ಯಾಂಕನನ್ನು ಆನೆಯಮೇಲೆ ಕುಳ್ಳಿರಿಸಿ ಸರ್ವಸಂಭ್ರಮದಿಂದ ಕರೆತಂದು ವಿಷ್ಣುಪ್ರತಿಮೆಯ ಬಳಿಗೆ ಒಯ್ದು ತೋರಿಸಲಾಗಿ, ಆತನು ತನ್ನ ಬಿಂದುವನ್ನು ವಿಷ್ಣುವಿನ ಹಣೆಗೆ ಒತ್ತಲು, ವರದರಾಜನು ಶಿವಬಿಂದು ಸ್ಪರ್ಶದಿಂದ ಸ್ಥಿರವಾಗಿನಿಂತನು. ಮತ್ತು ಶಿವಬಿಂದುವಿನ ಮಹತ್ವವನ್ನೂ, ಅವರ ನಿತ್ಯ ಶುದ್ಧತ್ವವನ್ನೂ ವರದರಾಜನಿಂದ ಅರಸನಿಗೆ ಹೇಳಿಸಿದನು.

೬. ಹೀಗೆ ವಿಷ್ಣುಪ್ರತಿಮೆಗೆ ಪ್ರಾಣಕಳೆಯನ್ನು ಕೊಟ್ಟು ಅಲ್ಲಿಂದ ತೆರಳಿದನು. (ಇದಕ್ಕೆ ಅರುಳಾಳಪೆರುಮಾಳನೆಂಬ ಹೆಸರು ಕೊಟ್ಟನು.)

೭. ಅಲ್ಲಿಂದ ಕಾಂಚೀಪುರದ ಉತ್ತರದಿಕ್ಕಿಗೆ ಇರುವ ಮಾಸನೂರಿಗೆ ರೇವಣಸಿದ್ಧನು ಬಂದು ಅಲ್ಲಿರುವ ಶಿವಮಂದಿರದಲ್ಲಿ ಇಳುಕೊಂಡನು. ಮತ್ತು ಶಿವಜಂಗಮನ ಆಶ್ರಮದಲ್ಲಿ ರತಿಕೇಳಿಯನ್ನು ಮಾಡಿದ್ದರಿಂದ ತಗಣಿಗಳಾಗಿ ಹುಟ್ಟಿದ ಯಕ್ಷದಂಪತಿಗಳನ್ನು ತನ್ನ ಫಾಲನೇತ್ರದಿಂದ ಸುಟ್ಟು, ಉಕ್ಕಿನ ಗುಂಡುಗಳೆರಡನ್ನು ಕಮ್ಮಾರನಿಂದ ಒಂದು ಕಠಾರಿಯಾಗಿ ಮತ್ತೊಂದನ್ನು ಸುರಗಿಯಾಗಿ ರಚಿಸಿ, ಸುರಗಿಯನ್ನು ಆವೂರ ನೀರಿನ ಮಡುವಿನಲ್ಲಿರಿಸಿ ಕಠಾರಿಯನ್ನು ತಕ್ಕೊಂಡುಹೋದನು.

೮. ಮಾಸನೂರಿಂದ ಪೊರಮಟ್ಟು ರೇವಣಸಿದ್ಧನು ಗಗನಮಾರ್ಗದೊಳ್ಬರುತ್ತ ವಿಕ್ರಮಾದಿತ್ಯನಾಳುತ್ತಿರುವ ಉಜ್ಜಯನೀ ನಗರಮಂ ಕಂಡು ಇದು ಪುಣ್ಯವಂತರುಳ್ಳ ಸ್ಥಾನವೆಂದರಿತು ಆಕಾಶದಿಂದಿಳಿದು ತೇಜೋಮೂರ್ತಿಯಾಗಿ ಅರಸನ ಮುಂದೆ ನಿಂತನು. ಅರಸನು ಭಯಭಕ್ತಿವೆರಸಿ ಆತನ ಪಾದಗಳನ್ನು ತೊಳೆದು ಚರಣತೀರ್ಥವನ್ನು ಕೊಂಡು ಸಿಂಹಾಸನದಲ್ಲಿ ಕುಳ್ಳಿರಿಸಿ ಉಪಚರಿಸಿದನು. ರೇವಣಸಿದ್ಧನು ಅರಸನ ಭಕ್ತಿಗೆ ಮೆಚ್ಚಿ ತನ್ನ ಕೈಯಲ್ಲಿದ್ದ ಕಠಾರಿಯನ್ನು ಆತನಿಗೆ ಕೊಟ್ಟು. ಆತನ ಪ್ರಾರ್ಥನೆಯ ಮೇರೆಗೆ ರಾಜಧರ್ಮವನ್ನೂ, ದಾನಧರ್ಮಪದ್ಧತಿಯನ್ನೂ, ನೀತಿಯನ್ನೂ ಉಪದೇಶಮಾಡಿ, ಆತನನ್ನು ಅನುಗ್ರಹಿಸಿದನು.

೯. ನಂತರ ಆಕಾಶಮಾರ್ಗವನ್ನಡರಿ, ಕಲ್ಯಾಣಪುರಕ್ಕೆ ಹರಿದ ಕಂಥೆಯು, ಕೆದರಿದ ಜಡೆಯು, ಬಾಡಿದ ಮೋರೆಯು, ಬಡವಾದ ಹೊಟ್ಟೆಯು ಚಿನ್ಹಗಳನ್ನು ತಾಳಿ ಬಂದು ಒಬ್ಬ ಗಾಣಿಗರ ಕಲ್ಲಿಶೆಟ್ಟಿಯ ಮುಂದೆ ಕಾಣಿಸಲು, ಆತನಿಗೆ ಅಂತಃಕರಣಹುಟ್ಟಿ ಆ ಸಿದ್ಧನನ್ನು ತನ್ನ ಮನೆಯಲ್ಲಿಟ್ಟುಕೊಂಡು ಕಾಪಾಡಿದನು. ಈತನ ಸಂಗದಿಂದ ಕಲ್ಲಿಶೆಟ್ಟಿಗೆ ಧನಲಾಭವು ಹೆಚ್ಚುತ್ತ ಬಂತು. ಆದರೆ ಕಲ್ಲಿಶಟ್ಟಿಗೂ, ಆತದ ಹೆಂಡತಿಗೂ, ಎತ್ತಿಗೂ ಒಂದೇ ಕಣ್ಣು ಇದ್ದುದರಿಂದ ಅವರ ಮೇಲೆ ಅಂತಃಕರುಣ ಹುಟ್ಟಿ, ಎರಡೂ ಕಣ್ಣುಗಳುಂಟಾಗುವಂತೆ ಮಾಡಿ, ರಾತ್ರಿಯಲ್ಲಿ ಅವರಿಗೆ ತನ್ನ ದಿವ್ಯಮೂರ್ತಿಯನ್ನು ಪ್ರಕಾಶಗೊಳಿಸಿ ಲೀಲಾ ವಿಭೂತಿಯನ್ನು ತೋರಿಸಿ ರೇವಣಸಿದ್ಧನು ಮುಂದಕ್ಕೆ ತೆರಳಿದನು.

೧೦. ಬಳಿಕ ಕಲ್ಯಾಣಪುರದಿಂದ ಹೊರಟು ಸಿದ್ಧನು ಗಗನಮಾರ್ಗದೊಳು ಬರುತ್ತ, ಮಂಗಳವಾಡ (ಮಂಗಳಪುರ) ವೆಂಬ ಪುರಪ್ರದೇಶವು ಶಿವಭಕ್ತರಿಗೆ ನೆಲೆಯಾಗಿರಲ್ಕೆ ಆ ಗ್ರಾಮದಲ್ಲಿ ಮಾಯಾ ದೇವಿಯೆಂಬ ಪುಣ್ಯವತಿಯಾದ (ಪಣ್ಯಾಂಗನೆ) ಯು ಲಿಂಗಧಾರಿಗಳಲ್ಲದೆ ಅನ್ಯಭವಿಗಳ ಸಂಗಕ್ಕೆ ಮನವೆಳಸದೆ, ಮುಕ್ಕಣ್ಣನಲ್ಲಿ ಮನವೆರಕಳಾಗಿ, ಭಕ್ತಿಯಿಂದ ಪೂಜಿಸುತ್ತಿದ್ದಳು. ಇಲ್ಲಿಗೆ ಶಿವಯೋಗಿ ರೇವಣಸಿದ್ದನು ಬೂದಿಯಿಂದ ಮಾಸಿದ ಮೈಯಿಂದ ಅನ್ನವಿಲ್ಲದೆ ಅಕ್ಕಳಿಸಿಕೊಂಡು ಬೆನ್ನಿಗೆ ಹತ್ತಿದ ಹೊಟ್ಟೆಯಿಂದ ಮತ್ತು ದಿವ್ಯತೇಜಸ್ಸಿನಿಂದ ಆಕೆಗೆ ಕಾಣಿಸಿಕೊಂಡನು. ಅವಳು ಈ ಕೃಶವಾದ ಶಿವಯೋಗಿಯನ್ನು ಕೋಡಿ ಕೃಪೆಹುಟ್ಟಿ ತನ್ನ ಮನೆಗೆ ಶಿವಪೂಜೆಗಾಗಿ ಅಗ್ರೋದಕವನ್ನು ತಂದುಕೊಟ್ಟರೆ, ಆತನನ್ನು ಅನ್ನೋದಕಗಳಿಂದ ಪೋಷಿಸುವೆನೆಂದು ಅನ್ನೋಣ. ಅದಕ್ಕೆ ಸರ್ವಜ್ಞನಾದ ಲೀಲಾವಿನೋದಿಯಾದ ರೇವಣಸಿದ್ಧನು ಅಂತಾಗಲೆಂದು ಒಪ್ಪಿಕೊಂಡು ದಿನಾಲು ಕಾವಡಿಯಿಂದ ನೀರು ತರುವಾಗ್ಗೆ ಕಾವಡಿಯ ಕಂಬಿಯು ಆತನ ಹೆಗಲಿಗೆ ಸೋಂಕದೆ ಅಂತರಾಳದಲ್ಲಿ ನಿರಾಲಂಬವಾದ ಆಕಾಶದಲ್ಲಿ ಬರುತ್ತಿತ್ತು. ಹೀಗೆ ಇರುತ್ತಿರಲು, ಇತ್ತ ತ್ರೇತಾಯುಗದಲ್ಲಿ ಹರಭಕ್ತ ಶಿರೋಮಣಿಯಾದ ರಾವಣನು ನವಕೋಟಿಲಿಂಗಗಳನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿ, ಆರುಕೋಟಿ ಲಿಂಗಗಳನ್ನು ವಿಧಿವತ್ತಾಗಿ ಸ್ಥಾಪಿಸಿದನು. ಅಷ್ಟರೊಳಗೆ ಸೀತಾಪಹಾರದ ದೆಶೆಯಿಂದ ಆತನು ರಾಮನಿಂದ ಕೊಲ್ಲಲ್ಪಡುವ ಸಮಯದಲ್ಲಿ ತನ್ನ ತಮ್ಮನಾದ ವಿಭೀಷಣನಿಗೆ

ಉಳಿದ ಮೂರುಕೋಟಿ ಲಿಂಗಗಳನ್ನು ತನ್ನ ತರುವಾಯ ಸ್ಥಾಪಿಸಬೇಕೆಂದು ಹೇಳಿ ಆತನಿಂದ ವಚನತಕ್ಕೊಂಡು ಪ್ರಾಣಬಿಟ್ಟನು. ವಿಭೀಷಣನು ಈ ಕಾರ್ಯನಿರ್ವಾಹಕಕ್ಕಾಗಿ ಬಹಳ ಚಿಂತಿಸುತ್ತಿರಲು, ಈಶ್ವರನು ಆತನ ಕನಸಿನಲ್ಲಿ ತೋರಿ ಲೋಕದಲ್ಲಿ ನನ್ನ ಅಂಶಾವತಾರನಾಗಿ ಮುಕ್ಕಣ್ಣನೆನಿಸಿ ಯತಿವೇಷದಿಂದ ತೋರ್ಪ ರೇವಣಸಿದ್ಧನ ಬಳಿಗೆ ಹೋಗೆಂದು ಹೇಳಿ ಪರಮೇಶ್ವರನು ಅಂತರ್ಧಾನನಾದನು. ಈ ಕನಸ್ಸನ್ನು ನೆನಪಿನಲ್ಲಿಟ್ಟುಕೊಂಡು, ವಿಭೀಷಣನು ಲಂಕೆಯನ್ನು ಬಿಟ್ಟು ವಿರೂಪಾಕ್ಷ ಸಿದ್ಧನೆಂಬ ವೇಷದಿಂದ ಆಕಾಶಗಾಮಿಯಾಗಿ ದೇಶದೇಶಗಳನ್ನು ಹುಡುಕುತ್ತ ಮಂಗಳವಾಡಪುರಕ್ಕೆ ಬಂದು ಅಲ್ಲಿಯ ಶುಭಸೂಚನೆಗಳಿಂದ ಸಿದ್ಧನಿಲ್ಲಿರಬಹುದೆಂದು ಯೋಚಿಸಿ, ನೆಲಕ್ಕಿಳಿದು ಊರ ಬಾಗಿಲಬಳಿಯಲ್ಲಿ ಕಾದಿರುತ್ತಿರುವಾಗ, ಕಂಬಿಯನ್ನು ಭುಜಕ್ಕೆ ಸೋಂಕಿಸದೆ ಬಯಲಿನಲ್ಲಿ ಬರುತ್ತಿರುವಂತೆ ತರುತ್ತಿರುವ ಮಹಾಮಹಿಮನಾದ ರೇವಣಸಿದ್ಧನನ್ನು ನೋಡಿ, ಆತನನ್ನು ಹಿಂಬಾಲಿಸಿ ಈತನೇ ರೇವಣಸಿದ್ಧನಿರಬೇಕೆಂದು ತಿಳಿದು, ತನ ಮನಸ್ಸಿನ ಚಿಂತೆಯನ್ನು ಆತನಿಗೆ ಹೇಳಲಾಗಿ, ಅದಕ್ಕೆ ಒಪ್ಪಿಕೊಂಡು ರೇವಣಸಿದ್ಧನು ಮಾಯಾದೇವಿಗೆ ಅನುಗ್ರಹಮಾಡಿ ವಿಭೀಷಣನೊಡನೆ ಲಂಕಾಪಟ್ಟಣಕ್ಕೆ ಬಂದನು.

೧೧. ಹೀಗೆ ಗಗನಮಾರ್ಗವಾಗಿ ಲಂಕಾಪಟ್ಟಣಕ್ಕೈತಂದು ಅಲ್ಲಿಯ ಒಂದು ಶಿವಾಲಯದಲ್ಲಿ ಬಂದು ಕುಳಿತುಕೊಂಡನು. ಇತ್ತ ವಿಭೀಷಣನು ಲಿಂಗಪ್ರತಿಷ್ಠೆಗಾಗಿ ಸಕಲ ಸಾಮಗ್ರಿಗಳನ್ನು ಸನ್ನಾಹಗೊಳಿಸಿ ತ್ರಿಕೋಟಿ ಶಿವಾಲಯಗಳಲ್ಲಿ ಅವುಗಳನ್ನು ಇಟ್ಟು ಏಕಕಾಲದಲ್ಲಿ ಮೂರುಕೋಟಿ ಲಿಂಗಗಳನ್ನು ಸ್ಥಾಪಿಸಿ, ರೇವಣಸಿದ್ಧೇಶನು ವಿಭೀಷನ ದೃಢನಿಶ್ಚಯಕ್ಕೆ ಮೆಚ್ಚಿ, ಆಚಾರ್ಯನಾಗಿ ವಿಶ್ವರೂಪವನ್ನು ತೋರಿ, ಮೂರುಕೋಟಿ ರೂಪಗಳಿಂದ ಮೂರುಕೋಟಿ ಶಿವಾಲಯಗಳಲ್ಲಿ ಬೇರೆ ಬೇರೆ ಶಿವಾಗಮೋಕ್ತ ಪ್ರಕಾರವಾಗಿ ಮೂರುಕೋಟಿ ಲಿಂಗ ಸ್ಥಾಪನೆಯನ್ನು ಸಾಂಗವಾಗಿ ನೆರವೇರಿಸಿ, ವಿಶ್ವೇಶ್ವರನ ತ್ರಿಕೋಟಿ ಲಿಂಗಗಳಿಗೆ ನಿತ್ಯಪೂಜಾದಿ ಕಟ್ಟಳೆಗಳನ್ನು ನಿಯಮಿಸಿ, ವಿಭೀಷಣನಿಗೆ ಶಿವಪೂಜಾ ವಿಧಾನಮಂ ಅನುಗ್ರಹಿಸಿ, ಲಂಕಾಪಟ್ಟಣದಿಂದ ಪೊರಮಟ್ಟನು. ಅಲ್ಲಿಂದ ಗಗನಮಾರ್ಗದೊಳು ಕಡಲಂ ದಾಂಟಿ ಮರಳಿ ಕಲ್ಯಾಣಪಟ್ಟಣದೊಳಗಿಳಿದು, ಮುನ್ನಿನಂತೆ ಬಡವೇಷದಿಂದ ಬಿಜ್ಜಳರಾಯನ ಹಜಾರಕ್ಕೆ ಬಂದು ಭಿಕ್ಷಾ

ಎಂದು ಬೇಡಲು, ಆಗ ಅರಸನು ಚರರ ಕೈಯಿಂದ ಕುದಿಯುವ ಅನ್ನವನ್ನು ತರಿಸಿ ನೀಡಿದನು. ತನ್ನ ಅಂಗೈಯಲ್ಲಿ ನೀಡಿದ ಬಿಸಿಬಿಸಿ ಓಗರವನ್ನು ತುತ್ತುಮಾಡಿ ನುಂಗಿ ಕೈಯನ್ನು ಹಜಾರದ ಕಂಭಕ್ಕೆ ಒರಿಸಲಾಗಿ ಅರಮನೆಯು ಮೊದಲಾಗಿ ಊರಮನೆಗಳು ಸುಡಹತ್ತಿದವು. ಇದರಿಂದ ಬಿಜ್ಜಳನು ಅಂಜಿ ಆತನ ಕ್ಷಮೆಯನ್ನು ಬೇಡಿಕೊಂಡು ತನ್ನ ನಗರವನ್ನು ರಕ್ಷಿಸಿಕೊಂಡನು. ರೇವಣಸಿದ್ಧನು ಭಿಕ್ಷುಕರಿಗೆ [ಯತಿಭಿಕ್ಷುಕರಿಗೆ] ಅವಹೇಳನ ಮಾಡಿದ ಫಲವು ಇಂಥಾದ್ದೆಂದು ಹೇಳಿ ಆತನಿಗೆ ರಾಜಧರ್ಮ ನೀತಿಗಳಂ ಉಪದೇಶಿಸಿದನು. ಬಿಜ್ಜಳರಾಯನು ರೇವಣಸಿದ್ಧನನ್ನು ತನ್ನ ಅರಮನೆಯೊಳಗೆ ಆರೋಗಣೆಗೆ ಪ್ರಾರ್ಥಿಸಲಾಗಿ, ಐದು ಪಡಿ ಅಕ್ಕಿ ಐದು ಸೊಲಿಗೆ ತುಪ್ಪ ಇವುಗಳನ್ನು ತರಿಸಿ, ಅನ್ನವಂ ಮಾಡಿಸಿ ಅದರಿಂದ ಆ ರಾಜ್ಯದ ಸರ್ವರನ್ನು ತೃಪ್ತಿಗೊಳಿಸಿದನು.

೧೨. ಶ್ರೀಗುರುರೇವಣನು ಕಲ್ಯಾಣದಿಂದ ಹೊರಟು ಖೇಚರನಾಗಿ, ಲೋಕದಲ್ಲಿ ಹಲವು ಜಗೆಯಾವ ಸಿದ್ಧರೆಲ್ಲರೂ ಆಶ್ರಯುವಾದ ಕೊಲ್ಲಾಪುರವನ್ನು ಕಂಡು, ಅಂತರಿಕ್ಷದಿಂದಿಳಿದು ಗ್ರಾಮ ಪ್ರವೇಶವಂ ಮಾಡತೊಡಗಲು ಗ್ರಾಮ ಪಾಲಕರು ಬೇಡೆಂದು ಹೇಳಿದರೂ ಅವರ ಮಾತಿಗೆ ನಕ್ಕು ಮುಂದಕ್ಕೆ ಬರಲು, ಹೊಸ ಯತಿಯು ಬಂದ ಸುದ್ದಿಯನ್ನು ಕೇಳಿ ಮಂತ್ರ, ತಂತ್ರ, ಪರಕಾಯ ಪ್ರವೇಶ ಮೊದಲಾದ ಸಿದ್ಧಿಗಳುಳ್ಳ ವಿದ್ಯಾಗರ್ವಿಷ್ಠರಾದ ಸಿದ್ಧರೆಲ್ಲರೂ ಬಂದು, ರೇವಣನ ಮೇಲೆ ತಮ್ಮ ವಿದ್ಯಾಶಕ್ತಿಗಳನ್ನು ಪ್ರಯೋಗಿಸಲಾಗಿ, ರೇವಣಸಿದ್ಧನು ತನ್ನ ಕುಡಿನೋಟದಿಂದ ಅವರನ್ನು ನೋಡಲು, ಅವರೆಲ್ಲರಿಗೂ ಸ್ತಂಭನವುಂಟಾಗಿ ಚಿತ್ರದಲ್ಲಿ ಬರೆದ ಗೊಂಬೆಗಳ ಹಾಗೆ ನಿಂತುಕೊಂಡರು. ಅಲ್ಲಿಂದ ಹೊರಟು ಸಿದ್ಧರಿಗೆ ಒಡೆಯನೆನಿಸಿದ ಗೋರಕ್ಷಸಿದ್ಧನ ಮನೆಗೆ ಬಂದು ಭಕ್ಷವನ್ನು ನೀಡೆಂದು ಕೂಗಲಾಗಿ, ಆತನು ಸಿಟ್ಟಿಗೆದ್ದು ಎಲೈ ವಿರಕ್ತ ಭಿಕ್ಷುಕನೇ, ಸುಖ ದುಃಖಗಳನ್ನು ಸಮವಾಗಿ ಉಣ್ಣಬೇಕಾದದ್ದು ಭಿಕ್ಷುಕ ಧರ್ಮವಾದ್ದರಿಂದ, ಇದನ್ನು ಉಣ್ಣೆಂದು ಕಠಾರಿಯಿಂದ ರೇವಣಸಿದ್ಧನ ಅಂಗೈಗೆ ಕಿವಿಯಲಾಗಿ, ರೇವಣಸಿದ್ಧನು ನಕ್ಕು ತನ್ನ ಅಂಗೈಯಲ್ಲಿ ನಟ್ಟ ಕಠಾರಿಯನ್ನು ಕೆಂಡಗಣ್ಣಿನಿಂದ ನೋಡಲು, ಅದು ಕರಗಿ ಅಂಗೈಯಲ್ಲಿನಿಂತದ್ದರಿಂದ, ಕರಗಿದ ರಸವಾದ ಬರಿಯುಕ್ಕನ್ನೂ ರೇವಣನು ಕುಡಿದನು. ಅದು ರೇವಣಸಿದ್ಧನ ಬಾಯಲ್ಲಿರುವಾಗ, ರೇವಣನು ಸರ್ವಭೂತಾತ್ಮನಾ

ದುದರಿಂದ, ಗೋರಕ್ಷಸಿದ್ಧನ ಎದೆಯಲ್ಲಿ ಉಕ್ಕಿನ ಕಠಾರಿ ಹೊಕ್ಕು ಬೆನ್ನಲ್ಲಿ ಮೂಡಲು ಆಶ್ಚರ್ಯಪರವಶನಾಗಿ ತನ್ನ ಹೆಂಡತಿಯನ್ನು ಕರೆದು ಈ ಸುದ್ದಿಯನ್ನು ಅಲ್ಲಿರುವ ಲಕ್ಷ್ಮೀದೇವಿಗೆ ಹೇಳೆಂದು ಕಳಿಸಿದನು. ಅವಳು ತತ್ಕ್ಷಣ ಮಹಾಲಕ್ಷ್ಮಿಗೆ ದೂರಲಾಗಿ, ಆ ದೇವಿಯು ತಾನು ಜಗತ್ಪತಿಯಾದ ವಿಷ್ಣುವಿನ ಗರ್ವವನ್ನು ತೊರೆದು ಲಿಂಗವಂತಳಾದ್ದರಿಂದ ಜಂಗಮಮೂರ್ತಿಯನ್ನು ಸೇವಿಸಬೇಕಾದದ್ದು ತನ್ನ ಕರ್ತವ್ಯವೆಂದರಿತು, ರೇವಣಸಿದ್ಧನ ಬಳಿಗೆ ಬಂದು ನಮಿಸಿ ನುತಿಸಲಾಗಿ, ರೇವಣನು ಕರುಣಿಸಿ ಬಾಯೊಳಗಿನ ಉಕ್ಕಿನ ರಸವನ್ನು ಉಗುಳಲಾಗಿ, ಗೋರಕ್ಷಸಿದ್ಧನ ಎದೆಯಲ್ಲಿದ್ದ ಅಲಗು ಕಳಚಿಬಿದ್ದು ಹೋಯಿತು. ಮತ್ತು ಸ್ತಂಭೀಭೂತರಾದ ಉಳಿದ ಸಿದ್ಧರನ್ನು ಬಿಟ್ಟುಕೊಟ್ಟು ಅವರಿಗೆ ಅನುಗ್ರಹಮಾಡಿದನು.

೧೩. ಅಲ್ಲಿಂದ ಆಕಾಶಕ್ಕೆ ಹಾರಿ ದಕ್ಷಿಣಾಭಿಮುಖವಾಗಿ ಬಂದು ಶ್ರೀಶೈಲದ ಮಹಾರಣ್ಯವನ್ನು ನೋಡಿ, ಅಷ್ಟಭೈರವರಿಂದ ಪೂಜಿತನಾಗಿ ಮಲ್ಲಿಕಾರ್ಜುನನನ್ನು ಕಂಡು ಭಸಿತವನ್ನು ಧರಿಸಿ, ಅಲ್ಲಿಂದ ವಿಯಚ್ಚಾರಿಯಾಗಿ ಉತ್ತರಕ್ಕೆ ಹಾರಿ ಅವಿಮುಕ್ತವಾರಣಸೀ ಶಿವ ಕ್ಷೇತ್ರಮಂ ಸೇರಿ ಕಾಶಿಯೊಳು ವ್ಯಾಸನ ತೋಳು ನೋಡಿ ಹಿಗ್ಗುತ್ತ ಗಂಗೆಯನು ಪಾವನಗೊಳಿಸಿ ವಿಶ್ವೇಶ್ವರಾಲಯಕ್ಕೆ ಬಂದು ಲಿಂಗಕ್ಕೆ ಭಸಿತವಿಟ್ಟು ವಿಶ್ವೇಶ್ವರನನ್ನು ಭಜಿಸುತ್ತಿದ್ದನು.

೧೪. ರೇವಣಸಿದ್ಧನು ಕಾಶಿಯಲ್ಲಿರುವಾಗ, ಕಲ್ಯಾಣಪುರದಲ್ಲಿ ಬಿಜ್ಜಳರಾಯನಿಗೆ ಮಾಸನೂರಿನ ಮಡುವಿನೊಳಗೆ ಸುರಗಿ ಎಂಬ ಆಯುಧವು ಇರುವದೆಂತಲೂ, ಅದನ್ನು ಪಡಕೊಂಡವರು ಮೂರು ಲೋಕಗಳನ್ನು ಜಯಿಸುವರೆಂತಲೂ ತಿಳಿದು ಬರಲಾಗಿ, ಅದನ್ನು ತೆಗೆದುಕೊಡುವ ಸಮರ್ಥರಿಗೆ ೧೨ ಸಾವಿರ ವರಹಗಳನ್ನು ಬಹುಮಾನವಾಗಿ ಕೊಡುತ್ತೇನೆಂದು ಬಿಜ್ಜಳನು ಸಾರಿಸಲಾಗಿ, ಮಂತ್ರವಾದಿಗಳೂ, ಸಿದ್ಧರೂ ಮೊದಲಾದವರು ಕೈಲಾಗದೆ ಸುಮ್ಮನಿರುವಾಗ್ಗೆ ಖರ್ಪರನೆಂಬ ಜೋಗಿಗಳ ಗುರುವು ತಾನು ರಸವಾದ ಸಿದ್ಧಿಗಳುಳ್ಳವನೆಂದೂ, ತಾನು ಅದನ್ನು ತೆಗೆದುಕೊಡುವೆನೆಂದೂ ಹೆಮ್ಮೆಯಿಂದ ಬಿಜ್ಜಳನ ಬಳಿಗೆ ಬಂದು, ಸನ್ಮಾನಿತನಾಗಿ ಸುರಗಿಯನ್ನು ತೆಗೆದುಕೊಡುವದಕ್ಕೆ ೧೨ ಸಾವಿರ ಹೆಣ್ಣುಮಕ್ಕಳನ್ನು ಬಲಿಕೊಡಬೇಕೆಂದು ಹೇಳಿದ ಮೇರೆಗೆ, ರಾಯನು ಚತುರಿಂದ ಕನ್ಯೆಯರನ್ನು ಬಲಾತ್ಕಾರದಿಂದ ತರಿಸುತ್ತಿದ್ದನು. ೧೨ ಸಾವಿರಕ್ಕೆ ಒಬ್ಬ ಕನ್ಯೆಯು ಕಡಿಮೆಯಾಗಲು,

ಚರರು ಮಹಾದೇವಿಯ ಮನೆಗೆ ಹೋಗಿ ಅವಳ ಮಗಳಾದ ರೇವಕ್ಕ ನನ್ನು ಒಯ್ದರು. ಇದನ್ನು ಕೇಳಿ ಮಹಾದೇವಿಯು ರೇವಣಸಿದ್ಧೇಶ್ವರ ನನ್ನು ನೆನೆಯಲಾಗಿ, ರೇವಣನು ಕಾಶಿಯಲ್ಲಿರುತ್ತ ಆಕೆಯ ಮೊರೆಯನ್ನು ಕೇಳಿ, ಆಕಾಶಮಾರ್ಗದಿಂದ ಬಂದು ಕಲ್ಯಾಣಪಟ್ಟಣದಲ್ಲಿಳಿದು, ಅರಸ ನೆಡೆಗೆ ಹೋಗಿ ಅವನಿಗೆ ನೀತಿಯನ್ನು ಹೇಳಿ ಖರ್ಪರಜೋಗಿಯನ್ನು ಓಡಿಸಿ, ೧೨ ಸಾವಿರ ಹೆಣ್ಣುಮಕ್ಕಳನ್ನು ಸೆರೆಯಿಂದ ಬಿಡಿಸಿದನು. ಮತ್ತು ಬಿಜ್ಜಳನಿಗೆ ಸುರಗಿಯು ಸಾಧ್ಯವಲ್ಲವೆಂದು ಮನಗಾಣಿಸಿ ಆತನನ್ನು ಸಂತೈ ಸಿದನು.

೧೫. ಬಿಜ್ಜಳರಾಯನು ತನ್ನ ಮಗಳನ್ನು ರೇವಣಸಿದ್ಧನಿಗೆ ಕೊಟ್ಟು ಮದುವೆಮಾಡಬೇಕೆಂದು ಸಂಕಲ್ಪಿಸಿ ಸಿದ್ಧೇಂದ್ರನಿಗೆ ವಂದನೆಗೈದು, ಶಿವನೆ ನಾನು ಭಕ್ತಿಯಿಂದ ಸಮರ್ಪಿಸುವ ಕನ್ಯಾಭಿಕ್ಷವನ್ನು ನೀವು ಪರಿಗ್ರಹಿಸ ಬೇಕೆಂದು ಪ್ರಾರ್ಥಿಸಲಾಗಿ, ಹಾಲು, ಜೇನುತುಪ್ಪ ಸಕ್ಕರೆ ಇವುಗಳಲ್ಲಿ ಹುಳಿಕೂಡಿದರೆ ಕೆಡುವಂತೆ, ಯತಿಯು ಕೆಡದಿರುವನೇ, ಭೂಪನೇ ಯತಿ ಎತ್ತ ಸತಿ ಎತ್ತ ಎಂದು ಅನೇಕಪ್ರಕಾರವಾಗಿ ಬೋಧಿಸಿದಾಗ್ಗೂ ಅರಸನು ಮಾರುತನು ಗಾಳಿಧೂಳಿಯಿಂದ ಬೆರತಾಗ್ಗೂ ಅವನಿಗೆ ದೋಷದಲೇಶ ವಾದರೂ ಹ್ಯಾಗೆ ತಗಲುವದಿಲ್ಲವೋ, ಅದರಂತೆಯೇ ಭಾಳಲೋಚನನೇ, ನೀನು ಸತಿಯಳನ್ನು ಕೈಕೊಂಡರೂ ನಿನ್ನ ದೇವತ್ವಕ್ಕೆ ಕೋಳು ಹೋಗ ಲಾರದು. ಸರ್ವ ಜಗತ್ತು ಶಕ್ತಿಯಿಂದ ಕೂಡಿರುವದು. ಶಕ್ತಿಯಿಂದ ಸುಖವೂ, ಮಹತ್ವವೂ, ದೇವತ್ವವೂ ಪ್ರಾಪ್ತವಾಗುವವು. ಆದು ಕಾರಣ ಭಕ್ತಿಭಿಕ್ಷವನ್ನು ಕೈಕೊಂಡು ನನಗೆ ಪುಣ್ಯಶಕ್ತಿಯನ್ನು ಕೊಡಬೇಕು, ಹೀಗೆಂದು ಪ್ರಾರ್ಥಿಸಲಾಗಿ, ಅದಕ್ಕೆ ರೇವಣನು ಒಪ್ಪಿದನು. ಮುಂದೆ ಮದುವೆಯ ಪ್ರಸ್ತಾಪವು ವರ್ಣಿಸಲ್ಪಟ್ಟದೆ.

೧೬. ಇಂತು ಬಿಜ್ಜಳರಾಯನ ಮಗಳನ್ನು ಅಂಗೀಕರಿಸುವಂತೆ ಪ್ರಾರ್ಥಿಸಲ್ಪಟ್ಟ ಗುರುರಾಯನು ನಿತ್ಯ ವಿರಕ್ತನಾದರೂ ಶಿವಲೀಲಾವಿನೋ ದದಿಂದ ಮದುವೆಯಾಗುವೆನೆಂದು ಅಂಗೀಕರಿಸಿದ ಪ್ರಕಾರ ಅರಮನೆ ಯಲ್ಲಿ ವಿವಾಹಮಂಟಪವು ಸಿಂಗರಿಸಲ್ಪಟ್ಟು ಕಲ್ಯಾಣ ಸಂಭಾರಂಗಳು ಸಿದ್ಧಗೊಳಿಸಲ್ಪಟ್ಟು ಸಕಲ ದೇಶಗಳಿಗೆ ವೈವಾಹಿಕದ ಆಹ್ವಾನ ಶುಭರೇ ಖೆಗಳನ್ನು ಬರೆಯಿಸಿ ಚಾರರಂ ಕಳುಹಿಸಿ ಸರ್ವ ದೇಶದವರೆಲ್ಲರನ್ನು ಬರಮಾಡಿಕೊಂಡು, ಬಿಜ್ಜಳರಾಯನು ಕನ್ಯಾದಾನಮಾಡಿಕೊಟ್ಟನು. ಮದು

ವೆಯೂದನಂತರ ನಿತ್ಯ ಬ್ರಹ್ಮಚಾರಿಯಾದ ಆ ಶಿವಯೋಗಿಯು ಸಂಸಾರಿಯಂತೆ ನಟಿಸುತ್ತ ಬಿಜ್ಜಳರಾಯನಿಗೆ ಅಳಿಯನಾಗಿ ಸಕಲ ರಾಜವಿಭವಗಳನ್ನು ಅನುಭವಿಸುತ್ತ ಶಿವಭಕ್ತರನ್ನು ಅನುಗ್ರಹಿಸುತ್ತಿದ್ದನು.

೧೭. ಹೀಗೆ ಬಿಜ್ಜಳರಾಯಂಗೆ ಅಳಿಯನಾದ ರೇವಣಾರಾಧ್ಯನು ಲೀಲಾವಿನೋದದಿಂದ ಚತುರಂಗ ಸೇನೆಯೊಡನೆ ಕಲ್ಯಾಣಪಟ್ಟಣದಿಂದ ಹೊರವುಟ್ಟು ದಕ್ಷಿಣದೇಶಕ್ಕೈ ತಂದು ರಾಜೇಂದ್ರ ಚೋಳರಾಜನಿಂದ ಸನ್ಮಾನಿತನಾಗಿ, ಅವನನ್ನು ಅನುಗ್ರಹಿಸಿ ಅವನಿಂದ ಅರ್ಪಿಸಲ್ಪಟ್ಟ ಆತನ ಸುಪುತ್ರಿಯನ್ನು ಪರಿಗ್ರಹಿಸಿ, ಸರ್ವ ವೈಭವದೊಂದಿಗೆ ಅಲ್ಲಿಂದ ಹೊರಟು, ಚೇರ, ಪಾಂಡ್ಯ, ಕೇರಳ, ಕರ್ಣಾಟಕಾಂಧ್ರಾದಿ ಸಕಲ ದೇಶಾಧಿಪತಿಗಳಿಂದಲೂ ಕನ್ಯಾದಾನಪೂರ್ವಕವಾಗಿ ಸಮರ್ಪಿಸಲ್ಪಟ್ಟ ಸಕಲ ಭೋಗಭಾಗ್ಯಗಳನ್ನು ಪಡೆದು, ಆಸೇತು ಹಿಮಾಚಲದ ಭೂಭಾಗಗಳಲ್ಲಿ ಪ್ರಚುರವಾಗಿ ಕೆರೆಗಳಂ ಕಟ್ಟಿಸಿ, ಹೂದೋಟಗಳನ್ನು ಮಾಡಿಸಿ, ಶಿವಾಲಯುಗಳಲ್ಲಿ ಶಿವಲಿಂಗಗಳನ್ನು ಪ್ರತಿಷ್ಠಿಸಿ, ಧರ್ಮಶಾಲೆಗಳನ್ನು ಕಟ್ಟಿಸಿ, ಅನ್ನಸತ್ರಗಳನ್ನಿಟ್ಟು, ಅರವಟ್ಟಿಗೆಗಳಂ ರಚಿಸಿ ಕಾಲಕಾಲಕ್ಕೆ ಮಳೆಸುರಿಯುವಂತೆ ಮಾಡಿ, ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ಪರಿಪಾಲಿಸಿ, ಕುರುಡರಿಗೆ ಕಣ್ಣಿತ್ತು, ಕಿವುಡರಂ ಕೇಳುವಂತೆ ಮಾಡಿ, ಮೂಕರಂ ವಾಚಾಕರಗೊಳಿಸಿ ಹೆಳವಗೆ ಕೈಯಿತ್ತು, ಕುಂಟರಿಗೆ ಕಾಲಿತ್ತು, ನಪುಂಸಕರಂ ಪುರುಷೋತ್ತಮರೆನ್ನಿಸಿ ಬಂಜೆಯರಂ ಪುತ್ರ ಪುತ್ರಿಯುಳ್ಳವರೆನ್ನಿಸಿ, ಬರಡು ದನಗಳಂ ಹೈನಾಗಿಸಿ, ಕರ್ಮವ್ಯಾಧಿಗಳಂ ಪರಿಹರಿಸಿ, ನೆಲಸಿದ ತಾವಂ ಸುಕ್ಷೇತ್ರವೆನಿಸಿ, ತುಳಿರ ನೆಲವಂ ಕಾಶಿಗೆ ಮಿಗಿಲೆನಿಸಿಸಿ, ಚರಣೋದಕವಂ ಸುತೀರ್ಥವೆನಿಸಿ, ದೇಶವೆಲ್ಲವಂ ಲಿಂಗಬೀಡಾಗಿಸಿ, ಮೂಢರಿಗೆ ಸುಜ್ಞಾನವಿತ್ತು, ಶಿವಧರ್ಮವನ್ನು ಸ್ಥಾಪಿಸಿ ಶ್ರೀಗುರುರೇವಣಾಚಾರ್ಯನು ಪುಣ್ಯಕೀರ್ತಿಗಳಿಂ ದಿಗಂತ ವಿಶ್ರಾಂತಗೊಳಿಸಿ ಮರಳಿ ಕಲ್ಯಾಣಪುರಕ್ಕೆ ಬರಲು, ಬಿಜ್ಜಳರಾಯನು ಅವರನ್ನು ಇದಿರ್ಗೊಂಡು ಬಂದು ಬಹಳ ಪ್ರಕಾರದಿಂದ ಸತ್ಕಾರಗೊಳಿಸುತ್ತಿದ್ದನು. ಕೆಲವು ಕಾಲದ ಮೇಲೆ ಬಿಜ್ಜಳನ ಪ್ರಾರ್ಥನೆಯ ಮೇರೆಗೆ ರೇವಣನು ತನ್ನ ಸತಿಯರೊಂದಿಗೆ ವನವಿಹಾರಕ್ಕೆ ಹೊರಟು, ಅಲ್ಲಿ ಸಿದ್ಧನು ಪದ್ಮಪತ್ರವು ನೀರಲ್ಲಿ ಮುಳುಗಿದರೂ, ನೀರಿನ ಸೋಂಕನ್ನು ಪಡೆಯದಿರುವಂತೆ ನಿರ್ಲಿಪ್ತನಾಗಿ, ಸರ್ವಪ್ರಕಾರದ ದಿವ್ಯ ಭೋಗಗಳನ್ನು ಅನುಭವಿಸುತ್ತಿದ್ದನು.

೧೮. ಮಂಗಳವಾಡವೆನಿಪ ಕಲ್ಯಾಣಪಟ್ಟಣದಲ್ಲಿ ರಾಜಭೋಗಂಗಳಂ ಸತಿಯರೊಂದಿಗೆ ಅನುಭವಿಸುತ್ತಿರ್ಪವನಂತೆ ನಟಿಸುವ ಸಿದ್ಧೇಂದ್ರನು, ಲೋಕಶಿಕ್ಷಾರ್ಥವಾಗಿ ಶಿವಧರ್ಮಕ್ಕೆ ನಿಗರ್ವದಿಂದ ದೇಹಶ್ರಮವನ್ನು ಮಾಡುತ್ತಿರಬೇಕೆಂದು, ಧರ್ಮಸೂಕ್ಷ್ಮವ ಬೋಧಿಸುವನಂತೆ ಸಕಲಪ್ರಾಣಿಗಳಿಗೂ ಜೀವನಾಧಾರವಾಗುವ ಕೆರೆಯನ್ನು ಕಾಯ ಕಷ್ಟದಿಂದ ಕಟ್ಟಬೇಕೆಂದು ಸಂಕಲ್ಪಿಸಿ ಪೊರಮಡಲು ಸಿದ್ಧೇಂದ್ರನ ರಾಣಿಯರು ಸಹ ಆತನ ಹಿಂಬಾಲಿಸಿವರು. ರೇವಣನು ಸ್ಥಲವನ್ನು ಗೊತ್ತುಮಾಡಿ ತಾನೇ ಗುದ್ದಲಿಯನ್ನು ಹಿಡಿದು ಮಣ್ಣನ್ನು ಅಗಿದು ಅದನ್ನು ಮೇಲೆ ಹಾಕುತ್ತಿರಲು, ಸಿದ್ಧನ ರಾಣಿಯರೆಲ್ಲರೂ ಕಷ್ಟಿಸಿ ಮಣ್ಣನ್ನು ಹೊರುತ್ತಿದ್ದರು. ಹೀಗೆ ಶಿವಧರ್ಮದ ಕೆರೆಯ ಕೆಲಸವು ನಡೆಯುತ್ತಿರಲು, ಚೋಳರಾಯನ ಮಗಳು ಒಂದುದಿನ ಮಣ್ಣು ಹೊರಲಾರದೆ ತನ್ನ ಗಂಡನಾದ ರೇವಣಸಿದ್ಧನಡಿಗೆರಗಿ ಪ್ರಭುವೆ ನಾನು ಮಹಾರಾಜನ ಮಗಳಾಗಿ ಹುಟ್ಟಿ ಜಗದಾರಾಧ್ಯನಾದ ನಿಮ್ಮ ಕೈಯಂ ಹಿಡಿದು ಸುಖಭಾಗಿನಿಯಾಗಿ, ಈಗ ಮಣ್ಣು ಹೊರುವ ಕಷ್ಟಕ್ಕೆ ಗುರಿಯಾದೆನಲ್ಲ, ನಾನು ಬಹಳ ಕೃಶಳಾಗಿಯೂ, ಮೃದುದೇಹದವಳಾಗಿಯೂ, ಇರುವದಿಲ್ಲವೇ? ಇಂತಹ ಕಠಿಣ ಕೆಲಸದ ಪ್ರಯಾಸವನ್ನು ನಾನು ಹೇಗೆ ಸೈರಿಸಲಿ ಎಂದು ಬಿನ್ನೈಸಿಕೊಳ್ಳಲು ಗುರುರಾಯನು ತನ್ನ ಒಡವೆಯನ್ನು ತನಗೆ ಕೊಟ್ಟು ಅವಳು ತನ್ನ ತವರಮನೆಗೆ ಹೋಗಬೇಕೆಂದು ಹೇಳಿ, ಮೂರುತಿಂಗಳ ಗರ್ಭವನ್ನು ಆಕೆಯ ಉದರದಿಂದ ತನ್ನ ಅಂಗೈಯಲ್ಲಿ ತಕ್ಕೊಂಡು, ಅದನ್ನು ಕೆರೆಯ ಏರಿಯಮೇಲೆ ಕಣಜವನ್ನು ಮಾಡಿ ಅದರಲ್ಲಿ ಪಿಂಡವನ್ನಿಟ್ಟು ಮೇಲೆ ಹಾಸುಗಲ್ಲು ಮುಚ್ಚಿಸಿ ಚೋಳರಾಯನ ಪುತ್ರಿಯನ್ನು ತವರಮನೆಗೆ ಕಳುಹಿಸಿ, ಕೆರೆಯ ಕೆಲಸವನ್ನು ಆರುತಿಂಗಳತನಕ ಸಂಪೂರ್ಣವಾಗಿ ನಡೆಯಿಸಿ, ಬಳಿಕ ಬಿಜ್ಜಳನಕೂಡ ಕಲ್ಯಾಣಪುರಕ್ಕೆ ಬಂದು ಕೆರೆಯ ಏರಿಯಲ್ಲಿ ಪಿಂಡವನ್ನು ಮುಚ್ಚಿದಂದಿನಿಂದ ಒಂಭತ್ತು ತಿಂಗಳು ತುಂಬುವಾಗ್ಗೆ ಸರ್ವಜನಸಮೇತನಾಗಿ ರೇವಣಸಿದ್ಧನು ಅಲ್ಲಿಗೆ ಬಂದು ಕಲ್ಲುಮುಚ್ಚಳವನ್ನು ತೆಗೆಯಿಸುವಾಗ್ಗೆ ಅದರಲ್ಲಿ ಪ್ರಾಕೃತ ಶರೀರ ದೋಷವಿಕಾರಗಳಿಲ್ಲದೆ ಕೆಂಪಗೆ ನುಣ್ಣಗೆ ಸೂರ್ಯನಂತೆ ಬೆಳಗುತ್ತಿರುವ ಪುರುಷ ಶಿಸುವು, ರೇವಣಸಿದ್ಧನ ಪ್ರತಿಬಿಂಬದಹಾಗೆ ಎಲ್ಲರಿಗೂ ಕಾಣಿಸಲಾಗಿ, ಕಂಡು ಕೇಳಿದವರೆಲ್ಲರೂ ಅತ್ಯಾಶ್ಚರ್ಯಗೊಂಡರು. ರೇವಣನು ಆ ಶಿಸು

ವನ್ನು ಎತ್ತಿ ಮುದ್ದಾಡಿ ಅದಕ್ಕೆ (ಜನನಿಯ ಗರ್ಭದ ದುಃಖವು ಈತನಿಗೆ ಇಲ್ಲದ್ದರಿಂದ) ರುದ್ರಮುನಿ ಎಂಬದಾಗಿ ಹೆಸರಿಟ್ಟು, ಕಲ್ಯಾಣಪಟ್ಟಣಕ್ಕೆ ಬಂದು ತನ್ನ ರಾಣಿಯಾದ ಬಿಜ್ಜಳಾರ್ಯ ಮಗಳ ಕೈಯಲ್ಲಿ ಆ ಶಿಸುವನ್ನು ಕೊಟ್ಟು, ಈತನನ್ನು ನೆಟ್ಟಗೆ ಸಲಹುತ್ತಿರಬೇಕೆಂದು ಹೇಳಿ ಅವರ ವಶಕ್ಕೆ ಕೊಟ್ಟನು. ಆ ಶಿಸುವು ಕೆಲಕಾಲದನಂತರ ಶುಕ್ಲಚಂದ್ರನಂತೆ ಬಳೆದು ಎಂಟನೆಯ ವರುಷ ಪ್ರಾಯವುಳ್ಳವನಿರುವಾಗ ಶೈವ ದೀಕ್ಷೆಯನ್ನು ಸಿದ್ಧನು ಕೊಟ್ಟು ಸಕಲತತ್ವರಹಸ್ಯಗಳನ್ನು ತಿಳುಹಿ, ಸಕಲ ಶಕ್ತಿಗಳನ್ನು ಕೊಟ್ಟು ತಾನು ಲೋಕದಲ್ಲಿ ಮಾಡಬೇಕಾದ ಕಾರ್ಯಗಳನ್ನು ಆತನೊಳಿರಿಸಿ ವಿಶ್ರಾಂತನಾಗಿದ್ದನು. ಅನಂತರ ತನ್ನ ರುದ್ರಮುನ್ಯಾದಿ ಶಿಷ್ಯರೊಂದಿಗೆ ಚತುರಂಗ ಬಲಸಮೇತನಾಗಿ ಸಿದ್ಧನು ದೇಶಸಂಚಾರಕ್ಕೆ ಹೋದ ಸಮಯದಲ್ಲಿ ಹಾವಿನಹಾಳ ಎಂಬ ಪುಣ್ಯಕ್ಷೇತ್ರಕ್ಕೆ ಬರಲು, ಅಲ್ಲಿರುವ ಶಿವಭಕ್ತನಾದ ಕಲ್ಲಯ್ಯನು ಬಂದು ಸಾಷ್ಟಾಂಗನಮಸ್ಕಾರಮಾಡಿ, ರೇವಣಾರಾಧ್ಯನನ್ನು ಸ್ತುತಿಸಿ, ಪೂಜಿಸಿ ತನಗೆ ಶಿವದೀಕ್ಷೆಯನ್ನು ಕೊಡಬೇಕಂತ ಪ್ರಾರ್ಥಿಸಲಾಗಿ, ಈತನಿಗೆ ಇಷ್ಟವಾದ ಶಿವ ದೀಕ್ಷೆಯನ್ನು ಕೊಡಬೇಕೆಂದು ರುದ್ರಮುನಿಗೆ ಆಜ್ಞಾಪಿಸಿದನು. ಚತುರ್ವಿಧ ದೀಕ್ಷೆಗಳಲ್ಲಿ ಕಲ್ಲಯ್ಯನಿಗೆ ಯಾವ ದೀಕ್ಷೆಯನ್ನು ಕೊಡಬೇಕೆಂದು ಕೇಳಲಾಗಿ, ರೇವಣನು ಕಲ್ಲಯ್ಯನಿಗೆ ಯಾವದು ಯೋಗ್ಯವೋ ಅದನ್ನು ಕೊಡಬೇಕೆಂದು ರುದ್ರಮುನಿಗೆ ಹೇಳಿದನು. ಆ ನಂತರ ರುದ್ರಮುನಿಯು ಕಲ್ಲಯ್ಯನನ್ನು ಕರೆದು ಆದಿಶೈವ, ಶುದ್ಧಶೈವ, ಮಾರ್ಗಶೈವ ವೀರಶೈವ ಈ ಚತುರ್ವಿಧ ಶಿವದೀಕ್ಷೆಗಳಲ್ಲಿ ಯಾವ ದೀಕ್ಷೆಯನ್ನು ನಿನಗೆ ಕೊಡಬೇಕೆಂದು ಕೇಳೋಣ ಕಲ್ಲಯ್ಯನು ರುದ್ರಮುನಿಗೆ ಅವುಗಳ ಲಕ್ಷಣಗಳನ್ನು ಹೇಳಬೇಕೇಂದು ಬೇಡಿಕೊಳ್ಳಲಾಗಿ ರುದ್ರಮುನಿಯು ಅವುಗಳ ಲಕ್ಷಣಗಳನ್ನು ಹೇಳುತ್ತಾನೆ.

೧. ಪೃಥ್ವಿಯಮೇಲಿರುವ ಮಳಲ ಲಿಂಗವನ್ನು (ಸ್ಥಾವರಲಿಂಗವನ್ನು) ಶಿವನು ಮಂತ್ರದಿಂದ ಎಂಟುವಿಧವಾದ ಅರ್ಚನೆಯಿಂದ ಪೂಜಿಸುವದು ಆದಿಶೈವವು. (೨) ಗುರುವು ತೋರಿಸಿದ ಲಿಂಗವನ್ನು ಪೀಠದಲ್ಲಿ ಪೂಜಿಸಿ ಮಜ್ಜನ, ಮೈಥುನ ಮೊದಲಾದ ಸಂದರ್ಭಗಳಲ್ಲಿ ಅದನ್ನು ತೆಗೆದಿಡಬೇಕು. ಹೀಗೆ ಮಾಡುವವನು ಶುದ್ಧ ಶೈವನು. (೩) ಗುರುಕೊಟ್ಟ ಲಿಂಗವನ್ನು ಎದೆಯಮೇಲೆ ಸರ್ವಕಾಲ ಧರಿಸುವವನು ಮಾರ್ಗಶೈವನು. (೪) ಗುರು

ಕೊಟ್ಟ ಲಿಂಗವನ್ನು ಬಿಟ್ಟು ಅನ್ಯ ದೈವವನ್ನು ಸ್ಮರಿಸದೆ ಇಷ್ಟಲಿಂಗ ಪೂಜೆಯಲ್ಲಿ ನಿರತನಾಗಿ ಭವಿಯ ಸಂಗವನ್ನು ಬೆರಸದೆ ಅಪ್ರತಿಮಳಾದ ಪತಿವ್ರತೆಯಂತೆ ನಡೆಯುವವನು ವೀರಶೈವನು. ಹೀಗೆಂದು ಚತುರ್ವಿಧ ಶೈವವನ್ನು ವರ್ಣಿಸಲಾಗಿ ಅದಕ್ಕೆ ಕಲ್ಲಯ್ಯನು ಅನ್ನುತ್ತಾನೆ ನಾನು ಪೂರ್ವದಲ್ಲಿ ಸ್ಥಾವರಲಿಂಗವನ್ನು ಮುಟ್ಟಿಲ್ಲ. ಶ್ರೇಷ್ಠವಾದ ವೀರಶೈವ ಮತವು ಅಸಮರ್ಥನಾದ ನನಗೆ ಸರಿಯಲ್ಲ. ಲಿಂಗವನ್ನು ಮುಟ್ಟಿ ಹಿಂದುಗಡೆ ತ್ಯಜಿಸುವ ಶುದ್ಧಶೈವವನ್ನು ಬಲ್ಲೆನು. ನನಗೆ ಮಾರ್ಗಶೈವದ ದೀಕ್ಷೆಯನ್ನು ಕರುಣಿಸಬೇಕೆಂದು ಬಿನ್ನೈಸಿಕೊಳ್ಳಲಾಗಿ, ಆತನಿಗೆ ವಿಧಿವತ್ತಾಗಿ ಮಾರ್ಗಶೈವದೀಕ್ಷೆಯನ್ನು ಅನುಗ್ರಹಿಸಿಕೊಟ್ಟನು. ಮತ್ತು ಶೈವಸಮುದಾಯದಲ್ಲಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಆರು ಪ್ರಕಾರದ ಭಕ್ತಿ ಭೇದಗಳನ್ನು ವಿವರಿಸಿ ಹೇಳಿ ಶಿವಧರ್ಮ ರಹಸ್ಯಗಳನ್ನೂ, ತತ್ವಗಳನ್ನೂ, ಉಪದೇಶಿಸಿ ಆತನನ್ನು ಅನುಗ್ರಹಿಸಿ ಕಲ್ಲಿನಾಥಲಿಂಗದ ದರುಶನತಕ್ಕೊಂಡು ಬಳಿಕ ರೇವಣಸಿದ್ಧನು ರುದ್ರಮುನಿಯೊಡನೆ ಅಲ್ಲಿಂದ ತೆರಳಿದನು.

೧೯ ಹಾವಿನಹಾಳದಿಂದ ದೇಶಸಂಚಾರಿಯಾಗಿ ಪರಿವಾರದೊಡನೆ ಬಂದ ರೇವಣಾರಾಧ್ಯನು ಸೊನ್ನಲಿಗೆ ಎಂಬ ಸೊನ್ನಲಾಪುರ (ಸೊಲ್ಲಾಪುರ) ಪ್ರಾಂತಕ್ಕೆ ಬರುವಾಗ್ಗೆ, ಈ ವರ್ತಮಾನಕೇಳಿ ಅಲ್ಲಿಂದ ಪರಮ ಶಿವಭಕ್ತಳೂ, ಜ್ಞಾನಿಯೂ ಆದ ಚಾಮಲದೇವಿಯು ಅನೇಕ ಸತಿಯರೊಂದಿಗೆ ಆರತಿಗಳಿಂದ ಗುರುವರನನ್ನು ಇದಿರ್ಗೊಳ್ಳಬೇಕೆಂದು ಬರಲಾಗಿ, ಅದನ್ನು ತಿಳಿದು ರೇವಣಸಿದ್ಧಾರ್ಯನು ಆನೆಯಿಂದ ಕೆಳಗಿಳಿದು, ಪಾದುಕೆಗಳನ್ನು ಮೆಟ್ಟದೆ ಪಾದಚಾರಿಯಾಗಿ ಬರುವವನನ್ನು ಕಂಡು, ಚಾಮಲದೇವಿಯು ಹೀಗೆ ಯಾಕೆ ಬರಿಗಾಲಿಲೆ ನಡೆಯೋಣವಾಗಿದೆ ಎಂಬದಾಗಿ ಪ್ರಶ್ನೆಮಾಡಲಾಗಿ, ರೇವಣಸಿದ್ಧನು ನಕ್ಕು ಅಹುದವ್ವ ಈ ಪುರದೊಳಗೆ ಪರಶಿವಾಂಶವು ಮಹಾಸಿದ್ಧಪುರುಷನಾಗಿ ಅವತರಿಸಿ ಈ ಸೊನ್ನಲಾಪುರವನ್ನು ಲಿಂಗಗಳ ಬೀಡನ್ನಾಗಿ ಮಾಡುವದರಿಂದ, ಈ ಮಹಾಕ್ಷೇತ್ರವನ್ನು ಹಾವುಗೆಗಳಿಂದ ಮೆಟ್ಟಲಾಗದೆಂದು ಬಿಟ್ಟಿರುವೆನೆಂದು ಹೇಳುತ್ತ ಅಲ್ಲಿರುವ ಮೊರಡಿಯ ಮುದ್ದುಗವುಡ ಮತ್ತು ಸುಗ್ಗವ್ವೆ ಇವರ ಮನೆಗೆ ಬಂದು, ಭಿಕ್ಷೆ ಎಂದು ಅರಮನೆಯ ಎದುರಿಗೆ ಬರಲಾಗಿ, ಸುಗ್ಗವ್ವೆಯು ಒಳಗಿಂದ ಬಂದು ಭಿಕ್ಷವನ್ನು ನೀಡಲು, ಅವಳ ಕೈಯಿಂದ ಭಿಕ್ಷವನ್ನು

ಸ್ವೀಕರಿಸಿ, ಆವಳ ಪುಣ್ಯೋದರಕ್ಕೆ ಭಸ್ಮವನ್ನು ಹಚ್ಚಿ ವಶಿಕುಮಾರನಾದ ರೇವಣಸಿದ್ಧನು ಅವಳಿಗೆ ನಮಸ್ಕರಿಸಿದನು. ಇದರಿಂದ ನಿರ್ಮಲಾತ್ಮಕಳಾದ ಸುಗ್ಗವ್ವೆಯು ಹೆದರಿ ಗುರುವು ತನಗೆ ವಂದನೆ ಮಾಡಿದ ಕಾರಣವನ್ನು ಹೇಳಬೇಕೆಂದು ಬೇಡಿಕೊಳ್ಳಲಾಗಿ, ರೇವಣಾರಾಧ್ಯನು ಸುಗ್ಗವ್ವೆ ನಿನ್ನುದರದಲ್ಲಿ ಪರಮೇಶ್ವರಾಂಶವು ಮಹಾ ಸಿದ್ಧಪುರುಷನಾಗಿರ್ಪುದು. ಆ ಶಿಸುವು ಜನಿಸಿ ಉಸಿರಿಕ್ಕದೆ, ಎವೆಇಕ್ಕದೆ, ಹಸಿವಿಲ್ಲದೆ, ನೀರಡಿಸದೆ, ನಿದ್ರಾಹಾರ, ಮಲಮೂತ್ರಾದಿ ತನುದೋಷಗಳಿಲ್ಲದೆ ಚಿನ್ಮಯವಾಗಿ ಬೆಳಗುವದು. ಆ ಸಿದ್ಧರಾಮನಿಂದ ಶಿವಲಿಂಗಗಳನ್ನು ಇಲ್ಲಿ ಪ್ರತಿಷ್ಠಿಸಲ್ಪಟ್ಟು ಶಿವತೀರ್ಥ, ಶಿವಸ್ಥಲವಾಗುವದು ಎಂದು ಹೇಳಲಾಗಿ ನಮಗೆ ಪ್ರಾಯವು ಕಳೆದು ಕಡುಮುದಿತನವು ಬಂದಿರಲಾಗಿ (ಅಂದರೆ ಪ್ರಾಯವು ನಷ್ಟವಾಗಿ ನರೆಯು ಅವತರಿಸಿತು. ಧಾತುವೆಲ್ಲ ನೀರವಾಗಿದೆ. ಮನೋಭಾವವಿಕಾರಗಳು ಅಳಿದುಹೋಗಿವೆ.) ಮಕ್ಕಳು ಹುಟ್ಟುವ ಬಗೆಹೇಗೆಂದು ಕೇಳಲಾಗಿ, ಸಿದ್ಧನು ನಕ್ಕು ಸುಗ್ಗವ್ವೆ ಮಹಾತ್ಮನಾದ ಪರಮಶಿವನು ಲೀಲಾಮಾತ್ರದಿಂದ ಅವತರಿಸಲಿಕ್ಕೆ ನೀನು ನಿಮಿತ್ತವಲ್ಲದೆ, ನಿನ್ನ ಪ್ರಾಯವು ಬೇಕಿಲ್ಲವು. ಸೂರ್ಯನು ಪ್ರಕಾಶಗೊಳ್ಳಲಿಕ್ಕೆ ದೀವಿಗೆಯ ಬೆಳಕು ಹೇಗೆ ಬೇಕಾಗಿಲ್ಲವೊ, ಅದರಂತೆ ಹದಿನಾಲ್ಕು ಲೋಕಗಳನ್ನು ನಿರ್ಮಿಸುವಾತಗೆ ಸಪ್ತಧಾತುಗಳ ಹಂಬಲವು ಯಾತಕ್ಕೆ? ಮತ್ತು ಜಗತ್ತಿಗೆ ಒಡೆಯನೆನಿಸುವವನು ವಿಷಯಸುಖಗಳ ಉರವಣೆಯಲ್ಲಿ ಹುಟ್ಟುವನೇ? ಎಂದು ಹೇಳಿ ಗಂಡಹೆಂಡರು ಗಂಧರ್ವರಿದ್ದು ಭೃಂಗಿಯ ಶಾಪದಿಂದ ಇಲ್ಲಿ ಹುಟ್ಟಿರುವಿರಿ ನಿಮ್ಮ ಹೊಟ್ಟೆಯಲ್ಲಿ ಸಿದ್ಧರಾಮನೆಂಬ ಶಿವಯೋಗಿಯು ಹುಟ್ಟುವದರಿಂದ, ನಿಮಗೆ ನಿಶ್ಶಾಪವಾಗುವದೆಂದು ಹೇಳಿ ಸುಗ್ಗವ್ವೆಯನ್ನು ಸಂತೈಸಿ, ಚಾಮುಲದೇವಿಗೆ ಸಿದ್ಧರಾಮನನ್ನು ಪೂಜಿಸುವಂತೆ ಆಜ್ಞಾಪಿಸಿ, ಅಲ್ಲಿಂದ ತೆರಳಿ ಕಲ್ಯಾಣಪಟ್ಟಣಕ್ಕೆ ಬಂದು ಕೆಲವು ದಿವಸ ಅಲ್ಲಿರ್ದು, ರಾಜನ ಆತಿಥ್ಯವನ್ನು ಕೈಕೊಳ್ಳುತ್ತ ಶಿವಭಕ್ತರನ್ನು ಸಲಹುತ್ತಿದ್ದನು. ಹೀಗೆ ಜನರು ಅರಿಯುವಂತೆ ೭೦೦ ವರುಷ ಜನರು ತಿಳಿಯದಂತೆ ೭೦೦ ವರುಷ ಅಂತು ೧೪೦೦ ವರುಷ ಸಿದ್ಧನು ಭೂಲೋಕದಲ್ಲಿ ಬದುಕಿರ್ದ ಬಳಿಕ ಪರಶಿವನ ಪ್ರೇರಣೆಯಿಂದ ತಾನಿನ್ನು ನರಲೋಕದೊಳಗೆ ಇರಕೂಡದೆಂದು ಅರಿತು, ತನ್ನ ಕುಮಾರನಾದ ರುದ್ರಮುನಿಗೆ ಗುರುಪಟ್ಟವನ್ನು ಕಟ್ಟಿ ತನ್ನ ರಾಣಿಯರನ್ನು ಸಶರೀರವಾಗಿ ಕೈಲಾಸಕ್ಕೆ ಹೋಗುವಂತೆ ವಿಮಾನ

ದಲ್ಲಿ ಕುಳ್ಳಿರಿಸಿ ಅವರನ್ನು ಅನುಗ್ರಹಿಸಿ ಕಳುಹಿಸಿಕೊಟ್ಟು, ಬಿಜ್ಜಳನನ್ನು ಕರುಣಾಕಟಾಕ್ಷದಿಂದ ನೋಡಿ, ತಾನು ಆಕಾಶಕ್ಕೆ ಹಾರಿ ಗಗನಸಂಚಾರಿಯಾಗಿ ಕಡೆಗೆ ಕೊಲ್ಲಿಪಾಕವೆಂಬ ಶಿವಕ್ಷೇತ್ರದ ಸೋಮೇಶ್ವರಾಲಯದ ಶಿಖರವನ್ನು ಕಂಡು ಅಲ್ಲಿಳಿದು, ಸರ್ವ ಜನರು ನೋಡುವಂತೆ ಆ ಲಿಂಗವನ್ನು ಅಪ್ಪಿಕೊಂಡು ಪ್ರಾರ್ಥಿಸಲಾಗಿ, ಲಿಂಗವು ಇಬ್ಬಗೆಯಾಗಲು ರೇವಣಸಿದ್ಧನು ಸೋಮೇಶ್ವರಲಿಂಗದಲ್ಲಿ ಬೆರೆತು ಐಕ್ಯನಾದನು. ಇದನ್ನು ಭಕ್ತಸಮೂಹವು ನೋಡಿ ಆಶ್ಚರ್ಯಗೊಂಡು ಸ್ತುತಿಸುವಾಗ್ಗೆ, ಆಕಾಶದಲ್ಲಿ ವಿಮಾನದೊಳಗೆ ಕುಳಿತು ಕೈಲಾಸಕ್ಕೆ ಗಮಿಸುತ್ತಿದ್ದ ರೇವಣಸಿದ್ಧನನ್ನು ನೋಡಿದರು.

---

# ಮನಸ್ಸಿನ ಮಹತ್ವವು.

(ಲೇಖಕ:—ಶ್ರೀ ಗುರುಸಿದ್ಧ)

"ಸಕಲೇಂದ್ರಿಯಗಳಲ್ಲಿ ವಿಕಾರಿಸುವ ಮನವ ಸೆಳೆದು ನಿಲ್ಲಿಸಿದಾತ ಸುಖಿ. ಪಂಚೇಂದ್ರಿಯಗಳಲ್ಲಿ ಕೀಳು ಮನಂಗೊಂಡು ಸುಳಿವಾತ ದುಃಖಿ ಮನಸ್ಸು ಬಹಿರ್ಮುಖವಾಗಲು ಮಾಯಾಪ್ರಪಂಚಿ. ಮನವಂತರ್ಮುಖವಾದರೆ ಅವಿರಳ ಜ್ಞಾನಿ. ಮನವು ಮಹದಲ್ಲಿ ಸಂದಿರಲಾತಮುಕ್ತನು. ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರಲಿಂಗದಲ್ಲಿ ಅಭೇದ್ಯನು" ವಚನ ಶಾಸ್ತ್ರಸಾರ.

ಈ ಪ್ರಕಾರ ನಮ್ಮ ಪೂರ್ವಜರೂ ಪೂಜ್ಯರೂ ಆದ ಶಿವಶರಣರು ಮನಸ್ಸಿನ ಮಹತ್ವವನ್ನು ವರ್ಣಿಸಿರುವರು; ಕರ್ನಾಟಕದಲ್ಲಿ ಹೆಸರುವಾಸಿಯಾದ ಪುರಂದರದಾಸರು ಮನಸ್ಸು ಯಾವಪ್ರಕಾರ ಇರುತ್ತದೆಂಬದನ್ನು ಬಹು ಸೊಗಸಾಗಿ ಬಣ್ಣಿಸಿರುವರು; ಇದಲ್ಲದೆ ಶ್ರೀಕೃಷ್ಣಪರಮಾತ್ಮನು ನಮ್ಮ ಮನಸ್ಸೇ ನಮ್ಮ ಬಂಧನಕ್ಕೂ ಮೋಕ್ಷಕ್ಕೂ ಕಾರಣವಾಗಿರುತ್ತದೆಂದು ಭಗವದ್ಗೀತೆಯಲ್ಲಿ ಹೇಳಿರುವನು.

ನಾವು ನಮ್ಮ ವಿಚಾರದಿಂದಲೇ ನಮ್ಮ ಭವಿಷ್ಯಕ್ಕೆ ಕಾರಣರಾಗಿರುತ್ತೇವೆ. ನಮ್ಮ ವಿಚಾರಗಳು ಒಳ್ಳೆಯವು ಅಥವಾ ಕೆಡಕು ಎಂಬದು

ನಮಗೆ ತಿಳಿಯುವದು. ಈ ಜಗತ್ತಾದರೂ ಮನುಷ್ಯನ ವಿಚಾರದ ಮೇಲೆಯೇ ಅವಲಂಬಿಸಿರುತ್ತದೆ. ನಮ್ಮ ವಿಚಾರವೇ ನಮ್ಮ ದೈವದ ಪರ್ಯಾಯ ನಾಮವು. ಅದ್ದರಿಂದ ನಮ್ಮ ದೈವವನ್ನು ನಾವೇ ಆರಿಸಿ ಕೊಳ್ಳಬೇಕು. ಆದರೆ ಪರಿಣಾಮದ ಪೂರ್ಣ ಪ್ರತೀಕ್ಷೆ ಮಾಡಬಾರದು. ಮತ್ತು ಪ್ರೀತಿಯಿಂದ ಪ್ರೀತಿಯೂ, ದ್ವೇಷದಿಂದ ದ್ವೇಷವೂ, ಬೆಳೆಯುತ್ತ ದೆಂಬದನ್ನು ಮರೆಯಬಾರದು.

ಬಹಳ ವಿದ್ಯಾವಂತನಲ್ಲದ ಒಬ್ಬನು ಒಂದು ಹಡಗದ ಒಡೆಯ ನಾದನು. ಆತನಿಗೆ ಸಮುದ್ರದ ವಿಷಯವಾಗಿ ಏನು ಗೊತ್ತಿದ್ದಿಲ್ಲ. ಹಡ ಗದಲ್ಲಿಯ ಯಂತ್ರಗಳನ್ನು ಹೇಗೆ ನಡಿಸಬೇಕೆಂಬದಂತೂ ಎಳ್ಳಷ್ಟು ತಿಳಿ ದಿರಲಿಲ್ಲ. ಆದಾಗ್ಯೂ ತನ್ನ ಹಡಗವನ್ನು ತಾನೇ ನಡಿಸಬೇಕೆಂಬ ಕುತೂ ಹಲವು ಮಾತ್ರ ಅವನಲ್ಲಿ ದೃಢವಾಗಿತ್ತು. ಆದ್ದರಿಂದ ಒಮ್ಮೆ ಆತನು ಹಡಗದಲ್ಲಿ ಕೆಲಸಮಾಡುವ ಅನೇಕ ಜನರನ್ನು ನೋಡಿ ಇಷ್ಟು ಜನರು ಹಡಗವನ್ನು ನಡಿಸುವದು ಗೊಂದಲದ ಕೆಲಸವೆಂದು ತಿಳಿದು ತಾನೇ ನಡಿಸಬೇಕೆಂಬ ಹವ್ಯಾಸಕ್ಕೆ ಬಿದ್ದು ಹಡಗವನ್ನು ನೋಡಹತ್ತಿದನು. ನೋಡ ನೋಡುತ್ತ ಮುಂದಿನ ಡಕ್ಕೆಯ ಮೇಲೆ ಒಂದು ದೊಡ್ಡ ಚಕ್ರ ವನ್ನು ಅತ್ತಿಂದಿತ್ತ ಇತ್ತಿಂದತ್ತ ಸರಿಸುತ್ತಿರುವ ಮನುಷ್ಯನ ಮೇಲೆ ಆತನ ದೃಷ್ಟಿಯು ಬಿತ್ತು. ಆಗ ಆ ಹಡಗದ ಯಜಮಾನತ್ವವನ್ನು ಸ್ವೀಕರಿಸಿದ ಆ ಮನುಷ್ಯನು "ಅವನು ಏನು ಮಾಡುತ್ತಿರುವನು." ಎಂದು ಪ್ರಶ್ನೆ ಮಾಡಿದನು "ಅವನು ಹಡಗದ ಮಾರ್ಗದರ್ಶಕನು. ಚುಕ್ಕಾಣಿಯ ಹತ್ತರ ಕೂತು ಮಾರ್ಗವನ್ನು ತೋರಿಸುವನು." ಎಂದು ಸಮೀಪದಲ್ಲಿದ್ದ ಒಬ್ಬನು ಉತ್ತರ ಕೊಟ್ಟನು. ಅವನು ಈ ಪ್ರಕಾರ ವ್ಯರ್ಥ ಕಾಲಕಳೆಯುವದ ದರಲ್ಲಿ ಏನು ಲಾಭ ತೋರುವದಿಲ್ಲ, ಮುಂದೆ ನೀರು ಅದೆ. ಹಡಗದ ಪಟಗಳನ್ನು ಇಳಿಬಿಟ್ಟರೆ ಹಡಗವು ತಾನೇ ಮುಂದೆ ಸಾಗಬಹುದೆಂದು ನನಗೆ ತೋರುತ್ತದೆ. ಮುಂದೆ ಭೂಮಿಯು ಬಂದಾಗ ಅಥವಾ ಬೇರೊಂದು ಹಡಗವು ಎದುರಿಗೆ ಬಂದಾಗ ಚುಕ್ಕಾಣಿಯನ್ನು ನಡಿಸಬಹುದೆಂದು ಅಂದು ಹಡಗದ ಪಟಗಳನ್ನು ಇಳಿಬಿಡಲಿಕ್ಕೆ ಅಪ್ಪಣೆಮಾಡಿದನು. ಹಡಗದಲ್ಲಿಯ ಜನರು ಆ ಮೂರ್ಖ ಯಜಮಾನನ ಆಜ್ಞೆಯ ಪ್ರಕಾರ ಪಟಗಳನ್ನು ಇಳಿಬಿಡಲು ಸ್ವಲ್ಪ ಹೊತ್ತಿನಲ್ಲಿಯೇ ಆ ಹಡಗವು ಗಾಳಿಗೆ ಸಿಕ್ಕತ್ತ ಹೋಗಿ ಒಂದು ಬಂಡಿಗೆ ತಾಕಿ ಒಡೆದು ಜಲಸಮಾಧಿಯನ್ನು ಹೊಂದಿತು.

ಆದರೆ ಆ ಜಲಸಮಾಧಿಯನ್ನು ತಪ್ಪಿಸಿಕೊಂಡು ಜೀವಂತ ಉಳಿದ ಕೆಲವರು ಆ ಮೂರ್ಖ ಕಪ್ತಾನನಂತೆ ಹಡಗವು ಚುಕ್ಕಾಣಿಯಿಲ್ಲದೆ ತಾನೇ ನಡೆಯುವದೆಂದು ತಿಳಕೊಂಡವರು ಯಾರೂ ಇರಲಿಕ್ಕಿಲ್ಲವೆಂದು ನೆನೆಸುತ್ತಿದ್ದರು.

ನಾವಾದರು ಅಂಥ ಮೂರ್ಖನು ಇರಲಿಕಿಲ್ಲವೆಂದು ಅನ್ನಬಹುದು. ಆದಾಗ್ಗೂ ಅಂಥ ಮೂರ್ಖರು ಇರುವದಿಲ್ಲೆಂದು ನಂಬಲಿಕ್ಕೆ ಬರುವದಿಲ್ಲ. ಯಾಕಂದರೆ ಈ ವಿಚಿತ್ರವಾದ ಜಗತ್ತಿನಲ್ಲಿ ಎಂಥೆಂಥ ಮೂರ್ಖರು ಇದ್ದಾರೆಂಬದು ಎಷ್ಟೋ ಸಾರೆ ನಮ್ಮ ಅನುಭವಕ್ಕೆ ಬಾರದೇ ಹೋಗುವದಿಲ್ಲ. ಈ ಪ್ರಕಾರ ನಾವು ಮೂರ್ಖರಾಗಬಹುದೋ?

ಒಂದು ನಿಮಿಷ ನಾವು ನಮ್ಮೊಳಗೆ ವಿಚಾರಮಾಡಿದರೆ ತಿಳಿಯುಬರುತ್ತದೆ. "ಆ ಹಡಗಕ್ಕಿಂತಲೂ ಹೆಚ್ಚು ಸೂಕ್ಷ್ಮವುಳ್ಳ, ಹೆಚ್ಚು ಬೆಲೆಯುಳ್ಳ ಮತ್ತು ಹೆಚ್ಚು ಮಹತ್ವವುಳ್ಳ ಹಡಗದ ಅಂದರೆ ನಮ್ಮ ದೇಹದ ಯಜಮಾನರು ನಾವಾಗಿದ್ದೇವೆ. ಈ ಪ್ರಪಂಚವೆಂಬ ಸಾಗರದಲ್ಲಿ ಈ ದೇಹವೆಂಬ ಹಡಗವನ್ನು ನಾವು ಸುರಕ್ಷಿತವಾಗಿ ನಡಿಸಬೇಕಾಗಿರುತ್ತದೆ. ಹಡಗಕ್ಕೆ ಚುಕ್ಕಾಣಿಯು ಹೇಗೆ ಮಾರ್ಗದರ್ಶಕವಾಗಿರುತ್ತದೆಯೋ ಹಾಗೆ ನಮ್ಮ ದೇಹವೆಂಬ ಹಡಗಕ್ಕೆ ನಮ್ಮ ಮನಸ್ಸೇ ಮಾರ್ಗದರ್ಶಕ [illegible]ಕ್ಕಾಣಿಯಾಗಿರುತ್ತದೆ. ಚುಕ್ಕಾಣಿಯಿಲ್ಲದೆ ಸುರಕ್ಷಿತವಾಗಿ ಹಡಗವು ಹೇಗೆ ನಡಿಯಲಾರದೋ ಹಾಗೆಯೇ ಚುಕ್ಕಾಣಿಯಂತಿರುವ ನಮ್ಮ ಮನಸ್ಸಿಲ್ಲದೆ ದೇಹವೆಂಬ ಹಡಗವನ್ನು ನಾವು ಈ ಪ್ರಪಂಚ ಸಾಗರದಲ್ಲಿ ಸುರಕ್ಷಿತವಾಗಿ ನಡಿಸಲಾರೆವು. ಆದರೆ ಇಂಥ ಮನಸ್ಸಿನ ಚಲನವಲನದ ಕಡೆಗೆ ನಾವು ಎಷ್ಟು ಲಕ್ಷಕೊಡುತ್ತಿರುವೆವು? ಈ ಮನಸ್ಸು ಸಿಕ್ಕತ್ತ ಹೋಗಲಿಕ್ಕೆ ಆಸ್ಪದಕೊಡುವದಿಲ್ಲವೇ? ಸಿಟ್ಟಿನ ಅಥವಾ ವಿಕಾರದ ಗಾಳಿಯನ್ನು ಬಡಿಸಿ ಅತ್ತಿಂದಿತ್ತ ಇತ್ತಿಂದತ್ತ ಅದನ್ನು ಓಡಿಸುವದಿಲ್ಲವೇ? ಅದರ ಸೆಳತಕ್ಕೆ ಬಿದ್ದು ಗೆಳೆಯರನ್ನು ಕಳಕೊಳ್ಳುವದಿಲ್ಲವೇ? ಅನೇಕ ಹೇಸಿ ಕೆಲಸಗಳನ್ನು ಮಾಡುವದಿಲ್ಲವೇ? ಮನಬಂದಂತೆ ಸಿಕ್ಕದ್ದನ್ನು ಮಾಡಿ ಸುಖವೆಂದು ತಿಳಿದು ಅದರ ಹೊಡತಕ್ಕೆ ಗಾಸಿಯಾಗುವದಿಲ್ಲವೇ? ಒಂದಲ್ಲ ಎರಡಲ್ಲ ಅನೇಕಸಾರೆ ಮನಸ್ಸಿನ ಬಲೆಯಲ್ಲಿ ಬಿದ್ದು ಕಕ್ಕಾವಿಕ್ಕಿಯಾಗುವದಿಲ್ಲವೇ? ಆದರೆ ಸ್ವಲ್ಪ ಶಾಂತಚಿತ್ತರಾಗಿ ವಿಚಾರಮಾಡಿದರೆ ಆ ಪ್ರಕಾರ ಮಾಡಲಿಕ್ಕೆ ನಾವೇ ಒಪ್ಪುವದಿಲ್ಲ. ನಾವು ನಿಜವಾಗಿಯೂ ನಮ್ಮ ಹಡ

ಗೆವೆ ಯಜಮಾನರಾಗಿದ್ದರೆ ಸುಖಶಾಂತಿ ವಿಜಯವೆಂಬ ಬಂದರಕ್ಕೆ ಮುಟ್ಟ ಬಾರದೇಕೆ? ಹಾಗಿಲ್ಲದಿದ್ದರೆ ಆ ಮೂರ್ಖ ಕಪ್ತಾನನಂತೆ ನಮ್ಮ ಹಡಗವನ್ನು ನಾವೇ ಮುಳುಗಿಸಲಿಕ್ಕೆ ಯತ್ನಿಸುತ್ತೇವೆಂದು ಹೇಳಲು ಬಾಧಕವೇನು?

ಆದ್ದರಿಂದ ಆ ಮನಸ್ಸನ್ನು ಮೊದಲಿನಿಂದಲೇ ನಮ್ಮ ಸ್ವಾಧೀನದಲ್ಲಿಟ್ಟುಕೊಂಡು ನಮ್ಮ ಆತ್ಮೋನ್ನತಿಯನ್ನು ಮಾಡಿಕೊಳ್ಳಬೇಕು. ನಮ್ಮ ಸುಖದುಃಖಕ್ಕೂ ಬಂಧನಮೋಕ್ಷಕ್ಕೂ ನಮ್ಮ ಮನಸ್ಸೇ ಕಾರಣವಾಗಿರುವದು. ಆ ಮನಸ್ಸಿನ ಶಕ್ತಿಯು ಎಷ್ಟಿರುತ್ತದೆಂಬದನ್ನು ನಮ್ಮಲ್ಲಿಯ ಎಷ್ಟೋ ಜನರು ಅರಿತು ಮರೆತಿರುವ ಮಾತಾಗಿರುವದು. ಮನಸ್ಸನ್ನು ಆಧೀನದಲ್ಲಿಟ್ಟುಕೊಳ್ಳುವದು ಸುಲಭವಲ್ಲ. ಚಿಕ್ಕಂದಿನಿಂದಲೇ ಅದಕ್ಕೆ ಒತ್ತಾಯದಿಂದ ಪಾಠಗಳನ್ನು ಕಲಿಸಿ ಅಂಕಿತದಲ್ಲಿಡಬೇಕಾಗುತ್ತದೆ. ಚುಕಾಣಿಯಂತಿರುವ ಈ ಮನಸ್ಸು ಒಮ್ಮೆ ಮಾರ್ಗವನ್ನು ತಪ್ಪಿಸಿ ಬಿಟ್ಟರೆ ನಾವು ಸುಖಶಾಂತಿ ವಿಜಯವೆಂಬ ಬಂದರವನ್ನು ಮುಟ್ಟುವದು ಕಠಿಣವಾಗುವದು.

ಆದ್ದರಿಂದ ಅದರ ಕಡೆಗೆ ಮೊದಲಿನಿಂದಲೇ ನಾವು ಎಚ್ಚರದಿಂದಿರಬೇಕು. ಒಮ್ಮೆ ನಾವು ಅಡ್ಡದಾರಿಯನ್ನು ಹಿಡಿದೆವೆಂದರೆ ಪುನಃ ಸನ್ಮಾರ್ಗಕ್ಕೆ ಹತ್ತಬೇಕಾದರೆ ಬಹಳ ಪ್ರಯಾಸವಾಗುವದು. ಎಳೇ ಟೊಂಗೆಯನ್ನು ಬೇಕಾದ ಹಾಗೆ ಮಣಿಸಲಿಕ್ಕೆ ಬರುವದು, ಅದೇ ಬಲಿತನಂತರ ಬಗ್ಗಿಸಲಿಕ್ಕೆ ಹೋದರೆ ಮುರಿಯುವದು. ಇಂಥ ಬಲವುಳ್ಳ ಮನಸ್ಸನ್ನು ಬಗ್ಗಿಸಿ ಆಧೀನದಲ್ಲಿ ಇಟ್ಟುಕೊಳ್ಳುವದು ಮಾತಾಡಲಿಕ್ಕೆ ಸುಲಭವಾದರೂ ಕೃತಿಯಲ್ಲಿ ತರಲಿಕ್ಕೆ ಸುಲಭಸಾಧ್ಯವಲ್ಲ. ಆದಾಗ್ಗೂ ಸ್ವಲ್ಪ ಶ್ರಮಪಟ್ಟರೆ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳುವದು ಕಠಿಣವಲ್ಲ. ನಮ್ಮ ಮೊದಲಿನ ಅಡ್ಡದಾರಿಯ ರೂಢಿಗಳನ್ನು ಸಹ ತಪ್ಪಿಸಿ ನಮ್ಮ ನಡತೆಯನ್ನು ಸುಧಾರಿಸಲಿಕ್ಕೆ ಬರುತ್ತದೆ. ಇಷ್ಟೇ ಅಲ್ಲ, ನಮ್ಮ ಸುತ್ತುಮುತ್ತಲಿನ ವಾತಾವರಣವನ್ನು ಸಹ ಸುಧಾರಿಸಬಹುದು.

ಇಂಥ ಮನಸ್ಸು ಈ ನಮ್ಮ ಜಗತ್ತಿನಲ್ಲಿರುವ ಎಲ್ಲ ವಸ್ತುಗಳ ಮೇಲೆ ತನ್ನ ಅಧಿಕಾರವನ್ನು ನಡಿಸುತ್ತದೆಂದು ನಮಗೆ ತಿಳಿಯುತ್ತಿದ್ದರೂ ಅದರ ಶಕ್ತಿಯ ಕಡೆಗೆ ನಾವು ಸಾಕಷ್ಟು ಲಕ್ಷವನ್ನು ಕೊಡುವದಿಲ್ಲ. ಮತ್ತು ಅದನ್ನು ತಿಳಿದುಕೊಳ್ಳಲಿಕ್ಕೆ ಸಹ ಹೋಗುವದಿಲ್ಲ. ಅದರ

ಪ್ರಚಂಡ ಶಕ್ತಿಯ ಬಗ್ಗೆ ನಾವೆಲ್ಲರೂ ಸ್ತುತಿಗಾಯನ ಮಾಡುತ್ತಿದ್ದರೂ ಅದೊಂದು ತಿದ್ದಲಿಕ್ಕೆ ಬಾರದಂಥ ವಸ್ತುವೆಂದೂ ಕೇವಲ ಅಂಥ ಮನಸ್ಸನ್ನು ಅಧೀನದಲ್ಲಿಟ್ಟುಕೊಳ್ಳಬೇಕಾದರೆ, ಅದಕ್ಕೆ ತಕ್ಕ ಸಾಮರ್ಥ್ಯವುಳ್ಳ ವಿಭೂತಿಗಳೇ ಬೇಕೆಂದೂ ತಿಳಿಯುತ್ತೇವೆ. ಇತ್ತಿತ್ತಲಾಗಿ ವಿಚಾರನಿಯಮನ (*Thought control*) ಮತ್ತೆ ಅದರ ಉಪಯೋಗ ಇವುಗಳಿಂದ ಬದ್ಧಮೂಲವಾದ ನಮ್ಮ ನಡತೆಯನ್ನು ಸುಧಾರಿಸಲಿಕ್ಕೆ ಬರುತ್ತದಿಷ್ಟೇ ಅಲ್ಲದೆ ನಮ್ಮ ಹೊರಗಿನ ಪರಿಸ್ಥಿತಿಯನ್ನು ಸಹ ಬದಲಿಸಲಿಕ್ಕೆ ಅಥವಾ ತನ್ನ ಮೇಲೆ ಆದ ಅದರ ಪರಿಣಾಮವನ್ನು ಬದಲಿಸಿ ಆರೋಗ್ಯ ಸುಖ ಮತ್ತು ಜಯ ಇವುಗಳನ್ನು ಹೊಂದಲಿಕ್ಕೆ ಬರುತ್ತದೆಂಬದನ್ನೂ ಕಂಡು ಹಿಡಿದು ಅದರ ಅಭ್ಯಾಸವನ್ನು ಅನೇಕರು ಮಾಡುತ್ತಿರುವರು. ವಿಚಾರ ನಿಯಮನದ ಮಾರ್ಗಗಳು ಅಸಂಖ್ಯವಿದ್ದು ಅದರ ಪರಿಣಾಮಗಳು ಶಾಶ್ವತವಿರುತ್ತವೆ. ಆದಾಗ್ಯೂ ಅನೇಕ ಜನರು ತಮ್ಮ ವಿಚಾರಗಳನ್ನು ತಮಗೆ ಕಲ್ಯಾಣವಾಗುವ ಯೋಗ್ಯ ಮಾರ್ಗದಲ್ಲಿ ಹರಿಬಿಡದೆ ಸಿಕ್ಕತ್ತ ಹೋಗಗೊಟ್ಟು ದುಃಖಕ್ಕೆ ಕಾರಣರಾಗುತ್ತಾರೆ.

ನಮಗೂ ನಮ್ಮ ಸುತ್ತಮುತ್ತಲಿರುವವರಿಗೂ. ಆತ್ಮೋನ್ನತಿಯನ್ನು ಮಾಡುವ ನಮ್ಮ ವಿಚಾರ ನಿಯಮನ ಅಥವಾ ಆತ್ಮಸಂಯಮನ ಇವುಗಳಿಗಿಂತ ಹೆಚ್ಚು ಮಹತ್ವವುಳ್ಳ ವಿಷಯವಾಗಲಿ, ಕರ್ತವ್ಯವಾಗಲಿ, ಬೇರೊಂದು ಇರುವದಿಲ್ಲ. ಯಾಕಂದರೆ ವಿಚಾರ ಇದೊಂದು ಕಾಣುವ ಪದಾರ್ಥವಿರುವದಿಲ್ಲ. ಮತ್ತು ನಮ್ಮಲ್ಲಿಯ ಎಷ್ಟೋ ಜನರು ತಮ್ಮ ವಿಚಾರಗಳ ಮೇಲೆ ಅಧಿಕಾರವುಳ್ಳವರು ಇರುವದಿಲ್ಲ. ಮನಸ್ಸನ್ನು ಬೇರೆ ಕಡೆಗೆ ಎಳೆದು ಹಚ್ಚುವದೊಂದು ಬಹು ಕಠಿಣವಾದ ಮತ್ತು ಗಡಚಾದ ಕೆಲಸವೆಂದು ಎಷ್ಟೋ ಜನರ ತಿಳುವಳಿಕೆಯಾಗಿರುತ್ತದೆ. ಮತ್ತು ಹಾಗೆ ಮಾಡಬೇಕಾದರೆ ಬಹಳ ಅಭ್ಯಾಸಮಾಡಬೇಕೆಂದೂ, ವಿಪುಲಜ್ಞಾನ ಸಂಪಾದನ ಮಾಡಬೇಕೆಂದೂ, ತಿಳುವಳಿಕೆಯಿದೆ. ಸತ್ಯಕ್ಕಿಂತ ಸಮೀಪದ ವಸ್ತುವು ಮತ್ತೊಂದಿಲ್ಲ. ಪ್ರತಿಯೊಬ್ಬ ಮನುಷ್ಯನಲ್ಲಿ ಆತನು ಎಷ್ಟೋ ಅಜ್ಞಾನಿಯಿರಲಿ, ಎಷ್ಟೇ ಹುಂಬನಿರಲಿ ಮತ್ತು ಎಷ್ಟೋ ಕೆಲಸವುಳ್ಳವನಿರಲಿ, ಆತನಿಗೆ ಬೇಕಾದದ್ದೆಲ್ಲ ಅವನಲ್ಲಿ ಇದ್ದೇ ಇರುತ್ತದೆ. ಇಷ್ಟೇ ಅಲ್ಲ, ಅವನ ಸ್ವಭಾವವನ್ನು ಅವನ ನಡತೆಯನ್ನು ಅವನ ಶರೀರವನ್ನು ಕೆಂಬುಹನಾ ಅವನ ಜೀವನವನ್ನು ಬದಲಿಸುವ ಗುಪ್ತಶಕ್ತಿ ಸಹ ಇರುತ್ತದೆ. ಪ್ರತಿ

ಯೊಬ್ಬ ಪ್ರಾಣಿಗೆ ಬೇರೆ ಬೇರೆ ಕೆಲಸಗಳು, ಬೇರೆ ಬೇರೆ ಸಾಧನಗಳು, ಬೇರೆ ಬೇರೆ ಗೊತ್ತುಗುರಿಗಳು ಇದ್ದರೂ ಅವುಗಳನ್ನು ಸಾಧಿಸುವ ರೀತಿಯು ಮಾತ್ರ ಬಹುತರವಾಗಿ ಒಂದೇ ಇದೆ. ಎಂದ ಮೇಲೆ ಒಬ್ಬನಿಗೆ ಅವನ ಮನದಿಚ್ಛೆಯನ್ನು ಸಾಧ್ಯಮಾಡಿಕೊಡುವ ಅದೇ ಶಕ್ತಿಯೇ ಇನ್ನೊಬ್ಬನಿಗೆ ಸಾಧ್ಯಮಾಡಿಕೊಡುವದಿಲ್ಲವೆಂದು ಹೇಗೆ ಹೇಳಬೇಕು?

ಒಬ್ಬ ಮೂರ್ತಿಕಾರನ ಕೈಯಲ್ಲಿಯ ಉಳಿಯು ತಲೆತಿರುಕನ ಕೈಯಲ್ಲಿ ಬಂದರೆ ಸುಂದರವಾದ ಮೂರ್ತಿಯ ಸೌಂದರ್ಯವನ್ನು ಕೆಡಿಸುವ ಸಾಧನವಾಗುವದು. ಅದೇ ಉಳಿಯು ಕಳ್ಳನ ಕೈಯ್ಯಲ್ಲಿ ಹೋದರೆ ಕನ್ನಗತ್ತಿಯಾಗುವದು. ಕೊಲೆಗಡಿಕರ ಕೈಯಲ್ಲಿ ಬಂದರೆ ಕೊಲೆ ಮಾಡುವ ಆಯುಧವಾಗುವದು. ನಮ್ಮ ಮನಶ್ಶಕ್ತಿಯು ಸಹ ಇದೇ ತರದ ಆಯುಧವಾಗಿರುವದರಿಂದ ಆ ಮೂಲಕ ನಮ್ಮ ಸ್ವಭಾವವನ್ನು ಸುಂದರವಾಗಿ ಮಾಡಿಕೊಳ್ಳದೆ ಅಂದಗೇಡಿಯಾಗಿ ಮಾಡಿ ಸುಖ ಸಮಾಧಾನಗಳನ್ನು ತರಲಿಕ್ಕೆ ಆಗುವದಿಲ್ಲವೇದರೆ ನಮ್ಮಂಥ ಮೂರ್ಖರು ನಾವೇ ಅಲ್ಲವೇ? ಮೂರ್ತಿಕಾರನು ಮೂರ್ತಿಯನ್ನು ಕಟೆಯುವಾಗ ತನ್ನ ದೃಷ್ಟಿಯನ್ನು ಸಿಕ್ಕತ್ತ ಇಟ್ಟು ಉಳಿಯ ಪೆಟ್ಟನ್ನು ಹಾಕುವದಿಲ್ಲ. ಯಾವಾಗಲೂ ತನ್ನ ದೃಷ್ಟಿಯನ್ನು ತನ್ನ ಕಲ್ಪನಾಮಯ ಮೂರ್ತಿಯ ಕಡೆಗಿಟ್ಟು ಅದರಂಥ ಮೂರ್ತಿಯನ್ನು ಮಾಡುವದರ ಕಡೆಗೇ ಲಕ್ಷವಿಟ್ಟು ಒಂದೊಂದೇ ಪೆಟ್ಟನ್ನು ಒಳ್ಳೇ ಜಾಗ್ರತೆಯಿಂದ ಹಾಕುತ್ತಾನೆ. ಅದರಂತೆಯೇ ಅದಕ್ಕಿಂತಲೂ ಹೆಚ್ಚು ಬೆಲೆಯುಳ್ಳ ಮತ್ತು ಮಹತ್ವವುಳ್ಳ ನಮ್ಮ ನಡತೆಯ ಸ್ವಭಾವದ ಅರ್ಥಾತ್ ನಮ್ಮ ಜೀವನದ ಮೂರ್ತಿಯನ್ನು ನಾವು ಕಟೆದು ಸಿದ್ಧಮಾಡುವ ಕೆಲಸದಲ್ಲಿ ಹೆಚ್ಚು ಎಚ್ಚರ ಪಡಬೇಕಾಗುವದು. ಆದ್ದರಿಂದ ಮೊದಲು ನಮಗೆ ಏನು ಬೇಕೆಂಬುದನ್ನು ತಿಳಕೊಳ್ಳಬೇಕು. ಬಳಿಕ ಅದು ಸಾಧ್ಯವೋ ಅಸಾಧ್ಯವೋ ಎಂಬುವದನ್ನು ಗೊತ್ತುಮಾಡಿಕೊಳ್ಳಬೇಕು. ಆ ಮೇಲೆ ಅದನ್ನು ಸಂಪಾದಿಸುವ ಕಡೆಗೆ ಕೂಡಲೇ ಕೆಲಸವನ್ನು ಆರಂಭಿಸಬೇಕು. ಎಷ್ಟೋ ಅಡ್ಡಿ ಅಡಚಣಿಗಳು ಬಂದರೂ ಎದೆಗುಂದದೆ ಮುಂದುವರಿಯಬೇಕು. ಅಂದರೆ ನಮ್ಮ ಧ್ಯೇಯವು ಸುಲಭಸಾಧ್ಯವಾಗುವದು.

ಆದರೆ ವಿಚಾರದ ಮತ್ತು ಆಯುಧದ ನಡುವೆ ಇರುವ ಅಂತರವೆಷ್ಟು? ಆಯುಧವನ್ನು ಕೆಳಗೆ ಇಟ್ಟರೆ ಅದು ನಿಷ್ಕ್ರಿಯವಾಗಿ ಅಲ್ಲಿಯೇ

ಸುಮ್ಮನೆ ಬಿದ್ದು ಬಿಡುವದು. ಆದರೆ ನಮ್ಮ ವಿಚಾರವು ಕ್ಷಣಕ್ಷಣಕ್ಕೆ ಯಾವದಾದರೊಂದು ಕೃತಿಯನ್ನು ನಮಗೆ ಹಿತವಾಗಲಿ ಅಹಿತವಾಗಲಿ ಮಾಡಿಯೇ ಬಿಡುವದು. ನಾವು ಸುಮ್ಮನೆ ಕೂಡ್ರಬೇಕೆಂದರೂ ಅದು ನಮ್ಮನ್ನು ಕೂಡ್ರಿಸ ಕೊಡುವದಿಲ್ಲ. ಮತ್ತು ನಮ್ಮ ಪ್ರತಿಯೊಂದು ವಿಚಾರವು ನಮ್ಮ ಜೀವನದ ಪ್ರತಿಮೆಯನ್ನು ಸಿದ್ಧಮಾಡುವದು. ಆದ್ದರಿಂದ ನಮ್ಮ ವಿಚಾರಗಳು ನಮಗೆ ಹಿತಕರವಾಗಿಯೂ ಅತ್ಯುತ್ತಮವಾಗಿಯೂ ಆಗುವ ಬಗ್ಗೆ ನಾವು ಈಗಿನಿಂದಲೇ ಗಟ್ಟಿಯಾಗಿ ಸಂಕಲ್ಪ ಮಾಡಬೇಕು. ಅವುಗಳನ್ನು ಮತ್ತಿಷ್ಟು ದೃಢವಾಗುವಂತೆ ನಮ್ಮ ಮನಸ್ಸನ್ನು ವಿಶೇಷವಾಗಿ ಬಲಗೊಳಿಸಬೇಕು.

ನಾವು ಎಷ್ಟೋ ಮನಃಪೂರ್ವಕವಾಗಿ ಈ ಮಹತ್ವದ ಕೆಲಸದ ಕಡೆಗೆ ಪ್ರಯತ್ನಮಾಡಿದರೂ ಒಮ್ಮೊಮ್ಮೆ ನಮಗೆ ಗಂಟು ಬಿದ್ದ ಸ್ವಭಾವವು ಮತ್ತು ಒಂದು ಬಗೆಯ ವಿಚಾರದ ಪದ್ಧತಿಯು ವಯಸ್ಸಾದ ಮೇಲೆ ತಿದ್ದಬೇಕೆಂದರೆ ಬಹಳ ಕಠಿಣವಾಗುತ್ತದೆ. ಆದ್ದರಿಂದ ಈ ಮಹತ್ವದ ವಿಷಯದ ಕಡೆಗೆ ಅಂದರೆ ಆತ್ಮಸಂಯಮನ ಅಥವಾ ವಿಚಾರ ನಿಯಮನ ಮಾಡುವದರ ಕಡೆಗೆ ಈಗಿನ ಹೊಸ ಜನತೆಯನ್ನು ಸಿದ್ಧಪಡಿಸುವದು ಅತಿ ಅವಶ್ಯವಾಗಿದೆ. ಈಗಿನ ತಂದೆ ತಾಯಿಗಳು ತಮ್ಮ ಹುರುಪು ಉತ್ಸಾಹಗಳನ್ನು ತಮ್ಮ ಸಂರಕ್ಷಣೆಯಲ್ಲಿರುವ ಎಳೇ ಮಕ್ಕಳಿಗೆ ಆತ್ಮಸಂಯಮನ, ವಿಚಾರ ನಿಯಮನ ಮಾಡೋಣ ಇವುಗಳನ್ನು ಕಲಿಸುವ ಬಗ್ಗೆ ಹೆಚ್ಚು ಉಪಯೋಗಿಸಿದರೆ ಈಗಿನ ಮನ್ವಂತರದಲ್ಲಿ ಬಹು ಸ್ಥಿತ್ಯಂತರವಾಗುವದು. ಕೇವಲ ಹೊರಗಿನ ಬೆದರಿಕೆಯಿಂದ ತಮ್ಮ ಮಕ್ಕಳನ್ನು ಆಧೀನವಲ್ಲಿಟ್ಟುಕೊಳ್ಳಲಿಕ್ಕೆ ಪ್ರಯತ್ನಮಾಡದೆ ಅವರಿಗೆ ಒಳ್ಳೆಯ ವಿಚಾರಗಳನ್ನು ತೋರಿಸಿ ಕೆಟ್ಟವುಗಳನ್ನು ಹೊರಗೆಹಾಕಿಸಿ ಸನ್ಮಾರ್ಗಕ್ಕೆ ಹಚ್ಚಿದರೆ ಅವರೆಲ್ಲರೂ ದೇಶಕ್ಕೆ ಭೂಷಣರಾಗುವರು. ಇಂಥ ರೀತಿಯಿಂದ ಬೆಳಸಿದ ಮಕ್ಕಳಿಗೆ ಹೊರಗಿನ ಅಧಿಕಾರಯುಕ್ತ ಬೆದರಿಕೆಯು ಬೇಕಾಗುವದಿಲ್ಲ. ಅವರು ಯಾವಾಗಲೂ ಶುದ್ಧ ಮನಸ್ಸಿನವರೂ ಸತ್ಯವಂತರೂ ಕೆಟ್ಟದ್ದನ್ನು ಬೈಲಿಗಿಡಲಿಕ್ಕೆ ಹೆದರದವರೂ ಆಗುವರು. ಮಾನಸಿಕ ಸ್ವಾಧೀನತೆಯೇ ಆತ್ಮಸಂಯಮನವು. ಇದನ್ನು ಚಿಕ್ಕಂದಿನಲ್ಲಿಯೇ ಯಾರು ಕಲಿಯುವರೋ ಅವರು ದುಃಖದಿಂದ ಪಾರಾಗುವರು. ಮತ್ತು ಯಾರು ಅದನ್ನು ಸಾಧನ ಮಾಡಿಲ್ಲವೋ ಅಂಥವರು ಕಟುತರವಾದ ದುಃಖಸಾಗ

ರವಲ್ಲಿ ತೇಲುತ್ತ ಮುಳಗುತ್ತ ಪೇಚಾಡುವರು. ಆದ್ದರಿಂದ ನಮಗೆ ನಮ್ಮ ಸಂರಕ್ಷಣೆಯಲ್ಲಿರುವ ಎಳೇ ಮಕ್ಕಳಿಗೆ ಆತ್ಮಸಂಯಮನ ವಿಚಾರ ನಿಯಮನಗಳಿಂದ ಎಂಥ ಸುಖವು ಪ್ರಾಪ್ತವಾಗುವದೆಂಬದನ್ನು ತಿಳಿದು ಅತ್ತ ಕಡೆಗೆ ಲಕ್ಷಕೊಡತಕ್ಕದ್ದು.

ಈ ಪ್ರಕಾರ ಭಾವನಾ ಕ್ಷೇತ್ರದಲ್ಲಿದ್ದ ನಮ್ಮ ಮನಸ್ಸು ಕಾರ್ಯಕ್ಷೇತ್ರದಲ್ಲಿ ಪ್ರವೃತ್ತವಾಗಲು ನಮ್ಮ ಜೀವನೆಗೂ ಕರ್ತವ್ಯಕ್ಕೆ ತಕ್ಕಂತೆ ನಾವು ದೊಡ್ಡವರು ಅಥವಾ ಸಣ್ಣವರು ಆಗುವೆವೆಂಬ ಮಾತು ನಿರ್ವಿವಾದವಾಗಿ ಸಿದ್ಧವಾಗಿದೆ. ಆದುದರಿಂದಲೇ ತಲೆಕಟ್ಟಿನ ಕೆಳಗೆ ಬರೆದಂತೆ ನಮ್ಮ ಬಂಧ ಮೋಕ್ಷಗಳಿಗೆ ನಮ್ಮ ಮನಸ್ಸೇ ಕಾರಣವೆಂದು ಶರಣರು ಜಗತ್ತಿಗೆಲ್ಲ ಘಂಟಾಘೋಷವಾಗಿ ಸಾರಿದ್ದಾರೆ. ಆಧುನಿಕ ಶಿಕ್ಷಣಕ್ರಮದಲ್ಲಿ ಮಾನಸ ಶಿಕ್ಷಣಕ್ಕೆ ಮಾರ್ಗವಿಲ್ಲವೆಂದು ತಿಳಿದು ಮ. ಗಾಂಧಿಯವರೂ ಕವೀಂದ್ರ ರವೀಂದ್ರರೂ ಬೇರೆ ಬೇರೆ ಆಶ್ರಮಗಳನ್ನು ಸ್ಥಾಪಿಸಿ ಮನಸ್ಸಿನ ಶಿಕ್ಷಣವನ್ನೇ ಕೊಡುವದಕ್ಕಾಗಿ ತಮ್ಮ ಅಮೌಲ್ಯ ಆಯುಷ್ಯವನ್ನು ವೆಚ್ಚಮಾಡುತ್ತಿರುವರು ಆದಿ ಭೌತಿಕ ಶಾಸ್ತ್ರಶೋಧದಲ್ಲಿ ತೊಡಗಿದ ಎಷ್ಟೋ ಪಾಶ್ಚಾತ್ಯ ತಜ್ಞರು ಮನಸ್ಸಿನ ಮಹಿತಿಯನ್ನು ತಿಳಿದು ಬಹಿರ್ಮುಖವಾದ ತಮ್ಮ ದೃಷ್ಟಿಯನ್ನು ಅಂತರ್ಮುಖವಾಗಿ ಮಾಡಲು ಆಯಾಸಪಡುತ್ತಲಿರುವರು.

ನಮ್ಮ ಭರತಖಂಡದಲ್ಲಿ ಮೊದಲು ಧ್ರುವ, ಪ್ರಹ್ಲಾದ, ಮಾರ್ಕಂಡೇಯ ಮೊದಲಾದ ಬಾಲಕರು ಸಹ ಬಾಲ್ಯದಲ್ಲಿಯೇ ಮನೋಬಲದಿಂದಲೇ ಮಹೇಶನನ್ನು ಸಾಕ್ಷಾತ್ ಮಾಡಿಕೊಂಡು ಸ್ಥಿರವಾದ ಮುಕ್ತಿಪದವನ್ನು ಗಳಿಸಿಕೊಂಡರು. ಆದರೆ ಆಧುನಿಕ ಕಾಲದಲ್ಲಿ ಅಂತಹ ಮನಶ್ಶಕ್ತಿಯು ಲುಪ್ತಪ್ರಾಯವಾಗುತ್ತಲಿದೆ. ಕಾರಣ ದೇಶಹಿತೇಚ್ಛುಗಳೂ ಆತ್ಮೋದ್ಧಾರಕರೂ ಆದ ಧೀರರು ಮಾನಸಿಕ ಶಿಕ್ಷಣದ ಕಡೆಗೆ ಪ್ರವೃತ್ತರಾಗಿ ಕ್ಷಣ ಕ್ಷಣಕ್ಕೂ ರಸಾತಳಕ್ಕಿಳಿಯುತ್ತಿರುವ ನಮ್ಮ ಭಾರತ ವರ್ಷವನ್ನು ಕಿಂಬಹುನಾ ಭೂಖಂಡವನ್ನು ನಿಜವಾದ ಮಾರ್ಗಕ್ಕೆ ಹಚ್ಚಬೇಕೆಂದು ಹೇಳಿ ನಮ್ಮ ಕಟ್ಟಕಡೆಯ ಪ್ರಾರ್ಥನೆಯನ್ನು ಪೂರೈಸುವೆವು.

# ಬಸವೇಶ್ವರನೂ ಆತನ ನಡತೆಯೂ.

(ಲೇಖಕ:— ರುದ್ರಯ್ಯ ಮಹಂತಿನಮಠ ಕಂಪಲಿ
ಶಂಕರ ಕಾಲೇಜು ಯಾದಗಿರಿ.)



ಜಗತ್ತಿನ ಮೇಲಿರತಕ್ಕ ಪ್ರತಿಯೊಂದು ಧರ್ಮವು ನೀತಿಸದಾಚಾರಗಳಿಂದ ಕೂಡಿರುವದು ಸ್ವಾಭಾವಿಕವಷ್ಟೆ. ಯಾವ ಧರ್ಮಸ್ಥಾಪಕನಾಗಲಿ, ಧರ್ಮೋದ್ಧಾರಕನಾಗಲಿ, ಧರ್ಮಬೋಧಕನಾಗಲಿ, ತಾನು ಮೊದಲು ನೀತಿವಂತನಾದರೆ ಸದಾಚಾರಿಯಾದರೆ ಧರ್ಮ ಸ್ಥಾಪಿಸುವದಕ್ಕೆ ಅಥವಾ ಉದ್ಧರಿಸುವದಕ್ಕೆ ಸಮರ್ಥನಾಗುತ್ತಾನೆ. ಜಗತ್ತಿನಲ್ಲಿ ಪ್ರಸಿದ್ಧಿಯನ್ನು ಹೊಂದಿದ ಧರ್ಮಗಳಾದ ಹಿಂದು, ಕ್ರಿಶ್ಚಿಯನ್, ಮಹಮ್ಮದೀ ಇತ್ಯಾದಿ ಧರ್ಮ ಸ್ಥಾಪಕರು ಆಚಾರವನ್ನೂ ನೀತಿಯನ್ನೂ ಬಿಟ್ಟಿಲ್ಲನೆಂಬುದು ಅವರ ಚರಿತ್ರೆ ಧರ್ಮಗ್ರಂಥಗಳ ಮೇಲಿಂದ ತಿಳಿದು ಬರುತ್ತದೆ. ಅದರಂತೆ ಹಿಂದೂಧರ್ಮದ ಒಂದು ಭಾಗವಾದ ಮತ್ತು ಭರತಖಂಡದಲ್ಲಿ ಒಮ್ಮೆ ಬಹು ವ್ಯಾಪಕತ್ವವನ್ನು ಹೊಂದಿದ ವೀರಶೈವ ಧರ್ಮವು ೮-೯ ನೂರು ವರ್ಷಗಳ ಪೂರ್ವದಲ್ಲಿ ಜೈನ ಚಾರ್ವಾಕಾದಿ ಮತಗಳ ಆಘಾತಗಳಿಂದ ಕ್ಷೀಣ ಸ್ಥಿತಿಯನ್ನು ಹೊಂದಿದಾಗ ಬಸವೇಶ್ವರನು ಉದಯಿಸಿ, ಧರ್ಮೋದ್ಧಾರ ಕಾರ್ಯವನ್ನು ಸಾಂಗಗೊಳಿಸಿದನು. ಆ ಮಹಾತ್ಮನು ಸದಾಚಾರಿಯೂ ನೀತಿವಂತನೂ ಇದ್ದನೆಂಬುವದನ್ನು ವಿಶದಪಡಿಸುವದೇ ನನ್ನ ಲೇಖದ ಮುಖ್ಯೋದ್ದೇಶವು. ಆ ಮಹಾನ್ನುಭಾವನು ಇದೇ ಪುಣ್ಯ ಭೂಮಿಯಾದ ಕರ್ನಾಟಕದಲ್ಲಿ ಹುಟ್ಟಿ ಇಲ್ಲಿಯ ರಾಜನಾದ ಬಿಜ್ಜಳನ ಪ್ರಧಾನಿಯಾಗಿ ರಾಜ್ಯಕಾರಭಾರವನ್ನು ನಡೆಯಿಸುತ್ತಲಿದ್ದರೂ ತನ್ನ ಧರ್ಮೋದ್ಧಾರ ಕೆಲಸದಲ್ಲಿ ರತಿಮಾತ್ರವೂ, ಆಲಸ್ಯನಾಗುತ್ತಿದ್ದಿಲ್ಲ. ವೀರಶೈವರಲ್ಲಿ ಬಸವೇಶ್ವರನ ಹೊರತು ರಾಜಕೀಯ ರಂಗಭೂಮಿಯಲ್ಲಿ ಇವನಷ್ಟು ಪ್ರಸಿದ್ಧ ಪುರುಷನು ಯಾರೂ ಅವಂತೆ ಕಾಣಿಸುವದಿಲ್ಲ. ಈತನು ಕೇವಲ ಧರ್ಮಾಚರಣೆಯನ್ನು ಒಂದೇ ಮುಂದೆ ತರದೆ ರಾಜಕೀಯ ವಿಚಾರಗಳಲ್ಲಿ ತನ್ನ ಅಂಗವನ್ನು ಸೇರಿಸಿ ಸಮಾಜವನ್ನು ಧಾರ್ಮಿಕ ರಾಜಕೀಯ ಭಾವನೆಗಳಿಂದ ತುಂಬಿ ತುಳುಕುವಂತೆ ಮಾಡಿದನು. ಇದರಿಂದ ನಮ್ಮ ಪೂರ್ವಜರಲ್ಲಿ ಶ್ರೇಷ್ಠ ಮತ್ತು

ಉದಾತ್ತ ವಿಚಾರಗಳು ಹ್ಯಾಗೆ ಪ್ರತಿಬಿಂಬಿಸಿದವೆಂಬುದನ್ನು ಸ್ವಲ್ಪ ವಿಚಾರಿಸುವಾ.

ಆಗಿನ ಕಾಲಕ್ಕೆ ಜನರು ಸಮಾಜದ ಪರಸ್ಪರ ಐಕಮತ್ಯಕ್ಕೆ ಎಷ್ಟು ಲಕ್ಷ್ಯಕೊಡುತ್ತಿದ್ದರೆಂಬುದು ಅಸಂಖ್ಯ ವಚನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಅವರು ಜಾತಿಭೇದಗಳನ್ನು ಎಣಿಸುತ್ತಿದ್ದಿಲ್ಲ. ಶಿವಭಕ್ತಿಯುಳ್ಳವನು ಯಾವ ಜಾತಿಯವನಾಗಲಿ, ಅವನು ನಮ್ಮವನೆಂದು ತಿಳಿದು ಅವನ ಕೂಡ ಸಹಕಾರಿತೆಯಿಂದ ನಡೆಯುತ್ತಿದ್ದರು.

ಹೀಗೆ ವರ್ತಿಸುತ್ತಿದ್ದರೂ ಶಿವಭಕ್ತರು ಬೇಕಾದವರು ಅವರು ಎಂಥ ಅನಾಚಾರಿಗಳಾಗಿದ್ದರೂ ಅವರಿಗೆ ದೀಕ್ಷೆಯು ಪ್ರಾಪ್ತವಾಗುವದೆಂದು ಬಸವೇಶ್ವರನು ಎಂದೂ ಹೇಳುತ್ತಿದ್ದಿಲ್ಲ. ಲಿಂಗಧಾರಣೆಯು ದುರಾಚಾರಿಗಳಿಗೆ ಆಗದೆಂತಲೇ ಅವನು ಅಭಿಪ್ರಾಯಪಡುತ್ತಿದ್ದನು. ಅವರಲ್ಲಿ ನಿಜವಾದ ಶಿವಭಕ್ತಿಯಿರಬೇಕೆಂತಲೇ ಅವನು ಸೂಚಿಸಿರುತ್ತಾನೆ. ಈ ಬಗ್ಗೆ ಅವನು ಎಂಥ ಮನೋಹರವಾದ ಉದಾಹರಣೆಗಳನ್ನು ಕೊಟ್ಟು ಹೇಳಿರುವನೆಂಬುದನ್ನು ಕೆಳಗಿನ ಉಕ್ತಿಗಳಿಂದ ತಿಳಿದುಬರುತ್ತದೆ.

'ಕಬ್ಬಿನದ ಕೋಡಗವ ಪರುಷ ಮುಟ್ಟಲು ಹೊನ್ನಾದರೇನು? ಮತ್ತೇನಾದರೇನು? ತನ್ನ ಮುನ್ನಿನ ರೂಪಬಿಡನಕ್ಕರ ಕೂಡಲಸಂಗಮದೇವಾ, ನಿಮ್ಮ ನಂಬಿಯೂ ನಂಬದ ಡಂಭಕರಿಗಯ್ಯಾ.'

'ಓಡೆತ್ತ ಬಲ್ಲದು ಅವಲಕ್ಕಿಯ ಸವಿಯ? ಕೋಡಗವೆತ್ತಬಲ್ಲದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಗಿದ್ದರೇನು? ಕೋಗಿಲೆಯಾಗಬಲ್ಲುದೆ ಹೇಳಾ? ಕೊಳನ ತಡೆಯೊಳಿರ್ದು ಬಕ ಕುಳಿತಿದ್ದರೇನು? ಕಲಹಂಸನಾಗಬಲ್ಲುದೆ, ಕೂಡಲಸಂಗಮದೇವಾ?'

ಅಂದರೆ ಕಬ್ಬಿನದ ಕಪಿಗೆ ಬಂಗಾರವಾಗುವ ಮಣಿಯನ್ನು ಮುಟ್ಟಿಸಿದರೆ ಅದು ಬಂಗಾರವಾಗಬಹುದಲ್ಲದೆ ತನ್ನ ಮೊದಲಿನ ಕಪಿಯರೂಪವನು ಬಿಟ್ಟೀತೆ? ಅದರಂತೆ ಯಾವ ಭವಿಗಾದರೂ, ಗುರುವು ಲಿಂಗವೆಂಬ ಮಣಿಯನ್ನು ಮುಟ್ಟಿಸಿದ್ದಾದರೆ, ಆ ಭವಿಯು ತೋರಿಕೆಯ ಭಕ್ತನಾಗಬಹುದಲ್ಲದೆ, ನಿಜವಾದ ಶಿವಭಕ್ತನು ಆಗುವದಿಲ್ಲವೆಂಬುವದೇ ಇವರ ಅಭಿಪ್ರಾಯವು. ಇದನ್ನೇ ಎರಡನೇ ವಚನದಲ್ಲಿ ಉಪಮಾನಗಳಿಂದ ಸ್ಪಷ್ಟೀಕರಿಸಿರುತ್ತಾನೆ.

ಇನ್ನು ವೀರಶೈವನಾದವನು ತನ್ನ ನಾಮಕ್ಕೆ ಸರಿಯಾಗಿ ಇಷ್ಟ ಲಿಂಗವೊಂದನ್ನು ಬಿಟ್ಟು ಅನ್ಯ ದೇವರಿಗೆ ಪೂಜೆ ಮಾಡುವದು ಪಾಪ ಕರವೆಂದು ನೂರಾರು ವಚನಗಳಿಂದ ವಿಶದೀಕರಿಸಿರುತ್ತಾನೆ. ಅವನ್ನು ವಿವರಿಸಹತ್ತಿದರೆ, ಒಂದು ಪುಸ್ತಕವೇ ಆಗಬಹುದು ಆದಕಾರಣ ಅವನ್ನು ವಿವರಿಸುವ ಸಾಹಸಕ್ಕೆ ಕೈಹಾಕಿರುವದಿಲ್ಲ.

ವೇದಾಗಮೋಪನಿಷತ್ಸಾರ ಭೂತಗಳಾದ ಈ ವಚನಗಳ ಮೂಲಕ ತಿಳಿಗನ್ನಡ ರೂಪವಾಗಿ ಚಿಕ್ಕಬಾಲಕರಿಗೂ ಕೂಡ ನಮ್ಮ ಧರ್ಮದ ತತ್ವ ಗಳನ್ನು ತಿಳಿಸಿದವನೆಂದರೆ, ಶ್ರೀ ಬಸವೇಶ್ವರನೆ ಸರಿ. ಇವನ ವಚನ ಗಳು ಕನ್ನಡ ಸಾಹಿತ್ಯಕ್ಕೆ ಒಳ್ಳೇ ಬೆಳಕನ್ನು ತಂದಿರುತ್ತವೆ.

ಇಂಥ ಮಹಾತ್ಮನನ್ನು ದುರಾಚಾರಿ ಎಂತಲೂ, ಬಿಜ್ಜಳನ ದ್ರವ್ಯಾ ಪಹಾರಕ್ಕಾಗಿ ಈ ಪರಿ ನಟಿಸಿದನೆಂತಲೂ ಹೇಳುವವರು ಸಮಾಜದ್ರೋ ಹಿಗಳೆಂಬುದಕ್ಕೆ ಸಂಶಯವೇನು? ಯಾಕಂದರೆ ಇವನು ದುರಾಚಾ ರಿಯು ಒಂದು ಪಕ್ಷದಲ್ಲಿ ಆಗಿದ್ದರೆ ಆದರೆ, ಇವನ ಭಾವನೆಯಲ್ಲಿ:—

"ಸದಾಚಾರವೇ ಸ್ವರ್ಗ ದುರಾಚಾರವೇ ನರಕ"

"ದೇವಲೋಕ ಮರ್ತ್ಯಲೋಕವೆಂಬುವದು ಬೇರಿಲ್ಲ ಕಾಣಿರಣ್ಣಾ ಸತ್ಯವ ನುಡಿಯುವದೇ ದೇವಲೋಕ, ಮಿಥ್ಯವ ನುಡಿಯುವದೇ ಮರ್ತ್ಯ ಲೋಕ

ಇಂಥ ಉದಾತ್ತ ವಿಚಾರಗಳಿಂದ ಕೂಡಿದ ಮಹಾನುಭಾವನು ದುರ್ನ ಡತೆಗೆ ಮಾರ್ಗಕೊಟ್ಟಿದ್ದನೆಂಬುವದು ಅಸಂಗತವೇ ಸರಿ.

ಶ್ರೀ ಬಸವೇಶ್ವರನು ಪ್ರಾಣಿಗಳ ವಿಷಯಕ್ಕೆ ಎಷ್ಟು ದಯತೋರಿಸು ತ್ತಿದ್ದನೆಂಬುವದು ಮತ್ತು ಪರಧನದ ವಿಷಯವಾಗಿ ಎಷ್ಟು ಅಸಹ್ಯ ಪಡು ತ್ತಿದ್ದನೆಂಬುವದು ಅವನ ಅನುಭವೋದ್ಗಾರಗಳಿಂದಲೇ ತಿಳಿದು ಬರುತ್ತದೆ. ವೀರಶೈವ ಧರ್ಮವು ವಿಶ್ವಧರ್ಮಗಳಲ್ಲಿ ಗಣ್ಯವಾಗುವದಕ್ಕೆ ಈ ಮಹಾ ತ್ಮನ ಶ್ರೇಷ್ಠ ಉಕ್ತಿಗಳೇ ಮುಖ್ಯವಾಗಿರುತ್ತವೆ.

ಈ ಮಹಾನುಭಾವನು ಅನೇಕ ಮಹತ್ಕಾರ್ಯಗಳನ್ನು ಮಾಡಿದರೂ ಕೂಡ ನಾನುಮಾಡಿದೆನೆಂಬುವ ಅಹಂಕಾರವು ಅವನಲ್ಲಿ ಇದ್ದಿಲ್ಲ. ಅಹಂ ಕಾರಪಡುವವರನ್ನು ಅಧಮರನ್ನಾಗಿ ತಿಳಿಯುತ್ತ ಅವರ ಮುಖವನ್ನು

ಸಹ ನೋಡಲಾಗದೆಂಬ ಅಭಿಪ್ರಾಯವುಳ್ಳ ಈ ವಚನವನ್ನು ಅವನು ಹಾಡಿ ತೋರಿಸುತ್ತಾನೆ.

ಹತ್ತು ಮತ್ತರ ಭೂಮಿ ಬತ್ತ ವಹಯನ
ನಂದಾದೀವಿಗೆಯ ನಡಿಸಿಹನೆಂಬುವರ ಮುಖವನೋಡಲಾಗದು
ಅವರ ನುಡಿಯ ಕೇಳಲಾಗದು ಅಂಡಜ, ಸ್ವೇದಜ, ಉದ್ಭಿಜ,
ಜರಾಯುಜವೆಂಬ ಪ್ರಾಣಿಗಳಿಗೆ ಭವಿತವ್ಯವ
ಕೊಟ್ಟವರಾರೋ? ಒಡೆಯರಿಗೆ ಉಂಡಿಗೆಯ
ಮುರಿದಿಕ್ಕಿದಂತು ಎನ್ನಿಂದಲೇ ಆಯಿತ್ತು, ಎನ್ನಿಂದಲೇ
ಹೋಯಿತ್ತು, ಎಂಬುವನ ಬಾಯಲ್ಲಿ ಮೆಟ್ಟ ಹುಡಿಯ
ಹೊಯ್ಯದೇ ಮಾಣ್ಬನೇ ಕೂಡಲಸಂಗಮದೇವಾ?

ಅಂದರೆ:— ನಾನು ಬಹಳ ಭೂಮಿಯನ್ನು ಮಾಡಿದೆನು ಹಯನ ಕೊಟ್ಟಿರುತ್ತೇನೆ, ನಂದಾದೀವಿಗೆ ಹಿಡಿಸಿರುತ್ತೇನೆ, ಎಂಬುವರನ್ನು ಮಾತನಾಡಿಸಲಾಗದು ನೋಡಲಾಗದು. ಯಾಕಂದರೆ ಮನುಷ್ಯಪ್ರಾಣಿಯು ಮಾತ್ರ ಅನೇಕ ಕಾರ್ಯಗಳನ್ನು ನಾನು ಮಾಡಿದೆನೆಂಬ ಅಹಂಕಾರವನ್ನು ತಾಳುತ್ತದೆ. ಆದರೆ ಇದರ ಹೊರತು ಸೃಷ್ಟಿಯಲ್ಲಿದ್ದ ಚರಾಚರಾತ್ಮಕವಾದ ಪ್ರಾಣಿಯು ಮಾಡುವ ಅನೇಕ ಕಾರ್ಯಗಳನ್ನು ಅವುಗಳಿಗೆ ಮುಂದಾಗತಕ್ಕದ್ದನ್ನು ಕಲ್ಪಿಸಿದವರಾರು? ದೇವರಲ್ಲವೆ? ಅಂದಮೇಲೆ ಆದೇ ಪರಶಿವನೇ ನನ್ನಿಂದ ಮಾಡಿಸುತ್ತಾನಲ್ಲದೇ ಇದರಲ್ಲಿ ನನ್ನಂಗವೇನೂ ಇಲ್ಲವೆಂದು ಭಾವಿಸುವ ಈ ತೆರವಾದ ಉದಾತ್ತ ವಿಚಾರಗಳಿಂದ ಕೂಡಿದ ಶ್ರೀ ಬಸವೇಶ್ವರನು ಧರ್ಮಕಟ್ಟಳೆಗಳನ್ನು ವಿಚಾರಿಸದೇ ತನ್ನ ಮನಸಿಗೆ ಬಂದಂತೆ ಧರ್ಮಪ್ರಸಾರವನ್ನು ಮಾಡಿದನೆಂದು ಹೇಳುವ ಕೆಲ ಕುವಿಚಾರಿಗಳು ಸಮಾಜದಲ್ಲಿ ತಲೆದೋರಿರುವದು ನಮ್ಮ ದುರ್ದೈವವೋ, ಸಮಾಜದ ಅಧಃಪತನವೋ, ತಿಳಿಯದಾಗಿದೆ.

ಈ ಪ್ರಕಾರವಾದ ಉದಾತ್ತ ವಿಚಾರವುಳ್ಳ ಕರ್ನಾಟಕ ಸಾಹಿತ್ಯಾಲಂಕಾರ ಪ್ರಾಯಃಗಳಾದ ವೀರಶೈವ ಧರ್ಮದ ತಿರುಳಿನಿಂದ ಕೂಡಿದ ವಚನಗಳನ್ನು ಮೂಲಿಗುಂಪುಮಾಡಿ ನಾವು ದೊಡ್ಡವರೆಂದು ಜಗಳಾಡುವದು ಎಷ್ಟು ಲಜ್ಜಾಸ್ಪದ ಮಾತಾಗಿರುತ್ತದೆಂಬುವದನ್ನು ವಾಚಕರೇ ಊಹಿಸರಿ.

ಇಂಥ ವಚನಗಳನ್ನು ಬೈಲಿಗೆಳೆಯುವದರಲ್ಲಿ ಪ್ರಯಾಸಪಟ್ಟವರೆಂದರೆ ರಾ॥ ಸಾ॥ ಹಳಕಟ್ಟಿಯವರೇ ಪ್ರಥಮರೆಂದು ಹೇಳಬಹುದು. ಅವರ ಸತತೋದ್ಯೋಗದ ಪ್ರತಿಫಲರೂಪವಾದ ವಚನಸಾರದಿಂದಲೇ ನಮಗೆ ಈ ರೀತಿಯಾದ ಬಸವೇಶ್ವರನ ವಿಚಾರಗಳ ಕೆಲ ವಂಶವನ್ನಾದರೂ ತಿಳಿಯಲು ಸಾಧ್ಯವಾಯಿತು. ಇಲ್ಲದಿದ್ದರೆ ಅವನ ವಿಷಯವಾಗಿ ಪುರಾಣಗಳಲ್ಲಿ ವರ್ಣಿಸಿದ್ದನ್ನು ಮಾತ್ರ ತಿಳಿದು ಕೂಪಮಂಡೂಕದಂತೆ ಇರುವದು ಪ್ರಾಪ್ತವಾಗುತ್ತಿದ್ದು ಅದರಿಂದ ವೀರಶೈವ ಧರ್ಮದ ಆದರಲ್ಲಿಯೂ ಘಟಸ್ಥಲದ ವಿಷಯವಾಗಿ ವಿಚಾರ ಶೂನ್ಯರಾಗಿ ಉಳಿಯುತ್ತಿದ್ದೆವು. ಈ ತೊಡಕನ್ನು ಬಿಡಿಸಿ ಆ ವಿದ್ಯಾವಿಶಾರದರು ಧರ್ಮಕ್ಕೆ ದೊಡ್ಡ ಉಪಕಾರವನ್ನು ಮಾಡಿರುತ್ತಾರೆ. ಈಗಲಾದರೂ ಇನ್ನುಳಿದ ವಚನಕಾರರ ವಚನಗಳನ್ನು ಶೋಧಿಸುತ್ತ ತಮ್ಮ ಶಿವಾನುಭವವೆಂಬ ಮಾಸಿಕರೂಪವಾದ ದರ್ಪಣದಿಂದ ಜನರ ಮುಂದೆ ಇಟ್ಟು ವೀರಶೈವ ಧರ್ಮಗ್ರಂಥ ಪ್ರಸಾರದಲ್ಲಿ ಅಗ್ರೇಸರರಾಗಲು ಪ್ರಯತ್ನಿಸುತ್ತಲಿದ್ದಾರೆ. ಇದು ಸ್ತುತ್ಯ ಕಾರ್ಯವೇ ಸರಿ. ಇದರಂತೆ ನಮ್ಮ ಸಮಾಜದಲ್ಲಿದ್ದ ಆಂಗ್ಲ ಸಂಸ್ಕೃತ ವಿದ್ಯಾವಿಶಾರದರು ಶ್ರಮವಹಿಸಿ ಧರ್ಮಗ್ರಂಥಗಳನ್ನು ಪ್ರಸಾರಮಾಡಿದ್ದಾದರೆ, ಈ ಧರ್ಮವು ಭಾರತವೇಶದಲ್ಲಿ ಉನ್ನತಸ್ಥಿತಿಯನ್ನು ಹೊಂದುವದರಲ್ಲಿ ಸಂಶಯವಿಲ್ಲ. ಅಸ್ತು.

ಇನ್ನು ಕೆಲವು ಬಸವೇಶ್ವರನ ವಿಚಾರಗಳ ಕಡೆಗೆ ಲಕ್ಷಕೊಡುವಾ.

ಅವನು ನಾವು ಪ್ರತಿಯೊಂದು ಕೆಲಸಕ್ಕೂ ಅನ್ಯರನ್ನು ಅವಲಂಬಿಸಬಾರದೆಂಬ ಹೇತುವಿನಿಂದ ನಮ್ಮಲ್ಲಿ ಪ್ರತಿಯೊಂದು ಕರ್ಮದವರನೂ ಸೇರಿಸಿ ನಮ್ಮ ಧರ್ಮವನ್ನು ಒಂದು ಸ್ವತಂತ್ರ ರಾಷ್ಟ್ರದಂತೆ ಧೃಢೀಕರಿಸಿದನು. ಆದರೆ ಆ ಕಸಬುಗಳನ್ನೇ ಜಾತಿಗಳೆಂದು ಭಾವಿಸಿ ಉಚ್ಚ ನೀಚಭಾವಗಳನ್ನು ತಾಳುವದು ಅವಿವೇಕತನವೇ ಸರಿ. ಯಾಕಂದರೆ ಒಂದು ಮನೆಯಲ್ಲಿ ನಾಲ್ಕು ಮಂದಿ ಅಣ್ಣ ತಮ್ಮಂದಿರು ಇರುವರೆಂದು ಭಾವಿಸುವಾ. ಅವರಲ್ಲಿ ಒಬ್ಬನು ಇಂಗ್ಲೀಷ ಅಭ್ಯಾಸಮಾಡಿ ಕಲೆಕ್ಟರ ಮೊದಲಾದರಲ್ಲಿ ಸೇರಿದನು. ಇನ್ನೊಬ್ಬನು ಸಂಸ್ಕೃತ ವಿದ್ಯಾಪಾರಂಗತನಾಗಿ ಊರಲ್ಲಿದ್ದು ವೈದಿಕಾದಿ ಕರ್ಮಗಳನ್ನು ಮಾಡಿಸುವನು. ಬೇರೊಬ್ಬನು ನಿರಕ್ಷರಿಯಾಗಿ ಮನೆಯಲ್ಲಿಯೇ ಇದ್ದು ಒಕ್ಕಲತನಾದಿ ಕಾರ್ಯಗಳನ್ನು ಮಾಡುವನು. ಮತ್ತೊಬ್ಬನು ವ್ಯವಹಾರ ಕುಶಲನಾಗಿ ವ್ಯಾಪಾ

ರಿಯಾಗುವನು. ಇವರು ಮಾಡುವ ಕಾರ್ಯಗಳಿಂದ ಜಾತಿಗಳನ್ನು ಕಲ್ಪಿಸುತ್ತಾ ಹೋದರೆ ಹೇಗೆ ಅಸಂಗತವಾಗುವದೋ, ಅದರಂತೆ ಧರ್ಮದಲ್ಲಿ ಕಸಬುಗಳ ಮೇಲಿಂದ ಜಾತಿಗಳನ್ನು ಕಲ್ಪಿಸಿ ಉಚ್ಚ ನೀಚ ಭಾವವನ್ನು ತೋರಿಸುವದು ಅಸಂಗತವು.

ಆದಕಾರಣ ವೀರಶೈವರಲ್ಲಿ ಉಚ್ಚ ನೀಚ ಭಾವಗಳನ್ನೆಣಿಸದೆ, ಎಲ್ಲರು ಒಂದೇ ಎಂಬ ಭಾವನೆಯನ್ನು ತುಂಬುವ ಅಸಂಖ್ಯಾತ ವಚನಗಳನ್ನು ಬಸವೇಶ್ವರನು ಅಡಿ ತೋರಿಸಿರುತ್ತಾನೆ. ಮತ್ತು ಪರಸ್ಪರವಾಗಿ ಪ್ರೀತಿಯಿಂದಿರುವದಕ್ಕೋಸ್ಕರ ಐಕ್ಯವನ್ನು ಬೋಧಿಸುವ ವಚನಗಳೂ ಸಹ ಅವನ ವಚನಾಮೃತದಲ್ಲಿ ಅಡಕವಾಗಿರುತ್ತವೆ.

ಆ ಮಹಾನುಭಾವನು ಅತಿ ವಿನಯಶಾಲಿ ಇದ್ದನೆನ್ನುವದು ಈ ಕೆಳಗಿನ ವಚನದಿಂದ ಸ್ಪಷ್ಟವಾಗುತ್ತದೆ.

ಕಂಡಭಕ್ತಂಗೆ ಕೈಮುಗಿಯುವಾತನೇ ಭಕ್ತ. ಮೃದುವಚನಂಗಳೇ ಸಕಲ ಜಪಂಗಳಯ್ಯ ಸುದುವಿನಯವೇ ಸದಾಶಿವನ ಒಲುಮೆಯಯ್ಯಾ ಕೂಡಲ ಸಂಗಮದೇವನಂತಲ್ಲದೊಲ್ಲನಯ್ಯಾ.

ಅಹಾ! ಏನಿದು? ಈ ವಚನದಲ್ಲಿಯ ಮಾಧುರ್ಯವನ್ನು ಎಷ್ಟು ಸವಿದರೂ ಕಬ್ಬಿನ ತುದಿಯಿಂದ ಬುಡದ ತನಕ ರುಚಿಯು ಹ್ಯಾಗೆ ಹೆಚ್ಚುವದೋ ಅದರಂತೆ ಇದನ್ನು ನೋಡಿ ನೋಡಿದಹಾಗೆ ಆ ಬಸವೇಶ್ವರನಲ್ಲಿದ್ದ ಉತ್ಕಟ ಪ್ರೇಮವು ಚಂದ್ರನ ಕಂಡ ಸಮುದ್ರದಂತೆ ಉಕ್ಕೇರುತ್ತವೆ. ಈ ವಾಕ್ಯವನ್ನು ಎಂಥ ಕಠೋರ ಮನಸಿನವನಾದರೂ ಅವನ ಮನಸ್ಸು ಸೂರ್ಯನನ್ನು ಕಂಡ ಮಂಜುಗಡ್ಡೆಯಂತೆ ಕರಗಿ ನೀರಾಗುವದರಲ್ಲಿ ಏನೂ ಸಂಶಯವಿಲ್ಲ.

ಈ ಮಹಾಪುರುಷನನ್ನು ಕವಿಶ್ರೇಷ್ಠರಾದ ಷಡಕ್ಷರದೇವರು, ಪಾಲ್ಕುರಿಕೆ ಸೋಮನಾಥರು, ಹರಿಹರ, ರಾಘವಾಂಕ ಮೊದಲಾದವರು ತಮ್ಮ ವಿದ್ವತ್ ಶಕ್ತಿಯಿಂದ ಮನಸಾಸ್ತೋತ್ರಮಾಡಿರುವರು. ಇದು ಅವರ ಪಾಂಡಿತ್ಯಕ್ಕೂ ಕವಿತಾಪ್ರತಿಭೆಗೂ ಭೂಷಣಪ್ರಾಯವಾಗಿರುತ್ತದೆ. ಅಂಥ ಕವಿಜನ ಹೃದಯಾಲ್ಹಾದಕರನಾದ ದ್ವಿತೀಯ ಶಂಭುವಿನಪರಾವತಾರಿಯಾದ ಶ್ರೀ ಮಹಾತ್ಮ ಬಸವೇಶ್ವರನನ್ನು ನಿಂದಿಸುವಂಥವರಿಗೆ ಪರಶಿವನು ಯಾವ ನರಕವನ್ನು ಕಲ್ಪಿಸುವನೆಂಬುವದನ್ನು ಸೂಜ್ಞರಾದ ವಾಚಕರೇ ಊಹಿಸಲಿ.

# ಶಿವಾನುಭವ.

ವರ್ಷ ೫ ]　　　ನವಂಬರ ೧೯೩೦　　　[ಸಂಚಿಕೆ ೮

## ವೀರಶೈವ ವರ್ಣಾಶ್ರಮ ಪ್ರಕಾಶಿಕಾ.

ಲೇಖಕರು—ವೇ॥ ಪಂಚಾಕ್ಷರಶಾಸ್ತ್ರಿಗಳು ಹಿರೇಮಠ ಶಿರೋಳ.

---

ನಾವು ಕಳೆದವರ್ಷದ ಶಿವಾನುಭವದ ೧೧ ನೇ ಸಂಚಿಕೆಯಲ್ಲಿ ‘ವೀರಶೈವ ವರ್ಣಾಶ್ರಮವಿಚಾರವು’ ಯೆಂಬ ಲೇಖವನ್ನು ಕೊಟ್ಟಿದ್ದಕ್ಕೆ ಹುಬ್ಬಳ್ಳಿಯ ರಾ॥ ರಾ॥ ಪಾವಟೆ ಸಿದ್ಧರಾಮಪ್ಪನವರೂ ‘ಶಿವಸುತ’ಯೆಂಬವರೂ ಖಂಡನೆಯನ್ನು ಬರೆದಿದ್ದಾರೆ. ರಾ॥ ರಾ॥ ಪಾವಟೆಯವರು ತಮ್ಮ ಲೇಖವನ್ನು ಫಾಲ್ಗುಣಮಾಸದಿಂದ ಆರಂಭಿಸಿ ಭಾದ್ರಪದಮಾಸದ ಕೃಷ್ಣಪಕ್ಷಕ್ಕೆ ವಿರಮಿಸಿದಂತಾಗಿದೆ. ೭॥ ತಿಂಗಳದಿಂದ ಎಳದಾಟದಿಂದ ಸಾಗಿ ಬಂದಿರುವ ಲೇಖವನ್ನು ಶಿವಾನುಭವದ ವಾಚಕರು ಓದಿಯೋದಿ ; ಹಿಂದಿನ ನಮ್ಮ ಲೇಖವನ್ನೇ ಮರೆತು ಸಂದೇಹದ ಗೊಂದಲದಲ್ಲಿ ಬಿದ್ದಿರಬಹುದು ಅಸ್ತು.

ನಮ್ಮ ಮುಖ್ಯ ವಾದವು ವೀರಶೈವಮತದಲ್ಲಿ ಚತುರ್ವರ್ಣಾಶ್ರಮಗಳೂ ತದಂತರ್ಗತ ಜಾತಿಭೇದಗಳೂ ಸಶಾಸ್ತ್ರೀಯ ಸಿದ್ಧಾಂತವಾಗಿರುವವೆಂಬುವದು. ಆದರೆ ಕೆಲವು ಮಹಾಶಯರು ಕಲಿಕಾಲಪ್ರಭಾವದಿಂದ ‘ವರ್ಣಸಂಕರ’ ‘ಜಾತಿಸಂಕರ’ ದ ಕಾರ್ಯಗಳಿಗೆ ಕಂಕಣಕಟ್ಟಿಕೊಂಡಿದ್ದಾರೆ ಅದರಲ್ಲಿ ರಾ॥ ರಾ॥ ಪಾವಟೆಯವರು ಅಗ್ರಸ್ಥಾನವನ್ನು ವಹಿಸಿದಂತೆ ಕಾಣುತ್ತದೆ. ಅದು ಏನೇ ಇರಲಿ ಅವರ ಒಟ್ಟಾಭಿಪ್ರಾಯವೇನಂದರೆ—ವೀರಶೈವ ಮತದಲ್ಲಿ ವರ್ಣಭೇದ ಜಾತಿಭೇದಗಳಿಲ್ಲವೆಂಬುದೇ ಇರುತ್ತದೆ. ಹೀಗೆ ಪತ್ರಿಕೆಗಳಲ್ಲಿ ಪ್ರತಿಪಾದಿಸುವ ಪ್ರಭೃತಿಗಳು ತಮ್ಮ ಸ್ವಬಾಂಧವರಲ್ಲಿ ಕೃತಿಯ ಮೂಲಕ ತಂದು ಮಾರ್ಗದರ್ಶಕರಾಗಬೇಕು. ಶಕ್ತಿ ವಿಶಿಷ್ಟಾ

ದ್ವೈತ ಸಿದ್ಧಾಂತ ಪ್ರತಿಪಾದಿತ ನಮ್ಮ ವೀರಶೈವ ಮತದಲ್ಲಿ ಅನೇಕ ಜಾತಿಗಳಿವೆ. ಅವೆಲ್ಲವುಗಳು ಭಿನ್ನ ಭಿನ್ನ ವಿಶಿಷ್ಟ ಜಾತಿಗಳಾಗಿವೆ. ಇದರಂತೆ ಪರಮತ ಸಿದ್ಧಾಂತಗಳಾದ ದ್ವೈತ ದ್ವೈತಾದ್ವೈತ ಅದ್ವೈತ ವಿಶಿಷ್ಟಾದ್ವೈತಾದಿಗಳ 'ಮತಗಳಲ್ಲಿಯೂ ಕೂಡಾ ಅನೇಕಾನೇಕ ಜಾತಿಭೇದಗಳಿರುವದು ಸುಪ್ರಸಿದ್ಧವದೆ. ಈ ಜಾತಿಭೇದವಿವರಣೆಯು ಇಂದು ನಿನ್ನೆ ಮೊನ್ನೆ ನಾವು ಮಾಡಿದ್ದಲ್ಲ. ಅನಾದಿಕಾಲದಿಂದಲೂ ಬಂದು ಬೇರು ಬಿಟ್ಟಿರುವದು. ಮನುಷ್ಯಮಾತ್ರರು ಹಾಕಿದ ವೃಕ್ಷವನ್ನು ಬೇರು ಸಹ ಕಿತ್ತೊಗೆಯಲು ಸಾಧ್ಯವಿಲ್ಲದಾಗ ಪರಮಾತ್ಮನೇ ಆಗಲಿ, ಆವನ ಚಿಜ್ಯೋತಿಗಳಾದ ಮತಸ್ಥಾಪನಾಚಾರ್ಯರೇ ಆಗಲಿ, ಅದರಿಂದ ನಿರ್ಣಯಿಸಲ್ಪಟ್ಟ ವರ್ಣಾಶ್ರಮ ಧರ್ಮವನ್ನೂ ಜಾತಿತಾರತಮ್ಯವನ್ನೂ ಬೇರೂರಸಿ ಕಿತ್ತೊಗೆಯಲು ಸಾಧ್ಯವೇ ? ಆಂಗ್ಲಭಾಷಾ ಪಂಡಿತರಾದವರು ಪಶ್ಚಿಮ ದಿಕ್ಕಿನ ಗಾಳಿಯನ್ನು ಕೈಗಡ ಇಸಗೊಂಡು ನಮ್ಮ ಪೂರ್ವದ ಸನಾತನ ಧರ್ಮವೃಕ್ಷಕ್ಕೆ ಧಕ್ಕೆಯನ್ನು ತರುತ್ತಲಿರುವದು ಅತ್ಯಂತ ವಿಷಾದದ ಸಂಗತಿಯು. ಇವರ ಎಳದಾಟದ ಲೇಖವನ್ನವಲೋಕಿಸಿದರೆ ಎಲ್ಲೆಲ್ಲಿಯೂ ವರ್ಣಸಂಕರ ಶಬ್ದಗಳೇ! ವೇದಗಳ ಋಕ್ಕುಗಳಂತೂ ದಿಕ್ಕೆಟ್ಟುಹೋಗಿವೆ. ಮನುಸ್ಮೃತಿ ಪಾರಮೇಶ್ವರಾಗಮೋಕ್ತಿಗಳೂ ಇವರ ಹೇಳಿಕೆಯಂತೆ ವರ್ತಿಸಿವೆ. ಇವರ ರಗಳೆಯ ಲೇಖವನ್ನು ಸಂಪೂರ್ಣ ಬಿಚ್ಚು ಮೊಗ್ಗೆಯಿಂದ ಬರೆಯುತ್ತ ಹೋದರೆ ನಮ್ಮ ದಿವ್ಯಜ್ಯೋತಿ ಸ್ವರೂಪವಾದ ಶಿವಾನುಭವಕ್ಕೆ ಇನ್ನಿತರ ಪ್ರಜ್ವಲಿತ ಲೇಖಗಳಿಗೆ ಸ್ಥಳದೊರೆಯಲಿಕ್ಕಿಲ್ಲವೆಂಬ ಭೀತಿಯಿಂದ ನಾವು ಅವರ ಮುಖ್ಯವಾದ ಮೂಲಭ್ರಮೆಗಳನ್ನಷ್ಟು ಖಂಡಿಸಿ ವರ್ಣವ್ಯವಸ್ಥೆಯ ಹೆಚ್ಚುಗಾರಿಕೆಯನ್ನು ಸಪ್ರಮಾಣಗಳಿಂದ ವಾಚಕರಿದುರಿಗಿಡುತ್ತೇವೆ.

ಸಂಕರಮೂರ್ತಿಗಳ ಮೊದಲನೇ ಭ್ರಮೆಯು ಯಾವದೆಂದರೆ ನಾವು ಮೂಲಾಧಾರವಾಗಿಟ್ಟುಕೊಂಡ ವೇದದ ಪುರುಷಸೂಕ್ತದ ೧೩ ನೇ ಋಕ್ಕಾದ 'ಬ್ರಾಹ್ಮಣೋಸ್ಯ ಮುಖಮಾಸೀತ್' ಎಂಬದು ಇದು ಜಾತಿಕೃತ ವರ್ಣಭೇದವನ್ನು ಹೇಳದೆ ಗುಣಕೃತವಿಭಾಗವನ್ನು ಹೇಳುತ್ತದಂತೆ ಹೀಗೆ ನಮ್ಮ ವಕೀಲರನ್ನುವರು. ನಮ್ಮ "ಶಿವಸುತರಂತೂ" ಈ ಋಕ್ಕು ವೇದದೊಳಗಿನದಲ್ಲ ಇತ್ತೀಚೆಗೆ ಬ್ರಾಹ್ಮಣರಯುಗದಲ್ಲಿ ಸೇರಿರಬೇಕೆಂದು ಅನುಮಾನಪಟ್ಟಿರುವರು. ಈ ಋಕ್ಕು ಪುರುಷಸೂಕ್ತದೊಳಗಿಲ್ಲವೆಂದು ಸಿದ್ಧಾಂತಗೊಳಿಸಿದ್ದರೆ ಚನ್ನಾಗಿತ್ತು. ಪುರುಷಸೂಕ್ತವು ಸೃಷ್ಟಿಯವರ್ಣನೆಯಲ್ಲಿ ಬ್ರಾಹ್ಮಣಾದಿ ವರ್ಣಸೃಷ್ಟಿಯನ್ನು ಹೊಗಳಿರುವದು. ಅದನ್ನೇ ಮನುಸ್ಮೃ

ತಿಕಾರರು "ಲೋಕಾನಾಂ ತು ವಿವೃದ್ಧ್ಯರ್ಥಂ ಮುಖಬಾಹೂರುಪಾದತಃ । ಬ್ರಾಹ್ಮಣಂ ಕ್ಷತ್ರಿಯಂ ವೈಶ್ಯಂ ಶೂದ್ರಂ ಚ ನಿರವರ್ತಯತ್ ॥" ಯೆಂದು ಪ್ರಸಿದ್ಧಗೊಳಿಸಿದ್ದಾರೆ. ಬ್ರಾಹ್ಮಣಾದಿ ವರ್ಣಸೃಷ್ಟಿಯನ್ನು ಹೇಳಿರುವಾಗ ವಕೀಲರು ಇದು ಜಾತಿಯನ್ನು ಜನ್ಮದಿಂದ ನಿರ್ಣಯಿಸಬೇಕೆಂದು ಹೇಳಿಲ್ಲ ಗುಣದಿಂದ ಸಿದ್ಧಗೊಳಿಸಬೇಕೆಂದು ಹೇಳಿದೆ ಎಂದು ಬಡಬಡಿಸಿದ್ದಾರೆ. ಮನುಸ್ಮೃತಿಯು 'ಜಗದುತ್ಪತ್ತಿಕಥನಮ್' ಎಂದು ಪ್ರಾರಂಭಿಸಿ ಕ್ರಮವಾಗಿ ಜಲಸೃಷ್ಟಿ ಬ್ರಹ್ಮೋತ್ಪತ್ತಿ ಬ್ರಹ್ಮಸ್ವರೂಪ ಸ್ವರ್ಗಭೂಮ್ಯಾದಿ ಸೃಷ್ಟಿ ದೇವಗಣಾದಿಸೃಷ್ಟಿ ಮೊದಲಾದನೇಕ ಸೃಷ್ಟಿವಿವರಣೆಯೊಡನೆ ಕರ್ಮಗುಣಗಳೋತ್ಪತ್ತಿಯನ್ನೂ ಹೇಳಿರುವದು. ಆದರೆ ಬ್ರಾಹ್ಮಣಾದಿಜಾತಿ (ವರ್ಣ) ಯ ಉತ್ಪತ್ತಿಯನ್ನು ಹೇಳುವಾಗ ಗುಣೋತ್ಪತ್ತಿಯಿಂದ ಜಾತಿಯನ್ನು ನಿರ್ಣಯಿಸಬೇಕೆಂದು ಹೇಳುವದು ಭ್ರಮೆಯಲ್ಲದೆ ಮತ್ತೇನು? ಜಾತ್ಯಾದಿಗಳ ಸೃಷ್ಟಿವಿವರಣೆಯನ್ನು ಕ್ರಮವಾಗಿ ಸಾಗಿಸುತ್ತ ಹೋಗಿ ಗುಣಕಥನಮಾಡುತ್ತಿರುವ ಮತ್ತು ಬ್ರಾಹ್ಮಣ ಶ್ರೇಷ್ಠತ್ವವನ್ನು ಪ್ರತಿಪಾದಿಸುವ ೯೨ ರಿಂದ ೧೦೦ ಶ್ಲೋಕಗಳಿಗೆ ಹಾರಿಹೋಗಿರುವರು. ಮೊಟ್ಟಮೊದಲು ೩೧ ನೇ ಶ್ಲೋಕವು ಜನ್ಮದಿಂದ ಜಾತಿಯನ್ನು ಹೇಳುವದೋ? ಗುಣದಿಂದ ಹೇಳುವದೋ? ೩೧ ನೇ ಶ್ಲೋಕದಿಂದ ಕ್ರಮದಿಂದ ಸಾಗಿದ್ದರೆ ಚನ್ನಾಗಿತ್ತು. ಆಗಲಿ ಗುಣಕರ್ಮಗಳಿಂದಲೇ ಒಬ್ಬನ ಜಾತಿಯನ್ನು ನಿರ್ಣಯಿಸಬೇಕೆಂದು ವಕೀಲರು ಬಹು ಕಷ್ಟಪಟ್ಟಿದ್ದಾರೆ. ಆದರೆ ಇವರಿಗೆ ಪ್ರತಿಫಲವು ದೊರೆಯಲಾರದು. ಮನುಷ್ಯನ ಗುಣಕರ್ಮಗಳು ಸದಾ ಕಾಲದಲ್ಲಿಯೂ ಒಂದೇರೀತಿಯಾಗಿರುವದಿಲ್ಲ. ಬಾಲ್ಯದಲ್ಲಿ ಸಂಸರ್ಗದಿಂದಾಗಲಿ ಬೇರಾವ ಕಾರಣದಿಂದಾಗಲಿ ಒಂದು ಗುಣವಿದ್ದರೆ ಯೌವನದಲ್ಲಿಬೇರೆಯಾಗಬಹುದು. ವಾರ್ಧಕ್ಯದಲ್ಲಿ ತದ್ವಿಪರೀತಗುಣ ಸೇರಬಹುದು. ಹೀಗಾಗಿ ಅವನು ಒಂದೊಂದು ಕಾಲದಲ್ಲಿ ಒಂದೊಂದು ಜಾತಿಯವನಾಗಬೇಕಾದೀತು ಅದಿರಲಿ.

ಗುಣದಿಂದಲೇ ಜಾತಿಯನ್ನು ಕಂಡು ಹಿಡಿಯಬೇಕೆಂಬ ಇವರ ನಂಬಿಗೆಯು ವೇದಾವಲಂಬನೆಯುಳ್ಳದ್ದಲ್ಲ. ಯಾಕಂದರೆ ಕರ್ಮಕಾಂಡವನ್ನು ಪ್ರತಿಪಾದಿಸುವ ವೇದವು ಬ್ರಾಹ್ಮಣಾದಿ ಸಂಸ್ಕಾರಗಳನ್ನು ಗುಣಕರ್ಮಗಳನು ನೋಡಿ ಬ್ರಾಹ್ಮಣಾದಿ ವಿಶೇಷ ಸಂಸ್ಕಾರಗಳನ್ನು ಮಾಡಬೇಕೆಂದು ಹೇಳಿಲ್ಲ. ಅಥವಾ ಮನುಷ್ಯನ ಆಯಾಯ ಗುಣಗಳ ಬದಲಾವಣೆಯಾದೊಡನೆ ಆ

ಯಾಯ ಜಾತಿ ವಿಶೇಷ ಸಂಸ್ಕಾರಗಳನ್ನು ಮಾಡಿಸಿಕೊಳ್ಳಬೇಕೆಂದು ಹೇಳಿಲ್ಲ. ಇನ್ನು ಬ್ರಾಹ್ಮಣಾದಿ ಜಾತಿಯವರಿಗೆ ಸಾತ್ವಿಕಾದಿಗುಣ ವಿಭಾಗವನ್ನೂ ಕರ್ಮವಿಭಾಗವನ್ನೂ ಸರಿಮಾಡಿರುವದು ಸ್ವತಂತ್ರವಾದುದು ಆದರೆ ಜನ್ಮದಿಂದ ಜಾತಿಯನ್ನು ನಿರ್ಣಯಿಸುವದು ಮರುಳತನವೆಂದು ಹೇಳುವದು ಹುರುಳಿಲ್ಲದವರ ಮಾತಲ್ಲವೇ? ನೋಡಿರಿ. ಬ್ರಾಹ್ಮಣ ಶಿಶುವಿಗೆ ಗರ್ಭಕಾಲದಿಂದಲೂ ಸಂಸ್ಕಾರವಾಗಬೇಕಾಗುತ್ತದೆ. ವೀರಶೈವ ಬ್ರಾಹ್ಮಣ ಸ್ತ್ರೀಯಳು ಗರ್ಭವತಿಯಾದೊಡನೆ ಜ್ಯೋತಿಷ ಶಾಸ್ತ್ರೋಕ್ತ ಪುಂಸವನ ಸೀಮಂತ ಗರ್ಭಲಿಂಗಧಾರಣ ಮೊದಲಾದ ಸಂಸ್ಕಾರಗಳನ್ನು ಮಾಡಬೇಕಾಗುತ್ತದೆ. ವೀರಶೈವ ಸ್ತ್ರೀಯಳ ಉದರದಲ್ಲಿ ಶೂದ್ರತ್ವಗುಣವನ್ನು ಪ್ರಕಟಿಸುವ ಶಿಸುವಿದ್ದರೆ ಮೇಲ್ಬರೆದ ಸಂಸ್ಕಾರಗಳ ಅವಶ್ಯಕತೆಯೇ ಇಲ್ಲ ಮುಂದೆ ಜನ್ಮವೆತ್ತಿ ದೊಡ್ಡವನಾಗಿ ವೀರಶೈವತ್ವದ ಉತ್ತಮ ಗುಣವಂತನಾದ ಬಳಿಕ ಲಿಂಗವನ್ನು ಧರಿಸಿ ವೀರಶೈವನನ್ನಾಗಿ ಮಾಡಬೇಕು. ಹೀಗೆ ಗುಣದಿಂದ ಜಾತಿಯನ್ನು ಕಂಡು ಹಿಡಿದು ಬ್ರಾಹ್ಮಣಾದಿ ಜಾತಿಗಳನ್ನು ನಿರ್ಣಯಿಸುವ ಯುಗಕ್ಕೆ ವರ್ಣಸಂಕರ ವಕೀಲರವತಾರಕಾಲವೆನ್ನಬೇಕು. ಸೃಷ್ಟಿಯ ಆದಿಯಲ್ಲಿ ಆಯಾಯ ವರ್ಣದವರಲ್ಲಿ ಆಯಾಯ ಗುಣಕರ್ಮಗಳೇ ತೋರುತ್ತಿದ್ದವು. ಇದೀಗ ಕಾಲಚಕ್ರ ನೇಮಿನ್ಯಾಯದಂತೆ ಆ ಶುದ್ಧ ಪರಿಸ್ಥಿತಿಗೆ ಕೊರತೆ ಬಂದಿದೆ ಇದಕ್ಕೆ ನಮ್ಮವರು ಪಾಶ್ಚಿಮಾತ್ಯದ ಬೆಡಗಿಗೆ ಮರುಳಾಗಿ ಸನಾತನ ಧರ್ಮಕ್ಕೆ ತಿಲಾಂಜಲಿಯನ್ನಿತ್ತದ್ದೇ ಕಾರಣವು. ವರ್ಣಾಶ್ರಮ ವ್ಯವಸ್ಥೆಯು ಜಗತ್ಸೃಷ್ಟಿಯಿಂದ ದೆಶೆಯಿಂದ ಜನ್ಮವನ್ನನುಸರಿಸಿ ಬಂದದ್ದೆಂದು ಸಿದ್ಧಾಂತವಾಗಿ ಹೇಳುವೆವು.

ಇನ್ನು ಪುಾವಟೆ ವಕೀಲರು ವೀರಶೈವರಲ್ಲಿ ವರ್ಣಾಶ್ರಮ ಜಾತಿಭೇದಗಳಿಲ್ಲವೆಂಬ ಬಗ್ಗೆ ಪಾರಮೇಶ್ವರಾಗಮದ ಧರ್ಮಶಿರೋಮಣಿ ಮೊದಲಾದವುಗಳಲ್ಲಿಯ ಪ್ರಮಾಣಗಳನ್ನು ಕೊಟ್ಟಿರುವರು. ಆದರೆ ತಾವು ಯಾವ ಪ್ರಮಾಣಗಳನ್ನು ಎಲ್ಲಿಂದ ಮತ್ತು ಯಾವ ಪ್ರಕರಣದಲ್ಲಿ ಆ ಪ್ರಮಾಣೋಕ್ತಿಯನ್ನು ಶಾಸ್ತ್ರಕಾರರು ಅಲ್ಲಿ ಯಾಕೆ ಸೇರಿಸಿರಬೇಕು ಇವೇ ಮುಂತಾದ ವಿಚಾರದೃಷ್ಟಿಯಿಂದ ನೋಡಿ ಎತ್ತಿ ಬರೆದಿದ್ದರೆ ಇಷ್ಟು ವಿಲಂಬವಾಗಿ ಲಂಬವಾದ ಲೇಖವನ್ನು ಬರೆಯುವ ಭಾಗ ಬೀಳುತ್ತಿದ್ದಿಲ್ಲ. ವಕೀಲರು ವರ್ಣಸಂಕರಕ್ಕೆ ಮುಂದೆ ಚಾಚುತ್ತಿರುವ ಕೆಲವು ಮುಖ್ಯವಾದ ಪ್ರಮಾಣಗಳನ್ನು ವಾಚಕರ ಅವಲೋಕನೆಗಾಗಿ ಇಲ್ಲಿ ಕೊಡುತ್ತೇವೆ.

ಬ್ರಾಹ್ಮಣಾಃ ಕ್ಷತ್ರಿಯಾಃ ವೈಶ್ಯಾಃ ಶೂದ್ರಾ ಯೇ ಚಾನ್ಯ ಜಾತಯಃ
ಲಿಂಗಧಾರಣಮಾತ್ರೇಣ ಶಿವಾ ಏವ ನ ಸಂಶಯಃ ॥

ಪಾರಮೇಶ್ವರಾಗಮ ಪ್ರ. ಪ. ೫೮ ನೇ ಶ್ಲೋಕ.

ಯೇ ಸಂತಿ ಜಾತಿಭೇದಾಸ್ತ್ವನೇಕವಚ್ಛಿವಯೋಗಿನಃ ।
ಪಶ್ಯನ್ನಪಿ ಜಾತಿಸ್ಥಾನೇ ಕದಾಚಿತ್ಪಶುಭಿರ್ನರಾನ್ ॥೪೦॥
ನ ಸ್ತ್ರೀಭೇದೋ ನ ಪುಂಭೇದೋ ಜಾತಿವರ್ಣಾಶ್ರಮಾದಿಕಮ್ ।
ಸರ್ವಾತೀತಮಿದಂ ವಿದ್ಧಿ ವೀರಶೈವಮಿದಂ ಮಮ ॥೪೧॥
ಯದಾ ನಾಯುಸತೋ ದೇವಿ ಭೋಗಮೋಕ್ಷ್ಯ ಕರಸ್ಥಿತಾ ।
ಧಾರಣಾನ್ಮಮ ಲಿಂಗಸ್ಯ ಪೂಜನಾಚ್ಚ ನಿರಂತರಮ್ ॥೪೨॥

ಪಾ. ಆ. ೫ನೇ ಪ. ೬೮

ಯೇಷು ಮಹಾದೇವಿ ಭಕ್ತಿರವ್ಯಭಿಚಾರಿಣೀ ।
ಯೋಗ್ಯಾಸ್ತ ಏವಮಂತ್ರಸ್ಯ ಭಕ್ತಿರೇವಾತ್ರ ಕಾರಣಂ ॥
ವಿಶೇಷಂ ಯತ್ರದೀಕ್ಷಾಸು ಪೂರ್ವಿಕಾಭಕ್ತಿರಸ್ತಿ ಹಿ ।
ನ ತತ್ರ ಜಾತಿಭೇದೋಽಸ್ತಿ ಸರ್ವೇ ರುದ್ರ ಸ್ವರೂಪಿಣಃ ॥ ಇತ್ಯಾದಿ

ಇದರಂತೆ ಇನ್ನೂ ಅನೇಕ ಪ್ರಮಾಣ ಶ್ಲೋಕಗಳನ್ನು ಹುಡುಕಿತೆಗೆದು ವರ್ಣಭೇದವಿದಾರಿಕಾ ಲೇಖಮಾಲೆಯನ್ನು ಪೂರ್ಣಗೊಳಿಸಿದ್ದಾರೆ. ಇವರು ಪೋಣಿಸಿರುವ ಪ್ರತಿಶ್ಲೋಕಗಳನ್ನು ಪಸರಿಸಿ ಬರೆಯುತ್ತ ಹೋದರೆ ಓದುಗರಿಗೆ ತಲೆಬೇಸರ; ಆದಕ್ಕಾಗಿ ಅವರು ಆರಿಸಿ ತೆಗೆದ ಪ್ರಮಾಣಗಳು ವರ್ಣಸಂಕರ ಜಾತಿಸಂಕರಕ್ಕೆ ಸಾಧಕವೋ ಬಾಧಕವೋ ಎಂಬದನ್ನು ಪರೀಕ್ಷಿಸಿ ಇವರು ಕೊಟ್ಟಿರುವ ಪ್ರಮಾಣಗಳ ಫಲಿತಾಂಶವನ್ನು ಹೇಳಿ ಮುಂದೆ ಸಾಗೋಣ.

ಶ್ರೀ ಗುರುವಿನಿಂದ ಯಾವನು ದೀಕ್ಷೆಯನ್ನು ಪಡೆಯುವನೋ ಅವನು ತನ್ನ ಪೂರ್ವಜಾತಿ ಕುಲಾಶ್ರಮಗಳಿಂದ ಬಿಡಲ್ಪಡುವನು. ಅಂಥ ದೀಕ್ಷಿತನಾದ ಮಾನವನಿಗೆ ಬ್ರಾಹ್ಮಣಾದಿ ವರ್ಣವ್ಯವಹಾರವಾಗಲಿ, ಬ್ರಹ್ಮಚರ್ಯಾದಿ ವ್ಯವಹಾರವಾಗಲಿ, ಹೆಚ್ಚೀಕೆ, ಗಂಡುಹೆಣ್ಣೆಂಬ ಭೇದವಾಗಲಿ ಯಾವದೂ ಇಲ್ಲ. ಈ ವಿಷಯದಲ್ಲಿ “ನಾನಾವಿಧಾನಿಕಾಷ್ಠಾನಿ ವಹ್ನಿಯೋಗಾದ್ಯಥೈಕಥಾ” ಎಂಬ ಪ್ರಮಾಣವನ್ನು ಮುಂದೆಮಾಡಿ ನಾನಾವಿಧಗಳಾದ ಕಟ್ಟಿಗೆಗಳು ಬೆಂಕಿಯಲ್ಲಿಸುಟ್ಟು ಹೋದನಂತರ ಆ ಕಟ್ಟಿಗೆಗಳ ಪೂರ್ವ ಜಾತಿಗಳೆಲ್ಲವೂ ನಷ್ಟವಾಗಿ ಬೆಂಕಿಯೇ ಆಗುನಂತೆ

ಶಿವದೀಕ್ಷೆಯನ್ನು ಹೊಂದಿದ ಮೇಲೆ ತನ್ನ ಪೂರ್ವಜಾತಿ ಕುಲಗಳೆಲ್ಲವೂ ನಷ್ಟವಾಗಿ ಶಿವಸ್ವರೂಪನೇ ಆಗುತ್ತಾನೆಂಬ ಅರ್ಥವುಳ್ಳ "ಯಥೇಂಧನೇಷು ದಗ್ಧೇಷು ಕೋ ವಾ ಭೇದಃ ಪ್ರಕೀರ್ತ್ಯತೆ" ಮುಂತಾದ ಸಿದ್ಧಾಂತಶ್ಲೋಕಗಳಲ್ಲಿ ತಮಗನುಕೂಲಿಸಿದವುಗಳನ್ನು ಮಾತ್ರ ಆಯಾಯ ಪ್ರಕರಣಗಳ ವಿಚಾರಣೆ ಇಲ್ಲದೆ ತಮ್ಮ ವಿದಾರಿಕಾ ಲೇಖಮಾಲೆಯನ್ನು ಪೂರ್ತಿಗೊಳಿಸಿದರೆ ವರ್ಣ-ಕುಲಭೇದಗಳು ನಾಶವಾಗಲಾರವು. ಮುಖ್ಯವಾಗಿ ತಾವು ತೆಗೆದುಕೊಂಡಿರುವ ಪ್ರಕರಣವನ್ನೂ ಪೂರ್ವಾಪರ ಸಂಬಂಧವನ್ನೂ ತಿಳಿಯುವದೊಳಿತಲ್ಲವೇ? ಆವನ್ನೆಲ್ಲ ವಿಚಾರಿಸುತ್ತ ಕುಳಿತರೆ ತಮ್ಮ ಉದ್ದಿಷ್ಟಕ್ಕೆ ಭಂಗಬರತಕ್ಕ ಶ್ಲೋಕಗಳ ಸಿಂಹಗರ್ಜನೆಗೆ ಭಯಪಟ್ಟು ಕೈಸಂದಿಯಲ್ಲಿ ಬಿಡುತ್ತ ಬಂದ ಬಂಟರಿಗೇನನ್ನಬೇಕು? ಇದು ಶಾಸ್ತ್ರಮರ್ಯಾದೆಯನ್ನು ಅತಿಕ್ರಮಿಸಿದಂತಾಗುತ್ತದಲ್ಲದೆ ಇದರಿಂದಾವದೂ ಸಿದ್ಧಿಸಿದಂತಾಗುವದಿಲ್ಲ. ಶಾಸ್ತ್ರದಲ್ಲಿ ವಿಧಿವಾದವೆಂತಲೂ ಅರ್ಥವಾದವೆಂತಲೂ ಎರಡು ಭಾಗಗಳುಂಟು. ಮಕ್ಕಳಿಗೆ ಔಷಧಸೇವನೆಯಲ್ಲಿ ಪ್ರವೃತ್ತಿಯನ್ನು ಹುಟ್ಟಿಸುವದಕ್ಕಾಗಿ ಊಟದ ಪದಾರ್ಥಗಳಲ್ಲಿ ಔಷಧವನ್ನು ಸೇರಿಸಿಕೊಡುವಂತೆ ಉತ್ತರೋತ್ತರಮುಕ್ತಿ ಸಂಪಾದನೆಗೆ ಅಂಗವೆನಿಸಿದ ಶಿವದೀಕ್ಷಾದಿಗಳಲ್ಲಿ ಮಾನವರಿಗೆ ಪ್ರವೃತ್ತಿಯನ್ನು ಹುಟ್ಟಿಸುವದಕ್ಕಾಗಿ "ಯಥೇಂಧನೇಷು ದಗ್ಧೇಷು" ಎಂಬ ಪ್ರಮಾಣಗಳು ಸಿದ್ಧಾಂತಗ್ರಂಥಗಳಲ್ಲಿ ಪ್ರರೋಚಕವಾಕ್ಯಗಳಾಗಿ ಹೇಳಲ್ಪಟ್ಟಿವೆ. ಇಂಥವುಗಳು ವಿಧಿವಾಕ್ಯಗಳೆಂದು ಹೇಳಲಿಕ್ಕಾಗದು. ಪ್ರಕರಣಾನುಸಾರವಾಗಿ ಆಯಾಯ ವಸ್ತುವಿನ ಪ್ರಶಂಸೆಯನ್ನು ಮಾಡುವದರಲ್ಲಿಯೇ ಅರ್ಥವಾದಕ್ಕೆ ತಾತ್ಪರ್ಯವಲ್ಲದೆ ತನ್ನ ವಾಕ್ಯಾರ್ಥದಲ್ಲಿ ಪ್ರಾಮಾಣ್ಯವಿಲ್ಲವು. ಶಿವದೀಕ್ಷಾ ಪ್ರಶಂಸೆಯನ್ನು ಮಾಡತೊಡಗಿದ ಅರ್ಥವಾದ ಶ್ಲೋಕಗಳನ್ನು ತೆಗೆದುಕೊಂಡು ದೀಕ್ಷಿತರಾದವರಿಗೆ ಕುಲವರ್ಣಾಶ್ರಮಗಳಿಲ್ಲವೆಂದು ಇವೇ ವಿಧಿವಾಕ್ಯಗಳೆಂದು ಹೇಳುವದು ಪ್ರಮಾಣವಲ್ಲ. ಇಂಥ ಅರ್ಥವಾದ ಯುಕ್ತವಾದ ಶ್ಲೋಕಗಳು ದೀಕ್ಷಾ ಪ್ರಕರಣದಲ್ಲಿ, ಏಕೆ, ಎಲ್ಲ ಪ್ರಕರಣಗಳಲ್ಲಿಯೂ ಬೇಕಾದಷ್ಟು ದೊರೆಯುತ್ತವೆ. ಲಿಂಗಧಾರಣ ಪ್ರಕರಣದಲ್ಲಿ ಯಾರು ಗುರುವಿನಿಂದ ಶಿವಲಿಂಗವನ್ನು ಪಡೆಯುತ್ತಾರೋ ಅವರು ಬ್ರಾಹ್ಮಣರಾಗಲಿ ಕ್ಷತ್ರಿಯರಾಗಲಿ ವೈಶ್ಯರಾಗಲಿ ಶೂದ್ರರಾಗಲಿ ಕಡೆಗೆ ಅಂತ್ಯಜರಾಗಲಿ "ಲಿಂಗಧಾರಣ ಮಾತ್ರೇಣ" ಎಂಬ ಪದವಿರುವದರಿಂದ ಶಿವ

ಸ್ವರೂಪರೇ ಆಗುತ್ತಾರೆಂಬುವದರಲ್ಲಿ ಯಾವ ಸಂಶಯವೂ ಇಲ್ಲ. 'ಲಿಂಗ ಧಾರಣ ಮಾತ್ರೇಣ' ಎಂದದೆ, ಆದ್ದರಿಂದ ಲಿಂಗಸಂಬಂಧವಾದ ಯಾವ ಅನುಷ್ಠಾನವೂ ಬೇಕಿಲ್ಲ, ಕೇವಲ ಲಿಂಗಧಾರಣ ಒಂದರಲ್ಲಿಯೇ ಶಿವ ಸ್ವರೂಪಸಿದ್ಧಿಯುಂಟಾಗುತ್ತದೆ. ಇದರಂತೆ ರುದ್ರಾಕ್ಷಧಾರಣ ಪ್ರಕರಣ ವನ್ನು ನೋಡಿರಿ.

"ತಸ್ಯ ಪಾಪಕಥಾ ನಾಸ್ತಿ ಮೂಢಸ್ಯಾಪಿ ನ ಸಂಶಯಃ ।
ಬ್ರಹ್ಮಹಾ ಮದ್ಯಪಾಯೀ ಚ ಸ್ವರ್ಣಹೃದ್ಗುರುತಲ್ಪಗಃ ॥೬೮॥
ಮಾತೃಹಾ ಪಿತೃಹಾ ಚೈವ ಭ್ರೂಣಹಾ ಕೃತಘಾತಕಃ ।
ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ ॥೬೯॥
(ಸಿದ್ಧಾಂತ ಶಿಖಾಮಣಿ)

ಇಷ್ಟಕ್ಕೆ ಮುಗಿಯಲಿಲ್ಲ ಮಂತ್ರ ಪ್ರಕರಣದ ಕಡೆಗೆ ಹೊರಳಿದರೆ ಸಾಕು

"ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ ।
ಸರ್ವೇಷಾಮೇವ ಜಂತೂನಾಂ ಸರ್ವಪಾಪ ಕ್ಷಯೋ ಭವೇತ್ ॥೩೯॥
(ಸಿದ್ಧಾಂತ ಶಿಖಾಮಣಿ)

ಯಾರು ರುದ್ರಾಕ್ಷಿಯನ್ನು ಧರಿಸುತ್ತಾರೆಯೋ ಅವರು ಬ್ರಹ್ಮಹತ್ಯ ಮಾಡಿರಲಿ, ಮದ್ಯ ಪಾಯಿಗಳಾಗಿರಲಿ, ಗುರುಪತ್ನಿಲೋಲರಾಗಿರಲಿ, ಮಾತೃಪಿತೃಹತ್ಯಾದಿಗಳನ್ನು ಮಾಡಿರಲಿ, ಈ ಎಲ್ಲ ಪಾಪಗಳಿಂದ ಬಿಡು ಗಡೆಯನ್ನು ಹೊಂದುವರು. ಯಾರು ತಮ್ಮ ಜನ್ಮಾವಧಿಯಲ್ಲಿ ಒಂದು ಸಾರೆ ಪಂಚಾಕ್ಷರ ಮಹಾ ಮಂತ್ರವನ್ನು ಉಚ್ಚರಿಸುವರೋ ಅವರು ಸರ್ವ ಪಾಪಗಳಿಂದ ಬಿಡಲ್ಪಟ್ಟು ಪರಿಶುದ್ಧಾತ್ಮರಾಗುವರು ಇದಲ್ಲದೆ 'ಶಿವ' ಎಂಬರಡಕ್ಷರವನ್ನು ಯಾರು ಉಚ್ಚರಿಸುತ್ತಾರೋ ಅವರೊಂದಿಗೆ ಭೋಜ ನವನ್ನು ಮಾಡಬೇಕೆಂದೂ ಅವರ ಸಂಗಡ ಮಲಗಬೇಕೆಂದೂ ವಿಧಿಸುವ ಇಂಥ ಅನೇಕ ವಾಕ್ಯಗಳಿರುವವು. ಇವುಗಳು ಅರ್ಥವಾದಗಳೆನಿಸು ವವು ಇಂತಹ ಅರ್ಥವಾದಗಳಿಗೆ ಸ್ವಾರ್ಥದ ಪ್ರಾಮಾಣ್ಯವಿಲ್ಲವು. ಹಾಗೆ ಇಂಥ ವಾಕ್ಯಗಳನ್ನು ವಿಧಿ ವಾಕ್ಯಗಳೆಂದೇ ಅರ್ಥ ಮಾಡುವ ಸಂದರ್ಭ ದಲ್ಲಿ ಶಿವದೀಕ್ಷೆಯನ್ನು ಹೊಂದಿದ ಮೇಲೆ ವೀರಶೈವನಿಂದ ಅವಶ್ಯಕವಾಗಿ ಆಚರಿಸಲ್ಪಡಬೇಕಾದ ಬಹು ದುರ್ಗಮವಾದ ಬ್ರಹ್ಮ ವಿದ್ಯಾಂಗವಾದ ಷಟ್ಸ್ಥಲಾಚರಣೆಗಳು ಅವಶ್ಯಕಗಳಲ್ಲವೆಂದೇ ಹೇಳಬೇಕಾಗುತ್ತದೆ. ಶಿವ ದೀಕ್ಷೆಯಾದ ಉತ್ತರಕ್ಷಣವೇ ರುದ್ರಸ್ವರೂಪವು ಸಿದ್ಧಿಸಿತು ಆ ಮೇಲೆ ರುದ್ರತ್ವ

ಪ್ರಾಪ್ತಿಗಾಗಿ ಯಾಕೆ ಷಟ್ಸ್ಥಲೋಪಾಸನವನ್ನು ಹಿಡಿಯಬೇಕು? ಮುಕ್ತಿ ಲಿಂಗಧಾರಣ ಒಂದರಲ್ಲಿಯೇ ಶಿವತ್ವ ಸಿದ್ಧಿಯುಂಟಾದ ಮೇಲೆ ಪುನಃ ಲಿಂಗ ಸಂಬಂಧವಾದ ಕ್ರಿಯಾನುಷ್ಠಾನವೇಕೆ? ಭಸ್ಮಧಾರಣ ರುದ್ರಾಕ್ಷ ಧಾರಣ ಮಂತ್ರೋಚ್ಚಾರಣೆಯೊಂದೊಂದರಲ್ಲಿಯೇ ಸರ್ವ ಪಕ್ಷಯವಾದ ಮೇಲೆ ಪುನಃ ಪಾಪಕ್ಷಯಕರವಾದ ಉಪಾಸನಾ ಮಾರ್ಗವನ್ನೇಕೆ ಅನುಸರಿಸಬೇಕು? ಹೀಗಿದ್ದು ಇವುಗಳಲ್ಲಿ ಅಡಕವಾಗಿರುವ ಅರ್ಥವು ಅರ್ಥವಾದವಲ್ಲದೆ ವಿಧಿವಾದವಲ್ಲವು. ವೀರಶೈವನು ಶಿವದೀಕ್ಷೆಯನ್ನು ಹೊಂದಿ ಲಿಂಗವನ್ನು ಧರಿಸಿದನಂತರ ಮುಕ್ತಿಸಿದ್ಧಿಗಾಗಿ ಗುರುವಿನ ಆಜ್ಞೆಯಂತೆ ಯಾವಜ್ಜೀವವೂ ತಾನು ಅಂಗೀಕರಿಸಿದ ಅಪ್ರಾಕೃತ ವ್ರತಗಳು ಲೋಪವಾಗದಂತೆ ನಡೆಯಿಸುತ್ತ ಮೆಲ್ಲಮೆಲ್ಲನೆ ಷಟ್ಸ್ಥಲ ಮಾರ್ಗವನ್ನು ಹೊಂದಿ ಶಿವಸ್ವರೂಪವನ್ನು ಪಡೆಯುವನು. ಈ ಮಧ್ಯ ವ್ರತ ಲೋಪವಾದರೆ ಪತಿತನಾಗುವನೆಂಬ ವಾಕ್ಯಗಳಿಗೆ ಅರ್ಥವಿಲ್ಲದಂತಾಗುವದಿಲ್ಲವೆ? ತಾನು ಕ್ರಮವಾಗಿ ಹೊಂದಬೇಕಾದ ಸ್ಥಿತಿಯನ್ನು ಮೊದಲೇ ಹೊಂದಿದ ಮೇಲೆ ಮುಂದಿನ ಪ್ರಯತ್ನವೇಕೆ? ಭೂಗತ ದ್ರವ್ಯವನ್ನು ನೋಡಲು ಅಂಜನವು ಬೇಕು. ಮೊದಲೇ ದ್ರವ್ಯವೇ ದೊರಕಿದ ಮೇಲೆ ಅಂಜನವೇತಕ್ಕೆ? ಶಿವದೀಕ್ಷೆಯಾದ ಉತ್ತರಕ್ಷಣದಲ್ಲಿಯೇ ಮಾಯಾಗ್ರಂಥಿಯು ಬಿಚ್ಚಿಹೋದ ಮೇಲೆ ಕ್ಷಣಾರ್ಧದಲ್ಲಿಯೇ ಅಮಂಗಲವಾದ ಅಸೂಯಾ ಬುದ್ಧಿಯೂ ಕೋಪತಾಪಾದಿಗಳೂ ಹೊರಟು ಹೋಗಿ ಶಿವನ ಸರ್ವಜ್ಞತ್ವಾದಿ ಕಲ್ಯಾಣ ಗುಣಗಳು ಉದಯಿಸಬೇಕಾಗುವದು. ಹೀಗೆ ಹೇಳಲು ವಕೀಲರಿಗೆ ಶಾಸ್ತ್ರದ ಭಯವಿರಲಿಕ್ಕಿಲ್ಲವೇನು? ಅಥವಾ ಅನುಭವದಲ್ಲಿ ಯಾದರೂ ಇದು ವಿರೋಧವಲ್ಲವೇನು? ಶಾಸ್ತ್ರವಿರೋಧವೂ ಅನುಭವ ವಿರೋಧವೂ ಆದ ಜಾತಿ ಸಂಕರ ವರ್ಣಸಂಕರಗಳಿಗೆ ಉತ್ತೇಜನಕೊಡುವದಕ್ಕಾಗಿ ವೀರಶೈವಮತದ ಹೆಚ್ಚುಗಾರಿಕೆಗಾಗಿಯೂ ಶಿವದೀಕ್ಷಾ ಪ್ರಭಾವಕ್ಕಾಗಿಯೂ ಲಿಂಗಧಾರಣ ಶ್ರೇಷ್ಠತೆಗಾಗಿಯೂ ಭಸ್ಮ ರುದ್ರಾಕ್ಷಧಾರಣ ಪವಿತ್ರತೆಗಾಗಿಯೂ ಮಂತ್ರ ಮಹತ್ವಕ್ಕಾಗಿಯೂ ಪ್ರಶಂಸಾಪರವಾಗಿದ್ದ ವಾಕ್ಯಗಳನ್ನು ಸೂರೆ ಮಾಡುವನು ಸುಜ್ಞರಿಗೆ ಶೋಭಿಸಲಾರನು. ಇಂಥ ಪ್ರರೋಚಕ ವಾಕ್ಯಗಳು ನಮ್ಮ ವೀರಶೈವ ಸಿದ್ಧಾಂತದಲ್ಲಿರುವವಷ್ಟೆ ಅಲ್ಲ ಸ್ಮಾರ್ತ ವೈಷ್ಣವಾದಿಗಳ ಸಿದ್ಧಾಂತಗಳಲ್ಲಿಯೂ ಬೇಕಾದಷ್ಟಿವೆ. ಶಂಕರಾಚಾರ್ಯರು ತಮ್ಮ ಮನೀಷಾಪಂಚಕದಲ್ಲಿ "ಚಂಡಾಲೋಽಸ್ತು ಸ ತು ದ್ವಿಜೋಽಸ್ತು ಗುರುರಿತ್ಯೇಷಾ ಮನಿ

[illegible]ವುನ." ಯಾವನು ಅಪರೋಕ್ಷ ಪರವಸ್ತು ಜ್ಞಾನಸಂಪನ್ನನೋ ಅವನು ಚಾಂಡಾಲನಿರಲಿ, ಬ್ರಾಹ್ಮಣನಿರಲಿ, ಯಾವದೊಂದನ್ನು [illegible] ನಾನು ಗುರುವೆಂದು ತಿಳಿಯುತ್ತೇನೆ, ಎಂದು ಹೇಳಿದ ವಾಕ್ಯವು ಜ್ಞಾನಪ್ರಶಂಸೆಗೆ ಹೇಳಿದ್ದಾಗಿದೆ. ವೈಷ್ಣವರಲ್ಲಿ ವೈಷ್ಣವ ದೀಕ್ಷೆಯನ್ನು ಪಡೆದು ತಪ್ತಮುದ್ರಾದಿಗಳನ್ನು ಧರಿಸಿದ ಯಾವನೊಬ್ಬನು ದಾಸನಾಗಿದ್ದರೂ ಸಾಕ್ಷಾದ್ವಿಪ್ರನೆಂದೇ ತಿಳಿಯಬೇಕೆಂದು ಹೇಳಿದ್ದು ಮುದ್ರಾದಿಗಳ ಪಾವಿತ್ರ್ಯವನು ಬೋಧಿಸುತ್ತವಲ್ಲದೆ ಬೇರಿಲ್ಲ. ವೀರಶೈವ ಮತದ ಶಿವದೀಕ್ಷಾ ಪ್ರಶಂಸಾಪರವಾಗಿದ್ದ "ನಾನಾ ವಿಧಾನಿ ಕಾಷ್ಠಾನಿ ವಹ್ನಿಯೋಗಾದ್ಯಥೈಕತಾಂ । ಎಂಬುದೊಂದನ್ನೇ ಬಾರಿಸುತ್ತ ಶರ್ಮವರ್ಗವೂ "ಶರ್ಮರೂ ಶರ್ಮರೇ" ಎಂದು ಪದೇ ಪದೇ ಪದಕ್ಕೊಮ್ಮೆ ಪ್ರಲಾಪಿಸುವದು ಪಾವಟಿಯವರಂಥ ಪ್ರಾಜ್ಞರಿಗೆ ಪ್ರಶಸ್ತವಲ್ಲ.

ಇನ್ನು ಶಿವದೀಕ್ಷಾ ಪ್ರಭಾವದಿಂದ ಸಾಮಾನ್ಯಾಕಾರಗಳಾದ ವರ್ಣಾಶ್ರಮ ಧರ್ಮಗಳು ನಾಶವಾಗುತ್ತವೆಂಬುವದು ಸಿದ್ಧಾಂತವಾದರೂ ವಿಶೇಷಾಕಾರಗಳಾದ ಅಪ್ರಾಕೃತ ವರ್ಣಾಶ್ರಮ ಧರ್ಮಗಳು ಉದಯಿಸುವದರಿಂದ ವೀರಶೈವರು ವರ್ಣಾಶ್ರಮಧರ್ಮ ಶೂನ್ಯರಲ್ಲ. "ಕರ್ಮವಿಧ್ಯುಕ್ತಮುತ್ಸೃಜ್ಯ ಸ್ವಜಾತಿವಿಹಿತಂ ನರಾಃ । ಯೇರ್ಚಯಂತಿ ಶಿವಂ ತೇಷಾಂ ಪೂಜಾಂ ಗೃಹ್ಣಾತಿ ನೇಶ್ವರಃ । ವರ್ಣಾಶ್ರಮಸದಾಚಾರಾಃ ಶಿವೇನಕಥಿತಾಃ ಪುರಾ । ಏತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಪ್ರಲಾಪಿನಃ ॥ ರಾಜಾಜ್ಞಾಭಂಗಕೃನ್ನೃಣಾಂ ಯಥಾದಂಡೋ ಭವಿಷ್ಯತಿ । ಶಿವಾಜ್ಞಾಭಂಗಕೃನ್ನೃಣಾಂ ದಂಡೋ ಹಿ ನರಕಸ್ತಥಾ ॥" ಯಾರು ವರ್ಣಾಶ್ರಮ ಧರ್ಮಗಳನ್ನು ಬಿಟ್ಟು ದೇವದೇವನಾದ ಪರಮೇಶ್ವರನನ್ನು ಪೂಜಿಸಲುಪಕ್ರಮಿಸುವರೋ ಅಂಥವರ ಪೂಜೆಯನ್ನು ಶಿವನು ಸ್ವೀಕರಿಸುವದಿಲ್ಲ. ವರ್ಣಾಶ್ರಮಾದಿ ಧರ್ಮಾನುಷ್ಠಾನವು ಶಿವನಿಂದ ಆಜ್ಞಾಪಿಸಲ್ಪಟ್ಟದೆಯಲ್ಲದೆ ಮಾನವರಿಂದಲ್ಲ. ಪ್ರಜಾಶಾಸಕನಾದ ಮಹಾರಾಜನ ಆಜ್ಞೆಯನ್ನು ಮೀರಿದ ಪ್ರಜೆಗಳು ಹೇಗೆ ಶಿಕ್ಷಾರ್ಹರಾಗುವರೋ ಹಾಗೆ ಶಿವಾಜ್ಞೆಯನ್ನು ಮೀರುವ ವರ್ಣಸಂಕರರಿಗೆ ನರಕವೆಂಬ ಶಿಕ್ಷೆಯು ತಪ್ಪದೆ ಆಗುವದೆಂದು ಸಿದ್ಧಾಂತವು ಸಿಂಹಗರ್ಜನೆ ಮಾಡುತ್ತಲಿರುವದು. ಮತ್ತು ಸೂತ್ರ ಭಾಷ್ಯಕಾರರಾದ ಶ್ರೀಪತಿಪಂಡಿತರು "ನ ಚ ಲಿಂಗಧಾರಣಮಾತ್ರೇಣ ಮುಕ್ತಿಸಂಭವೇತ್ತದೇವಾಲಂ ಕಿಮೌಪನಿಷಚ್ಛಾಸ್ತ್ರವಿಚಾರ ಪ್ರಯಾಸೇನೇತಿ ವಾಚ್ಯಂ" ಲಿಂಗಧಾರಣ ಮಾತ್ರದಿಂದ ಮುಕ್ತಿಯು ಸಂಭವಿಸುವದಾದರೆ

ಅತಿ ಕಠಿಣಗಳಾದ ವೇದಾಗಮ ವಿಚಾರವೇನೆಂಬ ಆಶಂಕೆ ಮಾಡಲಾಗದೆಂದೂ ವರ್ಣಾಶ್ರಮ ಧರ್ಮಾನುಷ್ಠಾನವಿಲ್ಲದೆ ಮುಕ್ತಿಯು ಸಂಭವಿಸಲಾರದೆಂದೂ ತಮ್ಮ ಶ್ರೀಕರ ಭಾಷ್ಯದಲ್ಲಿ ಉಲ್ಲೇಖಗೊಳಿಸಿದ್ದಾರಲ್ಲದೆ ಲಿಂಗಧಾರಣ ರೂಪವಾದ ಶಿವದೀಕ್ಷೆಯು, ಶಿವನಿರ್ದಿಷ್ಟವಾದ ವರ್ಣಾಶ್ರಮ ಧರ್ಮಾನುಷ್ಠಾನಗಳು ಯೋಗ್ಯವೆಂದು ಹೇಳುವರು.

ಇನ್ನು ವಕೀಲರು ಸಿದ್ಧಾಂತಶಿಖಾಮಣಿಯಲ್ಲಿರುವ ಅಪ್ರಾಕೃತವರ್ಣಾಶ್ರಮವನ್ನೂ ಪಾರಮೇಶ್ವರಾಗಮದ ೧೭ ನೇ ಪಟಲವನ್ನೂ ಹೇಗೆ ಜಗ್ಗಾಡಿ ಗಾಯಗೊಳಿಸಿರುವರೆಂಬುವದು ನಿಷ್ಪಕ್ಷಪಾತ ಹೃದಯದ ಪಂಡಿತರಿಗೆ ವಿಷಾದವಾಗುತ್ತದೆ. ಅಸ್ತು. ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯಮಹರ್ಷಿಗಳಿಗೆ ಅಪ್ಪಣೆಕೊಡಿಸಿದ ಪ್ರಮಾಣವು ಇವರ ಪಾಲಿಗೆ ಎಷ್ಟು ವಿರೋಧವಾಗಿದೆಯಲ್ಲ! ಛೀ ಶಿವಶಿವಾ!! "ವರ್ಣಾಶ್ರಮಾದಿ ಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾ ಮತಾ। ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ॥೩೫॥ ಶಿವೋಕ್ತಧರ್ಮನಿಷ್ಠಾ ತು ಶಿವಾಶ್ರಮನಿಷೇವಿಣಾಂ। ಶಿವಸಂಸ್ಕಾರಹೀನಾನಾಂಧರ್ಮಃ ಪೈತಾಮಹಸ್ಮೃತಃ ॥೩೬॥" ವರ್ಣಾಶ್ರಮಾದಿ ಧರ್ಮಗಳೊಳಗೂ ಎರಡುತೆರದ ವ್ಯವಸ್ಥೆಯು ಇರುತ್ತಿರುವದು. ಅವುಗಳಲ್ಲಿ ಒಂದು ಶಿವನಿಂದ ಹೇಳಲ್ಪಟ್ಟದ್ದು, ಮತ್ತೊಂದು ಚತುರ್ಮುಖ ಬ್ರಹ್ಮನಿಂದ ನಿರೂಪಿತವಾದದ್ದು. ಆವೆರಡರಲ್ಲಿ ಯಾರಿಗೆ ಯಾವದು ಉಕ್ತವಾದದ್ದೆಂದರೆ, ಶಿವನಿರ್ದಿಷ್ಟ ಚಾತುರ್ವರ್ಣಾಶ್ರಮಗಳು ವೀರಶೈವರಿಗೆ, ಬ್ರಹ್ಮ ನಿರ್ದಿಷ್ಟವರ್ಣಾಶ್ರಮಗಳು ಪ್ರಾಕೃತರಿಗೆ, ಯುಕ್ತವಾದವು, ಹೀಗೆ ಪ್ರಸಿದ್ಧಾರ್ಥವು ಇರುವವನ್ನು ಬಿಟ್ಟು ವಕೀಲರು ಆ ಶ್ಲೋಕಕ್ಕೆ ಅಪಾರ್ಥವನ್ನು ಕಲ್ಪಿಸಹೋಗಿ ಆಳವಾದ ತಗ್ಗಿನಲ್ಲಿ ಮುಗ್ಗರಿಸಿರುವರು. ವೀರಶೈವ ಮತವೆಂಬ ಸಾಮ್ರಾಜ್ಯದಲ್ಲಿರುವ ಸಕಲರಿಗೂ ವರ್ಣವಿಭಾಗವೂ, ಜಾತಿವಿಭಾಗವೂ, ಆಶ್ರಮವಿಭಾಗಗಳೂ ಸರ್ವೋತ್ಕೃಷ್ಟವಾಗಿ ಇರಬೇಕೆಂದು ಶಿವಾಜ್ಞೆಯ ನಿರೂಪಿತಗಳಾದ ಆಗಮೋಪನಿಷತ್ತುಗಳು ಸಿಂಹನಾದವನ್ನು ಮಾಡುತ್ತಿದ್ದರೂ, ಕೆಲವರು ವೀರಶೈವ ಮಹಾತ್ಮರಾಗಿ ಅಲ್ಲಲ್ಲಿ ಹೇಳಿದವುಗಳನ್ನು ಮುಂದೆ ಮಾಡಿ ವರ್ಣಾಶ್ರಮಗಳಿಲ್ಲ, ಎಂಬದನ್ನಷ್ಟೇ ಅಲ್ಲ, ಉಳಿದ ಜಾತಿಸೂಚಕ ಕರ್ಮಗಳನ್ನು ಕೂಡಾ ತಿರಸ್ಕರಿಸುತ್ತಿರುವರು. ಅಸ್ತು.

ವೀರಶೈವ ಬ್ರಾಹ್ಮಣ ಕರ್ಮವನ್ನು ಪ್ರತಿಪಾದಿಸುವ ಪ್ರಮಾಣಗಳನ್ನು ನೋಡಿರಿ. "ವಕ್ಷ್ಯಾಮಿ ಧೃತಲಿಂಗಸ್ಯಾಚರಣಂ ಶ್ರುತಿಸಮ್ಮತಮ್ । ಸ್ಮೃತಿತಂತ್ರಪುರಾಣೇಷು ಪ್ರಸಿದ್ಧಂ ತೇ ಸಮಾಸತಃ ॥೧॥ ಶ್ರುತ್ಯಾಗಮೋದಿತಂ ಧರ್ಮಂ ನಿತ್ಯನೈಮಿತ್ತಿಕಾಶ್ರಯಮ್। ಕುರ್ಯಾಲ್ಲಿಂಗಾಂಗಸಂಬಧೀ ಬ್ರಾಹ್ಮಣಃ ಕಾಮವರ್ಜಿತಃ ॥೨॥ ವಿಧ್ಯುಕ್ತಕರ್ಮಾನುಷ್ಠಾನಾ ಚ್ಚಿತ್ತಶುದ್ಧಿರ್ಭವೇತ್ ಧ್ರುವಮ್ । ಚಿತ್ತಶುದ್ಧ್ಯಾ ಭವೇದ್ಭಕ್ತಿರವ್ಯಭಿಚಾರಿಣೀ ॥೩॥ ತಯಾ ಸಂಜಾಯತೇ ಜ್ಞಾನಂ ನಶ್ಯತ್ಯಜ್ಞಾನಮಾತ್ಮನಃ ತಸ್ಮಾನ್ಮೋಕ್ಷಸ್ತತೋ ಕರ್ಮ ವಿಧ್ಯುಕ್ತಂ ಸಮ್ಯಗಾಚರೇತ್ ॥೪॥ ತಸ್ಮಾದಾಚಾರಸಹಿತೋ ಭಕ್ತೋ ಮಾಹೇಶ್ವರೋ ಜನಃ ॥ ಪೂಜಯೇದ್ಗುರುಣಾದತ್ತಮಿಷ್ಟಲಿಂಗ ಮತಂದ್ರಿತಃ ॥೫॥

ಎಲೈ ಷಡಾನನನೇ, ಲಿಂಗಧಾರಿಯು ನಿತ್ಯವೂ ಆಚರಿಸಬೇಕಾದ ವೈದಿಕಾಚಾರಗಳನ್ನು ಹೇಳುತ್ತೇನೆ. ಈ ಧರ್ಮಗಳು ಸ್ಮೃತ್ಯಾಗಮ ಪುರಾಣಗಳಲ್ಲಿ ಪ್ರಸಿದ್ಧವಾಗಿರುತ್ತವೆ. ಲಿಂಗಾಂಗಸಂಗಿಯಾದ ಬ್ರಾಹ್ಮಣನು ವೇದಾಗಮಗಳಲ್ಲುಕ್ತವಾದ ನಿತ್ಯನೈಮಿತ್ತಿಕ ಕರ್ಮಗಳನ್ನು ನಿಷ್ಕಾಮಬುದ್ಧಿಯಿಂದ ಆಚರಿಸಬೇಕು. ವಿದ್ಯುಕ್ತಕರ್ಮಾನುಷ್ಠಾನದಿಂದ ಚಿತ್ತಶುದ್ಧಿಯೂ, ಚಿತ್ತಶುದ್ಧಿಯಿಂದ ದೃಢತರವಾದ ಭಕ್ತಿಯೂ, ಭಕ್ತಿಯಿಂದ ಜೀವನ ಅಜ್ಞಾನವು ನಾಶವಾಗಿ ದಿವ್ಯಜ್ಞಾನವೂ, ಜ್ಞಾನದಿಂದ ಶಾಶ್ವತ ಶಿವಸಾಯುಜ್ಯರೂಪವಾದ ಮೋಕ್ಷವೂ ಲಭಿಸುತ್ತವೆ. ಆದುದರಿಂದ ವಿಧ್ಯುಕ್ತಕರ್ಮಗಳನ್ನು ತಪ್ಪದೆ ಆಚರಿಸಬೇಕು. ಈ ರೀತಿಯಾದ ಆಚಾರಗಳಿಂದ ಕೂಡಿದ ಭಕ್ತಮಾಹೇಶ್ವರರು ಗುರುದತ್ತವಾದ ಇಷ್ಟಲಿಂಗವನ್ನು ಎಡೆಬಿಡದೆ ಪೂಜಿಸಬೇಕು. ಎಂದು ಬೋಧಿಸಿರುವ ಪ್ರಮಾಣವಾಕ್ಯಗಳಿಂದ ಬ್ರಾಹ್ಮಣ್ಯಾದಿಗಳ ಕರ್ಮೋಪಾಸನೆಯು ಸ್ಪಷ್ಟವಾಗುವದು. ಇನ್ನು ಕರ್ಮವೊಂದರಲ್ಲಿಯೇ ಆಸಕ್ತವಾಗಬೇಕೆಂಬುವದು ನಮ್ಮ ಸಿದ್ಧಾಂತವಲ್ಲಿಲ್ಲ. ಕರ್ಮಜ್ಞಾನಗಳೆರಡನ್ನೂ ಅಂಗೀಕರಿಸುವದರಿಂದ ಅದೇ ಸಂಹಿತೆಯಲ್ಲಿ "ಅನೇನ ಸದೃಶಂ ಧರ್ಮಂ ನ ಪಶ್ಯಾಮಿ ಷಡಾನನ। ವೇದತಂತ್ರಪುರಾಣೇಷು ಸತ್ಯಂ ಸತ್ಯಂ ಮಯೋದಿತಮ್" ಎಲೈ ಕುಮಾರಸ್ವಾಮಿಯೇ? ಈ ಮತಕ್ಕೆ ಸಮಾನವಾದ ಮತವೇ ಇಲ್ಲ: ವೇದಾಗಮಪುರಾಣಗಳಲ್ಲಿ ನನ್ನಿಂದ ಹೇಳಲ್ಪಟ್ಟಿರುವದೇ ಸತ್ಯವು ಎಂದು ಪರಮಾತ್ಮನ ಆಜ್ಞೆಯು ಇರಲಿ.

ವರ್ಣಾಶ್ರಮವಿಚಾರಕ್ಕಾಗಿ ಹೊರಟ ನಾವು ವಕೀಲರ ವಿದ್ಯಾರಿಕ್ತಾಲೇಖವನ್ನು ಮರೆಯುವಂತಿಲ್ಲ. ಅವರು ಪಾರಮೇಶ್ವರಾಗಮದ ೧೭ಪಟಲವನ್ನು- "ಅಷ್ಟಾವರಣಪಂಚಾಚಾರಯುಕ್ತರಾದ ಶುದ್ಧವೀರಶೈವರಲ್ಲಿ ಜಾತಿಭೇದವನ್ನು ಹೇಳುವದಿಲ್ಲ. ಶುದ್ಧಾದಿ ಶೈವರು ತಮ್ಮ ತಮ್ಮ ಮಾರ್ಗಗಳಲ್ಲಿ ವೀರಶೈವವನ್ನು ಅನುಸರಿಸಿದರೆ ಕ್ರಮೇಣ ಧನ್ಯರಾಗುವರೆಂಬುದು" ಹೀಗೆಂದು ಆ ಪಟಲದ ಅಭಿಪ್ರಾಯವಾಗಿದ್ದರೆ ಪಾವಟಿಯವರಿಗೆ ಶತಶಃ ಧನ್ಯವಾದಗಳು.

ಪಾರ್ವತಿಯು ಆ ಪಟಲದಲ್ಲಿ ವೀರಶೈವರೊಳಗಿನ ಭೇದಗಳನ್ನು ಕೇಳಿರುವಳಲ್ಲದೆ ವಕೀಲರ ಒತ್ತಾಯದಿಂದ ಉಳಿದ ಶೈವಾದಿಗಳಲ್ಲಿರುವ ಭೇದಗಳನ್ನು ಕೇಳಿಲ್ಲ. ಇನ್ನು ಶೈವಾದಿ ಭೇದವೆಂದರೆ ಎನು? ವೀರಶೈವಾದಿ ಭೇದವೆಂದರೇನು? ಶೈವ ಸೃಷ್ಟಿಯೊಂದು ಬೇರೆ, ವೀರಶೈವ ಸೃಷ್ಟಿಯೊಂದು ಬೇರೆ, ಅದೇ ಪಾರಮೇಶ್ವರಾಗಮವನ್ನು ಆರಂಭದಿಂದ ಅವಲೋಕಿಸಿದರೆ ಎಷ್ಟು ಸೃಷ್ಟಿಗಳಿರುವದು, ತಿಳಿಯುವದು. ಆದರಲ್ಲಿ ಜಗಜ್ಜನನಿಯಾದ ಪಾರ್ವತಿಯು ಲೋಕಹಿತಕ್ಕಾಗಿ ಮಾಡಿದ ಪ್ರಶ್ನೆಯ ಪರಾಭವವನ್ನು ಪರಮಾತ್ಮನು ಪಾರಮೇಶ್ವರಾಗಮದ ಮೂಲಕವಾಗಿ ವೀರಶೈವ ಮತದ ಹೆಚ್ಚುಗಾರಿಕೆಯನ್ನು ಕುರಿತು ಎಷ್ಟುವಿಶದವಾಗಿ ಬೋಧಿಸಿರುವನೆಂಬುದನ್ನು ವರ್ಣಿಸಲು ನಮ್ಮ ಅಲ್ಪ ಲೇಖಣಿಯಲ್ಲಿ ಸಾಮರ್ಥ್ಯವಿಲ್ಲ. ಪಾರಮೇಶ್ವರಾಗಮದ ಪ್ರಥಮ ಪಟಲದಲ್ಲಿ ಪರಮಾತ್ಮನಿಗೆ ದೇವಿಯು ಸರ್ವಪ್ರಕಾರ ತಾತ್ವಿಕ ದೃಷ್ಟಿಯಿಂದ ಮತಭೇದ ಸ್ವರೂಪವನ್ನು ಹೇಳಬೇಕೆಂದೂ ಎಷ್ಟು ಪ್ರಕಾರದ ಮತಗಳಿರುವವು ಆಯಾಯ ಮತದ ಸ್ವರೂಪವನ್ನು ತಿಳಿಸಬೇಕೆಂದೂ ಪ್ರಶ್ನಮಾಡಿದ್ದಕ್ಕೆ ಪರಶಿವನು ಸೌಗತ ಬೌದ್ಧ ಚಾರ್ವಾಕ ಮೊದಲಾದವುಗಳನ್ನೂ ವೈದಿಕ ಮತಗಳಾದ ಸೌರ ಗಾಣಪತ್ಯ ವೈಷ್ಣವ ಶಾಕ್ತಾದಿ ಮತಗಳನ್ನೂ ಹೇಳಿ ಅತ್ಯಂತ ಶ್ರೇಷ್ಠವಾದ ವೀರಶೈವ ಮತದ ಬಗ್ಗೆ "ಅಥ ವಕ್ಷ್ಯೇ ಗಿರಿಸುತೇ ಮತಂ ಮಮ ಮಹತ್ತರಮ್॥ ಶೈವಂ ಸಪ್ತವಿಧಂ ಪುಣ್ಯಾಂ ವೀರಶೈವಾದಿ ಭೇದತಃ ೧೫॥ ವೀರಶೈವಂ ತಥಾನಾದಿಶೈವಮಾದಿಪರಂ ತತಃ। ಅನುಶೈವಂ ಮಹಾಶೈವಂ ಯೋಗಶೈವಂ ತು ಪಞ್ಚಕಂ ॥೧೬॥ ಸಪ್ತಮಂ ಜ್ಞಾನಶೈವಾಖ್ಯಂ ತತ್ರ ಸರ್ವೋತ್ತಮೋತ್ತಮಂ। ವೀರಶೈವ ಮಿತೀಶಾನಿ ತದಂಗಾನೀತರಾಣಿ ತು" ॥೧೭॥ ಹೀಗೆ ವೀರಶೈವಸೃಷ್ಟಿಗೆ ಆರಂಭಮಾಡಿ ಅದರೊಳಗಿರುವ ಅನಂತಾನಂತ ಭೇದಗಳನ್ನು ವಿವರಿಸುತ್ತ ೧೭ ನೇ ಪಟಲದಲ್ಲಿ ಮುಖ್ಯವಾಗಿ ವೀರಶೈವ

ರೊಳಗೆ ಬ್ರಾಹ್ಮಣಾದಿ ಭೇದನಿರೂಪಣೆಯು ಸಿದ್ಧಾಂತವಾಗಿರುವದು. ಹೀಗಿದ್ದು ೧೭ನೇ ಪಟಲವು ವೀರಶೈವರನ್ನು ಕುರಿತು ಹೇಳಿಲ್ಲ, ಶುದ್ಧಾದಿ ಶೈವರನ್ನುದ್ದೇಶಿಸಿ ಹೇಳಿದ್ದೆಂದು ಪ್ರಲಾಪಿಸುವದು ಪಕ್ಷಾಂಧತೆಯಲ್ಲದೆ ಬೇರಲ್ಲ. ವರ್ಣಾಶ್ರಮವಿಹಿತವಾದ ವೀರಶೈವಮತದವರು ತಮ್ಮ ತಮ್ಮ ಕುಲಕ್ರಮಾಗತಾಚಾರದಂತೆ ವರ್ತಿಸಬೇಕೆಂದು ಸಿದ್ಧಾಂತಗಳು "ಸ್ವಮಾರ್ಗಾಚಾರರತಾಃ ಸಜಾತೀಯಾ ದ್ವಿಜಾಸ್ತು ಯೇ। ತೇಷಾಂಗೃಹೇಷು ಭುಂಜೀತನೇತರೇಷಾಂ ಕದಾಚನ॥" ವೀರಶೈವ ಮತೀಯರು ಭೋಜನಾದಿಗಳನ್ನು ಆದೇ ಮತದವರಲ್ಲಿಯಲ್ಲದೆ ಇತರ ದ್ವಿಜರಲ್ಲಿ ಮಾಡಬಾರದೆಂದು ವಿಧಿಸುತ್ತದೆ.

ವರ್ಣಾಶ್ರಮವಿಭಾಗಗಳೂ ಜಾತಿತಾರತಮ್ಯವೂ ಬ್ರಹ್ಮಚರ್ಯಾದ್ಯಾಶ್ರಮಗಳೂ ವೀರಶೈವ ಸಿದ್ಧಾಂತಗ್ರಂಥಗಳಲ್ಲಿ ಪ್ರಕಾಶಿತವಾಗಿರುವವು. ಅವುಗಳನ್ನು ಹುಡುಕುವ ಶ್ರಮವಾದರೂ ವಿಶೇಷವಿಲ್ಲ. ಆದರೆ ಪಕ್ಷಾಭಿಮಾನದಿಂದ ಸ್ವಪಕ್ಷ ಸಮರ್ಥನೆಗಾಗಿ ನೋಡಿದರೆ ಸಿಕ್ಕಲಿಕ್ಕಿಲ್ಲ. ತಮ್ಮ ದೃಷ್ಟಿಯಿಂದ ದೊರೆತ ಪ್ರಮಾಣಗಳು ವಿಧಿವಾದಗಳೇ, ಅರ್ಥವಾದಗಳೇ, ಎಂಬದನ್ನು ಸಂಪೂರ್ಣ ವಿಚಾರಿಸಬೇಕು. ಹಾಗಿಲ್ಲದೆ ಪ್ರಶಂಸಾಪರವಾಗಿದ್ದ ಶ್ಲೋಕಗಳನ್ನೇ ವಿಧಿವಾದಗಳೆಂದು ತಿಳಿದರೆ ಎಷ್ಟು ವಿಪರೀತ ಫಲವುಂಟಾಗುವದು? ಇನ್ನು ರೂಢಿಯನ್ನು ನೋಡಬೇಕು. ಸಕಲ ಶಾಸ್ತ್ರಪ್ರಮಾಣಕ್ಕಿಂತಲೂ 'ರೂಢಿ' ಎಂಬದು ಪ್ರಬಲ ಪ್ರಮಾಣವು. ಆದ್ದರಿಂದ ವರ್ಣಾಶ್ರಮ ಜಾತಿವಿಮರ್ಶಕರು ಕೆಳಗಿನ ಮೂರು ಪ್ರಶ್ನೆಗಳನ್ನು ಪರಾಮರ್ಶೆಮಾಡಬೇಕು.

೧. ಸದ್ಯದಲ್ಲಿ ವೀರಶೈವಮತದಲ್ಲಿ ಜಾತಿಭೇದಗಳಿರುವವೋ, ಇಲ್ಲವೋ?

೨. ಆಯಾಯ ಜಾತಿಯವರು ವಿಶಿಷ್ಟಾಚರಣೆಗಳನ್ನಿಟ್ಟುಕೊಂಡಿಲ್ಲವೋ?

೩. ಜಾತಿಭೇದಗಳೇ ಇಲ್ಲವಾದರೆ ಈಗಿನ ವೀರಶೈವ ಮತದಲ್ಲಿ ಒಂದು ಜಾತಿಯವರು ಮತ್ತೊಂದು ಜಾತಿಯವರೊಡನೆ ಶರೀರ ಸಂಬಂಧಮಾಡುವರೋ? ಉದಾಃ— ಒಂದೇ ಜಾತಿಯಲ್ಲಿ ಎಣಿಸಲ್ಪಡುವ ನಾಗಲೀಕ ಶಿವಸಿಂಪಿಗ ಇವರು ಉಭಯರು ತಮ್ಮೊಳಗೆ ಶರೀರಸಂಬಂಧ ಮಾಡುವರೋ? ಉಳಿದ ಬಣಜಿಗ (ಇವರಲ್ಲಿಯೇ ಶೀಲವಂತ ಲೋಕಬಳಕಿ)

ಪಂಚಮಸಾಲಿ ಗಾಣಿಗ ನೊಣಬ ಹಡಪ ಮಡಿವಾಳ ಕುಡುವಕ್ಕಲಿಗ ಮುಂತಾದವರು ಪರಸ್ಪರ ಶರೀರಸಂಬಂಧ ಒತ್ತಟ್ಟಿಗಿರಲಿ ಕೆಲವರು ಭೋಜನಾದಿಗಳನ್ನು ಮಾಡುವರೋ?

ಈ ಪ್ರಕಾರ ಮೇಲೆ ಬರೆದ ಪ್ರಶ್ನೆಗಳವಲೋಕನೆಯನ್ನು ವಿಚಾರಮತಿಗಳಾದ ವೀರಶೈವರು ವಿಚಾರಿಸಿ ವಿಶ್ವರೂಪಿಯಾದ ಪರಶಿವನ ಶಾಸನಗಳಾದ ಸಿದ್ಧಾಂತಾಚರಣೆಗಳಾದ ವರ್ಣಾಶ್ರಮ ಧರ್ಮಗಳನ್ನು ಪಾಲಿಸಿ ಪರಮೇಶ್ವರಕೃಪೆಗೆ ಪಾತ್ರರಾಗಬೇಕೆಂದು ಕೋರುತ್ತೇನೆ.

ಯತೋಧರ್ಮಸ್ತತೋ ಜಯಃ

---

# ಕ್ರಿಯಾಸಾರವೂ ಅದರ ಕಾಲನಿರ್ಣಯವೂ.

ಲೇಖಕ—ಚಂದ್ರಶೇಖರಶಾಸ್ತ್ರೀ ಹಿರೇಮಠ ಹೊಳಲು ವ್ಯಾಕರಣ ತೀರ್ಥ
ಪ್ರಿನ್ಸಿಪಾಲ ಶಂಕರಕಾಲೇಜು ಯಾದಗಿರಿ.

---

ವೀರಶೈವ ಧರ್ಮಗ್ರಂಥಗಳಲ್ಲಿ ಕ್ರಿಯಾಸಾರವು ಬಹು ಬೆಲೆಯುಳ್ಳ ಉಜ್ವಲ ರತ್ನವಾಗಿದೆ. ಈ ಗ್ರಂಥವು ವೀರಶೈವರ ಸಮಗ್ರಗಳಾದ ಆಚಾರ ವಿಚಾರಗಳನ್ನು ಬೋಧಿಸತಕ್ಕ ಉದ್ಗ್ರಂಥವಾಗಿರುತ್ತದೆ. ಆದರೆ ಈ ಗ್ರಂಥವನ್ನು ರಚಿಸಿದ ನೀಲಕಂಠ ಶಿವಾಚಾರ್ಯರೆಂಬುವ ಮಹನೀಯರು ಯಾವ ಕಾಲದಲ್ಲಿ, ಯಾವ ದೇಶದಲ್ಲಿ, ತಮ್ಮ ಪವಿತ್ರವಾದ ಜನ್ಮವನ್ನು ಧಾರಣ ಮಾಡಿದರು, ಈ ಗ್ರಂಥವನ್ನು ಯಾವ ಕಾಲದಲ್ಲಿ ರಚಿಸಿ ವೀರಶೈವರಿಗೆ ಚಿರಸ್ಮರಣೀಯರಾಗಿ ಹೋಗಿರುವರೆಂಬುವ ವಿಷಯವು ತಿಳಿಯದೆ ಇರುವದು ವೀರಶೈವರಿಗೆ ಖೇದಕರವಾದ ಸಂಗತಿಯು. ಇಷ್ಟೇ ಅಲ್ಲದೆ ಇತಿಹಾಸದ ವಿಷಯದಲ್ಲಿರತಕ್ಕ ಇವರ ಅನಾದರವನ್ನು ಚನ್ನಾಗಿ ವ್ಯಕ್ತಮಾಡುತ್ತದೆ. ಪಾಶ್ಚಿಮಾತ್ಯರು ಇತಿಹಾಸಕ್ಕೆ ಎಷ್ಟು ಬೆಲೆಯನ್ನು ಕೊಡುತ್ತಾರೆಯೋ ಪೌರ್ವಾತ್ಯರು ಅಷ್ಟು ಮಹತ್ವವನ್ನು ಕೊಡದೆ ಇರುವದರಿಂದಲೇ ಈಗ ಈತರದ ಹೊಂಚಣಿಗೀಡಾಗಬೇಕಾಗಿರುತ್ತದೆ. ಆದ್ದರಿಂದ ವೀರಶೈವರ ಅವನ್ನತಿಯಾದರೂ ಹಾಗೆಯೇ ಆಗಿರುತ್ತದೆ. ಇತಿಹಾಸವೆಂದರೆ ಹಾಳು

ಹರಟೆಗಳೆಂದು ತಿಳಿಯತಕ್ಕ ಮಹನೀಯರು ನಮ್ಮ ಸಮಾಜದಲ್ಲಿ ಇನ್ನೂ ಎಷ್ಟೋ ಜನರಿರುತ್ತಾರೆ. ಪೂರ್ವದಲ್ಲಿ ನಮ್ಮ ಸಮಾಜದಲ್ಲಾಗಿ ಹೋದ ಮಹನೀಯರೆಲ್ಲರೂ ತಮ್ಮ ಕಾಲವನ್ನು ಶಿವಾನುಭವದಲ್ಲಿಯೇ ಕಳೆದಿರು ವರಲ್ಲದೆ ಇತಿಹಾಸ, ರಾಜಕಾರಣ, ಮೊದಲಾದವುಗಳಲ್ಲಿ ಅವರು ವಿಶೇಷ ಲಕ್ಷ್ಯವನ್ನು ಕೊಡುತ್ತಿದ್ದಿಲ್ಲವೆಂದು ತಿಳಿಯುಬರುತ್ತದೆ. ಎಲ್ಲರೂ ಹೀಗೆಯೇ ಇದ್ದರೆಂಬುವದು ನನ್ನ ಅಭಿಪ್ರಾಯವಲ್ಲ. ಬಹಳ ಜನರು ಹೀಗೆಯೇ ಇದ್ದರೆನ್ನಲಿಕ್ಕೆ ಅಡ್ಡಿಯು ಇರುವದಿಲ್ಲ. ಅಂತೂ ಇವರು ಇತಿಹಾಸ ರಾಜ ಕಾರಣದಲ್ಲಿ ಹಿಂದುಳಿದವರೆನ್ನಬಹುದು. ಇರಲಿ.

ಪ್ರಕೃತದಲ್ಲಿ ಕ್ರಿಯಾಸಾರದಲ್ಲಿತಕ್ಕ ವಿಷಯಗಳೇನು, ಈ ಗ್ರಂಥ ವನ್ನು ರಚಿಸಿದ ನೀಲಕಂಠ ಶಿವಾಚಾರ್ಯರು ಎಷ್ಟು ಘನವಿದ್ವಾಂಸರಿದ್ದರು, ಇವರ ಕಾಲವು ಯಾವದು ಎಂಬುವದನ್ನು ವಿಚಾರಿಸುವದು ಮುಖ್ಯ ಉದ್ದೇಶವಿರುತ್ತದೆ. ಈ ಗ್ರಂಥದಲ್ಲಿ ೩೨ ಪರಿಚ್ಛೇದಗಳಿದ್ದು ವೀರಶೈವರ ಆಚಾರವನ್ನು ಬೋಧಿಸತಕ್ಕ ಗ್ರಂಥಗಳಲ್ಲಿಯೇ ಇದು ಬಹಳ ದೊಡ್ಡ ಗ್ರಂಥವಾಗಿರುತ್ತದೆ. ಈ ಗ್ರಂಥಕರ್ತನು ತನ್ನ ಉಪೋದ್ಘಾತ ಪ್ರಕರ ಣದಲ್ಲಿ ಗ್ರಂಥವನ್ನು ರಚಿಸುವ ಮೊದಲು ಈಶ್ವರನು ತನಗೆ ದರ್ಶನ ವನ್ನು ಕೊಟ್ಟನೆಂದು ಕೆಳಗಿನ ಶ್ಲೋಕಗಳಲ್ಲಿ ವರ್ಣಿಸಿರುತ್ತಾನೆ.

ದೇವಃ ಕೈಲಾಸನಾಥಃ ಕಲಿತಶಶಿಕಲಃ ಶರ್ವರೀಪಶ್ಚಿಮಾಂಶೇ।
ಕಾರುಣ್ಯಾಂಭೋನಿಧಿರ್ಮಾಮಶಿಶಿಷದಮಲೈಃ ಸೂಕ್ತಿವೃಂದೈರ ಮುದ್ರೈಃ॥
ಸರ್ವೇಷಾಮಾಗಮಾನಾಂ ವಚನಸಮುದಯೈಃ ಸಂಗೃಹೀತೈಃ ಪ್ರಬಂಧಂ। ಕುರ್ಯಾಸ್ತ್ವಂ ವತ್ಸ ಬುದ್ಧಿಃ ಪ್ರಸರತಿ ವಿಮಲಾ ತೇ ಕ್ರಿಯಾಸಾರನಾಮ್ನಾ॥

ಅಂದರೆ ಕೈಲಾಸವಾಸಿಯೂ, ಚಂದ್ರಕಲಾಧಾರಕನೂ, ಕಾರುಣ್ಯ ಸಾಗರನೂ, ಆದ ಶಂಕರನು ಪ್ರಾತಃಕಾಲದಲ್ಲಿ ಸ್ವಪ್ನದಲ್ಲಿ ದರ್ಶನವನ್ನು ಕೊಟ್ಟು ಅಮೃತಮಯವಾದ ಅಸ್ಖಲಿತವಾಣಿಯಿಂದ ಹೀಗೆ ಅಪ್ಪಣೆಯನ್ನು ಮಾಡಿದನು. ಏನೆಂದರೆ ಎಲೈ ಮಗನೇ (ನೀಲಕಂಠನೇ) ಎಲ್ಲ ಆಗ ಮಗಳ ಸಾರವನ್ನು ತೆಗೆದುಕೊಂಡು ಈ ಕ್ರಿಯಾಸಾರ ಎಂಬುವ ಹೆಸ ರಿನ ಗ್ರಂಥವನ್ನು ರಚಿಸು. ನಿನ್ನ ಬುದ್ಧಿಯಾದರೋ ವಿಸ್ತೃತವಾಗು ವದು.

## ಗ್ರಂಥಕಾರರ ಕಾಲವು

ಗ್ರಂಥಕಾರರಕಾಲವು ಸರಿಯಾಗಿ ನಿರ್ಣಯಮಾಡಲಿಕ್ಕೆ ಬಾರದೆ ಇದ್ದರೂ ಕೂಡ ವೀರಶೈವ ಕವಿಗಳಲ್ಲಿ ಇವರು ಪ್ರಾಚೀನ ಕಥಿಗಳಿದ್ದರೆಂದು ತಿಳಿಯಲಿಕ್ಕೆ ಹಲವು ಪ್ರಮಾಣಗಳಿರುತ್ತವೆ. ಬಸವೇಶ್ವರನ ಇತ್ತೀಚಿಗೆ ಆಗಿಹೋದ ಕವಿಗಳೆಲ್ಲರೂ ತಮ್ಮ ಗ್ರಂಥಾರಂಭದಲ್ಲಿ ಬಸವೇಶ್ವರನ ವಿಷಯುವನ್ನು ಒಂದಿಲ್ಲೊಂದು ರೀತಿಯಿಂದ ತರುವ ಕ್ರಮುವನ್ನಿಟ್ಟುಕೊಂಡಂತೆ ತಿಳಿಯಬರುತ್ತಪೆ. ಈ ಗ್ರಂಥದಲ್ಲಿ ಬಸವೇಶ್ವರನ ವಿಷಯ ಇಲ್ಲದಕಾರಣ ಈತನು ಬಸವೇಶ್ವರನಿಗಿಂತಲೂ ಪ್ರಾಚೀನನಿರಬಹುದೆಂಬುವ ಊಹೆಗೆ ಅವಕಾಶವಿರುತ್ತದೆ. ಬಸವೇಶ್ವರನ ವಿಷಯುವು ಇರಲಿ. ಅವನ ತರುವಾಯ ಆಗಿಹೋದ ಯಾವ ಕವಿಗಳ ಹೆಸರನ್ನೂ ಕೂಡ ತನ್ನ ಗ್ರಂಥದಲ್ಲಿ ಎತ್ತಿಲ್ಲ. ಅಂದಮೇಲೆ ಈತನು ಪ್ರಾಚೀನ ಕವಿಯೇ ಇರಬಹುದೆಂಬುವದು ಬಲಪಡುತ್ತದೆ

ಈ ಕ್ರಿಯಾಸಾರದಲ್ಲಿಯ ಕೆಲವು ಪ್ರಮಾಣಗಳನ್ನು "ನಿರ್ಣಯ ಸಿಂಧು" ಗ್ರಂಥಕಾರರು ತಮ್ಮಲ್ಲಿ ತೆಗೆದುಕೊಂಡಿರುತ್ತಾರೆ. ಆದರೆ ಈ ನಿರ್ಣಯಸಿಂಧು ಗ್ರಂಥವನ್ನು ರಚಿಸಿದವರೆಂದರೆ "ಕಮಲಾಕರಭಟ್ಟರು" ಇವರು ಶಿವಾಜಿಮಹಾರಾಜರ ಸಮಕಾಲದವರು ಶಿವಾಜಿಮಹಾರಾಜರ ಕಾಲದಲ್ಲಿಯೇ ಈ ಕ್ರಿಯಾಸಾರದ ಗ್ರಂಥದ ಉದಾಹರಣೆಯುನ್ನು ಪರಧರ್ಮದವರು (ಹಿಂದೂಧರ್ಮದವರೇ ಆದರೂ ಆಚಾರಭೇದವಿರುವದರಿಂದ ಹೀಗೆ ಪ್ರಯೋಗಮಾಡಿದೆ.) ತೆಗೆದುಕೊಂಡಿದ್ದರಿಂದ ಆ ಕಾಲದಲ್ಲಿಯೇ • ಈ ಗ್ರಂಥವು ಬಹಳ ಪ್ರಚಾರದಲ್ಲಿದ್ದಿತೆಂದು ಹೇಳಲು ಅಭ್ಯಂತರವಿಲ್ಲವು. ಇದರಿಂದ ತಿಳಿಯುವದೇನಂದರೆ ಶಿವಾಜಿಮಹಾರಾಜರಿಗಿಂತಲೂ ಎಷ್ಟೋ ಶತಮಾನಗಳಹಿಂದೆ ಈ ಗ್ರಂಥವು ಇದ್ದಿತೆಂದು ಹೇಳಬಹುದಾಗಿದೆ. ನಿರ್ಣಯಸಿಂಧು ಗ್ರಂಥವನ್ನು ರಚಿಸಿದ ಕಮಲಾಕರ ಭಟ್ಟರ ಮೊಮ್ಮಕ್ಕಳಾದ "ನಾಗಾಭಟ್ಟರು" ಶಿವಾಜಿಮಹಾರಾಜರ ಅಭಿಷೇಕಮಾಡಿದ್ದು ಪ್ರಸಿದ್ಧವಿರುತ್ತದೆ.

"ಶಾರದಾತಿಲಕ" ನೇಪಾಲದ ಪ್ರತಾಪಸಿಂಗಶಾಹ ಇವರಿಂದ ರಚಿತವಾದ "ಪುರಶ್ಚರ್ಯಾರ್ಣವ" ಮತ್ತು ೧೯೭೮ ನೆಯ ಇಸ್ವಿಯಲ್ಲಿ ಶ್ರೀಬಾಬುಚೇಜುಸಿಂಹ ಇವರಿಂದ ಕಲ್ಕತ್ತೆಯಲ್ಲಿ ಪ್ರಿಂಟುಮಾಡಲ್ಪಟ್ಟು ಪ್ರಸಿದ್ಧಿ

ರುವ "ನಿರ್ವಾಲ್ಯರತ್ನಾಕರ" ಇವೇ ಮೊದಲಾದ ಗ್ರಂಥಗಳಲ್ಲಿ ಕ್ರಿಯಾಸಾರದ ಉದಾಹರಣೆಯನ್ನು ತೆಗೆದುಕೊಂಡಿರುವದರಿಂದಲೂ ಈ ಗ್ರಂಥಕಾರರು ಪ್ರಾಚೀನರೆಂಬುವದಕ್ಕೆ ಸಂಶಯವಿಲ್ಲವು.

ವೀರಶೈವ ಗ್ರಂಥಕಾರರಲ್ಲಿ ಪ್ರಸಿದ್ಧರಾದ ಗುಬ್ಬಿಯ ಮಲ್ಲಣಾರ್ಯರು ತಮ್ಮ ವೀರಶೈವಾಮೃತ ಮಹಾ ಪುರಾಣದಲ್ಲಿ ಕ್ರಿಯಾಸಾರ ಗ್ರಂಥದ ಅನೇಕ ಪ್ರಮಾಣಗಳನ್ನು ಅಲ್ಲಲ್ಲಿ ಕೊಟ್ಟಿರುತ್ತಾರೆ. ಮಲ್ಲಣಾರ್ಯರೇ ತಮ ವೀರಶೈವಾಮೃತ ಮಹಾಪುರಾಣವು ೧೪೫೨ ನೇಯ ಶಾಲಿವಾಹನ ಶಕೆಯಲ್ಲಿ ಮುಗಿದಿರುತ್ತದೆಂದು ಬರೆದಿರುತ್ತಾರೆ. ಅಂದರೆ ಈಗ ನಡೆಯುವ ಸಂವತ್ಸರಕ್ಕೆ ಲೆಖ್ಖಮಾಡಿ ನೋಡಿದರೆ ಸರಿಯಾಗಿ ನಾಲ್ಕು ನೂರು ವರ್ಷಗಳಾಗುತ್ತವೆ. ಮಲ್ಲಣಾರ್ಯರ ಕಾಲವೇ ನಾಲ್ಕು ನೂರು ವರ್ಷಗಳಾದ ಮೇಲೆ ಕ್ರಿಯಾಸಾರಕಾರರು ಇವರಿಗಿಂತಲೂ ಮೊದಲಿನವರಾಗಿರಬಹುದಲ್ಲವೆ? ಯಾಕಂದರೆ ಪ್ರಮಾಣಗಳನ್ನು ತೆಗೆದುಕೊಳ್ಳಬೇಕಾದರೆ ತಮಗಿಂತಲೂ ಪ್ರಾಚೀನರೂ, ಮಾನ್ಯರೂ ಆದವರ ಗ್ರಂಥಗಳಿಂದಲೇ ತೆಗೆದುಕೊಳ್ಳಬೇಕಾಗುತ್ತದೆಂಬುವದನ್ನು ಹೇಳುವದೇ ಬೇಡ.

ಕರ್ನಾಟಕ ಕವಿಚರಿತ್ರೆಕಾರರೂ ಕರ್ನಾಟಕ ಇತಿಹಾಸ ಶೋಧನದಲ್ಲಿ ವೃದ್ಧಪಿತಾಮಹರೂ ಆದ ಶ್ರೀ ನರಸಿಂಹಾಚಾರ್ಯರು. ಎಮ್. ಎ ಇವರು ತಮ್ಮ ಕವಿಚರಿತ್ರೆಯಲ್ಲಿ ನೀಲಕಂಠ ಶಿವಾಚಾರ್ಯರ ಕಾಲವು ಸು ಮಾರು ೧೪೦೦ ಇಸ್ವಿ ಎಂದು ಬರೆದಿರುತ್ತಾರೆ. "ನೀಲಕಂಠ ಶಿವಾಚಾರ್ಯ ಬರೆದಿರುವ ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ ಕ್ರಿಯಾಸಾರವೆಂಬುವ ಸಂಸ್ಕೃತ ಗ್ರಂಥದ ೧೯ನೇಯ ಉಪದೇಶದ ಕೊನೆಯಲ್ಲಿ

"ಅಧ್ವನಾಮಧ್ವಪತೇ ಶ್ರೇಷ್ಠಸ್ಯಾಧ್ವನಃ ಪಾರಮಶೀವೇತಿ ಮಂತ್ರೇಣ ಕೃತಕಲಾಸನ್ನಿಧಾನಸ್ಯ ಲಿಂಗಸ್ಯ ದೀಕ್ಷಾಪೂರ್ವಕ ಧಾರಣಂ ಇತ್ಯಾಗಮಪ್ರಕಾರೇ ಭಾಷಾಪ್ರಬಂಧೇಽಸ್ಮತ್ಕೃತೇಽವ ಲೋಕನಿಯಃ"

ಎಂದು ಬರೆದಿರುವದರಿಂದ ಈ ಕ್ರಿಯಾಸಾರ ಗ್ರಂಥಕರ್ತರಾದ ನೀಲಕಂಠ ಶಿವಾಚಾರ್ಯರು ಕನ್ನಡದಲ್ಲಿಯೂ ಭಾಷಾಪ್ರಬಂಧವೆಂಬುವ ಗ್ರಂಥವನ್ನು ಬರೆದಿರುತ್ತಾರೆಂದು ತಿಳಿಯುತ್ತದೆ. ಮಲ್ಲಣಾರ್ಯನು ತನ್ನ ವೀರಶೈವಾಮೃತ ಪುರಾಣದಲ್ಲಿ (೧೫೩೦) ಈತನ ಕ್ರಿಯಾಸಾರದಿಂದ ಅನುವಾ

ಸುಮಾರು (೧೪೦೦) ರಲ್ಲಿದ್ದಿರಬಹುದೆಂದು ಊಹಿಸುತ್ತೇನೆ" ಎಂದು ಬರೆ ದಿರುತ್ತಾರೆ. ಕವಿಚರಿತ್ರೆಕಾರರಂತೆ ನೋಡಿದರೆ ಈ ಕ್ರಿಯಾಸಾರ ಗ್ರಂಥ ಕರ್ತನು ಇಂದಿಗೆ ೫೦೦ ವರ್ಷಗಳ ಹಿಂದೆ ಇದ್ದನೆಂದು ಸಿದ್ಧನಾಗುವದು.

ಮೇಲೆ ಹೇಳಿದ ಸಾಧಕ ಬಾಧಕಗಳನ್ನು ಒಟ್ಟಿನ ಮೇಲೆ ವಿಚಾರ ಮಾಡಿ ನೋಡಿದರೆ ನೀಲಕಂಠ ಶಿವಾಚಾರ್ಯರು ಬಸವೇಶ್ವರನಿಗಿಂತಲೂ ಪ್ರಾಚೀನ ಕವಿಗಳೆಂದೇ ಸಿದ್ಧವಾಗುತ್ತದೆ.

## ಕವಿಯ ಯೋಗ್ಯತೆಯು.

ನೀಲಕಂಠ ಶಿವಾಚಾರ್ಯರು ಅದ್ವಿತೀಯ ವಿದ್ವಾಂಸರಿದ್ದರೆಂಬುವದು ಅವರ ಗ್ರಂಥದ ಯೋಗ್ಯತೆಯಿಂದಲೇ ತಿಳಿಯಬರುತ್ತದೆ. ಈ ಗ್ರಂಥದ ಲ್ಲಿಯ ಮೊದಲನೆಯ ೩-೪ ಪರಿಚ್ಛೇದಗಳಂತೂ ಕೇವಲ ವ್ಯಾಸಸೂತ್ರಕ್ಕೆ ವ್ಯಾಖ್ಯಾನ ರೂಪದಿಂದಿರುತ್ತವೆ. ಅಂದಮೇಲೆ ನ್ಯಾಯ, ಮತ್ತು ವೇ ದಾಂತ ಶಾಸ್ತ್ರಗಳಲ್ಲಿ ಇವರು ಪಾರಂಗತರಿದ್ದರೆಂಬುವದು ಅಲ್ಲಲ್ಲಿಯ ಅವರ ಶ್ಲೋಕಗಳಿಂದಲೇ ತಿಳಿಯಬರುತ್ತದೆ. ನ್ಯಾಯಃಶಾಸ್ತ್ರ, ಮತ್ತು ವೇದಾಂ ತದ ಪಾಂಡಿತ್ಯದಿಂದಲೇ ಈ ಗ್ರಂಥದ ರಚನೆಯಾಗಿರುವದೆಂದು ಮೇಲೆ ಬರದಿರುತ್ತೇವಷ್ಟೆ. ನ್ಯಾಯ, ವೇದಾಂತಗಳಲ್ಲಿ ಪ್ರವೀಣರಿದ್ದಂತೆ ಇವರು ಸಂಸ್ಕೃತ ಸಾಹಿತ್ಯಾಲಂಕಾರಗಳಲ್ಲಿ ಧುರೀಣರಿದ್ದರೆಂಬುವದು ಇವರ ಒಂದೆ ರಡು ಶ್ಲೋಕಗಳನ್ನು ನೋಡೋಣದರಿಂದ ತಿಳಿಯಬರುತ್ತದೆ. ಹೇಗೆಂದರೆ

ಲಿಂಗಾಂಗೀ ಮನುಜೋ ಭವೇದ್ಯದಿ ಪುನರ್ನಾಂಗೀಯದ್ವೈವಾಂಗಭಾಕ್
ಸಾರಂಗೀ ಪದಸಂಗಿಪಾಣಿಕಮಲೊನಂಗೀಕೃತಾನಂಗಧೃತ್ ।
ಅಂಗಾಸಂಗಿಭುಜಂಗಭೂಷಣವರೋ ಗಂಗಾತರಂಗಾವಳೀ ।
ರಾಜತ್ರ್ಯಕುರಂಗಲಿಂಗಶಕಲೊತ್ತಂಸೋತ್ತಮಾಂಗೋಭವೇತ್ ॥

ಈ ಶ್ಲೋಕದ ರಚನೆಯನ್ನು ನೋಡಿದರೆ ಎಷ್ಟು ಮನೋಹರವಾ ಗಿದೆ ಎಂಬುವದನ್ನು ಸಂಸ್ಕೃತ ಸಾಹಿತ್ಯದ ಮಾಧುರ್ಯ ಝುರಿಯನ್ನು ಬಲ್ಲ ವರಿಗೆ ಹೇಳುವದೇ ಬೇಡ.

ಮೇಲೆ ಬರೆದ ಶ್ಲೋಕವನ್ನು ಓದಿದರೆ ಸಾಹಿತ್ಯದರ್ಪಣಕಾರರಾದ ವಿಶ್ವನಾಥ ಕವಿಗಳು ತಮ್ಮ ಸಾಹಿತ್ಯದರ್ಪಣದ ಎಂಟನೆಯ ಪರಿಚ್ಛೇದ ದಲ್ಲಿ ಹೇಳಿದ ಕೆಳಗಿನ ಶ್ಲೋಕವು ನೆನಪಿಗೆಬರುತ್ತದೆ.

ಲತಾಕುಂಜಂ ಗುಂಜನ್ಮದ ವದಲಿಪುಂಜಂ ಚಪಲಯನ್ ಸಮಾಲಿಂಗನ್ನಂಗಂ ದೃತತರಮನಂಗಂ ಪ್ರಬಲಯನ್। ಮರುನ್ಮಂದಂ ಮಂದಂ ದಲಿತಮರವಿಂದಂ ತರಲಯನ್ ರಜೋವೃಂದಂವಿಂದನ್ ಕಿರತಿ ಮಕರಂದಂ ದಿಶಿ ದಿಶಿ ॥

ಸಾಹಿತ್ಯದರ್ಪಣಕಾರರು ಈ ಶ್ಲೋಕವನ್ನು ಮಾಧುರ್ಯವನ್ನು ತೋರಿಸುವದರ ಸಲುವಾಗಿ ಕೊಟ್ಟಿರುತ್ತಾರೆ. ನೀಲಕಂಠ ಶಿವಾಚಾರ್ಯರ ಮೇಲಿನ ಶ್ಲೋಕವಾದರೂ ವಿಶ್ವನಾಥ ಕವಿಗಳ ಕವಿತೆಗಿಂತಲೂ ಒಂದೆರಡುಗುಂಜಿತೂಕ ಮುಂದೆ ಇರುತ್ತದೆಂದು ತೋರಿಸುವದೇ ನಮ್ಮ ಉದ್ದೇಶವು. ಈ ಶ್ಲೋಕಗಳ ತುಲನಾತ್ಮಕವನ್ನು ನೋಡಿ ಸಂಸ್ಕೃತವನ್ನರಿಯದ ತಿಳಿಗನ್ನಡದ ನಮ್ಮ ಶಿವಾನುಭವದ ವಾಚಕರು ಸ್ವಲ್ಪ ಬೇಸರಗೊಳ್ಳಬಹುದು ಕವಿಯ ನಿಜವಾದ ಯೋಗ್ಯತೆಯನ್ನು ತಿಳಿಯಬೇಕಾದರೆ ಆತನಿಂದ ರಚಿಸಲ್ಪಟ್ಟ ವಿಷಯಗಳ ವಿವೇಚನೆಯನ್ನು ಮಾಡದೆ ತಿಳಿಯುವದು ಹೇಗೆ ಎಂಬುವದನ್ನು ಬುದ್ಧಿಶಾಲಿಗಳಾದ ವಾಚಕರೇ ಊಹಿಸಲಿ. ಮತ್ತು ವೀರಶೈವ ಸಮಾಜದ ಸಂಸ್ಕೃತ ಸಾಹಿತ್ಯಸಾಗರದಲ್ಲಿ ಎಂಥೆಂಥ ಉಜ್ವಲ ರತ್ನಗಳು ಜನಿಸಿ ಬಯಲಾಗಿ ಹೋಗಿವೆಯೆಂದು ತೋರಿಸುವದೂ ನನ್ನ ಲೇಖದ ಉದ್ದೇಶವಿರುತ್ತದೆ.

ಕ್ರಿಯಾಸಾರಗ್ರಂಥಕಾರರು ತಾವು ಸ್ವತಂತ್ರವಾಗಿ ಈ ಗ್ರಂಥವನ್ನು ಬರೆಯದೆ ನೀಲಕಂಠ ಭಾಷ್ಯೆಯನ್ನೇ ಕಾರಿಕ (ಶ್ಲೋಕ) ರೂಪವಾಗಿ ಈ ಕ್ರಿಯಾಸಾರ ಎಂಬುವ ಗ್ರಂಥವನ್ನು ಮಾಡಿರುತ್ತೇವೆಂದು ಕೆಳಗಿನ ಶ್ಲೋಕಗಳಿಂದ ತಿಳಿಸುತ್ತಾರೆ.

ನೀಲಕಂಠಶಿವಾಚಾರ್ಯನಾಮ್ನಾ ಭಾಷ್ಯಮುಚೀಕರತ್ ।
ವಿಶಿಷ್ಟಾದ್ವೈತಸಿದ್ಧಾಂತಂ ಪ್ರತಿಪಾದನಮುತ್ತಮಂ ॥
ಮಯಾಪಿ ತಸ್ಯ ತಾತ್ಪರ್ಯಂ ಶ್ರೋತೄಣಾಂ ಸುಖಬುದ್ಧಯೇ
ಕಾರಿಕಾರೂಪತಃ ಸರ್ವಕ್ರಮೇಣೈವ ನಿಬಧ್ಯತೆ ॥

ಅಂದರೆ:--ನೀಲಕಂಠ ಶಿವಾಚಾರ್ಯರೆಂಬುವರು ಉತ್ತಮರೀತಿಯಿಂದ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪ್ರತಿಪಾದಿಸಿರುವ ನೀಲಕಂಠಭಾಷ್ಯವನ್ನೇ ನಾನು ಶ್ಲೋಕರೂಪದಿಂದ ಜನರಿಗೆ ಸುಖಕರವಾಗಿ ತಿಳಿಯುವದಕ್ಕೋಸ್ಕರ ರಚಿಸುತ್ತೇನೆಂದು ಹೇಳಿರುತ್ತಾರೆ.

## ತಾತ್ಪರ್ಯವು

ಈ ಗ್ರಂಥವು ವೀರಶೈವರ ಆಚಾರಬೋಧಕಗಳಾದ ಗ್ರಂಥಗಳಲ್ಲಿ ಬಹಳ ದೊಡ್ಡದಾಗಿರುತ್ತದೆ. ಇಂತಹ ಗ್ರಂಥದ ಕನ್ನಡಟೀಕೆಯನ್ನು ಮಾಡಿದರೆ ಸಂಸ್ಕೃತವನ್ನರಿಯದ ವೀರಶೈವರಿಗೆ ಬಹಳ ಉಪಕಾರವಾಗುವಂತಿರುತ್ತದೆ. ಆದ್ದರಿಂದ ಇದನ್ನು ಕನ್ನಡದಲ್ಲಿ ಪರಿವರ್ತಿಸಬೇಕೆಂದು ನಾನು ಮಾಡಿರುತ್ತೇನೆ. ಈ ಕಾರ್ಯವು ಸಾವಕಾಶವಾಗಿ ಆಗತಕ್ಕದ್ದಾಗಿದೆ. ಸಾಧಾರಣವಾಗಿ ಈ ಗ್ರಂಥವು ಡೆಮ್ಮಿ ಒಂದೆಂಟರ ಸೈಜಿನಲ್ಲಿ ೫೦೦—೬೦೦ ಪುಟ ಆಗಬಹುದು.

---

ಕ್ರಿಯಾಸಾರವೆಂಬ ಹೆಸರಿನ ಗ್ರಂಥವು ಒಂದೇ ಇರದೆ ಒಂದಕ್ಕಿಂತ ಹೆಚ್ಚಾಗಿರುವವು ಈಗ ದೊರೆತ ಆಧಾರಗಳಿಂದ ಎರಡಾದರೂ ಆ ಹೆಸರಿನ ಗ್ರಂಥಗಳಿವೆ ಎಂದು ಕಂಡುಬಂದಿದೆ. ಒಂದು ನೀಲಕಂಠ ಶಿವಚಾರ್ಯಕೃತವು ಪ್ರಿಂಟಾಗಿದೆ. ಇದೇ ಗ್ರಂಥವನ್ನುದ್ದೇಶಿಸಿ ಶಾಸ್ತ್ರಿಗಳವರು ಲೇಖವನ್ನು ಬರೆದಿದ್ದಾರೆ. ಇನ್ನೊಂದು ನೇಪಾಳದ ಮಹಾರಾಜರ ಪುಸ್ತಕಾಲಯದಲ್ಲಿ ಹಸ್ತಪ್ರತಿಯಲ್ಲಿಯೇ ಆದೆ. ಇನ್ನೂ ಅಚ್ಚು ಹಾಕಿಸಿಲ್ಲ. ಇದು ಬಲು ಹಳೆಯಗ್ರಂಥ ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಯವರು ಇದರ ಬಗ್ಗೆ ಟಿಪ್ಪಣಿಯನ್ನು ತಾವು ಬರೆದ “ನೇಪಾಳ ದರಬಾರದ ಪುಸ್ತಕಾಲಯದಲ್ಲಿರುವ ಹಸ್ತಪ್ರತಿಗಳ ಟಿಪ್ಪಣಿ” ಯೆಂಬ ಪುಸ್ತಕದಲ್ಲಿ ಬರೆದಿದ್ದಾರೆ. “ನಿರ್ಮಾಲ್ಯ ರತ್ನಾಕರ” ದಲ್ಲಾಗಲೀ “ಪುರಶ್ಚರ್ಯಾರ್ಣವ”ವದಲ್ಲಾಗಲೀ ಕಮಲಾಕರ ಭಟ್ಟರ “ನಿರ್ಣಯ ಸಿಂಧು” ವಿನಲ್ಲಾಗಲೀ ತಕ್ಕೊಂಡ ಉದಾಹರಣೆಗಳು ನೀಲಕಂಠಾಚಾರ್ಯರ ಕ್ರಿಯಾಸಾರದಿಂದಲೇ ಎಂಬುದು ಸಿದ್ಧಮಾಡಲ್ಪಡಬೇಕಾಗಿದೆ. ಗುಬ್ಬಿಯ ಮಲ್ಲಣಾರ್ಯರ ಗ್ರಂಥದೊಳಗಿನ ಉದಾಹರಣೆಗಳಿಗೂ ಇದು ಅನ್ವಯಿಸುವುದು. ನೀಲಕಂಠ ಶಿವಾಚಾರ್ಯರು ತಾವು ೩೨ ಉಪದೇಶಗಳುಳ್ಳ ಗ್ರಂಥವನ್ನು ಬರೆದಿರುವುದಾಗಿ ಉಪೋದ್ಘಾತದಲ್ಲಿ ಹೇಳಿರುವರು. ಆದರೆ ಈಗ ಅಚ್ಚಾಗಿರುವ ಗ್ರಂಥದಲ್ಲಿ ಉಪೋದ್ಘಾತವನ್ನು ಬಿಟ್ಟು ೩೧ ಉಪದೇಶಗಳಿವೆ. ನೀಲಕಂಠ ಶಿವಾಚಾರ್ಯರ ತಾಯಿ ತಂದೆಗಳ ಹೆಸರನ್ನೂ, ಅವರ ವಿಶಿಷ್ಟಾ

ದ್ವೈತವಾದ ವಿವರಣೆಯನ್ನೂ ನೋಡಿದರೆ ಅವರು ಬಸವೇಶ್ವರನಿಗಿಂತ ಮುಂಚಿನವರಾಗಲಾರರು. ನೀಲಕಂಠ ಭಾಷ್ಯದ ಕಾರಿಕಾರೂಪವಾದ ಕ್ರಿಯಾಸಾರವನ್ನು ಬರೆಯಲು ಯಾವ ಕಾರಣವನ್ನು ನೀಲಕಂಠ ಶಿವಾಚಾರ್ಯರು ಹೇಳಿರುವರೋ ಅದೇ ಕಾರಣವನ್ನೇ ಅಪ್ಪಯ್ಯ ದೀಕ್ಷಿತರು ತಾವು ನೀಲಕಂಠರ ಬ್ರಹ್ಮಮೀಮಾಂಸೆಯ ವ್ಯಾಖ್ಯೆಯ ಪ್ರಸ್ತಾವನೆಯಲ್ಲಿ ಹೇಳಿರುವರು. ಕ್ರಿಯಾಸಾರದ ಕನ್ನಡ ಅನುವಾದವನ್ನು ಮಾಡಲು ಶಾಸ್ತ್ರಿಗಳು ಕೈಕೊಂಡುದು ಒಳ್ಳೇ ಶ್ಲಾಘನೀಯವು ಅದನ್ನು ಅವರು ತೀವ್ರವಾಗಿಯೂ ತೃಪ್ತಿಕರವಾಗಿಯೂ ನೆರವೇರಿಸುವರೆಂದು ನಮ್ಮ ಆಸೆ. **ಸಂಪಾದಕರು.**

# ಐತಿಹಾಸಿಕ ಶೋಧಕರಿಗೊಂದು ಸೂಚನೆಯು.

(ಶ್ರೀಯುತ ಹಲಸಂಗೀ ಚನ್ನಮಲ್ಲಪ್ಪನವರ ತಪ್ಪು ವಿಚಾರಗಳು.)

**ಲೇಖಕಃ—ಜೋತಿಷ್ಯಾಲಂಕಾರ ವೇ. ಬ್ರ. ಶ್ರೀ. ಸಿದ್ಧಾಂತಿ ಶಿವಬಸವ ಶಾಸ್ತ್ರಿಗಳು ಹೂಲಿಬ್ರಹನ್ಮಠ.**

---

ಐತಿಹಾಸಿಕ ತತ್ವಗಳನ್ನು ಶೋಧನ ಮಾಡಬೇಕಾದರೆ ಶಿಲಾಲಿಪಿಗಳೂ ತಾಮ್ರಶಾಸನಗಳೂ ಪ್ರಾಚೀನ ಗ್ರಂಥಗಳೂ (ಚರಿತ್ರ ಮತ್ತು ಧರ್ಮಗ್ರಂಥ ಮೊದಲಾದವುಗಳು) ಸಾಧನಗಳಾದಂತೆ ಪ್ರಾಚೀನ ದೇವಾಲಯಗಳೂ ದೇವತಾ ಮೂರ್ತಿಗಳೂ ಸಾಧನಗಳಾಗುತ್ತವೆಂದು. ಇತ್ತೀಚಿನ ಕೆಲವು ಐತಿಹಾಸಿಕ ಶೋಧಕರು ಅಭಿಪ್ರಾಯಪಡುತ್ತಾರೆ ಆದರೆ ಈತರದ ಸಾಧನಗಳಿಂದ ಐತಿಹಾಸಿಕ ತತ್ವಗಳನ್ನು ಕಂಡುಹಿಡಿಯುವದು ಸುಲಭಸಾಧ್ಯವಲ್ಲೆಂಬುವದು ಸರ್ವರಿಗೂ ತಿಳಿದ ಸಂಗತಿಯಾಗಿರುವದು. ಸತ್ತ ಮನುಷ್ಯನ ಎಲುವುಗಳನ್ನು ನೋಡಿ ಈವನು ಎಷ್ಟು ವರ್ಷಗಳ ಪೂರ್ವದವನು ಮತ್ತು ಎಂಥ ಜಾತಿಯವನು ಎಂದು ಕಂಡುಹಿಡಿಯುವದು. ಹ್ಯಾಗೆ ಸುಲಭ ಸಾಧ್ಯವಲ್ಲವೋ ಅದರಂತೆ ದೇವಾಲಯಗಳಿಂದಲೂ, ದೇವತಾ ಮೂರ್ತಿಗಳಿಂದಲೂ ಅವಗಳ ಪ್ರಾಚೀನತೆ ಮತ್ತು ಸಂಸ್ಥಾಪಕರ ಜಾತಿ ಶೀಲಾದಿಗಳನ್ನು ಕಂಡುಹಿಡಿಯುವದು. ಸುಲಭ ಸಾಧ್ಯವಲ್ಲ ವೈಜ್ಞಾ

ನಿಕ ದೃಷ್ಟಿಯಿಂದ ಎಲುವುಗಳನ್ನು ಪರೀಕ್ಷಿಸಿದಂತೆ ಪ್ರಾಚೀನ ಕಲ್ಲುಗಳನ್ನೂ, ಮೂರ್ತಿಗಳನ್ನೂ ಪರೀಕ್ಷಿಸುವದು. ಸಂಶಯಾಸ್ಪದವೆಂದು ಹೇಳಬಹುದು. ಒಂದು ಕಾಲದ ಮೂರ್ತಿಗಳಂತೆ ಮತ್ತೊಂದು ಕಾಲದಲ್ಲಿ ನಿರ್ಮಾಣ ಮಾಡಲಿಕ್ಕೆ ಬರುವದು ಆ ಮೂರ್ತಿಗಳನ್ನು ಹಳೇ ಕಲ್ಲುಗಳಿಂದಲೂ ಹೊಸ ಕಲ್ಲುಗಳಿಂದಲೂ ನಿರ್ಮಾಣಮಾಡಬಹುದು ಅಂದಮೇಲೆ ಮೂರ್ತಿಗಳ ಮೇಲಿಂದ (ಇದಮಿತ್ಥಂ) ಎಂದು ಯಾವನೂ ಹೇಳಲಾರನು. ಪ್ರಾಚೀನ ಎಲವುಗಳನ್ನು ಪರಿವರ್ತನ ಮಾಡಲಿಕ್ಕೆ ಬರುವದಿಲ್ಲಾದ್ದರಿಂದ ಅದರಿಂದ ಆ ಮನುಷ್ಯನ ಸಂಬಂಧವಾಗಿ ಐತಿಹಾಸಿಕ ಕೆಲವು ವಿಷಯಗಳು ಮಾತ್ರ ಗೊತ್ತಾಗಬಹುದು.

ಅದರಂತೆ ಬೇಕಾದ ಕಾಲಕ್ಕೆ ಬೇಕಾದ ರೀತಿಯಿಂದ ಪರಿವರ್ತನ ಮಾಡಲಿಕ್ಕೆ ಬರುವ ಮೂರ್ತಿಗಳಿಂದ ಅವುಗಳ ಐತಿಹಾಸಿಕ ವಿಷಯಗಳು ಗೊತ್ತಾಗಲಾರವು. ಆ ಮೂರ್ತಿಗಳ ಸಂಬಂಧೀ ಶಿಲಾಲೇಖವಿದ್ದರೆ, ಮಾತ್ರ ಅವುಗಳ ಪ್ರಾಚೀನತೆ ಮತ್ತು ಸ್ಥಾಪಕರ ಜಾತಿ ಶೀಲಾದಿಗಳನ್ನು ಕಂಡು ಹಿಡಿಯಲಿಕ್ಕೆ ಅನುಕೂಲವಾಗುವದು.

ಇತ್ತೀಚಿಗೆ ನಮ್ಮ ಕರ್ನಾಟಕದಲ್ಲಿ ಕೆಲವು ಇತಿಹಾಸ ಶೋಧಕರು ಇದೇ ರೀತಿಯಿಂದ ಒಳ್ಳೇ ಪರಿಶ್ರಮಪಟ್ಟು ಪ್ರಾಚೀನ ಐತಿಹಾಸಿಕತತ್ವಗಳನ್ನು ಕಂಡುಹಿಡಿಯಲು ಸಾಹಸಪಡುತ್ತಿರುವರು. ಇದು ಅತ್ಯಂತ ಸಂತೋಷದ ಸಂಗತಿಯಾಗಿದೆ; ಇಂಥ ಶೋಧಕರಲ್ಲಿ ನಮ್ಮ ವ್ಯವಸಾಯ ಬಂಧುಗಳಾದ ಹಲಸಂಗೀ ಚನ್ನಮಲ್ಲಪ್ಪನವರು ಒಬ್ಬರಾಗಿರುವರು. ಇವರ ಶೋಧನವು ಉತ್ತಮವಿದ್ದರೂ "ಗಚ್ಛನ್ನಪಿ ಸ್ಖಲತ್ಯೇವ" ಅಂದರೆ ಓಡುವವನು ಎಡವುತಕ್ಕವನೇ,, ಎಂಬ ಗಾದೆಯಂತೆ ಇವರ ಶೋಧನ ಕಾರ್ಯದಲ್ಲಿ ಕೆಲವು ತಪ್ಪು ವಿಚಾರಗಳು ತಲೆದೋರುತ್ತಿರುವವು. ಆದರೆ ಯಾವನು ತನ್ನ ತಪ್ಪುವಿಚಾರಗಳನ್ನು ತಿದ್ದಿ ಸರಿಮಾಡಿಕೊಳ್ಳುತ್ತಾನೋ ಅವನೇ ಕರ್ತವ್ಯಶಾಲಿಯು ಆದ್ದರಿಂದ ಚನ್ನಮಲ್ಲಪ್ಪನವರು ತಮ್ಮ ತಪ್ಪುವಿಚಾರಗಳನ್ನು ತಿದ್ದಿಕೊಂಡು ತಾವು ಹಿಡಿದ ಕಾರ್ಯದಲ್ಲಿ ಯಶಸ್ವಿಗಳಾಗಲೆಂದೂ ಉಳಿದ ಶೋಧಕರಾದರೂ ತಮ್ಮ ತಪ್ಪು ವಿಚಾರಗಳನ್ನು ನಿರಭಿಮಾನದಿಂದ ಸರಿಮಾಡಿಕೊಳ್ಳಲೆಂದೂ ಈ ಲೇಖವನ್ನು ಪ್ರಕಟಿಸಿದ್ದೇವೆ; ಶೋಧಕರು ಇತ್ತ ಕಡೆಗೆ ಲಕ್ಷಕೊಡುವರೆಂದು ಪೂರ್ಣ ನಂಬಿಗೆಯುಂಟು.

ಚನ್ನಮಲ್ಲಪ್ಪನವರು ಹಿಂದೆ ಜಯಕರ್ನಾಟಕದ ಇದೇ ವರ್ಷದ ನಾಲ್ಕನೇ ಸಂಚಿಕೆಯಲ್ಲಿ "ಲಿಂಗ" ವೆಂಬ ವಿಷಯದ ಮೇಲೆ ಒಂದು ಲೇಖವನ್ನು ಪ್ರಸಿದ್ಧ ಮಾಡಿದ್ಧರು. ಅದರಲ್ಲಿ ಅವರು "ಲಿಂಗಗಳು ಪ್ರಾಚೀನ ಕಾಲದಲ್ಲಿ ಪೀಠವಿಲ್ಲದೆ ಇದ್ದವೆಂದೂ" ಹಿಂದಿನಿಂದ ಪೀಠವನ್ನು ಜೋಡಿಸಿದರೆಂದೂ, ಲಿಂಗವೆಂದರೆ ಮಾನವ ಲಿಂಗಾಕೃತಿಯಾಗಿದ್ದಿತೆಂದೂ,, ತಮ್ಮ ಕಲ್ಪನೆಯೊಂದನ್ನೇ ಆಧಾರವಾಗಿಟ್ಟುಕೊಂಡು ಬರೆದಿದ್ದರು ಇದು ತಪ್ಪು ವಿಚಾರವು. ಪ್ರಾಚೀನ ಕಾಲದಿಂದ ದೇವಾಲಯಗಳನ್ನಾಗಲೀ ದೇವತಾಮೂರ್ತಿಗಳನ್ನಾಗಲೀ ಶಿವಾಗಮಗಳ ಆಧಾರದ ಮೇಲಿಂದಲೇ ನಿರ್ಮಾಣ ಮಾಡುತ್ತಿದ್ದರೆಂಬುವದು. ಸಮಸ್ತ ಪಂಡಿತರಿಗೆ ಗೊತ್ತಿದ್ದ ವಿಷಯವು. ಶಿವಾಗಮಗಳಲ್ಲಿ ಲಿಂಗಮೂರ್ತಿಯನ್ನು ನಿರ್ಮಾಣಮಾಡುವ ವಿಧಾನವು ಅನೇಕ ಪ್ರಕಾರವಾಗಿ ಹೇಳಲ್ಪಟ್ಟಿರುವದು. ಆದರೆ ಯಾವ ವಿಧಾನವಿದ್ದರೂ ಪೀಠ ಸಹಿತವಾಗಿಯೇ ನಿರ್ಮಾಣಮಾಡಬೇಕೆಂದು ಉಕ್ತವಾಗಿರುವದು ಸದ್ಯದ ಕಾಲದಲ್ಲಾದರೂ ಕೂಡ ಶಿವಾಗಮಗಳ ಆಧಾರವನ್ನು ಮುಖ್ಯವಾಗಿಟ್ಟುಕೊಂಡೇ ದೇವಾಲಯಗಳನ್ನೂ ದೇವತಾಮೂರ್ತಿಗಳನ್ನೂ ನಿರ್ಮಾಣ ಮಾಡುತ್ತಿರುವರು. ಇದು ಕೇವಲ ವೀರಶೈವ ವಿಷಯಕವಲ್ಲ; ಆದರೆ ಮೂರ್ತಿ ಪೂಜಕರಾದ ಪ್ರತಿಯೊಂದು ಮತದವರು. ಆಚರಿಸತಕ್ಕದ್ದಾಗಿದೆ. ಪೂರ್ವದವರಾದರೂ ಅದರಂತೆ ಆಚರಿಸುತ್ತ ಬಂದರು. ಗುರ್ಲಹೊಸೂರು ಶ್ರೀ ಚಿದಂಬರಸ್ವಾಮಿಗಳ ದೇವಾಲಯವನ್ನೂ ಲಿಂಗಮೂರ್ತಿಯನ್ನು ಸ್ಥಾಪನಮಾಡಬೇಕಾದರೆ ಅವರ ಚಿರಂಜೀವರು ಶಿವಾಗಮಗಳ ಆಧಾರದಿಂದಲೇ ನಿರ್ಮಾಣಮಾಡಿರುವರು. ಒಟ್ಟಿಗೆ ಯಾವಕಾಲದಲ್ಲಿಯಾದರೂ ಲಿಂಗಮೂರ್ತಿಗಳು ಪೀಠಸಹಿತವಾಗಿಯೇ ಸ್ಥಾಪಿಸಲ್ಪಡುತ್ತಿದ್ದವೆಂದು ಹೇಳಲು ಏನೂ ಅಭ್ಯಂತರವಿಲ್ಲ; ಕೆಲವು ಸ್ವಯಂಭು ಲಿಂಗಗಳಿಗೆ ಪೀಠಗಳಿಲ್ಲದಿದ್ದರೂ ಅವುಗಳಿಗೆ ಪೀಠಗಳನ್ನು ಸಂಬಂಧಮಾಡಿಯೇ ಪೂಜಿಸುತ್ತಾ ಬಂದಿರುವರು. ಶಿವಾಗಮಗಳಲ್ಲಿ ಸ್ವಯಂಭುಲಿಂಗಗಳೂ, ನರ್ಮದಾ ಬಾಣಲಿಂಗಗಳೂ, ಶ್ರೀಶೈಲಲಿಂಗಗಳೂ, ಸ್ಫಟಿಕಲಿಂಗಗಳೂ, ಸುವರ್ಣಲಿಂಗಗಳೂ ಮೊದಲಾದ ಅನೇಕ ಲಿಂಗಗಳ ಸ್ಥಾಪನಾವಿಧಾನವು ಹೇಳಲ್ಪಟ್ಟಿದ್ದು ಎಲ್ಲ ಲಿಂಗಗಳಿಗೂ ಪೀಠಗಳು ಇದ್ದೇ ತೀರಬೇಕೆಂದು ಹೇಳಲ್ಪಟ್ಟಿರುತ್ತವೆ. ಪಂಚಸೂತ್ರಲಿಂಗಗಳ ವಿಧಾನವಂತೂ ಪೀಠಸಹಿತವಾಗಿಯೇ ಇರತಕ್ಕದ್ದೆಂದು ಪ್ರತಿಪಾದಿಸಲ್ಪಟ್ಟಿರುವದು. ಅಂದಮೇಲೆ ಪೀಠಸಹಿತವಾದ ಲಿಂಗಗಳು ಪ್ರಾಚೀನಕಾಲದವುಗಳು ಅಲ್ಲೆಂದು ಹೇಳುವದು ಸಮಂಜಸವಾಗಲಾರದು.

ಲಿಂಗಗಳು ಪೂರ್ವದಲ್ಲಿ ಮಾನವಲಿಂಗಾಕೃತಿಗಳಾಗಿದ್ದವೆಂದುಬರೆದದ್ದು ಲಿಂಗತತ್ವಕ್ಕೆ ಅತ್ಯಂತವಿರೋಧವಾಗಿರುವದು. ಕೆಲವು ಲಿಂಗಗಳಲ್ಲಿರತಕ್ಕ ರೇಖೆಗಳು ಮಾನವಲಿಂಗಾಕೃತಿಯನ್ನು ತೋರಿಸುತ್ತವೆಂದು ತಿಳಿದುಕೊಂಡದ್ದು ಲಿಂಗರೇಖಾಜ್ಞಾನವಿಲ್ಲೆಂದು ಸೂಚಿಸುತ್ತದೆ. ಆ ರೇಖೆಗಳು ಶಿವಕಲಾರೇಖೆಗಳಲ್ಲದೆ ಮಾನವಲಿಂಗಾಕೃತಿಗಳಲ್ಲ; ಲಿಂಗವು ಪರಬ್ರಹ್ಮತತ್ವಸ್ವರೂಪವಾದ್ದರಿಂದ ಅದಕ್ಕೆ ಮಾನವಲಿಂಗಾಕೃತಿಯೆಂದು ಹೇಳಲು ಸಮಂಜಸವಾಗಲಾರದು. ಕೆಲವು ಪುರಾಣಗಳಲ್ಲಿ ಹಾಗೆ ಪ್ರತಿಪಾದಿಸಿದ್ದರೂ ಅದು ಲಿಂಗತತ್ವಕ್ಕೆ ವಿರೋಧವಾಗಿ ಕಲ್ಪಿಸಿದ ಚನ್ನಮಲ್ಲಪ್ಪನವರ ಕಲ್ಪನೆಯಂತೆ ನಿರಾಧಾರವಾದದ್ದೆಂದು ಹೇಳಬಹುದು.

ಇದರಂತೆ ಚನ್ನಮಲ್ಲಪ್ಪನವರು ಮೊನ್ನಿನ ಗೌರೀಹುಣ್ಣಿಮೆಯ ಸಂಚಿಕೆಯಲ್ಲಿ "ಲಿಂಗಿಗಳು" ಎಂಬ ಮತ್ತೊಂದು ಲೇಖವನ್ನು ಪ್ರಸಿದ್ಧಮಾಡಿರುವರು. ಆ ಲೇಖದಲ್ಲಿ ಕಾಳಾಮುಖರು ವೀರಶೈವರಿದ್ದರೆಂದು ಸಾಧಿಸಲು ಪ್ರಯತ್ನಪಟ್ಟು ಕೆಲವು ಶಿಲಾಲೇಖಗಳ ಮತ್ತು ಧರ್ಮಗ್ರಂಥಗಳ ಆಧಾರಗಳನ್ನು ಕೊಟ್ಟಿರುವರು. ಅದರಲ್ಲಿ ಪ್ರಾಚೀನ ವೀರಶೈವರ ತತ್ವಗಳೂ ಅರ್ವಾಚೀನ ವೀರಶೈವರ ತತ್ವಗಳೂ ಭಿನ್ನ ಭಿನ್ನವಾಗಿರುವವೆಂದು ಬರೆದಿರುವರು. ಪ್ರಾಚೀನ ವೀರಶೈವತತ್ವಗಳು ಪಶು ಪಾಶ ಪತಿಪ್ರಾಧಾನ್ಯವೆಂತಲೂ ಶರಣರಕಾಲದಲ್ಲಿ ಜೀವ ಶಕ್ತಿ ಶಿವರೆಂಬತ್ರಯಕ್ಕೆ ಪ್ರಾಧಾನ್ಯವೆಂತಲೂ ಬರೆದಿರುವರು ಇದು ತಪ್ಪುವಿಚಾರವು. ಪಶು ಪಾಶ ಪತಿಗಳೆಂಬವು. ಪಾಶುಪತರ ಪದಾರ್ಥಗಳು ಜೀವ ಶಕ್ತಿ ಶಿವಗಳೆಂಬವು. ಪಾಶುಪತರಲ್ಲಿ ಸಿದ್ಧಾಂತಭಾಗವೆಂದು ಹೇಳಲ್ಪಡುವ ವೀರಶೈವರ ಪದಾರ್ಥಗಳು ಎರಡೂ ಶಿವಾಗಮ ಪ್ರತಿಪಾದ್ಯಗಳಾಗಿದ್ದು ಪ್ರಾಚೀನವಾದವುಗಳು. ಪಾಶುಪತಪದಾರ್ಥಗಳ ಲಕ್ಷಣ ಪ್ರಮಾಣಗಳೂ ವೀರಶೈವಪದಾರ್ಥಗಳ ಲಕ್ಷಣ ಪ್ರಮಾಣಗಳು ಭಿನ್ನಭಿನ್ನವಾದವುಗಳು ಮತ್ತು ಜೀವನ ಬದ್ಧತೆ ಮುಕ್ತತೆಗಳಬಗ್ಗೆಯೂ ಭಿನ್ನ ಭಿನ್ನ ವಿಚಾರವುಳ್ಳವು ಒಟ್ಟಿಗೆ ಪಾಶಪದಾರ್ಥವು ಶಕ್ತಿಎಂಬರ್ಥವನ್ನೇ ಬೋಧಿಸುವದಿಲ್ಲ, ಪಾಶಪದಾರ್ಥವು ಜಡವಾಗಿಯೂ ಶಕ್ತಿಪದಾರ್ಥವು ಜಡ ಮತ್ತು ಅಜಡವಾಗಿಯು ಇರುವದು. ಇದು ಪಂಡಿತರಿಗೆ ಗೊತ್ತಿದ್ದವಿಷಯವಾಗಿರುವದು. ಅಂದಮೇಲೆ ಚನ್ನಮಲ್ಲಪ್ಪನವರ ವಿಚಾರವು ಎಷ್ಟರಮಟ್ಟಿಗೆ ಶಾಸ್ತ್ರಸಂಗತವಾಗಿರುವದೆಂಬುದು ಸ್ಪಷ್ಟವದೆ.

"ಹಿಂದೆ ೧೯೨೭ರಲ್ಲಿ ನಾನು "ಹೂಲಿಯ ಪಂಚವಣ್ಣಿಗೆಯುಮಠ" ದ ಪೂರ್ವೇತಿಹಾಸವನ್ನು ಸಂಶೋಧಿಸುತ್ತಿರುವಾಗ ಈ ತಾತ್ವಿಕ ತಾರತಮ್ಯವು ನನಗೆ ಚನ್ನಾಗಿ ಹೊಳದಿದ್ದಿಲ್ಲ, ಈಗ ಶಿವಾದ್ವೈತ ದರ್ಪಣವು ನನ್ನ ಕೈಗೆ ಸಿಕ್ಕದ್ದರಿಂದ ಚನ್ನಾಗಿ ಹೇಳಬಲ್ಲೆನು" ಎಂದು ಚನ್ನಮಲ್ಲಪ್ಪನವರು ಬರೆದು ಶಿವಾದ್ವೈತ ದರ್ಪಣದ ಪ್ರಾಚೀನತ್ವದ ಬಗ್ಗೆ ತಮ್ಮ ನಿರಾಧಾರವಾದ ಕಲ್ಪನಾಭಿಪ್ರಾಯವನ್ನು ಈ ಲೇಖದಲ್ಲಿ ವ್ಯಕ್ತಮಾಡಿರುವರು. "ಶಿವಾದ್ವೈತ ದರ್ಪಣದಲ್ಲಿ" ಶಿವಭಕ್ತನ ಶರೀರವು ಲಿಂಗಶರೀರವೆಂದು ವರ್ಣಿಸುವ ಅವಸರದಲ್ಲಿ ಉದಾಹರಿಸಿದ,

ಪೀಠಂ ಪಾದಾದಿ ಜಾನ್ವಂತಂ ಆನಾಭೇರ್ಮಧ್ಯಮೀರಿತಂ ॥<br>
ಹೃದಯಾಂತಂ ವರ್ತುಲಂ ಸ್ಯಾತ್ ಕಂಠಾಂತಂ ಗೋಮುಖಂ ಸ್ಮೃತಂ॥<br>
ಭ್ರೂಮಧ್ಯಾಂತಂ ಲಿಂಗಕಂ ರೋಮಸ್ತಕೋಲಿಂಗ ಮಸ್ತಕಃ ॥

ಏಂಬೀ ಶ್ಲೋಕವು ಪ್ರಾಚೀನ ಪ್ರಮಾಣವಲ್ಲೆಂದೂ, ರಾಷ್ಟ್ರಕೂಟರ ರಾಜ್ಯವು ಮುರಿದು ಕಲ್ಯಾಣದ ಚಾಲುಕ್ಯರ ರಾಜ್ಯವೆದ್ದು ಚಿರಶಾಂತಿಯುಂಟಾಗುವವರೆಗೂ ಲಿಂಗಪೀಠವು ಚಚ್ಚೌಕಾಗಿಯೇ ಇದ್ದಿತೆಂದೂ ಬರೆದಿರುವರು. ಇವರ ಅಭಿಪ್ರಾಯವೇನಂದರೆ--ದರ್ಪಣಕಾರರು ಉದಾಹರಿಸಿದ ಶ್ಲೋಕವು ವರ್ತುಲಾಕಾರದ ಪೀಠವುಳ್ಳ ಲಿಂಗವನ್ನು ಪ್ರತಿಪಾದಿಸುವ ಕಾರಣ ರಾಷ್ಟ್ರಕೂಟದ ಅನಂತರವೇ ವರ್ತುಲಾಕಾರ ಪೀಠದ ಲಿಂಗಗಳ ಸ್ಥಾಪನೆಯಾದ್ದರಿಂದ ತದ್ವರ್ಣನಾಪರವಾದ ಶ್ಲೋಕವು ಅರ್ವಾಚೀನವಾದದ್ದೆಂದು ಸ್ಪಷ್ಟವಾಗುವದು. ಇದು ತಪ್ಪು ವಿಚಾರವು ಲಿಂಗಪೀಠವು ಚಚ್ಚೌಕಾಗಲೀ ವರ್ತುಲಾಕಾರವಾಗಲೀ ಸ್ಥಾಪನವಾಗಬೇಕಾದರೆ ಕಾಲಭೇದದಿಂದಲ್ಲ. ಅವರವರ ಅಭಿಪ್ರಾಯಭೇದದಿಂದ ಎಂಬುವದು ನಿಃಸಂಶಯವು ರಾಷ್ಟ್ರಕೂಟ ರಾಜರಾಗಲೀ ತತ್ಸಮಯದಲ್ಲಿದ್ದ ಲಿಂಗಸ್ಥಾಪಕರಾಗಲೀ ಸರ್ವರೂ ಲಿಂಗಪೀಠಗಳನ್ನು ಚಚ್ಚೌಕಾಗಿಯೇ ಸ್ಥಾಪಿಸುತ್ತಿದ್ದರೆನ್ನಲಿಕ್ಕೆ ತಕ್ಕ ಆಧಾರಗಳಿಲ್ಲ, ಆಗಮಗಳಿಲ್ಲ, ಲಿಂಗಪೀಠಗಳನ್ನು ಚಚ್ಚೌಕಾಗಿಯೇ ಸ್ಥಾಪಿಸತಕ್ಕದ್ದೆನ್ನಲಿಕ್ಕೆ ಶಿವಾಗಮ ಪ್ರಮಾಣವಾದರೂ ಇಲ್ಲ. ವರ್ತುಲವಾಗಲೀ ಚಚ್ಚೌಕಾಗಲೀ ಅಷ್ಟಕೋಣಗಳಾಗಲೀ ಇದು ಸ್ಥಾಪನಮಾಡತಕ್ಕವರ ಅಭಿಪ್ರಾಯವನ್ನವಲಂಬಿಸಿರುವದು. ಪ್ರಮಾಣಗ್ರಂಥಗಳ ಆಧಾರದಮೇಲಿಂದ ಲಿಂಗಮೂರ್ತಿಗಳನ್ನಾಗಲೀ ಇನ್ನುಳಿದ ದೇವತಾಮೂರ್ತಿಗಳನ್ನಾಗಲೀ ಸಿದ್ಧಮಾಡುತ್ತಿರ

ಲ್ಲದೆ ಆ ಮೂರ್ತಿಗಳಿಂದ ಪ್ರಮಾಣಗ್ರಂಥಗಳನ್ನು ಸಿದ್ಧಮಾಡುವದಿಲ್ಲ. ಚನ್ನಮಲ್ಲಪ್ಪನವರ ವಿಚಾರವು ಹಾಗಲ್ಲ, ಮೂರ್ತಿಗಳ ಮೇಲಿಂದ ಪ್ರಮಾಣಗ್ರಂಥಗಳನ್ನು ಸಿದ್ಧಮಾಡುವರು. ಇವರ ವಿಚಾರದಂತೆ ಹೋದರೆ ವೇದಾಗಮಪ್ರಮಾಣಗಳಿಗೆ ಆಧುನಿಕತ್ವವು ಸಹಜಸಿದ್ಧವಾಗುವದು. ಇದು ಶೋಧಕರ ರೀತಿಯೂ ಅಲ್ಲ, ಗ್ರಂಥಪ್ರಮಾಣಗಳನ್ನು ಮುಖ್ಯವಾಗಿಟ್ಟುಕೊಂಡು ಮೂರ್ತಿಗಳ ರಚನೆಯು ಜಾರಿಯಲ್ಲಿ ಬರುತ್ತಿರುವದು. ಸರ್ವರಿಗೂ ತಿಳಿದದ್ದೇ ಅದೆ, ಇದಲ್ಲದೆ ಹೋದರೆ ಪ್ರಾಚೀನ ಪ್ರಮಾಣಗಳನ್ನನುಸರಿಸಿ ಬರೆದ ರಾಜಾರವಿವರ್ಮನ ಚಿತ್ರಗಳಿಂದಲೂ, ಮೂರ್ತಿಗಳಿಂದಲೂ ಆವೆಲ್ಲ ಪ್ರಮಾಣಗಳು ಹತ್ತಿಪ್ಪತ್ತು ವರುಷಗಳ ಈಚಿನವೆಂದು ಹೇಳಬೇಕಾದೀತು. ಅಂದಮೇಲೆ ಈ ಬಗ್ಗೆ ಐತಿಹಾಸಿಕರು ಯಾವತತ್ವವನ್ನವಲಂಬಿಸಬೇಕೆನ್ನುವದನ್ನು ಸುಜ್ಞರು ಹೇಳಲಿ; ಅಂದರೆ ಶಿವಾದ್ವೈತದರ್ಪಣದ ಪ್ರಾಚೀನತ್ವದ ವಿಷಯವು ತಾನೇ ಸಿದ್ಧವಾಗುವದು. ಮುಂದೆ ವಿಶ್ವೇಶ್ವರಸಂಹಿತೆಯಲ್ಲಿಯ ಒಂದು ಶ್ಲೋಕವನ್ನು ಉದಾಹರಿಸಿ ಇದೇ ಪ್ರಾಚೀನ ಪ್ರಮಾಣವೆಂದು ಬರೆದಿರುವರು. ಆ ಶ್ಲೋಕವು ಶಿವಭಕ್ತನ ಶರೀರವನ್ನು ಬ್ರಹ್ಮ ವಿಷ್ಣು ಶಿವ ಈ ತ್ರಿಮೂರ್ತಿಗಳ ಸ್ವರೂಪವೆಂದು ಹೇಳುತ್ತದಲ್ಲದೆ, ಲಿಂಗಸ್ವರೂಪವೆಂದು ಹೇಳುವದಿಲ್ಲ. ಈ ಶ್ಲೋಕವು ಸರ್ವಾಂಗಲಿಂಗಸ್ವರೂಪವನ್ನು ಪ್ರತಿಪಾದಿಸುವ ವೀರಶೈವರ ಸಿದ್ಧಾಂತಕ್ಕೆ ವಿರೋಧವಾಗಿರುವದು ಆದ್ದರಿಂದ ದರ್ಪಣಕಾರರು ಉದಾಹರಿಸಿದ "ಶಿರಂ ಪಾದಾದಿಜಾನ್ವಂತಂ" ಎಂಬ ಶ್ಲೋಕವೇ ಮುಖ್ಯವಾದ ಪ್ರಮಾಣವೂ ಪ್ರಾಚೀನವೂ ಆಗಿದ್ದೆನ್ನಲಿಕ್ಕೆ ತಿಲಮಾತ್ರವೂ ಸಂಶಯವಿಲ್ಲ.

ಶಿವಾದ್ವೈತದರ್ಪಣದ ಅಂತ್ಯದಲ್ಲಿ ಬರೆದ ಪೂವಲ್ಲೀ ಪಂಚವರ್ಣಮಹಾಮಠಾಧಿಷ್ಠಿತ ಶ್ರೀ ಶಿವಾನುಭವ ಶಿವಾಚಾರ್ಯವಿರಚಿತ" ಎಂಬ ಗದ್ಯದಲ್ಲಿ ಪೂವಲ್ಲಿಯೆಂಬ ಹೆಸರು ಹೂಲಿಯ ಪ್ರಾಚೀನ ಹೆಸರಲ್ಲೆಂದೂ ಪೂಲಿಯೆಂಬುವದೇ ಪ್ರಾಚೀನ ಹೆಸರೆಂದೂ ಬರೆದಿರುವರು. ಮತ್ತು ಈ ಹೆಸರು ೧೬ನೇ ಶತಮಾನದಿಂದೀಚೆಗೆ ಪ್ರಚಾರದಲ್ಲಿ ಬಂದಿರುವದೆಂದು ಹೇಳುವರು. ಇದು ಅತ್ಯಂತ ತಪ್ಪುವಿಚಾರವು. ಪೂಲಿ ಇಲ್ಲವೇ ಹೂಲಿ ಎಂಬ ಶಬ್ದಗಳು ಪೂವಲ್ಲಿ ಎಂಬ ಶಬ್ದದತದ್ಭವಗಳೆಂಬುವದು ಸ್ಪಷ್ಟವಾಗುತ್ತಿದ್ದು ಹೀಗೆ ಬರೆದದ್ದು ವ್ಯಾಕರಣದ ಅಜ್ಞತೆಯನ್ನು ತೋರಿಸುತ್ತಿರುವದು. ಹೂಲಿಗೆ ಪೂರ್ವದಲ್ಲಿ ಕುಸುಮಪುರ ಪುಷ್ಪಪುರವೆಂದೂ ಅನಂ

ತರ ಕುಸುಮುವಲ್ಲಿ ಪುಷ್ಪವಲ್ಲೀ ಎಂದೂ ಆ ಪೋಲೆ ಪೂವಲ್ಲಿ ಎಂದೂ ಆನಂತರಪೂಲಿ ಇಲ್ಲವೆ. ಹೂಲಿಎಂದೂ ಹೆಸರುಗಳುಂಟಾಗಿರುವವು. ಈ ವಿಷಯುದಲ್ಲಿ ಅನೇಕ ಆಧಾರಗಳಿರುವವು. ಆ ಬಗ್ಗೆ ಬೇರೊಂದು ಲೇಖವನ್ನೇ ಪ್ರಸಿದ್ಧಮಾಡುವವರಿದ್ದೇವೆ.

ನಮ್ಮ ಮಠಕ್ಕೆ "ಪಂಚವರ್ಣಮಹಾಮಠ" ವೆಂದು ಬರೆದದ್ದಾದರೂ, ಇದು ಪ್ರಾಚೀನ ಸಾಂಪ್ರದಾಯದಿಂದಲ್ಲೆಂದು ಬರೆದಿರುವರು. ಮಹಾಮಠವೆನ್ನುವದು ಹಿರೇಮಠದ ಕನ್ನಡಶಬ್ದದ ಸಂಸ್ಕೃತರೂಪವು. ಇದು ಪ್ರಾಚೀನವು ಪಂಚವರ್ಣಸೂತ್ರಸಾಂಪ್ರದಾಯದಿಂದ ಬಂದದ್ದರಿಂದ ಪಂಚವರ್ಣವೆಂಬುವದಾದರೂ ಆಗಮುಕಾಲೀನವೆಂದೇ ಹೇಳಬಹುದು. ಈ ವಿಷಯದಲ್ಲಿ ನಮ್ಮ ಮಠದ ಬಗ್ಗೆ ಪೂಜ್ಯರೂ ವಿಂದ್ವಾಂಸರೂ ಆದ ಮಡಿವಾಳೇಶ್ವರ ತುರಮುರಿ ಇವರು ಶಿವಾದ್ವೈತದರ್ಪಣವನ್ನು ಶ್ರೀಮಂತ ಶಿರಸಂಗಿ ದೇಶಾಯಿರವರ ಕಡೆಯಿಂದ ಮುದ್ರಿಸಲಿಕ್ಕೆ ಪ್ರಯತ್ನಮಾಡಿದ್ದು ನಮ್ಮ ಮಠದ ವಿಷಯದಲ್ಲಿ ಅತುಲವಾದ ಶ್ರದ್ಧೆಯೇ ಕಾರಣವಾಗಿರಲಿಕ್ಕೆ ಉಳಿದವರ ಅಭಿಪ್ರಾಯಕ್ಕೆ ನಾವು ಲಕ್ಷಕೊಡತಕ್ಕವರಲ್ಲ.

ಮುಂದೆ ಚನ್ನಮಲ್ಲಪ್ಪನವರು ಶಿವಾದ್ವೈತದರ್ಪಣದಲ್ಲಿ ಬರೆದ ಇತಿವಿಸ್ತರೇಣ ಪ್ರಪಂಚಿತಂ ನಿಸ್ತರಭಯಾನ್ನೇಹಲಿಖ್ಯತೆ" "ಸಚಾಸ್ಮತ್ಕೃತ ಶಿವಾನುಭವಸಿದ್ಧಾಂತೇ ವಿಸ್ತರೇಣಪ್ರತಿಪಾದಿತ ಇತ್ಯತ್ರೈವ ವಿರಮ್ಯತೆ" ಎಂಬ ಪ್ರಬಂಧ ಶೈಲಿಯು ಪಾಶ್ಚಾತ್ಯ ಪ್ರಬಂಧ ಪದ್ಧತಿಯಾಗಿದೆ ಎಂದು ಬರೆದಿರುವರು. ಸಂಸ್ಕೃತ ಪ್ರಬಂಧ ಶೈಲಿಯು ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ಓದಿದವರಿಗೆ ತಿಳಿಯುವದಲ್ಲದೆ ಉಳಿದವರಿಗೆ ತಿಳಿಯಲಾರದು. ಚನ್ನಮಲ್ಲಪ್ಪನವರು ಅಷ್ಟು ಸಂಸ್ಕೃತಬಲ್ಲವರಲ್ಲ. ಯಾರೋ ಸಂಸ್ಕೃತಭಾಷೆಯನ್ನಷ್ಟೇ ಅಭ್ಯಾಸಮಾಡಿದ ಜನರು ಹೀಗೆ ಬರೆಯಿರೆಂದು ಅವರಿಗೆ ವಂಚಿಸಿದಂತೆ ಕಾಣುತ್ತದೆ. ಯಾಕಂದರೆಃ— ಸಂಸ್ಕೃತ ಪ್ರಾಚೀನ ಗ್ರಂಥಗಳಲ್ಲಿ ಈ ಪ್ರಬಂಧ ಶೈಲಿಯು ವಿಪುಲವಾಗಿ ಸಿಗುವದೆಂದು ಕೆಲವರು ಸಂಸ್ಕೃತವರಿತ ಪಂಡಿತರೂ ನಮ್ಮ ಶ್ರೀಗಳವರು ಎಷ್ಟೋ ಗ್ರಂಥಗಳನ್ನು ತೋರಿಸಿರುವರು. ಅವುಗಳಲ್ಲಿ ಒಂದೂವರೆಸಾವಿರ ವರ್ಷಗಳ ಪೂರ್ವದಲ್ಲಿದ್ದ ವಿಜ್ಞಾನಭಿಕ್ಷುಗಳೆಂಬ ಯೋಗಿಗಳು ರಚಿಸಿದ ಸಾಂಖ್ಯ ಪ್ರವಚನಭಾಷ್ಯದ ಕೆಲವು ಪ್ರಬಂಧಶೈಲಿಯನ್ನು ಉದಾಹರಿಸುತ್ತೇವೆ; ಪ್ರಥಮ ಸೂತ್ರದ ಅವತರಣಿಕೆಯಲ್ಲಿ " ಇತಿಬ್ರಹ್ಮಮೀಮಾಂಸಾಯಾಂ ಪ್ರಪಂಚಿತ

ಮಸ್ಮಾಭಿಃ". ಪ್ರಥಮಸೂತ್ರದ ವ್ಯಾಖ್ಯೆಯಲ್ಲಿ "ತದೇತದ್ಯೋಗವಾರ್ತಿಕೇ ಪ್ರಪಂಚಿತಮಸ್ಮಾಭಿಃ". ೪೩ನೇ ಸೂತ್ರದ ವ್ಯಾಖ್ಯೆಯಲ್ಲಿ "ತದೇತತ್ಸರ್ವಂ ಬ್ರಹ್ಮಮೀಮಾಂಸಾಭಾಷ್ಯೇ ಮಾಯಾವಾದನಿರಸನಪ್ರಸಂಗತೋ ವಿಸ್ತಾರಿತಮಸ್ಮಾಭಿಃ"

ಇವೆಲ್ಲ ಪ್ರಬಂಧ ಶೈಲಿಗಳು ಒಂದೂವರೆ ಸಾವಿರ ವರ್ಷಗಳ ಪೂರ್ವದಲ್ಲಿ ಅತ್ಯಂತ ಕಾಡಸ್ಥಿತಿಯಲ್ಲಿದ್ದ ಯಾವ ಪಾಶ್ಚಾತ್ಯರ ಪ್ರಬಂಧ ಶೈಲಿಯನ್ನು ಅನುಸರಿಸಿದ್ದವೆಂಬದನ್ನು ಚನ್ನಮಲ್ಲಪ್ಪನವರಾಗಲಿ ಅವರನ್ನು ಮೆಚ್ಚಿಸಿದ ಸಂಸ್ಕೃತ ಪಂಡಿತರಾಗಲಿ ಎದೆ ತಟ್ಟಿ ಹೇಳಲಿ.

ವಾಚಕರೇ, ಚನ್ನಮಲ್ಲಪ್ಪನವರ ಈ ತಪ್ಪು ವಿಚಾರಗು ಐತಿಹಾಸಿಕ ತತ್ವಗಳ ಶೋಧನೆಗೆ ಎಷ್ಟು ಪ್ರತಿಕೂಲಗಳಾಗಿರುವವೆಂದು ಸ್ಪಷ್ಟವಾಗುವದಿಲ್ಲವೆ? ಅಂದ ಮೇಲೆ ಶಿವಾದ್ವೈತ ದರ್ಪಣವೂ, ಅದರ ತತ್ವಗಳೂ, ಅರ್ವಾಚೀನಗಳೆಂದು ಹೇಳುವ ಚನ್ನಮಲ್ಲಪ್ಪನವರ ಕಲ್ಪನೆಗೆ ಸೀಮೆಯೇ ಇಲ್ಲವೆಂದು ಹೇಳಬಹುದು. ಪ್ರಸಂಗ ಬಂದರೆ ಈ ಬಗ್ಗೆ ಒಂದು ದೊಡ್ಡ ಲೇಖವನ್ನೆ ಬರೆಯುತಕ್ಕವರಿದ್ದೇವೆ; ಇತಿಹಾಸ ಶೋಧಕರು ಈ ಬಗ್ಗೆ ಯೋಗ್ಯವಿಚಾರ ಮಾಡಿಯೇ ತಮ್ಮ ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಳ್ಳಲೆಂದು ಸವಿನಯದಿಂದ ಸೂಚಿಸುತ್ತೇವೆ;

---

# ಬಸವಾದಿಪ್ರಮಥರ ವಚನಗಳ ತತ್ವನೈರ್ಮಲ್ಯತೆ ಮತ್ತು ಚಾರಿತ್ರ್ಯ ಶುದ್ಧಿ

ಲೇಖಕ:— ಜೀರಗೆ ಬಸವಲಿಂಗಪ್ಪ, ಹೈಕೋರ್ಟ ಟ್ರಾನ್ಸ್ಲೇಟ, ಅರಳೇಪೇಟೆ, ಬೆಂಗಳೂರು ಸಿಟಿ.

---

ವೀರಶೈವ ಮತಕ್ಕೆ ಬಸವನೇ ಅಗ್ರಪುರುಷನೆಂಬುದು ಲೋಕಪ್ರಸಿದ್ಧವಾದ ಸಂಗತಿಯಾಗಿದೆ.

ಶಿವ ಮತ್ತು ಬಸವ—ಎಂಬ ಎರಡು ವ್ಯಕ್ತಿಗಳೇ ಸುಪ್ರಕಾಶವಾಗಿ ವೀರಶೈವ ಸಮಯವೆಂಬ ವಿಯದ್ವಿಸ್ತಾರದಲ್ಲಿ ಹೊಳೆಯುತ್ತಿರುವವು. ಶಿವನು ವೀರಶೈವಾಗಮಗಳನ್ನು ಪಾರ್ವತಿ ಷಣ್ಮುಖ ಮೊದಲಾದವರಿಗೆ

ಹೇಳಿದನು. ಬಸವನು ವಚನ ಶಾಸ್ತ್ರವನ್ನು ಭೂಲೋಕದ ಜನರಿಗೆ ಬೋಧಿಸಿದನು. ಶಿವನು ಮೇಲಿರತಕ್ಕ ಕೈಲಾಸದಲ್ಲಿ ಕೆಲಸ ಮಾಡಿದನು. ಬಸವನು ಕೆಳಗಿರುವ ಭೂಲೋಕದಲ್ಲಿ ಕೆಲಸಮಾಡಿದನು. ಶಿವನು ಪ್ರಥಮ ಶಂಭುವಾದನು. ಬಸವನು ದ್ವಿತೀಯ ಶಂಭುವಾದನು.

ಇವರಿಬ್ಬರೂ ಕೆಲಸಮಾಡಿದ್ದರಲ್ಲಿ ಯಾರಿಗೆ ಯಾರು ಸಾಲಗಾರರಾಗಿರುತ್ತಾರೆ. ಶಿವನಿಗೆ ಬಸವನು ಸಾಲಿಗನೊ? ಬಸವನಿಗೆ ಶಿವನು ಸಾಲಿಗನೊ?

ಲೋಕದಲ್ಲಿ ಕ್ರಿಯೆಯಿಂದ ವಿಧಿಗಳಾಗುತ್ತವೆಯೇ ಹೊರತು, ವಿಧಿಗಳಿಂದ ಕ್ರಿಯಗಳಾಗುವದಿಲ್ಲ. ಲೋಕದಲ್ಲಿ ಮಹಾ ಪುರುಷರು ನಡೆದು ನುಡಿದ ಮಾರ್ಗದ ಮೇಲೆ ಧರ್ಮ ಶಾಸ್ತ್ರಗಳು ಹುಟ್ಟವೆಯೇ ಹೊರತು ಧರ್ಮಶಾಸ್ತ್ರಗಳೇ ಮೊದಲು ಹುಟ್ಟಿರುವದಿಲ್ಲ. ಈ ವಿಚಾರವು ಚರಿತ್ರವನ್ನು ಓದಿದವರಿಗೆ ಚನ್ನಾಗಿ ಗೊತ್ತಾಗುವದು. ಅನೇಕ ಕಡಿದಾಟ ಬಡಿದಾಟಗಳಾವ ಮೇಲೆ ಶಾಸ್ತ್ರಗಳು ಹುಟ್ಟಿರುತ್ತವೆ. ಅರ್ಥಶಾಸ್ತ್ರ *(Economics)* ರಾಜನೀತಿಶಾಸ್ತ್ರ *(Political Science)* ಭೌತಿಕಶಾಸ್ತ್ರ *(Physics)* ರಸಾಯನಶಾಸ್ತ್ರ *(Chemistry)* ಸಾಮಾಜಿಕ ವಿಧಿ *(Socialism)* ಮೊದಲಾದ ಶಾಸ್ತ್ರಗಳೆಲ್ಲ ಬೇರೆ ಬೇರೆ ಕಾಲಗಳಲ್ಲಿದ್ದ ಬೇರೆ ಬೇರೆ ಮಹಾ ಪುರುಷರು ಆಡಿ ಮಾಡಿ ತೋರಿಸಿದ ಕ್ರಿಯಗಳ ಮೇಲೆ ಉಂಟಾಗಿರುತ್ತವೆ. ಸಮಸ್ತ ಶಾಸ್ತ್ರಗಳಿಗೂ ವಿಧಿಗಳಿಗೂ ಮಹಾ ಪುರುಷರ ಕ್ರಿಯಗಳೇ ಕಾರಣವು. ಈ ತತ್ವವೇ ವೀರಶೈವ ಧರ್ಮಕ್ಕೂ ಅನ್ವಯಿಸುತ್ತದೆ. ವೀರಶೈವರಲ್ಲಿ ಶಿವಶರಣರು ನಡೆದ ಮಾರ್ಗದ ಮೇಲೆ ಶಿವಾಗಮಗಳು ಹುಟ್ಟಿವೆ.

ಶ್ರೀ ಬಸವೇಶನಿಗಿಂತಲೂ ಮೊದಲು ಸುಮಾರು ೫೦,೧೦೦ ವರ್ಷಗಳ ಮುಂಚೆ ಶೈವರಲ್ಲಿ ಒಂದು ದೊಡ್ಡ ಚಳವಳಿ ನಡೆಯಿತೆಂದು ಕನ್ನಡಕವಿಚರಿತ್ರಕಾರರಾದ ಮ॥ ರಾ॥ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರವಲ್ಲಿ ಬರೆಯುತ್ತಾರಷ್ಟೆ. ಇದು ಬಹಳ ವಿಶೇಷವಾದ ಹೆಚ್ಚಿನ ಬೆಲೆಯುಳ್ಳ ಶೋಧನವಾಗಿರುತ್ತದೆ. ಬಸವೇಶನಿಗಿಂತಲೂ ಮೇಲ್ಕಂಡಂತೆ ಸುಮಾರು ೫೦—೧೦೦ ವರ್ಷಗಳ ಮುಂಚೆ ಶಂಕರದಾಸಿಮಯ್ಯ, ದೇವರದಾಸಿಮಯ್ಯ, ಡೋಹರಕಕ್ಕಯ್ಯ, ಮಾದಾರಚೆನ್ನಯ್ಯ ಸಕಳೇಶಮಾದರಸ ಮೊದಲಾದವರು ಉದಾರಕತ್ವ ನಿಯುಕ್ತ ಷಟ್ಸ್ಥಲರೂಪ ಲಿಂಗ ಧಾರಣಪೂರ್ವಕ ಲೋಕದ ದೀನಮಾನವರನ್ನು ಉದ್ಧಾರಮಾಡುವದಕ್ಕೆ

ಬಹಳ ಕೆಲಸಮಾಡಿದಂತೆ ಕಾಣುತ್ತದೆ. ಈ ಗದ್ದಲದಲ್ಲಿ ಶೈವನಾಗಿದ್ದ ಬ್ರಹ್ಮಶಿವನು ಜೈನನಾಗಿ ಹೋದನು. ಈ ಬ್ರಹ್ಮಶಿವನು ಕನ್ನಡಗ್ರಂಥದಲ್ಲಿ ಬೇಡರದಾಸಿಮಯ್ಯನೆಂಬ ಶರಣನ ಹೆಸರನ್ನು ಎತ್ತಿಕೊಂಡಿರುತ್ತಾನೆ. ಈ ವೀರಶೈವ ತತ್ವಗಳು ಅತ್ಯುತ್ಕಟವಾಗಿ ಪ್ರಚಲಿತವಾಗುವದಕ್ಕೆ ಮೊದಲು ದ್ರಾವಿಡದೇಶದಲ್ಲಿ ಶೈವರೊಳಗೆ ಜಾತಿಭೇದಗಳನ್ನು ಅಡಗಿಸುವದಕ್ಕೆ ಪೂರ್ಣ ಕೆಲಸ ಮಾಡಲ್ಪಟ್ಟವು. ಈ ಕೆಲಸವು "ಚಾಂಡಾಲನಾದರೂ ಶಿವನಾಮಸ್ಮರಣೆಯುಳ್ಳವನಾದರೆ ಅವನ ಜತೆಗೆ ವಾಸಿಸಬೇಕು, ಅವನ ಜತೆಗೆ ಮಲಗಬೇಕು, ಅವನ ಜತೆಗೆ ಉಣ್ಣಬೇಕು. ಎಂದು ಮೊದಲಾಗಿ ಉಪನಿಷತ್ತುಗಳ ಕಾಲದಲ್ಲಿ ಹೊರಟ ಮಾತನ್ನು ಕ್ರಿಯತಃ ದ್ರಾವಿಡಶೈವದಲ್ಲೇ ಆಚರಿಸಲ್ಪಡುವದಕ್ಕೆ ಬಹು ಪ್ರಯತ್ನಗಳು ಮಾಡಲ್ಪಟ್ಟಿದ್ದವು. ಆದರೆ ಅವು ಕ್ರಿಯತಃ ನಡೆಯಲಿಲ್ಲ. ತತ್ವತಃ ಮಾತ್ರ ಸಮ್ಮತಿಸಲ್ಪಟ್ಟವು. ಶಿವಭಕ್ತರೆಲ್ಲರೂ ಸಮಾನರೆಂಬುದನ್ನು ಭಕ್ತಿಮಾತ್ರಕ್ಕೆ ನಡೆಸಿದರು. ಉಳಿದ ಕರ್ಮಾದಿಗಳಲ್ಲಿ ಯಥಾಪ್ರಕಾರ ಬ್ರಾಹ್ಮಣಾದಿ ಚತುರ್ಜಾತಿಗಳೂ ತತ್ಸಂಬಂಧ ತರ್ಕಶಕೆಗಳೂ ನಡೆಯುತ್ತಲೆ ಬಂದವು. ದ್ರಾವಿಡ ದೇಶದ ಶೈವರು ಅರವತ್ತುಮೂರು ಪುರಾತನರ ಕಥೆಯನ್ನು ಹೇಳುವ ಪೆರಿಯಪುರಾಣವೆಂಬ ಪುರಾತನರ ಪುರಾಣದಲ್ಲಿ ನೋಡಬಹುದು. ಅವರಲ್ಲಿ ಶರಣರ ಜಾತಿಗಳನ್ನು ಹಾಕಿರುತ್ತಾರೆ. ಈ ವಿಧವಾದ ಅವ್ಯವಸ್ಥತೆಯನ್ನು ಕಳ್ಪಿಸಿ ಪೂರ್ವದ ಉಪನಿಷತ್ಕಾಲದಲ್ಲಿ ಅಂಕುರಿಸಿದ "ಜಾತಿಭೇದ ನಿರೋಧವಾಕ್ಯವನ್ನು ಕ್ರಿಯತಃ ಅಕ್ಷರತಃ ನಡೆಸುವದಕ್ಕೆ ಹೋರಾಡಿ ಷಟ್ಸ್ಥಲವೆಂಬ ಉಪಕರಣದ ಮೂಲಕ ಸಂಪೂರ್ಣ ಜಯಪ್ರದ ಹೊಂದಿದರು. ಈ ಹೋರಾಟವನ್ನು ಮೇಲೆ ಹೇಳಿದಂತೆ ಶಂಕರದಾಸಿಮಯ್ಯ, ದೇವರದಾಸಿಮಯ್ಯ ಮತ್ತು ಇನ್ನು ಅಗೋಚರರಾದ ಅನಂತಶರಣರು ಸಾಧ್ಯವಾದ ಮಟ್ಟಿಗೆ ನಡೆಸುತ್ತಬಂದು ಬಸವೇಶ್ವರನಲ್ಲಿ ಅದು ಪರಿಪೂರ್ತಿಗೊಳಿಸಲ್ಪಟ್ಟಿತು. ಈ ಹೋರಾಟದಲ್ಲಿ ರೇವಣಸಿದ್ಧನಾದರೂ ಒಬ್ಬರಾಗಿದ್ದರೊ ಹೇಗೊ ಹೇಳುವದಕ್ಕಾಗುವದಿಲ್ಲ. ಏತಕ್ಕೆಂದರೆ ಅವರ ವಚನಗಳು ಶಿಕ್ಕಿರುವದಿಲ್ಲ. ರೇವಣಸಿದ್ಧರು ಸಿದ್ಧರಾಮಶಿವಯೋಗಿಯ ಹುಟ್ಟುವಿಕೆಯನ್ನು ಸೂಚಿಸಿ ಮೊರಡಿಯ ಮುದ್ದಗೌಡ ಸುಗ್ಗಾಯಿಗಳ ಹೊಟ್ಟೆಯನ್ನು ಪೂಜೆಮಾಡಿದರೆಂದು ಹೇಳುವದರಿಂದ ಅವರು ಬಸವೇಶ್ವರನಿಗಿಂತಲೂ ಸ್ವಲ್ಪ ಹಿರಿಯರೆಂದು ಕಾಣುತ್ತದೆ. ಮತ್ತು ಚನ್ನಬಸವಣ್ಣನವರು ಕಲ್ಯಾಣಪಟ್ಟಣವನ್ನು ಬಿಡುವಕಾಲಕ್ಕೆ ಕಾಲ

ಜ್ಞಾನಸ್ವರೂಪನಾಗಿ ರೇವಣಸಿದ್ಧರು ರುದ್ರಮುನಿಸ್ವಾಮಿಗಳಿಗೆ ಪಟ್ಟವಕಟ್ಟು ವರೆಂದು ಹೇಳುವುದರಿಂದ ರೇವಣಸಿದ್ಧರು ಬಸವೇಶನು ಶಿವೈಕ್ಯನಾದ ಮೇಲೂ ಇದ್ದರೆಂದು ಸ್ಪಷ್ಟವಾಗುತ್ತದೆ. ಈ ವಿಚಾರವು ಚನ್ನಬಸವ ಪುರಾಣದಲ್ಲಿದೆ. ಪಂಡಿತಾರಾಧ್ಯರಂತೂ ಬಸವೇಶ್ವರನಿಗಿಂತಲೂ ಚಿಕ್ಕ ವರಾಗಿರುತ್ತಾರೆ. ಆದದರಿಂದ ಷಟ್‌ಸ್ಥಲಮಾರ್ಗಪ್ರಸರಣದ ಪ್ರಾರಂಭ ಕಾಲದಲ್ಲಿ ಹೋರಾಡಿದವರಲ್ಲಿ ರೇವಣಸಿದ್ಧರು ಒಬ್ಬರಾಗಿರಬಹುದೋ ಏನೋ ಹೇಳುವುದಕ್ಕಾಗುವದಿಲ್ಲ. ಅದು ಹೇಗೇ ಆಗಲಿ ಅಂಕುರರೂ ಪವಾಗಿ ಉದಾರಕತ್ವ ನಿಯುಕ್ತ ಷಟ್‌ಸ್ಥಲವು ಬಸವೇಶನಿಗಿಂತಲೂ ಮೊದಲು ಕಾಲದಿಂದ ಪ್ರಾರಂಭಿಸಲ್ಪಟ್ಟರೂ ಅದನ್ನು ಅತ್ಯುತ್ಕೃಷ್ಟರೀತಿಯಲ್ಲಿ ಕ್ರಿಯತಃ ನಡೆಸಿ ಪರಿಪೂರ್ತಿಗೊಳಿಸಿ ಲೋಕೋದ್ಧಾರಮಾಡಿದುದರಿಂದ ಬಸವೇಶ್ವರನು ಪ್ರಮುಖನಾಗಿರುತ್ತಾನೆ ಲಿಂಗಧಾರಣ ಸಮಾನತ್ವದಿಂದ ಅಂತ್ಯಜನಾದ ಹರಳಯ್ಯನಿಗೂ ಬ್ರಾಹ್ಮಣನಾದ ಮಧುವರಸಯ್ಯನಿಗೂ ವೈವಾಹಿಕ ಬಂಧವನ್ನು ನಡೆಸಿದ್ದು ಆಶ್ಚರ್ಯವಾಗಿರುತ್ತದೆ. ಬಸವೇಶ್ವರನ ಪ್ರಾಮುಖ್ಯತೆಗೆ ಇನ್ನೂ ಅನೇಕ ಸಾಕ್ಷ್ಯಗಳಿದ್ದಾಗ್ಯು ಮೇಲು ಹೇಳಿದ ವೈವಾಹಸಂಬಂಧಕಾರ್ಯವೇ ಸಾಕಾಗಿರುತ್ತದೆ. ರೇವಣಸಿದ್ಧರು ಬಿಜ್ಜಳನ ಮಗಳು ಲಕ್ಷ್ಮಣಾದೇವಿಯನ್ನೂ ಚೋಳನ ಮಗಳು ಸೌಂದರೆಯನ್ನೂ ಮದುವೆಯಾದದ್ದೂ ಷಟ್‌ಸ್ಥಲೋದಾರಕತ್ವಾಚರಣೆಯೇ ಎನ್ನಬಹುದಾದರೂ ರೇವಣಸಿದ್ಧರು ತಾವು ಮದುವೆಯಾದರು. ಬಸವನು ಬೇರೆ ಬೇರೆಯವರಿಗೆ ಮದುವೆಮಾಡಿಸಿದನು. ಆದದರಿಂದ ಬಸವೇಶನಕಾರ್ಯವೇ ಅತಿ ಪ್ರಬಲವಾದದ್ದು

ಬಸವೇಶ್ವರನನ್ನು ಜಾತಿ ಸಂಕರ ಮಾಡಿದನೆಂದು ನಿಂದಿಸುವವರು ರೇವಣಸಿದ್ಧರು ಷಟ್‌ಸ್ಥಲೋಪದೇಶವನ್ನು ಮಾಡಿದರೆಂದು ಹೇಳುತ್ತಾರೆ. ಷಟ್‌ಸ್ಥಲವೆಂದರೆ ಜಾತಿ ಸೂತಕ, ಜನನ ಸೂತಕ, ಉಚ್ಛಿಷ್ಟ ಸೂತಕ, ರಜಸ್ಸೂತಕ, ಪ್ರೇತ ಸೂತಕಗಳನ್ನು ನಿರಾಕರಿಸತಕ್ಕದ್ದು, ವರ್ಣಾಶ್ರಮಗಳನ್ನು ನಿರಾಕರಿಸಿ ಅತಿವರ್ಣಾಶ್ರಮವೆನಿಸಿದ್ದು, ಬ್ರಾಹ್ಮಣಾಂ ಯಜ್ಞಗಳನ್ನು ನಿರಾಕರಿಸತಕ್ಕದ್ದು. ಲಿಂಗದಲ್ಲಿ ಹೊಲೆಯಿಲ್ಲ ಜಂಗಮದಲ್ಲಿ ಕುಲವಿಲ್ಲ ಪ್ರಸಾದದಲ್ಲಿ ಎಂಜಲಿಲ್ಲ—ವೆಂದು ಬೋಧಿಸತಕ್ಕದ್ದು, ಲಿಂಗಧಾರಿಯಾದ ಮೇಲೆ ಅವನಲ್ಲಿ ಪೂರ್ವಜಾತಿಗಳಿಲ್ಲವೆಂದು ಬೋಧಿಸತಕ್ಕದ್ದು ಇವೇ ಮೊದಲಾದ ಉದಾರಕಕ್ಷಗಳನ್ನು ಬೋಧಿಸತಕ್ಕದ್ದಾಗಿರುತ್ತದೆ. ಹೀಗಾದ ಮೇಲೆ ರೇವಣಸಿದ್ಧರು ಷಟ್‌ಸ್ಥಲೋಪದೇಶವನ್ನು ಬೋಧಿಸಿದ ಬಗೆ ಹೇಗೆ?

ವೀರಶೈವದ ನಿಜತತ್ವವನ್ನು ಬಿಟ್ಟು ನಾವು ಹೋಗಬಾರದು. ನಾವು ಎಷ್ಟು ದಿವಸವಾದರೂ ಮುಸುಕಿನೊಳಗಿದ್ದರೆ ವೀರಶೈವ ಸಮಾಜಕ್ಕೂ, ವೀರಶೈವ ಧರ್ಮಕ್ಕೂ, ಉಪಕಾರ ಮಾಡಿದಂತಾಗುವದಿಲ್ಲ. ಸುಳ್ಳುಪ್ರಯೋಜನವಿಲ್ಲ. ವೀರಶೈವ ವಿರುದ್ಧ ತತ್ವಗಳನ್ನು ಪ್ರಸರಣ ಮಾಡುವದರಿಂದ ಅನ್ಯದೇಶದ ವಿದ್ವಾಂಸರಾರಾದರೂ ವೀರಶೈವ ಮತದ ವಿಚಾರದಲ್ಲಿ ಗ್ರಂಥಗಳನ್ನು ಬರೆಯಬೇಕೆಂದು ಬಂದರೆ ಅವರಿಗೆ ದಿಕ್ಕು ತೋರದಂತಾಗಿರುತ್ತದೆ. ನಿಜದಸುತ್ತಲೂ ಸುಳ್ಳುಗಳು ತುಂಬಿಕೊಂಬಿಕೊಂಡಿವೆ. ವೀರಶೈವವು ನಾಶವಾಗುತ್ತಾ ಬರುತ್ತಲಿದೆ. ಸರ್ವಪ್ರಯತ್ನದಿಂದಲೂ ಸತ್ಯಪ್ರೇಮಿಗಳಾದ ವೀರಶೈವ ವಿದ್ವಾಂಸರು ಸುಳ್ಳುಗಳನ್ನು ಆದಷ್ಟು ತೀವ್ರದಿಂದ ಹೊರದೆಗೆದು ನಿಜವನ್ನು ಪ್ರಕಾಶಪಡಿಸಬೇಕೆಂದು ಬೇಡಿಕೊಳ್ಳುತ್ತೇನೆ.

ನಾನು ಹಿಂದೆ ಹೇಳಿದಂತೆ—ಕ್ರಿಯೆಗಳಿಂದ ವಿಧಿಗಳಾಗವೆಂದು ಹೇಳಿದೆನಷ್ಟೆ. ಬಸವೇಶ್ವರನಿಗಿಂತ ಮೊದಲಿನ ಶರಣರೂ, ಬಸವೇಶ್ವರನೂ ನಡೆಸಿದ ಮಹತ್ಕ್ರಿಯೆಗಳ ಮೇಲೆ ಆಗಮಗಳು ಹುಟ್ಟಿವೆ. ಆ ವಿಧಿಗಳು ವೀರಶೈವಕ್ಕೆ ಶಾಸನಗಳಾಗಿವೆ. ಬಸವಾದಿ ಪ್ರಮಥರೆಲ್ಲರೂ ಹೇಳಿದ ವಾಕ್ಯಗಳೆಲ್ಲವೂ ಶಿವನು ಅವರ ಹೃದಯದಲ್ಲಿ ನಿಂತು ಹೇಳಿಸಿದ ವಾಕ್ಯಗಳಾಗಿರುತ್ತವೆ. ಅದನ್ನು ಹಿಡಿದೇ ಶಿವಾಗಮಗಳು ಹುಟ್ಟಿರುತ್ತವೆ. ಕ್ರಿಸ್ತನ ಕ್ರಿಯೆಯಿಂದಲೇ ಬೈಬಲು ಹುಟ್ಟಿರುತ್ತದೆ. ಮಹಮ್ಮದನ ಕ್ರಿಯೆಯಿಂದಲೇ ಖುರಾನು ಹುಟ್ಟಿರುತ್ತದೆ. ಬೌದ್ಧನ ಕ್ರಿಯೆಯಿಂದಲೇ ತ್ರಿಪಿಟಕೆಗಳು ಹುಟ್ಟಿವೆ. ನಾಶನನ ಕ್ರಿಯೆಯಿಂದಲೇ ಗ್ರಂಥವು ಹುಟ್ಟಿದೆ ಈ ರೀತಿಯಾಗಿ ಬಸವನ ಹಿಂದಣ ಶರಣರ ಮತ್ತು ಬಸವನ ಕಾಲದ ಶರಣರ ಕ್ರಿಯೆಗಳಿಂದಲೇ ಆಗಮಗಳು ಹುಟ್ಟಿವೆ. ಶಿವನು ಕೂಡ ಆಗಮಗಳಲ್ಲಿ ಭಕ್ತರೂಪದಿಂದ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲಗಳನ್ನು ಬೋಧಿಸಿದನೆಂದು ಹೇಳುತ್ತಾರೆ.

## ಯೋಗಜಾಗಮದಲ್ಲಿ.

"ಅನಾದಿ ಭಕ್ತರೂಪೇಣ ಭಗವಾನ್ ಪರಮಶ್ಶಿವಃ ॥
ಪಂಚಾಚಾರಾಂಶ್ಚ ಷಡ್ರೂಪಾಣ್ಯಷ್ಟಾವರಣಾನಿಚ ॥
ಲಿಂಗಾಂಗಸಾಮರಸ್ಯಂಚ ಮುಕ್ತಿಮಾಹ ಜಗದ್ಗುರುಃ ॥"

ಈ ಕಾರಣಗಳಿಂದ ಬಸವನ ಹಿಂದಿನ ಶರಣರ ಮತ್ತು ಬಸವಾದಿ ಶರಣರ ವಚನಗಳು ಹುಟ್ಟಿದ ಕಾಲದಲ್ಲೇ ಜೋಡಿಗೇನೇ ಶಿವಾಗಮಗಳು

ಷ್ಟವೆಂಬುದು ಸಿದ್ಧವು. ಬಸವನು ಹಿಂದಿನ ಶರಣರ ಕಾಲದಲ್ಲಿ ಹುಟ್ಟಿದ ಆಗಮಗಳ ಆಧಾರಗಳನ್ನು ಅಲ್ಲಲ್ಲಿ ತೆಗೆದುಕೊಳ್ಳುತ್ತಾನೆ. ಅದು ನೈಜವಾಗಿಯೇ ಇದೆ. ಇದಕ್ಕೆ ಪುಷ್ಟೀಕರವಾಗಿ ಬಸವನು ವೀರಶೈವ ಮತಸ್ಥಾಪಕನೆಂದು ಅನೇಕ ವೀರಶೈವ ವಿದ್ವಾಂಸರು ತಮ್ಮ ಗ್ರಂಥಗಳಲ್ಲಿ ಹಾಡಿದ್ದಾರೆ.

## ಪಂಡಿತಾರಾಧ್ಯ ಚಾರಿತ್ರದಲ್ಲಿ:—

“ಕೃಪಯಾ ಶಿವಸದ್ಭಕ್ತಿರ್ಭುವಿ ಯೇನ ಪ್ರಕಾಶಿತಾ ॥
ದ್ವಿತೀಯ ಶಂಭು ಭಕ್ತಾತ್ಮಂ ನಮಾಮಿ ಬಸವೇಶ್ವರಂ ॥”

ಎಂದು ಹೇಳಿರುತ್ತದೆ.

## ವೀರಶೈವಾಚಾರಕೌಸ್ತುಭದಲ್ಲಿ.

“ವೀರಶೈವಮತಭೂಮಂದಾರಭೂಮೀರುಹಂ ॥
ವಂದೇಹಂ ಬಸವೇಶ್ವರಂ ಯಮವತಾರಿ ಸಬ್ರಹ್ಮವಿದ್ಯಾಗುರುಂ॥”

ಎಂದು ಹೇಳಿರುತ್ತದೆ.

## ಬಸವಾಷ್ಟಕದಲ್ಲಿ

“ಪ್ರಭ್ರಾಜದ್ವಾಗ್ವಿಸೃತವೇದಾಗಮಜಾಲಿಂ ॥
ವಂದೇಹಂ ತ್ವಾಂ ನಿರ್ಜಿತಪಾಪಂ ಬಸವೇಶಂ ॥”

ಎಂದು ಹೇಳಿರುತ್ತದೆ.

## ವೃಷಭೇಂದ್ರವಿಜಯದಲ್ಲಿ

“ಕಂ॥ ಪ್ರಮಥಪ್ರಥಮಾಚಾರ್ಯಂ ।
ಕುಮತತಮಸ್ಸೂರ್ಯನಾರ್ಯನಕುಲಿಕತಾರ್ಯಂ ॥
ನಮದಮರವರ್ಯನಭವಾ ।
ಗಮಧುರ್ಯಂ ಬಸವರಾಜನನುಪಮ ಶೌರ್ಯಂ ॥”

ಎಂದು ಹೇಳಿರುತ್ತದೆ.

## ಶಿವತತ್ವರತ್ನಾಕರದಲ್ಲಿ

“ಧರ್ಮಪ್ರವೃತ್ತಿಂ ಶಿಥಿಲಾಂ ವಿಲೋಕ್ಯ ಚ ಸಮಂಕಃ ॥
ಅವತೀರ್ಯ ದಯಾವಶ್ಯೋಭಗವಾನ್ ಬಸವೇಶ್ವರಃ ॥

ಧರ್ಮಂ ಸಂಸ್ಥಾಪಯಾಮಾಸ ಸರ್ವಮೇವ ಧರಾತಲೇ ॥
ವೀರಶೈವಮತಂ ಸ್ಥಾಪ್ಯ ಪ್ರಕಾಶನಮಥಾಕರೋತ್ ॥ "
ಎಂದು ಹೇಳಿರುತ್ತದೆ.

ಈ ರೀತಿಯಾಗಿ ಬಸವಾದಿ ಪ್ರಮಥರ ವಚನಗಳೂ ಶಿವಾಗಮಗಳೂ ಸಮಾನವಾದವುಗಳಾಗಿರುತ್ತವೆ. ಸಂಸ್ಕೃತದಲ್ಲಿ ಬರೆದ ಮಾತ್ರಕ್ಕೆ ಶಿವಾಗಮಗಳು ಮೇಲಲ್ಲ. ಕನ್ನಡದಲ್ಲಿ ಬರೆದ ಮಾತ್ರಕ್ಕೆ ಬಸವಾದಿ ಪ್ರಮಥರ ವಚನಗಳು ಕೀಳಲ್ಲಿ. ಬಸವಾದಿ ಪ್ರಮಥರು ಹೇಳಿದ್ದು ಶಿವನ ವಾಕ್ಯಗಳಾಗಿರುತ್ತವೆ. ಶಿವನು ಹೇಳಿದ ಶಿವಾಗಮಗಳು ಬಸವಾದಿ ಪ್ರಮಥರ ವಾಕ್ಯಗಳಾಗಿರುತ್ತವೆ. ಒಂದಕ್ಕೊಂದು ಬಿಡುವಿಲ್ಲದೆ ಸಂಬಂಧಿಸಿಕೊಂಡಿರುತ್ತವೆ. ಶಿವನು ಅನಾದಿ ಭಕ್ತರೂಪದಲ್ಲಿ ಶಿವಾಗಮಗಳನ್ನು ಹೇಳಿದುದಾಗಿರುತ್ತಾನೆ. ಬಸವನು ದ್ವಿತೀಯ ಶಂಭುವೆನಿಸಿರುತ್ತಾನೆ. ಶಿವಾಗಮಗಳೂ ಬಸವಾದಿ ಪ್ರಮಥವಚನಗಳೂ ಒಬ್ಬ ಸೂರ್ಯನ ಹಿಂಭಾಗ ಮುಂಭಾಗದಂತಿರುತ್ತವೆ.

ಈ ಕಾರಣದಿಂದ ಶಿವಾಗಮಗಳನ್ನು ಓದಿ ಬಸವಾದಿ ಪ್ರಮಥರ ವಚನಗಳನ್ನು ಓದಬೇಕು. ಬಸವಾದಿ ಪ್ರಮಥರ ವಚನಗಳನ್ನು ಓದಿ ಶಿವಾಗಮಗಳನ್ನು ಓದಬೇಕು. ಈ ವರೆಗೂ ಅಂದರೆ ವೀರಶೈವರಲ್ಲಿ ಡಂಬವೃತ್ತಿಗಳು ಅಂಕುರವಾದಂದೀಚೆಗೆ ಬಸವಾದಿ ಪ್ರಮಥರ ವಚನಗಳು ಕನ್ನಡದಲ್ಲಿರುವದರಿಂದ ಮತಕ್ಕೆ ಪ್ರಾಶಸ್ತ್ಯವಿಲ್ಲೆಂದು ಡಾಂಭಿಕರು ಅವುಗಳನ್ನು ವಕ್ರದೃಷ್ಟಿಯಿಂದ ನೋಡುತ್ತಾ ಬಂದಿರುತ್ತಾರೆ. ಭಾಷ್ಯಸಿದ್ಧಾಂತ ಮೊದಲಾದ ಡಂಭಿಶಬ್ದಾಪೇಕ್ಷಿಗಳಾಗಿರುತ್ತಾರೆ. ಭಾಷ್ಯಗಳೆಲ್ಲಿಂದ ಬಂದವು? ಬಸವಾದಿ ಪ್ರಮಥ ವಚನಗಳಲ್ಲಿ ಅತಿ ನೈರ್ಮಲ್ಯವಾಗಿಯೂ ಭಾವಪುಷ್ಟಿಯಿಂದಲೂ ಹೇಳಿರುವ ಷಟ್ಸ್ಥಲ ಬೋಧೆಯಿಂದಲೇ ಉತ್ಪನ್ನವಾದವುಗಳಾಗಿರುತ್ತವೆ. ತಾಯಿತಂದೆಗಳಿಂದ ಮಕ್ಕಳುಗಳು ಹುಟ್ಟುತ್ತಾರೆ. ಮಕ್ಕಳುಗಳು ನವೀನಗಳೆಂದು ತಾಯಿತಂದೆಗಳನ್ನು ಅಗಣನೀಯರನ್ನಾಗಿ ಮಾಡಬಹುದೆ? ಶ್ರೀಕರ ಭಾಷ್ಯವು ಬಸವಸಿಂದೀಚಿನದು. ಅವರ ವಿದ್ವತ್ತಿಗೆ ಗೌರವವನ್ನು ಕೊಡೋಣ. ಅದು ಬಸವಾದಿ ಪ್ರಮಥ ವಚನಗಳ ಆಶ್ರಯದ ಮೇಲೆ ಹುಟ್ಟಿದುದೆಂದು ನಾವುಗಳು ತಿಳಿಯಬೇಕು. ಎಲ್ಲ ಭಾಷ್ಯಗಳ ಪರಿಣಾಮವೂ ಹೀಗೆ ಎಂದೇ ತಿಳಿಯಬೇಕು.

ಈ ಬಗೆಯಿಂದ ವೀರಶೈವ ಮತಕ್ಕೆ ಶಿವಾಗಮಗಳೂ ಬಸವಾದಿ ಪ್ರಮಥ ವಚನಗಳೂ ಮೂಲಾಧಾರಗಳಾಗಿರುತ್ತವೆ. ಈಚೆಗೆ ವೀರಶೈವ ಮತಕ್ಕೆ ಒಂದು ದೊಡ್ಡ ಹಾನಿ ಸಂಭವಿಸಿರುತ್ತದೆ. ಕೆಲವು ಕಾರಣದಿಂದ ಅನೇಕ ಬದಲಾವಣೆಗಳನ್ನು ಮಾಡುತ್ತಲಿದ್ದಾರೆ. ನಾನು ಹಿಂದಿನ ಶಿವಾನುಭವದಲ್ಲಿ ಹೇಳಿರುವಂತೆ ಶಿವಾಗಮಗಳಿಗೆ ಕರ್ತೃ, ದೇಶ, ಕಾಲಗಳನ್ನು ಹೇಳುವದಕ್ಕೆ ಬರುವದಿಲ್ಲ. ಯಾರು ಯಾವಕಾಲದಲ್ಲಿ ಏನನ್ನಾದರೂ ಬರೆದು ಸೇರಿಸಿದರೆ ಅದು ಶಿವಾಗಮವಾಗಿ ಹೋಗಿಬಿಡುತ್ತದೆ. ಇದಕ್ಕೆ ಇಂಗ್ಲಿಷು ಚರಿತ್ರಕಾರರು *Interpolation* " ಎಂದು ಕರೆಯುತ್ತಾರೆ. ಕೆಲಜನ ಆಸಕ್ತರಿಂದ ಈಚೆಗೆ ಕೆಲವು ವಾಕ್ಯಗಳು ಸೇರಿಸಲ್ಪಟ್ಟು ಆಗಮಗಳ ಪಾರಿಶುದ್ಧ್ಯವು ಸ್ವಲ್ಪ ಮಟ್ಟಿಗೆ ಕೆಟ್ಟಿರುವಂತೆ ಅನುಮಾನ ಪಡುವದಕ್ಕೆ ಅವಕಾಶವಿದೆ. ಆದರೂ ಪೂರ್ವದ ಪಾರಿಶುದ್ಧ್ಯವು ಬಹಳವಾಗಿದ್ದು ಎಷ್ಟೋ ಅತ್ಯಲ್ಪವಾಗಿ ದುಡುಕಲ್ಪಟ್ಟಂತೆ ಕಾಣುತ್ತದೆ.

ಈ ವಿಧವಾದ ಪೆಟ್ಟಿಗೆ ಬಸವಾದಿ ಪ್ರಮಥರ ವಚನಗಳು ಶಿಕ್ಕದೆ ಇದ್ದದ್ದು ವೀರಶೈವರ ಪುಣ್ಯವೆಂದು ಹೇಳಬೇಕು. ಬಸವಾದಿ ಪ್ರಮಥರ ವಚನಗಳು ಹೇಗೆ ಹುಟ್ಟಿದವೋ ಈ ವರೆಗೂ ಹಾಗೇ ಬಂದಿರುತ್ತವೆ. ಗುಬ್ಬಿಮಲ್ಲಣಾರ್ಯರ ಕಾಲದ ವರಿಗೂ ಬಸವಾದಿ ಪ್ರಮಥರ ವಚನಗಳು ವೀರಶೈವರಿಂದ ಬಹಳ ಶ್ರದ್ಧೆಯಿಂದ ಓದಲ್ಪಡುತಲಿದ್ದವು. ಹಳ್ಳಿಹಳ್ಳಿಗಳಲ್ಲೂ ಊರು ಊರುಗಳಲ್ಲೂ ಓದಲ್ಪಡುತ್ತಲಿದ್ದವು. ಆಗಿನ ಕಾಲದವರೆಗೂ ಜನರ ಮನಸ್ಸುಗಳು ಕಲುಷಿತಗಳಾಗಿರಲಿಲ್ಲ. ಈಚೆಗೆ ಮೇಲೆ ಹೇಳಿದಂತೆ ಡಂಭ ಕಾರಣಗಳಿಂದ ಬಸವಾದಿ ಪ್ರಮಥ ವಚನಗಳ ಮೇಲೆ ಅಶ್ರದ್ಧೆಯುಂಟಾಯಿತು. ಇದು ಒಂದು ವಿಧದಲ್ಲಿ ಸರಿಯಾದುದಲ್ಲವಾದರೂ ಮತ್ತೊಂದುವಿಧದಲ್ಲಿ ಗುಣಕಾರಿಯಾಯಿತು. ಆಗಮಗಳಿಗೆ ಕಟ್ಟಿದ ಕೈದುಡುಕು ವಚನಗಳಿಗೆ ತಟ್ಟಲಿಲ್ಲ. ಅವು ಈ ವರೆಗೂ ಎಲ್ಲೆಲ್ಲಿ ಹೇಗೆ ಹೇಗೆ ಮಲಗಿಕೊಂಡಿದ್ದವೊ ಹಾಗೆಯೇ ಮಲಕೊಂಡಿದ್ದವು. ಇದರಿಂದ ವಚನಗಳ ಪಾರಿಶುದ್ಧ್ಯವು ಕೆಡುವದಕ್ಕವಕಾಶವಾಗಲಿಲ್ಲ. ವಚನಗಳಲ್ಲಿಯ ಷಟ್ಸ್ಥಲದ ಉದಾರ ತತ್ವಗಳು ಹುಟ್ಟಿದ ಹಾಗೆಯೇ ನಮ್ಮ ಕಣ್ಣು ಮುಂದೆ ಇಡಲ್ಪಟ್ಟಿವೆ. ಈ ಕಾರಣದಿಂದ ವೀರಶೈವದ ನಿಜತತ್ವವನ್ನು ಅಕಲುಷಿತವಾಗಿ ನಾವು ನೋಡಬೇಕಾದರೆ ಬಸವಾದಿ ಪ್ರಮಥ ವಚನದಲ್ಲಿಯೇ.

ಆದದರಿಂದ ಬಸವಾದಿ ಪ್ರಮಥ ವಚನಗಳು ತತ್ವನೈರ್ಮಲ್ಯವುಳ್ಳ ವುಗಳಾಗಿರುತ್ತವೆ.

ಬಸವಾದಿ ಪ್ರಮಥ ವಚನಗಳಿಂದ ಇನ್ನೊಂದು ದೊಡ್ಡ ಪ್ರಯೋಜನವೇನೆಂದರೆ—ವಚನಗಳನ್ನು ಅನಂತ ಜನಗಳು ಬರೆದಿರುತ್ತಾರೆ. ಅವರು ಹುಟ್ಟಿದ ದೇಶ, ಅವರು ಜೀವಿಸಿದ ಕಾಲ, ಅವರು ಮಾಡಿದ ಕಾರ್ಯ, ಅವರ ಹೆಸರುಗಳು ಇವೆಲ್ಲವೂ ಗೊತ್ತಾಗುತ್ತವೆ. ಇದರಿಂದ ಅವರ ಇತಿಹಾಸವು ಗೊತ್ತಾಗುತ್ತದೆ. ಕಾಲವನ್ನು ಹಿಂದು ಮುಂದಾಗಿ ಹೇಳುವದಕ್ಕೆ ಅವಕಾಶವಿಲ್ಲ. ವಚನಗಳಿಂದ ವೀರಶೈವದ ಮೂಲ ಚರಿತ್ರೆಯನ್ನು ಕಟ್ಟಬಹುದು.

ಆದದರಿಂದ ಬಸವಾದಿ ಪ್ರಮಥರ ವಚನಗಳು ಚಾರಿತ್ರಶುದ್ಧತೆಯುಳ್ಳವುಗಳಾಗಿರುತ್ತವೆ.



ಜ್ಞಾನಿಯಾಗಿದ್ದರೂ ಭಕ್ತಸ್ಥಲವನ್ನು ಬಿಡಕೂಡದು. ಅಂದರೆ ಅದರ ಲಕ್ಷಣವಾದ ನೈತಿಕಾಚರಣೆ ಕ್ರಿಯಾಕಾರ್ಯಗಳನ್ನು ಬಿಡಕೂಡದು. ಮಹೇಶ್ವರಸ್ಥಲದಲ್ಲಿದ್ದುಕೊಂಡು ಧೈರ್ಯಯುತನಾಗಿರತಕ್ಕದ್ದು. ಹಾಗೆಯೇ ಅವನು ನಿಷ್ಕಾಮಿಯಾಗಿ ಅರ್ಪಣಭಾವವುಳ್ಳವನಾಗಿ ಪ್ರಸಾದಿಸ್ಥಲದಲ್ಲಿ ಇರಬೇಕು. ಹಾಗೆಯೇ ಪ್ರಾಣಲಿಂಗಿಸ್ಥಲದಲ್ಲಿ ಇದ್ದು ತನ್ನಲ್ಲಿಂಬಾಗುವ ಲಿಂಗ ಕಳೆಗಳ ಪ್ರಕಾಶದಿಂದಲೇ ವ್ಯವಹರಿಸತಕ್ಕದ್ದು. ಮತ್ತು ತನ್ನ ಜ್ಞಾನದಲ್ಲಿ ಯಾವ ಬಗೆಯ ಭಿನ್ನಭಾವವನ್ನು ಹಿಡಿಯದೆ ಸಾಮರಸ್ಯವುಳ್ಳವನಾಗಿ ಆಚರಿಸತಕ್ಕದ್ದು. ಇದೇ ಶರಣನ ಐಕ್ಯವು. ಇದೇ ಪ್ರಕಾರ ಕಡೆಯಸ್ಥಲವಾದ ಐಕ್ಯದಲ್ಲಿಯೂ ಆಚರಿಸತಕ್ಕದ್ದು. ಇಲ್ಲಿಯಾದರೂ ಭಕ್ತಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣಸ್ಥಲಗಳಲ್ಲಿಯ ಆಚರಣೆಗಳನ್ನು ಬಿಡಕೂಡದು. ಒಂದುವೇಳೆ ಬಿಟ್ಟಿದ್ದಾದರೆ, ಅವನು ಐಕ್ಯಸ್ಥಲವನ್ನೇರಿದರೂ ಕೂಡ ಕೂಡಲೆ ಕೆಳಗೆ ಬಿದ್ದು ಬಿಡುವನು. ಹೀಗೆ ೬ ಸ್ಥಲಗಳ ಪ್ರಕಾರ ಮನುಷ್ಯನು ಆಚರಿಸುತ್ತ ಹೋದರೆ ಅವನು ಕಡೆಗೆ ಐಕ್ಯನ ಶರಣನಾಗಿ ಈ ಜಗತ್ತಿನಲ್ಲಿ ವ್ಯವಹರಿಸುವನು ಮತ್ತು ಮುಂದೆ ಅದಕ್ಕೂ ಕಡೆಯದಾದ ನಿರವಯ, ಅಥವಾ ಶೂನ್ಯ, ಅಥವಾ ಬಯಲು ಸ್ಥಲದಲ್ಲಿ ಲೀನನಾಗುವನು. ಈ ಪ್ರಕಾರ ಷಟ್‌ಸ್ಥಲಾನುಸಾರವಾಗಿ ನಡೆಯುವ ಲಿಂಗಾಂಗಿಗೆ ಒಂದೇ ಜನ್ಮದಲ್ಲಿ ಮುಕ್ತಿಯು ಒದಗುವದೆಂದು ವಚನಕಾರರು ಹೇಳುವದುಂಟು. ಯಾಕಂದರೆ ಹೀಗೆ ಮಾಡುವ ಕ್ರಿಯೆಗಳೆಲ್ಲವೂ ಫಲರಹಿತವಾಗಿರುವವು. ಸಂಚಿತ ಆಗಾಮಿ ಪ್ರಾರಬ್ಧ ಕರ್ಮಗಳೆಲ್ಲವೂ ನಾಶವಾಗುವವು. ಆದ್ದರಿಂದ ಅವನು ಪುನರ್ಜನ್ಮವನ್ನು ಹೊಂದಲಾರನು.

ಸೂಚನೆ:— ೩೬ ಸ್ಥಲಗಳ ತತ್ವಗಳ ಬಗ್ಗೆ ತಮ್ಮ ವಿಚಾರಗಳನ್ನು ಯಾರಿಗಾದರೂ ತಿಳಿಸುವದಿದ್ದರೆ ಅವರು ಆ ಬಗ್ಗೆ ಬರೆದು ನಮ್ಮ ಕಡೆಗೆ ತಿಳಿಸತಕ್ಕದ್ದು.

**ಸಂಪಾದಕ.**



# ರಾಜಯೋಗ ಮತ್ತು ಅದರ ಎಂಟು ಅಂಗಗಳು.

ಲೇಖಕ:—ಮಡಿವಾಳಪ್ಪ ಸಾಸನೂರ.



ಮಾನಸಿಕ ಎಡರುಗಳನ್ನು ದೂರ ಮಾಡಿ ಪೂರ್ಣ ಸಂಯಮಿತ, ನಿರೋಗಿ ಮನವನ್ನು ಪಡೆಯುವದೇ ರಾಜಯೋಗದ ಗೊತ್ತು. ಇಚ್ಛಾ ಮತ್ತು ಧಾರಣಾ ಶಕ್ತಿಗಳ ಬೆಳವಣಿಗೆಗ ಪಟ್ಟುಕೊಟ್ಟು ಸರ್ವ ಧರ್ಮಗಳ ಅಂತಿಮ ಗುರಿಯನ್ನು ಸತ್ಯಶೋಧಕನಿಗೆ ತೋರಗೊಡುವದೇ ಈ ರಾಜ ಯೋಗದ ಮುಖ್ಯ ಉದ್ದೇಶವು.

ಇಚ್ಛಾ ಮತ್ತು ಧಾರಣಾ ಶಕ್ತಿಗಳು ಇನ್ನಾವ ಶಾರೀರಕ ಬಲಕ್ಕಿಂತಲೂ ಬಹಳ ಹೆಚ್ಚಾದವುಗಳು. ಇದಲ್ಲದೆ ಉಳಿದೆಲ್ಲ ಬಲಸಾಧನೆಗಳಿಗೂ ಕೂಡ ಇವುಗಳ ಅಗತ್ಯವಿರುತ್ತದೆ. ಬಲವಾದ ಧಾರಣಾ ಶಕ್ತಿಯಿಂದೊಡಗೂಡಿ ಚನ್ನಾಗಿ ಬೆಳಿಗೆ ಹೊಂದಿದ ಇಚ್ಛಾಶಕ್ತಿಯಿಂದೊಡನೆ ನಿರ್ಬಂಧಿಸಿದ ಮನಸ್ಸುಳ್ಳವನು ಪ್ರಾಕೃತಿಕ ಶಕ್ತಿಗಳನ್ನು ವಶ ಪಡಿಸಿಕೊಂಡು ಬೇಗನೆ ಆತ್ಮಜ್ಞಾನವನು ಪಡೆಯುವನು. ಇವನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದನ್ನು ತಿಳಿಹೇಳುವದೇ ರಾಜಯೋಗದ ಮುಖ್ಯ ಗುರಿಯಾಗಿದೆ. ಪ್ರಾಚೀನ ಅಥವಾ ಅರ್ವಾಚೀನ ರಾಜಯೋಗಿಗಳ ಸಂಪರ್ಕದಲ್ಲಿ ಬಂದ ಪ್ರತಿಯೊಬ್ಬನು ಇದರ ಅಧ್ಯಯನಕ್ಕೆ ಉತ್ತೇಜನ ಕೊಟ್ಟಿದ್ದಾನೆ. ಇದು ಪಾಯಥ್ಯಾಗೋರಸ, ಪ್ಲೇಟೋ, ಪ್ಲೋಟಿನಸ ಪ್ರೋಕಸ ಮೊದಲಾದವರ ಸ್ತುತಿಗೆ ಅರ್ಹವಾಗಿದೆ. ಇಂದಿಗಾದರೂ ರೋಮನ್ ಕ್ಯಾಥಲಿಕ್ ಮತದ ಸನ್ಯಾಸಿ, ಸನ್ಯಾಸಿನಿಗಳು ಕೆಲವುಟ್ಟಿಗೆ ಇದನ್ನಾಚರಿಸುತ್ತಾರೆ. ಸ್ಪಿನೋಝಾ, ಕ್ಯಾಂಟ್, ಶೋಪೆನ್ ಹೋರ್, ರ್‍ಯಾಲ್ಫ ವ್ಯಾಲ್ಡೊ ಇಮರ್ಸನ್ ಮುಂತಾದವರು ಅದನ್ನು ಹೊಗಳಿದ್ದಾರೆ. ಮಾನವೀ ಆತ್ಮನ ನಿಜವಾದ ಸ್ವಭಾವದ ಗುಟ್ಟನ್ನು ಹೊರಗೆಡವಿ ಪ್ರತಿಯೊಬ್ಬನಲ್ಲಿಯೂ ಅಡಗಿಕೊಂಡಿದ್ದ ಶಕ್ತಿಗಳನ್ನು ಬೈಲಿಗೆ ತರುವದೇ ಅವರ ಗುರಿಯೆಂದು ಅವರು ಉಗ್ಗಡಿಸಿದ್ದಾರೆ. ಈ ಯೋಗಸಾಧನೆಯಿಂದ ಉಳಿದೆಲ್ಲ ಶಕ್ತಿಗಳ ನಿರ್ಬಂಧವು ಮಾಡಲ್ಪಡಬಲ್ಲದು ಎಂಬದು ಈಗಿದ್ದ ಎಷ್ಟೋ ಯೋಗಿಗಳ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ಮನಸ್ಸನ್ನಂಕೆಯಲ್ಲಿಟ್ಟುಕೊಂಡವನು, ಇಡೀ ವಿಶ್ವದ ಉಳಿದ ಶಕ್ತಿಗಳನ್ನು ಸಹಜವಾಗಿ ನಿರ್ಬಂಧಿಸಬಲ್ಲನೆಂಬುದೇ ರಾಜಯೋಗದ ಮುಖ್ಯ ಆಕಾಂಕ್ಷೆ.

ಮನಸ್ಸು ವಿಶ್ವದಲ್ಲಿಯ ಶಕ್ತಿಗಳೆಲ್ಲೆಲ್ಲ ಹೆಚ್ಚಿನದಿದ್ದು ಅದರ ಶಕ್ತಿಯನ್ನು ಯಾವದೊಂದು ಪದಾರ್ಥದ ಮೇಲೆ ಒಟ್ಟುಗೂಡಿಸಲು ಆ ಪದಾರ್ಥದ ನಿಜವಾದ ಅರಿವು ನಮಗಾಗುವದು. ಯಾವದೊಂದು ಉಪಕರಣದ ಸಹಾಯುವಿಲ್ಲದೆ ನಮ್ಮಲ್ಲಿ ಮೊದಲೇ ಇರುವ ಮಾನಸಿಕ ಶಕ್ತಿಗಳ ಉಪಯೋಗವನ್ನು ಯೋಗ್ಯರೀತಿಯಿಂದ ಮಾಡಿ ಯಾವದೊಂದು ಪದಾರ್ಥದ ಮೇಲೆ ಒಟ್ಟುಗೂಡಿಸಿದರೆ ಅದರ ಸಂಬಂಧವಾದ ಸಂಪೂರ್ಣ ತಿಳಿವು ನಮಗುಂಟಾಗುವುದು. ಈ ಪದಾರ್ಥವು ಮಾನಸಿಕವಿರಲಿ, ಶಾರೀರಿಕವಿರಲಿ, ಅಧ್ಯಾತ್ಮಿಕವಿರಲಿ, ಯೋಗಿಯ ಮನಸ್ಸು ವಿದ್ಯುತ್ತಿನ ಶೋಧಕಜ್ಯೋತಿ (*Electric search light*) ಯನ್ನು ಹೋಲುವದು. ದೂರದಲ್ಲಿರುವ ಯಾವದೊಂದು ವಸ್ತುವಿನ ಕಡೆಗೆ ಅದು ಸ್ಥೂಲವೇ ಇರಲಿ ಸೂಕ್ಷ್ಮವೇ ಇರಲಿ ಒಟ್ಟುಗೂಡಿಸಿ ಮಾನಸಿಕ ಕಿರಣಗಳನ್ನು ಒಗೆದರೆ ಆ ಕಿರಣಗಳಿಂದ ಲಕ್ಷಿತ ವಸ್ತುವು ಪ್ರಕಾಶಿಸಲ್ಪಟ್ಟು ಅದರ ಸಂಪೂರ್ಣಜ್ಞಾನವು ನಮಗಾಗುವದು. ಸಾಧಾರಣ ಜನರ ಚಿತ್ತವು ಅಷ್ಟು ತೀಕ್ಷ್ಣವಾದದ್ದಿರುವದಿಲ್ಲ. ಯಾಕಂದರೆ ಸಾಮಾನ್ಯತರದ ದೀವಿಗೆಗಳಂತೆ ಸಾಮಾನ್ಯಜನರ ಮನಸ್ಸಿನ ಕಿರಣಗಳಾದರೂ ಅತ್ತಿತ್ತ ಹರಡಿರುತ್ತವೆ. ವಿಶ್ವದಲ್ಲಿಯ ಯಾವ ಆಂತರಂಗಿಕ ಪದಾರ್ಥದ ಮೇಲೆಯೂ ಯಾವ ಸತ್ಯದ ಮೇಲೆಯೂ ಮಾನಸಿಕ ಶಕ್ತಿಗಳನ್ನು ಏಕೀಕರಿಸಿದರೂ ಅವುಗಳ ಸಂಪೂರ್ಣವಾದ ನಿಜವಾದ ಜ್ಞಾನವು ನಮಗಾಗುವದು.

ಇವೆಲ್ಲವುಗಳ ಮೇಲಿಂದ ಮನಃ ಶಕ್ತಿಯು ಇಂದ್ರಿಯ ಶಕ್ತಿಗಿಂತ ಅಥವಾ ಯಾವದೊಂದು ಸಾಧನ ಶಕ್ತಿಗಿಂತ ದೊಡ್ಡದು ಎಂದು ವ್ಯಕ್ತವಾಗುತ್ತದೆ. ಮನಸ್ಸನ್ನು ಅಂತರ್ಮುಖ ಮಾಡಿ ಮನಸ್ಸನ್ನು ಹೊರಗೆಳೆಯಲು ಪ್ರಯತ್ನಿಸುವ ಮೋಹಕ ದ್ರವ್ಯಗಳನ್ನೆಲ್ಲ ಬದಿಗೊತ್ತಿ ಮಾನಸಿಕ ಬಲವನ್ನೆಲ್ಲ ಆತ್ಮನ ಕಡೆಗೆ ಗುರುತಿಸಿದರೆ ನಮ್ಮ ನಿಜಸ್ವರೂಪದ ಜ್ಞಾನವು ನಮಗಾಗುವದು. ನಮ್ಮ ಅವಿನಾಶಿಯಾದ ಆತ್ಮನೇ ಎಲ್ಲರಲ್ಲಿಯ ಆತ್ಮನು. ವಿಶ್ವದಲ್ಲಿ ಕಡೆಗೊಂದು ಉಳಿಯುವದೇ ಅದು, ಎಂಬ ಜ್ಞಾನವು ನಮಗಾಗುವದು (ಏನೊಂದುಳಿಯುವದದನೆ ನೀನೆಂದು ತಿಳಿ ಮನುಜ—ಸರ್ಪಭೂಷಣ ಶಿವಯೋಗಿ) ನಮ್ಮ ಅಜ್ಞಾನ ವಶದಿಂದ ನಮ್ಮಿಂದ ಬೇರೆಯೆಂದು ಪೂಜಿಸುವ ಪರಮಾತ್ಮನು ನಮ್ಮಿಂದ ದೂರಿಲ್ಲ. ನಮ್ಮ ಹೊರಗಿಲ್ಲ ನಮ್ಮಲ್ಲಿಯೇ ವಾಸವಾಗಿಹ ಸರ್ವ ಶಕ್ತಿ ಆತ್ಮನೇ ಅವನು.

ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರ್ಪ ಪರಮಾತ್ಮನು ಒಬ್ಬನೇ. ವಿಶ್ವದಲ್ಲಿಯ ಪ್ರತಿಯೊಂದು ಪದಾರ್ಥದ ನಾಮರೂಪಗಳ ಒಡದಲ್ಲಿರುವ ಸಚ್ಚಿದಾನಂದ ಮೂರ್ತಿಯೇ ಅವನು. ಈ ಜ್ಞಾನವಾದೊಡನೆಯೇ ಆತ್ಮನಿಗೆ ಅಜ್ಞಾನ ದಿಂದ ಬಿಡುಗಡೆಯಾಗುವದು.

ಪ್ರತಿಯೊಬ್ಬ ವ್ಯಕ್ತಿಯ ಆಂತರಿಕ ಸ್ವಭಾವಕ್ಕನುಗುಣವಾಗಿಯೇ ಬಾಹ್ಯ ಜಗತ್ತಿನ ಅಸ್ತಿತ್ವವಿದೆಂದು ರಾಜಯೋಗವು ಹೇಳುತ್ತದೆ. ಹೊರಗಿನ ಜಗತ್ತು ಒಳಗಿನವರ ಪಡಿನೆಳಲು. ನಾವು ದೊರಕಿಸುವಂಥ ಅಥವಾ ಪರಿಗ್ರಹಿಸುವಂಥ ಯಾವದೊಂದ., ನಾವು ಈ ಮೊದಲೇ ಕೊಟ್ಟದ್ದರ ಪ್ರತಿಬಿಂಬ. ಮಾನಸಿಕ ಸೃಷ್ಟಿಯಾದರೋ ಯಾವದೊಂದು ಸಾಧನದಿಂದ ಅಥವಾ ಇಂದ್ರಿಯಗಳಿಂದ ಶೋಧಿಸಲಿಕ್ಕೆ ಸಾಧ್ಯವಾದ ಶಕ್ತಿಗಳ ಪರಿಣಾಮವು. ಇಂದ್ರಿಯ ಸಹಾಯದಿಂದ ಈ ಶಕ್ತಿಗಳ ಜ್ಞಾನ ಪಡೆಯಬೇಕೆಂದು ಎಷ್ಟು ಹೆಣಗಾಡಿದರೂ ಅದೇನು ಸಾಧ್ಯವಲ್ಲ. ರಾಜಯೋಗಿಗೆ ಇವೆಲ್ಲದರ ಚನ್ನಾದ ಅರಿವಿದ್ದು ಈ ಸಾಧನೆಗಳಿಗೆ ಅವನು ಬೆಲೆಕೊಡುವದಿಲ್ಲ. ಇಂದ್ರಿಯ ಶಕ್ತಿಗಳ ಮೇಲೆ ಅವನು ಕೈಯ್ಯಾರಿ ಕೂಡ್ರುವದಿಲ್ಲ. ಧಾರಣಾ ಶಕ್ತಿಯಿಂದ ಎಲ್ಲ ಜ್ಞಾನವನ್ನು ಪಡೆಯುವದೇ ಅವನ ಧ್ಯೇಯ ಇಂಥ ಆದರ್ಶವನ್ನು ಪಡೆಯಲಿಕ್ಕೆ ಬೇಕಾಗುವ ವಿವಿಧ ಪದ್ಧತಿಗಳೇ ರಾಜಯೋಗ ಶಾಸ್ತ್ರದಲ್ಲಿ ವಿವರಿಸಲ್ಪಟ್ಟಿದೆ. ಅದು ನಿಚ್ಚಳವಾಗಿಯೂ ಪದ್ಧತಿಗನುಸಾರವಾಗಿಯೂ ಧಾರಣೆಯನ್ನು ಹೆಚ್ಚಿಸುವ ರೀತಿಯನ್ನು ಚೊಕ್ಕಟವಾಗಿ ಹೇಳುತ್ತದೆ. ಯಾವದೊಂದನ್ನು ಪರಂಪರಾಗತವಿದ್ದ ಮಾತ್ರಕ್ಕೆ ಅಥವಾ ಶಾಸ್ತ್ರಾಧಾರಗಳಿಂದ ಎತ್ತಿ ಹಿಡಿಯಲ್ಪಟ್ಟ ಮಾತ್ರಕ್ಕೆ ಅದನ್ನಗ್ರಹಿಸಬೇಕೆಂದು ರಾಜಯೋಗವು ಸಾಧಕನಿಗೆ ಹೇಳುವದಿಲ್ಲ. ಆದರೆ ಅದು ಕೆಲವು ಸಂಗತಿಗಳನ್ನು ಹೇಳಿ, ಸಾಧಕನಿಂದ ಪ್ರಯೋಗ ಮಾಡಿಸಿ ಅದರ ಪರಿಣಾಮವನ್ನು ಕಂಡು ಹಿಡಿದು ಸ್ವತಃ ಸತ್ಯ ಸಿದ್ಧಾಂತಗಳನ್ನು ತೆಗೆಯಲಿಕ್ಕೆ ಹಚ್ಚುತ್ತದೆ.

ರಾಜಯೋಗದಲ್ಲಿ ಅತ್ಯದ್ಭುತ ಸಂಗತಿಯಾದರೂ ಅದಾವದೂ ಇಲ್ಲ. ನಮಗೆ ಅದ್ಭುತಗಳೆಂದು ಕಂಡುಬರುವ ಸಂಗತಿಗಳನ್ನು ಸಂಬಂಧಿಸಿದ ನಿಯಮಗಳನ್ನು ಅದು ಹೇಳುವದಲ್ಲದೆ ಎಂಥ ಪರಿಸ್ಥಿತಿಯಲ್ಲಿ ಅವು ಸಂಘಟಿಸುತ್ತವೆಂಬದನ್ನು ಸಹ ಹೇಳುತ್ತದೆ. ಯಾವದೊಂದು ಕಾರ್ಯದ ಕಾರಣವು ಗೊತ್ತಾಗುವ ವರೆಗೆ ಮಾತ್ರ ನಮಗೆ ಆ ಕಾರ್ಯವು

ಅಚ್ಚರಿಯ ವಿಷಯವಾಗುತ್ತದೆ. ತರ್ಕಶಕ್ತಿ ಮತ್ತು ಬುದ್ಧಿಶಕ್ತಿಗಳ ಬಲದಿಂದ ವಿಶ್ವದಲ್ಲಿಯ ಎಲ್ಲ ಕೂಟ ಪ್ರಶ್ನೆಗಳನ್ನು ರಾಜಯೋಗವು ಬಿಡಿಸುತ್ತದೆ. ಸರ್ವ ಧರ್ಮಗಳ ತುಟ್ಟತುದಿಗೆ ಆತ್ಮನನ್ನು ಮುಟ್ಟಿಸುವ ಬಗೆಯನ್ನು ಹೇಳುತ್ತದೆ. ಅದರ ಸಿದ್ಧಾಂತಗಳಾದರೋ ಅತಿ ನೀತಿಪರಗಳೂ ಉದ್ಧಾರಕಗಳೂ ಆಗಿವೆ. ಜೀವನದ ನಿಜವಾದ ಗುಟ್ಟನ್ನು ತಿಳಿಯಲಿಕ್ಕೆ ಅದು ಸಾಧಕನಿಗೆ ಸಹಾಯಮಾಡುವದಲ್ಲದೆ ಅದನ್ನು ಈಗಲೇ ಪಡೆಯುವ ರೀತಿಯನ್ನು ತಿಳಿಹೇಳುತ್ತದೆ. ನಾವು ಸತ್ತ ತರುವಾಯ ನಮ್ಮ ಸ್ಥಿತಿಯೇನಾಗುತ್ತದೆಂಬದನ್ನು ವಿಚಾರಿಸದೆ, ಸದ್ಯದ ಜೀವನದಲ್ಲಿ ಶಕ್ತಿದ್ದಷ್ಟು ಉಪಯೋಗ ಮಾಡಿಕೊಂಡು ನಮ್ಮಲ್ಲಿ ಮೊದಲೇ ಗೂಢವಾದ ಶಕ್ತಿಗಳನ್ನು ಬೈಲಿಗೆ ತಂದುಕೊಳ್ಳಬೇಕು, ಎಂದು ರಾಜಯೋಗವು ಸಾರುತ್ತದೆ. ಸದ್ಯದ ವಂಶಪರಂಪರಿಕೆಯು ಮುಂದಿನ ಜನ್ಮದ ತಳಹದಿಯೆಂದು ಮೇಲೆ ಮೇಲೆ ನಮ್ಮ ಸ್ಮೃತಿಪಥಕ್ಕೆ ತಂದುಕೊಡುತ್ತದೆ. ನಮ್ಮ ಮರಣಕ್ಕಿಂತ ಮೊದಲೇ ಕೆಲ ಶಕ್ತಿಗಳನ್ನು ಬೆಳಿಸಿದರೆ ಅಥವಾ ದೊರಕಿಸಿದರೆ ಆ ಶಕ್ತಿಗಳು ನಮ್ಮ ಮರಣಾನಂತರದಲ್ಲಿಯೂ ನಾಶವಾಗದೆ ನಾವು ಎಲ್ಲಿ ಹೋದರೂ ಅವು ನಮ್ಮಲ್ಲಿಯೇ ಉಳಿಯುತ್ತವೆ. ಆದರೆ ಬಾಹ್ಯ ಪದಾರ್ಥಗಳು ಮಾತ್ರ ಸತ್ತ ತರುವಾಯ ನಮ್ಮೊಡನೆ ಬರಲಾರವು. ಈ ಜನ್ಮದಿಂದ ನಾವು ಒಯ್ಯಬಹುದಾದವುಗಳೆಂದರೆ ನಮ್ಮ ಸ್ವಭಾವ, ನಮ್ಮ ಅನುಭವ ಮತ್ತು ಅದರಿಂದ ದೊರೆತ ಜ್ಞಾನ. ಅವೇ ನಮ್ಮ ನಿಜವಾದ ಸೊತ್ತು. ಈ ಸೊತ್ತನ್ನು ಕೈವಶಮಾಡಿಕೊಳ್ಳುವ ಕೆಲಸದಲ್ಲಿ ಕೈನೀಡುವದೇ ರಾಜಯೋಗದ ಗುರಿ. ಶುದ್ಧನೂ ನಿಃಸಂಶಯಮನವುಳ್ಳವನೂ ಸರ್ವ ಪದಾರ್ಥಗಳಿಂದ ಅಲಿಪ್ತನೂ ಆದ ರಾಜಯೋಗಿಯ ಸಹಾಯದಿಂದ ಅವನ ಹೇಳಿಕೆಯಂತೆ ನಡೆದು ರಾಜಯೋಗವನ್ನು ಕರಗತಮಾಡಿಕೊಳ್ಳಬಹುದು.

ರಾಜಯೋಗ ಸಾಧನೆಯು ಎಂಟು ಮೆಟ್ಟಿಲುಗಳಾಗಿ ವಿಭಾಗಿಸಲ್ಪಟ್ಟಿದೆ. ಯಮ ನಿಯಮಗಳು ನಮ್ಮ ನೈತಿಕ ನಿಯಮಗಳನ್ನೆಲ್ಲ ಒಳಗೊಂಡಿರುತ್ತವೆ. ಇವುಗಳನ್ನು ಕಠಿಣವಾಗಿ ಆಚರಿಸುವದು ಉಳಿದ ಮೆಟ್ಟಲುಗಳ ಸಾಧನೆಗೆ ಅತ್ಯಗತ್ಯವಾದದ್ದು. ಈ ಎರಡರಲ್ಲಿಯೇ ಬುದ್ಧದೇವನು ಹೇಳಿದ ಎಲ್ಲ ನೈತಿಕ ನಿಯಮಗಳೂ, ಕ್ರಿಸ್ತನು ಪರ್ವತದಮೇಲೆ ಹೇಳಿದ (*Sermon on the mount*) ಎಲ್ಲ ಸತ್ಯಸಿದ್ಧಾಂತ

ಗಳೂ ಒಳಸೇರುತ್ತವೆ. ರಾಜಯೋಗವನ್ನಾರಂಭಿಸುವವನು ಬಹು ಶುದ್ಧ ವಾದ ಮತ್ತು ನೀತಿಮತ್ತದ ಜೀವನವನ್ನಿಡಬೇಕು. ಇಲ್ಲದಿದ್ದರೆ ಅವನು ಮುಂದುವರಿಯನು. ಅಥವಾ ಕಡೆಯ ಗುರಿಯನ್ನು ನೋಡನು. ಅಥವಾ ಅವನಲ್ಲಿಯೇ ವಾಸವಾಗಿದ್ದ ಪರಮಾತ್ಮನನ್ನು ತಿಳಿಯನು. ಶುದ್ಧಚರಿತ್ರ ಬ್ರಹ್ಮಚರ್ಯ ಮತ್ತು ನೀತಿ ಮತ್ತತೆಗಳು ರಾಜಯೋಗವೆಂಬ ಮಂದಿರದ ಮೂಲೆಗಲ್ಲುಗಳೆಂಬವನ್ನು ಸಾಧಕನು ಚನ್ನಾಗಿ ನೆನಪಿನಲ್ಲಿಡಬೇಕಾಗುವದು. ಅಹಿಂಸಾ, ಸತ್ಯ ಅಸ್ತೇಯ (ಕಳವು ಮಾಡದೆ ಇರೋಣ) ಬ್ರಹ್ಮಚರ್ಯ. ಕ್ಷಮಾ (ತಾಳ್ಮೆ ಸ್ವಭಾವಸ್ಥಿರತೆ ಸರ್ವ ಭೂತಗಳಲ್ಲಿ ದಯಾ, ಸಾಧುತನ ಆಹಾರವಲ್ಲಿ ಸಾತ್ವಿಕತೆ ಸ್ವಚ್ಛತೆ ಇವು ಮೊದಲನೇ ಮೆಟ್ಟಲಿಗೆ ಹೊಂದಿದವು. ಅಂದರೆ 'ಯಮ' ಕ್ಕೆ ಸಂಬಂಧಿಸಿದವು. ಮೈಯಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಅಹಿಂಸಾವ್ರತವನ್ನು ಪಾಲಿಸಬೇಕು. ಅದರಂತೆಯೇ ಸತ್ಯ ಮತ್ತು ಅಸ್ತೇಯ. ವಿದ್ಯಾರ್ಥಿಯ ಮನಸ್ಸು ಸ್ಥಿರವಾಗತಕ್ಕದ್ದು. ಯಾಕಂದರೆ ಆಧ್ಯಾತ್ಮಿಕ ಪೂರ್ಣತೆಯನ್ನು ಪಡೆಯುವ ವರೆಗೆ ಅಡರುವ ಎಡರುಗಳಿಗೆಲ್ಲ ಎದೆಗೊಡಬೇಕಾಗುವದು. ಕ್ಷಣಿಕ ಮನಸ್ತೃಪ್ತಿಗೆಂದು ಅದರ ಅಧ್ಯಯನವನ್ನು ಮಾಡದೆ ತಾಳ್ಮೆ ಮತ್ತು ದೃಢನಿಶ್ಚಯಗಳಿಂದ ಆದರ ಸಾಧನೆ ಮಾಡಹತ್ತಿ ಅಂತಿಮಗುರಿಯನ್ನು ಮುಟ್ಟುವವರೆಗೆ ಹಿಂದುವರಿಯದಿರುವದೇ ಸಾಧಕನ ಹೆಗ್ಗುರುತು.

ಎರಡನೇ ಮೆಟ್ಟಲಿನಲ್ಲಿ ತಪಸ್ಸು, ತಾಳ್ಮೆ, ತೃಪ್ತಿ, ಆಸ್ತಿಕತೆ, ದಾನ ಅಧ್ಯಯನ, ಪರಮಾತ್ಮಾವಲಂಬನೆ ಮೊದಲಾದವು ಸೇರುತ್ತವೆ. ಶರೀರವನ್ನು ಪೂರ್ಣ ನಿರೋಗಿಯಾಗಿಡುವದಕ್ಕೆ ಬೇಕಾಗುವ ಎಲ್ಲ ಸಾಧನೆಯು ಮೂರನೆಯ ಮೆಟ್ಟಲಿನಲ್ಲಿ ಬರುತ್ತವೆ. ಅದಕ್ಕೆ ಆಸನವೆನ್ನುತ್ತಾರೆ. ಆರೋಗ್ಯವಾದರೋ ಸ್ವಸ್ವರೂಪ ಜ್ಞಾನಕ್ಕೆ ಅತ್ಯಾವಶ್ಯಕವಾದದ್ದು. ಬೇನೆಯಿಂದ ಬಳಲುತ್ತಿರುವ ಜನರು ತಮ್ಮ ಮನಸ್ಸನ್ನು ಏಕೀಕರಿಸಲು ಶಕ್ತರಾಗರು. ಯಾಕಂದರೆ ಅವರ ಮನಸ್ಸು ವ್ಯಾಧಿತ ಭಾಗಗಳ ಮೇಲೆಯೇ ಏಕಾಗ್ರವಾಗುವದು. ನಿರೋಗಿ ಶರೀರ ಮತ್ತು ಅಂಕೆಯಲ್ಲಿದ್ದ ಮನಸ್ಸುಗಳುಳ್ಳವನು ಬಹು ವೇಳೆಯ ವರೆಗೆ ಅವಯವಗಳಿಗೆ ನೋವಾಗದೆ ಕೂಡ್ರಲಿಕ್ಕೆ ಬರುವಂಥ ಆಸನವೊಂದನ್ನು ಆರಿಸಬೇಕು. ರಾಜಯೋಗ ಸಾಧನೆಯಲ್ಲಿ ಆಸನಗಳ ಮಹತ್ವವು ಹೇಳತಕ್ಕಷ್ಟಿಲ್ಲ. ಕುಳಿತು ಪ್ರಾಣಾಯಾಮ ಸಾಧನೆ ಮಾಡುವಾಗ ಬೆನ್ನೆಲುಬನ್ನು ಸರಳ ರೇಷೆಯಲ್ಲಿಟ್ಟರೆ ತೀರಿತು.

ಪ್ರಾಣಾಯಾಮವು ನಾಲ್ಕನೇ ಮೆಟ್ಟಲು. ಕೆಲವು ಸಾಧನೆಗಳಿಂದ ಅಸ್ವಸ್ಥತೆ, ಆಲಸ್ಯತನ, ಶಾರೀರಿಕ ದುರ್ಬಲತೆಗಳು ಹೋಗಿ (ಇಲ್ಲವಂತಾಗಿ) ಇಂದ್ರಿಯ ನಿಗ್ರಹ ಮಾಡುವದಕ್ಕೂ ಮನಸ್ಸನ್ನು ಏಕತಾನವಾಗಿ ಮಾಡಲಿಕ್ಕೂ ಸಹಾಯವಾಗುವದು. ನಿಯಮಿತವಾಗಿಯೇ ಈ ರೀತಿ ಸಾಧನೆ ಮಾಡುವವನಿಗೆ ಕೆಲ ದಿವಸಗಳಲ್ಲಿ ಶರೀರದ ಮೇಲೆಯೂ ಮನಸ್ಸಿನ ಮೇಲೆಯೂ ಉಚ್ಚವಾದ ಬಲವು ಅವನಿಗೆ ಪ್ರಾಪ್ತವಾಗುವದು. ದಣಿವು, ಚಿಂತೆ, ದೇಹ, ದೌರ್ಬಲ್ಯ, ನಿದ್ರಾಭಂಗಗಳಿಂದ ಬಳಲುತ್ತಿರುವವರು ಯೋಗ್ಯ ಪ್ರಾಣಾಯಾಮದಿಂದ ಅತ್ಯುತ್ತಮ ಪರಿಣಾಮವನ್ನು ಕಾಣಬಲ್ಲರು. ಪ್ರಾಣಾಯಾಮ ಸಾಧನೆಯನ್ನು ಮಾಡಿದವನಿಗೆ ಈ ಪರಿಣಾಮಗಳಾವವೆಂಬುವದು ಹೊಳೆಯುವದು. ಆದರೆ ರಾಜಯೋಗದಲ್ಲಿ ಪ್ರಾಣಾಯಾಮದ ಮುಖ್ಯ ಉಪಯೋಗವೆಂದರೆ ಧಾರಣಾ ಶಕ್ತಿಯನ್ನು ಬೆಳೆಗೊಡುವದು.

ಮನಸ್ಸನ್ನು ಅಂತರ್ಮುಖವಾಗಿ ಮಾಡುವದು ಐದನೆಯ ಮೆಟ್ಟಲು. ಇದಕ್ಕೆ ಪ್ರತ್ಯಾಹಾರವೆನ್ನುತ್ತಾರೆ ಬಾಹ್ಯ ಪದಾರ್ಥಗಳಿಂದ ಮನಸ್ಸನ್ನು ಜಗ್ಗಿ ಹಿಡಿದು, ಅಂತರ ಪದಾರ್ಥದ ಮೇಲಿರಿಸಿ ನಮ್ಮ ಅಂಕೆಯಲ್ಲಿ ತಂದುಕೊಳ್ಳುವದೇ ಈ ಮೆಟ್ಟಲಿನ ಸಾಧ್ಯ. ಇದು ಧಾರಣೆಯ ಪೂರ್ವಸಿದ್ಧತೆ. ಯಾವದೊಂದು ವಿಶಿಷ್ಟ ಪದಾರ್ಥದ ಮೇಲೆ ಮನಸ್ಸನ್ನು ಏಕೀಕರಿಸುವ ಮೊದಲು ಚಲ್ಲಾಪಿಲ್ಲಿಯಾದ ಮಾನಸಿಕ ಶಕ್ತಿಗಳನ್ನು ಒಟ್ಟುಗೂಡಿಸುವದು. ಸಾಧಕನಿಗೆ ಅವಶ್ಯ ಮಾನಸಿಕ ಶಕ್ತಿಗಳನ್ನೆಲ್ಲ ಒಟ್ಟುಗೂಡಿಸಿ ಮನಸ್ಸನ್ನು ಹೊರಗೆ ಹೋಗದಂತೆ ಮಾಡುವ ಪದ್ಧತಿಗೆಯೇ ಯೋಗಿಗಳು ಪ್ರತ್ಯಾಹಾರವೆನ್ನುತ್ತಾರೆ.

ಮುಂದಿನದು ಧಾರಣೆ. ಮೊದಲಿನ ಐದು ಮೆಟ್ಟಲುಗಳನ್ನು ಹತ್ತಿ ಆರನೆಯದಾದ ಧಾರಣೆಯ ಸಾಧನೆ ಮಾಡುವಾಗ ನಾವು ನೋಡಿ ಬೆಪ್ಪಾಗುವಂತಹ ಪರಿಣಾಮಗಳು ನಮಗೆ ಕಂಡು ಬರುವವು. ಆದರೆ ಮೊದಲಿನ ಐದನ್ನು ಸಾಧಿಸದವರಿಗೆ ಇದು ಬಹು ಬಿಗಿಯಾಗಿ ತೋರುವದು. ಯಾಕಂದರೆ ಒಳ್ಳೇ ಪರಿಣಾಮಗಳನ್ನು ಕಾಣಬೇಕಾದರೆ ಯೋಗ್ಯ ಕ್ಷೇತ್ರವು ಅವಶ್ಯವಾಗಿದೆ.

ಧ್ಯಾನವು ಏಳನೆಯದು. ಇದರಿಂದ ಎಂಟನೆಯ ಮೆಟ್ಟಲಾದ ಸಮಾಧಿಯನ್ನು ಪಡೆಯುವನು. ಈ ಸ್ಥಿತಿಯಲ್ಲಿ ಪ್ರತಿಯೊಬ್ಬನಿಗೆ ಸೂಕ್ಷ್ಮ ಪದಾ

ರ್ಥ ದರ್ಶನವುಂಟಾಗಿ ಒಳಗಣ್ಣು (ಆಧ್ಯಾತ್ಮಿಕ ನೇತ್ರವಾ ಜ್ಞಾನಚಕ್ಷು) ತೆರೆದು ಸ್ವಸ್ವರೂಪದ ನಿಜವಾದ ಜ್ಞಾನವುಂಟಾಗುವದು. ಈ ಸ್ಥಿತಿಯಲ್ಲಿ ಆತ್ಮನೂ ಪರಮಾತ್ಮನೂ ಒಂದೇ, ಎಂಬ ಅರಿವುಂಟಾಗಿ ಮಾನವೀ ಆತ್ಮನಿಗೆ ಬರಲಿಕ್ಕೆ ಶಕ್ಯವಾದ ಎಲ್ಲ ಪ್ರೇರಣೆಯನ್ನೂ, ಜ್ಞಾನವನ್ನೂ ಪಡೆಯುವನು. ಬ್ರಹ್ಮಜ್ಞಾನವು ಯಾವದೊಂದು ಬಾಹ್ಯ ಪದಾರ್ಥದಿಂದ ಅಥವಾ ಯಾವನೊಬ್ಬ ದೇವತೆಯ ಅನುಗ್ರಹದಿಂದ ಉಂಟಾಗುವದೆಂದು ಎಷ್ಟೋ ಜನರ ನಂಬಿಗೆಯುಂಟು. ಆದರೆ ಯೋಗಿಗೆ ಮಾತ್ರ "ದೈವಿಕ ಪ್ರೇರಣೆಯೆಂದು ಕರೆಯಲ್ಪಡುವದೆಲ್ಲವೂ ನಮ್ಮಲ್ಲಿಯೇ ಇರುವ ಪರಮಾತ್ಮನ ಆವಿರ್ಭಾವವು. ಆಧ್ಯಾತ್ಮಿಕ ಸತ್ಯ ತತ್ವಗಳ ನಿಜವಾದ ಜ್ಞಾನವು ರಾಜಯೋಗದ ಎಂಟನೇ ಪಾವಟಿಗೆಯನ್ನು ಹತ್ತಿದವನಿಗೆ ಸಾಧ್ಯವಾಗುತ್ತದೆ" ಎಂದು ಗೊತ್ತಾಗುತ್ತದೆ. ಅವಿಶ್ರಾಂತ ಶ್ರಮ, ದೃಢನಿಶ್ಚಯಗಳು, ಸಮಾಧಿ ಸಾಧನಕ್ಕೆ ಅತ್ಯಾವಶ್ಯವಾದವುಗಳು. ಆ ಸಮಾಧಿ ಸ್ಥಿತಿಯಲ್ಲಿ ಹೊಳೆಯುವ ಅರಿಕೆಯು ಬುದ್ಧಿಯಿಂದಾಗಲೀ, ಬೇರಿನ್ನಾವ ಮಾನಸಿಕ ಶಕ್ತಿಯಿಂದಾಗಲೀ ದೊರೆಯಲಾರದು. ಆದುದರಿಂದಲೇ 'ಸತ್ಯದ ಮೆಟ್ಟನ್ನು ಮುಟ್ಟಬೇಕಾದರೆ ಉದ್ಗ್ರಂಥಗಳ ಅಥವಾ ಸದ್ಗ್ರಂಥಗಳ ಅಧ್ಯಯನವು ಅಗತ್ಯವಾಗಿರದೆ ಬುದ್ಧಿಯಿಂದಾಗಲೀ, ಇಂದ್ರಿಯಗಳಿಂದಾಗಲೀ, ಅದು ಸಾಧ್ಯವಿಲ್ಲ. ಸಮಾಧಿ ಸ್ಥಿತಿಯನ್ನು ಮುಟ್ಟಿದರೆ ಮಾತ್ರ ಅದು ನಮಗೆ ಲಭಿಸುವದು ಎಂದು ಹೇಳುತ್ತಾರೆ. ಸತ್ಯ ಜ್ಞಾನಕ್ಕೋಸುಗ ಹಂಬಲಿಸುವವರೂ, ಅಂತಿಮದಲ್ಲಿ ಏನೊಂದು ಉಳಿಯುವದೆಂಬ ಶೋಧದಲ್ಲಿ ಜಿಜ್ಞಾಸೆಯುಂಟಾದರೆ ಹೆಣಗಾಡುವವರೂ, ಇಂದ್ರಿಯಗಳಿಂದ ಅಥವಾ ಬೇರೆ ಯಾವ ಸಾಧನೆಗಳಿಂದ ದೊರೆತ ಜ್ಞಾನದಿಂದ ತೃಪ್ತರಾಗದವರೂ ಸಮಾಧಿಯನ್ನು ಪಡೆಯಲಿಕ್ಕೆ ಟೊಂಕ ಕಟ್ಟಬೇಕು. ಅದರ ಸಹಾಯದಿಂದಲೇ ಅವರಿಗೆ ತಮ್ಮ ಗುರಿಯ ಅರಿವಾಗಿ ಸೌಖ್ಯದ ಇಕ್ಕೆಯನ್ನು ಹೊಂದುತ್ತಾರೆ. ಆದರೆ ಈ ಸ್ಥಿತಿಗೆ ಮುಟ್ಟುವ ಮೊದಲು ಈ ಮೊದಲೇ ಹೇಳಿಟ್ಟ ಮೆಟ್ಟಿಲುಗಳನ್ನು ಮಾತ್ರ ಶ್ರದ್ಧಾ ಪೂರ್ವಕವಾಗಿ ಅನುಸರಿಸಿ ದಾರಿಯಲ್ಲೆಲ್ಲ ಹರಡಿರುವ ಎಡರುಗಳನ್ನು ತಾಳ್ಮೆ, ದೃಢ ಸಂಕಲ್ಪಗಳಿಂದ ದೂರ ಮಾಡಬೇಕು.

ಆಲಸ್ಯ, ಬೇನೆ, ಮಾನಸಿಕ ಅಸ್ವಸ್ಥತೆ, ಸಂಶಯ ಸಮಾಧಿ ಸಾಧನಾಪ್ರಯತ್ನದಲ್ಲಿ ವಿರಾಮ, ಶರೀರಗುರುತ್ವ, ಪ್ರಾಪಂಚಿಕ ವಿಷಯಗಳ ಬಗ್ಗೆ

ಹಂಬಲ, ಅನೈಕಾಗ್ರತೆ, ಒಮ್ಮೆ ದೊರೆತ ಸ್ಥಿತಿಯಿಂದ ಚ್ಯುತರಾಗೋಣ, ಅನಿಯಮಿತಶ್ವಾಸೋಚ್ಛ್ವಾಸ ಮೊದಲಾದ ಅನೇಕ ಎಡರುಗಳು ಸಮಾಧಿಸಂಪಾದನೆಯ ಮಾರ್ಗದಲ್ಲಿ ತುಂಬಿಹೋಗಿವೆ. ಆದರೆ ಈ ಎಲ್ಲ ಎಡರುಗಳನ್ನು ಅನುಭವಿಕ ಯೋಗಿಯೊಬ್ಬನ ಶಿಷ್ಯತ್ವವನ್ನು ವಹಿಸಿ ಅವನ ಹೇಳಿಕೆಯಂತೆ ನಡೆದು ನಿಯಮಿತ ಆಚರಣೆಯಿಂದ ಸುಲಭವಾಗಿ ಹೊಡೆದೋಡಿಸಬಹುದು. ರಾಜಯೋಗದ ಸಾಧನೆಯನ್ನು ಯಾವನೊಬ್ಬನು ತಾನೇ ಮಾಡಹೋದರೆ ಅದರಿಂದ ಎಷ್ಟೋ ಕೆಡಕುಗಳುಂಟಾಗುವ ಸಂಭವವಿದೆ. ಆದರೆ ಹಾದಿತೋರಿಸಲಿಕ್ಕೊಬ್ಬ ಅನುಭವಿಕ ಗುರುವಿದ್ದರೆಸಾಕು. ಅಡರುವ ವಿಘ್ನಗಳೆಲ್ಲವನ್ನೂ ಸುಲಭವಾಗಿ ಜಯಿಸಿ ಯೋಗ್ಯ ಹಾದಿಯನ್ನು ಮುಟ್ಟುವದು ಅತಿ ಸುಲಭವಾದಮಾತು. ಈ ತೆರನಾದ ಸಾಧನೆಗಳಿಂದ ಸಾಧ್ಯವಾಗುವ ಕೆಲ ಕೆಲ ಶಕ್ತಿಗಳು ಅನನುಭವಿಕ ವಿದ್ಯಾರ್ಥಿಯಿಂದ ವ್ಯವಸ್ಥಿತವಾಗಿಟ್ಟುಕೊಳ್ಳದಷ್ಟು ಅದ್ಭುತವಾಗಿರುತ್ತವೆ. ಅವು ಅವನಿಗೆ ಸ್ವಲ್ಪ ಕೇಡನ್ನುಂಟುಮಾಡುವವೆಂದಿಷ್ಟೇ ಅಲ್ಲ ಒಮ್ಮೊಮ್ಮೆ ಅವನಿಗೆ ಪರಿಣಾಮಗಳನ್ನು ಕಂಡು ಹುಚ್ಚುಸಹ ಹಿಡಿಯಬಹುದು. ಅನುಭವಿಕ ಶಿಕ್ಷಕನ ಸಹಾಯವಿಲ್ಲದೆ ಸಾಧನಮಾಡಲೆಳಿಸಿದ ಸಾಧಕರಲ್ಲಿ ಇಂತಹ ಹಲವು ಉದಾಹರಣೆಗಳು ನಿಜವಾಗಿಯೇ ಕಣ್ಗೋಚರವಾಗುತ್ತವೆ.

ಎಲ್ಲ ವಿಘ್ನಗಳ ಪರಿಹಾರವಾದನಂತರ ರಾಜಯೋಗದ ಕಡೆಯ ಗುರಿಯನ್ನು ನಾನು ಮುಟ್ಟುತ್ತಿದ್ದೇನೆಂಬ ಆತ್ಮವಿಶ್ವಾಸವು ಸಾಧಕನಿಗೆ ಇರತಕ್ಕದ್ದು. ಸಮಾಧಿಪ್ರಾಪ್ತಿಯಾದನಂತರ ಎಲ್ಲ ಸಂಶಯಗಳು ಹೇಳ ಹೆಸರಿಲ್ಲದಂತಾಗುವವು ಆತ್ಮನಸಂಬಂಧದ ಎಲ್ಲ ತೊಡಕುಗಳು ಬಿಟ್ಟು ಹೋಗುವವು, ಸತ್ಯಾಸತ್ಯನ್ವೇಷಣೆಯ ಕೆಲಸವು ನಿಂತುಹೋಗುವದು. ಚಿತ್ತವು ಸ್ವಾಸ್ಥೈಯನ್ನೈದುವದು. ಮತ್ತೆ ಅವಿದ್ಯೆಮಾಯೆಗಳ ಸಂಕೋಲೆಗಳಿಂದ ಆತ್ಮನು ಬಿಡುಗಡೆಹೊಂದುವನು. ಈ ಯೋಗಿಯು ಎಂದಿಗೂ ಪ್ರಾಪಂಚಿಕಸುಖಗಳಬೆನ್ನುಹತ್ತನು. ಅಥವಾ ವಿಷಯಸುಖಗಳಿಂದ ವಿಭ್ರಾಂತನಾಗಲಾರನು. ವಿಶ್ವವೆಲ್ಲವೂ ಆ ಪರಮಾತ್ಮನ ಆಟದ ಭೂಮಿಯೆಂದೂ ತನ್ನ ಮನಸ್ಸು, ಶರೀರಗಳು ಆ ಸರ್ವಶಕ್ತನ ಸರ್ವತ್ರ ಪ್ರಕಟವಾದ ಇಚ್ಛೆಯ ಕೈಯಲ್ಲಿಯ ಬೊಂಬೆಗಳಂತೆ ಇರುತ್ತವೆಂದು ಸರ್ವದಾ ಅವನಿಗೆ ಭಾವನೆಯುಂಟಾಗುತ್ತಿರುತ್ತದೆ. ಈ ರೀತಿಯಾಗಿ ಆಧ್ಯಾತ್ಮಿಕಶಕ್ತಿ, ತೇಜಗ

ಳನ್ನು ಪಡೆದು ತನ್ನನ್ನು ತಾನೇ ಗೆದ್ದು ಈ ಜೀವನದಲ್ಲಿಯೇ ಎಲ್ಲ ಪ್ರಕೃತಿಗೆ ಒಡೆಯನಾಗುವನು.

ಯಾವನು ತನ್ನ ಮನ ಮತ್ತು ಮೈಯ್‌ಗಳನ್ನು ಚನ್ನಾಗಿ ಅಂಕೆಯಲ್ಲಿಟ್ಟುಕೊಂಡಿರುವನೋ ಯಾವನ ಆತ್ಮವು ಸ್ವಾತಂತ್ರ್ಯವನ್ನು ಪಡೆಯುತ್ತಿದೆಯೋ ಯಾವನು ಪ್ರತಿಯೊಂದು ಪದಾರ್ಥದಲ್ಲಿಯೂ ದೈವಿಕಭಾವನೆಯುಳ್ಳವನಾಗಿರುತ್ತಾನೆಯೋ, ಯಾವನು ಪ್ರತಿಯೊಂದನ್ನು ಸಚ್ಚಿದಾನಂದ ಪರಿಪೂರ್ಣತ್ವದ ಅನಂತ ಆಗರದ ಅಂಶವೆಂದು ಬಗೆಯುತ್ತಾನೆಯೋ ಅವನೇ ಈ ಭೂಮಿಯಲ್ಲಿ ನಿಜವಾಗಿ ಸೌಖ್ಯವನ್ನು ಪಡೆದವನು; ಅವನೇ ಈ ಜಗತ್ತನ್ನು ಗೆದ್ದವನು.

---

# ವೀರಶೈವ ಧರ್ಮದ ವೈಶಿಷ್ಟ್ಯಗಳು.

ಲೇಖಕ:— ಶಂಕರಪ್ಪ ಬಿ. ಎ.

ಮಾನವನು ತನ್ನ ಸುತ್ತುಮುತ್ತಲಿನ ಸೃಷ್ಟಿಚಮತ್ಕಾರವನ್ನೂ ಅದರ ಆಶಯವನ್ನೂ ತಿಳಿಯಲು ಸ್ವಭಾವವಾಗಿ ಕುತೂಹಲಪಡುವನು. ವೃಕ್ಷದ ಬೆಳವಣಿಗೆಗನುಗುಣವಾಗಿ ಅದರಲ್ಲಿ ಕೆತ್ತಿರುವ ಅಕ್ಷರವೂ ಬೆಳೆಯತೊಡಗುವಂತೆ ಜ್ಞಾನವೃದ್ಧಿಯಾದಂತೆ ಈ ತೆರನಾದ ಕುತೂಹಲವು ಹೆಚ್ಚುತ್ತ ಬರಲು ಅವನು ತತ್‌ಪ್ರೇರಣೆಯಿಂದ ಜಗತ್ತಿನಲ್ಲಿನ ಗೂಢ ತತ್ವಗಳನ್ನು ವಿಮರ್ಶಿಸಿ ಅವನ್ನು ತನ್ನ ಭಾವನೆಗಳಲ್ಲಿ ಅನುಕರಿಸಲೆತ್ನಿಸುವನು. ಈ ರೀತಿಯಾಗಿ ಪ್ರಕೃತಿಯ ತತ್ವವನ್ನು ತಮ್ಮ ಭಾವನಾನುಗುಣವಾಗಿ ಹೇಳಿದ ಹಿರಿಯರ ಅಭಿಪ್ರಾಯಗಳೇ ಮತವೆಂಬುವು. ಇವುಗಳ ಉತ್ಪತ್ತಿಗೆ ಕಾಲ ನಿರ್ಣಯವಿಲ್ಲ. ಮಾನವನ ವಿಮರ್ಶನಾಶಕ್ತಿಯು ವಿಕಸಿತವಾದಂದಿನಿಂದಲೂ ಇವು ಬೆಳಕಿಗೆ ಬಂದಿರುವುವು. ಇವುಗಳೊಂದೊಂದರ ಆಧಿಕ್ಯತೆಯು ಇವು ಜನಾಂಗವು ಮುಂದುವರಿಯಲು ಎಷ್ಟರಮಟ್ಟಿಗೆ ಸಹಾಯವಾಗಿವೆಂಬುದನ್ನನುಸರಿಸಿದೆ. ಆದ್ದರಿಂದ ಒಂದು ಮತವು ಕೇವಲ ವಂಶಪಾರಂಪರ್ಯದಿಂದ ಬಂದ ಮಾತ್ರಕ್ಕೆ ಹೆಚ್ಚೆಂದು ಹೇಳಲಾಗುವು

ದಿಲ್ಲ. ಸಾಲದುದಕ್ಕೆ ಇದು ಮುಗ್ಧಭಾವನೆಯ ಪೂರ್ವಯುಗವಲ್ಲ. ಅಜ್ಜಿ ಹಾಕಿದ ಮರವೆಂದು ನೇಣುಹಾಕಿಕೊಳ್ಳುವ ವಿಚಾರಹೀನತೆಯ ಕಾಲವಲ್ಲ. ಪ್ರತಿಯೊಬ್ಬನೂ ತನ್ನ ವಿವೇಚನಾಶಕ್ತಿಯಿಂದ ಪ್ರತಿಯೊಂದನ್ನೂ ವಿಮರ್ಶಿಸಿ ನಿರ್ಧರಿಸುವ ನವಯುಗ. ಜಗತ್ತಿನ ಪ್ರತಿಯೊಂದು ಜನಾಂಗವೂ ಮುಂದುವರಿಯಲು ಸತತ ಪ್ರಯತ್ನಮಾಡುತ್ತಿರುವುದು. ಸ್ಥಿರವೆಂದು ನಂಬಿಬಂದಿದ್ದ ವಸ್ತುಗಳೆಲ್ಲಾ ಬದಲಾಗತೊಡಗಿವೆ. ಜ್ಯೋತಿರ್ನಿಧಿಯೆಂದು ನಂಬಿಬಂದಿದ್ದ ಸೂರ್ಯನೇ ಇನ್ನಿಷ್ಟು ಕಾಲಕ್ಕೆ ಕಾಂತಿಹೀನನಾಗಿ ಕೇವಲ ಇದ್ದಲಿನ ಚಂಡಾಗುವನೆಂಬುವೇ ಮೊದಲಾದ ಭಾವನೆಯೂ ನಿಲುಕದ ನವಶೋಧೆಗಳಂತೂ ಮಿತಿಯಿಲ್ಲದೆ ಬೆಳಕಿಗೆ ಬರುತ್ತಿವೆ. ಪ್ರಕೃತ ಸ್ಥಿರವೆಂದು ನಂಬಿರುವುದು ಕೆಲಕಾಲಕ್ಕೆ ವ್ಯತ್ಯಾಸ ಹೊಂದಬಹುದೆಂಬುದಕ್ಕೆ ಇದೊಂದು ಉದಾಹರಣೆಯೇ ಸಾಕು. ಹೀಗೆಯೇ ಏಕಮಾತ್ರದೃಷ್ಟಿಯಿಂದ ನಂಬಿಬಂದಿರುವ ಮತವಿಚಾರವಾದರೂ ವ್ಯತ್ಯಾಸ ಹೊಂದಬಹುದು. ಯಾವಾಗಲೂ ಮುಗ್ಧ ನಂಬಿಕೆಗಿಂತ ಸಕಾರಣವಾದ ನಂಬಿಕೆಯು ಶ್ರೇಷ್ಠವಾದದ್ದು. ಆದ್ದರಿಂದ ವ್ಯತ್ಯಾಸವು ಬರಲಿ ಅಥವಾ ಬಾರದಿರಲಿ; ನಾವು ನಮ್ಮ ಬುದ್ಧಿಯ ಸಾಮರ್ಥ್ಯದಿಂದ ಇದರ ನೈಜವಾದ ಬೆಲೆಯನ್ನು ನಿರ್ಧರಿಸುವುದು ಅವಶ್ಯಕ. ಹೀಗೆ ಮಾಡುವುದರಿಂದ ಅದರಲ್ಲಿ ಬೂದಿ ಮುಚ್ಚಿದ ಕೆಂಡದಂತೆ ಅಡಗಿರುವ ಗೂಢ ವಿಚಾರಗಳನ್ನು ಬೆಳಕಿಗೆ ತರಲು ಅವಕಾಶವಾಗುತ್ತದೆ.

ಮೇಲೆ ಹೇಳಿದ ರೀತಿಯಲ್ಲಿ ಮಾನವ ಸೃಷ್ಟಿಯ ಭಿನ್ನ ಧರ್ಮಗಳ ಆಕರ್ಷಣೆಯಿಂದ ಜನಾಂಗವು ನಾನಾ ಪಂಗಡವಾಗಿ ಪರಿಣಮಿಸಲು ಅವೇ ವಿವಿಧ ಜಾತಿಗಳೆನ್ನಿಸಿಕೊಂಡುವು. ಅದುದರಿಂದ ವಿದ್ಯುದ್ದೀಪವೇ ಮೊದಲಾದ ಜ್ಯೋತಿಯ ನಾನಾ ಮಾರ್ಪಾಡುಗಳು ಅವುಗಳಿಗೆಲ್ಲಾ ಮೂಲವಾದ ತೇಜಸ್ಸಿನ ಬೆಲೆಯನ್ನು ಹೆಚ್ಚು ಹೆಚ್ಚಿಗೆ ತೋರಿಸಲು ಕಾರಣವಾಗುವಂತೆ ಈ ನಾನಾ ಮತಗಳು (ಜಾತಿಗಳು) ಇವೆಲ್ಲಕ್ಕೂ ಆಧಾರವಾದ ಇಡೀ ಜನಾಂಗದ ಅಧಿಕ್ಯತೆಯನ್ನು ಹೆಚ್ಚು ಹೆಚ್ಚು ಪ್ರದರ್ಶಿಸಲು ಸಾಧನವಾಗಬೇಕು. ಆದರೆ ಕಾರ್ಯತಃ ಹಾಗಿಲ್ಲದೆ ಈ ನಾನಾ ಮತಗಳು ಕೆಲಕಾಲ ಒಗ್ಗಟ್ಟಾಗಿಯೂ ಕೆಲಕಾಲ ಭಿನ್ನ ಭಿನ್ನವಾಗಿಯೂ ಬಂದು, ಜನಾಂಗದ ಉನ್ನತಿಕ್ಷೀಣತೆಗಳೆರಡಕ್ಕೂ ಕಾರಣವಾಗಿರುವವು. ಈ ನಾನಾ ಜಾತಿಗಳಲ್ಲಿ ವೀರಶೈವವು ಎಷ್ಟರಮಟ್ಟಿಗೆ ಇಡೀ ಜನಾಂಗದ ಶ್ರೇಯಃಪಥವ

ನ್ನನುಸರಿಸಿದೆ, ಯಾವ ರೀತಿಯಲ್ಲಿ ಜನಸಾಮಾನ್ಯರನ್ನೂ ಮೇಧಾವಿಗಳನ್ನೂ ಮುಂದುವರಿಸಿವೆ ಎಂಬುದನ್ನು ವಿಮರ್ಶಿಸುವಾ.

ಪ್ರತಿಯೊಂದ. ಜನಾಂಗದಲ್ಲಿಯೂ, ಮುಖ್ಯವಾಗಿ ನೆಲೆಸಿರಬೇಕಾದುದು ಐಕ್ಯ ಮತ್ಯ. ಒಬ್ಬರಲ್ಲೊಬ್ಬರು ಭೇದ ಭಾವವನ್ನೆಣಿಸದೆ ಸರ್ವರನ್ನೂ ತನ್ನಂತೆ ಕಾಣುತ್ತಾ ಭ್ರಾತೃಭಾವನೆಯಿಂದ ವರ್ತಿಸುವ ಸಮಾಜ ಪ್ರೇಮಿಗಳಿಂದ ಕೂಡಿದ ಜನಾಂಗವು ಉಳಿದ ಜನಾಂಗಗಳಿಗೆ ಆದರ್ಶವಾಗುತ್ತದೆ. ಏಕೆಂದರೆ ಈ ತೆರವಾದ ಭಾವನೆಯ ಬೆಳಕಿನಲ್ಲಿ ಮಾನವ ವ್ಯಾಪಾರವು ಸುಗಮವಾಗಿ ನಡೆಯಲು ಅವಕಾಶವಾಗುತ್ತದೆ. ಮತ್ತು ಇದೇ ಹಿಂದುಳಿದ ಸಮಾಜವನ್ನು ಮುಂದೆ ತರಲು ಶಕ್ಯವಾಗುತ್ತದೆ. ವೀರಶೈವ ಧರ್ಮದಲ್ಲಿ ಈ ಭಾವನೆಯು ಅಗ್ರಸ್ಥಾನವನ್ನು ಪಡೆದಿದೆ. ಉಚ್ಚ ನೀಚ ಭಾವನೆಯನ್ನಿಡದೆ ಯಾವ ಪಂಗಡದವನನ್ನಾದರೂ ಈ ಮತವು ಆದರದಿಂದ ಸ್ವೀಕರಿಸುತ್ತದೆ.

ಎರಡನೆಯದು ಕಾರ್ಯಗೌರವ (*Dignity of labour*). ಯಾವುದೊಂದು ಜನಾಂಗವು ಮುಂದೆ ಬರಬೇಕಾದರೆ ಆ ಜನಾಂಗದ ಪ್ರತಿಯೊಂದು ವ್ಯಕ್ತಿಯೂ ಉಚ್ಚ ನೀಚ ಭಾವಗಳನ್ನೆಣಿಸದೆ ಸರ್ವ ಕಾರ್ಯಗಳಲ್ಲಿಯೂ ಸಮ ಭಾಗವನ್ನು ತೆಗೆದುಕೊಳ್ಳಬೇಕು; ಕನಿಷ್ಟ ತರಗತಿಯ ಕೆಲಸ ಮಾಡುವುದು ಆತ್ಮ ಗೌರವಕ್ಕೆ ಕುಂದೆಂಬ ಕುತ್ಸಭಾವನೆಯು ಕೂಲಂಕಶವಾಗಿ ಕಳೆದು ಹೋಗಬೇಕು. ನವನಾಗರೀಕತೆ ಸಂಪತ್ಸಮೃದ್ಧಿ- ವಿವಿಧ ಶೋಧೆ ಮೊದಲಾದುವುಗಳಿಗೆ ಪ್ರಕೃತ ತವರ್ಮನೆಯಾಗಿರುವ ಅಮೇರಿಕ ಜರ್ಮನಿ ಮೊದಲಾದ ವಿದೇಶೀಯ ಜನಾಂಗಗಳ ಮುಂದುವರಿಯುವಿಕೆಗೆ ಇದೊಂದು ಮುಖ್ಯ ಕಾರಣವೆಂದರೆ ಸುಳ್ಳಾಗದು. ಕೋಟ್ಯಾಧೀಶರಾಗಿದ್ದರೂ ತಮ್ಮ ತಮ್ಮ ಕಾರ್ಯಗಳನ್ನೆಲ್ಲಾ ಸಹನೆಯಿಂದ ಆದಷ್ಟು ತಾವೇ ಮಾಡಿಕೊಳ್ಳುವುದು ಮುಂದಿನ ಜನಾಂಗದ ಜೀವವಾದ ಬಾಲ- ಬಾಲಕಿಯರು ಚಿಕ್ಕಂದಿನಿಂದಲೂ ಈ ಮಾರ್ಗವನ್ನನುಸರಿಸಲು ತಕ್ಕ ವ್ಯವಸ್ಥೆಗಳನ್ನು ಮಾಡುವುದು ಮತ್ತು ಮುಂದೆ ಬರಲು ವೇತನಾದಿಗಳನ್ನು ಕೊಡುವುದರ ಮೂಲಕ ಪ್ರೋತ್ಸಾಹಿಸುವುದು ಇವುಗಳಲ್ಲಿ ಅವರಿಗಿರುವ ಉತ್ಸಾಹವು ಇನ್ನುಳಿದ ಜನಾಂಗಗಳಿಗೆ ಆದರ್ಶವಾಗಿರುವುದು. ಈ ವಿಧವಾದ ಉತ್ಸುಕತೆಯು ಇತ್ತೀಚಿಗೆ ನಮ್ಮ ಭಾರತೀಯ ಜನಾಂಗದ ಅನೇಕ ಪಂಗಡಗಳಲ್ಲಿ ಕಂಡು ಬರುತ್ತಿರುವುದು. ಆದರೆ ಈ ವೀರಶೈವ ಮತದಲ್ಲಿ ಹನ್ನೆ

ರಡನೆಯು ಶತಮಾನದ ಹಿಂದಿನ ಚರಿತ್ರೆಗಳಿಂದೆಲ್ಲಾ ಈ ತೆರನಾದ ಕಾರ್ಯ ಗೌರವದ ಸುಧಾರಣೆಯು ಕಂಡು ಬರುವುದರಿಂದ ಇದು ಆ ಕಾಲ ದಿಂದಲೂ ಜನಾಂಗದ ಶ್ರೇಯಃ ಪಥವನ್ನನುಸರಿಸಿ ಬಂದಿರುವುದೆಂಬುದು ವೇದ್ಯವಾಗುವುದು.

ಮೂರನೆಯದು ಪುರುಷರಂತೆ ಸ್ತ್ರೀಯರಿಗೂ ಇರುವ ಸಮಾನ ಹಕ್ಕು. ಈ ಸಮಾಜವಲ್ಲಿ ಆದರ್ಶ ಜನಾಂಗವ ಮುಖ್ಯ ತತ್ವದಂತೆ ಸ್ತ್ರೀಯರಿಗೂ ಪುರುಷರಿಗಿರುವಷ್ಟೇ ಸ್ವಾತಂತ್ರವಿದೆ. ಅವರು ವಿವಾಹಿತ ರಾಗಿ ಪುರುಷರ ಸಮಭಾಗಿಗಳಾಗಲು ಅಥವಾ ಬಾಲಬ್ರಹ್ಮಚಾರಿಣಿಯ ರಾಗಿದ್ದು ಧರ್ಮಪಥದಲ್ಲಿ ಮುಂದುವರಿಯು ು ಪೂರ್ಣ ಸ್ವತಂತ್ರರು. ಸ್ತ್ರೀಪುರುಷರಿಗಿರುವ ಲಿಂಗಪೂಜಾದಿಗಳ ಸಮಾನ ಬ ಧ್ಯತೆಯಾದರೂ ಇದನ್ನೇ ಸೂಚಿಸುತ್ತದೆ.

ನೀತಿಯು ವಿಚಾರದಲ್ಲಿ ಈ ಮತ ಧರ್ಮವು ಇನ್ನುಳಿದ ಎಲ್ಲ ಮತ ಗಳ ದಿವ್ಯನೀತಿಗಳನ್ನೊಳಗೊಂಡಿದೆ ಮಾನವನ ಉನ್ನತಿಗೆ ಪ್ರಾಮುಖ್ಯ ವಾದ ಸತ್ಯ, ಅಹಿಂಸೆ, ಪ್ರಮಾಣಿಕತನ, ಧರ್ಮರಕ್ಷಣೆಯಲ್ಲಿ ಆತ್ಮತ್ಯಾಗ ಮೊದಲಾದವುಗಳ ವಿವಿಧ ಬೋಧೆಯೇ ಈ ಮತಧರ್ಮದ ಮುಖ್ಯ ಧ್ಯೇಯ. ಹಿಂಸಾತ್ಮಕವಾದ ಯಜ್ಞಯಾಗಾದಿಗಳನು ಮಾಡಲು ಈ ಮತವು ತಿಲಮಾತ್ರವೂ ಎಡೆಗೊಡದು. ಇವಕ್ಕೆ ಬದಲಾಗಿ ತಾಮಸ ವೃತ್ತಿಯ ವ್ರತಾಚರಣೆಗಳನ್ನು ಬೋಧಿಸುತ್ತದೆ; ವೇದಗಳನ್ನು ಧರ್ಮ ಗ್ರಂಥಗಳೆಂದು ಭಾವಿಸುವದಾದರೂ ಈ ವಿಚಾರಗಳಲ್ಲಿ ಮಾತ್ರ ನಿಷೇ ಧಿಸುತ್ತದೆ. ಮುಖ್ಯವಾಗಿ ಪಾರಮಾರ್ಥ ದೃಷ್ಟಿಯಲ್ಲಿ ಅದರಲ್ಲೂ ದೈವ ಸಾಕ್ಷಾತ್ಕಾರ ವಿಚಾರದಲ್ಲಿ ಇದರಷ್ಟು ಸುಗಮವೂ ಸುಲಭವೂ ಆದ ಧರ್ಮವು ಬೇರೊಂದಿಲ್ಲ. ಇದಕ್ಕೆ ನೂರಾರು ವರ್ಷಗಳ ಕಠಿಣ ಜಪ- ತಪಗಳಿಂದಲೂ ಇಷ್ಟಾರ್ಥಸಿದ್ಧಿಯನ್ನು ಪಡೆಯದ ಗೌತಮಾದಿ ಮುನಿ ಗಳು ಸುಲಭವಾಗಿ ಇಷ್ಟಸಿದ್ಧಿಯನ್ನು ಪಡೆಯುವುದಕ್ಕಾಗಿ ಈ ಮತಧ ರ್ಮವನ್ನು ಕೈಕೊಂಡುದೇ ಉದಾಹರಣೆಯಾಗಿದೆ.

ಈ ರೀತಿಯಾಗಿ ವೀರಶೈವ ಧರ್ಮವು ಜನಜೀವನದ ಆದರ್ಶ ಧರ್ಮಗಳ ಬಾಂಡಾಗಾರವೆನಿಸಿ ಭರತಖಂಡದ ದಕ್ಷಿಣಾರ್ಧದಲ್ಲಿ ಅದ ರಲ್ಲೂ ಮುಖ್ಯವಾಗಿ ಕರ್ನಾಟಕದಲ್ಲಿ ಉಡುಗಣದ ನಡುವಿನ ಚಂದ್ರ ನಂತೆ ರಂಜಿಸುತ್ತಿರುವುದು.

# ಏಕಾಂತವು.

ಲೇಖಕ:— ಶಿವರಾಜಪ್ಪ ವಕೀಲ್ ರಾಯಚೂರ ಮುಕ್ಕಾಂ ಕಲಬುರ್ಗಿ

ಅತ್ಯುನ್ನತವಾದ ಜೀವನಕ್ಕೆ ಅತ್ಯಂತ ಅವಶ್ಯಕವಾದುದು ಏಕಾಂತವು. ಶರೀರದ ಪ್ರಾಣಕ್ಕೆ ಬೆಳಕು ಗಾಳಿಯು ಹೇಗೆ ಅವಶ್ಯಕವಾದುದೋ ಹಾಗೆಯೇ ಆತ್ಮದ ಪ್ರಾಣಕ್ಕೂ ಏಕಾಂತವು ಅವಶ್ಯಕವಾದುದು. ಏಕಾಂತದಲ್ಲಿಯೇ ಆತ್ಮಜೀವನ ರಕ್ಷಣಕ್ಕೆ ಬೇಕಾದ ಪರಿಶುದ್ಧವಾಯುವೂ ನಿರ್ಮಲೋದಕವೂ ಇರುವವು. ಏಕಾಂತವನ್ನನುಭವಿಸದೆ ಆವಾಗಲೂ ಮಾನವ ಸಂಘದಲ್ಲಿಯೇ ಮಗ್ನವಾಗಿರುವ ಆತ್ಮನ ಪೋಷಣೆ ಇಲ್ಲದೆ ಶುಷ್ಕಿಸಿ ಹೋಗುವದು. ಏಕಾಂತದಲ್ಲಿರುವ ನಿರ್ಮಲಕಾಂತಿಯನ್ನನುಭವಿಸದೆ ಯಾವಾಗಲೂ ಅಂಧಕಾರಾವೃತವಾದ ಈ ಸಂಕುಚಿತ ಮಾನವ ಪ್ರಪಂಚದಲ್ಲಿಯೇ ಇರುವದರಿಂದ ತನ್ನ ಸಹಜವಾದ ದೃಷ್ಟಿಯನ್ನು ಕಳೆದುಕೊಂಡು ಅಂಧಕತ್ವವನ್ನು ಹೊಂದುವದು. ಈ ಪ್ರಪಂಚದ ರಣಗೊಣ ಧ್ವನಿಯಲ್ಲಿಯೇ ಸರ್ವದಾ ಮುಳುಗಿರುವದರಿಂದ ತನ್ನ ಅತಿ ಕೋಮಲವಾದ ಕರ್ಣಗಳು ತಮ್ಮ ಸಹಜ ವ್ಯಾಪಾರವನ್ನು ಕಳೆದುಕೊಂಡು ಏಕಾಂತದೊಳಗಿನ ನಿಶ್ಶಬ್ದ ನುಡಿಗಳನ್ನು ಕೇಳಲಾರದೆ ಬಧಿರತ್ವನ್ನು ಹೊಂದುವದು. ಆತ್ಮನು ಕ್ರಮವಾಗಿ ಶುಷ್ಕಿಸುತ್ತ ಜೀರ್ಣವಾಗಿ ಪ್ರಾಣವನ್ನು ಕಳೆದುಕೊಂಡು ಜಡತ್ವವನ್ನೂ ಹೊಂದುವದು. ತುಚ್ಛವಾದ ಈ ಪ್ರಾಪಂಚಿಕ ಸುಖಗಳಿಂದ ತೃಪ್ತನಾಗದೆ ಉತ್ತಮ ಜೀವಿತಕ್ಕಾಗಿಯೂ, ನಿರ್ಮಲ ಶಾಂತಿಗಾಗಿಯೂ, ಪರಿಶುದ್ಧವಾದ ಆನಂದಕ್ಕಾಗಿಯೂ ಅನ್ವೇಷಿಸುವವರು ಕೊಂಚಕಾಲ ಏಕಾಂತವಾಗಿರಬೇಕು. ಪಕ್ಷಿಗಳಿಗೆ ವಾಯುವು ಹೇಗೋ ಮತ್ಸ್ಯಗಳಿಗೆ ನೀರು ಹೇಗೋ ಹಾಗೆ ಆತ್ಮಕ್ಕೆ ಏಕಾಂತವು.

ಏಕಾಂತವು ಶೂನ್ಯಪ್ರದೇಶವಲ್ಲವು. ಅಲ್ಲಿ ಅದ್ಭುತಕಾಂತಿ ಇರುವದು. ಹಿತಕರವಾದ ತಂಗಾಳಿಯು ಬೀಸುವದು. ಮಧುರವಾದ ಸಂಗೀತವು ಕೇಳಬರುವುದು. ನದಿಗಳು ಆನಂದೋದಕದಿಂದ ಪ್ರವಹಿಸುತ್ತಿರುವವು. ತೃಪ್ತಿಯಾಗುವಂತೆ ಪಾನಮಾಡಿ ಆನಂದವನ್ನು ಹೊಂದಬಹುದು. ಏಕಾಂತವು ಈಶ್ವರನ ಉದ್ಯಾನವು. ಅದರ ಸೌಂದರ್ಯವನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯವು? ಮನುಷ್ಯನು ಪ್ರಪಂಚದಿಂದ ತಪ್ಪಿಸಿ

ಕೊಂಡು ಪ್ರಕೃತಿ ಎಂಬ ಈಶ್ವರನ ಉದ್ಯಾನಕ್ಕೆ ಹೋದಲ್ಲಿ ಸೃಷ್ಟಿಕರ್ತನಾದ ಪರಮಾತ್ಮನ ನಿರ್ಮಲ ಸೌಂದರ್ಯವನ್ನು ನೋಡಬಹುದು. ಪ್ರಪಂಚದಲ್ಲಿಯ ನವವಿಧ ವಿಷಯಗಳು ನಮ್ಮ ಮನಸ್ಸುಗಳನ್ನು ಈಶ್ವರನಿಂದ ದೂರಮಾಡುತ್ತಿರುವವು. ಮಲಿನತ್ವದಿಂದಲೂ ಪಾಪದಿಂದಲೂ ಅಜ್ಞಾನದಿಂದಲೂ ಅಂಧತ್ವದಿಂದಲೂ ಈಶ್ವರನ ದಿವ್ಯ ಮುಖಾರವಿಂದವನ್ನು ಪ್ರಪಂಚದಲ್ಲಿ ಗುರ್ತಿಸುವದು ದುರ್ಲಭವಾಗುವದು. ನಾವು ಪ್ರಪಂಚದ ವ್ಯಾಪಾರಗಳಲ್ಲಿ ಮುಳುಗಿಹೋಗಿ ಶಾಶ್ವತವಾದ ಆಧ್ಯಾತ್ಮ ಪದಾರ್ಥಗಳನ್ನು ಮರೆಯುತ್ತಿರುವೆವು. ಇದರಿಂದ ಪ್ರಪಂಚದ ರಣಗೊಂಡ ಧ್ವನಿಯಲ್ಲಿ ಸಿಲುಕಿಕೊಂಡು ಈಶ್ವರನ ಸೂಕ್ಷ್ಮವಾಣಿಯನ್ನು ಕೇಳಲಾರದೆ ಹಿಂಗುವೆವು. ನಮ್ಮನ್ನು ನಾವೇ ಮರೆಯುತ್ತಿರುವೆವು. ಕ್ಷಣಭಂಗುರವಾದ ಈ ದೇಹವೇ ನಾವೆಂದು ಭ್ರಮಿಸುತ್ತಿರುವೆವು. ನಮ್ಮ ಆತ್ಮನೊಂದಿಗೆ ಕೇವಲ ಪರಿಚಯವೇ ಇಲ್ಲದೆ ಇರುವೆವು. ಆದರೆ ನಾವು ಈ ಮಾನವ ಪ್ರಪಂಚವನ್ನು ಬಿಟ್ಟು ಪ್ರಕೃತಿಯೊಳಗೆ ಹೋಗಿ ಕೊಂಚ ಕಾಲವಿದ್ದಲ್ಲಿ ಎಲ್ಲವು ಮಾರ್ಪನ್ನು ಹೊಂದುವವು. ನಮಗೆ ನೂತನ ಜೀವನವು ಲಭಿಸುವದು. ಪ್ರಕೃತಿಸೌಂದರ್ಯವನ್ನು ನೋಡುತ್ತಲೇ ಈಶ್ವರನ ಸೌಂದರ್ಯವು ನಮಗೆ ಗೋಚರವಾಗುವದು. ಅಲ್ಲಿ ಮನಸ್ಸುಗಳನ್ನು ಕಳವಳಗೊಳಿಸುವ ವಿಷಯಗಳಿರಲಾರವು.

ಬ್ರೌನಿಂಗ ಮಹಾ ಕವಿಯು ಹೀಗೆಂದು ಹೇಳಿರುವನು. ಏನೆಂದರೆ “ಅಣುವಿನಿಂದ ಬ್ರಹ್ಮಾಂಡದ ವರೆಗೂ ಪ್ರತಿ ವಸ್ತುವಿನಲ್ಲಿಯೂ ಈಶ್ವರನು ವಾಸಮಾಡುತ್ತಿರುವನು. ಬ್ರಹ್ಮಾಂಡದಲ್ಲಿನ ವಿವಿಧ ವಸ್ತುಗಳಿಗೆ ಸಮೀಪ ಬಾಂಧವ್ಯವನ್ನುಂಟು ಮಾಡುತ್ತಿರುವನು. ಸರ್ವವ್ಯಾಪಕವಾದ ಪರಬ್ರಹ್ಮವೇ ವಿಶ್ವಮಯನಾದ ಭಗವಂತನ ನಿಜಸ್ವರೂಪವನ್ನು ಏಕಾಂತದಲ್ಲಿಯೇ ಕಂಡುಕೊಳ್ಳುತ್ತಿರುವೆವು. ಏಕಾಂತವೇ ಕವಿ ಜನ ಹೃದಯಗಳನ್ನು ವಿಕಸಿಸುವಂತೆ ಮಾಡಿ ಅವರ ದಿವ್ಯ ಕಾವ್ಯಗಳನ್ನು ಸೃಷ್ಟಿಸುವಂತೆ ಮಾಡುತ್ತಿರುವದು.” ಆದುದರಿಂದಲೇ ತತ್ವ ಶಾಸ್ತ್ರವಿಶಾರದನೂ, ಕವಿಸಾರ್ವಭೌಮನೂ ಆದ ಗೇಟೆ. ಹೀಗೆಂದು ಹೇಳಿದನು. ಏನೆಂದರೆ — “ಏಕಾಂತವೇ ನಮಗೆ ಈಶ್ವರನನ್ನು ಸಂದರ್ಶಿಸುವಂತಹ ದಿವ್ಯ ದೃಷ್ಟಿಯನ್ನು ಕೊಡುತ್ತಿರುವದು” .. ಮಹಮ್ಮದ ಪೈಗಂಬರನು ತನಗೆ ಅನೇಕ ಕಷ್ಟಗಳು ಬಂದರೂ ನಲವತ್ತು ದಿನಗಳ ವರೆಗೆ ಅರಣ್ಯವಾಸ ಮಾಡಿ

# ಏಕಾಂತವು.

ಲೇಖಕ:— ಶಿವರಾಜಪ್ಪ ವಕೀಲ್ ರಾಯಚೂರ ಮುಕ್ಕಾಂ ಕಲಬುರ್ಗಿ



ಅತ್ಯುನ್ನತವಾದ ಜೀವನಕ್ಕೆ ಅತ್ಯಂತ ಅವಶ್ಯಕವಾದುದು ಏಕಾಂತವು. ಶರೀರದ ಪ್ರಾಣಕ್ಕೆ ಬೆಳಕು ಗಾಳಿಯು ಹೇಗೆ ಅವಶ್ಯಕವಾದುದೋ ಹಾಗೆಯೇ ಆತ್ಮದ ಪ್ರಾಣಕ್ಕೂ ಏಕಾಂತವು ಅವಶ್ಯಕವಾದುದು. ಏಕಾಂತದಲ್ಲಿಯೇ ಆತ್ಮಜೀವನ ರಕ್ಷಣಕ್ಕೆ ಬೇಕಾದ ಪರಿಶುದ್ಧವಾಯುವೂ ನಿರ್ಮಲೋದಕವೂ ಇರುವವು. ಏಕಾಂತವನ್ನನುಭವಿಸದೆ ಅನಾಗಲೂ ಮಾನವ ಸಂಘದಲ್ಲಿಯೇ ಮಗ್ನವಾಗಿರುವ ಆತ್ಮನ ಪೋಷಣೆ ಇಲ್ಲದೆ ಶುಷ್ಕಿಸಿ ಹೋಗುವದು. ಏಕಾಂತದಲ್ಲಿರುವ ನಿರ್ಮಲಕಾಂತಿಯನ್ನನುಭವಿಸದೆ ಯಾವಾಗಲೂ ಅಂಧಕಾರಾವೃತವಾದ ಈ ಸಂಕುಚಿತ ಮಾನವ ಪ್ರಪಂಚದಲ್ಲಿಯೇ ಇರುವದರಿಂದ ತನ್ನ ಸಹಜವಾದ ದೃಷ್ಟಿಯನ್ನು ಕಳೆದುಕೊಂಡು ಅಂಧಕತ್ವವನ್ನು ಹೊಂದುವದು. ಈ ಪ್ರಪಂಚದ ರಣಗೊಣ ಧ್ವನಿಯಲ್ಲಿಯೇ ಸರ್ವದಾ ಮುಳುಗಿರುವದರಿಂದ ತನ್ನ ಅತಿ ಕೋಮಲವಾದ ಕರ್ಣಗಳು ತಮ್ಮ ಸಹಜ ವ್ಯಾಪಾರವನ್ನು ಕಳೆದುಕೊಂಡು ಏಕಾಂತದೊಳಗಿನ ನಿಶ್ಶಬ್ದ ನುಡಿಗಳನ್ನು ಕೇಳಲಾರದೆ ಬಧಿರತ್ವನ್ನು ಹೊಂದುವದು. ಆತ್ಮನು ಕ್ರಮವಾಗಿ ಶುಷ್ಕಿಸುತ್ತ ಜೀರ್ಣವಾಗಿ ಪ್ರಾಣವನ್ನು ಕಳೆದುಕೊಂಡು ಜಡತ್ವವನ್ನೂ ಹೊಂದುವದು. ತುಚ್ಛವಾದ ಈ ಪ್ರಾಪಂಚಿಕ ಸುಖಗಳಿಂದ ತೃಪ್ತನಾಗದೆ ಉತ್ತಮ ಜೀವಿತಕ್ಕಾಗಿಯೂ, ನಿರ್ಮಲ ಶಾಂತಿಗಾಗಿಯೂ, ಪರಿಶುದ್ಧವಾದ ಆನಂದಕ್ಕಾಗಿಯೂ ಅನ್ವೇಷಿಸುವವರು ಕೊಂಚಕಾಲ ಏಕಾಂತವಾಗಿರಬೇಕು. ಪಕ್ಷಿಗಳಿಗೆ ವಾಯುವು ಹೇಗೋ ಮತ್ಸ್ಯಗಳಿಗೆ ನೀರು ಹೇಗೋ ಹಾಗೆ ಆತ್ಮಕ್ಕೆ ಏಕಾಂತವು.

ಏಕಾಂತವು ಶೂನ್ಯಪ್ರದೇಶವಲ್ಲವು. ಅಲ್ಲಿ ಅದ್ಭುತಕಾಂತಿ ಇರುವದು. ಹಿತಕರವಾದ ತಂಗಾಳಿಯು ಬೀಸುವದು. ಮಧುರವಾದ ಸಂಗೀತವು ಕೇಳಬರುವುದು. ನದಿಗಳು ಆನಂದೋದಕದಿಂದ ಪ್ರವಹಿಸುತ್ತಿರುವವು. ತೃಪ್ತಿಯಾಗುವಂತೆ ಪಾನಮಾಡಿ ಆನಂದವನ್ನು ಹೊಂದಬಹುದು. ಏಕಾಂತವು ಈಶ್ವರನ ಉದ್ಯಾನವು. ಅದರ ಸೌಂದರ್ಯವನ್ನು ವರ್ಣಿಸಲು ಯಾರಿಗೆ ತಾನೆ ಸಾಧ್ಯವು? ಮನುಷ್ಯನು ಪ್ರಪಂಚದಿಂದ ತಪ್ಪಿಸಿ

ಕೊಂಡು ಪ್ರಕೃತಿ ಎಂಬ ಈಶ್ವರನ ಉದ್ಯಾನಕ್ಕೆ ಹೋದಲ್ಲಿ ಸೃಷ್ಟಿಕರ್ತ ನಾದ ಪರಮಾತ್ಮನ ನಿರ್ಮಲ ಸೌಂದರ್ಯವನ್ನು ನೋಡಬಹುದು. ಪ್ರಪಂಚದಲ್ಲಿಯ ನಾನಾವಿಧ ವಿಷಯಗಳು ನಮ್ಮ ಮನಸ್ಸುಗಳನ್ನು ಈಶ್ವರನಿಂದ ದೂರಮಾಡುತ್ತಿರುವವು. ಮಲಿನತ್ವದಿಂದಲೂ ಪಾಪದಿಂದಲೂ ಅಜ್ಞಾನದಿಂದಲೂ ಅಂಧತ್ವದಿಂದಲೂ ಈಶ್ವರನ ದಿವ್ಯ ಮುಖಾರವಿಂದವನ್ನು ಪ್ರಪಂಚದಲ್ಲಿ ಗುರ್ತಿಸುವದು ದುರ್ಲಭವಾಗುವದು. ನಾವು ಪ್ರಪಂಚದ ವ್ಯಾಪಾರಗಳಲ್ಲಿ ಮುಳುಗಿಹೋಗಿ ಶಾಶ್ವತವಾದ ಅಧ್ಯಾತ್ಮ ಪದಾರ್ಥಗಳನ್ನು ಮರೆಯುತ್ತಿರುವೆವು. ಇದರಿಂದ ಪ್ರಪಂಚದ ರಣಗೂಂತ ಧ್ವನಿಯಲ್ಲಿ ಸಿಲುಕಿಕೊಂಡು ಈಶ್ವರನ ಸೂಕ್ಷ್ಮವಾಣಿಯನ್ನು ಕೇಳಲಾರದೆ ಇರುವೆವು. ನಮ್ಮನ್ನು ನಾವೇ ಮರೆಯುತ್ತಿರುವೆವು. ಕ್ಷಣಭಂಗುರವಾದ ಈ ದೇಹವೇ ನಾವೆಂದು ಭ್ರಮಿಸುತ್ತಿರುವೆವು. ನಮ್ಮ ಆತ್ಮನೊಂದಿಗೆ ಕೇವಲ ಪರಿಚಯವೇ ಇಲ್ಲದೆ ಇರುವೆವು. ಆದರೆ ನಾವು ಈ ಮಾನವ ಪ್ರಪಂಚವನ್ನು ಬಿಟ್ಟು ಪ್ರಕೃತಿಯೊಳಗೆ ಹೋಗಿ ಕೊಂಚ ಕಾಲವಿದ್ದರೂ ಎಲ್ಲವು ಮಾರ್ಪನ್ನು ಹೊಂದುವವು. ನಮಗೆ ನೂತನ ಜೀವನವು ಲಭಿಸುವದು. ಪ್ರಕೃತಿಸೌಂದರ್ಯವನ್ನು ನೋಡುತ್ತಲೇ ಈಶ್ವರನ ಸೌಂದರ್ಯವು ನಮಗೆ ಗೋಚರವಾಗುವದು. ಅಲ್ಲಿ ಮನಸ್ಸುಗಳನ್ನು ಕಳವಳಗೊಳಿಸುವ ವಿಷಯಗಳಿರಲಾರವು.

ಬ್ರೌನಿಂಗ ಮಹಾ ಕವಿಯು ಹೀಗೆಂದು ಹೇಳಿರುವನು. ಏನೆಂದರೆ "ಅಣುವಿನಿಂದ ಬ್ರಹ್ಮಾಂಡದ ವರೆಗೂ ಪ್ರತಿ ವಸ್ತುವಿನಲ್ಲಿಯೂ ಈಶ್ವರನು ವಾಸಮಾಡುತ್ತಿರುವನು. ಬ್ರಹ್ಮಾಂಡದಲ್ಲಿನ ವಿವಿಧ ವಸ್ತುಗಳಿಗೆ ಸವಿಶೇಷ ಬಾಂಧವ್ಯವನ್ನುಂಟು ಮಾಡುತ್ತಿರುವನು. ಸರ್ವವ್ಯಾಪಕವಾದ ಪರಬ್ರಹ್ಮವೇ ವಿಶ್ವಮಯನಾದ ಭಗವಂತನ ನಿಜಸ್ವರೂಪವನ್ನು ಏಕಾಂತದಲ್ಲಿಯೇ ಕಂಡುಕೊಳ್ಳುತ್ತಿರುವೆವು. ಏಕಾಂತವೇ ಕವಿ ಜನ ಹೃದಯಗಳನ್ನು ವಿಕಸಿಸುವಂತೆ ಮಾಡಿ ಅವರ ದಿವ್ಯ ಕಾವ್ಯಗಳನ್ನು ಸೃಷ್ಟಿಸುವಂತೆ ಮಾಡುತ್ತಿರುವದು." ಆದುದರಿಂದಲೇ ತತ್ವ ಶಾಸ್ತ್ರವಿಶಾರದನೂ, ಕವಿಸಾರ್ವಭೌಮನೂ ಆದ ಗೇಟೆ, ಹೀಗೆಂದು ಹೇಳಿದನು. ಏನೆಂದರೆ – "ಏಕಾಂತವೇ ನಮಗೆ ಈಶ್ವರನನ್ನು ಸಂದರ್ಶಿಸುವಂತಹ ದಿವ್ಯ ದೃಷ್ಟಿಯನ್ನು ಕೊಡುತ್ತಿರುವದು".. ಮಹಮ್ಮದ ಪೈಗಂಬರನು ತನಗೆ ಅನೇಕ ಕಷ್ಟಗಳು ಬಂದರೂ ನಲವತ್ತು ದಿನಗಳ ವರೆಗೆ ಅರಣ್ಯವಾಸ ಮಾಡಿ

ಸೈತಾನನನ್ನು ಜಯಿಸಿದನು. ನಮ್ಮ ಋಷಿವರ್ಯರು ತಮ್ಮ ವಾಸಸ್ಥಾನ ವಾಗಿ ಮಹಾರಣ್ಯಗಳನ್ನು ಮಾಡಿಕೊಂಡು ಯಾವಾಗಲೂ ವಿರಾಮ ವಿಲ್ಲದೆ ಈಶ್ವರನ ಸಾನ್ನಿಧ್ಯದಲ್ಲಿಯೇ ಇರುತ್ತಿದ್ದರು. ನಿಜಗುಣಾರ್ಯ ಮತ್ತು ಗೌತಮ ಮಹಾ ಮುನಿಗಳು ತಮ್ಮ ವಿಶಾಲ ರಾಜ್ಯವನ್ನೂ ತಮ್ಮ ತಮ್ಮ ಸುಂದರವಾದ ಗೃಹಗಳನ್ನೂ ತಮ್ಮ ಪ್ರೇಮಾಸ್ಪದರಾದ ಪತ್ನಿಯ ರನ್ನೂ, ಪುತ್ರರನ್ನೂ ತಂದೆ ತಾಯಿಗಳನ್ನೂ ವಸ್ತುಗಳನ್ನೂ ಬಿಟ್ಟು ಅರ ಣ್ಯಕ್ಕೆ ಹೋಗಿ ಏಕಾಂತದಲ್ಲಿ ಕೆಲವು ವರ್ಷಗಳನ್ನು ತೀವ್ರವಾದ ಯೋಗ ದಲ್ಲಿ ಕಳೆದರು. ಗೌತಮನು ಅಲ್ಲಿ ನಿರ್ವಾಣ ಮಾರ್ಗವನ್ನು ಕಂಡು ಹಿಡಿದು ಬುದ್ಧನಾದನು. ನಿಜಗುಣನು ಯೋಗಿಯಾದನು. ಮಹಾತತ್ವ ಜ್ಞಾನ ವಿಶಾರದರಾದ ಶ್ರೀಸ್ವಾಮಿ ರಾಮತೀರ್ಥರು ತಮ್ಮ ಉಪನ್ಯಾಸ ಸಂಗ್ರಹದಲ್ಲಿ ಒಂದು ಕಡೆ ಹೀಗೆ ಹೇಳಿರುವರು, ಏನೆಂದರೆ—ಬ್ರಿಟಿಷ ಸಾರ್ವಭೌಮರ ರಾಜ್ಯ ಸ್ಥಾಪಕನಾದ ಲಾರ್ಡ ಕ್ಲೈವನು ಯಾವ ದೇಶ ವನ್ನು ಮುತ್ತಿಗೆ ಹಾಕಬೇಕಾದಗೆ ಮೊದಲು ಏಕಾಂತದಲ್ಲಿಯೇ ಆಲೋ ಚನೆ ಮಾಡಿಕೊಂಡು ಪ್ರಯಾಣಮಾಡುತ್ತಿದ್ದನು. ಇದರಿಂದಲೇ ಅವನು ಯಾವ ಯುದ್ಧದಲ್ಲಿಯೂ ಸೋಲಲಿಲ್ಲ." ಅವರು ಇನ್ನೊಂದು ಭಾಗ ದಲ್ಲಿ ಹೀಗೆ ಹೇಳಿರುವರು. ಏನೆಂದರೆ—"ಒಬ್ಬನೇ ತಿರುಗಾಡುವದು ಆಧ್ಯಾತ್ಮಿಕ ದೃಷ್ಟಿಯಿಂದಲೂ ಅನುಕೂಲವಾದುದೇ ಸರಿ. ವಾದವಿವಾದ ಗಳಿಂದ ಮನಃ ಕ್ಷೋಭೆಯುಂಟಾಗುವ ಪ್ರಸಂಗವೇ ಬರುವದಿಲ್ಲ. ಮನಸ್ಸು ಸ್ಥಿರವಾಗಿ ಕಲ್ಪನಾ ಶಕ್ತಿಗೆ ಅವಕಾಶವು ದೊರೆಯುತ್ತದೆ." ಇದೇ ವಿಷ ಯದಲ್ಲಿ ನಮ್ಮ ಕನ್ನಡ ನಾಡಿನ ಶಿವಯೋಗಿಗಳಾದ ಮುಪ್ಪಿನ ಷಡಕ್ಷರ ಪ್ಪನವರು ತಮ್ಮ ಕೈವಲ್ಯ ಪದ್ಧತಿಯಲ್ಲಿ ಬಹಳ ಚನ್ನಾಗಿ ಹೀಗೆ ಹೇಳಿರು ವರು.

"ಧರೆಯ ಸುಖದ ಭೋಗಾ ಎನಗೆ ಹರಿದು ಹೋಗಲಯ್ಯಾ ನಿಮ್ಮ। ಚರಣ ಕಮಲದಲ್ಲಿ ಮನವು ಮಗ್ನವಾಗಲಿ ॥೭॥

ಒಡೆದ ಗಡಿಗೆ ಹರಿದ ಜೋಳಿ। ಗೆಡದ ಕೈಯ್ಯಾಮುರಿಲ್ಲಾ ಕೋಲು। ಬಿಡದೆ ಊರನೆಲ್ಲ ತಿರಿದುತಂದು ನೋಡಲು। ಒಡಲಿಗಾಗದಂತೆ ಮಾಡು ಕೊಡವಿಯೊಳಗೆ ಸುಖವ ಮೆಚ್ಚಿ। ಒಡೆಯ ನಿಮ್ಮ ಮರೆದುಭವಕೆ ಬೀಳ ಲಾರೆನು ॥೮॥

ಊರನೆಲ್ಲ ತಿರಿದು ತಂದು। ಒಡಲಪೂರನುಂಬೆನೆನಲು॥ ದಾರಿಯೊಳಗೆ ತಿರಿದುದೆಲ್ಲ ಚಲ್ಲಿಹೋಗಲ್ಕೆ॥ ವಿರಿಯಾಚೆ ಪುರವತಿರಿಯೆ। ಯಾರು ಇಲ್ಲ ಎನಲಿ ಎನಗೆ ಮಾರಹರನ ನೆನವುದಿಂತುಟಲ್ಲದಾಗದು ॥೨॥

ಹಳೆಯ ಅರವಿರಗಟೆಗಳನು। ಬಲಿದು ಗಂಟನಿಕ್ಕಿ ಪೊದೆಯೆ। ಚಳಿಗಳಾದರೊಂದು ಕಡೆಗೆ ಸಾಲವಂದದಿ॥ ಕಳೆವುತಿರಲು ಅದರೊಳರ್ಧ ಇಲಿಗಳೆಳದು ಒಯ್ಯುತಿರಲು। ಜಡಿದು ಜನವು ದಿಂತುಟಲ್ಲದಾಗದೂ ॥೩॥

ಒಡವೆಯರುಗಳ ನಡಕೆ ಬರಲು। ಜಡಿದು ಜರಿದು ನೂಕಲೆನ್ನ। ಬಿಡನೆವೋರ್ಡರುಗಳ ಕೀಳಿನಲ್ಲಿ ಸೇರಲು। ಕಡೆಗೆ ಅಟ್ಟಲವರು ಹಾಳಗುಡಿಗೆ ಬರಲು ಸೋರುತಿರಲು। ಒಡೆಯ ನಿಮ್ಮ ನೆನೆವುದಿಂತುಟಲ್ಲದಾಗದೂ ॥೪॥

ಅಂಗಳದೊಳು ನಿಲ್ಲಲಿಕ್ಕೆ ಹಿಂಗದಿವನು ಕಳ್ಳನೆಂದು। ಹಿಂಗಿ ಹೋಗೊಎಂದು ಎಲ್ಲ ನುಡಿಯಲೆನ್ನನೂ। ಹೀಗೆಯಾಗದನಕ ನರರ ಸಂಗಬಿಡದು ಷಡಕ್ಷರಿಯ। ಲಿಂಗದಂಘ್ರಿ ಭಜಿಸಿ ಸತತ ಸುಖದೊಳಿರ್ಪನೂ ॥೫॥

ಹೇ ಪ್ರಿಯ ಕನ್ನಡ ಬಾಂಧವರೇ, ಮತ್ತು ಸಹೋದ ಸಹೋದರಿಯರೇ ಕೊಂಚಕಾಲವಾದರೂ ದೇವರ ಧ್ಯಾನದಲ್ಲಿ ಏಕಾಂತದಲ್ಲಿ ಕಾಲ ಕಳೆಯುವಿರೆಂದು ನಂಬಿದ್ದೇನೆ

# ಚೆನ್ನಮಲ್ಲನ ನಿವೇದನ.

ಶ್ರೀ ಹೂಲಿಯ ಶಾಸ್ತ್ರಿಗಳು ಶಿವಾನುಭವ ಪತ್ರಿಕೆಯ ೮ ನೇ ಸಂಚಿಕೆಯಲ್ಲಿಯ ತಮ್ಮ ಲೇಖದಲ್ಲಿ ಮಾಡಿದ ಆಕ್ಷೇಪಣಗಳನ್ನೆಲ್ಲಾ ಪರಿಶೀಲಿಸಿದರೆ ಹೊರಡುವದೆಲ್ಲಾ ಒಂದೇ ಮಾತು. ಅದೇನೆಂದರೆಃ— "ಶಿವಾದ್ವೈತ ದರ್ಶಣವು ಪ್ರಾಚೀನಕಾಲದ್ದಲ್ಲವೆಂದು ಸಿದ್ಧಮಾಡಿದ್ದು ತಪ್ಪು" ಇಷ್ಟೇ ಅವರ ಆಕ್ಷೇಪಣ. ಆದರೆ ನಾನು ಹೇಳುವದೇನಂದರೆ ಅದೊಂದೇ ಪುಸ್ತಕವೇಕೆ, ಅವರು ಪ್ರಸಿದ್ಧಿಸಿರುವ ಅದ್ಭುತ ಕಾಲಜ್ಞಾನವೆಂಬ ಪುಸ್ತಕವು ಕೂಡ ಪ್ರಾಚೀನವಲ್ಲ. ಸಾವಿರ ವರುಷಗಳಿಗಿಂತ ಮುಂಚಿನದೆಂದು ಹೇಳುವ ಕಾಲಜ್ಞಾನಗ್ರಂಥದ ತ್ರಿಪದಿಗಳ ಭಾಷೆಯು ಆ ಕಾಲದ ಭಾಷೆಯಲ್ಲಿಲ್ಲದ್ದೇ ಇದಕ್ಕೆ ಕಾರಣವು. ಸಾವಿರ ವರುಷದ ಹಿಂದಿನ ಭಾಷೆಯನ್ನು ನೋಡಬೇಕಾಗಿದ್ದರೆ "ಚಾವುಂಡರಾಯಪುರಾಣ" ವನ್ನು ನೋಡಿರಿ. ಅದರೊಳಗಿನ ಶಬ್ದರೂಪಗಳೆತ್ತ, ಇದರೊಳಗಿನವೆತ್ತ? ಈ ರೀತಿಯಲ್ಲಿ ಹೂಲಿಯ ಸ್ವಾಮಿಗಳು ಅರ್ವಾಚೀನ ಗ್ರಂಥಗಳನ್ನು ಪ್ರಾಚೀನವೆಂದು ಭಾವಿಸಿ ಪ್ರಕಟಿಸಿದ್ದಾರೆ. ಅಲ್ಲದೆ ಇವ್ಯಾವ ಗ್ರಂಥಗಳ ಪೂರ್ವದ ಪ್ರತಿಗಳೂ ಇವರಲ್ಲಿ ಇಲ್ಲ. ಇನ್ನೇನು? ನಾನು ಅನ್ಯರ ಪ್ರೇರಣೆಯಿಂದ ಲೇಖ ಬರೆದಿರುವೆನೆಂದು ಆಕ್ಷೇಪಿಸುತ್ತಾರೆ! ಅಯ್ಯೋ! ನನಗೆ ಸತ್ಯವೆಂದೆನಿಸದೆ ನಾನೊಂದೂ ಮಾಡುವವನಲ್ಲವೆಂಬುದು ಇವರಿಗೆ ಹೇಗೆ ಗೊತ್ತಿದ್ದೀತು? ಇರಲಾರದು. ಇರಲಿ. ನಾನು ಮುರುವತ್ತಿಗಾಗಿ ಅಸತ್ಯವನ್ನು ಪ್ರತಿಪಾದಿಸುವವನಲ್ಲವೆಂಬುದನ್ನಿಷ್ಟು ಬಿನ್ನವಿಸಿ ನನ್ನ ನಿವೇದನವನ್ನು ಮುಗಿಸುವೆ.

# ಲಿಂಗ

ಲೇಖಕ:—ಶಿವಸುತ

---

ಶ್ರೀ ಚನ್ನಮಲ್ಲಪ್ಪಾ ಗಲಗಲಿ ಹಲಸಂಗಿಯವರು ಮೇಲ್ಕಂಡ ಶೀರ್ಷಿಕೆಯ ಕೆಳಗೆ ಒಂದು ಲೇಖನವನ್ನು "ಜಯಕರ್ಣಾಟಕ" ದ ಸಂ॥ ೮ ಸಂಚಿಕೆ ೪ ರಲ್ಲಿ ಪ್ರಸಿದ್ಧಗೊಳಿಸಿರುತ್ತಾರೆ. ಆ ಲೇಖನವು ಒಳಗೊಂಡಿರುವ ವಿಷಯವೇನೂ ಹೊಸದಾದುದಲ್ಲ. ಆದರೆ ಲೇಖಕರು ತೋರಿಸುವ ಐತಿಹಾಸಿಕ ಸಂಶೋಧನೆಯ ಮಾರ್ಗವು ಮಾತ್ರ ಸ್ವಲ್ಪ ವಿಚಾರಾರ್ಹವಾಗಿರುತ್ತದೆ. ಇದೇ ಲೇಖಕರೇ "ಶಿವಾನುಭವ ಪತ್ರಿಕೆಯಲ್ಲಿ " ಇತಿಹಾಸದ ಕಣಗಳು" ಎಂಬ ಲೇಖನದಲ್ಲಿ ಲಿಂಗದ ಪೀಠದ ಬಗ್ಗೆ ಒಂದು ವಿಸ್ತಾರವಾದ ಲೇಖನವನ್ನು ಬರೆದಿರುತ್ತಾರೆ. ಮತ್ತು ಈ ಲೇಖನದಲ್ಲಿ "ನಾನು ಇನ್ನೂ ಹೆಚ್ಚು ಸಂಶೋಧನೆಯನ್ನು ನಡಿಸಿಯೇ ಇದ್ದೆನು" ಎಂದು ಅಪ್ಪಣೆ ಕೊಡಿಸಿ ಕೊನೆಗೆ "ಲಿಂಗ" ದ ನಿಜವಾದ ಸ್ವರೂಪವೇನೆಂಬುದನ್ನು ಕಂಡು ಹಿಡಿದವರಂತೆ ಉದ್ಗಾರವನ್ನು ತೆಗೆದಿರುತಾರೆ. ಇವರು ಕಂಡುಹಿಡಿದಿರುವ ಸಿದ್ಧಾಂತವನ್ನು ಲೇಖನದ ಮೊದಲನೆ ವಾಕ್ಯದಲ್ಲಿ ಕಾಣಿಸಿರುತ್ತಾರೆ. ಅದೇನಂದರೆ, ಪ್ರಾಚೀನ ಶಿವಾಲಯಗಳಲ್ಲೆಲ್ಲಾ ಲಿಂಗಗಳ ಮೇಲೆ ಕೊರೆದ ಒಂದು ಗೆರೆಯನ್ನು ನೋಡಿ ನನಗೆ ಶಿವಲಿಂಗವು ಮಾನವ ಲಿಂಗದ ಆಕಾರವೇ ಇರಬಹುದೋ ಏನೋ ಎಂದು ಅನಿಸುತ್ತಿತ್ತು. ಹೀಗೆ ಜನಿತವಾದ ಊಹೆಯು ಇವರು ಶ್ರೀ ಗೋಪೀನಾಥರಾಯರ "ಹಿಂದೂ ಮೂರ್ತಿಶಾಸ್ತ್ರದ ಮೂಲತತ್ತ್ವಗಳು" ಎಂಬ ಇಂಇಂಗ್ಲೀಷ ಪುಸ್ತಕವನ್ನೋದುವಾಗ ತಿದ್ದುಪಡೆಹೊಂದಿ ಬಲಗೊಂಡಿತಂತೆ. ಇಷ್ಟೇ ಅಲ್ಲ, ತಮ್ಮ ಈ ಸಿದ್ಧಾಂತವನ್ನು ಬಲಗೊಳಿಸುವುದಕ್ಕೆ ಲೇಖಕರು ತಮ್ಮ ಪ್ರವಾಸದಲ್ಲಿ ದರ್ಶಿಸಿದ ಗುಡಿಮಲ್ಲಂ, ಭೀಟಾ, ಮುಂತಾದ ಸ್ಥಳಗಳ ಲಿಂಗಗಳನ್ನು ದರ್ಶಿಸಿ ಕಡೆಗೆ ಋಗ್ವೇದದೊಳಗಿನ ಅನಾರ್ಯರ "ಶಿಶ್ನೋದೇವನು" ಈ ಲಿಂಗಪ್ಪನೇ ಎಂಬುದು ಸ್ಪಷ್ಟವಾಗುತ್ತದೆ ಎಂದು ಬರೆದಿರುತ್ತಾರೆ.

ಇತ್ತೀಚಿಗೆ ಸಂಶೋಧನಾ ಕಾರ್ಯದಲ್ಲಿ (*Researchwork*) ನಮ್ಮವರು ಹೆಚ್ಚು ಅಭಿರುಚಿಯನ್ನು ತೋರಿಸುತ್ತಿರುವುದು ಅಭಿನಂದನೀಯವೇ

ಸರಿ. ಆದರೆ ಸಂಶೋಧನೆಯೆಂದರೆ ಸಾಧಾರಣವಾದ ಕಾರ್ಯವಲ್ಲ. ಒಂದೊಂದು ಅಲ್ಪ ವಿಷಯದ ಪೂರ್ವಾಪರವನ್ನು ಶೋಧಿಸಲೂ ಎಷ್ಟೋ ಜನ ಪಾಶ್ಚಾತ್ಯದೇಶೀಯ ಪಂಡಿತರು ತಮ್ಮ ಇಡೀ ಜೀವಮಾನವನ್ನೇ ವ್ಯಯ ಮಾಡಿಕೊಂಡಿರುವರು. ಮತ್ತು ತಮ್ಮ ಶೋಧದಿಂದ ಪ್ರಪಂಚದ ಜ್ಞಾನ ಭಾಂಡಾಗಾರವನ್ನು ಹೆಚ್ಚಿಸಿರುವರು. ಶೋಧಕರಿಗೆ ಮುಖ್ಯವಾಗಿ ೨ ಗುಣ ಗಳಿರಬೇಕು. ೧. ಸತ್ಯಾನ್ವೇಷಕ ಬುದ್ಧಿ ೨. ವಿಚಾರ ಸ್ವಾತಂತ್ರ್ಯ ಇವೆರಡೂ ಒಂದೇ ಅರ್ಥವನ್ನು ಸೂಚಿಸುತ್ತವೆ. ನಾವು ಒಂದು ವಿಷಯದ ಶೋಧಕ್ಕಾಗಿ ಹೊರಟಿರುವೆವೆಂದು ಕೊಳ್ಳೋಣ. ಆಗ ನಮ್ಮ ಮನಸ್ಸಿನಲ್ಲಿ ಆ ವಿಷಯದ ಬಗ್ಗೆ ಬೇರೆ ಯಾವ ಭಾವನೆಗೂ ಆಸ್ಪದವನ್ನು ಕೊಡಬಾರದು. ಯಾವ ಊಹೆಗೂ ಅವಕಾಶವನ್ನು ಕೊಡಲಾಗದು ಯಾತಕ್ಕೆಂದರೆ ಅಂತರಂಗದ ಚಕ್ಷುವಿಗೂ ಬಹಿರಂಗದ ಸ್ಥೂಲ ಚಕ್ಷುವಿಗೂ ನಿಕಟ ಸಂಬಂಧವಿರುತ್ತದೆ. ನಮ್ಮ ಅಂತರಂಗದಲ್ಲಿ ಮನೆ ಮಾಡಿಕೊಂಡಿರುವ ಭಾವನೆಯು ನಮ್ಮ ಸ್ಥೂಲ ದೃಷ್ಟಿಯನ್ನು ಸತ್ಯಮಾರ್ಗದಿಂದ ಹೊರಳಿಸಿ ತನ್ನ ಮಾರ್ಗಕ್ಕೆಳೆದುಕೊಂಡು ಹೋಗುತ್ತದೆ. ಸತ್ಯವು ದೂರಾಗುತ್ತದೆ. ಇದಲ್ಲದೇ ಸಂಶೋಧನೆಯ ಕೆಲಸದಲ್ಲಿ ನಾವು ಇತರರು ಆ ವಿಷಯದ ಬಗ್ಗೆ ಏನು ಅಭಿಪ್ರಾಯಪಟ್ಟಿರುವರೆಂಬುದು ತಿಳಿದುಕೊಳ್ಳಬೇಕಾಗಲಿ ಸದರಿ ಅಭಿಪ್ರಾಯಗಳು ನಮ್ಮ ಮನಸ್ಸಿನ ಮೇಲೆ ಯಾವ ಪರಿಣಾಮವನ್ನುಂಟು ಮಾಡದಂತೆ ಎಚ್ಚರಿಕೆಯಿಂದಿರಬೇಕು.

ಇನ್ನು ಸಂಶೋಧನೆಯ ಕ್ಷೇತ್ರದ ಬಗ್ಗೆ ಸ್ವಲ್ಪ ವಿಚಾರಿಸುವ. ಮಾನವನ ಸಂಶೋಧನೆಗೆ ಅರ್ಥಾತ್ ಬಹಿರಿಂದ್ರಿಯಗಳಿಗೆ ಒಳಪಟ್ಟ ವಿಷಯಗಳು ಕೆಲವಿರುತ್ತವೆ. ಇವು ಸ್ಥೂಲ ಪ್ರಪಂಚಕ್ಕೆ ಸಂಬಂಧವಾದವುಗಳು ಪ್ರಕೃತಿ ನಿಯಮಕ್ಕೆ ಒಳಪಟ್ಟವುಗಳು. ಸೃಷ್ಟಿಯು ಕ್ರಮವಾದ ಗತಿಗೆ (*Cosmic*) ಒಳಪಟ್ಟಿರುವುದರಿಂದ ಸೃಷ್ಟಿಯಲ್ಲಿ ಕಾಣಬರುವ ಹಲವು ದೃಶ್ಯಗಳ ಮೇಲೆ ಸೃಷ್ಟಿಧರ್ಮವನ್ನು ಅರ್ಥಾತ್ ಪ್ರಕೃತಿಯ ತತ್ತ್ವವನ್ನು ಕಂಡುಹಿಡಿಯಬಹುದು. ನ್ಯೂಟನ್ನನು ಗಿಡದ ಮೇಲಿಂದ ಸೇಬು ಹಣ್ಣು ನೆಲಕ್ಕೆ ಬೀಳುವುದು ಕಣ್ಣಾರೆ ನೋಡಿದನು. ಅದರಂತೆ ಇತರ ಚರಾಚರ ವಸ್ತುಗಳು ಸಹಾ ಭೂಮಿಯ ಕಡೆಗೆ ಎಳೆಯಲ್ಪಡುವುದನ್ನು ತನ್ನ ಪ್ರತಿನಿತ್ಯದ ಅನುಭವದ ಮೇಲೆ ಕಂಡುಕೊಂಡನು. ಕಡೆಗೆ ಆಕರ್ಷಣ

ಶಕ್ತಿಯ ಅದ್ಭುತ ತತ್ತ್ವವನ್ನು (*Law of gravitation*) ಕಂಡು ಹಿಡಿದನು. ಇದರಿಂದ ಪ್ರಪಂಚಕ್ಕೆ ಎಷ್ಟೋ ಉಪಕಾರವಾಗಿದೆ. ಇದೆಲ್ಲಾ ಭೌತಿಕ ಜ್ಞಾನಕ್ಕೆ ಸಂಬಂಧಪಟ್ಟಿದ್ದು.

ಆದರೆ ಧಾರ್ಮಿಕ ಕ್ಷೇತ್ರದ ಮಾತೇ ಬೇರೆ. ಅಲ್ಲಿ ಪ್ರಕೃತಿಯ ಆಟವೇನೂ ನಡೆಯುವುದಿಲ್ಲ. ಅದನ್ನು ನಮ್ಮ ಸ್ಥೂಲ ದೃಷ್ಟಿಗಳು ಪ್ರವೇಶಿಸಲಾರವು. ತರ್ಕ ಶಾಸ್ತ್ರವನ್ನು ಹಚ್ಚಲಿಕ್ಕಾಗುವುದಿಲ್ಲ. ಅದು ಮಾನಸಿಕವು. "ಅದೇಕೆ?" ಎಂಬ ಶಬ್ದಕ್ಕೆ ಅಲ್ಲಿ ಪ್ರವೇಶವೇ ಇಲ್ಲ. ಮನಸ್ಸಿನಲ್ಲುಂಟಾಗುವ ಅಪೂರ್ವವಾದ ಅನುಭವದ ಮೇಲೆ ಧರ್ಮದ ನಿಜಸ್ಥಿತಿಯು ಹೊರಬೀಳುವುದಾಗಲಿ ಸಂಶೋಧನೆಯನ್ನು ನಡೆಯಿಸಲಿಕ್ಕೆ ಹೋದರೆ ನಿರ್ದಿಷ್ಟ ಸ್ಥಾನವನ್ನು ಸೇರುವುದಂತಿರಲಿ ನಮ್ಮನ್ನು ನಾವೇ ಕಳೆದುಕೊಂಡು ಬಿಡುವೆವು.

ಅವರಲ್ಲಿ ಲಿಂಗದ ಬಗ್ಗೆ ಸಂಶೋಧನೆಯು! ಲಿಂಗದಮಧ್ಯೇ ಜಗತ್ಸರ್ವಂ ಸ ಚರಾಚರ ಪ್ರಪಂಚಕಂ ಎಂಬಂತೆ ಲಿಂಗದಲ್ಲಿ ಅಡಗಿರುವ ಪ್ರಪಂಚದ ಸಂಶೋಧನೆಯು! ಮಹಾಲಿಂಗದ ಪಾದಮಸ್ತಕಗಳ ಶೋಧಕ್ಕಾಗಿ ಸಹಸ್ರಾರು ಯುಗಗಳವರೆವಿಗೂ ಹೋದ ಬ್ರಹ್ಮವಿಷ್ಣುಗಳ ಗತಿಯನ್ನು ನಮ್ಮ ಲೇಖಕರು ಸ್ವಲ್ಪ ಜ್ಞಪ್ತಿಗೆ ತಂದುಕೊಂಡಿದ್ದರೆ ಇದರ ಗೋಷ್ಠಿಗೆ ಅವರೆಂದಿಗೂ ಹೋಗುತ್ತಿದ್ದಿಲ್ಲ.

ಈ ಲೇಖನದ ಪೀಠಿಕೆಯಲ್ಲೇ ಹೇಳಲ್ಪಟ್ಟಿರುವಂತೆ ಈ ತತ್ತ್ವವು ಶ್ರೀ ಚನ್ನಮಲ್ಲಪ್ಪನವರು ಹೊಸದಾಗಿ ಕಂಡುಹಿಡಿದದ್ದಲ್ಲ. ಶ್ರೀ ಸ್ವಾಮಿ ವಿವೇಕಾನಂದರ ಅಭಿಪ್ರಾಯದಂತೆ ಇದು ಹಿಂದುಸ್ಥಾನವು ಅತ್ಯಂತ ಅವನತಸ್ಥಿತಿಯಲ್ಲಿದ್ದಾಗ ಅಂದರೆ ಭಾರತೀಯರು ಜಾತಿ ಸ್ಪೃಹಮ್ಯದಿಂದ ದಗ್ಧರಾಗಿ ಧರ್ಮದ ಹೆಸರಿನಿಂದ ಒಬ್ಬರ ಕುತ್ತಿಗೆಯನ್ನು ಒಬ್ಬರು ಕೊಯ್ಯುತ್ತಿರುವ ಕಾಲದಲ್ಲಿ ಈ ವಿಚಿತ್ರ ತತ್ತ್ವವು ಉಗಮವಾಗಲು ಕಾರಣವಾಯಿತು. ಶೈವ ವೈಷ್ಣವರ ಧರ್ಮಯುದ್ಧಗಳು ಹಿಂದುಸ್ಥಾನದ ಇತಿಹಾಸದಲ್ಲಿ ಹೊಸ ಸಂಗತಿಗಳಲ್ಲ. ಪರಸ್ಪರ ಅವಹೇಳನೆಯನ್ನು ಮಾಡುವುದಕ್ಕಾಗಿ ವೈಷ್ಣವರು ಲಿಂಗವನ್ನು ಮಾನವಲಿಂಗಕ್ಕೂ ಶೈವರು ವಿಷ್ಣುವನ್ನು ಸ್ತ್ರೀ ಲಿಂಗಕ್ಕೂ ಹೋಲಿಸಿ ಜರೆಯುತ್ತಾ ಬಂದರು. ಇವರಿಬ್ಬರನ್ನು ಅವಹೇಳನೆಗೈದು ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತಿರುವ

ಪಾದ್ರಿಗಳಂತೂ ಈ ತತ್ತ್ವಗಳಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟರು. ಅದೇ ತತ್ತ್ವವನ್ನು ನಮ್ಮ ಲೇಖಕರು ಈ ೨೦ ನೆ ಶತಮಾನದಲ್ಲಿ ಪ್ರತಿಪಾದಿಸಿರುತ್ತಾರೆ. ನಮ್ಮ ಜಯಕರ್ನಾಟಕದ ಸಂಪಾದಕರು ಪ್ರಚಾರಗೊಳಿಸಿರುತ್ತಾರೆ. ಯಾವ ಪುರುಷಾರ್ಥವನ್ನು ಸಾಧಿಸುವುದಕ್ಕೊ ತಿಳಿಯಲೊಲ್ಲದು.

ಇಂಥಾ ವಿಚಿತ್ರ ತತ್ತ್ವಗಳು ಅಸಂಖ್ಯಾತವಾಗಿ ಹುಟ್ಟಲಿ. ದೈವಭಕ್ತಿಗೂ ಆಸ್ತಿಕತ್ತ್ವಕ್ಕೂ ಯಾವ ಕೊರತೆಯು ಇಲ್ಲ. ಪತಿವ್ರತೆಯ ಭಾವನೆಯಲ್ಲಿ ತನ್ನ ಗಂಡನೆಂಥವನೆಂಬುವ ವಿಚಾರವೇ ದೂರುವುದಿಲ್ಲ. ಆದರೂ ಇಂಥಾ ತತ್ತ್ವಗಳು ನಿರಾಧಾರವಾದವುಗಳೆಂದು ತೋರಿಸುವುದರಿಂದ ಜನಸಾಮಾನ್ಯದಲ್ಲಿ ನೆಲೆಗೊಂಡಿರಬಹುದಾದ ಕಲ್ಪನೆಗಳು ದೂರವಾಗಲು ಕಾರಣವಾಗುತ್ತದೆ.

ಮೊದಲು ಲೇಖಕರ ಅಭಿಪ್ರಾಯಗಳ ಬಗ್ಗೆ ಸ್ವಲ್ಪ ವಿಚಾರಿಸುವಾ. ಲೇಖಕರು ತಾವು ಶ್ರೀ ಗೋಪಿನನಾಥರಾಯರ ಹಿಂದೂ ಮೂರ್ತಿಶಾಸ್ತ್ರದ ಮೂಲತತ್ತ್ವಗಳು ಎಂಬ ಇಂಗ್ಲಿಷ ಪುಸ್ತಕವನ್ನೋದುವಾಗ ನನ್ನ ಮೇಲ್ಕಾಣಿಸಿದ ಊಹೆಯೇ ತಿದ್ದುಪಡೆಹೊಂದಿ ಬಲಿಗೊಂಡಿತೆಂದು ಬರೆದಿರುತ್ತಾರೆ. ಆ ಪುಸ್ತಕವನ್ನೋದುವ ಸುಯೋಗವು ನನಗೆ ಲಭಿಸಿಲ್ಲವಾದಕಾರಣ ಸದ್ರಿ ಗ್ರಂಥದ ವಿಷಯಗಳ ಬಗ್ಯೆ ಯಾವ ಅಭಿಪ್ರಾಯವನ್ನು ಬರೆಯಲಿಕ್ಕಾಗುವುದಿಲ್ಲ. ಆದರೆ ಹಿಂದೂ ಮೂರ್ತಿಗಳಲ್ಲಿ ಲಿಂಗವು ಸೇರಿಸಲ್ಪಟ್ಟದ್ದರೆ ಶ್ರೀ ಗೋಪೀನಾಥರಾಯರಾದರೂ ಅದೆ ಹಾದಿಯನ್ನೇ ಹಿಡಿದಿರುತ್ತಾರೆಂದು ಸ್ಪಷ್ಟವಾಗಿ ಹೇಳಬಹುದು. ನಟರಾಜಮೂರ್ತಿಯನ್ನು ನೋಡಿದರೆ ತಾಂಡವ ಲೀಲೆಯಲ್ಲಡಕವಾಗಿರುವ ತತ್ತ್ವವು ಮನಗಾಣುವುದು. ನರಸಿಂಹಮೂರ್ತಿಯನ್ನು ನೋಡಿದರೆ ಬೇರೊಂದು ತತ್ತ್ವವು ವ್ಯಕ್ತವಾಗುವುದು. ಆದರೆ ಲಿಂಗವು ಮೂರ್ತಿಯಲ್ಲ. ನಿರಾಕಾರ ವಸ್ತುವಿನ ಸ್ಪಷ್ಟೀಕರಣವು. ಇದೇನು? ನಿರಾಕಾರವೇನು? ಸ್ಪಷ್ಟೀಕರಣವೇನು? ಆಕಾರವಿದ್ದರೇ ತಾನೇ ಸ್ಪಷ್ಟೀಕರಣವಾಗುವುದಕ್ಕೆ? ಈ ಬಿಕ್ಕಟ್ಟಿನ ಸಮಸ್ಯದ ವಿಚಾರವನ್ನು ಮುಂದೆ ತೆಗೆದುಕೊಳ್ಳುವ. ಶ್ರೀ ಗೋಪಿನಾಥರಾಯರು ಲಿಂಗವನ್ನು ವಿಗ್ರಹವನ್ನಾಗಿ ಭಾವಿಸಿ ಅದನ್ನು ಭೌತಿಕಕ್ಕೆ ಸಂಬಂಧಿಸಲು ಪ್ರಯತ್ನಿಸಿರುತ್ತಾರೆ. ಕುರುಡನು ಕುರುಡ ನನ್ನನುಸರಿಸಿರುವಂತೆ ನಮ್ಮ ಚನ್ನಮಲ್ಲಪ್ಪನವರು ಅವರ ಹಾದಿಯನ್ನು ಹಿಡಿದಿರುತ್ತಾರೆ.

ಇನ್ನು ಶ್ರೀ ಚನ್ನಮಲ್ಲಪ್ಪನವರು ತಮ್ಮ ಲೇಖನದಲ್ಲಿ ಕೆಲವು ಶಿವ ಲಿಂಗಗಳ ವರ್ಣನೆಯನ್ನು ಕೊಟ್ಟು ಅದರ ಮೂಲಕ ತಮ್ಮ ತತ್ತ್ವವನ್ನು ಬಲಪಡಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದಿರುತ್ತಾರೆ. ಆದರೆ ಅನೇಕ ಸಂಶೋಧಕರನ್ನು ದಿಕ್ಕುದಪ್ಪಿ ಅಲೆದಾಡುವಂತೆ ಮಾಡಿರುವುದೇ ಈ ಸಾದೃಶ್ಯ ತತ್ತ್ವವು (ಅಂದರೆ ಒಂದು ವಸ್ತುವು ಮತ್ತೊಂದು ವಸ್ತುವನ್ನು ಹೋಲುವುದು) ಇದರಿಂದ ಎಷ್ಟೋ ಜನರು ಮೋಸಹೋಗಿರುತ್ತಾರೆ. ಎಷ್ಟೋ ಸತ್ಯಸಂಗತಿಗಳು ಅಸತ್ಯವಾಗಿರುತ್ತವೆ. ಅಸತ್ಯ ಸಂಗತಿಗಳು ಸತ್ಯವಾಗಿರುತ್ತವೆ. ಸುಪ್ರಸಿದ್ಧನಾದ ಚಾರ್ಲ್ಸ್ ಡಿಕೆನ್ಸನು ತನ್ನ ಪಿಕ್‌ವಿಕ್ ಪೇಪರ್ಸಿನ ಒಂದು ಲೇಖದಲ್ಲಿ ಶೋಧಕರನ್ನು ಬಹಳವಾಗಿ ಗೇಲಿ ಮಾಡಿರುತ್ತಾನೆ. ಯಾವನೋ ಒಬ್ಬ ಹಳ್ಳಿಯ ಸೋಮಾರಿಯು ಒಂದು ಕಲ್ಲಿನಮೇಲೆ ಅಸಂಬದ್ಧವಾಗಿ ತನ್ನ ಹೆಸರನ್ನು ಕಟೆದಿದ್ದು ಇತಿಹಾಸ ಸಂಶೋಧಕರ ದೃಷ್ಟಿಯಲ್ಲಿ ಅದೊಂದು ಪುರಾತನ ಶಿಲಾಶಾಸನವಾಗಿ ಹೇಗೆ ಕಂಡಿತೆಂಬುದನ್ನು ಬಹು ಮನೋರಂಜಕವಾಗಿ ವರ್ಣಿಸಿರುವನು. ಆದಕಾರಣ ಒರೀ ಬಾಹ್ಯಸ್ವರೂಪಕ್ಕೆ ಅಷ್ಟೊಂದು ಮಹತ್ತ್ವ ಕೊಡುವುದರಲ್ಲಿ ಏನೂ ಅರ್ಥವಿಲ್ಲ. ಲೇಖಕರು ನೋಡಿ ವರ್ಣಿಸಿರುವ ಲಿಂಗವನ್ನೇ ಬೇರೊಬ್ಬರು ಬೇರೊಂದು ಭಾವನೆಯಿಂದ ನೋಡಿದರೆ ಬೇರೊಂದು ಅರ್ಥವು ಸ್ಫುರಿಸಬಹುದು. ವಸ್ತುವಿಜ್ಞಾನಶೋಧನೆಯಲ್ಲಿ ಹೋಲಿಕೆಯು ಒಂದಾನೊಂದು ಸಾಧನವಾಗಿದ್ದರೂ ಅದನ್ನೇ ಒಂದು ಮುಖ್ಯ ಸಾಧನವಾಗಿ ಗ್ರಹಿಸಕೂಡದು.

ಇನ್ನು ಐತಿಹಾಸಿಕ ದೃಷ್ಟಿಯಿಂದ ಈ ತತ್ತ್ವದಲ್ಲಿ ಏನಾದರೂ ಹುರುಳಿರುವುದೇನೋ ನೋಡುವ. ಸಾಮಾನ್ಯವಾಗಿ ಲಿಂಗಪೂಜೆಯು ಅನಾರ್ಯವೆಂದು ಭಾವಿಸಲ್ಪಟ್ಟಿರುತ್ತದೆ. ಈ ತಪ್ಪು ಅಭಿಪ್ರಾಯಕ್ಕೆ ವೇದಗಳಲ್ಲಿ ಕೆಲವು ಮಂತ್ರಗಳು ಅಂದರೆ ಶಿಶ್ನೋದೇವೋಪಾಸಕರಿಂದ ದಸ್ಯುಗಗಳೆಂಬ ಒಂದು ವಿಧವಾದ ಅನಾಗರಿಕ ಜನರನ್ನು ವರ್ಣಿಸುವ ಭಾಗಗಳು ಕಾರಣ ಭೂತಗಳಾಗಿವೆ. ವೇದಗಳು ದಸ್ಯುಗಳನ್ನು ಮಾನವ ಧರ್ಮವಿರೋಧಿಗಳೆಂದೂ, ಕ್ರೂರಕರ್ಮಿಗಳೆಂದೂ ಅನಾರ್ಯರೆಂದೂ ವರ್ಣಿಸಿರುತ್ತವೆ. ಹೀಗಿದ್ದು ಲಿಂಗೋಪಾಸನೆಯು ನಿಜವಾಗಿಯೂ ದಸ್ಯುಧರ್ಮವಾಗದಿದ್ದರೆ ವೇದಗಳು ಅದಕ್ಕೆ ಎಂದಿಗೂ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಿಲ್ಲ.

ಪಾದ್ರಿಗಳಂತೂ ಈ ತತ್ತ್ವಗಳಿಗೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟರು. ಅದೇ ತತ್ತ್ವವನ್ನು ನಮ್ಮ ಲೇಖಕರು ಈ ೨೦ ನೆ ಶತಮಾನದಲ್ಲಿ ಪ್ರತಿಪಾದಿಸಿರುತ್ತಾರೆ. ನಮ್ಮ ಜಯಕರ್ನಾಟಕದ ಸಂಪಾದಕರು ಪ್ರಚಾರಗೊಳಿಸಿರುತ್ತಾರೆ. ಯಾವ ಪುರುಷಾರ್ಥವನ್ನು ಸಾಧಿಸುವುದಕ್ಕೊ ತಿಳಿಯಲೊಲ್ಲದು.

ಇಂಥಾ ವಿಚಿತ್ರ ತತ್ತ್ವಗಳು ಅಸಂಖ್ಯಾತವಾಗಿ ಹುಟ್ಟಲಿ. ದೈವಭಕ್ತಿಗೂ ಆಸ್ತಿಕತತ್ತ್ವಕ್ಕೂ ಯಾವ ಕೊರತೆಯು ಇಲ್ಲ. ಪತಿವ್ರತೆಯ ಭಾವನೆಯಲ್ಲಿ ತನ್ನ ಗಂಡನೆಂಥವನೆಂಬುವ ವಿಚಾರವೇ ದೂರುವುದಿಲ್ಲ. ಆದರೂ ಇಂಥಾ ತತ್ತ್ವಗಳು ನಿರಾಧಾರವಾದವುಗಳೆಂದು ತೋರಿಸುವುದರಿಂದ ಜನಸಾಮಾನ್ಯದಲ್ಲಿ ನೆಲೆಗೊಂಡಿರಬಹುದಾದ ಕಲ್ಪನೆಗಳು ದೂರವಾಗಲು ಕಾರಣವಾಗುತ್ತದೆ.

ಮೊದಲು ಲೇಖಕರ ಅಭಿಪ್ರಾಯಗಳ ಬಗ್ಗೆ ಸ್ವಲ್ಪ ವಿಚಾರಿಸುವಾ. ಲೇಖಕರು ತಾವು ಶ್ರೀ ಗೋಪಿನನಾಥರಾಯರ ಹಿಂದೂ ಮೂರ್ತಿಶಾಸ್ತ್ರದ ಮೂಲತತ್ತ್ವಗಳು ಎಂಬ ಇಂಗ್ಲಿಷ ಪುಸ್ತಕವನ್ನೋದುವಾಗ ನನ್ನ ಮೇಲ್ಕಾಣಿಸಿದ ಊಹೆಯೇ ತಿದ್ದುಪಡೆಹೊಂದಿ ಬಲಿಗೊಂಡಿತೆಂದು ಬರೆದಿರುತ್ತಾರೆ. ಆ ಪುಸ್ತಕವನ್ನೋದುವ ಸುಯೋಗವು ನನಗೆ ಲಭಿಸಿಲ್ಲವಾದಕಾರಣ ಸದ್ರಿ ಗ್ರಂಥದ ವಿಷಯಗಳ ಬಗ್ಗೆ ಯಾವ ಅಭಿಪ್ರಾಯವನ್ನು ಬರೆಯಲಿಕ್ಕಾಗುವುದಿಲ್ಲ. ಆದರೆ ಹಿಂದೂ ಮೂರ್ತಿಗಳಲ್ಲಿ ಲಿಂಗವು ಸೇರಿಸಲ್ಪಟ್ಟಿದ್ದರೆ ಶ್ರೀ ಗೋಪೀನಾಥರಾಯರಾದರೂ ಅಡ್ಡ ಹಾದಿಯನ್ನೇ ಹಿಡಿದಿರುತ್ತಾರೆಂದು ಸ್ಪಷ್ಟವಾಗಿ ಹೇಳಬಹುದು. ನಟರಾಜಮೂರ್ತಿಯನ್ನು ನೋಡಿದರೆ ತಾಂಡವ ಲೀಲೆಯಲ್ಲಡಕವಾಗಿರುವ ತತ್ತ್ವವು ಮನಗಾಣುವುದು. ನರಸಿಂಹಮೂರ್ತಿಯನ್ನು ನೋಡಿದರೆ ಬೇರೊಂದು ತತ್ತ್ವವು ವ್ಯಕ್ತವಾಗುವುದು. ಆದರೆ ಲಿಂಗವು ಮೂರ್ತಿಯಲ್ಲ. ನಿರಾಕಾರ ವಸ್ತುವಿನ ಸ್ಪಷ್ಟೀಕರಣವು. ಇದೇನು? ನಿರಾಕಾರವೇನು? ಸ್ಪಷ್ಟೀಕರಣವೇನು? ಆಕಾರವಿದ್ದರೇ ತಾನೇ ಸ್ಪಷ್ಟೀಕರಣವಾಗುವುದಕ್ಕೆ? ಈ ಬಿಕ್ಕಟ್ಟಿನ ಸಮಸ್ಯದ ವಿಚಾರವನ್ನು ಮುಂದೆ ತೆಗೆದುಕೊಳ್ಳುವ. ಶ್ರೀ ಗೋಪಿನಾಥರಾಯರು ಲಿಂಗವನ್ನು ವಿಗ್ರಹವನ್ನಾಗಿ ಭಾವಿಸಿ ಅದನ್ನು ಭೌತಿಕಕ್ಕೆ ಸಂಬಂಧಿಸಲು ಪ್ರಯತ್ನಿಸಿರುತ್ತಾರೆ. ಕುರುಡನು ಕುರುಡ ನನ್ನನುಸರಿಸಿರುವಂತೆ ನಮ್ಮ ಚನ್ನಮಲ್ಲಪ್ಪನವರು ಅವರ ಹಾದಿಯನ್ನು ಹಿಡಿದಿರುತ್ತಾರೆ.

ಇನ್ನು ಶ್ರೀ ಚನ್ನಮಲ್ಲಪ್ಪನವರು ತಮ್ಮ ಲೇಖನದಲ್ಲಿ ಕೆಲವು ಶಿವ ಲಿಂಗಗಳ ವರ್ಣನೆಯನ್ನು ಕೊಟ್ಟು ಅದರ ಮೂಲಕ ತಮ್ಮ ತತ್ತ್ವವನ್ನು ಬಲಪಡಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದಿರುತ್ತಾರೆ. ಆದರೆ ಅನೇಕ ಸಂಶೋಧಕರನ್ನು ದಿಕ್ಕುದಪ್ಪಿ ಅಲೆದಾಡುವಂತೆ ಮಾಡಿರುವುದೇ ಈ ಸಾದೃಶ್ಯ ತತ್ತ್ವವು (ಅಂದರೆ ಒಂದು ವಸ್ತುವು ಮತ್ತೊಂದು ವಸ್ತುವನ್ನು ಹೋಲುವುದು) ಇದರಿಂದ ಎಷ್ಟೋ ಜನರು ಮೋಸಹೋಗಿರುತ್ತಾರೆ. ಎಷ್ಟೋ ಸತ್ಯಸಂಗತಿಗಳು ಅಸತ್ಯವಾಗಿರುತ್ತವೆ. ಅಸತ್ಯ ಸಂಗತಿಗಳು ಸತ್ಯವಾಗಿರುತ್ತವೆ. ಸುಪ್ರಸಿದ್ಧನಾದ ಚಾರ್ಲ್ಸ್ ಡಿಕೆನ್ಸನು ತನ್ನ ಪಿಕ್‌ವಿಕ್ ಪೇಪರ್ಸ್ಸಿನ ಒಂದು ಲೇಖದಲ್ಲಿ ಶೋಧಕರನ್ನು ಬಹಳವಾಗಿ ಗೇಲಿ ಮಾಡಿರುತ್ತಾನೆ. ಯಾವನೋ ಒಬ್ಬ ಹಳ್ಳಿಯ ಸೋಮಾರಿಯು ಒಂದು ಕಲ್ಲಿನಮೇಲೆ ಅಸಂಬದ್ಧವಾಗಿ ತನ್ನ ಹೆಸರನ್ನು ಕಟೆದಿದ್ದು ಇತಿಹಾಸ ಸಂಶೋಧಕರ ದೃಷ್ಟಿಯಲ್ಲಿ ಅದೊಂದು ಪುರಾತನ ಶಿಲಾಶಾಸನವಾಗಿ ಹೇಗೆ ಕಂಡಿತೆಂಬುದನ್ನು ಬಹು ಮನೋರಂಜಕವಾಗಿ ವರ್ಣಿಸಿರುವನು. ಆದಕಾರಣ ಒರೀ ಬಾಹ್ಯಸ್ವರೂಪಕ್ಕೆ ಅಷ್ಟೊಂದು ಮಹತ್ತ್ವ ಕೊಡುವುದರಲ್ಲಿ ಏನೂ ಅರ್ಥವಿಲ್ಲ. ಲೇಖಕರು ನೋಡಿ ವರ್ಣಿಸಿರುವ ಲಿಂಗವನ್ನೇ ಬೇರೊಬ್ಬರು ಬೇರೊಂದು ಭಾವನೆಯಿಂದ ನೋಡಿದರೆ ಬೇರೊಂದು ಅರ್ಥವು ಸ್ಫುರಿಸಬಹುದು. ವಸ್ತುವಿಜ್ಞಾನಶೋಧನೆಯಲ್ಲಿ ಹೋಲಿಕೆಯು ಒಂದಾನೊಂದು ಸಾಧನವಾಗಿದ್ದರೂ ಅದನ್ನೇ ಒಂದು ಮುಖ್ಯ ಸಾಧನವಾಗಿ ಗ್ರಹಿಸಕೂಡದು.

ಇನ್ನು ಐತಿಹಾಸಿಕ ದೃಷ್ಟಿಯಿಂದ ಈ ತತ್ತ್ವದಲ್ಲಿ ಏನಾದರೂ ಹುರುಳಿರುವುದೇನೋ ನೋಡುವ. ಸಾಮಾನ್ಯವಾಗಿ ಲಿಂಗಪೂಜೆಯು ಅನಾರ್ಯವೆಂದು ಭಾವಿಸಲ್ಪಟ್ಟಿರುತ್ತದೆ. ಈ ತಪ್ಪು ಅಭಿಪ್ರಾಯಕ್ಕೆ ವೇದಗಳಲ್ಲಿ ಕೆಲವು ಮಂತ್ರಗಳು ಅಂದರೆ ಶಿಶ್ನೋದೇವೋಪಾಸಕರಿಂದ ದಸ್ಯುಗಗಳೆಂಬ ಒಂದು ವಿಧವಾದ ಅನಾಗರಿಕ ಜನರನ್ನು ವರ್ಣಿಸುವ ಭಾಗಗಳು ಕಾರಣ ಭೂತಗಳಾಗಿವೆ. ವೇದಗಳು ದಸ್ಯುಗಳನ್ನು ಮಾನವ ಧರ್ಮವಿರೋಧಿಗಳೆಂದೂ, ಕ್ರೂರಕರ್ಮಿಗಳೆಂದೂ ಅನಾರ್ಯರೆಂದೂ ವರ್ಣಿಸಿರುತ್ತವೆ. ಹೀಗಿದ್ದು ಲಿಂಗೋಪಾಸನೆಯು ನಿಜವಾಗಿಯೂ ದಸ್ಯುಧರ್ಮವಾಗದಿದ್ದರೆ ವೇದಗಳು ಅದಕ್ಕೆ ಎಂದಿಗೂ ಪ್ರಾಮುಖ್ಯತೆಯನ್ನು ಕೊಡುತ್ತಿದ್ದಿಲ್ಲ.

ಮತ್ತು ಭರತಖಂಡದಲ್ಲಿ ಈ ಧರ್ಮವು ಇಷ್ಟೊಂದು ವ್ಯಾಪಕವಾಗುತ್ತಿದ್ದಿಲ್ಲ. ಅನಾದಿಕಾಲದಿಂದಲೂ ಲಿಂಗೋಪಾಸನೆಯು ಭರತಖಂಡದಲ್ಲಿ ಎಷ್ಟು ಪ್ರಬಲವಾಗಿದ್ದಿತೆಂಬುದಕ್ಕೆ ಈ ದೇಶದಲ್ಲಿ ವಿರಾಜಿಸುತ್ತಿರುವ ಅಸಂಖ್ಯಾತ ಶಿವಕ್ಷೇತ್ರಗಳೇ ಸಾಕ್ಷಿಯಾಗಿರುತ್ತವೆ. ಮತ್ತು ಆಸೇತು ಹಿಮಾಚಲ ಪರ್ಯಂತ ವ್ಯಾಪಕವಾಗಿರುವ ಶೈವಧರ್ಮವೇ ಸಾಕ್ಷಿಯಾಗಿರುತ್ತದೆ. ಪ್ರೊ ಕ್ರೂಜರ್‌ಸಾಹೇಬರು ತಮ್ಮ ಸಿಂಬಾಲಿಕ್ ಎಂಬ ಗ್ರಂಥದಲ್ಲಿ "*Linga worship next to that of Trinity is the most anci- ent religious forms of India*" ಎಂದು ಲಿಂಗಪೂಜಾಪದ್ಧತಿಯು ಬಹು ಪುರಾತನವಾದುದೆಂದು ಹೇಳಿರುತ್ತಾರೆ. ಈ ರೀತಿ ವೇದಯುಗದಿಂದಲೂ ಪ್ರಸಿದ್ಧವಾಗಿ ಬಂದಿರುವ ಈ ಪದ್ಧತಿಯು ಕಾಲಕ್ರಮೇಣ ನಾನಾ ಸ್ವರೂಪಗಳನ್ನು ಧರಿಸುತ್ತಾ ಬಂದಿತು. ಹಿಂದೂ ದೇಶದ ಧಾರ್ಮಿಕ ಕ್ಷೇತ್ರವು ಬಹು ಸಾರವಂತವಾದುದರಿಂದ ಇದರಲ್ಲಿ ವೇದಾಂತ ಆಗಮಾಂತಾದಿ ಗಗನಚುಂಬಿತ ವೃಕ್ಷರಾಜಗಳು ಬೆಳೆಯುವಂತೆ ಅನೇಕ ಭಯಂಕರ ಪದ್ಧತಿಗಳಿಂದ ಕೂಡಿದ ಕಾಪಾಲಿಕಾದಿ ಮತಗಳೆಂಬ ವಿಷಮಯ ಕಂಟಕಾವೃತ ಗಿಡಗಳಿಗೆ ಸ್ಥಾನವುಂಟು. ಶೈವ ಧರ್ಮದ ಗತಿಯಾದರೂ ಹೀಗೆಯೇ. ಇದರಲ್ಲಿ ವೀರಶೈವ, ಶೈವಸಿದ್ಧಾಂತ, ದಂಡಿ, ದಶನಾಮಿ ಮುಂತಾದ ಸಾತ್ವಿಕ ಧರ್ಮಗಳುದ್ಭವವಾದಂತೆ, ಧರ್ಮದ ಹೆಸರಿನಿಂದ ಅನೇಕ ಅಮಾನುಷ ಕರ್ಮಗಳನ್ನೊಳಗೊಂಡ ಮತಗಳು ಸಹಾ ತಲೆಯೆತ್ತಿ ಲಿಂಗೋಪಾಸನೆಯ ವಿಷಯದಲ್ಲಿ ಹ್ಯೇಯಭಾವನೆಯುದಯಿಸುವುದಕ್ಕೆ ಕಾರಣಗಳಾದವು.

ಆರ್ಯರಲ್ಲಿಯೂ ಲಿಂಗಪೂಜಾ ಪದ್ಧತಿಯು ಯಾವ ಕಾಲದಲ್ಲಿ ಹುಟ್ಟಿತೆಂಬುದನ್ನು ನಿರ್ಧರಿಸಲೂ ಸಾಧ್ಯವಿಲ್ಲ. ಆದರೆ ವೇದವಾಙ್ಮಯ ಪರಿಶೋಧನೆಯು ಲಿಂಗದ ವಿಷಯವಾಗಿ ಅನೇಕ ಊಹೆಗಳಿಗೆ ಅಸ್ಪದವನ್ನು ಕೊಡುತ್ತದೆ. ಮನುಷ್ಯನ ಧಾರ್ಮಿಕ ಭಾವನೆಯು ಸಹಾ, ಪ್ರಗತಿಯ ತತ್ವ (*Theory of Progress*) ವನ್ನವಲಂಬಿಸುವುದೆಂದು ನಾವು ಒಪ್ಪುವದಾದರೆ ಆರ್ಯರ ಧಾರ್ಮಿಕ ಪ್ರಗತಿಯಲ್ಲಿ ಲಿಂಗೋಪಾಸನೆಯು ಒಂದಾನೊಂದು ಮುಖ್ಯ ಸ್ಥಾನವನ್ನು ಸೂಚಿಸುತ್ತದೆ. ಆರ್ಯರು ಮಂಜುಗಡ್ಡೆಯ ಭೂಮಿಯಿಂದ ಬಂದು ಪ್ರಕೃತಿಯ ಪ್ರಮದೋದ್ಯಾನವನದಂತೆ ಕಂಗೊಳಿಸುತ್ತ ಇದ್ದ ಭಾರತ ಭೂಮಿಯಲ್ಲಿ ಕಾಲಿ

ಟ್ಟಕೊಡಲೆ ಅವರ ಭಾವನಾ ಪ್ರಪಂಚವೆಲ್ಲವೂ ಶಿವಮಯವಾಗಿ ಬಿಟ್ಟಿತು. ಶಿವನೇ ಅವರ ಪ್ರಥಮೋಪಾಸ್ಯ ದೇವನಾದನು. ಆಕಾಶವೇ ಕೇಶ ಪಾಶವಾಗಿರುವುದೋ ಎಂಬಂತೆ ವಿರಾಜಿಸುತ್ತಾ ಹಿಮದಿಂದ ಸರ್ವಾಂಗ ಶೋಭಿತವಾಗಿದ್ದು ಪವಿತ್ರಳಾದ ಗಂಗಾ ದೇವಿಯ ಆವಿರ್ಭಾವ ಸ್ಥಾನ ವಾಗಿ ಕಂಗೊಳಿಸುತ್ತಿದ್ದ ಹಿಮಾಲಯ ನಗಾಧಿರಾಜನಲ್ಲಿಯೇ ಆರ್ಯರು ವ್ಯೋಮಕೇಶನೂ, ಶುಭ್ರಧವಳಕಾಯನೂ, ಗಂಗಾಧರನೂ ಆದ ಪರ ಮೇಶ್ವರನನ್ನು ನೋಡುತ್ತಿದ್ದರು. ಪರಶಿವನು ಅವರ ಭಾವನಾ ಪ್ರಪಂಚ ದಲ್ಲಿ ತಾನೇ ತಾನಾಗಿ ಆಳಹತ್ತಿ ಅನೇಕ ರೂಪಗಳಿಂದಲೂ, ಅನೇಕ ನಾಮಗಳಿಂದಲೂ ಅನೇಕ ವಿಧವಾಗಿ ಪೂಜಿಸಕೊಳ್ಳಲ್ಪಡುತ್ತಿದ್ದನು.

ಋಗ್ವೇದ ಮತ್ತು ಯಜುರ್ವೇದ ಕಾಲದಲ್ಲಿ ಆರ್ಯರು ಶಿವನನ್ನು ರುದ್ರನನ್ನಾಗಿ ವ್ಯವಹರಿಸುತ್ತಿದ್ದರು. ಆತನು ಅಂತರಿಕ್ಷ ಮಧ್ಯದಲ್ಲಿ ಸೂರ್ಯ, ಚಂದ್ರ, ವಾಯು, ಅಗ್ನಿ ಮುಂತಾದ ದೇವತೆಗಳಿಗೆಲ್ಲ ಒಡೆಯನಾಗಿ ಭಯಂಕರವಾದ ಖಡ್ಗವನ್ನು ಧರಿಸಿ ಪ್ರಪಂಚವನ್ನೆಲ್ಲ ಆಳುತ್ತಿರುವನೆಂದೂ ತಮ್ಮ ಕಷ್ಟ ಸುಖಗಳಿಗೆಲ್ಲ ಆತನೇ ಕಾರಣಭೂತನೆಂದು ಭಾವಿಸಿದ್ದರು. "ನಮಸ್ತೇರುದ್ರಮನ್ಯವ ಉತತೇ ಇಷವೇ ನಮಃ" ಇತ್ಯಾದಿ ವಾಕ್ಯಗಳ ಮೇಲಿಂದ ಅವರು ರುದ್ರನ ಖಡ್ಗಕ್ಕೋಸ್ಕರ ಅವರು ಎಷ್ಟು ಭಯಪಡು ತ್ತಿದ್ದರೆಂಬುದು ವ್ಯಕ್ತವಾಗುತ್ತದೆ. ಮೊದಲು ಮೊದಲು ಆರ್ಯರ ಭಾವ ನೆಯಲ್ಲಿ ದೇವರು ಬಹು ಕೋಪಿಷ್ಟನೆಂದೂ, ಭಯಂಕರ ಆಯುಧಗಳು ಳ್ಳವನೆಂದೂ ಆತನಿಗೆ ಆಗಿಂದಾಗ್ಗೆ ಆಹುತಿಯನ್ನು ಒಪ್ಪಿಸಲಿಲ್ಲದಿದ್ದರೆ ತಮಗೆ ಅನೇಕ ಕಷ್ಟಪರಂಪರೆಗಳನ್ನು ಕೊಡುವನೆಂದೂ ತೋರುತ್ತಿದ್ದಿತು. ಆದಕಾರಣ ಅವರು ಯಜ್ಞರೂಪವಾಗಿ ದೇವತೆಗಳಿಗೆಂದು ಪಶುಗಳನ್ನು ಬಲಿಕೊಡುತ್ತಿದ್ದರು. ಯಜ್ಞ ಹವಿಸ್ಸಿನ ಮೊದಲಿನ ಭಾಗವು "ಮೇಧಾ ಪತಿ" ಯೆಂದೆನ್ನಿಸಿಕೊಂಡಿದ್ದ ರುದ್ರ ಅಥವಾ ಶಿವನಿಗೆ ಸಲ್ಲಿಸುತ್ತಿದ್ದರು. ಯಜ್ಞ ಶಾಲೆಯ ಯೂಪಸ್ತಂಭವೇ ಶಿವನಾಗಿ ಪರಿಗಣಿಸಲ್ಪಡುತ್ತಿದ್ದಿತು. ಈ ಯೂಪಸ್ತಂಭಕ್ಕೆ ಯಜ್ಞ ಪಶುಗಳು ಬಂಧಿಸಲ್ಪಟ್ಟಿದ್ದು ಆಹುತಿಗೊಳ ಗಾಗುತ್ತಿದ್ದವು.

ಕಾಲಕ್ರಮೇಣವಾಗಿ ಆರ್ಯರಲ್ಲಿ ದೇವರ ವಿಷಯದಲ್ಲಿ ಅನೇಕ ಸಾತ್ತ್ವಿಕ ಭಾವನೆಗಳುತ್ಪನ್ನವಾದವು. ದೇವರು ಕ್ರೂರನೆಂದೂ ತನಗೆ ಆಹುತಿಯನ್ನು ಅರ್ಪಿಸದೇ ಹೋದರೆ ತಮಗೆ ಹಿಂಸೆಯನ್ನು ಕೊಡುವ

ನೆಂಬ ಭಾವನೆಯು ಮಾಯವಾಗುತ್ತಾ ಬಂದು ಪರಮಾತ್ಮನು ಆದಿ ಮಧ್ಯಾಂತರಹಿತನೂ ತ್ರಿಗುಣಾತೀತನೂ ಆದ ಪರಬ್ರಹ್ಮವಸ್ತುವೆಂದು. ಆ ಪರಬ್ರಹ್ಮನ ಅಂಶವು ಸರ್ವತ್ರವ್ಯಾಪಕವಾಗಿರುತ್ತದೆಂದೂ, ಆತನೇ ಪತಿ ಯೆಂದೂ, ತದಿತರರೆಲ್ಲರೂ ಪಶುಗಳೆಂದೂ ಈ ವಿಧವಾದ ಉದಾತ್ತ ಭಾವ ನೆಗಳುತ್ಪನ್ನವಾಗಲಾರಂಭಿಸಿದವು. ಈ ಕಲ್ಪನೆಯು ತಲೆದೋರಿದಂದಿನಿಂದ ಅವರಲ್ಲಿ ಎರಡು ಪಂಗಡಗಳುತ್ಪನ್ನವಾದವು ಒಂದು ಪಂಗಡದವರು ಸ್ವಾರ್ಥ ಪರಾಯಣರಾಗಿ ಯಜ್ಞಾದಿಕರ್ಮಾವಲಂಬನೆಯನ್ನು ಪ್ರತಿಪಾದಿಸುತ್ತಾ ಬಂದರು. ಬೇರೊಂದು ಪಂಗಡದವರು ಅದನ್ನು ಖಂಡಿಸುತ್ತಾ ಬಂದರು. ಈ ಒಡಕು ಯಜುರ್ವೇದ ಕಾಲದಲ್ಲೇ ಸುರುವಾಯಿತೆಂಬುದಕ್ಕೆ ಶುಕ್ಲ ಯಜು ರ್ವೇದೀಯ ಮತ್ತು ಕೃಷ್ಣ ಯಜುರ್ವೇದೀಯ ಎಂಬ ಎರಡು ಪಂಥಗಳು ಹುಟ್ಟಿದುದೇ ಸಾಕ್ಷಿ. ಈ ಕಾಲದಲ್ಲೇ ಉಪನಿಷತ್ತುಗಳು ಹುಟ್ಟಿದವು. ನೂತನ ಪಂಥದವರ ಉದಾತ್ತ ವಿಚಾರಗಳೆಲ್ಲವೂ ಈ ಉಪನಿಷತ್ತುಗಳಲ್ಲಿ ಅಡಕವಾಗಿವೆ. ಈ ಪರಬ್ರಹ್ಮ ತತ್ತ್ವವು ಉಪನಿಷತ್ತುಗಳಲ್ಲಿ ಹೇಗೆ ಪ್ರತಿ ಪಾದಿಸಲ್ಪಟ್ಟಿರುವುದೆಂಬುದು ಸ್ವಲ್ಪ ವಿಚಾರಿಸಿದರೆ ಉಪನಿಷತ್ತುಗಳ ಕಾಲ ದಲ್ಲಿ ಎಂಥಾ ವಿಪ್ಲವವುಂಟಾಗಿರಬಹುದೆಂಬುದನ್ನು ನಾವು ಊಹಿಸಬ ಹುದು.

ಬ್ರಹ್ಮೋಪನಿಷತ್ತಿನಲ್ಲಿ:— "ಏಕೋದೇವಸ್ಸರ್ವ ಭೂತೇಷುಗೂಢ ಸ್ಸರ್ವ ವ್ಯಾಪೀಸ್ಸರ್ವ ಭೂತಾಂತರಾತ್ಮಾ ಕರ್ಮಾಧ್ಯಕ್ಷಾಂಸರ್ವ ಭೂತಾಧಿವಾ ಸಸ್ಸಾಕ್ಷಿ ಚೇತಾ ಕೇವಲೋ ನಿರ್ಗುಣಶ್ಚ" ಅಂದರೆ ಅದ್ವಿತೀಯನೂ, ಸ್ವಯಂಪ್ರಕಾಶನೂ ಆದ ಪರಮಾತ್ಮನು ಸಕಲಭೂತಗಳಲ್ಲಿರಹಸ್ಯವಾ ಗಿದ್ದು ಸರ್ವವನ್ನೂ ವ್ಯಾಪಿಸಿಕೊಂಡಿರುವನು. ಆತನು ಸಮಸ್ತಭೂತಗಳೊ ಳಗೆ ಇರುವ ಆತ್ಮಸ್ವರೂಪವೂ, ಕರ್ಮಾಧ್ಯಕ್ಷನೂ ಸರ್ವಭೂತಗಳಲ್ಲಿ ವಾಸ ಮಾಡಿಕೊಂಡಿರುವನು. ಸಾಕ್ಷಿಸ್ವರೂಪನೂ ಚೈತನ್ಯನೂ ಸಮಸ್ತವಾದ ಅವ್ಯಕ್ತಾದಿ ವಿಶೇಷ ಶೂನ್ಯವಾದ ಏಕಸ್ವರೂಪವುಳ್ಳವನೂ ನಿರ್ಗುಣನೂ ಇರುತ್ತಾನೆ.

ನಿರಾಲಂಬೋಪ ನಿಷತ್ತಿನಲ್ಲಿ:—ಬ್ರಹ್ಮೈವ ಸ್ವ ಶಕ್ತಿ ಪ್ರಕೃತ್ಯಾಭಿಧೇ ಯಾಮಾ ಶ್ರಿತ್ಯಲೋಕಾನ್ ಸೃಷ್ಟ್ವಾ ಪ್ರವಿಶ್ಯಾಂತರ್ಯಾಮಿತ್ವೇನ ಬ್ರಹ್ಮಾದೀ ನಾಂಬುದ್ಧೀಂದ್ರಿಯನಿಯಂ ತೃತ್ವಾದೀಶ್ವರಃ— ಅಂದರೆ ಬ್ರಹ್ಮವೇ ತನ್ನ ಶಕ್ತಿ ಯಿಂದ ಪ್ರಕೃತಿಯಿಂದ ಈಶ್ವರನೆಂಬುವ ಹೆಸರನ್ನು ಪಡೆದು ಲೋಕಗ

ಳನ್ನು ಸೃಷ್ಟಿಸಿ ಅದರಲ್ಲಿ ಅಂತರ್ಯಾಮಿಯಾಗಿ ಪ್ರವೇಶಿಸಿ ಬ್ರಹ್ಮಾದಿಗಳ ಬುದ್ಧಿಗೂ ಇಂದ್ರಿಯಗಳಿಗೂ ನಿಯಾಮಕನಾಗಿರುವುದರಿಂದ ಈಶ್ವರನಾಗುತ್ತಾನೆಂಬುದಾಗಿ ವರ್ಣಿಸಲ್ಪಟ್ಟಿರುತ್ತಾನೆ.

ವೇದ ವೃಕ್ಷದ ಒಂದೇ ಶಾಖೆಯಿಂದ ಉಪನಿಷತ್ತುಗಳು ಆಗಮಗಳು ಹುಟ್ಟಿದವು. ನೂತನ ಪಂಥದವರು ಉಪನಿಷತ್ತುಗಳನ್ನು ಆಗಮಗಳನ್ನು ಪ್ರತಿಪಾದಿಸಲಾರಂಭಿಸಿದರು. ತತ್ತ್ವವೇನೋ ಬದಲಾವಣೆಯನ್ನು ಹೊಂದಿತು. ಆದರೆ ಯಜ್ಞಾದಿ ಕರ್ಮಗಳ ಭಾವನೆಯು ಮಾತ್ರ ಅಳಿಯಲಿಲ್ಲ. ಯಜ್ಞವು ತಾತ್ತ್ವಿಕ ಮತ್ತು ಪಾರಮಾರ್ಥಿಕ ದೃಷ್ಟಿಯಿಂದ ವ್ಯವಹರಿಸಲ್ಪಡಹತ್ತಿತು. ಆದರೆ ಯೂಪಸ್ತಂಭವು ಆದಿ ಮಧ್ಯಾಂತರಹಿತನಾದ ಪರಬ್ರಹ್ಮನನ್ನು ಸೂಚಿಸುವ ಚಿಹ್ನೆಯಾಯಿತು. ಯಜ್ಞ ಶಾಲೆಯಲ್ಲಿಯೂ ಯೂಪಸ್ತಂಭಕ್ಕಾಗಿ ಆಹುತಿಕೊಡಲ್ಪಡಬೇಕಾದುವು ನಿರಪರಾಧಿ ಪ್ರಾಣಿಗಳಲ್ಲಿ ಮಾಯಾಪಾಶದಿಂದ ಬಂಧಿತನಾದ ಜೀವಾತ್ಮನು. ಈ ಜೀವಾತ್ಮನೇ ಪಶುವು. ಯೂಪಸ್ತಂಭರೂಪನಾದ ಪರಬ್ರಹ್ಮನೇ ಪತಿಯು ಅದರೆ ಯಾವ ವಸ್ತುವಿನಿಂದಲೂ ಚರಾಚರಾತ್ಮಕ ಪ್ರಪಂಚವು ಹೊರಬೀಳುವುದೋ ಯಾವ ವಸ್ತುವಿನಲ್ಲಿ ಲಯವನ್ನೈದುವುದೋ ಅಂದರೆ ತನ ವ್ಯಕ್ತಿತ್ವವನ್ನು ಕಳೆದುಕೊಳ್ಳುವುದೋ ಅಂಥಾ ಲಿಂಗವು. (ಲಿಕಾರೋಲಯಮಿತ್ಯುಕ್ತಂ। ಗಕಾರಃ ಸೃಷ್ಟಿರುಚ್ಯತೇ। ಲಯನಂ ಗಮನಂ ಚೈವ। ಲಿಂಗಶಬ್ದ ಮಹೋಚ್ಯತೇ--ಕಾರಣಾಗಮ.)

ಅಥರ್ವವೇದ ಸಂಹಿತೆಯಲ್ಲಿ ಯೂಪಸ್ತಂಭದ ಸ್ಥಳದಲ್ಲಿ ಆದಿಮಧ್ಯಾಂತರಹಿತ ಪರಮಾತ್ಮನನ್ನು ಸೂಚಿಸುವ ಮಹಾಲಿಂಗವು ವರ್ಣಿಸಲ್ಪಟ್ಟಿದೆ. ಆ ಮಹಾಲಿಂಗಕ್ಕೆ ಭೂಮಿಯೇ ಪೀಠವು. ಆಕಾಶವೇ ಶೀರ್ಷವು. ಇಡೀ ವಿಶ್ವವೇ ಹೊದಿಕೆಯು. ಇದೇ ನಿರಾಕಾರವಸ್ತುವು. ಇದರ ಮೇಲಿಂದ ಲಿಂಗವು ನಿಜವಾಗಿ ಮೂರ್ತಿವಿಶೇಷವಲ್ಲವೆಂಬುದು ಮತ್ತು ಅನಿರ್ವಾಚ್ಯವಾದ ಪರಮಾತ್ಮನನ್ನು ಸೂಚಿಸುವ ಸ್ತಂಭವೆಂಬುದು ಸುವ್ಯಕ್ತವಾಗುತ್ತದೆ.

ಶೈವಸಿದ್ಧಾಂತದ "ಪಶುಪತಿಪಾಶ" ತತ್ತ್ವವು ಯಜ್ಞವೇದಿಕೆಯ ಭಾವವನ್ನೇ ಸೂಚಿಸುತ್ತದೆ. ಆಗಮೋಕ್ತವಾಗಿ ನಿರ್ಮಿಸಲ್ಪಟ್ಟಿರುವ ಶಿವಾಲಯಗಳು ಸಹಾ ಯಜ್ಞಶಾಲೆಯನ್ನು ಜ್ಞಪ್ತಿಗೆ ತರುತ್ತವೆ. ಆದರೆ ಈ ಯಜ್ಞವು ಪಶುಯಜ್ಞವಲ್ಲ. ಆತ್ಮಯಜ್ಞವು. ಪಶುವಾಚ್ಯನಾದ ಜೀವಾ

ತ್ಮನು ಪತಿವಾಚ್ಯವಾದ ಲಿಂಗದಲ್ಲಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡು ಐಕ್ಯನಾಗುವನು. ಆತ್ಮಯಜ್ಞತತ್ತ್ವ ಅರ್ಥಾತ್ ಶಿವಾರ್ಪಣ ಬುದ್ಧಿಯೇ ಆಗಮಾಂತ ಸಿದ್ಧಾಂತದ ಹೆಗ್ಗುರುತಾಗಿದೆ. ಇದೇ ತತ್ತ್ವವೇ ವೀರಶೈವ ಧರ್ಮದ ತಳಹದಿಯಾಗಿದೆ.

ಅಜಿತಾಗಮದ ರೀತ್ಯಾ ಲಿಂಗವು ಪತಿ (= ಶಿವ) ಪಶು (= ಜೀವ) ಪಾಶ (= ಶಿವಜೀವರ ಸಂಬಂಧ) ಇವುಗಳನ್ನು ಸ್ಪಷ್ಟೀಕರಿಸುತ್ತದೆ.

ಬೇರೆ ಕೆಲವು ತತ್ತ್ವಜ್ಞರ ಪ್ರಕಾರ ಶಿವಲಿಂಗವು ಪ್ರಣವಾಕ್ಷರದ (ಓಂಕಾರದ ಅರ್ಥಾತ್ ಶಬ್ದಬ್ರಹ್ಮದ) ಸ್ಪಷ್ಟೀಕರಣವಾಗಿರುತ್ತದೆ. ಈ ವಿಷಯದಲ್ಲಿ "ತಿರುಮಂತ್ರಂ" ಎಂಬುವ ಸಿದ್ಧಾಂತ ಗ್ರಂಥದಲ್ಲಿ ಈ ರೀತಿ ಹೇಳಿದೆ. ಲಿಂಗವು ನಾದಬಿಂದುಗಳಿಂದ ಕೂಡಿದ "ಓಂಕಾರವು" ಅಕಾರವೇ ಪೀಠವು. ಮಕಾರವೇ ಕಂಠವು. ಉಕಾರವೇ ವರ್ತುಲಭಾಗವು. ಓಂಕಾರವು ಜಗದುತ್ಪತ್ತಿ ಸ್ಥಿತಿ ಲಯಕಾರಣವಾದುದರಿಂದ ಅವರ ಸ್ಪಷ್ಟೀಕರಣವಾದ ಲಿಂಗವು ಪರಬ್ರಹ್ಮನನ್ನು ಸೂಚಿಸುತ್ತದೆ.

ಶ್ರೀಯುತ ಚನಮಲ್ಲಪ್ಪನವರು ಹಿಂದೂದೇಶದ ಕೆಲವು ಲಿಂಗಗಳನ್ನು ಮಾತ್ರ ನೋಡಿ ಲಿಂಗದ ಆಕಾರ ಸಂಬಂಧವಾಗಿ ಅವರು ಒಂದು ವಿಚಿತ್ರವಾದ ಸಿದ್ಧಾಂತವನ್ನು ಕಲ್ಪಿಸಿರುತ್ತಾರೆ. ಆದರೆ ಅವರು ಪ್ರಪಂಚದ ಬೇರೆ ಬೇರೆ ಪ್ರಾಂತಗಳಲ್ಲಿರುವ ಲಿಂಗಮೂರ್ತಿಗಳನ್ನು ದರ್ಶಿಸಿದ್ದೇ ಆದರೆ ಅವರು ತಮ್ಮ ಈ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುವುದರಲ್ಲಿ ಯಾವ ಸಂದೇಹವು ಇಲ್ಲ.

ಕೌಂಟುಬ್ಜಾರ್ನಾಸ್ಟಿಜೆರ್ನಾ ಎಂಬವರು:— ಪ್ರಣವಾಕ್ಷರವಾದ ಓಂಕಾರವನ್ನನುಸರಿಸಿರುವ ಆಮನ್ (*Ammon*) ದೇವಸ್ಥಾನಗಳು ಇಜಿಪ್ತ ದೇಶದಲ್ಲಿರುವವು. ಆ ದೇವಾಲಯಗಳಲ್ಲಿ ಗಂಗಾನದೀತೀರದಲ್ಲಿ ಕಂಡು ಬರುವ ಲಿಂಗಗಳನ್ನು ಹೋಲುವ ಲಿಂಗಗಳು ಇರುವವು. ಅಲ್ಲಿಯವರು ಆ ಲಿಂಗಗಳನ್ನು ಮುಖ್ಯ ದೇವರನ್ನಾಗಿ ಪೂಜಿಸುವರು. ಮತ್ತು ಆ ದೇಶದ ಇತರ ದೇವತಾ ವಿಗ್ರಹಗಳ ತಲೆಗಳ ಮೇಲೆ ಆ ಲಿಂಗಗಳ ಚಿಹ್ನಗಳು ಕಾಣಬರುವವು. ಅಂಥಾದ್ದೊಂದು ಲಿಂಗ ದೇವಸ್ಥಾನಕ್ಕೆ ಗ್ರೀಕ ಚಕ್ರವರ್ತಿಯಾದ ಅಲೆಗ್ಝಾಂಡರನು ಯಾತ್ರಾರ್ಥಿಯಾಗಿ ಹೋಗಿದ್ದನು ಎಂದು ಬರೆದಿರುತ್ತಾರೆ.

ಇದಲ್ಲದೆ ಈಟಾ ಜಿಲ್ಲೆಯಲ್ಲಿ ಹೊಸದಾಗಿ ಸಿಕ್ಕಿರುವ ಒಂದು ಜ್ಯೋತಿರ್ಲಿಂಗದ ಶಿಲಾಪ್ರತಿಮೆಯ ಬಗ್ಗೆ ಮಿ. ಎಸ್. ಸಿ. ಮೆತಾ ಐ. ಸಿ. ಎಸ್. ರವರು ಈ ರೀತಿ ಬರೆದಿರುವರು. "ನಂಬರು ೧ನೇ ಚಿತ್ರವು ಬಹು ಮಹತ್ವದ್ದಾಗಿರುವುದು. ಅದರೊಳಗೆ ಒಂದೇ ಕಲ್ಲಿನಲ್ಲಿ ಕೊರೆಯಲ್ಪಟ್ಟ ಶಿವಲಿಂಗ ಸಂಬಂಧವಾಗಿ ವಿಶೇಷ ಮಾಹಿತಿಯನ್ನು ತೋರಿಸಿಕೊಡುವ ಚಿತ್ರಗಳು ಇರುವವು. ಇದನ್ನು ಮಾಡಿರುವ ಶಿಲೆಯು ದುಬ್ಬ ಅಥವಾ ಕರೇಬಣ್ಣದ ಬಳಪದ ಕಲ್ಲಾಗಿಯು ಮಟ್ರಾ ಜಿಲ್ಲೆ ಶಿಗುವುದಾಗಿಯೂ ಇರುತ್ತದೆ. ಇದರೊಳಗಿರುವ ಮಧ್ಯಸ್ತಂಭವು ಒಂದು ಸಂಪೂರ್ಣವಾಗಿ ಅರಳಿದ ಕಮಲದ ಹೂವಿನ ಮೇಲೆ ಇಡಲ್ಪಟ್ಟಿದ್ದಾಗಿಯೂ ವಿಶ್ವಶಕ್ತಿ ಸ್ವರೂಪವಾಗಿಯೂ ಇರುತ್ತದೆ. ಇದರ ಮಧ್ಯದಲ್ಲಿ ಕೆಲವು ಗೆರೆಗಳಿಂದ ಲಿಂಗದ ಆಕೃತಿಯು ಕೊಡಲ್ಪಟ್ಟಿದೆ. ಇದರ ಎರಡು ಪಾರ್ಶ್ವಗಳಲ್ಲಿ ಎರಡು ಹರಿಗಳನ್ನು ಮಜ್ಜನದ ನೀರು ಹರಿದು ಹೋಗಲು ಮಾಡಿರುತ್ತಾರೆ. ಈ ಲಿಂಗದ ಪೀಠವು ಸುತ್ತಲೂ ಅಗ್ನಿಯ ಜ್ವಾಲೆಗಳಿಂದ ಆವರಿಸಿಕೊಂಡಿರುತ್ತದೆ. ಈ ಎಡಬಲಪಕ್ಕಗಳಲ್ಲಿ ಬ್ರಹ್ಮ ವಿಷ್ಣು ಇವರು ಅಳಿದಾಸನ (ಪ್ರಾರ್ಥನೆಯನ್ನು ಮಾಡುವ ನಿದಾನ) ದಲ್ಲಿ ಕುಳಿತಿರುವರು. ಈ ಶಿಲಾಪ್ರತಿಮೆಯು ಪೌರಾಣಿಕ ಪ್ರಸಿದ್ಧವಾದ ಜ್ಯೋತಿರ್ಲಿಂಗದ ಸ್ವರೂಪವನ್ನು ತೋರಿಸುವಂಥಾದ್ದಾಗಿರುತ್ತದೆ. ನನಗೆ ತಿಳಿದ ಮಟ್ಟಿಗೆ ಹೊರಗೆ ತೆಗೆಯಲ್ಪಟ್ಟ ಅಥವಾ ನೋಡಿದ ಜ್ಯೋತಿರ್ಲಿಂಗದ ಪ್ರತಿಮೆಗಳಲ್ಲಿ ಇದೇ ಮೊದಲನೆಯದಾಗಿರುತ್ತದೆ. ಇದು ನೋಡಲಿಕ್ಕೆ ಅಷ್ಟು ಸುಂದರವಾಗಿಲ್ಲದೇ ಇದ್ದರೂ ಶೈವಧರ್ಮ ಪುನರುಜ್ಜೀವನದ ಚಳವಳಿಯ ಸಂಬಂಧವಾಗಿ ಬಹು ಮುಖ್ಯವಾಗಿರುತ್ತದೆ. ಇದರ ಕಾಲನಿರ್ಣಯವನ್ನು ಮಾಡುವುದು ಅಸಾಧ್ಯವಾಗಿರುವುದು. ಏತಕ್ಕೆಂದರೆ ಇದರ ಶಿಲ್ಪಿಕಲೆಯೂ ಮತ್ತು ಮತ್ತು ಶಿಲೆಯೂ ಈ ಪ್ರಾಂತದವುಗಳಲ್ಲ. ವಿಷ್ಣು ಬ್ರಹ್ಮರು ಪ್ರಫುಲ್ಲಿತ ಕಮಲಪುಷ್ಪದಮೇಲೆ ಮಂಡೆಯನ್ನೂರಿ ಕುಳಿತಿರುವುದು ಇದರ ಪುರಾತನತ್ವವನ್ನು ಸೂಚಿಸುತ್ತದೆ."

ಇದಲ್ಲದೇ ಚಂಪದೇಶದಲ್ಲಿ (*Anam*) ಸಹಾ ಶಿವಲಿಂಗಗಳು ಅನೇಕ ವಿಧವಾಗಿ ಕಂಗೊಳಿಸ ತ್ತಿರುವವು. ಚಂಪದೇಶದಲ್ಲಿ ಶಿವಲಿಂಗಾಲಯುಗಳು ವಿಶೇಷವಾಗಿರುವುದರಿಂದ ಅಲ್ಲಿ ಲಿಂಗಪೂಜೆಯ ಪ್ರಾಬಲ್ಯವು ಒಡೆದು ಕಾಣುವುದು. ಶಿವನು ಇಲ್ಲಿಯ ಶಾಸನಗಳಲ್ಲಿ ಮಹದೇವ ಶರ್ವ

ಭವ, ಪಶುಪತಿ, ಈಶಾನ, ಭೀಮ, ರುದ್ರ, ಮಹೇಶ್ವರ ಮುಂತಾದ ಹೆಸರುಗಳಿಂದ ವ್ಯವಹರಿಸಲ್ಪಟ್ಟಿರುತ್ತಾನೆ. ಮುಖ್ಯ ಪಟ್ಟಣವಾದ ಚಂಪಾಪುರದಲ್ಲಿ ಶಿವನೇ ನಗರರಕ್ಷಕ ದೇವತೆಯಾಗಿರುತ್ತಾನೆ. ಶಿವೋಪಾಸನೆಯು ವಿಶೇಷವಾಗಿ ರೂಢಿಗೆ ಬಂದದ್ದು ಕ್ರಿ. ಶ. ೪ ನೇ ಶತಮಾನದಿಂದಿರಬಹುದೆಂದು ಶಾಸನಗಳಿಂದಲೂಹಿಸಬಹುದು. ಚಂಪದೇಶದಲ್ಲಿ ಮುಖಲಿಂಗಗಳು ಅಲ್ಲಲ್ಲಿ ಕಂಡುಬರುವವು. ಮಿ॥ ಎಮಾ ನಿಯರ್ ಎಂಬುವರೊಬ್ಬರು "ಪೊಕ್ಲಾಂಗಗಾರೈ" ಎಂಬ ಗೋಪುರದಲ್ಲಿ ಪ್ರತಿಷ್ಠಿತವಾಗಿರುವ ಒಂದು ಮುಖಲಿಂಗವನ್ನು ಬಣ್ಣಿಸುತ್ತಾ ಅದು ಶಿವಮೂರ್ತಿಯೆಂದೇ ಹೇಳಿರುತ್ತಾರೆ. ಮುಖದ ಸ್ವರೂಪವೂ ತಲೆಯಮೇಲಿನ ಕಿರೀಟವೂ ಕರ್ಣಕುಂಡಲಾದಿ ಆಭರಣಗಳೂ ತದ್ದೇಶೀಯ ಚಿತ್ರಕಲೆಯನ್ನು ವ್ಯಕ್ತಗೊಳಿಸುತ್ತವೆ.

ಇಂಥಾ ಮುಖಲಿಂಗಗಳು ಹಿಂದೂದೇಶದಲ್ಲಿ ಅನೇಕ ಸ್ಥಳಗಳಲ್ಲಿ ಕಾಣಬರುತ್ತವೆ. ಸಾಕ್ರಿಬಾಹ್ಲೋತ್ ಎಂಬ ಸ್ಥಳದಲ್ಲಿ ಇಂಥಾ ಮುಖಲಿಂಗವೊಂದಿರುವುದೆಂದು ಜನರಲ್ ಕನಿಂಗ್ ಹ್ಯಾಮರವರು ಹೇಳುತ್ತಾರೆ. ರಾಜಶಾಹಿಯಲ್ಲಿಯ ವರೇಂದ್ರ ಪರಿಶೋಧಕ ಸಂಸ್ಥೆಯವರು ಹರಿತ್ಪೀತ ಶಿಲೆಯ ಮುಖವುಳ್ಳ ಒಂದು ವಿಚಿತ್ರ ಲಿಂಗಮೂರ್ತಿಯನ್ನು ಹುಡುಕಿರುತ್ತಾರೆ. ಮತ್ತು ಪುರಾತನಶಾಸನಶೋಧನೆ (*Archaeological survey*) ಯ ವಾರ್ಷಿಕವರದಿಯ ಒಂದು ಲೇಖನದಲ್ಲಿ ಮಿ॥ ಆರ್. ಡಿ. ಬಾನರ್ಜಿಯವರು ಒಂದು ಪುರಾತನ ಮುಖಲಿಂಗವನ್ನು ವರ್ಣಿಸಿರುತ್ತಾರೆ. ಇದು ಕ್ರಿ. ಪೂ. ೧ನೇ ಶತಮಾನದ್ದಾಗಿರುತ್ತದೆ. ಇದು ೪ ಅಡಿ ೪ ಅಂಗುಲ ಎತ್ತರವಿರುತ್ತದೆ. ಇದು ಮೊದಲು ಅಲಹಾಬಾದ ಜಿಲ್ಲಾ ಬೀಟಾ ಎಂಬ ಸ್ಥಳದಲ್ಲಿದ್ದಿತಂತೆ. ಹೀಗೆ ಒಂದಾನೊಂದು ಕಾಲದಲ್ಲಿ ಹಿಂದೂ ದೇಶದಲ್ಲಿ ಮತ್ತು ಅನ್ಯದೇಶಗಳಲ್ಲಿ ಪ್ರಚಲಿತವಾಗಿದ್ದ ಮುಖಲಿಂಗಪೂಜೆಯು ಏನನ್ನು ಸೂಚಿಸುವುದೋ ನಮ್ಮ ಚನ್ನಮಲ್ಲಪ್ಪನವರೇ ಹೇಳಬೇಕು.

# ಬಸವೇಶ್ವರನ ಶಿವಾನುಭವ ಮಂಟಪವು ಮತ್ತು ಅಲ್ಲಿಯ ಚರ್ಚೆಗಳು.

ಲೇಖಕ:— ರಾ। ರಾ। ವೀರಪ್ಪ ಯಾಗಟಿ ಬಿ. ಏ. ಎಲ್. ಎಲ್. ಬಿ.
ವಕೀಲ ಹಾವೇರಿ.



ಭಕ್ತಿಯೆಂಬ ಪೃಥ್ವಿಯಮೇಲೆ ಗುರುವೆಂಬ ಬೀಜವಂಕುರಿಸಿ ಲಿಂಗವೆಂಬ ಎಲೆಯಮೇಲೆ ವಿಚಾರವೆಂಬ ಹುವ್ವಾಯಿತ್ತಯ್ಯ! ಆಚಾರವೆಂಬ ಕಾಯಾಯಿತ್ತು ನಿಷ್ಪತ್ತಿಯೆಂಬ ಹಣ್ಣಾಯಿತ್ತು! ಕೊಟ್ಟ ಕಳಚಿಬೀಳುವಲ್ಲಿ ಕೂಡಲಸಂಗಮದೇವಾ ತನಗೆ ಬೇಕೆಂದೆತ್ತಿಕೊಂಡಾ ॥ (ಬಸವ ಭಕ್ತಿಸ್ಥಲ)

ಬಸವನು ಕಲ್ಯಾಣದಲ್ಲಿರುವಾಗ ಆತನ ಯಶೋದುಂದುಭಿಯನ್ನು ಕೇಳಿ ನಾನಾ ದೇಶಗಳಿಂದ ಶಿವಶರಣರು ಅಲ್ಲಿಗೆ ಬಂದು ತತ್ವಚಿಂತನೆಯನ್ನು ಮಾಡುವರು. ಇವರಿಕ್ಕೋಸ್ಕರ ಬಸವೇಶ್ವರನು ರಚಿಸಿದ್ದ ಸ್ಥಾನವೇ ಶಿವಾನುಭವ ಮಂಟಪವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇಲ್ಲಿಗೆ ಕಾಶ್ಮೀರ, ನೇಪಾಳ, ಬಂಗಾಳಗಳಿಂದಲೂ ಪಶ್ಚಿಮದಲ್ಲಿ ಗೂರ್ಜರ (ಗುಜರಾಥ) ದೇಶದಿಂದಲೂ, ಪೂರ್ವದಲ್ಲಿ ಓಢ್ರ (ಒರಿಸಾ) ತುಳುದೇಶಗಳಿಂದಲೂ, ದಕ್ಷಿಣದಲ್ಲಿ ಮಲೆಯಾಳ, ಪಾಂಡ್ಯ, ಚೋಳ ಮೊದಲಾದ ದೇಶಗಳಿಂದಲೂ, ಶಿವಶರಣರು ಕಲ್ಯಾಣಕ್ಕೆ ಬಂದರೆಂದು ಚನ್ನಬಸವಪುರಾಣದ ೬ ನೇ ಸಂಧಿಯ ೪೮ ನೇ ಪುರಾಣದಲ್ಲಿಯೂ ಬಸವಪುರಾಣದ ೬ ನೇ ಸಂಧಿಯ ೧೪೮—೧೯ ನೇ ಪದಗಳಲ್ಲಿಯೂ ಹೇಳಿದೆ. ಕಲ್ಯಾಣವು ಮಹಾ ಮಹಿಮರ ಆಗರವಾಯಿತು. ಭೂಕೈಲಾಸವೆಂದೆನಿಸಿಕೊಂಡಿತು. ಆಗ ಕಲ್ಯಾಣಕ್ಕೆ ಬಂದ ಮಹಿಮರಲ್ಲಿ ಅಲ್ಲಮ ಸಿದ್ಧರಾಮ ಮಹಾದೇವಿಯಕ್ಕ ಮುಕ್ತಾಯಿ ಮೊದಲಾದವರು ಬಹು ಪ್ರಸಿದ್ಧರಾದರು.

ಸಿದ್ಧರಾಮಯೋಗಿಯು ಸೊಲ್ಲಾಪುರದಲ್ಲಿದ್ದು ಅನೇಕ ಮಠಗುಡಿಗಳನ್ನು ಕಟ್ಟಿಸಿ ದಾನಧರ್ಮಮಾಡುತ್ತಾ ತನ್ನ ಹಾಗೆ ಧಾರ್ಮಿಕರಾದವರು ಮತ್ತಾರೂ ಇಲ್ಲವೆಂದು ತಿಳಿದಿದ್ದನು. ಅಲ್ಲಮನು ಸೊಲ್ಲಾಪುರಕ್ಕೆ ಹೋದಾಗ್ಗೆ ಸಿದ್ಧರಾಮನ ಚಾರರೆದುರಿಗೆ ಈ ಬಗ್ಗೆ ಸಿದ್ಧರಾಮನ ನಿಂದೆಯನ್ನು ಮಾಡಿದನು. ಅವರು ಸಿಟ್ಟಿಗೆದ್ದು ಅಲ್ಲಮನನ್ನು ಹಿಡಿಯ ಹೋಗಲು ಆತನು ಅವರ ಕೈಗೆ ಸಿಗಲಿಲ್ಲ. ಅಲ್ಲಮನನ್ನು ಅವರು ಕಲ್ಲಿನಿಂದ ಹೊಡೆಯಲು ಆತನಿಗೆ ಅವು ತಗಲಲಿಲ್ಲ. ಈ ಅಗಾಧವನ್ನು

ನೋಡಿ ಅವರು ತಮ್ಮ ಒಡೆಯನಾದ ಸಿದ್ಧರಾಮನನ್ನೇ ಅಲ್ಲಿಗೆ ಕರೆತರಲು ಸಿದ್ಧರಾಮನು "ನನ್ನ ನಿಂದೆಯನ್ನು ಮಾಡುವ ಭಿಕ್ಷುಕ ಜಂಗಮನೇ ನೀನಾರು? ನಿನ್ನ ನಾಲಿಗೆಯನ್ನು ಸೀಳುವೆನು." ಎಂದನು.

ಅಲ್ಲಮಃ— ಸಿದ್ಧರಾಮನೇ ಶಿವಯೋಗಿಗಳು ತಮ್ಮಿಂದ ಇರಿವೆ ಮೊದಲಾದ ಪ್ರಾಣಿಗಳ ಹಿಂಸೆಯಾಗಬಾರದೆಂದು ಮಾರ್ಗದಲ್ಲಿ ಬಹು ಎಚ್ಚರದಿಂದ ನಡೆಯುವರು. ಮತ್ತು ಕಾಮಕ್ರೋಧಾದಿಗಳ ವಿಕಾರವು ತಮಗುಂಟಾಗಬಾರದೆಂದು ಸರ್ವದಾ ಚಿತ್ತವೃತ್ತಿಯನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಳ್ಳುವರು. ಸಾಧುಗಳಿಗೆ ಉಚಿತವಾದ ಸಹನಶೀಲತೆಯನ್ನೂ ಶಾಂತಿಯನ್ನೂ ಬಿಟ್ಟು ಈ ವಿಪರೀತ ಕಾರ್ಯವನ್ನೇಕೆ ಅವಲಂಬಿಸಿದಿ.

ಇವನ್ನು ಕೇಳಿ ಸಿದ್ಧರಾಮನು ಸಿಟ್ಟಿನಿಂದ ಇವನನ್ನು ಸುಡುವೆನೆಂದು ಉರಿಗಣ್ಣನ್ನು ತೆಗೆಯಲು ಸುತ್ತಲಿನ ಪ್ರದೇಶವು ಸುಟ್ಟಿತೇ ಹೊರತು ಅಲ್ಲಮನು ಅಚ್ಚಳಿಯದಂತಿದ್ದನು. ಸಿದ್ಧರಾಮನು ಈ ವಿಚಿತ್ರವನ್ನು ಕಂಡು ಆತನು ತನಗಿಂತಲೂ ಮಹಿಮನೆಂದು ಅರಿತು ಆತನ ಪಾದಕ್ಕೆರಗಿ "ಎಲೈ ಸ್ವಾಮಿಯೇ ನಿನ್ನ ದರ್ಶನದಿಂದ ನನ್ನ ಆತ್ಮಜ್ಞಾನವು ಅಂಕುರವಾಗಿ ಸರ್ವರಲ್ಲಿ ಸಮದೃಷ್ಟಿ ಇಡಲು ಕಲಿತೆನು. ನಾನೊಬ್ಬನೇ ಜಗತ್ತಿನಲ್ಲಿ ವಂದ್ಯನೆಂದು ತಿಳಿದುಕೊಂಡಿದ್ದೆನು. ಈ ಸಮತೆಯು ನನ್ನಲ್ಲಿ ನಿರಂತರವಾಗಿ ಉಳಿಯುವಂತೆ ಉಪದೇಶಮಾಡು" ಎಂದನು.

ಅಲ್ಲಮಃ— ಎಲೈ ಸಿದ್ಧರಾಮನೇ, ಮನಸ್ಸಿನಲ್ಲಿ ವೈರಾಗ್ಯವನ್ನು ಹೊಂದಿ ಅದನ್ನು ದೃಢವಾಗಿ ಮಾಡಲೆತ್ನಿಸಿದರೆ ಅದರಿಂದ ಸಾತ್ವಿಕ ಗುಣವುಂಟಾಗಿ ಮನಸ್ಸು ಸ್ಥಿರವಾಗುವದು. ಸ್ಥಿರಮನಸ್ಸಿನಿಂದ ಶಾಂತಿಯು ಉದಯಿಸುವದು. ಶಾಂತಿಯಿಂದ ಸುಖವುಂಟಾಗುವದು. ಶಾಂತಿ ಸ್ವಭಾವಿಗಳಿಗೆ ಭೇದ ಬುದ್ಧಿಯಿರುವದಿಲ್ಲ. ಮನಸ್ಸನ್ನು ಆತ್ಮನ ಕಡೆಗೆ ಒಲಿಸಬೇಕು. ಕೊಬ್ಬಿದ ಇಂದ್ರಿಯಗಳನ್ನು ಸತ್ಕಾರ್ಯವೆಂಬ ಬಂಡಿಗೆ ಹೂಡಿ ದುಡಿಸಿಕೊಳ್ಳಬೇಕು. ಇಂದ್ರಿಯಗಳನ್ನು ಜಯಿಸಿದವನೇ ಮೋಕ್ಷಹೊಂದುವನು.

ಸಿದ್ಧರಾಮಃ— ಗುರುವರ್ಯನೇ, ಇಂದ್ರಿಯಗಳನ್ನು ಗೆಲ್ಲುವ ರೀತಿಯನ್ನು ದಯವಿಟ್ಟು ಹೇಳಬೇಕು.

ಅಲ್ಲಮಃ— ಮನವು ಇಂದ್ರಿಯಗಳಿಗೆ ಅರಸಾಗಿದೆ. ಮನಸ್ಸನ್ನು ವಿಷಯ ಸುಖಗಳಿಂದ ಹಿಮ್ಮೆಟ್ಟಿಸಿ ಆತ್ಮಚಿಂತನೆಯ ಕಡೆಗೆ ತಿರುಗಿಸ

ಬೇಕು. ಅಂದರೆ ಇಂದ್ರಿಯಗಳು ತಾವೇ ಆತ್ಮರೂಪದ ಕಡೆಗೆ ಒಲಿಯುವವು.

ಸಿದ್ಧರಾಮಃ— ದಾನ ಧರ್ಮಗಳಿಂದ ಮೋಕ್ಷವು ಸಿದ್ಧಿಯಾಗುವದಿಲ್ಲವೇ? ಇದಕ್ಕೆ ಸಂಸಾರವು ಸಾಧನವಲ್ಲವೇ?

ಅಲ್ಲಮಃ— ಕರ್ಮ ಮಾರ್ಗವು ಸಾಮಾನ್ಯರ ವರ್ತನವು. ಒಕ್ಕಲಿಗರು ಹೇಗೆ ಕಷ್ಟಪಟ್ಟು ಬೀಜ ಬಿತ್ತಿ ಬೆಳೆಯನ್ನು ತಕ್ಕೊಳ್ಳುವರೋ ಅದರಂತೆ ಕರ್ಮಿಗಳಿಗೆ ಅದರ ಪಾಪಪುಣ್ಯಕ್ಕೆ ಸರಿಯಾಗಿ ಫಲವು ಲಭಿಸುವದು. ಈ ಫಲವನ್ನು ಭೋಗಿಸಿಯೇ ತೀರಬೇಕಾದ್ದರಿಂದ ಅವರು ಜನನ ಮರಣದಿಂದ ಕೂಡಿದ ಸಂಸಾರ ಬಂಧನದಿಂದ ಬಿಡುಗಡೆಯಾಗುವದಿಲ್ಲ. ಆದರೆ ವೀರಶೈವ ದೀಕ್ಷೆಯನ್ನು ಪಡೆದು ಇಷ್ಟಲಿಂಗ ಸಂಬಂಧಿಯಾಗಿ ಸರ್ವಭೋಗ ಕ್ರಿಯೆಗಳನ್ನು ಲಿಂಗಕ್ಕರ್ಪಿಸುತ್ತ ಲಿಂಗಧ್ಯಾನಿಯಾಗಿ ಶಿವಯೋಗದಲ್ಲಿ ನಿರತನಾದವನಿಗೆ ಮಾತ್ರ ಭವಬಂಧನವು ನಾಶವಾಗುವದು. ಮನಸ್ಸು ಸ್ಥಿರಗೊಳಿಸಿ ಸರ್ವಕರ್ಮಗಳನ್ನು ಬಿಟ್ಟು ಚಿತ್ಸ್ವರೂಪಾತ್ಮಕವಾದ ಲಿಂಗದಲ್ಲಿ ನಿಶ್ಚಲ ದೃಷ್ಟಿಯನ್ನಿಟ್ಟರೆ ಅಂಥವನನ್ನು ಬ್ರಹ್ಮದೇವರು ಕೂಡ ನಾಶಮಾಡನು. ಕರ್ಮಕಾಂಡಿಗಳು ಕರ್ಮದಲ್ಲಿ ಸ್ವಲ್ಪು ತಪ್ಪುಮಾಡಿದರೆ ಅದು ನಿರರ್ಥಕವಾಗುವದೆಂದು ಶಾಸ್ತ್ರವು ಹೇಳುವದು. ಬಾಹ್ಯ ಜ್ಞಾನವು ಪ್ರಪಂಚದ ಕುಟಿಲತನವು, ಅಂತರ್ಜ್ಞಾನವು ಅನುಭವದಿಂದ ತಿಳಿಯತಕ್ಕದ್ದು. ಜಾಣನು ಬಾಹ್ಯ ವಿಷಯಗಳ ವಾಸನೆಯನ್ನು ಕಿತ್ತು ಹಾಕಿ ಆ ಮನಸ್ಸನ್ನು ವಿಜ್ಞಾನ ರೂಪದೀಪಕ್ಕೆ ಎದುರಿನಲ್ಲಿರಿಸಿ ಅದನ್ನು ವಶಮಾಡಿಕೊಂಡು ಸರ್ವದಾ ಸದಸದ್ವಿಚಾರದಲ್ಲಿರುವನು. ವಿಷಪಾನ ಮಾಡಿದವನನ್ನು ವಿಷವೈದ್ಯನೂ ರಕ್ಷಿಸನು. ಹಾಗೆಯೇ ವಿಷಯ ಸುಖದ ಸೆಳವಿಗೆ ಬಿದ್ದು ಭ್ರಷ್ಟನಾದವನನ್ನು ಬ್ರಹ್ಮನೂ ರಕ್ಷಿಸನು. ಮೋಕ್ಷಕ್ಕೆ ಶಿವಜ್ಞಾನವೊಂದೇ ಕಾರಣವು. ಲಿಂಗಪೂಜಾದಿ ಕ್ರಿಯಗಳು ಜ್ಞಾನದ ಕುರುಹುಗಳು; ಯಜ್ಞಾದಿ ಕ್ರಿಯುಗಳನ್ನಾಚರಿಸುವದು ಅಜ್ಞಾನದ ಗುರುತು. ಎಂಥ ಜ್ಞಾನಿಯಾದರೂ ಲಿಂಗಪೂಜಾದಿ ಕ್ರಿಯೆಗಳನ್ನು ಬಿಡಲಾಗದು. ಕಪಟವನ್ನು ಕಿತ್ತುಹಾಕಿ ಏಕಾಕಿಯಾಗಿ ಯೋಗ ಸಾಧನೆಯಲ್ಲಿರಬೇಕು. ಶಿವಜೀವೈಕ್ಯ ಸ್ವರೂಪದಲ್ಲಿ ದೃಢಭಾವವುಳ್ಳವನಾಗಿ ಒಳಗೂ ಹೊರಗೂ ಪರಿಶುದ್ಧತೆಯನ್ನು ಹೊಂದಿ ಮನಸ್ಸಿನ ಚಾಂಚಲ್ಯವನ್ನು ನಿಲ್ಲಿಸಬೇಕು. ಏಕಾಗ್ರ ಚಿತ್ತವನ್ನು ಮೊದಲು ಇಷ್ಟಲಿಂಗದಲ್ಲಿ

ತೊಡಗಿಸಬೇಕು. ಹೀಗೆ ಭೋಧಿಸಿ ಸಿದ್ಧರಾಮನ ಇಚ್ಛೆಯಂತ ಅಲ್ಲ ಮನು ಆತನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಕಲ್ಯಾಣಕ್ಕೆ ಕರೆದು ಕೊಂಡು ಬಂದನು.

ಇದರಂತೆಯೇ ಆ ಕಾಲಕ್ಕೆ ಮುಕ್ತಾಯಿ ಎಂಬ ಶರಣೆಯೂ ಬಹು ಪ್ರಸಿದ್ಧಳಾಗಿದ್ದಳು. ಒಂದು ದಿನ ಅಲ್ಲಮನು ಸಂಚರಿಸುತ್ತ ಮುಕ್ತಾ ಯಿಯು ದುಃಖದಲ್ಲಿರುವಳೆಂದು ಯೋಗ ದೃಷ್ಟಿಯಿಂದ ತಿಳಿದು ಅವಳೆ ಡೆಗೆ ಬಂದು ಅವಳ ದುಃಖದ ಕಾರಣವನ್ನು ಕೇಳಿದನು. ಅವಳು ತನಗೆ ಅಜಗಣ್ಣನೆಂಬ ತಮ್ಮ ನಿದ್ದನೆಂತಲೂ ಆತನು ಶಿವಭಕ್ತಿಯಲ್ಲಿ ಧುರೀಣನಾಗಿ ತನಗೆ ಶಿವಾಚಾರದಲ್ಲಿ ಗುರುವಿನಂತಿದ್ದನೆಂತಲೂ ಅವನು ತೀರಿಹೋದದ್ದರಿಂದ ತನಗೆ ದುಃಖವಾಗಿದೆಯೆಂತಲೂ ಹೇಳಿದಳು. ಅದಕ್ಕೆ ಅಲ್ಲಮನು ಜಗತ್ತಿನಲ್ಲಿ ಪ್ರಮಥರು ಯಾವದಾದರೊಂದು ನಿಮಿತ್ಯದಿಂದ ಭೂಮಿಯಲ್ಲಿ ಜನ್ಮವೆತ್ತುವರು. ತಮ್ಮ ಕೆಲಸವು ಪೂರ್ತಿಯಾದೊಡನೆ ಕೈಲಾಸಕ್ಕೆ ತೆರಳುವರು. ಚನ್ನಾಗಿ ವಿಚಾರ ಮಾಡಲು ಅವರಿಗೆ ಯಾವ ನೊಬ್ಬನ ಕೂಡ ಅಣ್ಣ, ತಮ್ಮ, ತಂದೆ ಮಗನೆಂಬ ಸಂಬಂಧವಿರುವ ದಿಲ್ಲ. ಇದರಿಂದ ಅಜ್ಞಾನಿಗಳಿಗೆ ಮಾತ್ರ ದುಃಖವಾಗುವದು. ಈಶ್ವರಾ ಜ್ಞೆಯನ್ನು ಮೀರಲು ಯಾರೂ ಸಮರ್ಥರಲ್ಲ. ತಮ್ಮ ಕರ್ಮಫಲವನ್ನು ತಾವೇ ಅನುಭೋಗಿಸಬೇಕು. ಒಬ್ಬರ ಕೂಡ ಮತ್ತೊಬ್ಬರು ಸಾಯು ವದಿಲ್ಲ. ಗಂಡಹೆಂಡರ, ಅಣ್ಣತಮ್ಮಂದಿರ ಇವೇ ಮೊದಲಾದ ಸಂಬಂಧ ಗಳು ಸಾಯುವ ವರೆಗಿರುತ್ತವೆ. ಇವೆಲ್ಲ ಸಂಬಂಧಗಳು ಪೂರ್ವಕರ್ಮ ದಿಂದುಂಟಾಗುತ್ತವೆ. ಆದ್ದರಿಂದ ಪಾಪ ಪುಣ್ಯರೂಪವಾದ ಸರ್ವ ಕರ್ಮ ಗಳನ್ನು ತ್ಯಜಿಸು. ಸಾಧನ ಚತುಷ್ಟಯಗಳಿಂದ ಶಿವಭಕ್ತಿಯನ್ನು ಸಾಧಿ ಸಬೇಕು. ಆ ಸಾಧನಗಳಾವುವೆಂಪರೆ, (೧) ನಿತ್ಯಾನಿತ್ಯವಿವೇಕ- ಆತ್ಮ ಸುಖವೇ ನಿತ್ಯವಾದದ್ದು, ಸಂಸಾರ ಸುಖವು ಅನಿತ್ಯವಾದದ್ದು. (೨) ಫಲಭೋಗವಿರಾಗ-- ಇಹಪರಲೋಕಗಳ ಬಗ್ಗೆ ವೈರಾಗ್ಯವುಂಟಾಗುವಿಕೆ. (೩) ಮನೋನಿಗ್ರಹ, ಇಂದ್ರಿಯನಿಗ್ರಹ, ಫಲತ್ಯಾಗ ವಿಷಯಗಳಲ್ಲಿ ವಿರಕ್ತಿ. ಆಸ್ತಿಕ್ಯಬುದ್ಧಿ ಮತ್ತು ಚಿತ್ತಸಮಾಧಾನವೆಂಬ ಶಮದಮಾದಿ ಸಾಧನ ಗಳು. (೪) ಮೋಕ್ಷದ ಇಚ್ಛೆ. ಈ ನಾಲ್ಕು ಸಾಧನಗಳು ಅನುಕೂಲ ಸ್ಥಿತಿಯಲ್ಲಿದ್ದರೆ ಜೀವನಿಗೆ ಶಿವಜ್ಞಾನವು ಪ್ರಾಪ್ತಿಯಾಗುವದು. ಮಹೇಶ್ವ ರನೇ ಮಾಯೋಪಾಧಿಯಿಂದ ಈಶ್ವರನೆಂತಲೂ ಅವಿದ್ಯೋಪಾಧಿಯಿಂದ

ಜೀವನೆಂತಲೂ ಎರಡು ಪ್ರಕಾರವಾಗಿರುವನು. ಸ್ಥೂಲದೇಹವು ಪೃಥ್ವಿ ನ್ಯಾದಿ ಪಂಚಮಹಾಭೂತಗಳಿಂದಾಗಿದೆ. ಪಂಚೀಕರಣವಿಲ್ಲದೆ ಕೇವಲ ಪಂಚಮಹಾಭೂತಗಳಿಂದ ಸೂಕ್ಷ್ಮದೇಹವಾಗಿದೆ ಮಾಯಾ ಸಂಬಂಧ ವಾದದ್ದು ಕಾರಣದೇಹ. ಈ ದೇಹತ್ರಯಗಳು ನಾಶಹೊಂದಲು ಶಿವ ಜೀವರ ಐಕ್ಯವು ಸಂಭವಿಸುವದು. ಅನಾದಿ ಕಾಲದಿಂದ ಬಂದ ಅಜ್ಞಾನದಿಂದ ಜೀವನು ಸಂಸಾರ ಬಂಧನದಲ್ಲಿ ಬೀಳುತ್ತಾನೆ. ತನ್ನ ಇಚ್ಛೆಗಳು ಪೂರ್ಣವಾಗದೆ ಇರುವ ತನಕ ದುಃಖಪಡುತ್ತಾನೆ. ಕೊಡವನ್ನು ಒಯ್ದ ಕಡೆಗೆ ಅದರಲ್ಲಿಯ ಆಕಾಶವು ಬರುವಂತೆ ದೇಹವು ಹೋದಕಡೆಗೆ ಜೀವನು ಬರುವನು. ಕರ್ಮಫಲದಿಂದ ಜೀವನು ಮನುಷ್ಯ ಪಶುಪಕ್ಷಿ ಮೊದಲಾದವುಗಳ ಜನ್ಮವೆತ್ತುವನು. ಆದರೆ ಜೀವಾತ್ಮನೇ ಪರಮಾತ್ಮನೆಂದು ಯಾರು ಚಿಂತಿಸುತ್ತಾರೋ ಅಂಥವರಿಗೆ ಶಿವನು ಒಲಿಯುತ್ತಾನೆ. ಶಿವನು ದೇವತೆಗಳ ಶರೀರದಲ್ಲಿರುವಾಗ ಸರ್ವಜ್ಞನೆಂದೂ ಮನುಷ್ಯ ಮೊದಲಾದ ಪ್ರಾಣಿಗಳ ದೇಹದಲ್ಲಿರುವಾಗ ಕಿಂಚಿಜ್ಞನೆಂದೂ ಆಶ್ರಯ ಭೇದದಿಂದ ತೋರುತ್ತಾನೆ. ಈ ಭೇದ ಜ್ಞಾನವು ಉಪಾಧಿಮೂಲಕ ವುಂಟಾಗುವದು. ಉಪಾಧಿಯನ್ನು ನಾಶಗೊಳಿಸಿದರೆ ಉಳಿಯುವದು ಚಿತ್ಸ್ವರೂಪ ಸದಾಶಿವ ಮೂರ್ತಿಯು. ಶರೀರವು ಅನಿತ್ಯವಾದ್ದರಿಂದ ವೀರ ಶೈವರಲ್ಲಿ ಶಿವನು ಗುರುರೂಪದಿಂದ ಜೀವನಿಗೆ ಶಿವದೀಕ್ಷಾ ಸಂಸ್ಕಾರ ವನ್ನು ಮಾಡಿ ಅವನಲ್ಲಿ ಶಿವಭಕ್ತಿಯನ್ನು ನೆಲೆಗೊಳಿಸುವನು. ವೀರಶೈವರಿಗೆ ಜನನ ಮರಣಗಳ ಸೂತಕವಿಲ್ಲ ಮತ್ತು ಅವುಗಳಿಂದಾಗುವ ಸುಖದುಃಖಗಳೂ ಇಲ್ಲ. ಲಿಂಗೈಕ್ಯರಾದರೆಂದರೆ ಅವರಿಗೆ ಹೆಚ್ಚು ಕಲ್ಯಾಣವಾದಂತಾಗುವದು. ಅಂತ್ಯ ಕ್ರಿಯೆಯನ್ನು ಅತಿಸಂಭ್ರಮದಿಂದ ಈ ಕಾರಣದಿಂದಲೇ ಮಾಡುವರು. ನಿಮ್ಮ ತಮ್ಮನಾದ ಅಜಗಣ್ಣನು ಪ್ರಮಥನಿದ್ದು ನಾಶಹೊಂದದೆ, ಆಕಾಶದಂತೆ ಸರ್ವತ್ರವ್ಯಾಪಿಸಿ ಶಿವನೊಡನೆ ಬೆರೆತಿರುವನು. ಚಿಂತೆಮಾಡಬೇಡ, ಆತನು ನಿನ್ನಲ್ಲಿಯೂ ಇರುವನು. ನೀನು ದುಃಖಿಸುವದು ವೀರಶೈವಾಚಾರಕ್ಕೆ ವಿರೋಧವಾಗಿರುವದು.

ಮುಕ್ತಾಯಿಃ— ಮನುಷ್ಯಾದಿ ಪ್ರಾಣಿಗಳು ಅನೇಕ ವ್ಯವಹಾರಗಳನ್ನು ಮಾಡುತ್ತ ಬಂದು ಸಾಯುವಾಗ್ಗೆ ಅವುಗಳನ್ನು ಒಮ್ಮೆಲೇ ಹೇಗೆ ಬಿಡಲಾದೀತು?

ಅಲ್ಲಮಃ— ಹಾಲು ಹಸುಮಕ್ಕಳ ಮುಖ್ಯ ಜೀವನವಿದ್ದು ಕೂಸು ಹುಟ್ಟಿದ ಕೂಡಲೇ ತಾಯಿಯ ಮೊಲೆಯಲ್ಲಿ ಅದು ಉತ್ಪನ್ನವಾಗುತ್ತದೆ. ಕೂಸು ದೊಡ್ಡದಾಗುತ್ತ ಹೋದ ಹಾಗೆ ಹಾಲು ಕಡಿಸುವದನ್ನು ತಾಯಿಯು ಕಡಿಮೆ ಮಾಡುತ್ತಾಳೆ. ಆ ಮೇಲೆ ಹಾಲಿನಲ್ಲಿ ಸಕ್ಕರೆ ಹಾಕಿ ಪಾಯಸ ಮಾಡಿ ಉಣ್ಣಿಸುತ್ತಾಳೆ. ಕೆಲವು ದಿನಗಳ ಮೇಲೆ ಅನ್ನವನ್ನು ಣ್ಣಿಸುತ್ತಾಳೆ. ಹೀಗೆ ಬರಬರುತ್ತ ಹಾಲಿನ ಮರವೆಯುಂಟಾಗುವದು. ಹೀಗೆಯೇ ಗುರುವಿನ ಉಪದೇಶದಿಂದ ಶಿವಭಕ್ತರಲ್ಲಿ ಭಕ್ತಿಯುಂಟಾಗುವದು. ಭಕ್ತಿಯಿಂದ ಮೋಕ್ಷವು ಲಭಿಸುವದು. ಹೀಗೆ ಹೇಳಿ ಅವಳಿಗೆ ವೇಧಾದೀಕ್ಷೆಯನ್ನು ಕೊಟ್ಟು ಆಶೀರ್ವದಿಸಿದನು.

ಹೀಗೆಯೇ ಮಹದೇವಿಯಕ್ಕನೆಂಬ ಮತ್ತೋರ್ವಳು ಕಲ್ಯಾಣಕ್ಕೆ ಬಂದಳು. ಇವಳ ಜೀವನಚರಿತ್ರೆಯನ್ನಷ್ಟು ವಿಚಾರಿಸುವ. ಮಾಯೆಯು ಅಲ್ಲಮನನ್ನು ಸೋಲಿಸಲಿಲ್ಲವೆಂತಲೂ ಅಲ್ಲಮನು ಆಕೆಯನ್ನು ಜಯಿಸಿದನೆಂತಲೂ ಹಿಂದೆ ಹೇಳಿದೆ. ಆ ಮೇಲೆ ಮಾಯೆಯು ನಿರಾಶೆಯುಳ್ಳವಳಾಗಿ ಕೈಲಾಸಕ್ಕೆ ಬಂದು ಪಾರ್ವತಿಗೆ ಆ ಸಂಗತಿಯನ್ನು ಹೇಳಲಾಗಿ ಶಿವನು ಪಾರ್ವತಿಯನ್ನು ಕುರಿತು "ಅಲ್ಲಮನು ಪರಮ ವೈರಾಗಿಯು ಅವನನ್ನು ಜಯಿಸುವ ಹೆಮ್ಮೆಯನ್ನು ಬಿಡು, ಆದರೂ ನಿನ್ನ ಚಿತ್ಕಳೆಯನ್ನು ಸ್ತ್ರೀರೂಪದಿಂದ ಭೂಮಿಗೆ ಕಳಿಸು, ಅಲ್ಲಮನು ಅವಳಿಗೆ ನಿಶ್ಚಯವಾಗಿ ವಶನಾಗುವನು." ಎಂದನು. ದಕ್ಷಿಣದಲ್ಲಿ ಉಡುತಡೀ ಎಂಬಲ್ಲಿ ವಿಮಲನೆಂಬ ವೀರಶೈವನೊಬ್ಬನಿದ್ದನು. ಅವನಿಗೆ ಸುಮತಿಯೆಂಬ ಸುಶೀಲೆಯಾದ ಹೆಂಡತಿಯಿದ್ದಳು. ಪಾರ್ವತಿಯ ಚಿತ್ಕಳೆಯು ಸುಮತಿಯ ಗರ್ಭದಲ್ಲಿ ಪ್ರವೇಶ ಮಾಡಿ ಕಪ್ಪೆಚಿಪ್ಪಿನಲ್ಲಿ ಮುತ್ತು ಹುಟ್ಟುವಂತೆ ಮಹಾದೇವಿಯಕ್ಕನೆಂಬ ಹೆಸರಿನಿಂದ ಹುಟ್ಟಿದಳು. ಈಕೆಯು ಪ್ರಾಯಕ್ಕೆ ಬರಲು ಈಕೆಯ ಅಸಾಧಾರಣವಾದ ರೂಪವನ್ನು ನೋಡಿ ಆ ನಗರದ ರಾಜನಾದ ಕೌಶಿಕನು ಅವಳನ್ನು ಲಗ್ನವಾಗಬೇಕೆಂದು ಅವಳ ತಾಯಿತಂದೆಗಳಿಗೆ ಹೇಳಿಕಳುಹಿದನು. ರಾಜನು ಜೈನ ಕುಲದವನಾದುದರಿಂದ ಅವರು ಅದಕ್ಕೆ ಒಪ್ಪಲಿಲ್ಲ. ರಾಜನು ಸ್ವತಃ ಮಹಾದೇವಿಯನ್ನೇ ಕೇಳಲು, ಆಕೆಯು ಅರಸನು ವೀರಶೈವದೀಕ್ಷೆಯನ್ನು ಹೊಂದಿದರೆ ತಾನು ಆತನನ್ನು ಲಗ್ನವಾಗುವೆನೆಂತಲೂ ಇಲ್ಲವಾದರೆ ತಾನು ಸನ್ಯಾಸಿನಿಯಾಗುವೆನೆಂತಲೂ ಹೇಳಿದಳು. ರಾಜನು ಅದಕ್ಕೊಪ್ಪದ್ದರಿಂದ ಆಕೆಯು ಉಡಿಗೆಯನ್ನು ತೆಗೆ

ಡೊಗೆದು ಗಿರಿಗಂಹರಗಳನ್ನು ತಿರುಗುತ್ತ ಕಡೆಗೆ ಬಸವೇಶ್ವರನ ವಾರ್ತೆಯನ್ನು ಕೇಳಿ ಕಲ್ಯಾಣಕ್ಕೆ ಬಂದಳು. ಈಕೆಯು ತನ್ನ ವಚನದಲ್ಲಿ ಬಸವಾದಿ ಪ್ರಮಥರನ್ನು ಹೀಗೆ ಸ್ತುತಿಸಿರುವಳು. "ಬಸವಣ್ಣನ ಮನೆಯ ಮಗಳಾದ ಕಾರಣ ಭಕ್ತಿಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ತೊತ್ತಿನ ಮರಿದೊತ್ತಿನ ಮಗಳಾದ ಕಾರಣ ಜ್ಞಾನಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುಮಗಳಾದ ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಯ್ಯನ ಮನೆಯ ಮಗಳಾದ ಕಾರಣ ನಿರ್ಮಲ ಪ್ರಸಾದ ಕರುಣಿಸಿಕೊಟ್ಟನು. ಇಂತೀ ಅಸಂಖ್ಯಾತ ಗಣಂಗಳೆಲ್ಲರೂ ತಮ್ಮ ಕರುಣದ ಕಂದನೆಂದು ತಲೆದಡಹಿದ ಕಾರಣ ಚನ್ನಮಲ್ಲಿಕಾರ್ಜುನಯ್ಯನ ಶ್ರೀಪಾದಕ್ಕೆ ಯೋಗ್ಯಳಾದೆನು."

ಇಂಥ ಮಹಾ ಜ್ಞಾನಿಗಳು ಕಲ್ಯಾಣದಲ್ಲಿ ಬಸವನನ್ನು ಆಶ್ರಯಿಸಿರಲಾಗಿ ಬಸವನು ತತ್ವಚಿಂತನೆಗಾಗಿ ಒಂದು ಸಮಿತಿಯನ್ನೇ ಸ್ಥಾಪಿಸಿದನು. ಈ ತತ್ವ ಚರ್ಚೆಗಾಗಿ ಬಸವನು ತನ್ನ ಅರಮನೆಯ ಒಂದು ಭವ್ಯವಾದ ಮಂಟಪವನ್ನೇ ಅದಕ್ಕೆ ಪ್ರತ್ಯೇಕವಾಗಿ ವಿನಿಯೋಗಿಸಿದನು. ಇದಕ್ಕೆ ಅನುಭವ ಮಂಟಪವೆಂದು ಹೆಸರಾಯಿತು. ಷಟ್ಸ್ಥಲ ಬ್ರಹ್ಮಿಗಳೆಂದು ಪ್ರಸಿದ್ಧರಾದವರೇ ಇದರಲ್ಲಿ ಪ್ರವೇಶಿಸಲು ಯೋಗ್ಯರಾಗುತ್ತಿದ್ದರು. ಇದಕ್ಕೆ ಸೇರಿದವರಲ್ಲಿ ಕೆಲವರು ಎಂಥ ಮಹಾತ್ಮರಿದ್ದರೆಂಬು ಮಹದೇವಿಯಕ್ಕನು ತನ್ನ ವಚನದಲ್ಲಿ "ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ ನಿಷ್ಠೆ, ಪ್ರಭುದೇವರ ಜಂಗಮ ಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರಕರುಣಪ್ರಸಾದವೆನಗಾಯಿತ್ತು" ಈ ಅನುಭವ ಮಂಟಪಕ್ಕೆ ಪರಮ ಜ್ಞಾನ ಮೂರ್ತಿಯಾದ ಪ್ರಭುವು ಅತ್ಯಂತ ಮಿಗಿಲಾಗಿ ಪ್ರಕಾಶಿಸುತ್ತಿದ್ದನು. ಸಂಗನ ಬಸವನೆಂಬ ವಚನಕಾರನು ಅನುಭವ ಮಂಟಪದ ವಿವರಣೆಯನ್ನು ವಿಸ್ತಾರವಾಗಿ ಮಾಡಿರುವನು. ಅದರಲ್ಲಿ ಕೆಲವು ಭಾಗವನ್ನು ಇಲ್ಲಿ ಕೊಡುತ್ತೇವೆ. "ಆ ನಿಲುಕಡೆಯ ವಿಚಾರವೆಂತೆಂದೊಡೆ ಪ್ರಥಮದಲ್ಲಿ ಘಟ್ಟಿವಾಳ ನೂರೊಂದು ವಿರಕ್ತ ಅಜಗಣ್ಣ ತಂದೆಗಳು, ಅಕ್ಕನಾಗಮ್ಮ, ಮಹಾದೇವಿ, ನೀಲಲೋಚನೆ, ಮುಕ್ತಾಂಗನೆ ಮೊದಲಾದ ಶರಣಗೀ ನಿರವಯಸ್ಥಲಕ್ಕೆ ಕಾರಣವಾದ ಶೂನ್ಯ ಲಿಂಗಾನುಭಾವವ ಬೋಧಿಸಿ ೨೧೬ ಸಕೀಲು ಮೊದಲಾದ ಸಕೀಲವನರುಪಿ ಆ ಅಪಸ್ಮರ ಕುಂಡಲಿ, ಶೂನ್ಯ

ಲಿಂಗೋದ್ಧರಣೆ, ಚಿದಂಬರ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ನಿರ್ವಾಣ ಸಮಾಧಿಯ ಪಥವ ತೋರಿದರು ನೋಡಾ. ದ್ವಿತೀಯದಲ್ಲಿ ಬಸವ, ಚನ್ನಬಸವ, ಸಿದ್ಧರಾಮ ಮೊದಲಾದ ಶರಣರ್ಗೆ ನಿರಾಲಂಬ ಸ್ಥಲಕ್ಕೆ ಕಾರಣವಾದ ನಿಃಕಳಂಕ ಲಿಂಗಾನುಭಾವವ ಬೋಧಿಸಿ ೨೧೬ ಸಕೀಲವನರುಪಿ ಅಷ್ಟಾವರಣ, ಜ್ಞಾನ ಚಕ್ರ ನೂರೆಂಟು ಪ್ರಣವ ಅನಾದಿ ಜಂಗಮ ಮೊದಲಾದ ಚತುರ್ವಿಧ ಉದ್ಧರಣೆಯ ಕರುಣಿಸಿ ಸಚ್ಚಿದಾನಂದ ಸಮಾಧಿಯ ಪಥವ ತೋರಿದರು ನೋಡಾ. ತೃತೀಯದಲ್ಲಿ ಮರುಳಶಂಕರ, ನಿಜಗುಣ ಚನ್ನಮಲ್ಲದೇವರು ಮೊದಲಾದ ಶರಣರ್ಗೆ ನಿಜೈಕ್ಯಸ್ಥಲಕ್ಕೆ ಕಾರಣವಾದ ಮಹಾಲಿಂಗಾನುಭಾವವ ಬೋಧಿಸಿ—ನಿರವಯ ಸಮಾಧಿಯ ಪಥವ ತೋರಿದರು. ಚತುರ್ಥದಲ್ಲಿ ಸಮಸ್ತ ಜಂಗಮಾಕೃತಿಯ ಧರಿಸಿದ ಶರಣರ್ಗೆ ನಿಜ ಶರಣಸ್ಥಲಕ್ಕೆ ಕಾರಣವಾದ ಪ್ರಸಾದ ಲಿಂಗಾನುಭಾವವ ಬೋಧಿಸಿ—ನಿಜಶಿವ ಸಮಾಧಿಯ ಪಥವ ತೋರಿದರು. ಪಂಚಮದಲ್ಲಿ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ ಮೊದಲಾದ ಶರಣರ್ಗೆ ನಿಜಪ್ರಾಣಲಿಂಗಿ ಸ್ಥಲಕ್ಕೆ ಕಾರಣವಾದ ಜಂಗಮ ಲಿಂಗಾನುಭಾವವ ಬೋಧಿಸಿ—ಬಯಲ ಸಮಾಧಿಯ ಪಥವ ತೋರಿದರು.

ಷಷ್ಠಮದಲ್ಲಿ:— ನಮಃ ಶಿವಾಯದೇವರು, ಷಡಕ್ಷರಾಂಕ, ಗಣದಾಸಿವೀರಣ್ಣ, ಹರಳಯ್ಯ ಮೊದಲಾದ ಶರಣರ್ಗೆ ನಿಜಪ್ರಸಾದಿಸ್ಥಲಕ್ಕೆ ಕಾರಣವಾದ ಶಿವಲಿಂಗಾನುಭಾವವ ಬೋಧಿಸಿ.........ಗೋಳಕಸಮಾಧಿಯ ಪಥವತೋರಿದರು. ಸಪ್ತಮದಲ್ಲಿ ಪಂಚಾಕ್ಷರ ಕಲಿಗಣನಾಥೊಡೆಯರು, ಚಿಲುಮೆ ಅಗ್ಗಣಿಯಭಕ್ತರು ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿ ಮೊದಲಾದ ಶರಣರ್ಗೆ ಗೋಮುಖ ಸಮಾಧಿಯ ಪಥವ ತೋರಿದರು. ಅಷ್ಟಮದಲ್ಲಿ ವರ್ತಿಸುವ ಮಸಣಯ್ಯ ಚಿಕ್ಕಮಾದಯ್ಯಗಳು ಕದರಿ ರೇಮಯ್ಯನು, ರಾಘವಾಂಗ ಮೊದಲಾದ ಶರಣರ್ಗೆ ಸದ್ಭಕ್ತಿಸ್ಥಲಕ್ಕೆ ಕಾರಣವಾದ ಸಹಜ ಕ್ರಿಯಾಸಮಾಧಿಯ ಪಥವತೋರಿದರು. ಗೋಳಕಸಮಾಧಿಯ ಆಕಾರವ ರಚಿಸಿ ಆಯಾಯ ಸ್ಥಾನದಲ್ಲಿ ಪ್ರಣವವ ಸ್ಥಾಪಿಸಿ ಅನಾದಿ ಪರಶಿವಲಿಂಗದ ಉಭಯಕರ ಮಧ್ಯದಲ್ಲಿ ಬಾಸಣಿಸಿ ಅನಾದಿ ಮೂಲ ಪ್ರಣವಧ್ಯಾನದಿಂದ ಪ್ರಥಮ ಸೋಪಾನವಿಡಿದು ಹೋಗಿ ತ್ರಿಕೋಣೆಯ ಮಧ್ಯದಲ್ಲಿ ಪದ್ಮಾಸನವ ಬಲಿದು ಮೂರ್ತವಮಾಡಿ ಅಂತರಂಗದಲ್ಲಿ ಬೆಳಗುವ ಜ್ಯೋತಿರ್ಲಿಂಗದ ಅನುಮಿಷ ಸ್ಥಾನಕ್ಕೆ ತಂದು

ಮಾರ್ತವ ಮಾಡಿಸಿ ಕ್ಷೀರಕ್ಷೀರವ ಬೆರೆದಂತೆ ಚಿದ್ಘನಸ್ವರೂಪವಾದ ಇಷ್ಟಲಿಂಗವು ನಿರಂಜನ ಜಂಗಮಸ್ವರೂಪವಾದ ಪ್ರಾಣಲಿಂಗದಲ್ಲಿ ಶಿಖಿಕರ್ಪುರವ ಹಾಗೆ ಬಯಲಪ್ಪುದು ಬಯಲ ಸಮಾಧಿಯೆನಿಸುವದು. ಶಿವಪವಕ್ಕೆ ಯೋಗ್ಯವಾಗಿ ಬಂದವರ ಒಡಗೂಡಿ ಯೋಗ್ಯವಾಗದವರ ತ್ಯಜಿಸಿ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವೆಂಬ ನಿಷ್ಕಲ ಪರಶಿವ ಬಿಂದುಸ್ವರೂಪವಾದ ಶೋಡಶವರ್ಣದ ಚಿದ್ಬೆಳಗಿನೊಳಗೆ ಉರಿಕರ್ಪುರದಂತೆ ಶಿವಸಮಾಧಿಯಲ್ಲಿ ಬೆರೆದುಹೋದರು ನೋಡಾ ಸಂಗನಬಸವೇಶ್ವರಾ.

ಕಲ್ಯಾಣದ ಅನುಭವಮಂಟಪವು ಹಿಂದಕ್ಕೆ ಗ್ರೀಸದೇಶದಲ್ಲಿ ಪ್ಲೇಟೋ ಎಂಬ ತತ್ವಜ್ಞಾನಿಯು ಸ್ಥಾಪಿಸಿದ ತತ್ವಮಂಟಪವನ್ನು ಹೋಲುತ್ತದೆ. ಪ್ಲೇಟೋನ ತತ್ವಮಂಟಪಕ್ಕಾದರೂ ದೂರದಿಂದ ವಿಧ್ಯಾರ್ಥಿಗಳು ಬರುತ್ತಿದ್ದರು. ತತ್ವವಿಚಾರದೃಷ್ಟಿಯಿಂದ ಪ್ಲೇಟೋನನ್ನು ಬಸವನಿಗೆ ಹೋಲಿಸಬಹುದು, ಅರಿಷ್ಟಾಟಲನನ್ನು ಚನ್ನಬಸವನಿಗೆ ಹೋಲಿಸಬಹುದು. ಮಹದೇವಿಯಕ್ಕನು ತನ್ನ ವಚನದಲ್ಲಿ ಬಸವನಲ್ಲಿದ್ದ ಗುಣವಿಶೇಷಗಳನ್ನು ಹೀಗೆ ತೋರಿಸಿದ್ದಾಳೆ. ಇವೇ ಶಿವಾನುಭವಾಚಾರದ ಮುಖ್ಯಾಂಶಗಳೆಂದು ಹೇಳಬಹುದು.

"ನಮ್ಮ ಬಸವಣ್ಣನವರು ಜಗದ್ಧಿತಾರ್ಥವಾಗಿ ಮರ್ತ್ಯಕ್ಕೆ ಬಂದು ವೀರಶೈವ ಮಾರ್ಗವನರಿಪುವುದಕ್ಕೆ ೫೨ ವಿಧವನೊಳಕೊಂಡು ಚರಿಸಿದನು. ಅದೆಂತೆಂಒಡೆ ಗುರುಕಾರುಣ್ಯಾವೇದ್ಯನು, ವಿಭೂತಿ ರುದ್ರಾಕ್ಷಧಾರಕನು. ಪಂಚಾಕ್ಷರೀಭಾಷಾಸಮೇತನು, ಲಿಂಗಾಂಗಸಂಬಂಧಿ, ನಿತ್ಯ ಲಿಂಗಾರ್ಚಕನು, ಅರ್ಪಿತದಲ್ಲಿ ಅವಧಾನಿ, ಪಾದೋದಕ ಪ್ರಸಾದ ಗ್ರಾಹಕನು, ಗುರುಭಕ್ತಿಸಂಪನ್ನನು, ಏಕಲಿಂಗನಿಷ್ಠಾಪರನು, ಚರಲಿಂಗಲೋಲುಪ್ತನು, ಶರಣಸಂಗಮೇಶ್ವರನು, ತ್ರಿವಿಧಕ್ಕೆ ಆಯತನು, ತ್ರಿಕರಣಶುದ್ಧನು, ತ್ರಿವಿಧಲಿಂಗಾಂಗಸಂಬಂಧಿ, ಅನ್ಯ ದೈವಸ್ಮರಣೆಯಹೊದ್ದ, ಭವಿಸಂಗಮಾಡ, ಭವಿಪಾಕವಕೊಳ್ಳ, ಪರಸ್ತ್ರೀಯರಬೆರಿಸ, ಪರಧನವನೊಲ್ಲ, ಪರನಿಂದೆಯ ಮಾಡ, ಅನೃತವನುಡಿಯ, ಹಿಂಸೆಯಮಾಡ, ತಾಮಸಭಕ್ತಸಂಗವಮಾಡ ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನ ಮುಂತಾದ ಸಮಸ್ತವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ, ಜಂಗಮನಿಂದೆಯಸೈರಿಸ ಪ್ರಸಾದನಿಂದೆಯಕೇಳ, ಅನ್ಯರನಾಶಗೈಯ, ಪಾತ್ರಾ ಪಾತ್ರವನರಿದೀವ,

ಚತುರ್ವಿಧಪದವಿಯುಹಾರ" ಅರಿಷಡ್ವರ್ಗಕ್ಕಳು ಕಕುಲಾದಿಮುದಂಗಳ ಬಗೆ ಗೊಳ್ಳ, ದ್ವೈತಾದ್ವೈತವ ನುಡಿವನಲ್ಲ, ಸಂಕಲ್ಪವಿಕಲ್ಪವ ಮಾಡುವನಲ್ಲ ಕಾಲೋಚಿತವಬಲ್ಲ, ಕ್ರಮಯುಕ್ತನಾಗಿಹ ಷಟ್ಸ್ಥಲಭರಿತ, ಸರ್ವಾಂಗ ಲಿಂಗಿ, ದಾಸೋಹಸಂಪನ್ನ ಇಂತೀ ೫೨ ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ ನಾನು ಅಹೋರಾ ತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನಮಲ್ಲಿಕಾ ರ್ಜುನಾ."

ಮಹಾದೇವಿಯಕ್ಕನಾದರೂ ಶಿವಾನುಭವದ ಜ್ಞಾನವನ್ನು ಬಹು ಚನ್ನಾಗಿ ಈ ಮಂಟಪದಲ್ಲಿ ಪ್ರಕಟಮಾಡುತ್ತಿದ್ದಳು. ಅವಳು ಅಲ್ಲಮ ಕೃಪೆ ಯಿಂದ ಸ್ವರೂಪ ಸಾಕ್ಷಾತ್ಕಾರವನ್ನು ಪಡೆದಳು. ಇಷ್ಟಲಿಂಗವನ್ನು ತಾಳಿ ತನ್ನ ಶರೀರ ವ್ಯಾಪಾರಗಳನ್ನೆಲ್ಲ ಆ ಲಿಂಗ ಪೂಜೆಯ ಕಡೆಗೆ ತಿರುಗಿಸಿದ್ದ ರಿಂದ ಶರೀರದ ಬಂಧನವಿಲ್ಲದಾಯಿತು. ಶರೀರ ಮನಸ್ಸುಗಳಿಗೆ ಅತಿ ಸಮೀಪ ಸಂಬಂಧವುಂಟು. ಶರೀರವೃತ್ತಿಗಳು ಶಿವಪೂಜೆಯ ಕಡೆಗೆ ತಿರು ಗಲು ಮನಸ್ಸಿನ ವೃತ್ತಿಗಳು ಶಿವನ ಚಿಂತನೆಯ ಕಡೆಗೆ ಹರಿದವು. ವಿಷ ಯಗಳನ್ನು ತೊಲಗಿದ್ದರಿಂದ ಇಂದ್ರಿಯ ಮನಸ್ಸುಗಳಲ್ಲಿ ತುಂಬಿದ ಶಿವ ಜ್ಯೋತಿಯು ಮೋಡವಿಲ್ಲದ ಆಕಾಶದಲ್ಲಿ ಸೂರ್ಯನಂತೆ ತೋರಿ ಪ್ರಾಣ ಲಿಂಗವೆನಿಸಿತು. ಶರೀರದ ಜಾಡ್ಯ ಮನಸ್ಸಿನ ತಾಮಸಗಳು ಇಲ್ಲದಾಗಲು ಜೀವಭಾವಕ್ಕೆ ಕಾರಣವಾದ ಉಪಾಧಿಯು ಇಲ್ಲದಂತಾಗಿ ಜೀವನೆಂಬ ಅಂಗನು ಶಿವನೆಂಬ ಲಿಂಗದಲ್ಲಿ ಬೆರೆತು ಎರಡಿಲ್ಲದಂತಾದನು. ಇದೇ ಭಾವಲಿಂಗ ಯೋಗವು. ಜೀವನು ತನ್ನ ಪೊರೆಯನ್ನು ಅಂದರೆ ಸ್ಥೂಲ, ಸೂಕ್ಷ್ಮ, ಕಾರಣ ಶರೀರಗಳನ್ನು ತೊರೆದು ಚಿಚ್ಛಕ್ತಿಯ ಅಗ್ರಭಾಗದ ಲ್ಲಿಯ ಶಂಭುವನ್ನು ತನ್ಮಯನಾಗಿ ಸಾಕ್ಷಾತ್ಕರಿಸುವನು. ಇಂಥ ತನ್ನ ಜೀವನ್ಮುಕ್ತ ಸ್ಥಿತಿಯನ್ನು ಮಹಾದೇವಿಯಕ್ಕನು "ಅಂಗ ಸಂಗದಲ್ಲಿ ಲಿಂಗ ಸಂಗಿಯಾದೆ. ಲಿಂಗ ಸಂಗದಲ್ಲಿ ಅಂಗ ಸಂಗಿಯಾದೆ ಶಿವಾಚಾರದ ಅಂ ಗವೇ ಅಂಗವು. ಅಂತಪ್ಪ ಅಂಗಸಂಗಿಯಾಗಿ ಲಿಂಗಸಂಗಿಯಾದೆನು. ಇಷ್ಟ ಲಿಂಗಯುತಳಾದೆನು. ಲಿಂಗ ಸಂಗದಿಂದ ಇಂದ್ರಿಯಗಳ ವಿಷಯ ಪ್ರವೃ ತ್ತಿಯು ಸವೆದು ಅವುಗಳಲ್ಲೆಲ್ಲ ಶಿವಜ್ಯೋತಿಯು ತುಂಬಿರಲು ಲಿಂಗವು ಸಂಗತವಾದಂತಾಯಿತು ಅಂದರೆ ಪ್ರಾಣಲಿಂಗಿಯಾದೆನು. ಹೀಗೆ ಅಂಗ

ಲಿಂಗಗಳ ಯೋಗವಾಗಲು ಅಂಗ ಲಿಂಗಭೇದವಿಲ್ಲದೆ ನುಡಿಗಳ ಗಡಣಕ್ಕೆ ನಿಲುಕದ ಭಾವಲಿಂಗದಲ್ಲಿ ಬೆಚ್ಚಿಹೆನೆಂಬರ್ಥವು—ಅನುಭವ ಮಂಟಪದಲ್ಲಿ ಬಸವನು ಮಹದೇವಿಯಕ್ಕನ ವಚನಕ್ಕೆ ಹೀಗೆ ಆಕ್ಷೇಪಿಸಿದನು.

ಬಸವಃ— ಅಂಗದಲ್ಲಿ ಲಿಂಗಸಂಗ ಲಿಂಗದಲ್ಲಿ ಅಂಗಸಂಗ ಮಾಡಿಹೆನೆಂದರೆ ಸಂದುಭೇದವಳಿವ ಪರಿಯೆಂತು ಹೇಳಾ? ಅಂಗದಲ್ಲಿ ಲಿಂಗ ಸಂಗವ ಮಾಡಿಹೆನೆಂದರೆ ಮುಂದುಗೆಡಿಸಿ ಕಾಡುವನು ಶಿವನು. ಕಾಮನೆಂಬ ಬಯಕೆಯಲ್ಲಿ ಅಳಲಿಸುವ ಬಳಲಿಸುವ ಶಿವನು ಬರಿಯ ಮಾತಿನಿಂದ ಭೇದನಳಿವುದೆ? ಅಂಗದಲ್ಲಿ ಲಿಂಗ ಸಂಗವನು ಮಾಡುವೆನೆಂದರೆ ಶಿವನು ಅಂಗಸಂಗವನೊಲ್ಲನು. ಈ ಅಂಗವು ಕಾಮದ ನೆಲೆವನೆಯು. ಸದ್ಗುರುವಿನ ದೀಕ್ಷಾಬಲದಿಂದ ಈ ಕಾಮವು ಹೋಗದು. ಲಿಂಗದಲ್ಲಿಯೇ ಅಂಗವನು ಅಡಗಿಸುವೆನೆನ್ನುವಿಯಾ ಶಿವನು ಅಂಗದ ಸಂಬಂಧವನ್ನು ಹಚ್ಚಿಕೊಳ್ಳನು. ಅಂದಬಳಿಕ ನೀನು ಹೇಳಿದ ಸಾಮರಸ್ಯಾನುಭಾವವು ಹೇಗೆ? ಅಂಗದ ಭಾವವು ಇರುವನಕ ಜೀವಾತ್ಮನು ಹೆಂಗಸಿನಂತೆ ಆ ಅಂಗದುಪಾಧಿಯಿಂದ ದುರ್ಬಲನು ಸಂಸಾರತಾಪಕ್ರೀಡಾದಾತನು. ಅಂಗವನ್ನು ಹಿಂಗಿ ನಿರ್ಭಯನಾದರೆ ಅಭಯಸ್ವರೂಪನಾದ ಶಿವನು ಜೀವಾತ್ಮನನ್ನು ತನ್ನಲ್ಲಿ ಬೆರೆಯಿಸುವನು. ಅಂಗದುಪಾಧಿಯನ್ನು ನೀಗಿ ನಿಂತ ಬಳಿಕ ಲಿಂಗಸಂಬಂಧವೆಲ್ಲಿಯದು? ಶಿವನನ್ನು ಕೂಡುವರೆ ಭಿನ್ನವಾಗದೆ ಅಂಗಸಂಬಂಧವಳಿದ ಕಲಿಯಾಗಬೇಕು.

ಭಕ್ತಿಯು ಸಾಮರಸ್ಯದ ಗುಟ್ಟುಃ— ಬಸವನ ಪ್ರಶ್ನೆಯನ್ನು ಮಹಾದೇವಿಯಕ್ಕನು ಸುಲಭವಾಗಿ ಬಿಡಿಸಿದಳು.

ಮಹಾದೇವಿಯಕ್ಕ—ಕಾಮನಗೆಲಿದೆನಯ್ಯ ಬಸವಣ್ಣ ನಿಮ್ಮ ದಯದಿಂದ. ಪೋಪರನ ಹಿಡಿತಪ್ಪೆನಯ್ಯ ಬಸವಣ್ಣ ನಿಮ್ಮ ದಯದಿಂದ ನಾಮದಲ್ಲಿ ಹೆಣ್ಣು ರೂಪವಲ್ಲದೆ ಭಾವಿಸಲು ಗಂಡುರೂಪು. ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ ತೊಡರನಿಕ್ಕಿ ಕೂಡಿ ಎರಡನರಿಯದೆ ಮರೆದೆನಯ್ಯ ಬಸವಣ್ಣ ಶಿವಧರ್ಮ ಸ್ವರೂಪನಾದ ನೀನು ಸರ್ವ ಭಕ್ತರಲ್ಲೂ ವ್ಯಾಪಿಸಿರುವೆ. ಕಾಮನಿಗೆ ತವರುಮನೆಯಾದ ಈ ಅಂಗದಿಂದ ಆತನನ್ನು ಶಿವಭಕ್ತಿಸ್ವರೂಪನಾದ ನಿನ್ನ ದಯದಿಂದ ಓಡಿಸುವದು ಕಠಿಣವಲ್ಲ. ಆದರೆ ಕಾಮವೆಂಬುದು ಅಜ್ಞಾನದಲ್ಲಿ ತೋರಿರುವದೊಂದು ಪಿಶಾಚವು, ಧೀರರು ಜ್ಞಾನಬಲದಿಂದ ಪಿಶಾಚವನ್ನು ಗೆಲ್ಲುವಂತೆ ನಿನ್ನ ದಯದಿಂದ ಕಾಮ

ನನ್ನು ಗೆದ್ದಿರುವೆನು. ಆದ್ದರಿಂದ ನನ್ನ ಅಂಗವು ಲಿಂಗಸಂಗಕ್ಕೆ ತಕ್ಕು ದಾಗಿರುವದು. ಅಂಗದಿಂದ ಲಿಂಗಕ್ಕೆ ಬಾಧೆಯಾಗದು. ಅಂಗದಲ್ಲಿ ತುಂಬಿದ ಭಕ್ತಿಯೆಂಬ ಶಕ್ತಿಯು ಶಿವನನ್ನು ಸೆಳೆದು ತಾರದಿರದು. ಶಿವನು ಭಕ್ತರ ಸೋದರನು. ನಾನಂತು ಈ ತೋರ ಶರೀರದಿಂದ ಹೆಣ್ಣಾಗಿ ಕಾಣುತ್ತೇನೆ. ಆದರೆ ಶಿವನನ್ನಲ್ಲದೆ ಬೇರೊಂದನು ಚಿಂತಿಸೆನೆಂಬ ಪೃಥ್ತ್ವದಿಂದ ಕಾಮಾದಿ ಷಡ್ವರ್ಗವನ್ನು ಗೆದ್ದು ಗಂಡುಗಲಿಯಾಗಿರುವೆನು. ಕಾಮಾದಿ ತಾಮಸವಿಲ್ಲದ ಅಂಗನೆಂಬ ಜೀವಾತ್ಮನು ಶಿವನು ಒಡ್ಡಿದ ಮಾಯಾ ಪ್ರಪಂಚವನ್ನು ಗೆದ್ದವನಾದ್ದರಿಂದ ಆ ಶಿವನನ್ನು ಗೆದ್ದು ಅವನ ಶಿವತ್ವವನ್ನು ಅಪಹರಿಸಿದ ಗಂಡುಗಲಿಯು. ಶಿವನು ಪ್ರೇಮರಸದಿಂದ ತುಂಬಿ ತುಳುಕುವ ಭಕ್ತನೆಂಬ ಕಾಮಿನಿಯಲ್ಲಿ ವಿಪುಲ ರತಿಯುಳ್ಳವನು. ಈ ಬಗೆಯಿಂದ ಶಿವನು ಮಿಗಿಲಾದ ಕಾಮುಕನು. ಶಿವಭಕ್ತಿಯು ಸೂಸುತ್ತಿರುವ ನಾನು ಆ ಪರಶಿವನೆಂಬ ಪತಿಯಲ್ಲಿ ದೃಢವಾದ ಸಾಮರಸ್ಯವನ್ನು ಪಡೆದು ಅಗಲದಿರುವೆನು. ಸಚ್ಚಿದಾನಂದ ಸ್ವರೂಪವನ್ನು ಖಂಡಿಸಿ ಸ್ಥೂಲ ಶರೀರದಲ್ಲಿ ಸದ್ರೂಪವನ್ನೂ ಸೂಕ್ಷ್ಮ ಶರೀರದಲ್ಲಿ ಚಿದ್ರೂಪವನ್ನೂ ಕಾರಣ ಶರೀರದಲ್ಲಿ ಆನಂದವನ್ನೂ ಕಂಡುದಾದರೆ ಅದೇ ಜೀವಭಾವನೆ. ಈ ಖಂಡಿತ ಸ್ವರೂಪವನ್ನು ವಿಚಾರದಿಂದ ಕಳೆದು ನಿಂದುದಾದರೆ ಈ ಆತ್ಮನೆ ಲಿಂಗವು. ಅಂಗವೆಂಬುದು ಲಿಂಗವೆಂಬುದು ಒಂದೇ ಪರಮಾರ್ಥವಸ್ತುವು. ಇದು ಸಚ್ಚಿದಾನಂದ ಸ್ವರೂಪವು. ಶಕ್ತಿಸಮೇತವಾದುದು. ಈ ಚಿಚ್ಛಕ್ತಿಯನೊಡಂಬಡದಿರಲು ಆತ್ಮನು ಜಡನಲ್ಲದೆ ಚೇತನನೆನಿಸಲಾರನು. ರತ್ನಕನಕಗಳು ಹೊಳೆಯುತ್ತವೆ ಆದರೆ ಅವುಗಳಲ್ಲಿ ಸ್ವವಿಮರ್ಶ ಅಂದರೆ ತಮ್ಮ ಅರಿಕೆ ಇಲ್ಲದ್ದರಿಂದ ಅವು ಜಡವಾಗಿವೆ. ಶಿವನಲ್ಲಿ ಈ ಶಕ್ತಿಯು ಪುಷ್ಪದಲ್ಲಿ ಪರಿಮಳದಂತೆಯೂ, ಹಾಲಿನಲ್ಲಿ ರುಚಿಯಂತೆಯೂ ಒಂದಾಗಿದೆ. ತನ್ನ ಶಕ್ತಿಯ ಮಹಿಮೆಯಿಂದ ಶಿವನು ತನ್ನ ಪರಿಪೂರ್ಣತೆಯನ್ನು ಮರೆ ಮಾಡಿ ಸಂಕುಚಿತನಂತೆ ತೋರಬಲ್ಲನು. ಇದು ಮಲವು. ಪರಿಪೂರ್ಣತ್ವವು ಮರೆಯಾಗಲು ಆ ಮರವೆಯ ಜೊತೆಗೆ ಭಿನ್ನ ವಿಷಯ ದರ್ಶನವೆಂಬುದು ಪ್ರಕಟವಾಗುವದು. ಇದೇ ಮಾಯೆಯು. ಮಾಯೆಯು ಬೇರೆ ಬೇರೆ ವಿಷಯುಗಳನ್ನು ಆತ್ಮನ ಮುಂದಿಡಲು ಸಂಕೋಚ ಹೊಂದಿದ ಆತ್ಮನು ಆ ಸಂಕೋಚತೆಯನ್ನು ಕಳೆಯುವದಕ್ಕೆ ಎಲ್ಲ ಪದಾರ್ಥಗಳನ್ನು ಪಡೆಯಬೇಕೆಂದು ಹಂಬಲಿಸಹತ್ತುವನು. ಈ ಹಂಬಲವೇ

ಕರ್ಮವು. ಮೂರು ಪಾಶಗಳಾವವೆಂದರೆ— ಆತ್ಮಸ್ವರೂಪಮರವೆಯಿಂದಲೂ ಭಿನ್ನ ವಿಷಯಗಳ ತೋರಿಕೆಯಿಂದಲೂ ವಿಷಯಪ್ರಾಪ್ತಿಯ ಪ್ರಯತ್ನಗಳಿಂದಲೂ ಆತ್ಮನು ಸಂಸಾರಕ್ಕೀಡಾಗುವನು. ನಿಜವಾಗಿ ಆತನ ಸ್ವರೂಪಕ್ಕೆ ಯಾವ ಹಾನಿಯೂ ತಟ್ಟದು. ಲಿಂಗದಲ್ಲಿ ಅಳಿದು ಲಿಂಗದಲ್ಲಿ ನಿಂತ ಬಳಿಕ ನಾನು ಎಂಬ ಜೀವಭಾವವೂ ನೀನು ಎಂಬ ಲಿಂಗಭಾವವೂ ಇಲ್ಲವಾಗುವದರಿಂದ ಲಿಂಗಾಂಗವೆಂಬ ಭಾವವುಳಿಯದೆ ವಸ್ತುವೆ ನಿಲ್ಲುವುದು.

ಬಸವಃ— ಅಂಗವು ಲಿಂಗದಲ್ಲಿ ಅಳಿಯಿತ್ತೆಂದೂ ಅಂಗವು ತನ್ನಲ್ಲಿ ಅಳಿದಾಗ ಉಳಿದ ಲಿಂಗವು ನಿನ್ನಲ್ಲಿ ಅಳಿಯಿತ್ತೆಂದೂ ನಿನ್ನ ಭಾವವು. ಶಿವನು ನಿನ್ನ ಭಾವದಂತೆ ಅಳಿವುದಲ್ಲ ಉಳಿವುದಲ್ಲ. ಪರಮಾತ್ಮನು ತೊಡಕುಇಲ್ಲದಾತನು. ನಾನು ಅರಿತೆನೆಂಬವರ ಹೃದಯದಲ್ಲಿ ಶಿವನು ಪ್ರಕಟನಾಗುವನು.

ಮಹಾದೇವಿಃ—(ಇದಕ್ಕೆ ಅಂಜಲಿಲ್ಲ ಅವಳದು ಗಿಳಿಯಜ್ಞಾನವಾಗಿದ್ದಿಲ್ಲ.) ಲಿಂಗದಲ್ಲಿ ಅಂಗವಾಗಿ ಅಂಗಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲ ನಿಲಿಸಿ ನಿಲಿಸಿ ಕ್ರಿಯಾತೀತಳಾಗಿ ಲಿಂಗೈಕ್ಯವಾದೆ. ನಾನೆಂಬುದ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ. ಆಗ ಆ ಲಿಂಗವು ಜ್ವಾಲೆಯ ಕರ್ಪುರವನ್ನೆಲ್ಲ ಹಬ್ಬಿ ಕರ್ಪುರವನ್ನು ತನ್ನೊಳಗು ಮಾಡಿಕೊಂಡಂತೆ ತನ್ನ ಅಂಗವೆಲ್ಲ ತುಂಬಿ ಅಂಗವನ್ನು ತನ್ನೊಡಲೊಳಗೊಂಡಿತು. ಲಿಂಗವಿಲ್ಲದ ಪ್ರಾಕೃತ ತನುವು ನಾನಿಂತವರ ಬಸುರಿನಿಂದ ಹುಟ್ಟಿದವನು, ನಾನೀ ಕುಲದವನು ಮುಂತಾದ ಅನರ್ಥಪರಂಪರೆಗಳಲ್ಲಿ ಜೀವವನ್ನು ತೊಡಕಿಸುವದು. ಆದರೆ ಲಿಂಗವನ್ನೊಡಗೂಡಿದ ಶರೀರವು ಹಾಗಲ್ಲ. ಸೂಜಿಗಲ್ಲಿಗೆ ಹೊಂದಿರುವ ಸೂಜಿಯು ಸೂಜಿಗಲ್ಲಿನ ಸ್ವಭಾವವನ್ನೇ ತೋರುವಂತೆ ಶರೀರವು ಲಿಂಗದ ಸ್ವಭಾವವನ್ನೇ ಹೋಲುವದು. ಲಿಂಗದೇವನು ತನ್ನ ಶಕ್ತಿಯಿಂದ ಈ ಸೃಷ್ಟಿಯನ್ನು ಹುಟ್ಟಿಸಿ ಅದಕ್ಕೆ ಚಾಲಕನಾಗಿರುವನು. ಶರೀರವು ಸೃಷ್ಟಿಯಲ್ಲಿ ಒಂದಾಗಿದೆ. ಶರೀರದಿಂದಾದ ಕಾರ್ಯಗಳು ಶಿವನಿಂದಾಗುವವಲ್ಲದೆ ಜೀವನಿಂದಲ್ಲ. ಇಂತೆಂಬ ಭಾವದಿಂದ ಅಂಗವು ಲಿಂಗದಲ್ಲಿ ಒಂದುಗೂಡಿತು. ಗಾಳಿಯ ಆಲೆದಾಟದ ಕ್ರಿಯೆಯಲ್ಲಿ ಗಾಳಿಯ ಶಕ್ತಿಯಾಗಿರುವಂತೆ ಶರೀರಕ್ರಿಯೆಗಳು ಶಿವಶಕ್ತಿಮಯವಾಗಿದೆ.

ಈ ಮಹಾದೇವಿಯ ವಚನವನ್ನು ಬಸವ ಮೊದಲಾದ ಪ್ರಮಥರು ಕೇಳಿ ತಲೆದೂಗಿ ಬಣ್ಣಿಸಿದರು.

ಮಹಾದೇವಿಯು ಮತ್ತೆ ಹೇಳಿದ್ದು— ಆತ್ಮನು ಸಂಸ್ಕಾರಗಳಿಂದ ಸ್ವರ್ಗವಾಸಿಯಾಗುವನು, ದುಷ್ಕೃತಿಗಳಿಂದ ನರಕಕ್ಕೀಡಾಗುವನೆಂದು ತಿಳಿದು ಕೆಲವರು ಸತ್ಕರ್ಮಮಾಡುವರು. ಇದೇ ಕರ್ಮಮೀಮಾಂಸೆ. ಇದಕ್ಕೂ ಮೇಲಿನವರು ಕೇವಲ ಕರ್ಮಗಳು ಸುಖಸಾಧನಗಳಲ್ಲ ಆತ್ಮ ಸ್ವರೂಪದ ನಿಜವಾದ ತಿಳುವಳಿಕೆಯೇ ಸುಖಸಾಧನವು, ಪರಿಪೂರ್ಣತೆಯ ಉಪಾಯವು ಎಂದು ಹೇಳುವರು. ಕೆಲವು ಮತಗಳು ಆತ್ಮನು ಕ್ಷಣಿಕನೆಂದು, ಕೆಲವು ನಿತ್ಯನೆಂದು, ಇನ್ನು ಕೆಲವು ಅಣುಪರಿಮಾಣನೆಂದು, ಕೆಲವು ಮಧ್ಯ ಪರಿಮಾಣನೆಂದು, ಕೆಲವು ದೇಹಪರಿಮಾಣನೆಂದು ಇನ್ನು ಕೆಲವು ವಿಭುವೆಂದು ಸಾಧಿಸುವವು. ಈ ವಿಭುತ್ವವಾದಿಗಳಲ್ಲಿ ಕೆಲವರು ಆತ್ಮನ ಹೊರತು ಈಶ್ವರನೆಂಬ ಪುರುಷನುಂಟೆಂತಲೂ ಇನ್ನು ಕೆಲವರು ಈಶ್ವರನಿಲ್ಲವೆಂತಲೂ ವಾದಿಸುವರು. ಮತ್ತೆ ಕೆಲವರು ಪರಮಾತ್ಮನೆಂಬ ಒಂದು ವಸ್ತುವಿನಲ್ಲಿಯೇ ಆತ್ಮೇಶ್ವರರು ತೋರಿದರು ಎಂಬರು. ಒಂದು ವಸ್ತುವೆ ಈಶಜೀವರೆನಿಸಿತು ಎಂಬ ಮತಗಳಲ್ಲಿ ವೀರಶೈವವು ಒಂದಾಗಿದೆ. ವಸ್ತು ಸಾಕ್ಷಾತ್ಕಾರವು ಬರಿಯ ಬಾಯಮಾತಗಳಿಂದಲ್ಲ ತರ್ಕವಾಕ್ಯಗಳಿಂದಲ್ಲ. ವಿಷಯ ಚಿಂತನೆ ಬಿಟ್ಟು ಆತ್ಮನಿಷ್ಠನಾಗಿರುವದರಿಂದಲೆ ಉಂಟಾಗಬಲ್ಲದು. ಸ್ಥೂಲ ತನುವಿನಲ್ಲಿ ಧರಿಸಿದ ಇಷ್ಟಲಿಂಗವು ಶಿವಾಚಾರಕ್ಕೆ ಕಾರಣವಾದುದರಿಂದ ಆಚಾರಲಿಂಗವೆನಿಸಿತು. ಆಚಾರವೆ ಶಿವಜ್ಞಾನದ ಭೂಮಿಕೆಯಾದುದರಿಂದ ಆಚಾರಲಿಂಗವು ಭೂತತ್ವವೆನಿಸಿತು. ನಾಸಿಕದಲ್ಲಿ ದುರ್ಗಂಧ ಪರಿತ್ಯಾಗವು ಸ್ವಾಭಾವಿಕವಾಗಿರುವದರಿಂದ ಅನಾಚಾರ ಪರಿತ್ಯಾಗ ರೂಪವಾದ ಆಚಾರಲಿಂಗಕ್ಕೆ ದೇಹಗತಭೂತತ್ವವೇ ಸ್ಥಾನವು. ಗಂಧಗ್ರಾಹಕವಾದ ನಾಸಿಕವೇ ಭೂಸ್ಥಾನವಾದುದರಿಂದ ನಾಸಿಕವೇ ಆಚಾರಲಿಂಗಕ್ಕೆ ಸ್ಥಾನ. ಇಷ್ಟ ಲಿಂಗಧಾರಕನು ಶಿವಮಂತ್ರ ಶಿವನಾಮಗಳಲ್ಲಿ ರಸಿಕನಾಗಿರುವದರಿಂದ ಇಷ್ಟಲಿಂಗವೇ ಗುರುಲಿಂಗವೆನಿಸಿತು. ನಾಲಿಗೆಗೆ ರುಚಿಯಿರುವದರಿಂದ ಅಪ್ಪುತತ್ವಕ್ಕೆ ನಾಲಿಗೆಯೇ ಸ್ಥಾನವು. ಇಷ್ಟಲಿಂಗದಲ್ಲಿ ದೃಷ್ಟಿಯುಳ್ಳಾತನಿಗೆ ಬೇರೆ ಪದಾರ್ಥಗಳ ರೂಪದಲ್ಲಿ ರುಚಿದೋರದು. ದೃಷ್ಟಿಯು ಅಗ್ನಿತತ್ವವು. ಶಿವಲಿಂಗಕ್ಕೆ ದೃಷ್ಟಿಯು ಸ್ಥಾನವು. ಮುಟ್ಟುವ ಕಾರ್ಯವು ಚರ್ಮೇಂದ್ರಿಯದ್ದು. ಲಿಂಗ

ಸ್ಪರ್ಶಮಾಡಿದವನಿಗೆ ಸ್ತ್ರೀಸ್ಪರ್ಶ ಮೊದಲಾದವು ರುಚಿಸುವುದಿಲ್ಲ. ಚರ್ಮವು ದೇಹವನ್ನು ವ್ಯಾಪಿಸಿರುವದು. ದೇಹವನ್ನು ವ್ಯಾಪಿಸಿದ ಲಿಂಗವು ಜಂಗಮವಾಗಿದೆ ಅಂದರೆ ವ್ಯಾಪಿಸಿರುವದೆಂದರ್ಥ. ಇಂತು ಲಿಂಗಾಚಾರ ಲಿಂಗನಾಮ ಲಿಂಗದೃಷ್ಟಿ ಲಿಂಗಸ್ಪರ್ಶಗಳು ವೇಧಿಸಿ ಲಿಂಗದಲ್ಲಿ ಸಂಬಂಧವುಳ್ಳಾತನ ಶ್ರೋತ್ರಕ್ಕೆ ಶಿವನಾಮವೂ ಮಂತ್ರವೂ ರುಚಿಸುವದು. ಶ್ರೋತ್ರವು ಆಕಾಶತತ್ವವು ಒಂದಾನೊಂದು ಪದಾರ್ಥದ ವಿಷಯದಲ್ಲಿದ್ದ ಆಹ್ವಾನವು ಶಬ್ದದಿಂದ ಹೋಗುವದು. ನೋಡದಿದ್ದ ವಸ್ತುವನ್ನು ಶಬ್ದವು ಬುದ್ಧಿಯ ಮುಂದಿಡುವುದು. ಆದುದರಿಂದ ಆ ಶಬ್ದದಲ್ಲಿ ಅಡಕವಾದ ಜ್ಞಾಪಕ ಶಕ್ತಿಗೆ ಆಧಾರವಾದ ಚೈತನ್ಯವು ಪ್ರಸಾದಲಿಂಗವಿದ್ದು ಅಜ್ಞಾನದ ಕತ್ತಲೆಯನ್ನು ಹರಿವುದರಿಂದ ನಿರ್ಮಲತ್ವಕ್ಕೆ ಹೇತುವಾಗಿ ಪ್ರಸಾದಲಿಂಗವೆನಿಸಿತು. ಆಕಾಶದಲ್ಲಿ ನಿರ್ಮಲತ್ವವಿದೆ. ಆಕಾಶತತ್ವವು ಶ್ರೋತ್ರೇಂದ್ರಿಯ ಸ್ಥಾನವು.

ಶರೀರದಲ್ಲೆಲ್ಲ ಸತ್ಕ್ರಿಯೆಗಳನ್ನುಂಟುಮಾಡಿದ ಇಷ್ಟಲಿಂಗವೆಂಬ ಭಾಂಡವು ಕಾಯುತ್ತ ಒಳಗಿನ ನೀರನ್ನು ಕಾಯಿಸುವ ಅಗ್ನಿಯಂತೆ ಅಂತಃಕರಣವನ್ನು ವೇಧಿಸುವದು. ಅಂತಃಕರಣದಲ್ಲಿ ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು, ಜ್ಞಾನ ಭಾವಗಳೆಂಬ ಆರು ಅಂಗಗಳಿರುವವು. ಚಿತ್ತವು ಆಯಾ ಇಂದ್ರಿಯದ ಸಂಚಲವನ್ನು ದೂರೀಕರಿಸುತ್ತದೆ. ಬುದ್ಧಿಯು ತಿಳಿಯುತ್ತದೆ. ಅಹಂಕಾರವು ಅಭಿಮಾನಿಸುತ್ತದೆ. ಜ್ಞಾನವು ಆನಂದಪಡುತ್ತದೆ. ಭಾವವು ತೃಪ್ತಿಪಡುವದು. ಲಿಂಗವು ವೇಧಿಸಲಾಗಿ ಅಂತಃಕರಣವು ಶುದ್ಧವಾಗುವದು. ಚಿತ್ತವು ಸುಚಿತ್ತವಾಗಿ ಆಚಾರಲಿಂಗಕ್ಕೆ ನೆಲೆಯಾಗುವದು. ಬುದ್ಧಿಯು ಸುಬುದ್ಧಿಯಾಗಿ ಗುರುಲಿಂಗಕ್ಕೆ ಸ್ಥಾನವಾಗುವದು. ಹೀಗೆ ಸರ್ವೇಂದ್ರಿಯಗಳು ಲಿಂಗದಿಂದ ಕೂಡಿ ಸರ್ವ ವಿಶ್ವವು ಈಶ್ವರ ಮಯವೆಂಬ ನಿರಹಂಕಾರವು ಶಿವಲಿಂಗಕ್ಕೆ ಆಧಾರವಾಗಿರುವದು ಸಹಜವು. ಕಾರಣ ಶರೀರವು ಶುದ್ಧವಾಗಲು ಅಜ್ಞಾನವು ಅಳಿದು ಸರ್ವಜ್ಞತ್ವವು ಅಂದರೆ ಶಿವಾದಿಭೂಮ್ಯಂತವಾದ ೩೬ ತತ್ವಗಳ ಜ್ಞಾನವುಂಟಾಗುತ್ತದೆ. ಸರ್ವಜ್ಞತ್ವವು ಆಚಾರಲಿಂಗಕ್ಕೆ ಸ್ಥಾನವು. ಅಜ್ಞಾನದಿಂದಲೇ ಅನಾಚಾರ ಪ್ರವೃತ್ತಿಯು. ಶಿವಜ್ಞಾನದಿಂದ ಮುಕ್ತಿಯಹುದು ಎಂದು ಹೇಳಿದಳು. ಶರಣರೆಲ್ಲರೂ ಇವಳ ಅಸಾಧಾರಣ ಜ್ಞಾನಕ್ಕೆ ಮೆಚ್ಚಿದರು. ಅಲ್ಲಮನು ಆದರದಿಂದ ಹೀಗೆಂದನು, ''ಆದಿ ಅನಾದಿ ಶಕ್ತಿಯೆಂ

ಬದು ಜನವಾರು ಬಲ್ಲರಯ್ಯ? ಅಂತರಂಗದ ಪ್ರಭೆ ಬಹಿರಂಗವೆಲ್ಲ ತಾನೆಯಾಗಿ ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿರ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು" ಚನ್ನಬಸವನು ಹೀಗೆಂದನು: "ಅಜಕೋಟಿವರುಷದವರೆಲ್ಲರೂ ಹಿರಿಯರೇ? ಅನುವನರಿದು ಘನವ ಬೆರಿಸಿ ಹಿರಿದು ಕಿರಿದು ಎಂಬ ಭೇದವ ಮರೆದು ಕೂಡಲ ಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲವಪ್ಪ ಹಿರಿಯತನವೆಮ್ಮ ಮಹದೇವಿಯಕ್ಕಗಾಯಿತ್ತು" ಮಡಿವಳ ತಂದೆಯು ಹೀಗೆಂದನು--"ಕಾಮಿನಿಯಾಗಿ ನಿಷ್ಕಾಮಿಯಾದಳು. ಸೀಮೆಯುಲಿದ್ದು ನಿಃಸೀಮೆಯಾದಳು. ಭವಿಯ ಸಂಗವ ತೊರೆದು ಭವ ಬಾಧೆಯ ಹರಿದಳು. ಮಹದೇವಿಯಕ್ಕಗಳ ನಿಲುವ ಬಸವಣ್ಣನ ಕೃಪೆಯಿಂದಾನರಿದೆನಯ್ಯ" ಮಹಾದೇವಿಯಕ್ಕನು ಹದಿನಾಲ್ಕು ವರ್ಷದ ಬಾಲೆಯಾದರೂ ಅನುಭವ ಮಂಟಪದಲ್ಲಿ ಬಸವ, ಅಲ್ಲಮರಂಥ ಮಹಾಮಹಿಮರೊಡನೆ ವಾದ ಮಾಡಿ ಅದ್ವಿತೀಯ ಜ್ಞಾನವನ್ನು ತೋರಿಸಿದ್ದೇನು ಸಾಮಾನ್ಯವೇ? ಗಹನವಾದ ವಿಚಾರ ವಿಮರ್ಶೆಗೆ ನಲೆಯಾದ ಅನುಭವ ಮಂಟಪವನ್ನು ಸ್ಥಾಪಿಸಿದ ಬಸವನ ಚರಿತ್ರೆಯು ಸಾಮಾನ್ಯವಾಗಿಲ್ಲ. ಇದರ ಸ್ಥಾಪನೆಯು ಕರ್ನಾಟಕದ ಇತಿಹಾಸದಲ್ಲಿ ಮಹತ್ವದ ಸಂಗತಿಯಾಗಿದೆ.

# ಐತಿಹಾಸಿಕ ಟಿಪ್ಪಣಿಗಳು. (೧)

ಲೇಖಕ:— ಶಿ. ಚ. ನಂದಿಮಠ. ಎಮ್. ಏ. ಪಿ. ಎಚ್. ಡಿ.

## ವಿಜಯಾಪುರದ ಸಿದ್ಧೇಶ್ವರ ದೇವರು.

೧

ವಿಜಾಪುರವು ಒಮ್ಮೆ ದಕ್ಷಿಣದ ರಾಜಧಾನಿಯಾಗಿ ಒಳ್ಳೇ ವೈಭವದ ಸ್ಥಿತಿಯಲ್ಲಿತ್ತೆಂಬುದನ್ನು ಕನ್ನಡ ಶಾಲೆಯ ವಿದ್ಯಾರ್ಥಿಗಳೂ ಕೂಡ ಬಲ್ಲರು. ಅದಿಲ್ಲಶಾಹೀ ಮನೆತನದವರು ಇಲ್ಲಿ ರಾಜ್ಯಸ್ಥಾಪಿಸುವುದಕ್ಕಿಂತ ಮೊದಲು ವಿಜಾಪುರದ ಬಗ್ಗೆ ಅನೇಕರಿಗೆ ಕಲ್ಪನೆಯಿಲ್ಲ. ಈಗ ನಾವು ಕೆಳಗೆ ಕೊಡುವ ಆಧಾರದಿಂದ ವಿಜಾಪುರವು ಪ್ರಾಚೀನವಾದ ಪಟ್ಟಣಗಳಲ್ಲೊಂದಾಗಿತ್ತೆಂದು ಕಂಡುಬರುವುದು ವಿಜಾಪುರದ ನಿವಾಸಿಗಳು

---

೧ ಈ ಲೇಖದಲ್ಲಿ ಆಧಾರಕ್ಕೆಂದು ತೆಗೆದುಕೊಂಡ ಶಿಲಾಶಾಸನಗಳು ಸುಮಾರು ಮುಕ್ಕಾಲುನೂರು ವರ್ಷಗಳಿಗಿಂತ ಪೂರ್ವದಲ್ಲಿ ಈ ಭಾಗದಲ್ಲಿ ದೊಡ್ಡ ಅಧಿಕಾರಿಗಳಾಗಿ ಹೋದ *Sir walter Eliot* ರೆಂಬವರು ಸಂಗ್ರಹದಿಂದ ತೆಗೆದುಕೊಳ್ಳಲ್ಪಟ್ಟಿವೆ. ಇವರ ಸಂಗ್ರಹವನ್ನು *Royal asiatic Society of great Briton and Ireland, London,* ದ ಪುಸ್ತಕಾಲಯದಲ್ಲಿಟ್ಟಿರುವರೆಂದು ಹಿಂದೊಮ್ಮೆ ಶಿವಾನುಭವದ ವಾಚಕರಿಗೆ ತಿಳಿಸಿರುವೆವು. ಡಾ. ಫ್ಲೀಟರವರ "*The Dynasties of the Kanarese Districts of the Bombay Prsidency*" ಎಂಬ ಪುಸ್ತಕವು ಬಹುತರ ಈ ಸಂಗ್ರಹದ ಮೇಲೆಯೇ ಅವಲಂಬಿಸಿದೆ. ಅದನ್ನು ಅವರು ಮೇಲಿನ ಪುಸ್ತಕದ ಉಪೋದ್ಘಾತ ಪಾನ ೨ (*Bombay Gazetteer Vol. I Part II*) ರಲ್ಲಿ ಉಲ್ಲೇಖಿಸಿರುವರು. ಈ ಸಂಗ್ರಹದ ಮಹತ್ವವು ಕನ್ನಡಿಗರಿಗೆ ಎಷ್ಟಿದೆಯೆಂಬುದು ಬೇರೆ ಹೇಳಬೇಕಾಗಿಲ್ಲ. ಡಾ. ಫ್ಲೀಟರವರಾದರೂ ಇದನ್ನು ಪ್ರಸಿದ್ಧಿಸುವದು ಅಗತ್ಯವಿದೆಯೆಂದು ಅನೇಕ ಕಡೆಗೆ ಬರೆದಿರುವರು. ನಾನು ಲಂಡನದಲ್ಲಿದ್ದಾಗ ಅನುಕೂಲವಾದ ಹಾಗೆ ಈ ಸಂಗ್ರಹದಲ್ಲಿಯ ಕನ್ನಡ ಶಾಸನಗಳ ಮಹತ್ವದ ಭಾಗಗಳನ್ನೆಲ್ಲ ಉದ್ಧರಿಸಿ ತಂದಿರುವೆನು. ಕನ್ನಡಿಗರಿಂದ ಪ್ರೋತ್ಸಾಹದೊರೆತರೆ ಅದನ್ನು ಪ್ರಸಿದ್ಧಿಸಬೇಕೆಂದು ಆಸೆ. ಅದಿರಲಿ. ಈ ಸಂಗ್ರಹದಲ್ಲಿರುವ ಅನೇಕ ಶಾಸನಗಳು ಈಗ ಉಪಲಬ್ಧವಿಲ್ಲ. ಮೊದಲಿನ ಸ್ಥಳದಿಂದ ಅವನ್ನು ಬೇರೆ ಕಡೆಗೆ ಒಯ್ದಿರಬಹುದು ಇಲ್ಲವೆ ನಾಶಮಾಡಿರಬಹುದು. ನಾನು ವಿಜಾಪುರಕ್ಕೆ ಬಂದನಂತರ ಶೋಧಿಸಲು ಹಲಕೆಲವು ನನ್ನ ದೃಷ್ಟಿಗೆ ಬಿದ್ದಿಲ್ಲ. ಅಂಥವುಗಳಲ್ಲಿ ಸಿದ್ಧೇಶ್ವರ ದೇವರಿಗೆ ಸಂಬಂಧಿಸಿದ ವಿಜಯಾಪುರ ಅರಕಿಲ್ಲೆಯೊಳಗಿನ ಶಾಸನವೊಂದು. ಈ ಲೇಖದಲ್ಲಿ ನಾನು ಕಣ್ಣಾರೆ ಕಾಣದ ಶಾಸನಗಳ ಬಗ್ಗೆ ಭೂತಕಾಲವನ್ನು ಅಂದರೆ 'ಶಾಸನವಿತ್ತು' ಎಂಬ ಶಬ್ದವನ್ನು ಉಪಯೋಗಿಸಿರುವೆನು.

ಅಭಿಮಾನಪಡತಕ್ಕ ಸಂಗತಿಯು. ಅದರಲ್ಲೂ ಹಳೆಯದೆಲ್ಲ ಉತ್ತಮವೆಂದು ನಂಬುವಂಥ ಸಿದ್ಧೇಶ್ವರ ದೇವರ ಭಕ್ತರು ತಮ್ಮ ದೇವರ ಪ್ರಾಚೀನತೆಗಾಗಿ ಸಂತೋಷಪಡಲೂಬಹುದು.

ಇಲ್ಲಿಯ ಅರಕಿಲ್ಲೆಯ ಪೂರ್ವದ ಹೆಬ್ಬಾಗಿಲಿನ ಸಮೀಪದಲ್ಲಿರುವ ಪಂಚಪಾಂಡವರ ಗುಡಿಯೆಂದು ಈಗ ಪ್ರಚಾರದಲ್ಲಿರುವ ಪ್ರಾಚೀನ ಗುಡಿಗಳ ಹಾಳು ಅವಶೇಷಗಳಲ್ಲಿ ಒಂದು ಶಿಲಾಶಾಸನವಿತ್ತು. ಅದು ಚಾಲುಕ್ಯ ಚಕ್ರವರ್ತಿಯಾದ ಭುವನೈಕಮಲ್ಲದೇವರು ಅಥವಾ ದ್ವಿತೀಯ ಸೋಮೇಶ್ವರ ದೇವರು (ಕ್ರಿ. ಶ. ೧೦೬೮-೧೦೭೬) ರಾಜ್ಯವಾಳುವಾಗ ಹುಟ್ಟಿದುದು.(೨) ಅದರಲ್ಲಿಯ ವಿಷಯ. ಚಕ್ರವರ್ತಿಯ ಮಹಾಸಾಮಂತಾಧಿಪತಿ ಮಹಾಪ್ರಚಂಡ ದಂಡನಾಯಕ ವಿಪ್ರಕುಲಕಮಲಮಾರ್ತಾಂಡ ಶ್ರೀ ನಾಕಿಮೈಯಂಗಳು ತರ್ದ್ದವಾಡಿ ಸಾಸಿರಕ್ಕೆ ಅಧಿಪತಿಗಳಾಗಿದ್ದರು. ಇವರು ವಿಜಯಾಪುರವನ್ನೇ ರಾಜಧಾನಿಯನ್ನಾಗಿ ಮಾಡಿಕೊಂಡಂತೆ ತೋರುವುದು. ಇವರು ತಮ್ಮ ಮೇಲಾಧಿಕಾರಿಗಳಾದ ಬಂಕಾಪುರದ ಬಲ್ಲವರಸರಿಗೆ ಬಿನ್ನಪಂಗೈದು ರಾಜಧಾನಿ ವಿಜಯಾಪುರದ ಶ್ರೀ ಸ್ವಯಂಭು ಸಿದ್ಧೇಶ್ವರ ದೇಗುಲವಂ ಮಾಡಿಸಿ ಅಲ್ಲಿಯಾಚಾರ್ಯ ಶ್ರೀ ಯೋಗೇಶ್ವರ ಪಂಡಿತ ದೇವರಿಗೆ ಧರ್ಮವನ್ನು ಬಿಟ್ಟಿದ್ದಾರೆ. ಯೋಗೇಶ್ವರ ಪಂಡಿತರ ವಂಶಾವಳಿ. ಕಾಳಾಮುಖ ತಿಳಕರಾದ ಭುಜಂಗ ದೇವಾಚಾರ್ಯರು. ಅವರ ಶಿಷ್ಯ ತ್ರೈಲೋಚನ. ಅವರ ಶಿಷ್ಯ ಕಾಶ್ಮೀಲ ಸೂರೀಶ್ವರ. ಆವರ ಶಿಷ್ಯ ಯೋಗೇಶ್ವರ ಪಂಡಿತದೇವ. ಧರ್ಮವನ್ನು ಬಿಟ್ಟ ದಿವಸ ಶಕ ೯೯೮ನೇಯ ಆನಂದನಾಮ ಸಂವತ್ಸರದ ಪೌಷ ಶುದ್ಧ ೫ ಬೃಹಸ್ಪತಿವಾರ ಉತ್ತರಾಯಣ ಸಂಕ್ರಾಂತಿ ಪರ್ವ. (ಇಂಗ್ಲಿಷ ತಾರೀಖಿನಲ್ಲಿ) ಗುರುವಾರ ಡಿಸೆಂಬರ ೨೫ನೇ ತಾರೀಖು ಇಸ್ವಿ ೧೦೭೬.

ಮೇಲಿನ ಶಿಲಾಲೇಖದಿಂದ ವಿಜಾಪುರದ ಸಿದ್ಧೇಶ್ವರ ದೇವರ ದೇಗುಲವನ್ನು ಇಸ್ವಿ ೧೦೭೬ರಲ್ಲಿ ಕಟ್ಟಿದರೆಂದು ಹೇಳಿರುವುದರಿಂದ ಸಿದ್ಧೇಶ್ವರ ದೇವರು ಅದಕ್ಕೂ ಮೊದಲು ಪ್ರಸಿದ್ಧಿಗೆ ಬಂದಿರಬೇಕು. ಇದಾದರೂ ಬಸವಣ್ಣನವರಿಗಿಂತ ನೂರು ವರ್ಷ ಮೊದಲಿನ ಮಾತು. ಆದುದರಿಂದ ಸಿದ್ಧೇಶ್ವರ ದೇವರು ಏನಿಲ್ಲೆಂದರೂ ಒಂದು ಸಾವಿರ ವರುಷದ ಹಳಬರು.

---

೨. ಮ. ಇಲಿಯಪ್ಪರವರ ಸಂಗ್ರಹ ಪಾಸ ೧೪೩-೧೪೪. (ಭಾಗ ೧) ಭುವನೈಕಮಲ್ಲಸಂ. ೯

## ಜೇಡರ ದಾಸಿಮಯ್ಯ.

ಮೊಗಲಾಯಿ ಇಲಾಖೆಯಲ್ಲಿರುವ ಗೊಬ್ಬೂರಲ್ಲಿ ಕೊರವರ ಭಾವಿಯ ಥರಕ್ಕೆ ಹಾಕಿದ ಕಲ್ಲುಗಳಲ್ಲಿ ಒಂದು ಶಿಲಾಶಾಸನವಿತ್ತು. ಅದು ಚಾಲುಕ್ಯಚಕ್ರವರ್ತಿಯಾದ ಪ್ರತಾಪಚಕ್ರವರ್ತಿ ಜಗದೇಕಮಲ್ಲನ ಕಾಲದಲ್ಲಿ ಹುಟ್ಟಿದುದು. (೩) ಈತನಿಗೆ ದ್ವಿತಿಯ ಪೆರ್ಮ ಜಗದೇಕಮಲ್ಲ (ಕ್ರಿ. ಶ. ೧೧೩೮—೧೧೪೯) ನೆಂದೂ ಹೆಸರು. ಗೊಬ್ಬೂರ ಜೇಡರು ಕುಲದೇವರಾದ ಗೊಜ್ಜೇಶ್ವರ ದೇವರಿಗೆ ದತ್ತಿಯನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನ ಹುಟ್ಟಿದ ಕಾಲ. ಜಗದೇಕಮಲ್ಲದೇವ ವರುಷದ ೧೧ ನೇಯ ವಿಭವಸಂವತ್ಸರ ಶ್ರಾವಣ ಶುದ್ಧ ೭ ಮಂದವಾರ ಅಂದರೆ ಕ್ರಿ. ಶ. ೧೧೪೮ ಜುಲಾಯಿ ತಾರಿಖು ೨೪. ದಿ. ಬ. ಸ್ವಾಮಿಕನ್ನುಪಿಳ್ಳೆಯವರ (೪) ಪ್ರಕಾರ ಈ ದಿವಸ ಶನಿವಾರ ಬರುವುದು. ಈ ಶಾಸನದಲ್ಲಿ "ಪಿರಿಯ ಗೊಬ್ಬೂರ ಶೇಷ ಮಹಾಜನಂಗಳ ದಿವ್ಯ ಶ್ರೀಪಾದ ಪದ್ಮಾರಾಧಕರು ಶ್ರೀ ರಾಮೇಶ್ವರ ದೇವರ ಗಂಧವಾರಣಜಾಡ ಕುಲತಿಲಕ ಜಾಡರ ದಾಸಿಮಯ್ಯ ಪ್ರಿಯಪುತ್ರರುಮಪ್ಪ ಸಕಳ ಜಾಡಗೊತ್ತಳಿಗಳು (೫) ಕುಲದೇವ ದೇವನಪ್ಪ ಗೊಜ್ಜೇಶ್ವರ ದೇವರ ಪೂಜೆ ಇತ್ಯಾದಿ" ಎಂದಿದೆ. ಕ್ರಿ. ಶ. ೧೧೪೮ ರಲ್ಲಿ ಶಿವಶರಣರಾದ ಜಾಡರ ದಾಸಿಮಯ್ಯಗಳ ಉಲ್ಲೇಖವು ಈ ಶಾಸನದಲ್ಲಿರುವುದರಿಂದ ದಾಸಿಮಾರ್ಯರು ಕ್ರಿ. ಶ. ೧೧೪೮ ಕ್ಕೂ ಮೊದಲಿನವರೆಂಬ ಬಗ್ಗೆ ಆವ ಸಂಶಯವೂ ಇಲ್ಲ. ಮೇಲಾಗಿ ಶಿವಶರಣರಾದ ದಾಸಿಮಾರ್ಯರ ಮುದ್ರಿಕೆಯು "ರಾಮನಾಥ" ನೆಂದಿರುವುದರಿಂದಲೂ ಈ ಶಿಲಾಶಾಸನದಲ್ಲ "ರಾಮೇಶ್ವರದೇವರ ಗಂಧವಾರಣ" ರೆಂದು ಈ ಜಾಡರ ದಾಸಿಮಾರ್ಯರನ್ನು ಸಂಬೋಧಿಸಿರುವುದರಿಂದಲೂ, ಬಸವಪುರಾಣ ಮೊದಲಾದ ವೀರಶೈವ ವಾಙ್ಮಯದಲ್ಲಿ ಪ್ರಸಿದ್ಧರಾದ ಶಿವಶರಣ ದಾಸಿಮಾರ್ಯರೇ ಇವರೆಂಬ ಬಗ್ಗೆ ಆವ ಸಂಶಯವೂ ಇಲ್ಲ. ಕಲ್ಯಾಣದ ಬಸವಣ್ಣನವರು ಪ್ರಸಿದ್ಧಿಗೆ ಬರುವುದಕ್ಕೂ ಎನಿಲ್ಲೆಂದರೂ ೮-೧೦

೩. ಮಿ ಸರ್ ಇಲಿಯಟ್ಟರವರ ಸಂಗ್ರಹ ಪಾನ ೫೦೯ (ಭಾಗ ೧) ಪ್ರತಾಪಚಕ್ರವರ್ತಿ ಜಗದೇಕ ಮಲ್ಲನು ೩೨

೪. *Indian Ephemeres Madras.*

೫. "ಗೊತ್ತಳಿಗಳು" ಬದಲಾಗಿ "ಗೊತ್ತಗಾರ ಅಂದರೆ ಪ್ರಮುಖ" ಎಂದಿರಬಹುದೆ?

ವರುಷ ಮೊದಲು ಈ ಶಾಸನವು ಹುಟ್ಟಿದೆ. ಇದು ಲಕ್ಷ್ಯದಲ್ಲಿಡತಕ್ಕ ಸಂಗತಿಯು.

ಇದೇ ದಾಸಿಮಾರ್ಯರ ಬಗ್ಗೆ ಇನ್ನೊಂದು ಶಿಲಾಶಾಸನದಲ್ಲಿ ಉಲ್ಲೇಖವಿದೆ. ಮೊಗಲಾಯಿ ಇಲಾಖಾ ಚಿಕ್ಕಮುದೆನೂರು ಗೋಪಾಲಸ್ವಾಮಿಯ ಮಧ್ಯರಂಗದ ಮೂರನೇ ಕಂಬದ ಮೇಲೆ ಈ ಶಾಸನವಿತ್ತು ಅದು ಕಳಚುರಿಚಕ್ರವರ್ತಿ ತ್ರಿಭುವನಮಲ್ಲನೆಂದು ಬಿರುದುಳ್ಳ ಬಿಜ್ಜಳನಾಳಿಕೆಯಲ್ಲಿ ಹುಟ್ಟಿದ್ದುದು (೬)ಲಕ್ಷ್ಮಣೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನವು ಹುಟ್ಟಿದ ದಿವಸ. ಶ್ರೀ ಮತುಕಳಚುರಿಯ ಭುಜಬಲಚಕ್ರವರ್ತಿ ತ್ರಿಭುವನಮಲ್ಲ ವರುಷದ ೧೨ನೇ ಸರ್ವಜಿತು ಸಂವತ್ಸರದ ಆಷಾಢ ಬಹುಳ ೭ ಸೋಮವಾರ ಪುಷ್ಯನಕ್ಷತ್ರ ವ್ಯತಿಪಾತ ಅಂದರೆ ಕ್ರಿ. ಶ. ೧೧೬೭ ಜುಲಾಯಿ ೧೨ನೇ ತಾರೀಖು ಸೋಮವಾರ. ಈ ಶಾಸನದಲ್ಲಿ ಮುದೆನೂರನ್ನು ದಕ್ಷಿಣ ವಾರಣಸಿಯೆಂಬುದಾಗಿಯೂ, ದಾಸಿಮಾರ್ಯರನ್ನು ಮುದೆನೂರ ದಾಸಯ್ಯಗಳೆಂದೂ ಕರೆದಿರುವರು. ಶಿಲಾಶಾಸನವು ಅಷ್ಟು ಸ್ಪಷ್ಟವಿಲ್ಲ. ಮುದೆನೂರು ಮಹಾಜನಂಗಳ ವರ್ಣನೆಯಲ್ಲಿ "ಪವಿತ್ರ ಗುಣಾನುರಾಗರಪ್ಪ ಶ್ರೀ ಮತ್ಸರ್ವನಮಸ್ಯದಗ್ರಹಾರಂ ದಕ್ಷಿಣ ವಾರಾಣಸಿ ಮುದೆನೂರ ದಾಸೈಯ್ಯಗಳ... ಪ್ರಮುಖ ಅನೇಕ ಮಹಾಜನಂಗಳು" ಎಂದಿದೆ. ಇದರಲ್ಲಿಯ "ಮುದೆನೂರ ದಾಸೈಯ" ಗಳೆಂಬ ಶಬ್ದಗಳು ನಮ್ಮ ಜೇಡರ ದಾಸಿಮಾರ್ಯರಿಗೆ ಸಂಬಂಧಿಸಿರಬೇಕೆಂದು ನಮ್ಮ ಊಹೆ. ಅದು ನಿಜವಿದ್ದ ಪಕ್ಷದಲ್ಲಿ ದಾಸಿಮಾರ್ಯರು ಬಸವಣ್ಣನಿಗಿಂತ ಮೊದಲಿನವರಾಗಿದ್ದರೂ ಬಸವಣ್ಣನ ಕಾಲದಲ್ಲಿ ಅವರ ಪ್ರತಿಭೆಯು ಉಜ್ವಲವಾಗಿತ್ತೆಂದು ಕಂಡುಬರುವುದು. ಅಂತೇ ಬಸವಣ್ಣನವರ ವಚನಗಳಲ್ಲನೇಕ ಕಡೆಗೆ ದಾಸಯ್ಯಗಳ ಉಲ್ಲೇಖವಿದೆ. (೭)

೨

ಲಿಂಗವಂತರಿಗೆ ಪ್ರಾಣಪ್ರಿಯರಾದ ನಮ್ಮ ಕಲ್ಯಾಣದ ಬಸವಣ್ಣನವರ ಜೀವಿತದ ಅನೇಕಾಂಶಗಳ ಬಗ್ಗೆ ಸಂಶಯಗಳನ್ನು ಕನ್ನಡ ಇತಿ

---

೬. ಸರ್ ಇಲಿಯಟ್ಟರ ಸಂಗ್ರಹ ಪಾನ ೩೪ (ಭಾಗ ೨) ತ್ರಿಭುವನ ಮಲ್ಲ ಬಿಜ್ಜಣನಂ ೧೬

೭. ಬಸವೇಶ್ವರ ವಚನ ೨ನೇ ಆವೃತ್ತಿ ವಿಜಾಪೂರ ೧೯೩೦ ಪಾನ ೨೨ ವಚನ, ೩೩ ೩೪, ೩೫, ಪಾನ ೪೮ ವಚನ ೭೦, ೭೧, ಪಾನ ೫೨ ವಚನ ೯೯ ಪಾನ ೭೦ ವಚನ ೧ ಪಾನ ೯೧ ವಚನ ೭೮ ಇತ್ಯಾದಿ

ಹಾಸ ಸಂಶೋಧಕರಾದ ಪಂಡಿತರು ಎತ್ತಹತ್ತಿರುವರು. ನಮ್ಮ ಬಸವ ಣ್ಣನವರ ಜೀವಿತದ ಬಗ್ಗೆ ನಿಜವಾದ ಅಂಶಗಳನ್ನು ಕಂಡುಹಿಡಿಯು ವದೂ ಕಂಡುಬಂದ ಕೆಲವು ವಿಷಯಗಳನ್ನು ಕಲ್ಮಷರಹಿತ ಮನದಿಂದ ಚರ್ಚಿಸುವದೂ ಅತ್ಯಗತ್ಯ. ಡಾ. ವೆಂಕಟಸುಬ್ಬಯ್ಯನವರು ತಮ್ಮ "ಕೆಲವು ಕನ್ನಡ ಕವಿಗಳ ಜೀವನ ಕಾಲ" ವೆಂಬ ಪ್ರಬುದ್ಧ ಕರ್ಣಾಟಕ ದಲ್ಲಿ ಪ್ರಸಿದ್ಧಿಸಿದ ಲೇಖದಲ್ಲಿ ನಮ್ಮ ಬಸವಣ್ಣನವರ ಮತ್ತು ಹರಿಹರ ಮೊದಲಾದ ವೀರಶೈವರ ಬಗ್ಗೆ ಕೆಲವು ಮಾತುಗಳನ್ನು ಬರೆದಿರುವರು. ಮೈಸೂರ ಮಹಾರಾಜರವರ ಕಾಲೇಜದ ಕನ್ನಡದ ಪ್ರೊಫೆಸರರಾದ ಮ. ಟಿ. ಎಸ್. ವೆಂಕಣ್ಣಯ್ಯನವರು "ಹರಿಹರಕವಿಯು ಬಸವರಾಜ ದೇವ ರರಗಳೆ" ಯೆಂಬ ಪುಸ್ತಕವನ್ನು ಪ್ರಸಿದ್ಧಿಸಿ ಬಸವಣ್ಣನವರ ಚರಿತ್ರೆಯ ಗೊತ್ತಿಲ್ಲದ ಕೆಲವಂಶಗಳನ್ನು ತೋರಿಸಿಕೊಟ್ಟಿರುವರು. ನನಗೆ ತೋರಿದ ಇತಿಹಾಸದ ಕೆಲವಂಶಗಳನ್ನು ಪಂಡಿತರ ಮುಂದಿಡಬೇಕೆಂದು ನನ್ನದಾ ದರೂ ಆಸೆ.

ಬಸವರಾಜದೇವರ ರಗಳೆಯಲ್ಲಿ

೧. ಬಸವಣ್ಣನವರ ಸೋದರಮಾವನೂ, ಗಂಗಾಂಬಿಕೆಯ ತಂದೆ ಯೂ ಎಂದು ಪ್ರತೀತಿಯಿರುವ ಬಲದೇವನ ಉಲ್ಲೇಖವಿಲ್ಲ.

೨. ಬಲದೇವನಿಗೆ ಬದಲಾಗಿ ಸಿದ್ಧರಸನು ಬಸವಣ್ಣನವರ ಆಶ್ರ ಯದಾತನಿರುವನು.

೩. ಬಸವಣ್ಣನವರಿಗೆ ಗಂಗಾದೇವಿ ಮಾಯಿದೇವಿಯರೆಂಬ ಇಬ್ಬರು ಹೆಂಡಂದಿರಿದ್ದರು.

೪. ಬಸವಣ್ಣನವರು ಈಗ ಪ್ರತೀತಿಯಿದ್ದಂತೆ ಶಿವನ ವಾಹನ ವಾದ ನಂದಿಯ ಅವತಾರವಲ್ಲ. ಓರ್ವ ಪ್ರಮಥನಾದ ವೃಷಭಮುಖ ನೆಂಬವನ ಅವತಾರ. (೮)

ಇವು ಮುಖ್ಯವಾದ ವಿಷಯಗಳು ಇವುಗಳಲ್ಲೊಂದದನ್ನು ಪರೀ ಕ್ಷಿಸುವಾ. ಮೊದಲು ಬಿಜ್ಜಳನ ಕಾಲದಲ್ಲಿ ಆತನ ಪ್ರಧಾನರಲ್ಲಿ ಬಲ ದೇವನೆಂಬವನಿದ್ದನೋ ಹೇಗಂಬುದನ್ನೂ ಇದ್ದರೆ ಆತನ ಜಾತಿ ಗೋತ್ರ

---

೮ ಹರಿಹರ ಕವಿಯು ಬಸವರಾಜದೇವರ ರಗಳೆ ಸಂಪಾದಕ ಟಿ ಎಸ್ ವೆಂಕಣ್ಣಯ್ಯ. ಎಮ್ ಎ ಮೈಸೂರ ೧೯೩೦ ಪೀಠಿಕೆ ಪಾನು ೧೧.೧೨

೯. ಸರ್ ಇಲಿಯಟ್ಟರ ಸಂಗ್ರಹ ಪಾನ ೨೩೨ [ಭಾಗ ೧] ಚಾಲುಕ್ಯ ವಿಕ್ರಮನಂ ೩೮

ಗಳಾವವು ಆತನು ಬಸವಣ್ಣನವರ ಮಾವನಾಗಲು ಯೋಗ್ಯನೋ ಹೇಗೆಂಬುದನ್ನು ಮೊದಲು ನೋಡುವಾ.

**ಬಲದೇವಯ್ಯಂಗಳು.**

೧. ಧಾರವಾಡ ಜಿಲ್ಹಾ ಅಣ್ಣಿಗೇರಿ ಮೈಲಾರ ದೇವರ ಗುಡಿಯ ಗೋಡೆಯೊಳಗೆ ಒಂದು ಶಾಸನವಿತ್ತು. ಅದು ತ್ರಿಭುವನ ಮಲ್ಲನೆಂದು ಬಿರುದುಳ್ಳ ಚಾಲುಕ್ಯ ವಿಕ್ರಮನ (ಆರನೇಯ ವಿಕ್ರಮ ಕ್ರಿ. ಶ. ೧೦೭೬ ಮತ್ತು ೧೦೭೬ರಿಂದ ೧೧೨೬ರ ವರೆಗೆ) ಕಾಲದಲ್ಲಿ ಹುಟ್ಟಿದುದು. (೯) ಅದರಲ್ಲಿಯ ಅಂತ್ಯದ ಭಾಗವು ಹೋಗಿದೆ. ಆದುದರಿಂದ ಅದ್ದರ ಉದ್ದೇಶವು ಸ್ಪಷ್ಟವಾಗಿಲ್ಲ. ಆವನಾದರೂ ದೇವರಿಗೆ ದತ್ತಿಯನ್ನು ಬಿಟ್ಟ ಉಲ್ಲೇಖವಿರಬಹುದು. ಅದು ಹುಟ್ಟಿದ ಕಾಲ. ಶ್ರೀಮಚ್ಚಾಳುಕ್ಯ ವಿಕ್ರಮ ವರುಷದ ಇಪ್ಪತ್ತೆರಡನೇಯ ಈಶ್ವರ ಸಂವತ್ಸರದ ಶ್ರಾವಣದ ಪುಣ್ಣಿಮೀ ಆದಿತ್ಯವಾರ ಸಂಕ್ರಮಣ ಸೋಮಗ್ರಹಣ ಅಂದರೆ ಕ್ರಿ. ಶ. ೧೧೯೭ ಜುಲಾಯಿ ೨೬ ತಾರೀಖು ರವಿವಾರ. ದಿವಾನ ಬಹದ್ದೂರ ಎಲ್. ಡಿ. ಸ್ವಾಮಿಕನ್ನುಪಿಳ್ಳೆಯವರು ಈ ದಿವಸ ಸೋಮಗ್ರಹಣವನ್ನುಲ್ಲೇಖಿಸಿಲ್ಲ. ಈ ಶಾಸನದಲ್ಲಿ ಮಂತ್ರಿಯಾದ ಬಲದೇವನ ವರ್ಣನೆಯಿದೆ. ಆತನ ವಂಶ ಪುಲಿಕೇಸಿ ರಾಜನಿಂದ ಮನ್ನಣೆಯನ್ನು ಹೊಂದಿದ ಚಮೂನಾಥಾಗ್ರಗಣ್ಯನಾದ ಆತ್ರೇಯ ಗೋತ್ರದ ಓಚಿರಾಜ. ಆತನ ಮಗ ನಯವಿನಯಶಾಲಿ ಸತ್ಯಾಶ್ರಯ ದೇವನ ದಂಡನಾಯಕ ಬಂಕ. ಆತನ ಮಗ ಅಮಳ ಗುಣಮಣಿ ಸೂತ್ರನಾದ ಬಲದೇವಯ್ಯ. ಆತನ ವರ್ಣನೆ

"ನೆಲನರಿಯದೆ ಪಡೆದ ಧನಮಂ।
ನೆಲದೊಳ್ಪೀಳ್ಗೊಡದೆ ತಾನೆ ಪೂಣ್ದೆತ್ತಿಂದಂ॥
ನಿಲಲೀಯದೆ ನೆರೆ ಕಳೆದಂ।
ಪಲಬರ ಬಡತನದ ಪಂಬಲಂಬಲದೇವಾ॥
ಮುಂಬಳಿಕಲೆನಲ್ದೆಂದಪು
ದಂ ಬಡೆದು ಪರೋಪಕಾರಮಂ ಮಾಡುವೆವಾ॥
ವೆಂಬ ನೆಗಳ್ತೆಯ ಪುರುಷರ।
ಬೆಂಬಳಿಯಂ ಬಿಡದೆ ಬೆಂಬಲಂ ಬಲದೇವ॥

---

೯ ಸರ್ ಇಲಿಯಟ್ಟರ ಸಂಗ್ರಹ ಪಾನ ೨೩೨ (ಭಾಗ ೧) ಚಾಲುಕ್ಯ ವಿಕ್ರಮ ನಂ ೩೮.

ಯೋಧುರಿಯುರುಮಂ ಸೋಲಿಸ ।
ಲಾದ ಬೆಡಂಗಿ ಜಯೆತಿಳ್ದಿದಂ ಬುಧಜನರಾ ॥
ಗೋದಯು ಕಾರಣಿಯಾದ ಕ ।
ಳಾದೇವಿಯು ಕುರುಳ ಬೇಂಬಲಂ ಬಲದೇವಾ ॥
ಮನುಮತವೆ ಮತಂ ಮಾರ್ತಾಂ ।
ಡನಡೆಯಂ ನೆಗಳ್ದ ಬಂಕರಾಜನೆ ಜನಕಂ ॥
ವಿನಯನಿಧಿ ಭೋಗಣಬ್ಬೆಯು ।
ಜನನಿಯೆನಲು ಧನ್ಯನೆನಿಸಿದಂ ಬಲದೇವ ॥ (೧೦)

ಸ್ವಸ್ತಿ ಸಮಸ್ತ ರಾಜ್ಯಚರನಿರೂಪಿತ ಮಹಾಮಾತ್ಯಪದವಿ ವಿರಾಜಮಾನ ಮಾನೋನ್ನತ ಪ್ರಭು ಮಂತ್ರ್ಯೋತ್ಸಾಹ ಶಕ್ತಿತ್ರಯ ಸಂಪನ್ನ। ವಿಪ್ರಪ್ರಸನ್ನ। ಮಾರ್ತಂಡದೇವಪಾದಪಂಕಜ ಶಿಳೀಮುಖ। ಮಂತ್ರಿಚತುರ್ಮುಖ। ವಾಜಿವಂಶ ಚೂಡಾಮಣಿ। ಬಂಧುಜನಚಿಂತಾಮಣಿ। ಆತ್ರೇಯಗೋತ್ರ ಪವಿತ್ರ ಸೂನೃತಸುಧಾಸುವರ್ಣಪಾತ್ರನಪ್ಪ ಶ್ರೀ ರಾಜ್ಯಾಧ್ಯಕ್ಷಂ ಬಲದೇವಯ್ಯನಾಯಕರ"

೨. ಕ್ರಿ. ಶ. ೧೦೮೦ ರಲ್ಲಿ ಹುಟ್ಟಿದ ಷಿಕಾರಿಪುರ ಶಾಸನ ೨೬೭ ರಲ್ಲಿ ಓರ್ವ ದಂಡನಾಯಕ ಬಲದೇವನ ಉಲ್ಲೇಖವಿದೆ. ಈತನ ಬಗ್ಗೆ ಇರುವ

ಒಡಹುಟ್ಟಿದುದು ಕರಮಾ ।
ಪ್ಪೊಡವಳೆದುದು ಜೈನಧರ್ಮವೊಡನಾಡಿದುದೊ ।
ಳ್ನುಡಿನೆ ಸಲೆಪೊಕ್ಕವುಂತೇ ।
ನೆಡೆಯೊಳ್ ಕಲ್ತನೆ ಗುಣಂಗಳಂ ಬಲದೇವಂ ॥ (೧೧)

ಈ ಪದ್ಯದಿಂದ ಈತನು ಜೈನಮತಾವಲಂಬಿಯಿರಬೇಕೆಂದು ಅನಿಸುವುದು.

೩. ಮೊಗಲಾಯಿ ಇಲಾಖಾ ಕುಕ್ಕನೂರ ಮಲ್ಲಿಕಾರ್ಜುನನ ಗುಡಿ

---

೧೦ ಮೇಲಿನ ಪದ್ಯಗಳಲ್ಲಿ ಭಾಷೆಯ ಮತ್ತು ಮಾತ್ರೆಗಳ ದೋಷಗಳಿವೆ. ಕೆಲವು ಕಡೆ ಅರ್ಥವೂ ಸ್ಪಷ್ಟವಿಲ್ಲ ಇವುಗಳನ್ನೂ ಈ ಲೇಖದಲ್ಲಿಯ ಇತರ ಪದ್ಯಗಳನ್ನೂ ಬಹುತರ ನಾನು ಬರಕೊಂಡು ಬಂದಂತೆಯೇ ಮುದ್ರಿಸಲಾಗಿದೆ

೧೧ ಶಾಸನ ಪದ್ಯ ಮಂಜರಿ ಬೆಂಗಳೂರ ೧೯೨೩ ಪಾನ ೨೫ ಪದ್ಯ ೧೩೩

ಯಲ್ಲಿ ಒಂದು ಶಿಲಾಶಾಸನವಿತ್ತು. ಅದು ಕಲಚುರಿ ವಂಶದ ಬಿಜ್ಜಳ (ಸು ಕ್ರಿ. ಶ. ೧೧೪೫ ಮತ್ತು ೧೧೫೬ರಿಂದ೧೧೬೭ರ ವರೆಗೆ) ಮಹಾರಾಯನು ರಾಜ್ಯವಾಳುತ್ತಿರುವಾಗ ಹುಟ್ಟಿದುದು.(೧೨) ಬಿಜ್ಜಳನ ಪ್ರಧಾನರು ಹಂಪೆಯ ವಿರೂಪಾಕ್ಷ ದೇವರ ಸಮಕ್ಷದಲ್ಲಿ ಮಹಾದಾನಂಗಳಂ ಮಾಡಿ ಶ್ರೀ ಸ್ವಯಂಭು ಪ್ರಸನ್ನ ಮಲ್ಲಿಕಾರ್ಜುನ ದೇವರಿಗೆ ದತ್ತಿಯನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನ ಹುಟ್ಟಿದ ದಿವಸ ಶಕನೃಪಕಾಲಾಕ್ರಾಂತ ಸಂವತ್ಸರ ಶತಂಗಳು ೧೦೮೫ನೇಯ ಸುಭಾನು ಸಂವತ್ಸರದ ಪುಷ್ಯದ ಪುಂಣಿಮೆ ಬೃಹವಾರದ ಸೋಮಗ್ರಹಣ ಅಂದರೆ ಕ್ರಿ. ಶ. ೧೧೬೩ ಡಿಶಂಬರ ೧೧ನೇ ತಾರೀಖು ಬೃಹಸ್ಪತಿವಾರ ಸೋಮಗ್ರಹಣ. ಬಿಜ್ಜಳನ ಪ್ರಧಾನರ ಹೆಸರುಗಳು ಈ ಶಿಲಾಶಾಸನದಲ್ಲಿ ಅವೆ. ಅವರಾರೆಂದರೆ ೧. ಅಮ್ಮಣದಂಡನಾಯಕ ೨. ಬೊಪ್ಪಣ ದಂಡನಾಯಕ ೩. ಸಾಯಣ ನಾಯಕಳ ಬಿಟ್ಟಿವೆಯ್ಯ ೫. ಬೀವಣ್ಣೆಯ್ಯ ೬. ಬಲದೇವಯ್ಯ. ಈ ಬಲದೇವಯ್ಯನ ಬಗ್ಗೆ ವರ್ಣನೆಯು ಹೀಗಿದೆ.

''ತನ್ಮಹಾತ್ಮನಾಸುಹೃನ್ಮಸ್ತಕನ್ಯಸ್ತಾಂಘ್ರಿಸನ್ಮತಿವಾಚಸ್ಪತಿ
ಕಾಮಿನೀ ಜನ ಮನ್ಮಥನು ಮಹಾಬಲ ಪರಾಕ್ರಮಾ॥
ಸಕಳ ಕವೀಂದ್ರ ವಂದ್ಯ ವಿಬುಧೇಷ್ಟ ವಿಶಿಷ್ಟ ಜನೇಷ್ಟತುಷ್ಟಿದಾ।
ಯಕನನ ಖರ್ವಗರ್ವ ಮದಿರೋನ್ಮದ ಮತ್ತವಿರೋಧಿ ಭೀತಿದಾ !
ಯಕನನುಪಮ ಶೀಲಮಣಿನಾಯಕನಂ ಬಲದೇವ ದಂಡನಾ ।
ಯಕನನು ಪಾ ಚಿ. ಬ್ರವರದಾಯಕನಂ ಪೊಗುಳ್ಗಂ ॥

[ಚಂಪಕಮಾಲೆ]

ಈ ಬಲದೇವಯ್ಯನು ಕುಕ್ಕನೂರ ಮೂವತ್ತರ ಪಲವು ಬಾಡಂಗಳಧಿಕಾರಿ. ಮಹಾಪ್ರಚಂಡ ದಂಡನಾಯಕ ಅಮ್ಮಣ್ಣಯ್ಯಂಗಳ ಪರಮಮಿತ್ರ. ಅಮ್ಮಣಯ್ಯಂಗಳ ಬಗ್ಗೆ ಇದೇ ಶಾಸನದಲ್ಲಿ ಹೀಗಿದೆ.

''ತತ್ಸ್ರುಬಲ ಪ್ರಧಾನನಧಿಕೋನ್ನತ ದಾನನನೂನದಾನನು ।
ದ್ಯತ್ಪ್ರಮದಾನ್ವಿತಂ ಪ್ರವರಶಕ್ತಿ ಸಮನ್ವಿತ ನಾತ್ಮಧಾರಿಣೀ ।

೧೨ ಸರ್ ಇಲಿಯಟ್ಟರ ಸಂಗ್ರಹ ಪಾನ ೧೩--೧೫ [ಭಾಗ ೨] ತ್ರಿಭುವನ ಮಲ್ಲ ಬಿಜ್ಜಣ ಶಂ ೪

ಭ್ರ........ನನುವಾರ್ಯ ಜನಾರ್ದನನತ್ಯದಗ್ರಶುಂ ।
ಭತ್ರುವಿರಾಜ ಕೀರ್ತಿ ವಸುಧಾಗ್ರದೊಳಂಮಣದಂಡನಾಯಕ ।
(ಉತ್ಪಲಮಾಲೆ)

ವಿಜಯಶ್ರೀಗೆ ಪೊಗಳ್ದ ದರ್ಪದರವಂ ವಾಕ್ ಶ್ರೀಗೆ ವಾ ।
ದ್ವಿಜಯ ಬ್ರಾಜಿಯನಾತ್ಮವಿಶ್ರುತ ಕಳಾ ಸಂಪತ್ತಿ ಲಕ್ಷ್ಮೀವರಾಂ
ಗಿ ಜನಾನಂದ ಸರೋಜಗಾತ್ಮವಿಭವಂ ನೇಪದ್ಯವಾ...ಬುಧೌ ।
ವ್ರಜಮೆಲ್ಲಮ್ಮಣ ದಂಡನಾಥನನಿಳಾ ವಿಖ್ಯಾತನುಂ ಬಂಣಿಕುಂ ।
(ಮತ್ತೇಭವಿಕ್ರೀಡಿತ)

ಕ್ಷಿತಿಪತಿ ಕುಡೆ ತಾಳ್ದಿದ ನುಂ ।
ನತಿಯುಂ ಶ್ರೀಮನ್ಮಹಾಪ್ರಧಾನಂ ಸೇನಾಧಿ ।
ಪತಿ ದಂಡನಾಯಕಂ ಭೂ ।
ನುತನಂ ತಿವರುಂ ಮಹತ್ತರಿಕೆಯುಲಮರಸಾ ॥
ದೇವಾಂಬಿಕ ತನೂಜಂ ।
ದೇವಂ ಸೋಮ ಪ್ರಿಯಾತ್ಮಜಂ ಸೌಮ್ಯನುಮೇ ।
ವೃಷಮಾರ್ಗಂ ।

ಮೇಲಿನ ಮೂವರು ಬಲದೇವಯ್ಯಗಳಲ್ಲಿ, ಆತ್ರೇಯಗೋತ್ರದವನೂ ಚಾಲುಕ್ಯರ ಚಮೂನಾಥಾಗ್ರಗಣ್ಯನೂ ಆದ ಮೊದಲನೆಯ ಬಲದೇವನು ಕ್ರಿ. ಶ. ೧೦೯೭ ರಲ್ಲಿದ್ದುದರಿಂದ ಬಸವಪುರಾಣದಲ್ಲಿ ಹೇಳಿದ ಬಸವಣ್ಣನ ಮಾವನಾದ ಬಲದೇವ ನಾಗಲಾರನು. ಏಕೆಂದರೆ ಬಿಜ್ಜಳನಿಗೂ ಈ ಬಲ ದೇವನಿಗೂ ಎನಿಲ್ಲೆಂದರೂ ಒಂದೆರಡು ತಲೆಗಳು ಅಂತರವಾಗುವದು. ಎರಡನೇಯ ಬಲದೇವನಿಗಾದರೂ ಈ ನಿಯಮವೇ ಹತ್ತುವದು. ಮೇಲಾಗಿ ಆತನು ಒಂದುವೇಳೆ ಜೈನನಿದ್ದರೆ ಬಸವಪುರಾಣದಲ್ಲಿಯ ವಿಪ್ರ ಬಲದೇವದಂಡನಾಯಕನಾಗಲಾರನು. ಮೂರನೆಯ ಬಲದೇವನು ಬಿಜ್ಜಳನ ದಂಡನಾಯಕನೂ, ಮತ್ತೊಬ್ಬ ಪ್ರಬಲ ದಂಡನಾಯಕನಾದ ಅಮ್ಮಣನ ಪರಮಮಿತ್ರನೂ ಕುಕ್ಕನೂರ ಭಾಗದ ಅಧಿಕಾರಿಯೂ ಆಗಿದ್ದನು. ಈ ಶಿಲಾಶಾಸನವು ಕ್ರಿ. ಶ. ೧೧೬೩ ರಲ್ಲಿ ಹುಟ್ಟಿದುದರಿಂದಲೂ, ಈತನು ಈ ಕಾಲದಲ್ಲಿ ಅಭ್ಯುದಯವನ್ನು ಹೊಂದಹತ್ತಿದುದರಿಂದಲೂ, ಈತನೇ ಒಂದು ವೇಳೆ ಬಸವಪುರಾಣದಲ್ಲಿ ನಿರ್ದಿಷ್ಟನಾದ ಗಂಗಾಂಬಿಕೆಯ ತಂದೆಯೂ ಬಸವೇಶ್ವರನ ಸೋದರಮಾವನೂ ಆಗಿರಬಹುದು. ದುರ್ದೈವದಿಂದ ಈತನ ಬಗ್ಗೆ ಸಾಕಷ್ಟು ಸಂಗತಿಗಳು ಈ ಶಿಲಾಶಾಸನದಿಂದ ಗೊತ್ತಾಗುವದಿಲ್ಲ.

ಒಂದು ವೇಳೆ ಮೇಲೆಹೇಳಿದ ಮೊದಲನೆಯ ಮತ್ತು ಮೂರನೇಯ ಬಲ ದೇವರ ಆಪ್ತಸಂಬಂಧವೇನಾದರೂ ಉಂಟೋ ಹೇಗೆಂಬುದು ಶೋಧಿಸ ತಕ್ಕ ವಿಷಯವು.

ಡಾ. ಫ್ಲೀಟರವರು ಬಿಜ್ಜಳನ ದಂಡನಾಯಕರಲ್ಲಿ ಅಮ್ಮಣನ ಹೆಸ ರನ್ನು ಹೇಳಿರುವರು. (೧೩) ಆದರೆ ಬಲದೇವನ ಉಲ್ಲೇಖವಿಲ್ಲ. ಈ ಶಿಲಾ ಶಾಸನದ ಮೇಲಿಂದ ಬಲದೇವನು ಇನ್ನೂ ಅಷ್ಟು ಪ್ರಬಲನಾಗಿದ್ದಿಲ್ಲ ವೆಂಬಂತೆ ತೋರುವದು. ಅಮ್ಮಣ ದಂಡನಾಯಕನು ಮಹಾಪ್ರಧಾನ ಸೇನಾಧಿಪತಿ ಮತ್ತು ಬೆಳವಲಧಿಕಾರಿ. ಬಲದೇವನು ಆತನ ಮಿತ್ರ ನಾಗಿ ಆತನ ಕೈಕೆಳಗಿನ ಅಧಿಕಾರಿಯಾಗಿರಬೇಕೆಂದು ಅನ್ನಿಸುವದು. ಮೇಲಾಗಿ ಆತನಾಳುವ ಊರುಗಳ ಸಂಖ್ಯೆಯು ಸ್ಪಷ್ಟವಾಗಿಲ್ಲ. "ಇಂತೆ ನಿಸಿದ ಕುಕ್ಕನೂರ ಆ ಮೂವತ್ತರ ಪಲವುಂಬಾಡಂಗಳಧಿಕಾರಿ ಮಹಾ ಪ್ರಧಾನಂ ದಂಡನಾಯಕಂ ಬಲದೇವಯ್ಯನ" ಎಂದಿರುವುದರಿಂದ ಆ ಕಾಲಕ್ಕೆ ಈತನು ಈಗಿನ ದೇಸಾಯಿಗಳಂಥ ಸ್ಥಿತಿಯಲ್ಲಿದ್ದಿರಬಹುದು. ಆ ಕುಕ್ಕನೂರು ಪ್ರಾಂತವು ತದ್ದೇವಾಡಿ ಸಾಸಿರದಲೊಂದಾದ ಬಾಗೆ ವಾಡಿಯಿಂದ ವಿಶೇಷ ದೂರವಾಗುವದಿಲ್ಲ. ಬಾಗೇವಾಡಿಯಿಂದ ದಕ್ಷಿ ಣಕ್ಕೆ ಸುಮಾರು ೭೫ ಮೈಲು ಅಂತರದ ಮೇಲಿರುವುದರಿಂದ ದಂಡನಾ ಯಕನ ಬಲದೇವಯ್ಯನ ಮನೆತನಕ್ಕೆ ಬಾಗೆವಾಡಿಯ ಮಾದರಸನ ಸಂಗಡ ಶರೀರ ಸಂಬಂಧವಾಗುವುದು ಅಶಕ್ಯವೆನ್ನಿಸುದಿಲ್ಲ. ಈಗ ಕಂಡು ಬಂದ ಶಿಲಾಶಾಸನಗಳಲ್ಲಿ ಕ್ರಿ. ಶ. ೧೧೬೪ರ ಮೇಲಿನ ಶಾಸನಗಳಲ್ಲಿ ಅಮ್ಮಣ ದಂಡನಾಯಕನ ಹೆಸರು ಕಂಡುಬರುವದಿಲ್ಲ. ಒಂದು ವೇಳೆ ಅಮ್ಮಣನು ಈ ಸುಮಾರಕ್ಕೆ ದಿವಂಗತನಾಗಿದ್ದರೂ ಆಗಿರಬಹುದು. ಆತನ ಸ್ಥಳದಲ್ಲಿ ಕೆಲಕಾಲ ಬಲದೇವನು ಬಂದಿರಲೂಬಹುದು. ಆದರೆ ಇವುಗಳ ಬಗ್ಗೆ ನಿಶ್ಚಿತವಾಗಿ ಆವದೂ ಹೇಳಲುಬರುವದಿಲ್ಲ. ಇಷ್ಟೇ ಕ್ರಿ. ಶ. ೧೧೬೩ರ ಅಂತ್ಯದಲ್ಲಿ ಬಿಜ್ಜಳನ ಅಧಿಕಾರಿಗಳಲ್ಲಿ ಬಲದೇವನೆಂಬ ವನೊಬ್ಬನಿದ್ದನೆಂಬುದು.

## ಸಿದ್ಧರಸರು.

ಇನ್ನು ಹರಿಹರನ ಪ್ರಕಾರ ಸಿದ್ಧರಸನು ಬಸವಣ್ಣನವರಿಗೆ ಬಿಜ್ಜ ಳನಲ್ಲಿ ಉಡಕೊಡಿಸಿ ಜೀವಿತವನಾಗಳೆ ಮಾಡಿ ಒಂದು ವರುಷಕ್ಕೆ

೧೩ *Bombay Gazetteer Vol I Pt. II P. 475.*

ನೂರೊಂದು ಹೊನ್ನಂ ಬೇಡಿ'' (೧೪) ಆಶ್ರಯವನಿತ್ತವನು. ಆತನ ಮರ ಣಾಂತರ ಬಸವಣ್ಣನೇ ಆತನ ಭಾಗ್ಯಕ್ಕೆ ಪಾಲುಗಾರನಾದುದು. ಇದ ರಿಂದ ಬಸವಣ್ಣನವರ ಅಭ್ಯುದಯಕ್ಕೆ ಸಿದ್ಧರಸ ಅಥವಾ ಸಿದ್ಧದಂಡಾ ಧಿಪನೇ ಕಾರಣನೆಂದು ಹರಿಹರನ ಮತ. ಭೀಮ ಕವಿಯು ಬಸವಣ್ಣ ನವರು ಮಂತ್ರಿಪದ ಧರಿಸುವದಕ್ಕೆ ಬಲದೇವನೇ ಕಾರಣನೆಂದು ಹೇಳು ವನು (೧೫). ಹರಿಹರನು ಬಲದೇವನ ಮಾತನ್ನು ಹೇಗೆ ಎತ್ತಿಲ್ಲವೋ ಹಾಗೆ ಭೀಮಕವಿಯಾಗಲೀ ಆತನ ಆಧಾರಕನಾದ ಪಾಲ್ಕುರಿಕೆ ಸೋಮನಾಗಲೀ ಸಿದ್ಧರಸನ ಮಾತನ್ನೆತ್ತಿಲ್ಲ. ಆದರೂ ಬಿಜ್ಜಳನ ಕಾಲದಲ್ಲಿ ಸಿದ್ಧರಸ ನೆಂಬವನು ದಂಡನಾಯಕನಾಗಿದ್ದನೇ ಹೇಗೆಂಬುದನ್ನು ವಿಚಾರಿಸುವಾ. ಶಿಲಾಶಾಸನಗಳಿಂದ ಬಿಜ್ಜಳನ ಅಧಿಕಾರಿಗಳಲ್ಲಿ ಶ್ರೀಧರ, ಸಿದ್ಧರಸ, ಸಿ ದ್ದುಗಿ, ಸಿಂಧುಗಿ, ಸಿದ್ದಪ್ಪಯ್ಯ ಎಂಬ ಹೆಸರಿನ ಇಬ್ಬರು ದಂಡನಾಯ ಕರಿದ್ದಂತೆ ಕಂಡುಬರುವದು.

## ೧. ಶ್ರೀಧರ.

ಧಾರವಾಡ ಜಿಲ್ಹಾ ಅಂಣೀಗೇರಿಯಲ್ಲಿ ಈತನವು ಮೂರು ಶಿಲಾಶಾ ಸನಗಳಿದ್ದವು (೧೬). ಒಂದು ಊರಹೊರಗಿನ ಹನುಮಂತ ದೇವರ ಗುಡಿ ಯಲ್ಲಿಯದು. ಕಾಲ ಶ್ರೀಮತು ತ್ರಿಭುವನಮಲ್ಲ ಬಿಜ್ಜಣದೇವರಸರ ವರು ಷದ ೨ನೇಯ ಈಶ್ವರ ಸಂವತ್ಸರದ ಪುಷ್ಯ ಬಹುಳ ೮ ಬುಧವಾರ ಅಂದರೆ ತಾ. ೨೫ ಡಿಸೆಂಬರ ೧೧೫೭ ಇಸ್ವಿ.

ಎರಡನೇಯದು ಅಮೃತೇಶ್ವರ ಗುಡಿಯಲ್ಲಿಯದು. ಕಾಲ ಶ್ರೀಮತು ನಿಜಭುಜಬಲ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಣದೇವ ವರುಷದ ೨ನೇಯ [ಈಶ್ವರ ?] ಸಂ। ಚೈತ್ರ ಶು। ೧೪ ಸೋಮವಾರ ದಕ್ಷಿಣಾಯನ ಸಂಕ್ರಮಣದಂದು ಅಂದರೆ ತಾ. ೨೫ ಮಾರ್ಚ ೧೧೫೭ ಇಸ್ವಿ. ಮೂರನೇ ಯದು ಬನದಶಂಕರೀ ದೇವಿಯ ಗುಡಿಯ ಬಾಗಿಲ ಮುಂದಿನದು. ಕಾಲ ಶ್ರೀಮತ್ಕಳಚುರಿಯ ಭುಜಬಲ ಚಕ್ರವರ್ತಿ ತ್ರಿಭುವನಮಲ್ಲ ಬಿಜ್ಜಣದೇವ ವರುಷದ ೭ನೇಯ ಚಿತ್ರಭಾನು ಸಂವತ್ಸರ ಪೌಷ್ಯ ಸೋಮವಾರ ಸೂರ್ಯ

೧೪ ಬಸವರಾಜ ದೇವರ ರಗಳೆ ಪಾನ ೧೯ ಸಾಲು ೧೦೩ ೧೦೪

೧೫ ಬಸವ ಪುರಾಣ ಸಂಧಿ ೪ ೫

೧೬ ಸರ್ ಇಲಿಯಟ್ಟರ ಸಂಗ್ರಹ ಪಾನ ೧ ೪ ಭಾಗ 2 ತ್ರಿಭುವನಮಲ್ಲ ಬಿಜ್ಜಳ

ಗ್ರಹಣ ಸಂಕ್ರಮಣದಂದು ಅಂದರೆ ಡಿಸೆಂಬರ ೧೧೬೨ ಇಸ್ವಿ. ದಿ. ಬ. ಸ್ವಾಮಿಕನ್ನು ಪಿಳ್ಳೆಯವರು ಈ ತಿಂಗಳಲ್ಲಿ ಆವ ಸೋಮವಾರದಲ್ಲೂ ಸೂರ್ಯಗ್ರಹಣವನ್ನು ಕಾಣಿಸಿಲ್ಲ. ಇವುಗಳಿಂದ ಈತನ ಬಗ್ಗೆ ಕಂಡು ಬರುವ ಸಂಗತಿಗಳು

ಕಾಶ್ಮೀರದೇಶದಲ್ಲಿ ಪ್ರವರಪುರವೆಂಬ ಪಟ್ಟಣವಿರುವದು. ಅಲ್ಲಿ ಶಾಂಡಿಲ್ಯ ಗೋತ್ರದ ವಿಪ್ರವಂಶವೊಂದುಂಟು. ಆ ವಂಶದಲುದ್ಭವಿಸಿದವನು ಧರ್ಮಭಟ್ಟನೆಂಬವನು. ಆತನ ಮಗನು ಭೈರವಿಭಟ್ಟನು. ಆತನ ಮಗನು ಜಯಭಟ್ಟ. ಈತನು ದಂಡನಾಯಕನೆಂದು ಉಲ್ಲೇಖವಿದೆ. ಈತನ ಹೆಂಡತಿ ಜಾಯಾಂಬಿಕೆ. ಮಕ್ಕಳು ದಂಡನಾಥ ರಾಣುಗಿದೇವ, ಶ್ರೀಧರದಂಡಾಧಿಪ ಅಥವಾ ಸಿದ್ದುಗಿ, ಮತ್ತು ವಿಭು ಲಕ್ಷ್ಮಣದೇವ. ಇವರಿಗೆ ಸಿರಿಯಾದೇವಿಯೆಂಬೋರ್ವ ಭಗಿನಿಯೂ ಇದ್ದಂತೆ ತೋರುವುದು. ಇವರಲ್ಲಿ ಶ್ರೀಧರ ಅಥವಾ ಸಿದ್ದುಗಿ ದಂಡನಾಯಕನು ಅತಿಪ್ರಸಿದ್ಧ. ಆತನಿಗೆ ನಾಗಲದೇವಿ ಮತ್ತು ಮಲ್ಲಣಿಯರೆಂಬೀರ್ವರು ಹೆಂಡಂದಿರು. ನಾಗಲದೇವಿಯಲ್ಲಿ ಪದ್ಮನಾಭನೆಂಬ ಮಗನು ಹುಟ್ಟಿದನು. ಬೊಪ್ಪದೇವ, ಭೀಮದೇವ, ನಾರಸಿಂಹ, ಸೋವಣಯ್ಯ, ಲೇಸುಗಿ ಎಂಬೈವರು ಶ್ರೀಧರನ ಕರಣಂಗಳು. ಬೆಳವಲನಾಡಿಗೊಡೆಯ. ಅಣ್ಣೀಗೇರಿ ರಾಜಧಾನಿ (೧೭).

---

೧೭ ಇದೇ ಪುಸ್ತಕ ಪಾನ ೮ ತ್ರಿಭುವನಮಲ್ಲ ಬಿಜ್ಜಣ ನಂ ೬

ವನಧಿ ಬ್ರಾವೇಷ್ಟಿತೋರ್ವೀ ವನಿತೆಗೆ...... ಕಾಶ್ಮೀರದಂತೊಪ್ಪುಗುಂನೆ ।
ಚ್ಚನೆ ತತ್ಕಾಶ್ಮೀರ ದೇಶಂ ಬಹುಜನಪದ ರಾಗಾನ್ವಿತಂ ಭಾರತೀವಂ ।
ಡನ ಗೇಹಂ ಪೂತ ತೀರ್ಥಪ್ರಕರ ಪರಿಗಣಂ ವಿತ್ತವೇದ್ಯತ್ಪುರಪ್ರಾ ।
ಖ್ಯನಿರಾತಂಕ ಪ್ರಸಿದ್ಧ ಪ್ರಬಲ ತರಲವತ್ಪತ್ತನಾನೀಕ ರಮ್ಯಂ ॥

(ಮಹಾಸ್ರಗ್ಧರಾ)

ಅವಿರತ ಪತ್ರಲೋಪವನದಿಂ ಬಹುದೇವಕುಲಂಗಳಿಂ ಸುಧಾ ।
ಧವಳಿತರಮ್ಯಹರ್ಮ್ಯತತಿಯಿಂ ನುತಸಿಂಧುವಿತಸ್ತಮಾಲಿನೀ ।
ನಿವಹನದಿ ಪ್ರಪೂತವಸುಧಾಮರರಿಂ ಧನನಾಥ ವೈಶ್ಯರಿಂ ।
ಪ್ರವರಪುರಂ ವಿರಾಜಿಪುದು ಪಟ್ಟಣಮಾವಿಷಯಾಂತರಾಳದೊಳ್ ॥

(ಚಂಪಕಮಾಲೆ)

ಕಂದ॥ ಅನುಪಮ ತತ್ಪತ್ತನದೊಳು ।
ಧನಿಕಂ ಸಹವಾಸಿ ವಿಪ್ರವಂಶಲಲಾಮಂ ॥
ವಿನಯನಿಧಿ ಧರ್ಮಭಟ್ಟಂ ।
ಜನನುತ ಶಾಂಡಿಲ್ಯಗೋತ್ರ ನೀರಜಮಿತ್ರಂ ॥

## ಬಾಳಂಬೀಡದ ಕಲ್ಮೇಶ್ವರ ಗುಡಿಯೊಳಗಿರುವ ಒಂದು ಶಾಸನವು

---

ತತ್ತನಯಂ ವಿಪ್ರಕುಲೈ।
ಕೋತ್ತಮನನುಪಮ ಗುಣಾನ್ವಿತಂ ವಿಮಳಯಶೋ॥
ವಿತ್ತಂ ಸುಧಾದ್ರಿ ನಿಶ್ಚಲ।
ಚಿತ್ತಂ ಛಂದೋಽಬ್ಜಸಂಭವಂ ಭೈನಿಭಟ್ಟಂ॥
ತದಪತ್ಯಂ ಸಕಳಗುಣಾ।
ಸ್ಪದಸುಪಚಿತಪುಂಣ್ಯನತುಳ ತೇಜೋನಿಲಯಂ॥
ಮೃದು ಹೃದಯಂ ನಿರತಿಶಯಾ।
ಭ್ಯುದಯಂ ಜಯಭಟ್ಟ ದಂಡನಾಯಕನೆಸೆದಾ॥
ಆತನ ಸತಿ ಜಾಯಾಂಬಿಕೆ।
ಭೂತಳದೊಳ್ಕೆಗಳ್ದಳಮಳಪತಿಹಿತದೊಳ್ಕೆ॥
ಖ್ಯಾತಿಯರುಂಧತಿಗಂ ಮಹೀ।
ಜಾತಿಗಮನಸೂಯಗಂ ಮಹೀತಳಮರಿಯಲ್॥
ವಿನುತಗುಣೆಯೆನಿಪ ಜಾಯಾ।
ವನಿತಗಮಾತಿ ಚತುರನೆನಿಪ ಜಯಭಟ್ಟಂಗಂ॥
ಜನಿಯಿಸಿದಮೂರ್ವರ್ಸ।
ಜ್ಜನಮಿತ್ರಪುತ್ರರತುಳ ಚಾರುಚರಿತ್ರರು॥

ವಿನುತಂ ರಾಣುಗಿದೇವನಾತನನುಜಾತಂ ಶ್ರೀಧರಂ ಮತ್ತಮಾ।
ತನತಂಮಂ ವಿಭುಲಕ್ಷ್ಮಣಂ ಗುಣಗುಣಾಳಂಕಾರನಾ ಮೂವರೊ॥
ಳ್ವಿನ ಯಾಂಭೋನಿಧಿ ಸತ್ಯಶೌಚನಿಲಯಂ ಶಿಷ್ಟೇಷ್ಟಕಲ್ಪದ್ರುಮಂ।
ಜನತಾಸಂಸ್ತುತನೊಪ್ಪುವುಧೃತಗುಣಂ ದಂಡಾಧಿಪಂ ಶ್ರೀಧರಂ॥

(ಮತ್ತೇಭವಿಕ್ರೀಡಿತ)

ಸುರರಾಜದ್ವಿಪದಂತದಂಡಧವಳೋದ್ಯತ್ಕೀರ್ತಿಲಕ್ಷ್ಮೀಸ್ವಯಂ।
ವರನಾಗಿರ್ದಡೆವೇಸು ಮೌಲ್ಯನಸತೀಸಂಸರ್ಗದೊಳ್ತಂನತೋ।
ಳ್ವರಗಿಂದೀಳ್ಕುಳಿಗೊಳ್ವನಪ್ರತಿಮಶೌರ್ಯಂ ಶತ್ರುಭೂಪಾಲಕೋ।
ದ್ಧುರದಂಡೇಶರ ತೋಳೊಳಿರ್ಪ ಜಯಲಕ್ಷ್ಮೀಕಾಂತೆಯಂ ಶ್ರೀಧರಂ॥

(ಮತ್ತೇಭವಿಕ್ರೀಡಿತ)

ಪರಭೂಪಾಲಾಗ್ರದಂಡಾಧಿಪಮದಶಿಖಿಯಂ ನಂದಿಸುತ್ತಂ ನಿಜಾ।
ಧೀಶ್ವರ ರಾಜ್ಯಶ್ರೀಲತಾ ಕಂದಮನೊಡವಿಸುತಂ ಸತ್ಪ್ರಜಾಸಸ್ಯಮಾಟಿ।
ತ್ತರದಿಂ ವರ್ಧಿಸುತ್ತಂ ಪರಿವುದಿಳೆಯೊಳೆತ್ತೆತ್ತಲುಂ ಸಂತತಂ ಶ್ರೀ।
ಧರದಂಡಾಧೀಶನ ದೋರ್ಮಂಡಲಕಲಿತಕರಾಳಾಸಿ ಧಾರಾಜಲೌಘಂ॥

ಜನನುತಮಪ್ಪುದಾರಗುಣದಿಂ ಪರಿಭಾವಿಸೆ ಭೂತಳಾಗ್ರದೊ।
ಳ್ಮನುಜಸುರದ್ರು(ಮ) ಮತ್ತಿನಳಿವಾನಸರೆಂನನೆ ದಾನಭದ್ರನೆಂ।

ಸಿದ್ದಿಗಿ ದಂಡನಾಥನನ್ನು ಬಣ್ಣಿಸುವುದು (೧೮). ಇವರ ಉದ್ದೇಶ ಸುಂಕದ ಕೇಶವದಂಡನಾಯಕರು ಸಿದ್ದಿಗಿ ದಂಡನಾಯಕ ಪ್ರಮುಖ ಕರಣಂಗಳ ಸನ್ನಿಧಾನದಲು ವಿಮಲಶಕ್ತಿ ದೇವರಿಗೆ ಧರ್ಮಬಿಟ್ಟುದು. ಕಾಲ ಬಿಜ್ಜಳನ ವರ್ಷ

---

[೧೭ ನೇ ಟಿಪ್ಪಣಿ.]

ನನೆ ಶಿಖಿರಾಜನೆಂನನೆ ವಿಯಚ್ಚರನೆಂನನೆ ಭಾನುಪುತ್ರನೆಂ।
ನನೆ ಪರಿಹಾಸ ನಿರ್ಮಳಯಶಂ ವಿಭು ಶಿದ್ದಿಗಿದಂಡನಾಯಕಂ॥
(ಚಂಪಕಮಾಲೆ)

॥ವಚನ॥ ಅನ್ತು ಮತ್ತಾ॥

॥ಕಂದ॥ ಭಾವಕಿಯೆನಿಪ್ಪ ನಾಗಲ।
ದೇವಿಯ್ಯುಮನವದ್ಯ ಮಲ್ಲಣಿದೇವಿಯ್ಯು।
ಮುರ್ವೀನುತನೆನಿಪ ಶಿದ್ದಿಗಿ।
ದೇವರಿಗೆ ವಿಲಾಸವತಿಯರುದ್ಯತ್ಸತಿಯರು॥

॥ವೃ॥ ಶ್ರೀವಧುವೆಂತು ವಿಷ್ಣುನಿಗಗಜಾವಧುವೆಂತು ಮಹೇಶ್ವರಂಗೆ ವಾ।
ಣೀವಧುವೆಂತು ನೀರಜಭವಂಗೆ ಮನಃಪ್ರಿಯೆಯರ್ನಿರಂತರಂ।
ಭಾವಿಪೊಡಂತೆ ಶಿದ್ದಿಗಿ ಚಮೂಪತಿಗುದ್ಧ ಮಹತ್ವೆಮಲ್ಲಣಿ।
ದೇವಿ ಮನಃಪ್ರಿಯೆ ಪ್ರಮದೆ ತಾನೆನೆ ಕಣ್ಗೆಸೆದಳ್ಧರಿತ್ರಿಯೊಳು॥

॥ಮತ್ತಂ॥
ಅಗರಾಜಪಿ ಯಪುತ್ರಿಗಂ ಸಕಳಲೋಕಾರಾಧ್ಯನಿಜೆಂದುವೌ।
ಳಿಗವೊಪ್ಪಂಬಡೆ ಕಾರ್ತಿಕೇಯನನವದ್ಯಂಪುಟ್ಟುವಂತೀಜಗಂ।
ಪೊಗಳಲ್ಕಾಗಲದೇವಿಗಂ ವಿಮಳಕೀರ್ತಿಶ್ರೀವಧೂಕಾಂತಸಿ।
ದ್ದಿಗಿಗಂ ಸದ್ಗುಣಿ ಪದ್ಮನಾಭನನವದ್ಯಂನಂದನಂ ಪುಟ್ಟಿದಂ॥
(ಮತ್ತೇಭವಿಕ್ರೀಡಿತ)

॥ವಚನ॥ ಆ ಕುಮಾರಂ ನಿರಂತರಾಭ್ಯುದಯಮುಂತಾಳ್ದಿ
ಬೆಳೆಯೆತದೀಯ ಜನಕನಧಿಕಾರ ಶ್ರೀನಿವಾಸಕ್ಕೆ ವಜ್ರ
ಪ್ರಾಕಾರಮೆನಿಸಿ

॥ವೃ॥ ನಿರವದ್ಯಂ ಬೊಪ್ಪದೇವಂ ಪರಹಿತನಿರತಂ ಭೀಮದೇವಂ ಧರಿತ್ರೀ।
ಧರಧೌರೇಯಪ್ರಸಿದ್ಧಂ ಸಕಳಗುಣಗಣಾಳಂಕೃತಂ ನಾರಸಿಂಹಂ॥
ಗಿರಿಜೇಶಾಂಘ್ರಿದ್ವಯಾಂಭೋರುಹ ಮಧು ಮಧುರಾಸಿಂಹ ನಿಂತೈವರುಪ
ತ್ಕರಣಂಗಳ್ಪೆಳ್ವಲ ಶ್ರೀವನಿತೆಗೆ ತೊಡವಿಪ್ಪಂತೆ ಚಲ್ವಿಂದಮಿರ್ಪರ್॥
(ಮಹಾಸ್ರಗ್ಧರಾ)

೧೮ ಸರ್ ಇಲಿಯಟ್ಟರ ಸಂಗ್ರಹ ಪಾನ ೨೪ ೨೬ [ಭಾಗ 2] ತ್ರಿಭುವನಮಲ್ಲ ಬಿಜ್ಜಣ ಸಂ

೧೦ ಕಾರ್ತಿಕ ಶುದ್ಧ ೪ ಅಥವಾ ೧೨ ಸೋಮವಾರ ಸಂಕ್ರಮಣ ವ್ಯತಿಪಾತದಂದು ಅಂದರೆ ತಾ ೧೧ ಅಥವಾ ೧೮ ಅಕ್ಟೋಬರ ೧೧೬೫ ಇಸ್ವಿ.

ಮೇಲಿನ ಈ ಎಲ್ಲ ವಿಷಯಗಳಿಂದ ಈ ಸಿದ್ದುಗಿಯು ಹರಿಹರನ ಸಿದ್ಧರಸ ಅಥವಾ ಸಿದ್ಧದಂಡೇಶನಾಗಿರಬಹುದೇ ಹೇಗೆಂಬ ಬಗ್ಗೆ ಸಂಶಯು ಬರುವುದು. ಹರಿಹರನು "ಸಿದ್ಧದಂಡಾಧಿಪಂ ಹೊಂದಿದನಪುತ್ರಕಂ" ಎಂದು ಅಂದಿರುವದರಿಂದ ಆತನ ಸಿದ್ಧದಂಡಾಧಿಪನು ನಮ್ಮ ಶ್ರೀ ಧರ ದಂಡನಾಯಕನಾಗಲಾರನು. ಏಕೆಂದರೆ ಮೇಲಿನ ಶಾಸನಗಳಿಂದ ಶ್ರೀಧರನಿಗೆ ಪದ್ಮನಾಭನೆಂಬ ಮಗನಿದ್ದಂತೆಯೂ ದಂಡನಾಥ ರಾಣಿಗಿ ಮತ್ತು ವಿಭುಲಕ್ಕಣದೇವರೆಂಬ ಅಣ್ಣತಮ್ಮಂದಿರಿದ್ದಂತೆಯೂ ಕಂಡುಬರುವುದು ಆದುದರಿಂದ ಸಿದ್ಧರಸನು ಸುಖಿಯಾಗಿ ಬೇಗದಿಂ ರಜತಗಿರಿಗೈದಲು ಬಸವಂ ಬಿಜ್ಜಳಾದೇಶದಿಂದೊಯ್ದು ಸಂಸ್ಕರಿಸಲಾರನು. ಮತ್ತು ಬಿಜ್ಜಳನು

"ಸರ್ವ ಭಂಡಾರವೆಲ್ಲಂ ನಿನಗೆ ಬಸವಣ್ಣ
ಉರ್ವರೆಯ ಧನವೆಲ್ಲಂ ನಿನಗೆ ಬಸವಣ್ಣ
. .
ಆತನಾಳ್ ಕುದುರೆ ಸಂವರಣೆ ನಿನ್ನದು ಬಸವ
ಆತನ ಸಮಸ್ತವಿತ್ತಂ ನಿನ್ನದೆಲೆ ಬಸವ" (೧೯)

ಎಂದು ಅನ್ನಲಾರನು ಏಕೆಂದರೆ ಸಿದ್ದುಗಿಗೆ ಅಣ್ಣತಮ್ಮಂದಿರೂ ಹೆಂಡಿರುಮಕ್ಕಳೂ ಇದ್ದರು. ಮೇಲಾಗಿ ಹಾನಗಲ್ಲ ಶಾಸನದಿಂದ ಕ್ರಿ. ಶ. ೧೧೬೫ ಅಕ್ಟೋಬರದ ವರೆಗೆ ಸಿದ್ದುಗಿಯು ಜೀವಿಸಿದ್ದನೆಂದಂತಾಯಿತು.. ನಮಗೆ ದೊರಿತ ಬಿಜ್ಜಳನ ಮಗನಾದ ರಾಯಮುರಾರಿ ಸೋಯಿದೇವನ ೨ನೇಯ ವರ್ಷದಲ್ಲಿ ಹುಟ್ಟಿದಶಾಸನವು(೨೦) ಕ್ರಿ. ಶ. ೧೧೬೯ ಅಕ್ಟೋಬರ ತಿಂಗಳ ೨೧ ನೇಯ ತಾರೀಖಿನದಿರುವುದರಿಂದ ಸುಮಾರು ೧೧೬೭ ರಲ್ಲಿ ಬಿಜ್ಜಳನಿಗೆ ಅರಸೊತ್ತಿಗೆಯಿದ್ದಿಲ್ಲವೆಂದ ಹಾಗಾಯಿತು. ಆತನು ಬಹುತರ ದಿವಂಗತನಾಗಿರಬಹುದು. ಆದುದರಿಂದ ಕ್ರಿ. ಶ. ೧೧೬೫ ಕ್ಕೂ ಬಿಜ್ಜಳನ ಅಂತ್ಯಕಾಲಕ್ಕೂ ಸುಮಾರು ಎರಡೇ ವರ್ಷ ಉಳಿಯುವದರಿಂದ ಬಸವಣ್ಣನವರ ಪ್ರಬಲ

೧೯ ಬಸವರಾಜದೇವರ ರಗಳೆ ಪಾನ ೩೧ ೩೨
ಸಾಲುಗಳು ೧೫೯, ೧೬೦, ೧೬೯, ೧೭೦.

೨೦ ಮೊಗಲಾಯಿ ಇಲಾಖಾ ಚಿಕ್ಕ ಮುದೆನೂರ ಗೋಪಾಲ ಸ್ವಾಮಿಯ ಗುಡಿಯ ಕಂಬದ ಮೇಲಿನದು
ಸರ್ ಇಲಿಯಟ್ಟರ ಸಂಗ್ರಹ ಪಾನ ೪೦ ೪೨ (ಭಾಗ ೨) ರಾಯ ಮುರಾರಿ ಸೋಯಿದೇವ ನಂ 2

ತೆಗೆ ಇದು ಸಾಕಷ್ಟಿಲ್ಲವೆಂಬುದು ಸಹಜ. ಆದುದರಿಂದ ಶಿಲಾಶಾಸನಗಳಲ್ಲಿ ಉಕ್ತನಾದ ಬಿಜ್ಜಳನ ಈ ಪ್ರಬಲನಾದ ಸಿದ್ದುಗಿ ದಂಡನಾಯಕನ ಅಸ್ತಿಯುಹಕ್ಕುದಾರನು ಹರಿಹರನ ಹೇಳಿಕೆಯುಂತೆ ಬಸವಂಣನಾಗಲಾರನು.

## ೨. ಸಿದ್ಧಪಯ್ಯ.

ಹಾನಗಲ್ಲ ತಾಲೂಕ ಮಂತಗಿವಡ್ಡಿಯೆಂಬಲ್ಲಿ ಒಂದು ಶಾಸನವಿತ್ತು(೨೧). ಇದು ಸ್ವಲ್ಪ ವಿಚಿತ್ರವಾದ ಶಾಸನವು. ಶಾಸನದ ಆರಂಭವು ಜಿನಸ್ತೋತ್ರದಿಂದಾಗುವದು. ಕಲಿದೇವ ಸೆಟ್ಟಿಯೆಂಬವನು ವಾಸುಪೂಜ್ಯ ಸಿದ್ಧಾಂತಿಶಿಷ್ಯ ನಾಗಚಂದ್ರ ಭಟ್ಟಾರಕರಿಗೆ ಧರ್ಮ ಬಿಟ್ಟು ೨೪ ತೀರ್ಥಂಕರರ ಪ್ರತಿಷ್ಠೆಮಾಡಿ ಚೈತ್ಯಾಲಯವಂ ನಿಲಿಸಿದಂತಿದೆ. ಕಲಿದೇವ ಸೆಟ್ಟಿಯು ಹಿರಿಯರಾದ ಆದಿಸೆಟ್ಟಿ, ಧರ್ಮಸೆಟ್ಟಿ, ನಾಗಿಸೆಟ್ಟಿ, ಬುಚ್ಚಯ ಸೆಟ್ಟಿಯರಲ್ಲಿ ಆದಿಸೆಟ್ಟಿಯು ಪರಮ ಮಾಹೇಶ್ವರನೆಂದೂ ಉಳಿದವರು ಜಿನ ಧರ್ಮಾಯಾಯಿಗಳೆಂದೂ ಹೇಳಿದೆ. ಶಾಸನದ ಕಾಲ. ಬಿಜ್ಜಳನ ೧೦ ನೇಯ ವರ್ಷದ ಪಾರ್ಥಿವ ಸಂವತ್ಸರದ ಪುಷ್ಯ ಶುದ್ಧ ೫ ಬೃಹಸ್ಪತಿವಾರ ಉತ್ತರಾಯಣ ಸಂಕ್ರಮಣ ವ್ಯತಿಪಾತದಂದು ಅಂದರೆ ಕ್ರಿ. ಶ. ೧೧೬೫ ಡಿಸೆಂಬರ ತಾರೀಖು ೯. ಆ ಕಾಲದಲ್ಲಿ ಬಿಜ್ಜಳನು ಕಲ್ಯಾಣದ ನೆಲೆವೀಡಿನೊಳು ರಾಜ್ಯಂ ಗೈಯುತಿದ್ದನು. “ಶ್ರೀ ಮನ್ಮಹಾ ಪ್ರಧಾನ ಸೇನಾಧಿಪತಿ ಹಾನುಗಲ್ಲ ನಾಡ ಹೆಗ್ಗಡೆ ಮಹಾ ಪ್ರಚಂಡ ದಂಡನಾಯಕ ಸಕಳೋರ್ವೀವಲಯಕ್ಕೆ ಪುಣ್ಯನಿಧಿಯಪ್ಪ ಬಿಜ್ಜಲ ಕ್ಷೋಣಿ ಪಾಳಕನಾಳ್ವವಂ ತನಗಮಾತ್ಯ ಪದಮಂ ಕೈಕೊಂಡು ದಂಡಾಧಿನಾಯಕ ಚೂಡಾಮಣಿ ಸಿದ್ಧಪಯ್ಯನತುಳಂ ಹಾನುಂಗಲ್ಲಯಿನೂರಮನಾಳ್ದು ಲೋಕರಕ್ಷಿಸುತಿರ್ಪನಾಪ್ರಜೆಗಳಂ ಪೂರ್ವೋಕ್ತಮರ್ಯಾದೆಯಿಂ” ಎಂದಿರುವುದರಿಂದ ಕ್ರಿ. ಶ. ೧೧೬೫ ರ ಅಂತ್ಯದಲ್ಲಿ ಸಿದ್ಧಪಯ್ಯನೆಂಬವನು ಹಾನುಂಗಲ್ಲ ೫೦೦ ರವನ್ನಾಳುತ್ತಿದ್ದಂತಾಯಿತು. ಈತನು ಜೈನನಿದ್ದಿರ ಬಹುದೇ ಹೇಗೆಂಬ ಬಗ್ಗೆ ಸಂಶಯ ಬರುವದು ಮೇಲೆ ಶ್ರೀಧರನ ಬಗ್ಗೆ ಹೇಳಿದ ಕಾರಣಗಳೂ ಇಲ್ಲಿಯೂ ಹತ್ತುವವು. ಒಂದು ವೇಳೆ ಈತನು ಜೈನನಿದ್ದರೆ,

“ಕುಲವೊಂದೆ ಕುಲವಾಗೆ ಗೋತ್ರವಂತನುವಾಗೆ
ನೆಲೆ ವಿಚಾರಿಸೆ ತನ್ನ ಸಂಬಂಧ ವೊಂದಾಗೆ” (೨೨)

---

21 ಸರ್ ಇಲಿಯಟ್ಟರ ಸಂಗ್ರಹ ಪಾನ 22-24 ಭಾಗ 2 ತ್ರಿಭುವನ ಮಲ್ಲ ಬಿಜ್ಜಣ ಸಂ ೧೧

22 ಬಸವರಾಜ ದೇವರ ರಗಳೆ ಪಾನ 2) ಸಾಲು ೧೦೬-೮

ಎಂದು ಹರಿಹರನು ಹೇಳುವಂತೆ ಬಸವಂಣನೂ ಈ ಸಿದ್ಧ ದಂಡಾಧಿಪನೂ ಒಂದೇ ಕುಲದವರಿರುವ ಸಂಭವವಿಲ್ಲ. ಮೇಲಾಗಿ ಹರಿಹರನು "ಕಮ್ಮೆಕುಲಪತಿಯೆನಿಪ ಸಿದ್ಧ ದಂಡಾಧಿಪಂ ಸುಮ್ಮಾನಿ ಶಿವಭಕ್ತನಚಳಿತ ಗುಣಾಧಿಪಂ" (೨೩) ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದುದರಿಂದ ಹರಿಹರನ ಪ್ರಕಾರ ನಮಗೆ ಗೊತ್ತಿದ್ದ ಈ ಇಬ್ಬರು ಸಿದ್ಧರಸರಲ್ಲಿ ಒಬ್ಬರೂ ಬಸವನ ಆಶ್ರಯದಾತರಾಗುವ ಸಂಭವ ತೋರುವದಿಲ್ಲ. ಇವರಿಬ್ಬರಲ್ಲದೆ ಬೇರೆ ಸಿದ್ಧರಸರಾರಾದರೂ ಉಂಟೇ ಹೇಗೆಂಬ ಬಗ್ಗೆ ಇನ್ನೂ ಶೋಧಿಸಲ್ತಕ್ಕದು. ಈಗ ದೊರೆತ ಶಾಸನಗಳಿಂದ ಪ್ರಸಿದ್ಧ ದಂಡನಾಯಕರಾದ ಸಿದ್ದಗಿಗಳು ಇವರಿಬ್ಬರೇ ಎಂದು ಹೇಳಬಹುದು.

ಇನ್ನು ಲಿಂಗವಂತರಲ್ಲಿರತಕ್ಕ ಐತಿಹ್ಯದಿಂದ ಸಿದ್ಧರಸನು ಜೈನನಾಗಿದ್ದನೆಂದೂ ಆತನ ಮಗಳಾದ ನೀಲಲೋಚನೆಯನ್ನು ಬಸವಣ್ಣನು ಲಗ್ನವಾದನೆಂದೂ ಕಂಡುಬರುವದು (೨೪). ನೀಲಮ್ಮನವರ ಸಂಗಡಾದ ಲಗ್ನವು ಬಸವಣ್ಣನು ಅಧಿಕಾರಿಯಾದನಂತರ ಜರುಗಿದುದು. ಒಂದು ವೇಳೆ ಮೇಲೆ ಹೇಳಿದ ಸಿದ್ಧಪಯ್ಯ ದಂಡನಾಯಕನು ಜೈನನಿದ್ದರೆ ನೀಲಮ್ಮನು ಆತನ ಮಗಳಾಗುವ ಸಂಭವವುಂಟೆಂದು ಊಹಿಸಲವಕಾಶವಿದೆ.

ಭೀಮಕವಿಯ ಬಸವಪುರಾಣದಲ್ಲಿ ಸಿದ್ಧರಸನ ಹೆಸರೇ ಇಲ್ಲ. ಬಸವಣ್ಣನವರು ನೀಲಾಂಬೆಯನ್ನು ಮದುವೆಯಾದ ಉಲ್ಲೇಖವೂ ಕೂಡ ಇಲ್ಲ. ಬಸವರಾಜದೇವರ ರಗಳೆಯಲ್ಲಿ ಬಲದೇವನ ಹೆಸರಿಲ್ಲ. ಚನ್ನಬಸವ ನಾಗಲಾಂಬೆಯರ ಮಾತನ್ನೆತ್ತಿಲ್ಲ. ಈ ವ್ಯತ್ಯಾಸಗಳಿಗೆ ಕಾರಣ ವೇನು? ಬಸವಣ್ಣನವರ ಪುರಾಣಗಳನ್ನು ಬರೆದ ಕವಿಗಳು ಬಸವಣ್ಣನವರ ಚರಿತ್ರೆಯ (ಇತಿಹಾಸ) ನ್ನು ಬರೆದಿಲ್ಲೆಂಬುದನ್ನೂ, ಭಕ್ತಿಯಿಂದ ಬಸವಣ್ಣನವರ ಮಹಿಮೆಯನ್ನು ಭಕ್ತರಿಗೆ ತೋರಿಸಿಕೊಡುವುದೇ ಅವರ ಉದ್ದೇಶವಿದ್ದುದರಿಂದ ಬಸವಣ್ಣನವರ ಜೀವನ ಚರಿತ್ರೆಯಲ್ಲಿ ಮಾರ್ಪಾಡುಮಾಡಿಕೊಂಡಿರಬಹುದೆಂಬುದನ್ನೂ ನಾವು ಲಕ್ಷದಲ್ಲಿಡತಕ್ಕದ್ದು. ಅವರು ಬಸವಣ್ಣನವರ ಬಗ್ಗೆ ನಿಜವಾದ ಸಂಗತಿಗಳಾವವೆಂಬುದನ್ನು ಕಂಡು ಹಿಡಿಯುವ ಗೊಡವೆಗೆ ಹೋಗಲಿಲ್ಲ. ತಾವು ಕೇಳಿದ ಸಂಗತಿಗಳೊಳಗೆ

---

23 ಬಸವರಾಜ ದೇವರ ರಗಳೆ ಪಾನ 28 ಸಾಲು ೭೧-೭೨

24 ಸಿಂಗಿರಾಜ ಪುರಾಣ ಮಲಬಸವ ಚರಿತ್ರೆ

ತಮಗೆ ಸರಿದೋರಿದವುಗಳನ್ನು ಆರಿಸಿಕೊಂಡು ಭಕ್ತಿಯಿಂದ ಬಸವಪುರಾಣ ಮಾಲೆಯನ್ನು ರಚಿಸಿರಬಹುದು.

### ಗಂಗಾದೇವಿ ಮಾಯಿದೇವಿಯರು.

ಹರಿಹರನ ಪ್ರಕಾರ ಇವರಿಬ್ಬರು ಬಸವಣ್ಣನವರ ಅರ್ಧಾಂಗಿಯರು. ಸಿದ್ಧದಂಡಾಧಿಪನ ಸರ್ವಭಾಗ್ಯವು ಬಸವಣ್ಣನವರಿಗೆ ಪ್ರಾಪ್ತವಾದನಂತರ ಅವರು ಇವರೀರ್ವರನ್ನು ಲಗ್ನವಾದಂತೆ ಹರಿಹರನು ಹೇಳುವನು. ಇವರು ಆರಮಕ್ಕಳೆಂಬ ಸುದ್ದಿಯನ್ನೂ ಕೂಡ ತೆಗೆದಿಲ್ಲ. ಬಸವಪುರಾಣದ ಪ್ರಕಾರ ಗಂಗಾದೇವಿಯು ಅಥವಾ ಗಂಗಾಂಬಿಕೆಯು ಬಸವಣ್ಣನವರ ಸೋದರ ಮಾವನಾದ ಬಲದೇವನ ಮಗಳು. ಆಕೆಯ ಲಗ್ನವು ಬಸವಣ್ಣನವರು ಕಲ್ಯಾಣಕ್ಕೆ ಬರುವದಕ್ಕೂ ಮೊದಲೇ ಆಗಿತ್ತು. ಆಕೆಯ ಹೊಟ್ಟೆಯಲ್ಲಿ ಒಂದು ಮಗುವು ಹುಟ್ಟಿತ್ತು. ಮಗುವನ್ನು ಹರಿಹರನು ಸಿದ್ಧರಸನೆಂದೂ ಸಿಂಗಿರಾಜನು ಬಾಲಸಂಗಯ್ಯನೆಂದೂ ಕರೆದಿರುವರು. ಗುಬ್ಬಿಯ ಮಲ್ಲಣಾರ್ಯರ ಗಣಭಾಷ್ಯರತ್ನಮಾಲೆಯಲ್ಲಿ ಕೂಡಲಸಂಗಮದೇವ ಎಂಬ ಮುದ್ರಿಕೆಯ ವಚನವುಂಟು. ಅದು ಬಸವಣ್ಣನವರಿಂದಲೇ ರಚಿತವಾಗಿದ್ದರೆ ಬಸವಣ್ಣನವರ ಮಗುವಿಗೆ ಬಾಲಸಂಗಯ್ಯನೆಂಬ ಹೆಸರು ದೃಢವಾಗುವುದು. ಒಂದು ವೇಳೆ ಅದು ಬಸವಣ್ಣನವರು ಪ್ರೀತಿಯಿಂದ ಕರೆಯುವ ಹೆಸರಾಗಿದ್ದರೂ ಇರಬಹುದು. ಆ ವಚನದಲ್ಲಿಯ ಶಬ್ದಗಳು ಹೀಗವೆ.

"ಪ್ರತ್ಯಕ್ಷವಾಗಿ ಸಿರಿಯಾಳಸೆಟ್ಟಿ ಚಂಗಳವ್ವೆಯ ಮನೆಗೆ ಬಂದು ಅವರ ಮಗನ ಬೇಡುವಂತಲ್ಲ. ಸಂಗಮದೇವಾ! ನಿಮ್ಮ ಹೆಸರ ಚಿಕ್ಕ ಸಂಗಯ್ಯನಿದ್ದಾನೆ; ನೀನು ಜಂಗಮರೂಪವಾಗಿಬಂದು ಆತನ ಹಿಡಿದು ಎನ್ನ ಮುಂದೆ ಹೆಡಗುಡಿಯ ಕಟ್ಟಿ ಚಿನಿಖಂಡವಮಾಡಿ ಬಾಣಸವ ಮಾಡುವಾಗ ಎನ್ನ ಉದರದಲ್ಲಿ ಬಂದ ಪುತ್ರನೆಂದು ಮಾಯಕ್ಕೆ ನಾನು ಮರುಗಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ; ಮನದೊಡೆಯ ನೀನೆ ಬಲ್ಲೆ!"(೨೫)

ಹರಿಹರನು ಬಸವಂಣನವರ ದ್ವಿತೀಯ ಪತ್ನಿಯವರು ಮಾಯಿದೇವಿಯರೆಂದು ಹೇಳುವನು. ಲಿಂಗವಂತರಲ್ಲಿ ನೀಲಮ್ಮನವರು ದ್ವಿತೀಯ

---

25 ಗಣಭಾಷ್ಯ ರತ್ನಮಾಲೆ ಬೆಂಗಳೂರ ೧೯೦೯ ಪಾನ 250 ಸದ್ಭಕ್ತಿಸ್ಥೈರ್ಯಸ್ಥಲ ವಚನ ೩

ಪತ್ನಿಯರೆಂದು ಪ್ರತೀತಿಯಿದೆ. ಮಾಯಿದೇವಿಯೆಂಬವರ ಹೆಸರನ್ನು ಕೂಡ ಹೇಳಿಲ್ಲ. ಹರಿಹರನ ಈ ಮಾಯಿದೇವಿಯವರೇ ನೀಲಮ್ಮನವರಾಗಿರಬೇಕೆಂದು ಊಹಿಸಲವಕಾಶವಿದೆ. ವೀರಶೈವಾಮೃತ ಮಹಾಪುರಾಣವಲ್ಲಿ ಮಲ್ಲಣಾರ್ಯನು ಮಾಯೆಯನ್ನು ಜಯಿಸಿದುದರಿಂದ ಮಾಯಾದೇವಿಯೆಂದು ನೀಲಮ್ಮನವರನ್ನು ಸಂಬೋಧಿಸಿರುವನು (೨೬). ಒಂದು ವೇಳೆ ನೀಲಮ್ಮನವರಿಗೆ ಮೊದಲು ಮಾಯಿದೇವಿಯೆಂದೂ ನಂತರ ನೀಲಮ್ಮನೆಂದೂ ಹೆಸರಾಗಿರಬಹುದು. ಹೆಣ್ಣುಮಕ್ಕಳಿಗೆ ಲಗ್ನವಾದನಂತರ ಗಂಡನ ಮನೆಯವರು ತಮಗೆ ಸರಿದೋರಿದ ಮತ್ತೊಂದು ಹೆಸರನ್ನಿಟ್ಟುಕೊಳ್ಳುವ ರೂಢಿಯು ಲಿಂಗವಂತರಲ್ಲಿ ಇನ್ನೂ ಅನೇಕ ಕಡೆಗುಂಟು. ಇನ್ನು ಗಣಭಾಷ್ಯರತ್ನಮಾಲೆಯಲ್ಲಿಯ "ಕೂಡಲಸಂಗಮದೇವಾ" ಎಂಬ ಮುದ್ರಿಕೆಯುಳ್ಳ ಒಂದು ವಚನವಲ್ಲಿ ಬಸವಣ್ಣನವರ ಸತಿ ನೀಲಮ್ಮನೆಂದೇ ಹೇಳಿದೆ. ಅದು ಹೀಗಿದೆ.

"ಕಾಮನೇಮವೆಂಬ ಸಿಂಧು ಬಲ್ಲಾಳನ ವಧುವ, ಸರ್ವಭುವನದೊಡೆಯ ಸಂಗಮದೇವರು ಬೇಡುವಂತಲ್ಲ; ಎನ್ನ ಸತಿ ನೀಲಲೋಚನೆ ಪೃಥ್ವಿಗೆ ಅಗ್ಗಳೆಯ ಚಲುವೆ, ಆಕೆಯನು ಸಂಗಮದೇವಾ! ನೀನು ಜಂಗಮರೂಪಾಗಿ ಬಂದು ಎನ್ನ ಮುಂದೆ ಸಂಗವಮಾಡುತ್ತಿರಲು ಎನ್ನೊಡಸಿರ್ದ ಸತಿಯೆಂದು ಮಾಯಕ್ಕೆ ಮರುಗಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ! ಮನದೊಡೆಯ ನೀನೇ ಬಲ್ಲೆ! (೨೭)

## ಬಸವಣ್ಣನವರು ವೃಷಭಮುಖನೆಂಬ ಪ್ರಮಥನ ಅವತಾರ.

ಬಸವಣ್ಣನವರು ವೃಷಭಮುಖನೆಂಬ ಪ್ರಮಥನ ಅವತಾರವೆಂದು ಹರಿಹರನುಹೇಳುವನು. ಆ ಪ್ರಮಥನು ಭೂಮಿಯಲ್ಲವತರಿಸಲು ಕಾರಣವನ್ನು ಹೀಗೆ ಹೇಳುವನು.

ಶಿವನು ಪಡಗರದಿಂದ ಒಂದುದಿನ ಒಡ್ಡೋಲಗಂಗೊಟ್ಟಿರಲು ಓರ್ವ ಮಾಲೆಗಾರನು ಕಂಪುಳ್ಳ ಸಂಪಗೆಯ ಪೂಗಳನ್ನು ತಿರಿತಂದು ಹೆಂಪಿನಿಂ ಶಶಿಧರನ ಸಿರಿಮುಡಿಗೆ ಬೇಕೆಂದು ಕೊಡಲು, ಶಿವನು ಮುಂದಿರ್ದ ವೃಷಭಮುಖನನ್ನು ಕರೆದು ಈ ಪ್ರಸಾದವನ್ನು ಶರಣ ತತಿಗೆ ಕೊಡೆಂದು

೨೬ ವೀರಶೈವಾಮೃತ ಮಹಾಪುರಾಣ ಕಾಂಡ ೮ ಸಂಧಿ ೨ ಪದ್ಯ ೧೦

೨೭ ಗಣಭಾಷ್ಯ ರತ್ನಮಾಲೆ, ಬೆಂಗಳೂರ ೧೯೦೯ ಪುಟ ೨೫೦ ಸದ್ಭಕ್ತಿನೈಷ್ಠಿಕಾಸ್ಥಲ ವಚನ ೩

ಹೇಳಿದನು. ವೃಷಭಮುಖ ಪ್ರಮಥನು ಹರನ [illegible] ಪರವಶೀಭೂತನಾಗಿ ಸರ್ವರಿಗೂ ಪ್ರಸಾದವನ್ನು ಕೊಡುವಲ್ಲಿ [illegible] ಸ್ಕಂದನನ್ನು ಮರೆತು ಬಿಟ್ಟನು. ಈ ಮರವೆಗಾಗಿ ಭೂಲೋಕದಲ್ಲಿ [illegible] ಜನ್ಮವನ್ನು ತಾಳೆಂದು ಆತನಿಗೆ ಶಿವನು ಆಜ್ಞಾಪಿಸಲು, ಹಾಗೆ [illegible] ಬಾಗೆವಾಡಿಯ ಅಗ್ರೇಶ್ವರನಾದ ಕಮ್ಮೆಕುಲದ ವಿಪ್ರಮಾದಿರಾಜ [illegible] ಸತಿ ಮಾದಾಂಬೆಯರಿಗೆ ಮಗನಾಗಿ ಜನಿಸಿದನು. (೨೮).

ಭೀಮ ಕವಿಯ ಹೇಳಿಕೆಗೂ ಇವಕ್ಕೂ ಬಲು ವ್ಯತ್ಯಾಸವಿದೆ. ಬಸವಪುರಾಣದ ಪ್ರಕಾರ—

ಶಿವನು ಸಡಗರದಿಂದ ಒಡ್ಡೋಲಗಂಗೊಟ್ಟಿರ್ದನು. ಆಗ ನಾರದನು ಆ ಸಭೆಗೆ ಬಂದು ಭೂಲೋಕದಲ್ಲಿ ಶೈವಧರ್ಮವು ಕ್ಷೀಣಗತಿಗೆ ಇಳಿಯುಹತ್ತಿರುವದೆಂದು ತಿಳಿಸಿದನು. ಶಿವನು ಶೈವ ಧರ್ಮೋದ್ಧಾರಕ್ಕಾಗಿ ತನ್ನ ವಾಹನವೂ, ಶಿಲಾದ ಮುನಿಯ ಕುಮಾರನೂ, ಆದ ನಂದೀಶ್ವರನನ್ನು ಭೂಮಿಯಲ್ಲಿ ಅವತರಿಸಿ ಶೈವಧರ್ಮವನ್ನುದ್ಧರಿಸಲಾಜ್ಞಾಪಿಸಿದನು. ನಂದೀಶ್ವರನೇ ಭೂಲೋಕದಲ್ಲಿ ಬಾಗೇವಾಡಿಯ ಮಾದಿರಾಜ ಮಾದಲಾಂಬಿಕೆಯರಿಗೆ ಮಗುವಾಗಿ ಬಸವನೆಂಬಭಿಧಾನವನ್ನು ತಳೆದನು. (೨೯).

ಧಾರವಾಡ ಜಿಲ್ಹಾ ರಾಣಿಬೆನ್ನೂರ ತಾಲೂಕ ಚೌಡದಾಂಪುರದ ಮುಕ್ತೇಶ್ವರನ ಗುಡಿಯೊಳಗಿನ ಒಂದು ಶಿಲಾಶಾಸನದಲ್ಲಿ ಹೀಗಿದೆ.

ಸಾಲುಗಳು ೫ ರಿಂದ ೧೫— ಶ್ರೀಮನ್ಮಹಾದೇವನು ದಿವ್ಯ ಸಿಂಹಾಸನಾರೂಢನಾಗಿ ಪಾರ್ವತೀ ಸಹಿತಮಿರಲಂ ನಂದಿನಾಥ ವೀರಭದ್ರ ಭದ್ರಕಾಳ, ಮಹಾಕಾಳ ಭೃಂಗೇಶ ಪ್ರಮುಖಾಸಂಖ್ಯಾತ ಗಣಂಗಳಿಂ ಸಂಸೇವ್ಯಮಾನನಾಗಿ ಶ್ರೀ ಕಯಿಳಾಸದಲ್ಲಿ ಒಡ್ಡೋಲಗಂ ಗೊಟ್ಟು ಸುಖ ಸಂಕಥಾ ವಿನೋದದಿಂದಿರ್ದ್ದ ಸುಪ್ರಸ್ತಾವ ಸಮಯದೊಳು......... ಎನೆ ನೆಗಳ್ದದ್ರಿಜೆ ಬಿಂನಪಂ ಶಿವಜಗಕ್ಕೇ ಮಾರ್ಗ್ಗಮನ್ತೋರಬೇಳ್ಕಿನಲಾ ಪ್ರಭುನನ್ನಿನಾಥನ ಮೊಗಂ ನೋಡಲ್ಕೆ ಶ್ರೀ ಸಂಗಮೇಶನ ಪುತ್ರಂ ಬಸವಯ್ಯ (೦) ಬಂಕ (ದ?) ನದರಿಂ ಶಿವಮುದ್ದುದೇವಂ ಜನಕ್ಕನಿಮಿತ್ತಂ ಶಿವದೇವನಾಗಿಯು ಗಣ ಶ್ರೀಪಾದ ಮನ್ತೋರುವೇಂ॥

---

೨೮ ಬಸವರಾಜ ದೇವರ ರಗಳೆ ಸ್ಥಲ ೧

೨೯ ಬಸವ ಪುರಾಣ ಸಂಧಿ ೧ ೩

ಈ ಶಾಸನದ ಬಹು ಭಾಗವು ಶಿವಾನುಭವ ಸಂಪುಟ ೪ ಸಂಚಿಕೆ ೪ ರಲ್ಲಿ ಮುದ್ರಿತವಾಗಿದೆ. ಈಗ ಇಲ್ಲಿ ಉಪಯುಕ್ತವಾದ ಭಾಗವನ್ನು ಪುನಃ ತೆಗೆದುಕೊಳ್ಳಲಾಗಿದೆ. ಈ ಶಾಸನದಲ್ಲಿ ಚೌಡದಾಂಪುರದ ಶಿವದೇವನು ಬಸವಣ್ಣನವರ ದ್ವಿತೀಯಾವತಾರನೆಂದು ಗಣಿಸನಾಗಿರುವನು. ಮೇಲಿನ ಶಿವನ ಒಡ್ಡೋಲಗವು ಶಿವದೇವನು ಮರ್ತ್ಯಕ್ಕೆ ಬರುವಾಗ ಕೂಡಿದುದು. ಈ ಒಡ್ಡೋಲಗಕ್ಕೂ ಮತ್ತು ಬಸವಣ್ಣನವರು ಬರುವಾಗ ಕೂಡಿದ ಬಸವಪುರಾಣದ ಒಡ್ಡೋಲಗಕ್ಕೂ ಕೆಲಮಟ್ಟಿಗೆ ಸಾಮ್ಯವಿದೆ. ಸಂಗಮೇಶನ ಪುತ್ರ ಬಸವಯ್ಯನು ಹರಿಹರನ ಹೇಳಿಕೆಯಂತೆ ವೃಷಭಮುಖ ಪ್ರಮಥನಿರದೆ ಸಾಕ್ಷಾತ್ ನಂದಿನಾಥನೇ ಎಂದು ಈ ಶಿಲಾಶಾಸನವು ಹೇಳುವುದು ಶಾಸನ ಹುಟ್ಟಿದ ಕಾಲ ಶ್ರೀ ಮಹದೇವರಾಯರ ವಿಜಯ ರಾಜ್ಯೋದಯದ ಮೂರನೇಯ ದುಂದುಭಿ ಸಂವತ್ಸರದ ವೈಶಾಖ ಶು. ೧೫ ಸೋಮವಾರ ಸೋಮಗ್ರಹಣ. ಅಂದರೆ ಕ್ರಿ. ಶ. ೧೨೬೨ ಮೇ ೫ ನೇ ತಾರಿಖು ದಿ. ಬ. ಸ್ವಾಮಿಕನ್ನು ಪಿಳ್ಳೆಯವರ ಪ್ರಕಾರ ಈ ದಿವಸವು ಸೋಮವಾರವಾಗುವದಿಲ್ಲ ಶ. ಕ್ರವಾರವಾಗುವುದು. ಸೋಮಗ್ರಹಣವನ್ನು ಅವರು ಉಲ್ಲೇಖಿಸಿಲ್ಲ. ಬಸವೇಶ್ವರ ವಚನ ಪಾನ ೧ ವಚನ ೩ ರ ಮೇಲಿಂದ ಬಸವಣ್ಣನವರು ಶಿವನ ವಾಹನವಾದ ವೃಷಭನ ಅವತಾರವೆಂದು ಕಂಡುಬರುವದು.

ಹರಿಹರನ ಕಾಲವು ಇನ್ನೂ ಚರ್ಚಾಸ್ಪದವಾಗಿಯೇ ಇರುವುದು. ಕ್ರಿ. ಶ. ೧೧೬೦ ರಲ್ಲಿ ಹರಿಹರನಿದ್ದನೆಂದು ಮ. ಆರ್. ನರಸಿಂಹಾಚಾರ್ಯರು ಅಭಿಪ್ರಾಯಬಟ್ಟರೆ ೧೩ ನೇ ಶತಮಾನದಲ್ಲಿದ್ದನೆಂದು ಕೆಲವರು ಹೇಳುವರು. ಅದರಂತೆ ಪಾಲ್ಕುರಿಕೆ ಸೋಮನಾಥನ ಕಾಲವಾದರೂ ಚರ್ಚಾಸ್ಪದವಾದುದು. ಕ್ರಿ. ಶ. ೧೧೯೫ ರಲ್ಲಿ ಇದ್ದನೆಂದು ಮ. ಆರ್. ನರಸಿಂಹಾಚಾರ್ಯರೂ ಕೆಲ ತೆಲಗು ವಿದ್ವಾಂಸರೂ ಅಭಿಪ್ರಾಯಬಡುವರು. ಮತ್ತೆ ಕೆಲವರು ಆತನು ಹದಿಮೂರನೇಯ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ತಿಳಿಯುವರು. ಆದರೆ ಈ ಶಿಲಾಶಾಸನದ ಪ್ರಕಾರ ಕ್ರಿ. ಶ. ೧೨೬೨ ರಲ್ಲಿ ಬಸವಣ್ಣನವರು ನಂದಿಯ ಅವತಾರವೆಂದು ಪ್ರತೀತಿಯಿತ್ತೆಂಬುದನ್ನು ತೋರಿಬರುವದು.

# ಪರಮಾತ್ಮನಲ್ಲಿ ವಿಶ್ವಾಸ.

(ಲೇಖಕ:— ಈಶ್ವರ ಸಣಕಲ್ಲ ರಬಕವಿ.)

---

೧ ಮಾರ್ಗವದು ಕಟ್ಟಿನೊಳು ಕೊನೆಗಾಣಲು
ಕಾರ್ಗತ್ತಲೆಯು ಸುತ್ತ ಮುತ್ತುತಿರಲು
ಗುರ್ಗುಡುವ ಬೇವಸವು ಮುಕ್ಕುತಿರಲು
ಘೋರ್ಗರೆಯುವಳಲುಗಡಲುಕ್ಕುತಿರಲು
ತೊಳತೊಳಲಿ ಹೆಳವಾಗಿ ನೆಲಕೊರಗುತ
ಬಳಬಳಲು ತೊರಲೊರಲಿ ಕಣ್ಮುಚ್ಚುತ
ಬಾಗುಳದಿ ಬಾಕುಳಿಯು ಸೀಗುತಿರಲು
ಲೋಗವದು ಮನಗುಡದೆ ಸಾಗುತಿರಲು
ದೇವದೇವನೆಯೆಂದು ಜೀವವದು ಕರೆಕರೆದು
ಸಾವನೋಡುತಲಿರಲು ಆವದೋ ರೂಪದೊಳು
ಝುಗ್ಗನೇ ತಾನೆದ್ದು ಬರುತಲಿಹನು
ಮುಗ್ಗುಲೊಳಗಿರಿಸುತಲಿ ಪೊರೆಯುತಿಹನು ॥

೨ ಆವ ರೂಪದಿ ದೇವ ಬರುವನೆಂದು
ಭಾವಿಸುತ ದಾರಿಯನು ನೋಡಲಿಂದು
ತಾಯ್ಗರುಳಿನೊಳು ತಂದೆಯಾಕಾರದಿ
ಕೈಯ್ಗಳನು ಪಿಡಿದೆತ್ತಿಕೊಳುತ ಭರದಿ
ಎಚ್ಚರಿಸಿಯಪ್ಪಿ ನಿಜಭುಜಗಳಿಂದ
ನಿಚ್ಚಳದ ನಿಚ್ಚಟದ ಪ್ರೇಮದಿಂದ
"ಎಲೆಕೂಸೆ, ನಿನ್ನ ಬಯಕೆಯುದಾವದು?
ತಿಳಿಸದನು ಕೊಡುತಿಹೆನು ಸಾತಪ್ಪದೇ.
ಬಾಳನ್ನು ಪೋಕ್ಷಿಸುತ ಬಾಳಿಸುತ ಬೆಳಕನ್ನು
ಹೊಳೆಯಿಸುವೆ ಬೆಳೆಯಿಸುವೆ ಎಳೆಯೆ, ನಿನ್ನಿಚ್ಚೆಯೊಲು,
ಎನುತಭಯವನ್ನೀಯುತೆನ್ನ ತಂದೆ
ದಣಿದ ಬಾಳನು ತವಿಸಲೆಂದು ಬಂದೆ ॥

---

ಅಂತಪ್ಪ ತ್ರೋ೧ಿಕೆಯು೧ು ಆ ಶಿವಶರಣನ ನಿಲವು ತನ್ನೊಳಗೆ ಅಡಗಿಸಿ ಕೊಂಡಿತ್ತೆಂಬುದೀಗ, ಗುಹೇಶ್ವರ ನಿಂದ ನಿಲವು ಮೇರು ಗಗನವ ನುಂಗಿತ್ತೆಂಬ ಶಬ್ದಕ್ಕರ್ಥ.

೧೧೩. ತಾಳಮರದ ಮೇಲೊಂದು ಬಾವಿ ಇದ್ದಿತ್ತಲ್ಲಾ! ಆ ಬಾವಿಯ ತಡಿಯ ಹುಲ್ಲನೊಂದು ಮೊಲ ಬಂದು ಮೇಯಿತಲ್ಲಾ! ಕಾಯ ಸಹಿತ ಜೀವವ ಬಾಣಸವ ಮಾಡಲರಿಯರು ಗುಹೇಶ್ವರಾ ನಿಮ್ಮಾಣೆ.

ಟೀಕು:— ತಾಳಮರನೆಂಬರೆ ತನುವೆಂಬವೃಕ್ಷ, ಆ ತನುವೆಂಬ ವೃಕ್ಷದೊಳಗೆ ಸಂಸಾರರಸ ಸಂಪೂರ್ಣವಪ್ಪ ವಿಷಯಕೂಪವಿರ್ಪಕಾರಣ ತಾಳಮರದ ಮೇಲೊಂದು ಬಾವಿ ಇದ್ದಿತ್ತಲ್ಲಾ ಎಂಬ ಶಬ್ದಕ್ಕರ್ಥ, ಆ ವಿಷಯ ಕೂಪದ ತೀರದಲ್ಲಿ ಸಂಸಾರ ಪ್ರಪಂಚವೆಂಬ ತೃಣಹುಟ್ಟಿರಲು ಆ ತೃಣಪ್ರತಿಪತ್ತನು ಜೀವನು ಬಂದು, ಭಕ್ಷಿಸುತ್ತಿರಲು, ಅದೀಗ ಬಾವಿಯ ತಡಿಯ ಹುಲ್ಲನೊಂದು ಮೊಲ ಬಂದು ಮೇಯಿತ್ತಲ್ಲಾ ಎಂಬ ಶಬ್ಧಕ್ಕರ್ಥ. ಆ ಜೀವನನ್ನು ಮೂಲ ಅಹಂಕಾರಸಹಿತ ಮಹಾ ಜ್ಞಾನಾಗ್ನಿಯಲ್ಲಿ ದಹನವ ಮಾಡುವದೆ ಲಿಂಗೈಕ್ಯ. ಅಲ್ಲದುದೆ ಅಜ್ಞಾನ ವೆಂಬುದೀಗ ಕಾಯಸಹಿತಜೀವವ ಬಾಣಸವ ಮಾಡಲರಿಯರೆಂಬ ಶಬ್ದ ಕ್ಕರ್ಥ.

೧೧೪. ಏಳುತಾಳದ ಮೇಲೆ ಕೇಳುವ ಸುನಾದ ಸ್ಥೂಲ ಸೂಕ್ಷ್ಮ ಕೈಲಾಸದ ರಭಸದ ಗಂಗೆವಾಳುಕ ಸಮೋರುದ್ರರ ತಿಂಥಿಣಿ ಗಗನ ಗಂಭೀ ರದ ಶಿವಸ್ತುತಿಯ ನೋಡಲೊಡನೆ, ಪಿಂಡ ಬ್ರಹ್ಮಾಂಡವಾಯಿತ್ತು. ಅಖಂ ಡಿತನಿರಾಳ ಗುಹೇಶ್ವರಾ.

ಟೀಕು:— ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದ ಶಿವಾನುಭವ ಯೋಗ ದಿಂ ಕುಂಡಲಾಗ್ನಿಯ ನೆಬ್ಬಿಸಿ, ಪೂರ್ವಯೋಗವುಂ ನಿರ್ಬಂಧಿಸಿ, ನಿಲಿಸಿ ಪಶ್ಚಿಮಯೋಗದೊಳು, ಸುಷುಮ್ನನಾಳದ ಸಪ್ತಗ್ರಂಥಗಳ ಕಟ್ಟುಬಿಚ್ಚಿ, ಬ್ರಹ್ಮರಂಧ್ರವನೆಯ್ದಿ, ಅಲ್ಲ ಸತ್ಪ್ರಣವ ಘೋಷಿಸುತ್ತಿರಲು, ಅದೀಗ, ಏಳು ತಾಳದ ಮೇಲೆ ಕೇಳುವ ಸುನಾದವೆಂಬ ಶಬ್ದಕ್ಕರ್ಥ. ಆ ಸತ್ಪ್ರಣವ ಸ್ಥೂಲ ಸೂಕ್ಷ್ಮ ತನುವಿನಲ್ಲಿ ವೇದಿಸುತ್ತಿರಲು, ಆ ಕಾಯವೇ ಕೈಲಾಸ ವಾಗಿ, ಆ ಸತ್ಪ್ರಣವ ಘೋಷವನಾಲಂಗಿಸುತ್ತಿರಲು, ಆ ಶರಣನ ಕರ ಣಂಗಳೆಲ್ಲವು ಅಲ್ಲಿರ್ಪ ಪ್ರಾಣಲಿಂಗದ ಸೇವಕರಪ್ಪ ರುದ್ರಗಣಂಗಳಾಗಿ ರ್ಪರೆಂಬುದೀಗ ಸ್ಥೂಲ ಸೂಕ್ಷ್ಮ ಕೈಲಾಸದ ರಭಸ ಗಂಗೆ ವಾಳುಕ

ವೆಂಬ ಕದಳಿಯ ಹೊಕ್ಕು ಸುಳಿದಾಡುವ ಮಹಾ ಮಹಿಮಂಗೆ ಇಹಲೋಕವೇನು ಪರಲೋಕವೇನು? ಅಲ್ಲಿಂದತ್ತ ಅಗಮ್ಯ ನಿರಾಳ ಪರಮಜ್ಞಾನದ ಸಿದ್ಧಿ ಮಹಾಲಿಂಗದ ಬೆಳಗು ಗುಹೇಶ್ವರಾ ನಿಮ್ಮ ನಿಜವನರಿದ ಮಹಾ ಮಹಿಮಂಗೆ ನಮೋ ನಮೋ ಎನುತಿರ್ದೆನು.

ಟೀಕು:—ಪರಮ ಜ್ಞಾನೋದಯವಾಗೆ ಸರ್ವಾಂಗ ಲಿಂಗ ಲೀಯವಾಗೆ ಆ ಮಹಾ ಜ್ಞಾನಪ್ರಕಾಶವೇ ತಾನಾಗಿ ನಿರಾಳವೆಂಬ ನಿರಾಶ್ರಯದಲ್ಲಿ ನಿಜವ ನಿಲವನೆಯ್ದಿ ನಿಂದ ಪರಮ ಶಾಂತ ಮಹಂತ ಶರಣನ ಸ್ವಲೀಲಾಚರಿತ್ರವೆಂತೆಂದಡೆ ಈ ವಚನದಲ್ಲಿಯೇ ವ್ಯಾಖ್ಯಾನವಾಗಿ ಕಾಣಬರುತಿಪ್ಪುದಾಗಿ ಬೇರೆ ಪರಿಚ್ಛೇದನವ ಮಾಡಲಿಲ್ಲವೆಂಬುದೀ ವಚನಾರ್ಥ.

೬೫. ಊರದ ಚೇಳನ ಏರವ ಬೇನೆಯಲ್ಲಿ ಮೂರು ಲೋಕವೆಲ್ಲ ನರಳಿತ್ತು. ಹುಟ್ಟದ ಗಿಡವ ಬಟ್ಟೆಲೆಯ ತಂದು ಮುಟ್ಟದೆ ಹೂಸಲು ಮಾಬದು ಗುಹೇಶ್ವರಾ.

ಟೀಕು:— ಮಿಥ್ಯೆಯೆಂಬ ವೃಶ್ಚಿಕನು ಅತ್ಯಂತದಿಂದ ಜಗವನೂರಲು ಇಲ್ಲದ ಸಂಸಾರದುಃಖದಲ್ಲಿ ಜಗವೆಲ್ಲ ಹೊರಳುತ್ತಿದ್ದಿತೆಂಬುದೀಗ ಊರದ ಚೇಳನ ಏರವ ಬೇನೆಯಲ್ಲಿ ಮೂರು ಲೋಕವೆಲ್ಲ ನರಳಿತ್ತೆಂಬ ಶಬ್ದಕ್ಕರ್ಥ. ಆ ಸಂಸಾರ ವಿಷಯಕ್ಕೆ ಜನನವಿರಹಿತವಹ ಶಿವಜ್ಞಾನ ಕ್ರಿಯೆಯೆಂಬ ಔಷಧಿಯನು ತನುಗುಣಸೋಂಕದೆ ಹೂಸಲು ಆ ಬೇನೆ ಮಾಬುದೆಂಬುದೀಗ ಹುಟ್ಟದ ಗಿಡವ ಬಟ್ಟೆಲೆಯ ತಂದು ಮುಟ್ಟದೆ ಹೂಸಲು ಮಾಬುದೆಂಬ ಶಬ್ದಕ್ಕರ್ಥ.

೬೬. ನಿಮ್ಮಲ್ಲಿ ನೀವು ತಿಳಿದು ನೋಡಿರೆ ಅನ್ಯವಿಲ್ಲ ಕಾಣಿರಣ್ಣಾ. ಅರಿವು ನಿಮ್ಮಲ್ಲಿಯೇ ತದ್ಗತವಾಗಿದೆ. ಅನ್ಯ ಭಾವವ ನೆನೆಯದೆ ತನ್ನೊಳಗೆ ತಾನೇ ಎಚ್ಚರವಿಂಬಲ್ಲರೆ ತನ್ನಲ್ಲಿಯೆ ತನ್ಮಯ ಗುಹೇಶ್ವರಲಿಂಗವು.

ಟೀಕು:- ತನ್ನಲ್ಲಿ ತಾನು ತಿಳಿದು ನೋಡಬಲ್ಲಡೆ ಪರಬ್ರಹ್ಮವು ತನ್ನಲ್ಲಿಯೇ ತದ್ಗತವಾಗಿಪ್ಪುದು. ಅದನರಿದು ಆ ವಸ್ತುವನ್ನು ಭಿನ್ನವಿಟ್ಟರಿಯದೆ ಸುಚಿತ್ತನಾಗಿ ಎಚ್ಚರ ಬಲ್ಲರೆ ಆತನೇ ಶಿವಶರಣನೆಂಬುದೀ ವಚನದ ತಾತ್ಪರ್ಯಾರ್ಥ.

೬೭. ಜಗವಗಲದಲ್ಲಿ ಹಬ್ಬಿದ ಬಲೆಯ ಜಗಕ್ಕೆ ತೆಗೆಯದು ನೋಡಾ. ಬಗೆಯದು ಭ್ರಮೆಗೊಳದು. ತನ್ನ ಇರವಿನ ಪರಿ ಇಂತು

ಟಾಗಿ ಜಗದ ಪ್ರಾಣಿಗಳುಲಿದುಲಿದು ಮರಳಿ ಮತ್ತಲ್ಲಿಯೇ ಬೀಳಲು ಬಲಿಯ ನೇಣು ಬಗ್ಗುರಿಯ ಕೈಯ್ಯುಲಿರಲು ಬಲಿಯ ನೇಣ ಕಣ್ಣಿಯ ಕಳಚಿ ಶರಣನು ಶರಣೆನುತ್ತ ನಿಂದು ಒಡಲುಪಾಧಿಯನರಿಯದೆ ಬೆಳಗಿನಲ್ಲಿ ನಿಂದು ಬೇಡಿದವರಿಗೆ ಅಣಿಮಾಡಿ ಗುಣಂಗಳನಿತ್ತು ಮನೋಮಧ್ಯದಲ್ಲಿ ನಿಲಿಸಿ ನೆನೆಯುತ್ತಿದ್ದ ಸುಖಿಯಾದ ಪ್ರಾಣನಾಥನು ಕಾಯ ಶೂನ್ಯ ಲಿಂಗಕ್ಕೆ ಪ್ರಾಣ ಶೂನ್ಯ ಶರಣ ಗುಹೇಶ್ವರಲಿಂಗದಲ್ಲಿ ಬೆರಸಿ ಬೇರಿಲ್ಲ.

ಟೀಕು:— ಹದಿನಾಲ್ಕು ಭುವನವ ಮುಸುಕಿದ ಮಾಯೆಯು ಬಲೆ ಆ ಭುವನವುಳ್ಳನ್ನಕ್ಕರ ಉಡುಗದು ಏನನು ಲೆಕ್ಕಿಸದು ತೊಲಗದು. ಅದು ಕಾರಣ ಲೋಕವೆಲ್ಲವು ಆ ಬಲೆಯೊಳಗೆ ಏಳುತ್ತ ಬೀಳುತ್ತ ಪಾಶಬದ್ಧರಾಗಿದ್ದರೆಂಬುದೀಗ ಜಗದಗಲದಲ್ಲಿ ಹಬ್ಬಿದ ಒಲೆಯು ಜಗಕ್ಕೆ ತೆಗೆಯದು ನೋಡಾ. ಒಗೆಯದು ಭ್ರಮೆಗೊಳ್ಳದು ತನ್ನ ಇರವಿನ ಪರಿಯಿಂತುಟು ಜಗದ ಪ್ರಾಣಿಗಳು ಉಲಿದುಲಿದು ಮರಳಿ ಮತ್ತಲ್ಲಿಯೇ ಬೀಳಲು ಬಲಿಯ ನೇಣು ಬಗ್ಗುರಿಯ ಕೈಯ್ಯುಲಿರಲು ಎಂಬ ಶಬ್ದಕ್ಕರ್ಥ. ಇಂತಪ್ಪ ಮಾಯಾ ಜಾಲವ ನೆರೆ ಹಿಂಗಿಸಿ ಸುಜ್ಞಾನ ಕಣ್ದೆರೆದು ಶಿವಶರಣನು ಕೃತಾರ್ಥಭಾವಿಯಾಗಿದ್ದನೆಂಬುದೀಗ ಬಲೆಯ ನೇಣ ಕಣ್ಣಿಯ ಕಳಚಿ ಶರಣ ನೋಡುತ್ತಿದ್ದನೆಂಬ ಶಬ್ದಕ್ಕರ್ಥ. ಆ ಶರಣನು ಒಡಲುಪಾಧಿಯಳಿದು ಮಹಾ ಪ್ರಕಾಶದಲ್ಲಿ ನಿಂದು ಅಣಿಮಾದಿ ಗುಣ ವರಪ್ರದಾಯಕನಾಗಿದ್ದನೆಂಬುದೀಗ ಒಡಲುಪಾಧಿಯನರಿಯದೆ ಬೆಳಗಿನಲ್ಲಿ ನಿಂದು ಬೇಡಿದವರಿಗೆ ಅಣಿಮಾದಿ ಗುಣಂಗಳನಿತ್ತನೆಂಬ ಶಬ್ದಕ್ಕರ್ಥ. ಮನಸ್ಥಲ ಮಧ್ಯದಲ್ಲಿ ಮಹಾಜ್ಞಾನಲಿಂಗವನಾಲಿಂಗಿಸಿ ನೆನದು ಸುಖಿಯಾಗಿದ್ದನೆಂಬುದೀಗ ಮನೋಮಧ್ಯದಲ್ಲಿ ನಿಲಿಸಿ ನೆನೆಯುತ್ತಿದ್ದ ಸುಖಿಯಾದ ಪ್ರಾಣನಾಥನೆಂಬ ಶಬ್ದಕ್ಕರ್ಥ. ಕಾಯ ಶೂನ್ಯಲಿಂಗಕ್ಕೆ ಪ್ರಾಣಶೂನ್ಯ ಶರಣನಾಗೆ ಬೆರಸಿ ಭೇದವಿಲ್ಲದೆ ಪರಿಪೂರ್ಣನಾಗಿದ್ದ ನೆಂಬುದೀಗ ಕಾಯ ಶೂನ್ಯಲಿಂಗಕ್ಕೆ ಪ್ರಾಣಶೂನ್ಯ ಶರಣ ಗುಹೇಶ್ವರಲಿಂಗದಲ್ಲಿ ಬೆರಸಿ ಬೇರಿಲ್ಲವೆಂಬ ಶಬ್ದಕ್ಕರ್ಥ.

೬೮. ಇಲ್ಲವೆಯ ಮೇಲೊಂದು ಉಂಟೆಂಬ ಪಶಿಭಾವ ಅಲ್ಲಿ ಇಲ್ಲಿ ಎನ್ನದೆ ತಾನೇ ನಿಂದುದು ನೋಡಾ! ತನ್ನಲ್ಲಿಯ ಪ್ರಕೃತಿಯ, ತಾನೇ

ಹಿಂಗಿಸಲು ಅಲ್ಲಿಯೇ ಸುಜ್ಞಾನ ಉದಯಿಸಿತ್ತು. ಎಲ್ಲಾ ಎಡೆಯಲ್ಲಿಯೂ ನಿಂದ ನಿಜಪದವ ಗುಹೇಶ್ವರಾ ನಿಮ್ಮ ಶರಣ ಬಲ್ಲ.

ಟೀಕು:— ಇಲ್ಲವೆ ಎಂದರೆ ಮಾಯೆ. ಆ ಮಾಯೆಯ ನಿವೃತ್ತಿಯ ಮಾಡಿ ಜ್ಞಾನೋದಯವಾಗಿ ಪರಬ್ರಹ್ಮದ ನೆಲೆಯರಿಯಲು ಅದು ಅಲ್ಲಿ ಇಲ್ಲಿ ಎನ್ನದೆ ಎಲ್ಲಿಯೂ ತಾನೇಯಾಗಿಪ್ಪುದು. ಅದುಕಾರಣ ತನ್ನ ಪ್ರಕೃತಿ ತನ್ನಲ್ಲಿಯಳಿದು ತನ್ನಲ್ಲಿ ತನ್ನ ನಿಲವು ಪರಿಪೂರ್ಣವಾಗಿ ನಿಂದ ಭೇದವ ಆ ಸುಜ್ಞಾನಿ ಶರಣ ಬಲ್ಲನೆಂಬುದೀ ವಚನದ ತಾತ್ಪರ್ಯಾರ್ಥ.

೬೯. ಒಡಲಲ್ಲಿ ಹುಟ್ಟಿತ್ತು ಭ್ರಮೆಯಿಂದ ಬೆಳೆಯಿತ್ತು. ಒಡನೆ ಹುಟ್ಟಿತ್ತು ತನ್ನನರಿಯದ ಕಾರಣ ನೋಡಾ. ಇದೊಂದು ಸೋಜಿಗವ ಕಂಡ್ಯಾ ಕೂಡೆ ಭರಿತವೆಂದರಿಯಲು ಅಂಗದ ಅಳವಟ್ಟಿತ್ತು ಗುಹೇಶ್ವರಾ.

ಟೀಕು:— ಮಾಯಾ ಮಿಥ್ಯೆಯೆಂಬ ಒಡಲು ಕೊಂಡಲ್ಲಿಯೇ ಉದಯಿಸಿ ಭ್ರಮೆಯಿಂದವೇ ಪ್ರವರ್ತಕ ವಾಯಿತೆಂಬುದೀಗ ಒಡಲಲ್ಲಿ ಹುಟ್ಟಿತ್ತು ಭ್ರಮೆಯಿಂದ ಬೆಳೆಯಿತ್ತು ಎಂಬ ಶಬ್ದಕ್ಕರ್ಥ. ಇಂತು ತಾನೆಂಬಲ್ಲಿ ಹುಟ್ಟಿತ್ತೆಂಬುದರಿಂದ ಒಡನೆ ಹುಟ್ಟಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಮಾಯೇ ತಾನೆಂದರಿಯದ ಕಾರಣ ಏನೆಂದು ಅರಿಯದಿದ್ದಿತೆಂಬುದೀಗ ತನ್ನನರಿಯದ ಕಾರಣ ಇದೊಂದು ಸೋಜಿಗವ ಕಂಡೆನೆಂಬ ಶಬ್ದಕ್ಕರ್ಥ. ಇಂತಪ್ಪ ಮಾಯೆಯ ನಿವೃತ್ತಿಮಾಡಿ ಜ್ಞಾನೋದಯವಾಗೆ ಜಗದೊಳಗೆ ತಾನೆ ಪರಿಪೂರ್ಣನೆಂದರಿದು ಆ ಪರಬ್ರಹ್ಮದ ಸರ್ವಾಂಗಕ್ಕೆ ಆಲಿಂಗನವ ಮಾಡಿಕೊಳ್ಳಲು ಆತನೇ ಅಚ್ಚಶರಣನೆಂಬುದೀಗ ಕೂಡೆ ಭರಿತನೆಂದರಿಯಲು ಅಂಗದಲಳವಟ್ಟಿತ್ತು ಎಂಬ ಶಬ್ದಕ್ಕರ್ಥ.

೭೦. ಭವವಿರಹಿತಂಗೆ ಭಕ್ತಿಯ ಮಾಡುವರು ನೀವು ಕೇಳಿರಣ್ಣಾ. ಭವಬಾಧೆಯೊಳಗೆ ನಿಲ್ಲದು. ಅಭವಂಗೆ ಭಕ್ತಿಯಮಾಡುವ ಪರಿಯಿಂತು ತಾನಭವನಾದಲ್ಲದೆ ಸಹಜಭಕ್ತಿಯ ಮಾಡಬಾರದು ಗುಹೇಶ್ವರಾ.

ಟೀಕು:— ತಾನು ಭವಬಾಧೆಯೊಳು ಸಿಲುಕಿರುತ್ತ ನಿರ್ಭವ ವಸ್ತುವಿಂಗೆ ಭಕ್ತಿಯ ಮಾಡಿಹೆನೆಂದೊಡೆ ಭವಂಗು ಅಭವಂಗು ಸಂಘಟಿಸದು ಅದುಕಾರಣ ತಾನು ನಿರ್ಭವನಾಗಿ ಲಿಂಗಕ್ಕೆ ಭಕ್ತಿಯ ಮಾಡಬೇಕೆಂಬುದೀಗ ಈ ವಚನದ ತಾತ್ಪರ್ಯಾರ್ಥ.

೭೧. ಭವಿಯ ಕಳೆದೆನೆಂಬ ಮರುಳು ಜನಂಗಳು ನೀವು ಕೇಳಿರೆ. ಭವಿಯಲ್ಲವೇ ನಿಮ್ಮ ತನುಮನಗುಣಾದಿಗಳು? ಭವಿಯಲ್ಲವೇ ನಿಮ್ಮ ಪ್ರಾಣ ಗುಣಾದಿಗಳು? ಇವರೆಲ್ಲರು ಭವಿಗಳ ಹಿಡಿದು ಭವಭಾರಿಗಳಾದರು ನಾನು ಭವಿಯ ಪೂಜಿಸಿ ಭವಂನಾಸ್ತಿಯಾದೆನು ಗುಹೇಶ್ವರಾ.

ಟೀಕು:—ಅಂತರಂಗದ ಕರಣವಿಕಾರಂಗಳೆಂಬ ಭವಿಗಳ ಕಳೆಯ ಲರಿಯದೆ ಬಾಹ್ಯದ ಭವಿಗಳ ಕಳೆದೆನೆಂಬುದು ಅಜ್ಞಾನ. ಅದರಿಂದ ಭವ ಹರಿಯದು. ಮತ್ತೆಂತೆಂದೊಡೆ ಸರ್ವಾಂಗದಲ್ಲಿ ಲಿಂಗ ಲೀಯವಾಗಿ ಭಕ್ತ ನೆಂಬ ಭಿನ್ನ ಶಬ್ದವಳಿದು ಆ ಭಕ್ತಿಚರಿತ್ರದಿಂ ಲಿಂಗವಾಗಿ ಲಿಂಗವ ಪೂಜಿ ಸಬಲ್ಲಡಾತನೆ ಲಿಂಗೈಕ್ಯನೆಂಬುದೀ ವಚನದ ತಾತ್ಪರ್ಯಾರ್ಥ.

೭೨. ಭವಿ ಬೀಜವೃಕ್ಷದ ಪದದೊಳಗೆ ಭಕ್ತಿ ಬೀಜವೃಕ್ಷ ಪಲ್ಲವಿ ಸಿತ್ತು. ಆ ಭಕ್ತಿಬೀಜವೃಕ್ಷದ ಫಲದೊಳಗೆ ಶರಣಬೀಜವೃಕ್ಷ ಪಲ್ಲವಿಸಿತ್ತು. ಆ ಶರಣಬೀಜವೃಕ್ಷದ ಫಲದೊಳಗೆ ಕುಲನಾಶಕನಾದ ಶರಣಗೆ ಒಂದೇ ಬಸುರಲ್ಲಿ ಬಂಧು ಬಳಗಕ್ಕೆ ತನ್ನ ಕುಲಕ್ಕೆ ತಾನೇ ಮಾರಿಯಾದ ಶರಣ ಭವಿ ಭಕ್ತ ಭವಿ ಬೀಜವೃಕ್ಷದ ತಂಪು ನೆಳಲನು ಬಿಟ್ಟು, ಕುಳಿತಲ್ಲಿಯೇ ಬೇಯ ಬಯಲಾದ ಶರಣ ನಾದ ಬಿಂದು ಬೀಜ ನಷ್ಟ ಹಾಳಾಗಿ ಹಾರಿ ಹೋದಲ್ಲಿ ಇನ್ನೇನ ಹೇಳಲುಂಟು? ಗುಹೇಶ್ವರನೆಂಬ ಲಿಂಗವನರಿದು ಭವಿಗೆ ಭವಿಯಾದಾತಂಗೆ ಇನ್ನೇನು ಫಲವುಂಟಯ್ಯಾ?

ಟೀಕು:—ಭವಿ ಜನ್ಮವೆಂಬುದು ಮುಂದೆ ಬಹ ಭಕ್ತಿ ಜನ್ಮಕ್ಕೆ ಕಾರ ಣವಾಗಿ ಆ ಭವಿತ್ವದ ಅವಿವೇಕ ನಿವೃತ್ತಿಯಾಗಿ ಭಕ್ತಿ ವಿವೇಕ ಉದಯ ವಾಯಿತ್ತೆಂಬುದೀಗ ಭವಿ ಬೀಜ ವೃಕ್ಷದ ಫಲದಲ್ಲಿ ಭಕ್ತಿ ಬೀಜವೃಕ್ಷ ಪಲ್ಲ ವಿಸಿತ್ತೆಂಬ ಶಬ್ದಕ್ಕರ್ಥ. ಆ ಭಕ್ತಿ ಉದಯವಾಗಿಯೇ ಸದಾಚಾರ ಸದ್ವ ರ್ತನ ಲಿಂಗಲೇಪವಾದಲ್ಲಿ ಸುಜ್ಞಾನ ಸ್ವರೂಪವಪ್ಪ ಶರಣತ್ವ ಉದಯವಾ ಯಿತ್ತೆಂಬುದೀಗ ಭಕ್ತಿ ಬೀಜ ವೃಕ್ಷದ ಫಲದೊಳಗೆ ಶರಣ ಬೀಜವೃಕ್ಷ ಪಲ್ಲ ವಿಸಿತ್ತೆಂಬ ಶಬ್ದಕ್ಕರ್ಥ. ಆ ಸುಜ್ಞಾನ ಶರಣನ ಸರ್ವಾಂಗದಲ್ಲಿ ಲಿಂಗ ಲೇಪವಾಗಲು ಆ ಶರಣನು ತಾನೇ ಜನನ ಮರಣ ವರ್ಜಿತನಾದನೆಂಬು ದೀಗ ಆ ಶರಣ ಬೀಜವೃಕ್ಷದ ಫಲದೊಳಗೆ ಕುಲನಾಶಕನಾದ ಶರಣನೆಂಬ ಶಬ್ದಕ್ಕರ್ಥ. ಇಂತಪ್ಪ ಶರಣ ತನ್ನ ಉದರ ಕುಹರದೊಳಿರ್ದ್ದ ಸಕಲ ಕರ ಣಂಗಳೆಲ್ಲವನು ನಷ್ಟಮಾಡಿ ತನ್ನ ತಾ ಸಂಹರಿಸಿ ಕೊಂಡು ತಾನೇ ಉಳಿದ

ಕಾರಣ ಒಂದೇ ಬಸುರಲ್ಲಿ ಬಂಧು ಬಳಗಕ್ಕೆ ತನ್ನ ಕುಲಕ್ಕೆ ತಾನೇ ಮಾರಿಯಾದನೆಂಬ ಶಬ್ದಕ್ಕರ್ಥ. ಆ ಶರಣನು ಪೂಜಕನಾದ ಭಕ್ತನಲ್ಲ. ಪೂಜಿಸಿದ ಆ ಭಕ್ತನಲ್ಲ. ಈ ಉಭಯವನು ಅಳಿದುಳಿದು ತನ್ನಲ್ಲಿ ತಾನು ಸ್ವಸನಾಗಿ ನಿರ್ವಯಲ ಸಮಾಧಿಯಲ್ಲಿ ನಿಂದನೆಂಬುದೀಗ ಭವಿ ಭಕ್ತ ಭವ್ಧಿ ಬೀಜವೃಕ್ಷದ ತಂಪುನೆಳಲು ಬಿಟ್ಟು ಕುಳ್ಳಿರ್ದಲ್ಲಿಯೇ ಬಳಿಯು ಬಯಲಾದನೆಂಬ ಶಬ್ದಕ್ಕರ್ಥ. ಅದುಕಾರಣ ಆ ಶರಣನು ನಾದ ಬಿಂದು ಕಳೆ ಎಂಬ ತ್ರಿವಿಧವು ಅಳಿದು ನಿಂದ ನಿಜಪದದಲ್ಲಿ ನಿಯತವಾದನೆಂಬುದೀಗ ನಾದ ಬಿಂದು ಬೀಜ ನಷ್ಟ ಹಾಳಾಗಿ ಹಾರಿ ಹೋದಲ್ಲಿ ಇನ್ನೇನ ಹೇಳಲುಂಟು? ಗುಹೇಶ್ವರಲಿಂಗದಲ್ಲಿ ಭವಿಗೆ ಭವಿಯಾದಾತಂಗೆ ಇನ್ನೇನ ಪದವುಂಟೆಂಬ ಶಬ್ದಕ್ಕರ್ಥ.

೭೩. ಹುಟ್ಟಿದ ಕೂಸಿಂಗೆ ಪಟ್ಟವ ಕಟ್ಟಿ ವಿಭೂತಿಯ ಹೂಸಿ ಲಿಂಗವ ತೋರಿ ಜೋ ಜೋ ಎಂದು ಜೋಗುಳವ ಹಾಡಿದಳು. ಮಾಯಾದೇವಿಯ ಅಕ್ಕ ಜೋಎಂಬ ಸರ ಹರಿದು ತೊಟ್ಟಿಲು ಬಿದ್ದಿತ್ತು. ಕೂಸು ಸತ್ತಿತ್ತು ಗುಹೇಶ್ವರನಳಿದನು.

ಟೀಕು:— ಸಕಲ ಕರ್ಮಂಗಳಳಿದುಳಿದ ಶಿಷ್ಯಂಗೆ ಜ್ಞಾನಶಕ್ತಿಯೆಂಬ ತಾಯಿ ಜ್ಞಾನಭಸ್ಮವನೇ ಪಟ್ಟವ ಕಟ್ಟಿ ತನ್ನ ಸ್ವಯಂಜ್ಯೋತಿಯನೇ ಲಿಂಗವ ಮಾಡಿ ತೋರಿಸಿ ಶಿವೋಹಂ ಶಿವೋಹಂ ಎಂದು ಬೋಧಿಸುತ್ತಿದ್ದಳೆಂಬುದೀಗ ಹುಟ್ಟಿದ ಕೂಸಿಂಗೆ ಪಟ್ಟವ ಕಟ್ಟಿ ವಿಭೂತಿಯ ಹೂಸಿ ಲಿಂಗವ ತೋರಿ ಜೋ ಜೋ ಎಂದು ಜೋಗುಳವಾಡಿದಳು ಮಾಯಾದೇವಿಯ ಅಕ್ಕನೆಂಬ ಶಬ್ದಕ್ಕರ್ಥ. ಆ ಶಿವೋಹಂ ಎಂಬ ಭಿನ್ನಶಬ್ದವು ಅಳಿದು ತೊಟ್ಟಿಲೆಂಬ ತನುವು ಅಳಿದು ಶರಣನು ಲಿಂಗಲೀಯವಾಗೆ ಪರಬ್ರಹ್ಮವೇ ಉಳಿಯಿತ್ತೆಂಬುದೀಗ ಜೋ ಜೋ ಯೆಂಬ ಸರ ಹರಿದು ತೊಟ್ಟಿಲು ಬಿದ್ದಿತ್ತು ಕೂಸು ಸತ್ತಿತ್ತು ಗುಹೇಶ್ವರ ಉಳಿದನೆಂಬ ಶಬ್ದಕ್ಕರ್ಥ.

೭೪. ಅರುವಿನಲ್ಲಿ ಉದಯಿಸಿ ಮರವು ನಷ್ಟವಾಗಿದ್ದ ಶರಣನ ಪರಿಯ ನರಸಲುಂಟೇ? ಗತಿಯ ಹೇಳಲುಂಟೆ? ಶಿಶು ಕಂಡ ಕನಸಿನಂತಿಪ್ಪರು ಗುಹೇಶ್ವರ ನಿಮ್ಮ ಶರಣರು.

ಟೀಕು:— ಸುಜ್ಞಾನೋದಯವಾಗೆ ಅಜ್ಞಾನವಳಿದ ಶರಣನ ನಿಲವು ಶಿಸು ಕಂಡ ಕನಸಿನಂತೆ ಗೋಪ್ಯವಾಗಿದ್ದೀತೆಂಬುದೀಗ ಈ ವಚನದ ತಾತ್ಪರ್ಯಾರ್ಥ.

೭೫. ಗುರುಶಿಷ್ಯ ಸಂಬಂಧಕ್ಕೆ ಅಂಗವ ಧರಿಸುವರಯ್ಯಾ. ನಿಮ್ಮ ಸಂಬಂಧನಕಿಕ್ಕಿ ಅಳುವರಯ್ಯಾ. ಆನು ಕಂಡು ಮರುಗಿ ಅಕಟಕಟ ಎಂದೆನಲ್ಲಾ. ಕೂಗಿಲ್ಲ ಬೊಬ್ಬೆಯಿಲ್ಲ. ಹೋದ ಹೊಲಬನರಿಯರು. ಗುಹೇಶ್ವರಾ ಬಾಳುದಲೆಯ ಹಿಡಿದೆನು.

ಟೀಕುಃ— ಶಿಷ್ಯನಲ್ಲಿ ಸುಜ್ಞಾನೋದಯವಾಗಿ ಕೋಹಂ ಭಾವವಿಲ್ಲದೆ ಗುರುವಿನಲ್ಲಿ ಪರಿಪೂರ್ಣ ಜ್ಞಾನವೆಡೆಗೊಂಡು ಶಿವೋಹಂ ಎಂಬ ಭಾವವಿಲ್ಲದೆ ಅಜ್ಞಾನದಿಂದ ಲಿಂಗಸ್ವಾಯತ ಸಂಬಂದವ ಮಾಡಿಸಿಕೊಂಡು ಇರಲು ಅದು ಲಿಂಗದ ಬಂಧನಕಿಕ್ಕಿದಂತೆ ಎಂಬುದೀಗ ಗುರುಶಿಷ್ಯ ಸಂಬಂಧಕ್ಕೆ ಲಿಂಗವ ಧರಿಸುವರಯ್ಯಾ. ನಿಮ್ಮ ಬಂಧನಕಿಕ್ಕಿ ಅಳುವರಯ್ಯಾ ಎಂಬ ಶಬ್ದಕ್ಕರ್ಥ. ಈ ನಿರ್ಣಯ ನಿಜ ಶರಣನರಿದು ನಿವೃತ್ತಿ ಮಾಡಿ ಶಬ್ದಜಾಲಂಗಳ ಕೆಡಿಸಿ ನಿಃಶಬ್ದವೇದಿಯಾಗಿ ಸುಜ್ಞಾನ ಲಿಂಗವನು ಸದ್ಭಾವ ಹಸ್ತದಲ್ಲಿ ಧರಿಸಿಕೊಂಡನೆಂಬುದೀಗ ಆನು ಕಂಡು ಮರುಗಿ ಮರುಗಿ ಅಕಟಕಟ ಎಂದೆನಲ್ಲಾ ಕೂಗಿಲ್ಲ ಬೊಬ್ಬೆಯಿಲ್ಲ ಹೋದ ಹೊಲಬನರಿಯರು ದೇವಾ ಗುಹೇಶ್ವರಾ ಬಾಳುದಲೆ ಹಿಡಿದೆನು ಎಂಬ ಶಬ್ದಕ್ಕರ್ಥ.

೭೬. ಕಾಯದಲ್ಲಿ ಕಳವಳ ಎಡೆಗೊಂಡ ಬಳಿಕ ಅರಿವಿನಲ್ಲಿ ಮರವೆ ತಾನೆ ನಿಂದಿಪ್ಪದು ನೋಡಾ. ಕಾಯದ ಕಳವಳ ಮಾಯವೆಂದರಿಯಲಲ್ಲದೆ ಗುಹೇಶ್ವರನ ನಿಲವು ತಾನೇ ನೋಡಾ.

ಟೀಕುಃ— ತನುವಿನಲ್ಲಿ ವಿಕಾರ ಭ್ರಾಂತುವೆಡೆಗೊಳಲು ಸುಜ್ಞಾನವೇ ಅಜ್ಞಾನವಪ್ಪುದು. ಅಂತಪ್ಪ ಕಾಯವನೆ ಮಿಥ್ಯೆಯೆಂದರಿಯಲು ಆ ಸುಜ್ಞಾನವೆ ಪರಬ್ರಹ್ಮವೆಂದೆಂಬುದೀ ವಚನದ ತಾತ್ಪರ್ಯಾರ್ಥ.

೭೭. ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯ. ನಿರಾಳಲಿಂಗಕ್ಕೆ ಬಯಲೆ ಸೆಜ್ಜೆ ವಾಯುವೇ ಶಿವದಾರ ಬೆಳಗೇ ಸಿಂಹಾಸನ ಅತ್ತಲಿತ್ತ ಚಿತ್ತವ ಹರಿಯಲೀಯದೆ ಮಜ್ಜನಕ್ಕೆರೆದು ಸುಖಿಯಾದೆ ಗುಹೇಶ್ವರಾ.

ಟೀಕುಃ— ಬಿಸಿಲೆಂದರೆ ಸುಜ್ಞಾನ ಪ್ರಕಾಶ. ಆ ಸುಜ್ಞಾನ ಪ್ರಕಾಶವೆಂಬ ಗುರುವಿಂಗೆ ನೆಳಲೆಂಬ ಶಬ್ದವನುಳ್ಳ ಸುಶಾಂತನೆಂಬ ಶಿಷ್ಯನೆಂಬು

ದೀಗ ಬಿಸಿಲೆಂಬ ಗುರುವಿಂಗೆ ನೆಳಲೆಂಬ ಶಿಷ್ಯನೆಂಬ ಶಬ್ದಕ್ಕರ್ಥ. ಇಂತಪ್ಪ ಸುಜ್ಞಾನ ಪ್ರಕಾಶ ಗುರುವಿಂಗು ಆ ಪರಮ ಶಾಂತನೆಂಬ ಶಿಷ್ಯಂಗು ಭೇದವೇನಂದರೆ ಅಲ್ಲಿ ಸದ್ಭಾವವೆ ಛಾಯಾಮಾತ್ರವಾಗಿಪ್ಪುದಾಗಿ ಆ ಸದ್ಭಾವಕ್ಕೆ ಸುಜ್ಞಾನ ಕರ್ತೃವಾದ ಕಾರಣ ಇಂತು ಗುರುಶಿಷ್ಯ ಸಂಬಂಧವಾಗಿತ್ತು. ಇಂತಪ್ಪ ಸದ್ಭಾವ ಶಿಷ್ಯಂಗೆ ಸುಜ್ಞಾನವೆಂಬ ಗುರು ನಿರ್ವಯಲೆಂಬ ಲಿಂಗವ ಸಂಬಂಧವ ಮಾಡಿ ನಿರ್ಲೇಪಾಂಗವೆಂಬ ಸೆಜ್ಜೆಯುಲ್ಲಿಯು ಸ್ವಾನುಭಾವವೆಂಬ ಶಿವದಾರದಲ್ಲಿ ಧರಿಸಿಕೊಂಡನೆಂಬುದೀಗ ನಿರಾಳವೆಂಬ ಲಿಂಗಕ್ಕೆ ಬಯಲೇ ಸೆಜ್ಜೆ ವಾಯುವೇ ಶಿವದಾರವೆಂಬ ಶಬ್ದಕ್ಕರ್ಥ. ಆ ಲಿಂಗಕ್ಕೆ ಮಹಾಪ್ರಕಾಶವೇ ಸಿಂಹಾಸನವಾಗಿ ಸ್ವಸ್ಥನಾದ ಬಳಿಕ ಚಿತ್ತ ಸಮಾಧಾನದಲ್ಲಿ ಲೀನವಾಗಿರಲು ಅದೇ ಲಿಂಗಾರ್ಚನೆ ಎಂಬುದೀಗ ಬೆಳಗೆ ಸಿಂಹಾಸನ ಅತ್ತಲಿತ್ತ ಚಿತ್ತವ ಹರಿಯಲೀಯದೆ ಮಜ್ಜನಕ್ಕೆರದು ಸುಖಿಯಾದೆನೆಂಬ ಶಬ್ದಕ್ಕರ್ಥ.

೭೮. ಕರಣಾದಿ ಗುಣಂಗಳಳಿದು ನವಚಕ್ರಂಗಳು ಭಿನ್ನವಾದ ಬಳಿಕ ಇನ್ನೇನು ಇನ್ನೇನು? ಪುಣ್ಯವಿಲ್ಲ ಪಾಪವಿಲ್ಲ. ಇನ್ನೇನು ಇನ್ನೇನು? ಸ್ವರ್ಗವಿಲ್ಲ ನರಕವಿಲ್ಲ. ಇನ್ನೇನು ಇನ್ನೇನು? ಗುಹೇಶ್ವರನೆಂಬ ಲಿಂಗವೇಧಿಸಿ ಸುಖಿಯಾದ ಬಳಿಕ ಇನ್ನೇನು ಇನ್ನೇನು?

ಟೀಕು:— ಅಂತಃಕರಣಂಗಳ ವಿಕಾರವಳಿದು ಬಹಿರಂಗದ ಪ್ರಪಂಚವೆಲ್ಲವು ಅಡಗಿ ನವನಾಳಂಗಳೆಲ್ಲವು ಏಕಮುಖವಾಗಿ ಮಹಾಜ್ಞಾನ ಕಂದೆರವಾದ ಶರಣನು ಪುಣ್ಯ ಪಾಪ ಸ್ವರ್ಗ ನರಕವೆಂಬ ಚತುರ್ವಿಧವನು ಅರಿಯದೆ ಪರಮ ಸುಖಿಯಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ.

೭೯. ಪೃಥ್ವಿಯ ನತಿಗಳೆದ ಸ್ಥಾವರಂಗಳಿಲ್ಲ. ಉದಕವನತಿಗಳೆದ ತೀರ್ಥಯಾತ್ರೆಗಳಿಲ್ಲ. ಅಗ್ನಿಯನತಿಗಳೆದ ಹೋಮಸಮಾಧಿಗಳಿಲ್ಲ. ವಾಯುವನತಿಗಳೆದ ನೇಮನಿತ್ಯಗಳಿಲ್ಲ. ಆಕಾಶವನತಿಗಳೆದ ಧ್ಯಾನಮೌನಂಗಳಿಲ್ಲ. ಗುಹೇಶ್ವರನೆಂದರಿವಂಗೆ ಇನ್ನಾವಂಗವೂ ಇಲ್ಲ.

ಟೀಕು:— ಅಂಗದ ಮೇಲೆ ಲಿಂಗ ಸಹ್ಪಯುತವಾದ ಬಳಿಕ ಆ ಲಿಂಗವನತಿಗಳೆದು ಸ್ಥಾವರಾದಿಗಳಿಗೆರಗಲಾಗದೆಂಬುದೀಗ ಪೃಥ್ವಿಯನತಿಗಳೆದ ಸ್ಥಾವರಂಗಳಿಲ್ಲೆಂಬ ಶಬ್ದಕ್ಕರ್ಥ. ಆ ಲಿಂಗ ಎಡೆಗೊಂಡಲ್ಲಿ ಪರಮಾನಂದ ರಸ ತನ್ನೊಳಗೆ ಇರುತ್ತಿರಲು ಆ ಪರಮಾನಂದ ಜಲವನತಿ

ಗಳೆದು ತೀರ್ಥಯಾತ್ರೆಯ ಮಾಡಲಾಗದೆಂಬುದೀಗ ಉದಕವನತಿಗಳೆದ ತೀರ್ಥಯಾತ್ರೆಗಳಿಲ್ಲವೆಂಬ ಶಬ್ದಕ್ಕರ್ಥ. ಆ ಲಿಂಗವೆಡೆಗೊಂಡ ಸಂಬಂಧದಿಂ ಜ್ಞಾನಾಗ್ನಿ ತನ್ನೊಳಗಿದ್ದುದನರಿಯದೆ ಹೊರಗೆ ಹೋಮ ಸಮಾಧಿಗಳ ಮಾಡಲಾಗದೆಂಬುದೀಗ ಅಗ್ನಿಯನತಿಗಳೆದ ಹೋಮಸಮಾಧಿಗಳಿಲ್ಲವೆಂಬ ಶಬ್ದಕ್ಕರ್ಥ. ಆ ಲಿಂಗವೆಡೆಗೊಂಡು ಪ್ರಾಣಲಿಂಗ ಸಂಬಂಧ ತನ್ನಲ್ಲಿ ಇರುತ್ತಿರಲು ಅದನರಿಯದೆ ಭಿನ್ನವಾದ ನಿತ್ಯನೇಮಂಗಳ ಮಾಡಲಾಗದೆಂಬುದೀಗ ವಾಯುವನತಿಗಳೆದ ನಿತ್ಯನೇಮಂಗಳಿಲ್ಲವೆಂಬ ಶಬ್ದಕ್ಕರ್ಥ. ಆ ಲಿಂಗವೆಡೆಗೊಂಡು ಮಹಾಜ್ಞಾನ ಕಣ್ದೆರವಾದ ಬಳಿಕ ಧ್ಯಾನ ಮೌನಂಗಳ ಹಿಡಿಯಲಾಗದೆಂಬುದೀಗ ಆಕಾಶವನತಿಗಳೆದ ಧ್ಯಾನ ಮೌನಂಗಳಿಲ್ಲನೆಂಬ ಶಬ್ದಕ್ಕರ್ಥ. ಲಿಂಗವನೇ ಅರಿದು ಲಿಂಗವಾದ ಶರಣಂಗೆ ಮತ್ತೆ ಲಿಂಗವೆಂದರಿಯ ತೆರಹಿಲ್ಲವೆಂಬುದೀಗ ಗುಹೇಶ್ವರನೆಂದರಿದಂಗೆ ಇನ್ನಾವಾಗಲು ಇಲ್ಲವೆಂಬ ಶಬ್ದಕ್ಕರ್ಥ.

೮೦. ಪೃಥ್ವೀ ಜಡನೆಂದರಿದಂಗೆ ಸ್ಥಾವರಾದಿಗಳಲ್ಲಿ ಎರಗಲೇಕೆ? ಅಪ್ಪು ಜಡನೆಂದು ಅರಿದವಂಗೆ ತೀರ್ಥಸ್ಥಾನಂಗಳಲ್ಲಿ ಅತಿಶಯವೇಕಯ್ಯಾ? ತೇಜ ಜಡನೆಂದರಿದವಂಗೆ ಹೋಮಸಮಾಧಿಗಳೇಕಯ್ಯಾ? ವಾಯು ಜಡನೆಂದರಿದವಂಗೆ ಧ್ಯಾನಮೌನಂಗಳ ಹಿಡಿಯಲೇಕಯ್ಯಾ? ಆಕಾಶ ಜಡನೆಂದರಿದವಂಗೆ ಮಂತ್ರರೂಢಿಯೇಕಯ್ಯ? ಇನಿತು ಜಡನೆಂದರಿದವಂಗೆ ವಿಧಿಕಿಂಕರತೆ ಇಲ್ಲಯ್ಯಾ ಗುಹೇಶ್ವರನೆಂಬ ನಿಜವು ಇವು ತಾನೆಂದರಿದ ಮಹಾತ್ಮಂಗೆ.

ಟೀಕು:— ಪಂಚಭೂತಂಗಳನು ಜಡವೆಂದು ವಿಸರ್ಜಿಸಿದ ಶರಣನು ಸ್ಥಾವರಂಗಳಿಗೆ ಎರಗಲಿಲ್ಲ ತೀರ್ಥಸ್ಥಾನಂಗಳಿಗೆ ಹೋಗಲಿಲ್ಲ ಹೋಮ ಸಮಾಧಿಯ ಮಾಡಲಿಲ್ಲ ನಿತ್ಯನೇಮವ್ರತಂಗಳ ಹಿಡಿಯಲಿಲ್ಲ ಧ್ಯಾನಮೌನ ಮಂತ್ರಂಗಳ ಜಪಿಸಲಿಲ್ಲ. ಅದೇನುಕಾರಣವೆಂದರೆ ಆ ಶರಣನೇ ಸರ್ವಾಂಗ ಲಿಂಗ ಸುಖಿಯಾದಕಾರಣವೆಂಬುದೀ ವಚನದ ತಾತ್ಪರ್ಯಾರ್ಥ.

೮೧. ಬಂದ ಬಟ್ಟೆಯ ನಿಂದು ನೋಡಲೊಲ್ಲೆ. ಕಂದ ಕಂಪ ಅದೇನು ಸೋಜಿಗವೋ? ಬಿಂದು ಚಂದವಲ್ಲ ಬಂದಪರಿಯನು ಗುಹೇಶ್ವರ ಬಲ್ಲ ಕಂದಾ.

ಟೀಕು:— ಸುಜ್ಞಾನಪ್ರಕಾಶ ಉದಯವಾಗಿ ಲಿಂಗದಲ್ಲಿ ನಿಜವನರಿದು ಶರಣನು ತನ್ನ ಹಿಂದಣ ಕರ್ಮತ್ರಯ ಸಂಬಂಧ ಶರೀರದ ಗುಣ ಧರ್ಮಕರ್ಮಂಗಳನರಿಯನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

೮೨. ಪೃಥ್ವಿಯುಲೊದಗಿದ ಘಟವು ಪೃಥ್ವಿಯಲ್ಲಡಗಿದರೆ ಆ ಪೃಥ್ವಿಯ ಚರಿತ್ರವೇ ಚರಿತ್ರ ನೋಡಾ! ಅಪ್ಪುವಿನಲೊದಗಿದ ಘಟವು ಅಪ್ಪುವಿನಲಡಗಿದರೆ ಆ ಅಪ್ಪುವಿನ ಚರಿತ್ರವೇ ಚರಿತ್ರ ನೋಡಾ! ಆ ಅಗ್ನಿಯುಲೊದಗಿದ ಘಟವು ಅಗ್ನಿಯುಲಡಗಿದರೆ ಆ ಅಗ್ನಿಯು ಚರಿತ್ರವೇ ಚರಿತ್ರ ನೋಡಾ! ವಾಯುವಿನಲೊದಗಿದ ಘಟವು ವಾಯುವಿನಲಡಗಿದರೆ ಆ ವಾಯುವಿನ ಚರಿತ್ರವೇ ಚರಿತ್ರವು ನೋಡಾ! ಆಕಾಶದಲೊದಗಿದ ಘಟವು ಆಕಾಶದಲಡಗಿದರ ಆ ಆಕಾಶದ ಚರಿತ್ರವೇ ಚರಿತ್ರ ನೋಡಾ! ಗುಹೇಶ್ವರನೆಂಬ ಲಿಂಗದಲೊದಗಿದ ಘಟವು ಲಿಂಗದಲ್ಲಿ ಅಡಗಿದರೆ ಆ ಲಿಂಗದ ಚರಿತ್ರವೇ ಚರಿತ್ರ ನೋಡಾ!

ಟೀಕು:—ಪೃಥ್ವಿಯ ಸೊಮ್ಮಿಂದಾದ ಶರೀರ ಸುಚಿತ್ತವೆಂಬ ಪೃಥ್ವಿಯುಲಡಗಿದ ಬಳಿಕ ಆ ಸುಚಿತ್ತದ ಚರಿತ್ರವೆಯಾಗಿಪ್ಪುದೆಂಬುದೀಗ ಪೃಥ್ವಿಯುಲೊವಗಿದ ಘಟವು ಪೃಥ್ವಿಯುಲಡಗಿದರೆ ಆ ಪೃಥ್ವಿಯ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ. ಅಪ್ಪುವಿನ ಸೊಮ್ಮಿಂದಾದ ಸಂಸಾರರಸವು ಸುಬುದ್ಧಿಯೆಂಬ ಶಿವಾನಂದವೆಂಬ ಜಲದಲ್ಲಡಗಿದ ಬಳಿಕ ಆ ಸುಬುದ್ಧಿಯ ಚರಿತ್ರವೇಯಾಗಿಪ್ಪುದೆಂಬುದೀಗ ಅಪ್ಪುವಿನಲೊವಗಿದ ಘಟವು ಅಪ್ಪುವಿನಲಡಗಿವರೆ ಆ ಅಪ್ಪುವಿನ ಚರಿತ್ರವೇ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ. ಅಗ್ನಿಯು ಸೊಮ್ಮಿಂದಾವ ಸ್ವರೂಪ ಜ್ಞಾನಾಗ್ನಿಯುಲ್ಲಿ ದಹನವಾದ ಬಳಿಕ ಆ ಜ್ಞಾನಾಗ್ನಿಯ ಚರಿತ್ರವೆಯಾಗಿಪ್ಪುದೆಂಬುದೀಗ ಅಗ್ನಿಯುಲೊವಗಿದ ಘಟವು ಅಗ್ನಿಯುಲಡಗಿದರೆ ಆ ಅಗ್ನಿಯು ಚರಿತ್ರವೇ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ. ವಾಯುವಿನಿಂದಾದ ಪಂಚಪ್ರಾಣವಾಯುಗಳು ಲಿಂಗಪ್ರಾಣದಲ್ಲಿ ಲೀಯವಾದ ಬಳಿಕ ಲಿಂಗಪ್ರಾಣಚೇಷ್ಟೆಯಾಗಿಪ್ಪುದೆಂಬುದೀಗ ವಾಯುವಿನಲೊದಗಿದ ಘಟವು ವಾಯುವಿನಲಡಗಿದರೆ ಆ ವಾಯುವಿನ ಚರಿತ್ರವೇ ಆ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ. ಆಕಾಶದ ಸೊಮ್ಮಿಂದಾದ ಲಜ್ಜಾಭಿಮಾನಶಬ್ದಾಡಂಬರಗಳು ಬಿಂದ್ವಾಕಾಶದಲ್ಲಿ ಲೀಯವಾದ ಬಳಿಕ ಆ ಬಿಂದ್ವಾಕಾಶದ ಚರಿತ್ರವೆಯಾಗಿಪ್ಪುದೆಂಬುದೀಗ ಆಕಾಶದಲೊದಗಿದ ಘಟವು ಆಕಾಶದಲಡಗಿದರೆ ಆ ಆಕಾಶದ ಚರಿತ್ರವೇ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ. ಇಂತು ಲಿಂಗವಿಡಿದು ಲಿಂಗಶರೀರವಾದ ಶರಣನ ನಿಲವು ಲಿಂಗದಲ್ಲಿ ಲೀಯವಾದ ಬಳಿಕ ಆ ಲಿಂಗದ ಚರಿತ್ರವೆಯಾಗಿಪ್ಪುದೆಂಬುದೀಗ ಗುಹೇಶ್ವರನೆಂಬ

ಲಿಂಗವಲೊದಗಿದ ಘಟವು ಲಿಂಗಾಂಗದಲ್ಲಡಗಿದರೆ ಆ ಲಿಂಗದ ಚರಿತ್ರವೇ ಚರಿತ್ರ ನೋಡಾ ಎಂಬ ಶಬ್ದಕ್ಕರ್ಥ.

೮೩. ಸಕಲ ಭುವನಾದಿ ಭುವನಂಗಳಿಗೆ ತಂದೆ ಸಕಲ ದೇವಾದಿ ದೇವರ್ಕಳಿಗೆ ತಂದೆ ಭವಭವದಲ್ಲಿ ನೀನೆನ್ನ ತಂದೆ ಗುಹೇಶ್ವರಲಿಂಗ ನಿರಾಳದಲ್ಲಿ ನೀನೆನ್ನತಂದೆ.

ಟೀಕು:— ಶಿವಜ್ಞಾನೋದಯವಾದ ಶರಣನು ಸಕಲ ಜಗದೊಳಗೆ ದೇವ ದಾನವ ಮಾನವ ಚರಾಚರಾದಿಯಾದ ಚೌರ್‍ಯಾಂಸಿಲಕ್ಷ ಜೀವರಾಶಿಗಳೊಳಗೆ ಎಲ್ಲಿಯೂ ಶಿವಾಜ್ಞೆಯಿಂದ ಬಂದು ಕಡೆಯಲ್ಲಿ ನಿಜ ಶಿವತತ್ವದಲ್ಲಿ ನಿಂದೆನೆಂದು ಅದು ಸುಖಿಯಾಗಿರುತ್ತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ.

೮೪. ಬಟ್ಟೆಗೊಂಡು ಹೋಗುತ್ತೊಂದು ಕೊಟ್ಟು ಹೋದರೆಮ್ಮವರು. ಎಲ್ಲಿಯದು ಲಿಂಗ, ಎಲ್ಲಿಯದು ಜಂಗಮ, ಎಲ್ಲಿಯದು ಪ್ರಸಾದ, ಎಲ್ಲಿಯದು ಪಾದೋದಕವಯ್ಯಾ? ಅಲ್ಲದವರೊಡನಾಡಿ ಎಲ್ಲರು ಮುಂದುಗೆಟ್ಟರಯ್ಯಾ! ಆನು ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ!

ಟೀಕು:—ಮುಖವರಿಯದ ಶಿಷ್ಯಂಗೆ ಮುಖವರಿಯದ ಗುರು ಉದ್ದೇಶದಿಂದ ಅಂಗಕ್ಕೆ ಒಂದು ಲಿಂಗವ ತೋರಿ ಹೋದರೆ ಆ ಕೊಂಡ ಶಿಷ್ಯನು ಗುರು ಲಿಂಗ ಜಂಗಮ ಪ್ರಸಾದ ಪಾದೋದಕವನರಿಯದೆ ಕೆಡುತ್ತಿರ್ದನು. ಇದ ನಿವೃತ್ತಿಯ ಮಾಡಿ ತಚ್ಛಿಷ್ಯನು ಗುರುವಿನ ಕೈಯ್ಯ ಲುಪದೇಶವ ಹಡೆಯಲು ಆ ಲಿಂಗದಲ್ಲಿ ಮನವಳಿದು ಆ ಗುರುವಿನಲ್ಲಿ ತನುವಳಿದು ನಿರ್ಬಯಲಲ್ಲಿ ನಿಂದನೆಂಬುದೀಗ ವಚನದ ತಾತ್ಪರ್ಯಾರ್ಥ

೮೫. ಆದಿಯ ಶರಣನ ಮದುವೆಯ ಮಾಡಲು ಯುಗಜುಗವರೆಲ್ಲ ನಿಬ್ಬಣಹೋದರು. ಹೋದ ನಿಬ್ಬಣಿಗರು ಮರುಳರು. ಮದವಣಿಗನ ಸುದ್ದಿಯನರಿಯಬಾರದು. ಹಂದರವಳಿಯದು. ಹಸೆ ಮುನ್ನ ಉಡುಗದು. ತಂದ ಬಂದವರೆಲ್ಲ ಮಿಂದುಂಡು ಹೋದರು. ಇವರಂತವ ನರಿಯದೆ ಜಗವೆಲ್ಲ ಬರಿದಾಯಿತ್ತು. ಗುಹೇಶ್ವರನೆಂಬ ಶಬ್ದವನೊಳಕೊಂಡ ಮಹಾಂತಬಯಲು.

ಟೀಕು:— ಆದಿಯಂಬುದು ಸುಜ್ಞಾನೋದಯ. ಆ ಸುಜ್ಞಾನೋದಯ ಶರಣಸತಿಗೂ ಮಹಾಲಿಂಗವೆಂಬ ಪುರುಷಂಗೂ ವಿವಾಹವೆಂಬ ಸಮರಸ ಸಂಗವ ಮಾಡುತ್ತಿರಲು ಯುಗಜುಗವಲುಳ್ಳ ಸಮಸ್ತ ಪ್ರಾಣಿ

ಗಳೆಲ್ಲರು ತನ್ನ ಸ್ವಯಾತ್ಮ ಬಂಧುಗಳಾಗಿ ಸಹಜ ಸಂಗಿಗಳಾದರೆಂಬು ದೀಗ ಆದಿಯ ಶರಣನ ಮದುಯ ಮಾಡಲು ಯುಗಜುಗದವರೆಲ್ಲ ನಿಬ್ಬ ಣಹೋದರೆಂಬ ಶಬ್ದಕ್ಕರ್ಥ. ಅಂತು ಶರಣಸತಿಗೂ ಲಿಂಗವೆಂಬ ಪತಿಗೂ ಸಮರಸ ಸಂಗ ಸಂಬಂಧವಾಗಲು ಆ ಲಿಂಗವನಂಥದಿಂಥದೆಂದು ಅರಿ ಯುಬಾರದೆಂಬುದೀಗ ಮದವಣಿಗನ ಸುದ್ದಿಯನರಿಯಬಾರದೆಂಬ ಶಬ್ದ ಕ್ಕರ್ಥ. ಇಂತಾಗಲು ಭೂಮಿಯೆಂಬ ಹಸೆ ಆಕಾಶವೆಂಬ ಹಂದರ ಈ ಎರಡು ಅಳಿಯದ ಮುನ್ನವೇ ಆ ವಿಶ್ವವೆಲ್ಲವು ಸಂಸಾರಸಾಗರದಲ್ಲಿಮಿಂದು ಪ್ರಾರಬ್ಧ ಕರ್ಮ ಭೋಗವನು ಅನುಭವಿಸಿ ಹೋಗುತಿದ್ದರೆಂಬುದೀಗ ಬಂದ ಬಂದವರೆಲ್ಲ ಮಿಂದುಂಡು ಹೋದರೆಂಬ ಶಬ್ದಕ್ಕರ್ಥ. ಇಂತು ಲೋಕವೆಲ್ಲವು ನಿಜವನರಿಯದೆ ಹೋಗುತ್ತಿಹರಲ್ಲಿ ಆ ಬಗೆಯ ತಾ ಹೊ ದ್ದದೆ ನಿರ್ಮಲ ಸಮಾಧಿಯಲ್ಲಿ ನಿಂದ ಶರಣನೆ ಮಹಂತನೆಂಬುದೀಗ ಇದರಂತವನರಿಯದೆ ಜಗವೆಲ್ಲ ಬರಿದಾಯಿತ್ತು, ಗುಹೇಶ್ವರನೆಂಬ ಶಬ್ದ ವನೊಳಕೊಂಡ ಮಹಂತ ಬಯಲು ಎಂಬ ಶಬ್ದಕ್ಕರ್ಥ.

೮೬. ಮರದೊಳಗಣ ಕಿಚ್ಚು ಮರನ ಸುಟ್ಟಂತಾದೆನಯ್ಯಾ. ಬ ಯಲ ಗಾಳಿಯು ಪರಿಮಳ ನಾಸಿಕವನಪ್ಪಿದಂತಾದೆನಯ್ಯಾ. ಕರುವಿನ ಬೊಂಬೆಯನುರಿಕೊಂಡಂತಾದೆನಯ್ಯಾ. ಗುಹೇಶ್ವರನೆಂಬ ಲಿಂಗವ ಪೂಜಿಸಿ ಭವಗೆಟ್ಟೆನಯ್ಯಾ.

ಟೀಕು:—ಕಾಷ್ಠದೊಳಗೆ ಅಂತರ್ಗತವಾಗಿದ್ದ ಅಗ್ನಿ ಬಹಿರ್ಗತವಾಗಿ ಆ ಮರನ ದಹಿಸಿತೆಂಬಂತೆ ಗಾಳಿಯೂ ಗಂಧವೂ ಕೂಡಿ ನಾಸಿಕವ ಸೋಂಕಿದಂತೆ ಕರುವಿನ ಪುತ್ತಳಿಯ ನುರಿಯುಂಡು ಕರಗೊಂಡು ನಿಂದ ನಿಜರೂಪಿನಂತೆ ಸುಜ್ಞಾನಲಿಂಗವ ಮುಟ್ಟಿ ಪೂಜಿಸಿದ ಶರಣ ಅವಿರಳ ಲಿಂಗ ಸಂಬಂಧಿಯಾಗಿ ಭವವನಳಿದು ನಿರ್ಭವವಾದನೆಂಬುದೀಗ ಈ ವಚ ನದ ತಾತ್ಪರ್ಯಾರ್ಥ.

೮೭. ಐವರ ಸಂಗದಿಂದ ಬಂದೆ ನೋಡಯ್ಯಾ! ಐವರ ಸಂಗ ದಿಂದ ನಿಂದೆ ನೋಡಯ್ಯಾ! ಐವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋ ದರು. ನಾನೊಬ್ಬ ನಿಸ್ಸಂಗಿಯಾಗಿ ಉಳಿದೆನಲ್ಲಾ! ಗುಹೇಶ್ವರನೆಂಬ ನಿತ್ಯ ನಿರಂಜನ ರೂಹಿಲ್ಲದ ಘನವ ಕಂಡೆನಯ್ಯಾ!

ಟೀಕು:— ಐವರೆಂದರೆ ಪಂಚಭೂತಂಗಳು ಅಂತಪ್ಪ ಪಂಚಭೂ ತಂಗಳ ಸಂಗದಲ್ಲಿ ಉದಯಿಸಿದೆನೆಂಬುದೀಗ ಐವರ ಸಂಗದಲ್ಲಿ ಬಂದೆ

ನೋಡಯ್ಯಾ! ಎಂಬ ಶಬ್ದಕ್ಕರ್ಥ. ಇಂತು ಉದಯವಾದಾತನು ಪಂಚೇಂದ್ರಿಯ ಸಂಗದಲ್ಲಿ ಇದ್ದನೆಂಬುದೀಗ ಐವರ ಸಂಗದಲ್ಲಿ ನಿಂದೆ ನೋಡಯ್ಯಾ ಎಂಬ ಶಬ್ದಕ್ಕರ್ಥ. ಅಂತಪ್ಪ ಪಿಂಡದಲ್ಲಿ ದೇವಂಗೆ ಜ್ಞಾನೋದಯವಾಗಿ ಶಿವಭಾವಸಂಪನ್ನನಾಗಲು ಆ ಪಂಚಭೂತಂಗಳು ತಮ್ಮಲ್ಲಿ ತಾವೇ ನಷ್ಟವನೆಯ್ದುವನೆಂಬುದೀಗ ಐವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋದರೆಂಬ ಶಬ್ದಕ್ಕರ್ಥ. ಇಂತು ಪಂಚಭೂತ ಪಿಂಡವಳಿದು ಸರ್ವಾಂಗ ಲಿಂಗವಾಗಿ ತಾನಲ್ಲದೆ ಮತ್ತಾರು ತನಗಿಲ್ಲದೆ ನಿಸ್ಸಂಗಿಯಾಗಿ ಮಹಾಘನವೇದ್ಯವಾಯಿತ್ತೆಂಬುದೀಗ ನಾನೊಬ್ಬನೆ ನಿಸ್ಸಂಗಿಯಾಗಿ ಉಳಿದೆನಲ್ಲಾ, ಗುಹೇಶ್ವರನೆಂಬ ನಿತ್ಯ ನಿರಂಜನ ರೂಹಿಲ್ಲದ ಘನವ ಕಂಡೆನೆಂಬ ಶಬ್ದಕ್ಕರ್ಥ.

೮೮. ಸಟೆ ದಿಟವಾದಲ್ಲಿ ಮುಟ್ಟಿಯೂ ಮುಟ್ಟದೆ ಇರಬೇಕು. ಅತಿರತಿಗತಿಮತಿಗೆ ಮಂದವಾಯಿತ್ತು ಎಂಟು ಹಿಟ್ಟು ಪಂಚಮಠ ಉಂಡು ಧರೆಯ ಮೇಲೆ ನರಸುರಾದಿಗಳೆಲ್ಲ ಸಂಭಾರವ ಹೊತ್ತು ಬಂದೈದಾರೆ. ಹಿಟ್ಟು ನಷ್ಟ ಮಠ ಹಾಳು. ಊರಿಗುಪಟಳ. ಘನ ಪಂಚಮಠವ ಸುಟ್ಟು ಗುಹೇಶ್ವರ ಬಿದಿಗರುವಾದ.

ಟೀಕು:—ಮಿಥ್ಯೆಯೆಂಬ ಪ್ರಪಂಚು ತನ್ನಿಂದ ಅನ್ಯವಾಗಿ ಕಣ್ಣಮುಂದೆ ತೋರುತ್ತಿರಲು ಆ ಮಿಥ್ಯೆಯನು ಮುಟ್ಟಿಯೂ ಮುಟ್ಟದೆ ಇರಬೇಕೆಂಬುದೀಗ ಸಟೆ ದಿಟವಾದಲ್ಲಿ ಮುಟ್ಟಿ ಮುಟ್ಟದೆ ಇರಬೇಕೆಂಬ ಶಬ್ದಕ್ಕರ್ಥ. ಆ ಮಿಥ್ಯೆಯಲ್ಲಿ ಅತಿರತಿ ಸುಖವ ಗಮಿಸಿದರೆ ಅರಿವಿನ ಮತಿ ಮಂದವಾಯಿತ್ತೆಂಬುದೀಗ ಅತಿರತಿಗತಿಮತಿಗೆ ಮಂದವಾಯಿತ್ತೆಂಬ ಶಬ್ದಕ್ಕರ್ಥ. ಅಂತು ಮತಿ ಮಂದವಾದ ಬಳಿಕ ಎಂಟು ಹಿಟ್ಟೆಂದರೆ ಅಷ್ಟ ಮದಂಗಳು ಪಂಚ ಮಠವೆಂದರೆ ಪಂಚ ಭೂತಗ್ರಾಮಂಗಳು ಅಂತಪ್ಪ ಅಷ್ಟಮದ ಪಂಚಭೂತ ದೇಹಮಂ ಧರಿಸಿಕೊಂಡು ನರ ಸುರಾದಿಗಳ ಹಾಂಗೆ ಇಹೆನೆಂಬುದೀಗ ಎಂಟು ಹಿಟ್ಟು ಪಂಚಮಠ ಉಂಟು ಧರೆಯೊಳಗೆ ನರಸುರಾದಿಗಳೆಲ್ಲ ಸಂಭಾರವ ಹೊತ್ತುಕೊಂಡು ಐದಾರೆ ಎಂಬ ಶಬ್ದಕ್ಕರ್ಥ. ಈ ಭೇದವನರಿದು ಸುಜ್ಞಾನಿಯಾದರೆ ಅಷ್ಟಮದ ಪಂಚಭೂತಂಗಳು ನಿವೃತ್ತಿಯಾಗಿ ಕರಣಂಗಳೆಲ್ಲವು ಗತವಾಗಿ ಸರ್ವಾಂಗವು ಮಹಾಜ್ಞಾನಾಗ್ನಿಯಲ್ಲಿ ಅಳಿದು ನಿರ್ವಯಲಾದವೆಂಬುದೀಗ ಹಿಟ್ಟು ನಷ್ಟ ಮಠ ಹಾಳು ಊರಿಗುಪಟಳ ಘನಮಠವ ಸುಟ್ಟು ಗುಹೇಶ್ವರ ಬಿದಿಗರುವಾದನೆಂಬ ಶಬ್ದಕ್ಕರ್ಥ.

೮೯. ಮತಿಯೊಳಗೊಂದು ದುರ್ಮತಿ ಹುಟ್ಟಿದ ಬಳಿಕ ಮತಿಯು ಮರವೆಯೊಳಕೊಂಡು ಭವಕ್ಕೆ ಗುರಿಯ ಮಾಡಿ ಕೆಡಹಿತು ನೋಡಾ! ಅಖಂಡಿತವ ತಂದು ಮತಿಯೊಳಗೆ ವೇಧಿಸಲು ಗತಿಗೆಟ್ಟು ನಿಂದಿತ್ತು ಗುಹೇಶ್ವರಾ!

ಟೀಕು:—ತನ್ನ ಅರಿವಿನೊಳಗೆ ಅಜ್ಞಾನವೆಡೆಗೊಳಲು ಭವಕ್ಕೆ ಭಾಜನವಪ್ಪರು. ಆ ಅಜ್ಞಾನ ನಿವೃತ್ತಿಮಾಡಿ ಆ ಪರಿಪೂರ್ಣಜ್ಞಾನವನಾ ಮತಿಯೊಳಗೆ ವೇಧಿಸಿಕೊಳಲು ಆ ಶರಣ ನಿರ್ಗಮನಿಯಾಗಿ ನಿಜದಲ್ಲಿ ನಿಂದನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

೯೦. ತಲೆಯಿಲ್ಲದ ಅಟ್ಟೆ ಜಗವ ನುಂಗಿತ್ತು, ಅಟ್ಟೆ ಇಲ್ಲದ ತಲೆ ಆಕಾಶವ ನುಂಗಿತ್ತು. ಅಟ್ಟೆ ಬೇರೆ ತಲೆ ಬೇರಾದರೆ ಮನ ಸಂಚಲಿಸುತ್ತಿದ್ದಿತ್ತು. ಅಟ್ಟೆಯನು ತಲೆಯನು ಬಯಲ ನುಂಗಿದೊಡೆ ಆನು ನುಂಗಿದೆನು ಗುಹೇಶ್ವರನಿಲ್ಲದಂತೆ.

ಟೀಕು:—ತಲೆ ಎಂದರೆ ಜ್ಞಾನ. ಅಟ್ಟೆ ಎಂದರೆ ಅಜ್ಞಾನ. ಅಂತಪ್ಪ ಅಜ್ಞಾನ ಲೋಕವೆಲ್ಲ ನುಂಗಿತೆಂಬುದೀಗ ತಲೆಯಿಲ್ಲದ ಅಟ್ಟೆ ಜಗವ ನುಂಗಿತೆಂಬ ಶಬ್ದಕ್ಕರ್ಥ. ಅಜ್ಞಾನವಳಿದು ಶಿವಜ್ಞಾನ ಆತ್ಮನೆಂಬ ಆಕಾಶವನವಗ್ರಹಿಸಿಕೊಂಡು ಇದ್ದಿತ್ತೆಂಬುದೀಗ ಅಟ್ಟೆ ಇಲ್ಲದ ತಲೆ ಆಕಾಶವ ನುಂಗಿತ್ತೆಂಬ ಶಬ್ದಕ್ಕರ್ಥ. ಇಂತಪ್ಪ ಅಜ್ಞಾನವನು ಬೇರ್ಪಡಿಸಿ ನೋಡುತ್ತಿರಲು ಅಲ್ಲಿ ಮನವು ನಿಶ್ಚಲವನೆಯ್ದುತ್ತಿದ್ದಿತೆಂಬುದೀಗ ಅಟ್ಟೆ ಬೇರೆ ತಲೆ ಬೇರಾದರೆ ಮನ ಸಂಚಲಿಸುತ್ತಿದ್ದಿತ್ತು ಎಂಬ ಶಬ್ದಕ್ಕರ್ಥ. ಆ ಅಜ್ಞಾನ ಸುಜ್ಞಾನಂಗಳೆರಡನು ನಿವೃತ್ತಿ ಮಾಡಿ ನಿಜ ಶಿವತತ್ವ ಸ್ವರೂಪ ವರಿಯುತ್ತಿರಲು ಅರಿವು ತನ್ನೊಳಗೆ ಲೀಯವಾಯಿತೆಂಬುದೀಗ ಅಟ್ಟೆಯನು ತಲೆಯನು ಬಯಲ ನುಂಗಿದರೆ ಆನು ನುಂಗಿದೆನು ಗುಹೇಶ್ವರನಿಲ್ಲದಂತೆ ಎಂಬ ಶಬ್ದಕ್ಕರ್ಥ.

೯೧. ಅಹಂಕಾರವನೆ ಮರೆದು ದೇಹಗುಣಂಗಳನೆ ಜರಿದು ಇಹ ಪರವೇ ತಾನೆಂದರಿದ ಕಾರಣ ಸೋಹಂ ಭಾವ ಸ್ಥಿರವಾಯಿತ್ತು. ಸಹಜ ಉದಯದ ನಿಲವಿಂಗೆ ಮಹಾಘನಲಿಂಗದ ಬೆಳಗು ಸ್ಥಾಯಕವಾದ ಕಾರಣ ಗುಹೇಶ್ವರಾ ನಿಮ್ಮ ಶರಣನುಪಮಾತೀತನು.

ಟೀಕು:— ದೇಹಂಕಾರವರಿತು ಇಹಲೋಕ ಪರಲೋಕವೆಂಬೆರಡು ಹಿಂಗದ ಕಾರಣ ತನ್ನ ನಿಜ ತನಗೆ ಅರಿಯ ಬಂದು ಶಿವೋಹಂ ಭಾವ ಸ್ವಸ್ಥನಾಗಿ ಸಹಜವಳವಟ್ಟು ಮಹಾಘನದಲ್ಲಿ ಸಮರಸವಾಗಿದ್ದನೆಂಬುದೀ ವಚನದ ತಾತ್ಪರ್ಯಾರ್ಥ.

೯೨. ಕಾಯ ಭಿನ್ನವಾಯಿತ್ತೆಂದು ಮುಟ್ಟಿಸುವರು ಲಿಂಗವನು. ಮುಟ್ಟಲಾಗದು ಲಿಂಗವನು. ಮುಟ್ಟಿದಾತ ಮುಂದೆ ಹೋದ. ಮುನ್ನ ಮುಟ್ಟಿದವರೆಲ್ಲ ಉಪಜೀವಿಗಳಾದರು. ಇನ್ನು ಮುಟ್ಟಿದವರಿಗೆ ಗತಿಯುಂಟೇ ಗುಹೇಶ್ವರಾ?

ಟೀಕು:— ಸತ್ತು ಪಾಪಕ್ಕೆ ಹೋದೆಹೆವೆಂದಂಜಿ ಲಿಂಗವ ಧರಿಸಿ ಪೂಜಿಸುವರು. ಸಂಪೂರ್ಣ ಅಂತಪ್ಪವರೆಲ್ಲರು ಅಳಿದು ರುದ್ರಲೋಕದಲ್ಲಿ ಚತುರ್ವಿಧ ಫಲಪದವ ಹಡದು ಉಪಜೀವಿಗಳಾಗಿದ್ದರು. ಇದುಕಾರಣ ಉಪಾಧಿಯಿಂದ ಲಿಂಗವ ಪೂಜಿಸದೆ ಸಹಜ ಲಿಂಗವೇದಿಯಾದರೆ ಆತನೇ ಶರಣನೆಂಬುದೀಗ ಈ ವಚನದ ತಾತ್ಪರ್ಯಾರ್ಥ.

೯೩. ಬಿತ್ತದ ಬೆಳೆಯದ ರಾಶಿಯ ಕಂಡಲ್ಲಿ ಸುಖಿಯಾಗಿ ನಿಂದ ವರಾರೊ? ಇದ ಹೇಳಲು ಬಾರದು. ಕೇಳಲು ಬಾರದು. ಗುಹೇಶ್ವರ! ನಿಮ್ಮ ಶರಣನು ಲಕ್ಷಣವಳಿಯದೆ ರಾಶಿಯನಳಿದನು.

ಟೀಕುಃ-- ಜ್ಞಾನಾಜ್ಞಾನಂಗಳೆರಡು ಇಲ್ಲದ ನಿಜಪದಸುಖದ ಸುಗ್ಗಿಯ ಬೆಳಸಿನ ರಾಸಿಯನು ಆರು ಅರಿಯಬಾರದೆಂಬುದೀಗ ಬಿತ್ತದ ಬೆಳೆಯದ ತುಂಬಿದ ರಾಶಿಯ ಕಂಡಲ್ಲಿ ಸುಖಿಯಾಗಿ ನಿಂದವರಾರೊ, ಎಂಬ ಶಬ್ದ ಕ್ಕರ್ಥ. ಆ ಸುಖವನುಪಮಿಸಿ ನುಡಿಯಬಾರದೆಂಬುದೀಗ ಹೇಳಲು ಬಾರದು ಕೇಳಲು ಬಾರದು ಎಂಬ ಶಬ್ದಕ್ಕರ್ಥ. ಇಂತಪ್ಪ ನಿಜಪದದ ಘನವ ಮಹಾಜ್ಞಾನಿ ಶರಣನು ಅಭೇದ್ಯ ದೃಷ್ಟಿಯಿಂದ ಕಂಡು ತನ್ನ ಸ್ವರೂಪ ಲಕ್ಷಣವಿದ್ದ ಹಾಗೆ ಆ ಘನವ ವೇದಿಸಿಕೊಂಡು ಸುಖಿಯಾದನೆಂಬುದೀಗ ಗುಹೇಶ್ವರಾ ನಿಮ್ಮ ಶರಣ ಲಕ್ಷಣವಳಿಯದೆ ರಾಶಿಯನಳಿದನೆಂಬ ಶಬ್ದ ಕ್ಕರ್ಥ.

೯೪. ಅಂತರಂಗದಲ್ಲಿ ಭವಿಯನೊಳಕೊಂಡು ಬಹಿರಂಗದಲ್ಲಿ ಭಕ್ತಿ ಯನೊಳಕೊಂಡು ಆತ್ಮಸಂಗದಲ್ಲಿ ಪ್ರಸಾದವನೊಳಕೊಂಡು ಇಪ್ಪ ಭಕ್ತರ ಕಾಣೆನಯ್ಯಾ. ನಾನು ಇಂತಪ್ಪ ಲಿಂಗೈಕ್ಯರ ಕಾಣೆನಯ್ಯಾ. ಅಂ ತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಕಳದಲ್ಲಿ ಶರಣರಹರೇ? ತನು ಮನ ಧನ ಕೊಟ್ಟಲ್ಲಿ ಭಕ್ತರಹರೇ? ಉಂಬವರ ಕಂಡು ಕೈಯ ನೀಡಿದರೆ ಪ್ರಸಾದಿಗಳಹರೆ? ಅಂತರಂಗ ಬಹಿರಂಗ ಆತ್ಮ ಸಂಗ ಈ ತ್ರಿವಿಧ ಭೇದವ ಗುಹೇಶ್ವರಾ ನಿಮ್ಮ ಶರಣ ಬಲ್ಲ.

# ಶಿವಾನುಭವ.

(ಮಾಸಿಕವು)



ಸಂಪಾದಕ

ರಾ|| ಸಾ|| ಫ ಗು ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ.

ವಿಜಾಪುರ.

ಸಂಚಿಕೆ ೧೧, ೧೨

ಫೆಬ್ರುವರಿ, ಮತ್ತು ಮಾರ್ಚ.

೧೯೩೧

# ಶಿವಾನುಭವ.

ವರ್ಷ ೫] ಫೆಬ್ರುವರಿ ಮತ್ತು ಮಾರ್ಚ್೧೯೩೧ [ಸಂಚಿಕೆ ೧೧-೧೨

## ಐತಿಹಾಸಿಕ ಟಿಪ್ಪಣೆಗಳು.

ಲೇಖಕ:— ಶಿ. ಚ. ನಂದಿಮಠ. ಎಮ್. ಎ. ಪಿ. ಎಚ್ ಡಿ.

೩

ಲಿಂಗವಂತರಲ್ಲಿ ಈಗ "ಬಸವ" ನೆಂಬ ಹೆಸರುಳ್ಳವರು ಅನೇಕ ಜನರು. ಲಿಂಗವಂತರು ಬಸವಣ್ಣನವರ ತತ್ವಗಳನ್ನು ಆಚರಿಸುವುದರಿಂದಲೂ ಬಸವಣ್ಣನವರಿಗೆ ಧಾರ್ಮಿಕ ಪುರುಷರಲ್ಲಿ ಅಗ್ರಸ್ಥಾನವನ್ನು ಕೊಟ್ಟಿರುವುದರಿಂದಲೂ ಬಸವಣ್ಣನವರ ಸ್ಮಾರಕಕ್ಕಾಗಿ "ಬಸವ" ನೆಂಬಭಿಧಾನವನ್ನು ತಮ್ಮ ಮೊಕ್ಕಳುಗಳಿಗೆ ಇಡುತ್ತ ಬಂದಿರಬಹುದೆಂದು ಬಹುಜನರ ಕಲ್ಪನೆ. ಇದಾದರೂ ಬಲುಮಟ್ಟಿಗೆ ಸರಿಯಾಗಿರಬೇಕು. ಲಿಂಗವಂತರು ಬಸವಣ್ಣನವರಲ್ಲಿದ್ದ ತಮ್ಮ ಪೂಜ್ಯಬುದ್ಧಿಯನ್ನು ವ್ಯಕ್ತಪಡಿಸುವದಕ್ಕಾಗಿ "ಬಸವ" ನೆಂಬ ಹೆಸರನ್ನು ಚಿರಸ್ಥಾಯಿಯಾಗುವಂತೆ ತಮ್ಮ ಮೊಕ್ಕಳು ಮೊಮ್ಮಕ್ಕಳುಗಳಿಗೆ ಇಡುತ್ತಬಂದಿರುವದು ನಿಜ. ಲಿಂಗವಂತರ ಹಳೇ ತಾಡವೋಲೆಯ ಗ್ರಂಥಗಳನ್ನು ತೆಗೆದರೆ ಆರಂಭದಲ್ಲಿ "ಶ್ರೀ ಗುರು ಬಸವಲಿಂಗಾಯನಮಃ" ಎಂಬ ವಾಕ್ಯವು ದೃಷ್ಟಿಗೆ ಬೀಳದೆ ಇರುವದಿಲ್ಲ. ಮೊದಲಿನಿಂದಲೂ ಇಲ್ಲಿಯ ವರೆಗೆ ಲಿಂಗವಂತರಲ್ಲಿ ಬಸವಣ್ಣನವರ ಬಗ್ಗೆ ಅಪಾರನಾದ ಭಕ್ತಿ. "ಬಸವ" ಶಬ್ದವು ಸಂಸ್ಕೃತ "ವೃಷಭ" ಶಬ್ದದ ತದ್ಭವವೆಂಬುದು ಸರ್ವಮಾನ್ಯ. ಆದರೂ ಮನೋವಿಜಯಕಾರನಾದ ಗುರುಬಸವನಂಥವರು ಅದು ಸಂಸ್ಕೃತ "ಪಶುಪ" ಶಬ್ದದಿಂದ ಬಂದಿದೆಯೆಂದು ಸಾಧಿಸಲು ಹವಣಿಸಿರುವುದರ ಮೇಲಿಂದ

ಲಿಂಗವಂತರು ಬಸವಣ್ಣನವರನ್ನು ಶಿವನಂತೆ ತಿಳಿಯುತ್ತಿದ್ದರು. ಮತ್ತು ಈಗಲೂ ತಿಳಿಯುತ್ತಾರೆ. ಆತನು ದ್ವಿತೀಯ ಶಂಭುವೆಂದು ಇನ್ನೂ ನಮ್ಮಲ್ಲಿ ಭಾವನೆಯುದೆ. ಅಂತೇ ನಾವು ಬಸವಣ್ಣನವರ ಹೆಸರು ಚಿರಸ್ಥಾಯಿಯಾಗುವ ಉಪಾಯಗಳಲ್ಲೊಂದಾದ ಮೇಲಿನದುದನ್ನು ಅನುಸರಿಸುತ್ತ ಬಂದಿರುವೆವು. ಇದೊತ್ತಟ್ಟಿಗಿರಲಿ. ಮೇಲಿನ ಮಾತುಗಳಿಂದ "ಬಸವ" ಶಬ್ದವು ಬಸವಣ್ಣನವರಿಂದೀಚೆಗೆ ಬಹಳವಾಗಿ ಪ್ರಚಾರದಲ್ಲಿ ಬಂದಿದೆಯೆಂದಂತಾಯಿತು. ಆದರೆ ಅದು ಬಸವಣ್ಣನವರ ಕಾಲದಲ್ಲಿ ಮತ್ತು ಅದಕ್ಕೂ ಪೂರ್ವದಲ್ಲಿ ಸಾಮಾನ್ಯವಾಗಿ ಪ್ರಚಾರದಲ್ಲಿತ್ತೇ ಹೇಗೆಂಬುದನ್ನೂ, ಇದ್ದರೆ ಬಸವರೆಂಬವರು ಆ ಕಾಲದ ಜನಾಂಗದಲ್ಲಿ ಮಹತ್ವದ ಸ್ಥಾನವನ್ನು ಆಕ್ರಮಿಸಿದ್ದರೇ ಹೇಗೆಂಬುದನ್ನೂ ಐತಿಹಾಸಿಕ ದೃಷ್ಟಿಯಿಂದ ಶೋಧಿಸುವುದು ಅತ್ಯಗತ್ಯ. ಏಕೆಂದರೆ ನಮ್ಮ ಬಸವಣ್ಣನವರ ಪುರಾಣಗಳನ್ನು ಬರೆದ ಕವಿಗಳು ಅವರಿಂದ ನೂರಾರು ವರುಷಗಳನಂತರ ಜೀವಿಸಿದ್ದುದರಿಂದ ಅನೇಕ ಬಸವರ ಸಂಗತಿಗಳನ್ನು ಒಬ್ಬನೇ ಬಸವನಿಗೆ ಸಂಬಂಧಿಸುವ ಸಂಭವವುಂಟು. ಆದುದರಿಂದ ಕ್ರಿ ಶ. ೧೧ ಮತ್ತು ೧೨ ಶತಮಾನಗಳನ್ನು ಶೋಧಿಸುವಾ.

## ಬಸವಯ್ಯಗಳು.

೧. ಎಡೆವ ಬಸವಯ್ಯ:— ಕುರ್ತಕೋಟಿಯಲ್ಲಿ ವಿರೂಪಾಕ್ಷದೇವರ ಗುಡಿಯೊಳಗೆ ಒಂದು ಶಾಸನ ವಿತ್ತು. ಅದು ತ್ರಿಭುವನ ಮಲ್ಲನೆಂಬ ಬಿರುದುಳ್ಳ ಚಾಲುಕ್ಯರ ಆರನೇ ವಿಕ್ರಮನ (ಕ್ರಿ. ಶ. ೧೦೭೬-೭೭ ಮತ್ತು ೧೦೭೬ ರಿಂದ ೧೧೨೬ ರ ವರೆಗೆ) ಕಾಲದಲ್ಲಿ ಹುಟ್ಟಿದುದು (೩೦). ನಾವಿದ ದಾಸಯ್ಯನು ದಾಸೇಶ್ವರ ದೇವರನ್ನು ಸ್ಥಾಪಿಸಿ ದೇವಾಲಯವನ್ನು ನಿರ್ಮಿಸಿದುದೇ ಶಿಲಾಶಾಸನದ ಉದ್ದೇಶ. ಅದು ಶಕ ವರ್ಷ ೧೦೦೯ ನೇಯ ಪ್ರಭವ ಸಂವತ್ಸರ ಶ್ರಾವಣ ಮಾಸದಮಾವಾಸಿ ಆದಿತ್ಯವಾರ ಸರ್ವಗ್ರಾಸಿ ಸೂರ್ಯಗ್ರಹಣದ ದಿವಸ ಹುಟ್ಟಿದೆ. ಅಂದರೆ ಕ್ರಿ. ಶ. ೧೦೮೭ ಅಗಷ್ಟ ತಿಂಗಳ ೧ನೇ ತಾರೀಖು ಆದಿತ್ಯವಾರ ದಿವಸ ಶಾಸನವು ಹುಟ್ಟಿದೆಯಂದಂತಾಯಿತು. ಅಂದರೆ ಈ ಶಾಸನವು ಬಿಜ್ಜಳನ ಮರಣಕ್ಕು ೯೦ ವರುಷ ಮುಂಚಿನದು. ಈ ಶಾಸನದಲ್ಲಿ ಕೆಲವರ ಹೆಸರುಗಳಿವೆ. ಅವುಗಳಲ್ಲಿ

---

೩೦ ಸರ್ ಇಲಿಯಟ್ಟರವರ ಸಂಗ್ರಹ ಪಾಸ ೧೯೪-೨೦೧ (ಭಾಗ ೧) ಚಾಲುಕ್ಯ ವಿಕ್ರಮ, ಸಂ ೧೬

ಗಂಗರಸನ ಬೀರನು ಉ।
ತ್ತುಂಗಯಶೋಭಾಗಿಯೆಡೆವ ಬಸವಯ್ಯನು ಮಾ ॥
ಗಂಗರ ಚವೂಡನು ಮೀ। ಗಂಗಾಧರ ಭಕ್ತನೆನಿಪ ಮಾಲರಕಲ್ಲಾ ॥
ಎಂಬ ಪದ್ಯದಲ್ಲಿ "ಎಡೆವ ಬಸವಯ್ಯ" ನೆಂಬವನ ಹೆಸರಿದೆ.

೨. ಸೆಂಬೊಳಲ ಬಸವಯ್ಯಃ— ಹಾನಗಲ್ಲ ತಾಲೂಕ ಸೆಂಬಳೊಲ ಊರಿಗೆ ಉತ್ತರಕ್ಕೆ ಒಂದು ಈಶ್ವರನ ಗುಡಿಯುಂಟು. ಅಲ್ಲಿಯೊಂದು ಶಿಲಾಶಾಸನವಿತ್ತು. ಅದು ತ್ರಿಭುವನ ಮಲ್ಲನೆಂದು ಬಿರುದುಳ್ಳ ಚಾಲುಕ್ಯ ಆರನೇಯ ವಿಕ್ರಮನು ರಾಜ್ಯವಾಳುವಾಗ ಹುಟ್ಟಿದುದು (೩೧). ಆಗ ಆ ಭಾಗವನ್ನು ಹಾನುಗಲ್ಲ ಕದಂಬವಂಶದ ಎರಡನೇಯ ತೈಲಪದೇವನು (ಕ್ರಿ. ಶ. ೧೦೯೯—೧೧೨೯) ಮಾಂಡಲಿಕನಾಗಿ ಆಳುತ್ತಿದ್ದನು. ಶಿಲಾಶಾಸನವು ಹುಟ್ಟಿದ ದಿವಸ ಶ್ರೀ ಮಚ್ಚಾಳೋಕ್ಯ ವಿಕ್ರಮ ಕಾಲದ ೩೭ ನೇಯ ನಂದನ ಸಂವತ್ಸರ ಪುಷ್ಯ ಶುದ್ಧ ೧ ಸೋಮವಾರ ಉತ್ರಾಯಣ ಸಂಕ್ರಾಂತಿ ಅಂದರೆ ಕ್ರಿ. ಶ. ೧೧೧೨ ಡಿಸೆಂಬರ ೨೧ ನೇ ನೇ ತಾರೀಖು. ದಿವಾನ ಬಹದ್ದೂರ ಸ್ವಾಮಿಕನ್ನು ಪಿಳ್ಳೆಯವರ ಪ್ರಕಾರ ಈ ತಿಥಿಯು ಸೋಮವಾರಕ್ಕೆ ಬದಲಾಗಿ ಶನಿವಾರ ಬೀಳುವುದು. ಪಿರಿಯ್ಯ ಪಡವಳ ದೇವರಸ ಪೊಂಗೆವಣವನ್ನೂ ಬಸವಗಾವುಂಡ ಮತ್ತು ದಾಸಗಾವುಂಡ ಇವರೀರ್ವರು ಪೊಸಗೆರೆಯು ಕೆಳಗೆ ನಾಲ್ಕು ಸಾಸಿರ ಮರದ ತೋಂಟವನ್ನೂ ಭಕ್ತ ಶಿವರಾಜಗುರು ದೇವರಿಗೆ ಬಿಟ್ಟಂತೆ ಉಲ್ಲೇಖವಿದೆ. ಸೆಂಬೊಳಲ ಬಸವಗಾಮುಂಡನ ವರ್ಣನೆಃ—

ಪುಸಿಯಂ ಲೋಭತ್ವ ಭಯ।
ರಸಮುಂ ಕೆಲಬರ್ಗೆಸಹಜಮೀಕಾಲದೊಳಂ।
ಪುಸಿಯುಂ ಲೋಭತ್ವ ಭಯ।
ರಸಮುಮನೀ ಬಸವ ನಿನ್ನು ಮೇನೆಂದರಿಯಾ ॥
ನುಡಿಸತ್ಯ ಸಾಹಸಮೀ।
ಪೊಡವಿಗೆ ವಿಪರೀತಮಾರ್ಪುಬೇರ್ಪ ಜನಕ್ಕಂ।
ಪಡೆದುದು ಸಂತೋಷಮೊಂದೊಡೆ।
ಪೊಡವಿಯೊಳೀ ಬಸವನೆಂಬ ಪುರುಷ ನಿಧಾನಂ ॥

೩೧. ಇದೇ ಪುಸ್ತಕ ಪಾನ. ೩೧೪—೩೧೯ (ಭಾಗ ೧.) ಚಾಲುಕ್ಯ ವಿಕ್ರಮ ಶಂ. ೩೫.

ಓರ್ವನೆ ಕಿರೀಟಿ ಧರ್ಮಜ।
ನೋರ್ವನೆ ಗಾಂಗೇಯ ನೋರ್ವನೆನಿಪಾವನಿಕ್ಷೀ।
ಳೋರ್ವನೆ (?) ಬಗೆವಡೆ ಜಗದೊ।
ಳೋರ್ವನೆ ಸೆಂಬೊಳಲ ಬಸವನೆಂಬ ವಿಧಾತೃ॥

ಈ ಬಸವನಾದರೂ ಕಲ್ಯಾಣದ ಬಸವಣ್ಣನವರಿಗಿಂತ ಎನಿಲ್ಲೆಂದರೂ ೪೦ ವರುಷಕ್ಕೆ ಹಿರಿಯನು.

೩. ಧರ್ಮದ ಬಸವಣ್ಣ:—ಬಂಕಾಪೂರ ನಕರೇಶ್ವರ ದೇವರ ಗುಡಿಯೊಳಗೆ ಕಂಬದ ಮೇಲೊಂದು ಶಿಲಾಶಾಸನವಿತ್ತು. ಇದಾದರೂ ತ್ರಿಭುವನ ಮಲ್ಲನೆಂದು ಬಿರುದುಳ್ಳ ಚಾಲುಕ್ಯ ಆರನೇಯ ವಿಕ್ರಮನು ರಾಜ್ಯವಾಳುವಾಗ ಹುಟ್ಟಿದುದು (೩೨). ಬಂಕಾಪುರದ ನಕರೇಶ್ವರ ದೇವರಾಚಾರ್ಯ ಚಂದ್ರ ಭೂಷಣ ಪಂಡಿತರಿಗೆ ಧರ್ಮವನ್ನು ಬಿಟ್ಟಂತೆ ಉಲ್ಲೇಖವಿದೆ. ಶಿಲಾಶಾಸನ ಹುಟ್ಟಿದ ಕಾಲ. ಶ್ರೀಮಚ್ಚಾಳೋಕ್ಯ ವಿಕ್ರಮ ವರುಷ ೪೭ ನೇಯ ಶುಭಕ್ರತು ಸಂವತ್ಸರ ಪುಷ್ಯ ಬಹುಳ ೩೦ ಆದಿವಾರ ಸೂರ್ಯಗ್ರಹಣ. ಅಂದರೆ ಕ್ರಿ. ಶ್ರ. ೧೧೨೨ ಡಿಸೆಂಬರ ತಾರೀಖು ೬. ದಿವಾನಬಹದ್ದೂರ ಸ್ವಾಮಿಕನ್ನು ಪಿಳ್ಳೆಯವರ ಪ್ರಕಾರ ಈ ದಿವಸ ಸೂರ್ಯಗ್ರಹಣವಾಗಲೀ ರವಿವಾರವಾಗಲೀ ಇಲ್ಲ. ವಾರ ಬುಧವಾರ. ಈ ಶಾಸನದಲ್ಲಿ "ಇಂತೆನಿಸಿ ನೆಗಳ್ದ ಮಾದಿಗೌಡನಪ್ಪ ಶ್ರೀ ಮಲ್ಲಗಾಮುಂಡನುಂ ಶಾನಭೊವ ಭಾಸ್ಕರಯ್ಯನುಂ ಶಿವರಾಸಿ ಪಂಡಿತರುಂ ಧರ್ಮದ ಬಸವಣ್ಣನುಂ ಮೊದಲಾದವರು ಬಂಕಾಪುರನಕರೇಶ್ವರ ದೇವರಾಚಾರ್ಯ ಚಂದ್ರಭೂಷಣ ಪಂಡಿತದೇವರಂ ಕರೆದು" ಎಂದಿದೆ. ಇದರಲ್ಲಿದ್ದ ಧರ್ಮದಬಸವಣ್ಣನೂ ನಮ್ಮ ಕಲ್ಯಾಣದ ಬಸವಣನಿಗಿಂತ ಎನಿಲ್ಲೆಂದರೂ ೩೦ ವರುಷ ಹಿರಿಯನು.

೪. 'ಮನಗೋಳಿ ಶಾಸನದ' ಬಸವರಸ:— ಡಾ. ಫ್ಲೀಟರವರಿಗೆ ಮನಗೋಳಿಯಲ್ಲಿ ಒಂದು ಶಿಲಾಶಾಸನವು ದೊರೆತಿದೆ. ಅವರು ಅದನ್ನು *Ephigraphia Indica Vol V P. 10* ರಲ್ಲಿ ಪ್ರಸಿದ್ಧಪಡಿಸಿರುವರು. ಅವರು ಈ ಬಸವರಸನೇ ನಮ್ಮ ಕಲ್ಯಾಣದ ಬಸವಣ್ಣನೆಂದು ಅಭಿಪ್ರಾಯಬಟ್ಟಿರುವರು. ಕನ್ನಡಿಗರಲ್ಲದ ಇತರ ಪಂಡಿತರೂ ಯುರೋಪದೊಳಗಿನ ವಿದ್ವಾಂಸರೂ ಇನ್ನೂ ಫ್ಲೀಟರ ಅಭಿಪ್ರಾಯವೇ ನಿಜವೆಂದು ನಂಬುವರು. ಆದರೆ ಫ್ಲೀಟಸಾಹೇಬರು ಇಲ್ಲಿ ತಪ್ಪುಮಾಡಿರುವರು.

32 ಇದೇ ಪುಸ್ತಕ ಶಾಸ ೪೭೦ (ಭಾಗ ೧) ಚಾಲುಕ್ಯ ವಿಕ್ರಮ ಸಂ ೧೧೭

ಈ ಶಿಲಾಶಾಸನದಲ್ಲಿದ್ದ ಬಸವರಸನು ರೇವದಾಸನ ಮೊಮ್ಮಗನೂ ಚಂದಿ ರಾಜ ಮತ್ತು ಚಂದ್ರಾಂಬಿಕೆಯರ ಮಗನೂ ಆಗಿರುವನು. ಎರಡ ನೇಯ ಜಗದೇಕಮಲ್ಲನ ಕಾಲದಲ್ಲಿ ಕಲಿದೇವರ ದೇವಾಲಯವನ್ನೆತ್ತಿಸಿ ರುವನು. ಈತನು ತದ್ದೇವಾಡಿಯ ಸುಂಕಾಧಿಕಾರಿಯಾಗಿದ್ದನು. ಕಲ ಚುರಿ ಬಿಜ್ಜಳನ ಕಾಲದಲ್ಲಿಯೂ ಕೂಡ ಅಧಿಕಾರಿಯಾಗಿದ್ದನು; ಆದು ದರಿಂದ ನಮ್ಮ ಬಸವಣ್ಣನ ಸಮಕಾಲದವನು ಆಗಿದ್ದನು.

೫. ಭಂಡಾರಿ ಬಸವಣ್ಣ:— ಇವರನ್ನು ಕಲ್ಯಾಣದ ಬಸವಣ್ಣ ನವರೆಂದರೂ ಸಲ್ಲುವುದು. ಇವರೇ ವೀರಶೈವ ಮತಸ್ಥಾಪಕರೆಂದು ಕೆಲ ವರೂ, ಪುನರುತ್ಥಾಪಕರೆಂದು ಕೆಲವರೂ ನಂಬುವರು. ಇವರು ಲಿಂಗ ವಂತರಿಗೋಸುಗ ಮಾಡಿದ ಸೇವೆಯು ಅಪಾರವಾದುದು. ಲಿಂಗವಂತ ರಾದ ನಮ್ಮ ಪೂರ್ವಜರು ತಮ್ಮ ಕೃತಜ್ಞತೆಯನ್ನು ಈ ಬಸವಣ್ಣನವರಿಗೆ ಯಥೋಚಿತವಾಗಿ ತೋರಿಸಿರುವರು. ಆದರೆ ನಮ್ಮ ದುರ್ದೈವದಿಂದ ಇವರ ಬಗ್ಗೆ ಅನೇಕ ಪೌರಾಣಿಕ ಕಥೆಗಳು ಬೆಳೆದುದರಿಂದ ಇವರ ಚರಿ ತ್ರೆಯಲ್ಲಿಯ ನಿಜವಾದ ಅಂಶಗಳಾವವೆಂಬುದನ್ನು ಕಂಡುಹಿಡಿಯುವದು ಕಠಿಣವದೆ. ಮಿತ್ರರೂ ಅನುಯಾಯಿಗಳೂ ಇವರನ್ನು ಅಳತೆಮೀರಿ ಬಣ್ಣಿಸಿದಂತೆ ಶತೃಗಳೂ ಆಗದವರೂ ಅಳತೆಮೀರಿ ಇವರನ್ನು ಹೀಯಾ ಳಿಸಿರುವರು. ಅಸಹ್ಯವೆನ್ನಿಸುವಂಥ ಅನೇಕ ಕಾಲ್ಪನಿಕಾಂಶಗಳನ್ನು ಇವರ ಚರಿತ್ರದಲ್ಲಿ ಸೇರಿಸಲು ಹಿಂದೆಗೆದಿಲ್ಲ. ಇವರ ಚರಿತ್ರೆಯನ್ನೆಲ್ಲ ಶೋಧಿ ಸುವುದು ಈ ಚಿಕ್ಕ ಲೇಖದಲ್ಲಿ ಸಾಧ್ಯವಿಲ್ಲ. ಮೇಲಾಗಿ ಅದು ಪ್ರಸ್ತುತ ಲೇಖದ ಉದ್ದೇಶವೂ ಅಲ್ಲ. ಬಸವಣ್ಣನವರ ಬಗ್ಗೆ ಕೆಲಪಂಡಿತರು ತೆಗೆದ ಶಂಕೆಗಳನ್ನು ಇಲ್ಲಿ ವಿಚಾರಿಸಬೇಕೆಂಬುದು ನಮ್ಮ ಆಸೆ. ಇಂಥ ಪಂಡಿ ತರಲ್ಲಿ ಡಾ. ವೆಂಕಟಸುಬ್ಬಯ್ಯನವರು ಎಮ್. ಎ. ಪಿ. ಎಚ್. ಡಿ. ಎಲ್ ಎಲ್. ಬಿ. ಯವರು ಒಬ್ಬರಾಗಿರುವರೆಂದು ಹಿಂದೆ ಸೂಚಿಸಿಯೇ ಇದೆ. ಅವರ ಶಂಕೆಗಳಲ್ಲಿ ಮುಖ್ಯವಾದುವು.

೧. ಬಸವಣ್ಣನವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿಲ್ಲ.

೨. ಬಸವಣ್ಣನವರು ಸುಮಾರು ದೃಢವಾಗಿಯೇ ಬಿಜ್ಜಳನಕಾಲ ದಲ್ಲಿ ಅಂದರೆ ಕ್ರಿ. ಶ. ೧೧೫೬-೧೧೬೭ ರಲ್ಲಿ ಇರಲಿಲ್ಲ. ಅವರು ಕ್ರಿ. ಶ. ಸುಮಾರು ೧೨೦೦ ಕ್ಕಿಂತ ಹಿಂದೆ ಇದ್ದಂತೆ ತೋರುವದಿಲ್ಲ. (೩೩).

---

೩೩. ಕೆಲವು ಕನ್ನಡ ಕವಿಗಳ ಜೀವನಕಾಲವು ಬೆಂಗಳೂರ 1927 ಪಾನ 273 277

ಇವುಗಳಿಗೆ ಪ್ರಾಕ್ತನವಿಮರ್ಶ ವಿಚಕ್ಷಣರಾದ ಮ. ಆರ್. ನರಸಿಂಹಾಚಾರ್ಯರು ಸರಿಯಾಗಿ ಉತ್ತರವನ್ನು ಕೊಟ್ಟಿರುವರು. ಅವರನ್ನುವದೇನಂದರೆ:— “ವ್ಯಕ್ತಿಗಳ ಸತ್ತೆಗೆ ಶಾಸನವೇ ಪ್ರಮಾಣವಾದ ಪಕ್ಷದಲ್ಲಿ ಶಾಸನೋಕ್ತರಲ್ಲದ ಶಂಕರಾಚಾರ್ಯ ರಾಮಾನುಜಾಚಾರ್ಯಾದಿಗಳ ಸತ್ತೆಯನ್ನು ಹೇಗೆ ನಂಬುವುದು? ಬಸವನ ವಿಷಯವಾಗಿ ಒಂದು ಹೊಸ ಶಾಸನವು ಬೆಳಗಾಂವಿ ತಾಲೂಕಿನ (೩೪). ಅರ್ಜುನವಾಡದಲ್ಲಿ ಈಗ ತಾನೆ ದೊರೆತಿರುವುದು ಸಂತೋಷಿಸತಕ್ಕ ಸಂಗತಿಯಾಗಿದೆ. ಇದು ಸೇವುಣರಾಜನಾದ ಕಂಧಾರನ ಆಳಿಕೆಯಲ್ಲಿ (೧೨೪೭—೧೨೬೦) ಶಕ ೧೧೮೨ ರಲ್ಲಿ (೧೨೫೦ – ೧೨೬೦) ಹುಟ್ಟಿದೆ. ಇದರಲ್ಲಿ ಬಸವನೂ ಅವನ ತಂದೆಯೂ ಬಸವನ ಸಂತತಿಯಲ್ಲಿ ಐದು ತಲೆಯವರೂ ಉಕ್ತರಾಗಿದ್ದಾರೆ. (ಶಿವಾನುಭವ ಸಂಪುಟ ೩ ಪಾನ ೯೪) ಇದು ಬಿಜ್ಜಳನ ಕಾಲದಲ್ಲಿ ಬಸವನ ಸತ್ತೆಗೆ ಅಚಾಲ್ಯವಾದ ಪ್ರಮಾಣವಾಗಿದೆ. ಅಯ್ಯನವರಂತೆ ಆವ ವಿದ್ವಾಂಸನೂ ಎಲ್ಲ ವೀರಶೈವ ಜೈನ ಬ್ರಾಹ್ಮಣ ಸಂಪ್ರದಾಯ ಗ್ರಂಥಗಳನ್ನೂ ಅತ್ಯಂತಿಕವಾಗಿ ನಿಂದಿಸಿ ಆವುಗಳಲ್ಲಿ ದೊರೆಯಬಹುದಾದ ಸಂಗತಿಗಳನ್ನು ನಿರಾಕರಿಸಲಾರರೆಂದು ನಂಬಿದ್ದೇನೆ. ಒಂದು ಗ್ರಂಥದಲ್ಲಿ ಕೆಲವು ದೋಷಗಳಿದ್ದ ಮಾತ್ರಕ್ಕೆ ಅದನ್ನು ಸಂಪೂರ್ಣವಾಗಿ ನಿರಾಕರಿಸುವುದು ವಿವೇಕವಲ್ಲ. ಚರಿತ್ರವೆಂದು ಹೇಳಿಸಿಕೊಳ್ಳುವ ಗ್ರಂಥಗಳಲ್ಲಿಯೂ ಕೂಡ ಅಂಥ ದೋಷಗಳು ದೊರೆಯುತ್ತವೆ....... ವೀರಶೈವಾದಿ ಗ್ರಂಥಗಳಲ್ಲಿ ಅಯ್ಯನವರು ತೋರಿಸಿದಂಥ ಪರಸ್ಪರ ವಿರೋಧಗಳು ಶಾಸನಗಳಲ್ಲಿಯೂ ಕಂಡುಬರುತ್ತವೆ. (೩೫). ಇನ್ನು ಆಚಾರ್ಯರ ಸಮರ್ಥನೆಗಾಗಿ ನನಗೆ ಕಂಡು ಬಂದ ಒಂದೆರಡು ಮಾತುಗಳನ್ನು ಇಲ್ಲಿ ಬರೆಯಬೇಕೆನ್ನಿಸುವದು. ಡಾ. ವೆಂಕಟಸುಬ್ಬಯ್ಯನವರಿಗೆ ಶಿಲಾಶಾಸನದ ಆಧಾರವೇ ಪ್ರಮಾಣವೆಂದು ಅನ್ನಿಸುತ್ತಿದ್ದರೆ ಬಸವಣ್ಣನವರ ಉಲ್ಲೇಖವಿರುವ ಶಿಲಾಶಾಸನವು ಆಚಾರ್ಯರು ತೋರಿಸಿಕೊಟ್ಟಂತೆ ಅರ್ಜುನವಾಡದು ಒಂದೇ ಅಲ್ಲ. ಧಾರವಾಡ ಜಿಲ್ಹಾ ಚೌಡಂದಾಪುರದಲ್ಲಿ ಎರಡು ಶಿಲಾಶಾಸನಗಳಿವೆ. ಅವು ಸರ್ ವಾಲ್ಟರ ಇಲಿಯಟ್ಟರ ಸಂಗ್ರಹದಲ್ಲಿಯೂ ಡಾ. ಫ್ಲೀಟರವರು ಪ್ರಸಿದ್ಧಿಸಿದ *Pali Sanskrit and old Canarese*

---

೩೪ ಬೆಳಗಾಂವ ತಾಲೂಕಿನಲ್ಲ. ಬೆಳಗಾಂವ ಜಿಲ್ಹಾ ಹುಕ್ಕೇರಿ ತಾಲೂಕ.

೩೫. ಕವಿಚರಿತೆ ಸಂಪುಟ ೩ ಅವತರಣಿಕೆ ಪಾನ । X ! X (೬೫)

*Inscriptions* ವೆಂಬ ಪುಸ್ತಕದಲ್ಲಿಯೂ ಅವೆ. ಇವೆಲ್ಲವನ್ನು ಶಿವಾನುಭವದ ವಾಚಕರಿಗಾಗಿ ಶಿವಾನುಭವ ಸಂಪುಟ ಳ ಸಂಚಿಕೆ ಳ ಪಾನ ೧೫೯—೧೭೩ ರಲ್ಲಿ ಪ್ರಸಿದ್ಧಿಸಲಾಗಿದೆ. ಅವುಗಳಲ್ಲಿಯು ಮಹತ್ವದ ಭಾಗವನ್ನು ಪುನಃ ಇಲ್ಲಿ ತೋರಿಸಲಾಗಿದೆ.

ಒಂದನೇಯದು ಸರ್ ಇಲಿಯಟ್ಟರವರ ಸಂಗ್ರಹದಲ್ಲಿ ಮಹಾ ದೇವರಸರು ನಂಬರ ೨ನೇಯದು. (೩೬). ಡಾ. ಫ್ಲೀಟರವರ ಪಾಲಿ ಸಂಸ್ಕೃತ ಮತ್ತು ಹಳಗನ್ನಡ ಶಿಲಾಶಾಸನಗಳು ಎಂಬ ಪುಸ್ತಕದಲ್ಲಿ ಈ ಶಾಸನದ ನಂಬರು ೧೧೦ ಇದೆ. ಈ ಶಾಸನದಿಂದಲೇ ನಮಗೆ ಬೇಕಾದ ಭಾಗವನ್ನು ಮೇಲೆ ಸಂಚಿಕೆ ೫ ಸಂಪುಟ ೯-೧೦ ಪುಟ ೩೪೬ ರಲ್ಲಿ ಉದ್ಧರಿಸಲಾಗಿದೆ. ಅದರಲ್ಲಿಯು "ಸಂಗಮೇಶನ ಪುತ್ರಂ ಬಸವಯ್ಯಂ" ಎಂಬ ಶಬ್ದಗಳನ್ನು ಲಕ್ಷದಲ್ಲಿಡಬೇಕು. ಅವು ನಮ್ಮ ಬಸವಣ್ಣನವರಿಗಲ್ಲದೆ ಅನ್ಯರಿಗೆ ಸಂಬಂಧಿಸಿರಲಾರವು.

ಎರಡನೇಯದು ಸರ್ ಇಲಿಯಟ್ಟರವರ ಸಂಗ್ರಹದಲ್ಲಿ ಮಹಾ ದೇವರಸರು ನಂಬರ ೩ ನೇಯದು (೩೭). ಡಾ. ಫ್ಲೀಟರವರ ಪಾಲಿ ಸಂಸ್ಕೃತ ಮತ್ತು ಹಳಗನ್ನಡ ಶಿಲಾಶಾಸನಗಳು ಎಂಬ ಪುಸ್ತಕದಲ್ಲಿ ಈ ಶಾಸನದ ನಂಬರವು ೧೧೧. ಸಾಲುಗಳು ೪೭ ರಿಂದ ೪೯ ರ ಭಾಗದಲ್ಲಿ ಈ ವಾಕ್ಯಗಳವೆ.

ಲಿಂಗಕ್ಕೆ ಜಂಗಮಕ್ಕೆ ।
ಹಿಂಗದೆ ದಾಸಿ (ಸ್ಯ?) ತ್ವ ಮಾಳ್ಪುದಂ ಬೆಸ (ಸಿದ?) ನನ್ನಾ।
ಸಂಗನ ಬಸವಂ ಬೆಸಸೆಮ
ನಂಗೊಂಡರ್ಚಿಸುವನುಭಯ ಲಿಂಗವ ಮುದದಿಂ॥
ವೃಡಗಣವರ ಪ್ರಸಾದಮ
ಪಡೆದಂ ಜಗವರಿಯುಂದು ಸಂಗನಬಸವಂ।
ಪಡೆದಾ ಪ್ರಸಾದಸಿದ್ಧಿಯ ।
ಕಡುವೀರ ವ್ರತದಿ ಪಡೆದ ನೀ ಶಿವದೇವಂ ॥

---

೩೬ ಸರ್ ಇಲಿಯಟ್ಟರವರ ಸಂಗ್ರಹ ಪಾನ ೨೪೧ ೨೪೩ ಭಾಗ ೨

೩೭ ಇದೇ ಪುಸ್ತಕ ಪಾನ ೨೪೩ ೨೪೬ ಭಾಗ ೧

ಈ ಸಾಲುಗಳಲ್ಲಿ ಬಂದ ಸಂಗನ ಬಸವನೆಂಬ ಅಂಕಿತವು ಬಸವಣ್ಣನವರದೇ ಎಂದು ಹೇಳಲು ಆವ ಅಭ್ಯಂತರವೂ ತೋರುವದಿಲ್ಲ.

ಇನ್ನು ಕನ್ನಡ ಶಿಲಾಶಾಸನಗಳನ್ನು ಸೂಕ್ಷ್ಮ ರೀತಿಯಿಂದ ನಿರೀಕ್ಷಿಸಲು ಅವುಗಳಲ್ಲಿ ಶಿಲಾಶಾಸನ ಹುಟ್ಟಿದ ಭಾಗದಲ್ಲಿ ಆ ಕಾಲಕ್ಕೆ ಆಳುತ್ತಿದ್ದ ಅರಸನ ವರ್ಣನೆ ಮತ್ತು ಆತನ ವಂಶ, ಆ ಭಾಗದ ಅಧಿಕಾರಿಯ ವರ್ಣನೆ ಮತ್ತು ವಂಶ, ಶಿಲಾಶಾಸನದಲ್ಲಿ ಹೇಳಿದ ದಾನ, ಗುಡಿ, ಕಟ್ಟಿಸುವದು ಮೊದಲಾದ ಧಾರ್ಮಿಕ ಕೃತಿಗಳನ್ನು ಮಾಡಿದವನ ವರ್ಣನೆ ಮತ್ತು ಆತನ ವಂಶ, ಮತ್ತು ದಾನ ಸ್ವೀಕರಿಸಿದ ಆಚಾರ್ಯನ ವರ್ಣನೆ ಮತ್ತು ಆತನ ವಂಶ, ಇತ್ಯಾದಿ ವಿಷಯಗಳು ಕಂಡುಬರುವವು. ನಮಗೆ ಗೊತ್ತಿದ್ದ ಬಸವಣ್ಣನವರ ಪೌರಾಣಿಕ ಕಥೆಗಳಲ್ಲಿ ಆವದರಲ್ಲಿಯೂ ಬಿಜ್ಜಳನ ರಾಜ್ಯದ ಒಂದಾದರೂ ಭಾಗಕ್ಕೆ ಶ್ರೀಧರ ಕಸಪಯ್ಯ ಮೊದಲಾದವರಂತೆ ಬಸವಣ್ಣನವರು ಅಧಿಕಾರಿಗಳಾಗಿದ್ದಂತೆ ಉಲ್ಲೇಖವಿಲ್ಲ. ಅಂದರೆ ಬಸವಣ್ಣನವರು ಬಿಜ್ಜಳನ *Executive officer* ಆದಂತೆ ತೋರುವದಿಲ್ಲ. ಬಹು ಕಥೆಗಳು ಅವರು ಬಿಜ್ಜಳನ ಭಂಡಾರದ ಮೇಲೆ ಅಧಿಕಾರಿಗಳಾಗಿದ್ದಂತೆ ಹೇಳುವವು. ಒಂದು ವೇಳೆ ಬಸವಣ್ಣನವರ ಕಡೆಗೆ ಖಜಾನೆಯು ಎಲ್ಲ ಬಾಬುಗಳಿರಬಹುದು. ಅವರು ಸ್ವತಃ ಆವ ಭಾಗವನ್ನೂ ಆಳದೆ ಇದ್ದುದರಿಂದ ಬಿಜ್ಜಳನ ಕಾಲದಲ್ಲಿ ಹುಟ್ಟಿದ ಶಿಲಾಶಾಸನಗಳಲ್ಲಿ ಅವರ ಹೆಸರು ಬರುವ ಸಂಭವವಿಲ್ಲ. ಇನ್ನು ಬಿಜ್ಜಳನ ದಂಡನಾಯಕರ ಹೆಸರುಗಳನೇಕ ಶಿಲಾಶಾಸನಗಳಲ್ಲಿ ಬಂದಿವೆಯೆಂದೆನ್ನಬಹುದು. ಆದರೆ ನಾವು ಸೂಕ್ಷ್ಮವಾಗಿ ವಿಚಾರಿಸಿದರೆ ಅಂಥ ದಂಡನಾಯಕರು ಒಂದಿಲ್ಲೊಂದು ಭಾಗದ ಅಧಿಕಾರಿಗಳಾಗಿದ್ದರು. ಕೆಲಕಾಲ ಒಂದು ಭಾಗಕ್ಕೆ ಒಬ್ಬನಿಗಿಂತ ಹೆಚ್ಚು ಅಧಿಕಾರಿಗಳು ಆಗಿದ್ದಂತೆ ಕಂಡು ಬರುವದು. ಆದುದರಿಂದ ಈ ಆಕ್ಷೇಪವು ಸರಿಯಲ್ಲವೆಂದೆನ್ನಿಸುವುದು.

ಇನ್ನು ಗುಡಿ ಕಟ್ಟುವಿಕೆ ಮೊದಲಾದ ಧಾರ್ಮಿಕ ಕಾರ್ಯಗಳನ್ನು ಮಾಡಿ ಸ್ವತಃ ಶಿಲಾಶಾಸನವನ್ನು ಬರಿಸಿದ್ದರೆ ಅವರ ಹೆಸರು ಸಿಗುವ ಸಂಭವವದೆ. ಆದರೆ ಬಸವಣ್ಣನವರು ಮೂರ್ತಿಪೂಜೆಯನ್ನು ಖಂಡಿಸುವುದರಿಂದಲೂ ಅವರು ಶರಣ ಮತ್ತು ಜಂಗಮರಿಗೋಸುಗ ತಮ್ಮ ತನುಮನಧನವನ್ನು ಸವಿಸಿದುದರಿಂದಲೂ, ಅವರು ಅಂಥ ಶಾಸನಗಳನ್ನು ಮಾಡಿಸುವ ಸಂಭವವಿಲ್ಲ.

ಇನ್ನು ಬಸವಣ್ಣನವರ ಬಗ್ಗೆ ಅನ್ಯರಿಂದಾದ ಶಾಸನಗಳಲ್ಲಿ ಉಲ್ಲೇಖ (*Reference*) ಸಿಗುವ ಸಂಭವವುಂಟು. ಅಂಥ ಉಲ್ಲೇಖಗಳು ಮೇಲ್ಕಾಣಿಸಿದ ಮೂರು ಶಿಲಾಶಾಸನಗಳಲ್ಲಿ ಉಂಟು. ನಮ್ಮ ಭಾಗದಲ್ಲಿ ಶೋಧಿಸಲ್ಪಟ್ಟ ಶಾಸನಗಳು ವಿಪುಲವಾಗಿವೆ. ಮೈಸೂರ ಪ್ರಾಂತವನ್ನು ಸರ್ವೇ ಮಾಡಿದಂತೆ ಮುಂಬಯಿ ಮತ್ತು ನಿಜಾಮು ಇಲಾಖೆ ಭಾಗದ ಕನ್ನಡ ನಾಡನ್ನು ಸರ್ವೇಮಾಡಿಲ್ಲ. ಹಾಗು ಮಾಡಿದಾಗ ಬಸವಣ್ಣನವರ ಮತ್ತು ಅವರ ಸಹಾಯಕರ ಬಗ್ಗೆ ಅನೇಕಾಂಶಗಳು ಗೊತ್ತಾಗಬಹುದು. ಈಗಿನ ಇಷ್ಟು ಅಪೂರ್ಣ ಮತ್ತು ಅಲ್ಪ ಸಂಗ್ರಹದಿಂದ ಬಸವಣ್ಣನವರ ಬಗ್ಗೆ ಶಾಸನಗಳಲ್ಲಿ ಉಲ್ಲೇಖವಿಲ್ಲವೆಂದು ಹೇಳುವವರು ಬಲು ಧೈರ್ಯಶಾಲಿಗಳು.

ಇನ್ನು ಡಾ. ವೆಂಕಟ ಸುಬ್ಬಯ್ಯನವರ ಬಸವಣ್ಣನವರು ಬಿಜ್ಜಳನ ಸಮಕಾಲದವರಾಗಲಾರರೆಂಬ ಶಂಕೆಯೂ ಕೂಡ ಸರಿಯಾದುದಲ್ಲವೆಂದು ಅನ್ನಿಸುವುದು. ಬಸವಣ್ಣನವರು ಬಿಜ್ಜಳನ ಕಾಲದಲ್ಲಿದ್ದಿರಬೇಕೆಂಬ ಬಗ್ಗೆ ಮ. ಆರ್. ನರಸಿಂಹಾಚಾರ್ಯರು ತೋರಿಸಿದ ಅನುಮಾನಗಳಲ್ಲದೆ ಬಸವಣ್ಣನವರ ವಚನಗಳೇ ಸಾಕ್ಷಿಯಾಗಿರುವವು. ಅವರ ವಚನಗಳಲ್ಲಿ ಎರಡು ಸಾರೆ ಬಿಜ್ಜಳನ ಹೆಸರುಬಂದಿದೆ.

೧. ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ ಎನ್ನ ಒಡವೆಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಎನ್ನ ಮನಕ್ಕೆ ಮನವೇ ಸಾಕ್ಷಿ.............ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹೆನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ ಕೊಡಲಮ್ಮೆ, ಹೊಲೆಹೊಲೆಯರ ಮನೆಯ ಹೊಕ್ಕಾದರೆಯೂ ಸಲೆ ಕೈಕೂಲಿಯ ಮಾಡಿದರೆಯೂ ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿದೆನಾದರೆ ತಲೆದಂಡ ಕೂಡಲ ಸಂಗಮದೇವಾ "(೩೮).

೨. "ಊರ ಮುಂದೆ ಹಾಲಹಳ್ಳ ಹರಿಯುತ್ತಿರಲಿ ಒರೆಯಾವಿನ ಬೆನ್ನ ಹರಿಯಲದೇಕಯ್ಯ? ಲಜ್ಜೆಗೆಡಲೇಕೆ ನಾಣುಗೆಡಲೇಕೆ? ಕೂಡಲ ಸಂಗಮದೇವಯ್ಯನುಳ್ಳನ್ನಕ್ಕ ಬಿಜ್ಜಳನ ಭಂಡಾರವೆನಗೇಕಯ್ಯ?" (೩೯).

೩೮ ಬಸವೇಶ್ವರ ವಚನ ೨ ನೇ ಆವೃತ್ತಿ ಪಾನ ೧೨೪ ಬಿಜಾಪುರ ೧೯೩೦

೩೯ ಇದೇ ಪುಸ್ತಕ ಪಾನ ೧೧೩

ಈ ವಚನಗಳಿಂದ ಬಸವಣ್ಣನವರು ಬಿಜ್ಜಳನ ಕಾಲದಲ್ಲಿ ಅವನಲ್ಲಿಯೇ ಭಂಡಾರದ ಅಧಿಕಾರಿಗಳಾಗಿದ್ದರೆಂದು ಕಂಡುಬರುವದು. ಇನ್ನು ಇವು ಬಸವಣ್ಣನವರ ವಚನಗಳೆಂಬ ಬಗ್ಗೆ ಆಧಾರವೇನೆಂದು ಕೇಳಬಹುದು. ಬಸವಣ್ಣನವರು ಗೀತವನ್ನು ಹಾಡಿರುವರೆಂದು ಹರಿಹರನು ಬಸವರಾಜದೇವರ ರಗಳೆಯಲ್ಲಿ ಅನೇಕ ಕಡೆಗೆ ಹೇಳಿರುವನು (೪೦) ಹರಿಹರನ ಪುಸ್ತಕದಲ್ಲಿ ಈಗ ಪ್ರಸಿದ್ಧಿಸಲ್ಪಟ್ಟ ಬಸವಣ್ಣನವರ ವಚನಗಳೊಳಗಿನ ಒಂದೆರಡು ವಚನಗಳು ಅಕ್ಷರಶಃ ಬಂದಿರುವವು. ಮತ್ತೆ ಕೆಲವುಗಳಲ್ಲಿ ಆಶಯವು ಸಮವಾಗಿರುವುದು. ಅಂಥವುಗಳಲ್ಲಿ ಕೆಲವನ್ನು ಉದಾಹರಣೆಗಾಗಿ ಕೆಳಗೆ ತೋರಿಸಲಾಗಿದೆ.

೧. ಕಟ್ಟಿದೆನೊರೆಯು ಬಿಟ್ಟೆಜನ್ನಿಗೆಯಂ ಓಡದಿರೋಡದಿರು. ಶರಣರ ಮನೆಯ ಬಿರುದಿನಂತಕ್ಕೆ ಹಿಮ್ಮೆಟ್ಟದಿರೆಲೆ ದೇವ ಎಲೆ ತಂದೆ ಎಲೆಲೆ ಹಂದೆ ಕೂಡಲಸಂಗ ಸ್ವಯವಾಗು ಸ್ವಯವಾಗು.

1 (ಬಸವರಾಜದೇವರ ರಗಳೆ ಪಾನ ೮೩, ಸಾಲು ೨೮--೩೦)

ಕಟ್ಟಿದೆನೊರೆಯು ಬಿಟ್ಟೆ ಜನ್ನಿಗೆಯುರ. ಮುಟ್ಟಿ ಬಂದಿರಿದರೆ ಓಸರಿಸುವನಲ್ಲ. ಓಡದಿರು, ಓಡದಿರು. ನಿಮ್ಮ ಶರಣರ ಮನೆಯ ಬಿರುದಿನಂಕಕಾರ ಓಡದಿರು, ಓಡದಿರು. ಎಲೆ ಎಲೆ ದೇವಾ, ಎಲೆ ಎಲೆ ಸ್ವಾಮಿ, ಎಲೆ ಎಲೆ ಹಂದೆ ಕೂಡಲ ಸಂಗಮದೇವಾ.

2 (ಬಸವೇಶ್ವರ ವಚನ ೧೯೩೦ ಪಾನ ೧೦೬ ವ ೧೦)

೨. ಕೇಳ್ದು ಅನುತಾಪದೊಳೊಂದಿ ದೇವನಂ ಮೂದಲಿಸಿ — ಎಲೆಲೆ ಕಾಡಿ ಕಾಡಲಮ್ಮದ ತಂದೆ ನೀಂ ಕೇಳು. ಬೇಡ ಬೇಡಲಮ್ಮದ ಹಂದೆ ನೀಂ ಕೇಳು. ಕೂಡಿ ಕೂಡಲಮ್ಮದ ಜಾತಿಯೆ ನೀಂ ಕೇಳು ಎಂದು ಗೀತಮಂ ಪಾಡಿ ನಿರೋಧದೊಳಿರಲು

(ಬಸವರಾಜದೇವರರಗಳೆ ಪಾನ ೮೮ ಸಾಲು ೧೪೪—೧೪೭)

ಕಟ್ಟುವೆನುಪ್ಪರಗುಡಿಯ ಜಗವರಿಯೆ. ಮಾಡುವೆನೆನ್ನ ಕಾಯಕೆಡುವನ್ನಕ್ಕ ಬೇಡುವುದೆನ್ನ ತನುಮನಧನವ. ಬೇಡಲಾರದ ಹಂದೆ ನೀ ಕೇಳಾ. ಈ ಬಿರಿ (ರು?) ದು ಸಂದಿತ್ತು ಕೂಡಲಸಂಗಮದೇವಾ.

3 (ಬಸವೇಶ್ವರ ವಚನ ೧೯೩೦ ಪಾನ ೧೦೭ ವ. ೧)

---

೪೦ ಬಸವರಾಜ ದೇವರ ರಗಳೆ ಪಾನ ೬೯ ಸಾಲು ೬೧

ತನುವಬೇಡಿದಡೀವೆ. ಮನವಬೇಡಿದಡೀವೆ. ಧನವ ಬೇಡಿದಡೀವೆ. ಬೇಡು ಬೇಡೆಲೆ ಹಂದೇ. ಕಣ್ಣ ಬೇಡಿದಡೀವೆ. ತಲೆಯ ಬೇಡಿದಡೀವೆ. ಕೂಡಲ ಸಂಗಮದೇವಾ ನಿಮಗಿತ್ತು ಶುದ್ಧನಾಗಿಪ್ಪೆ ನಿಮ್ಮ ಪುರಾತನರ ಮನೆಯಲ್ಲಿ.

೪ (ಬಸವೇಶ್ವರನ ವಚನ ೧೯೩೦ ಪಾನ ೧೦೮ ವ ೪)

೩. ಭಯಂಬೇಡ. ಬೇಡಿ ಬೇಡಿ ಕಳಿಂಗದೇಶದಿಂ ಪೊರಮಡು ವಾಗಳಿನ್ನಂ ಬೇಡಲೆಂದುದ್ಯೋಗಿಸಿದ ಮಾರ್ಗದೊಳೆ ಬೇಡುವುದು. ಕುಡು ವವಂ ಸಂಗಂ ಬೇಡುವವಂ ಸಂಗಮದೇವಂ ಎನಗೊಂದುಂ ಭಾರವಿಲ್ಲ ಅಂಜಬೇಡಂಜಬೇಡ.

(ಬಸವರಾಜದೇವರ ರಗಳೆ ಪಾನ ೮೪ ಸಾಲು ೫೨—೫೫)

ಎಂಬತ್ತುನಾಲ್ಕು ಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿ ನೋಡೆನ್ನನು. ಬೇಡಿ ನೋಡೆನ್ನನು. ಬೇಡದಿದ್ದರೆ ಅಯ್ಯ ನಿಮಗೆ ಪ್ರಮ ಥರಾಣೆ. ನೀನಾವ ಮುಖದಲ್ಲಿ ಬಂದು ಬೇಡಿದೊಡೀವೆನು ಕೂಡಲ ಸಂಗಮದೇವಯ್ಯ.

೫ (ಬಸವೇಶ್ವರ ವಚನ ೧೯೩೦ ಪಾನ ೬೪ ವ ೧)

ಮಾಡುವಾತ ನಾನಲ್ಲಯ್ಯ! ನೀಡುವಾತ ನಾನಲ್ಲಯ್ಯ! ಬೇಡು ವಾತ ನಾನಲ್ಲಯ್ಯ! ನಿಮ್ಮ ಕಾರುಣ್ಯವಲ್ಲದೆ ಎಲೆ ದೇವಾ! ಮನೆಯ ತೊತ್ತಲಸಿದರೆ ಒಡತಿ ಮಾಡಿಕೊಂಬಂತೆ ನಿನಗೆ ನೀ ಮಾಡಿಕೋ ಕೂಡ ಲಸಂಗಮದೇವಾ.

೬ (ಬಸವೇಶ್ವರ ವಚನ ೧೯೩೦ ಪಾನ ೧೨೭ ವ ೩)

೪. ಗಳಗಳನೆ ನಡೆತಂದು, ಕಂಬಳಿಯ ನಾಗಿದೇವನ ನಂದಣ ದಲುಂ ಬಿಜಯಂಗೆಯ್ಸಿ ತಾಂ ಕೆಲದೊಳು ಬರುತ್ತಂ ದೇವ, ಭಕ್ತದೇಹಿಕ ದೇವ, ನೀಂ ಪೊಕ್ಕಲ್ಲಿ ಪೊಕ್ಕವರೊಕ್ಕುದಂ ಕೊಂಡೆ. ನಿನೀರ್ದಕುಲವೆ ಸತ್ಕುಲಂ ನಿನ್ನಿಂದ ನಾಂ ಕುಲಜನೆ. ಕೂಡಲಸಂಗ, ಕರುಣಿಸು–ಎಂದು ಗೀತಮಂ ಪಾಡುತಂ ನಡೆತಂದು.

(ಬಸವರಾಜ ದೇವರ ರಗಳೆ ಪಾನ ೬೯ ಸಾಲು ೬೮-೭೧)

ದೇವ ದೇವ, ಬಿನ್ನಪವ ಅವಧಾರು. ವಿಪ್ರ ಮೊದಲು ಅಂತ್ಯಜ ಕಡೆ ಯಾಗಿ ಶಿವಭಕ್ತರಾದವರನೆಲ್ಲರನೊಂದೆ ಎಂಬೆ. ಹಾರುವ ಮೊದಲು ಶ್ವಪಚ

ಕಡೆಯಾಗಿ ಭವಿಯಾದವರನೊಂದೇ ಎಂಬೆ. ಈ ಹೀಗೆಂದು ನಂಬುವು ದೆನ್ನ ಮನವು. ಈ ನುಡಿದ ನುಡಿಯೊಳಗೆಳ್ಳ ಮೊನೆಯಷ್ಟು ಸಂದೇಹ ವುಳ್ಳರೆ, ಹಲ್ಲುದೋರ (ತರೆ?) ಮೂಗು ಕೊಯ್ಯಿ ಕೂಡಲಸಂಗಮದೇವ.

7 (ಬಸವೇಶ್ವರ ವಚನ ೧೯೩೦ ಪಾನ ೧೦೮ ವ. ೭)

ದೇವ ನಿಮ್ಮ ಪೂಜಿಸಿ, ಚೆನ್ನನ ಕುಲ ಚೆನ್ನಾಯಿತ್ತು. ದೇವ ನಿಮ್ಮ ಪೂಜಿಸಿ, ದಾಸನ ಕುಲ ದೇಸೆವಡೆಯಿತ್ತು. ದೇವ ನಿಮ್ಮಡಿಗೆರಗಿ ಮಡಿ ವಾಳ ಮಾಚಯ್ಯ ನಿಮ್ಮಡಿಯಾದ. ನೀನೊಲಿದ ಕುಲಕ್ಕೆ ನೀನೊಲ್ಲದ ಹೊ ಲೆಗೆ ಮೇರೆಯುಂಟೇ ದೇವಾ!... ಜಾತಿ ವಿಜಾತಿಯಾದರೇನು? ಅಜಾ ತಂಗೆ ಶರಣೆಂದೆನ್ನದವನು ಆತನೇ ಹೊಲೆಯ ಕೂಡಲಸಂಗಮದೇವಾ!

8 (ಬಸವೇಶ್ವರ ವಚನ ೧೯೩೦ ಪಾನ ೯೧ ವ ೭೮)

೫. ಬಸವರಾಜನ ಗೀತದೊಳು— ಬೇಡಿ ಬೇಡಿದ ಶರಣಂಗೆ ನೀಡದಿರ್ದಡೆ ತಲೆದಂಡ ಕೂಡಲಸಂಗ ಅವಧಾರು—ಎಂಬ ಗೀತಮಂ ಪಾಡೆ.

(ಬಸವರಾಜ ದೇವರ ರಗಳೆ ಪಾನು ೮೨ ಸಾಲು ೮-೧೦)

ಕಡೆಮುಟ್ಟೆ ಸಲಿಸದಿದ್ದಡೆ ತಲೆ ದಂಡ ಕೂಡಲಸಂಗಮ ದೇವಾ.

9 (ಬಸವೇಶ್ವರ ವಚನ ೧೯೩೦ ಪಾನ ೧೨೦ ವ ೨)

ಕಂದಿದೆನಯ್ಯಾ ಎನ್ನ ನೋಡುವರಿಲ್ಲದೆ. ಕುಂದಿದೆನಯ್ಯಾ ಎನ್ನ ನುಡಿಸುವರಿಲ್ಲದೆ. ಬಡವಾದೆನಯ್ಯಾ ಎನ್ನ ತನು ಮನ ಧನವ ಬೇಡುವ ರಿಲ್ಲದೆ. ಕಾಡುವ ಬೇಡುವ ಶರಣರ ತಂದು ಕಾಡಿಸು ಬೇಡಿಸು ಕೂಡ ಲಸಂಗಮ ದೇವಾ.

10 (ಬಸವೇಶ್ವರ ವಚನ ೧೯೩೦ ಪಾನ ೬೪ ವ ೨)

ಹೊನ್ನಿನೊಳಗೊಂದೆರೆಯು, ಸಿರಿಯೊಳಗೊಂದೆಳೆಯು, ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ ನಿಮ್ಮ ಪುರಾತನರಾಣೆ, ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆ.

11 (ಬಸವೇಶ್ವರ ವಚನ ೧೯೩೦ ಪಾನ ೬೫ ವ ೬)

೬. ದೇವ ಚೆನ್ನನ ನಿಧಿಯೆ ಆರೋಗಿಸಲೆ ಸಂಗ
ದೇವ ಚೋಳನ ಸುಧೆಯೆ ಆರೋಗಿಸಲೆಸಂಗ

(ಬಸವರಾಜದೇವರ ರಗಳೆ ಪಾನ ೧೬ ಸಾಲು ೬೯—೭೦)

ಚನ್ನಮಹಾನಿಧಿಯೇ ಕರುಣದಿಂ ಕೈಕೊಳ್ಳ
(ಬಸವರಾಜದೇವರ ರಗಳೆ ಪಾನ ೪೬ ಸಾಲು ೧೪೦)

ಬಸವೇಶ್ವರನ ವಚನದಲ್ಲಿ "ಚನ್ನ" ನ "ಚೋಳನ" ಉಲ್ಲೇಖಗಳು ವಿಪುಲವಾಗಿ ಬಂದಿವೆ. ಅವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ತೋರಿಸಲಾಗಿದೆ.

ಚೋಳನ ಮನೆಯುಲುಣಲೊಲ್ಲದೆ ಚನ್ನನ ಮನೆಯುಲುಂಡೆ
ಒಬ್ಬರಿಗೊಂದು ಪರಿಯ ಮಾಡಿದೆ ಕೂಡಲಸಂಗಮದೇವಾ.
12 (ಬಸವೇಶ್ವರ ವಚನ ಪಾನ ೧೧೩ ವ ೩)

ಚನ್ನಯ್ಯನ ಮನೆಯ ಲಂಬಲಿಯನುಂಡು ಬದುಕಿದೆ.
(ಇದೇ ಪುಸ್ತಕ ಪಾನ ೧೧೩ ವ ೪)

ನಡೆ ಚನ್ನ, ನುಡಿ ಚನ್ನ, ಎಲ್ಲಿ ನೋಡಿದಡೆ ಚನ್ನ, ಪ್ರಮಥರೊಳಗೆ ಚನ್ನ, ಪುರಾತನರೊಳಗೆಚನ್ನ, ಸವಿದುನೋಡೆ ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವಂಗೆ ಬೇಕೆಂದು ಕೈದೆಗೆದ ನಮ್ಮ ಚನ್ನ.
13 (ಬಸವೇಶ್ವರನ ವಚನ ಪಾನ ೧೨೧ ವ ೧ ಪ್ರಸಾದಿಯ ಐಕ್ಯ)

ನಿನಗೆ ಚನ್ನನ ಪ್ರಸಾದ.
(ಬ. ವ. ಪಾನ ೧೩೯ ವ ೧)

೭. ಓಹಿಲಯ್ಯಂಗೆ ಹಿತಾರ್ಥ, ಉದ್ಭಟಯ್ಯಂಗೆ ಹಿತಾರ್ಥ
ಬಸವರಾಜಂಗೆ ಹಿತಾರ್ಥ, ಆರೋಗಿಸು.
(ಬಸವರಾಜದೇವರ ರಗಳೆ ಪಾ. ೬೭ ಸಾ. ೧೦--೧೨)

ಇದರಲ್ಲಿಯ ಓಹಿಲಯ್ಯನ ಉಲ್ಲೇಖವು ಕೆಳಗಿನ ವಚನದಲ್ಲಿದೆಃ--

ನಿಸ್ಸೀಮ ಗುಗ್ಗಳವನಿಕ್ಕಿದನೊಬ್ಬ ಶರಣ. ಉಘೇ, ಚಾಂಗು ಭಲಾ, ಎಂಬ ಹೊಗೆ ಗಗನವ ತೀವಿ ಓಹಿಲಯ್ಯ ಮೆರೆದ ಸೌರಾಷ್ಟ್ರಮಂಡಲದಲ್ಲಿ ಕೂಡಲಸಂಗಮದೇವ ಭಕ್ತವತ್ಸಲನಾಗಿ.
14 (ಬಸವೇಶ್ವರವಚನ ಪಾನ ೧೦೪ ವ ೧೫೭)

ಮೇಲಿನ ಉದಾಹರಣೆಗಳಿಂದ ಹರಿಹರನಿಗೆ ಬಸವಣ್ಣನವರ ವಚನಗಳು ಗೊತ್ತಿದ್ದವೆಂದು ಊಹಿಸಲವಕಾಶವಿದೆ. ಹರಿಹರನು ಹಂಪೆಯ ಉತ್ತರಕ್ಕೆ ಬಂದಂತೆ ಪ್ರತೀತಿಯಿಲ್ಲದುದರಿಂದ ಕಲ್ಯಾಣದಲ್ಲಿದ್ದ ಬಸವಣ್ಣನವರ ವಚನಗಳು ಹಂಪೆಯ ವರೆಗೆ ಹೊಗಲು ಅವಕಾಶಬೇಕಾಗುವುದು.

ಆದುದರಿಂದ ಅವು ಹರಿಹರನಿಗೂ ಪೂರ್ವದಲ್ಲಿ ಇದ್ದವೆನ್ನಬಹುದು. ಆದುದರಿಂದ ಅವು ಬಸವಣ್ಣನವರವೇ ಇರಬೇಕೆಂದು ಅನ್ನಿಸುವುದು. ಮೇಲಾಗಿ ಮೇಲುದಾಹರಿಸಿದ ಬಿಜ್ಜಳನ ಉಲ್ಲೇಖವಿದ್ದ ವಚನಗಳು ಬಸವೇಶ್ವರನ ಷಟ್‌ಸ್ಥಲದ ವಚನಗಳ ಹಸ್ತಪ್ರತಿಗಳಲ್ಲೆಲ್ಲ ಇರುವವು. ಆದುದರಿಂದ ಅವು ಬಸವಣ್ಣನವರವು ಅಲ್ಲವೆಂದು ನಿರ್ಧರವಾಗುವ ವರೆಗೆ ನಾವು ಅವು ಅವರವೆಂದೇ ತಿಳಿಯಬೇಕಾಗುವುದು. ಮತ್ತು ತಲಾಂತರಗಳಿಂದ ಬಂದ ವಿಷಯಗಳನ್ನು ಐತಿಹಾಸಿಕವಲ್ಲವೆಂದು ಹಾರಿಸಿ ಬಿಡಲಾಗದು. ಅವುಗಳಲ್ಲಿ ಪೂರ್ಣವಾಗಿಯಲ್ಲದಿದ್ದರೂ ಕೆಲ ಭಾಗವಾದರೂ ಸತ್ಯವಿರಬೇಕು. ಆದುದರಿಂದ ವಿದ್ವಾಂಸರಾದ ಡಾ. ವೆಂಕಟಸುಬ್ಬಯ್ಯನವರ ಕಲ್ಪನೆಯು ಸರಿಯಾದುದಲ್ಲವೆಂದು ನಮಗೆ ಅನ್ನಿಸುವುದು.

೬. ಸಹಜಾನಂದ ಬಸವಸೆಟ್ಟಿ:— ಹಾನಗಲ್ಲ ತಾಲೂಕ ಮಂತಿಗಿ ವಡ್ಡಿಯಲ್ಲಿ ಒಂದು ಶಿಲಾಶಾಸನವಿದ್ದಿತು. ಅದು ಕಲಚುರಿ ವಂಶದ ಬಿಜ್ಜಳನು ರಾಜ್ಯಭಾರ ಮಾಡುವಾಗ ಹುಟ್ಟಿದುದು (೪೨). ಜೈನ ಧರ್ಮದ ಗುರುಗಳಾದ ೨೪ ಮಂದಿ ತಿರ್ಥಂಕರರ ಪ್ರತಿಷ್ಠೆ ಮಾಡಿ ಧರ್ಮ ಬಿಟ್ಟ ಉಲ್ಲೇಖವಿದೆ. ಶಾಸನ ಹುಟ್ಟಿದ ದಿವಸ ಬಿಜ್ಜಳನ ೧೦ನೇಯ ವರ್ಷದ ಪಾರ್ಥಿವ ಸಂವತ್ಸರದ ಪುಷ್ಯ ಶುದ್ಧ ೫ ಬೃಹಸ್ಪತಿವಾರ ಉತ್ತರಾಯಣ ಸಂಕ್ರಮಣ ವ್ಯತಿಪಾತ ಅಂದರೆ ಕ್ರಿ. ಶ. ೧೧೬೫ ಡಿಸೆಂಬರ ೯ನೇ ತಾರೀಖು ಗುರುವಾರ ಮಧ್ಯಾಹ್ನದ ೩ ಬಾರಿಸಿ ೨೦ ಮಿನಿಟುಗಳಾದ ನಂತರ ಈ ಶಾಸನದ ಅಂತ್ಯದಲ್ಲಿ ಮಾಯಿನಾಯಕ ಭಾಸ್ಕರಸೆಟ್ಟಿ ಬಸವಸೆಟ್ಟಿಯರ ಪರವಾಗಿ ವರ್ಣನೆಯ ಪದಗಳಿವೆ. "ಮತ್ತಮಾಪುರದಲ್ಲಿ ಸಹಜಾನಂದ ಬಸವಸೆಟ್ಟಿಯ ನೆಗಳ್ತಿಯೆಂತೆಂದಡೆ:—

ಭೂಜನ ವಿನತ ಮಹಾ।
ರಾಜೇಯ್ಯ ಭೇಷಜ ಶಾಸ್ತ್ರದಾನದ ಮುಕ್ತಿ ಶ್ರೀ।
ರಾಜ ಜನರಂ ತಣಿಪಿ ಯಶೋ।
ಭಾಜನನೆನಿಸಿ ಧಾತ್ರಿಗನೆಸೆದಂ ಬಸವಂ॥
ಕುಳನಗಮನಲ್ಪ ದಾವಾ।
ನಳತೊಂಪಮನಬ್ಧಕಾಲವಂಬುಧಿ ಪಟಲಂ।

೪೨. ಇದೇ ಪುಸ್ತಕ ಪುಟ ೩೩೪-೩೩೯ (ಭಾಗ ೧) ತ್ರಿಭುವನಮಲ್ಲ ವೀರ ಸೋಮೇಶ್ವರ ಸಂ. ೩.

ಕಳಿವಂತೆ...... ಮೆಯ್ಯಂ।
...............ಹಾಸವಂ ಬಸವಂ ॥

ಈ ಪದ್ಯಗಳಿಂದ ಈ ಬಸವನು ವೈದ್ಯನಾಗಿದ್ದಂತೆ ತೋರುವದು. ಈತನು ಜೈನ ಮತಾನುಯಾಯಿ ಇದ್ದರೂ ಇರಬಹುದು.

೭. ಕೇಣಿಕಾರ ಬಸವರಸ ಸಿದ್ಧಯ್ಯಃ— ಲಕ್ಕುಂಡಿ ಕಿಲ್ಲೇದಲ್ಲಿ ಮಾಣಿಕೇಶ್ವರ ದೇವಾಲಯವೊಂದುಂಟು. ಆ ಗುಡಿಯ ಮಧ್ಯರಂಗದ ತೊಲಿಗಳಲ್ಲಿ ಪಶ್ಚಿಮದ ತೊಲೆಯಲ್ಲಿ ಒಂದು ಶಿಲಾಶಾಸನವಿತ್ತು. ಅದು ತ್ರಿಭುವನಮಲ್ಲನೆಂದು ಬಿರುದುಳ್ಳ ನಾಲ್ಕನೇಯ ವೀರ ಸೋಮೇಶ್ವರ (ಕ್ರಿ. ಶ. ೧೧೮೩-೧೧೮೯) ನ ಕಾಲದಲ್ಲಿ ಹುಟ್ಟಿದುದು (೪೩). ಅದರಲ್ಲ ಕೇಶವಾದಿತ್ಯ ದೇವರಿಗೆ ಧರ್ಮವನ್ನು ಬಿಟ್ಟಂತೆ ಉಲ್ಲೇಖವಿದೆ. ಶಾಸನ ಹುಟ್ಟಿದ ದಿವಸ ಶ್ರೀ ಮತ್ರಿಭುವನಮಲ್ಲ ದೇವ ವರುಷದ ೩ ನೇಯ ಕ್ರೋಧಿ ಸಂವತ್ಸರ ಪುಷ್ಯ ಶುದ್ಧ ೫ ಸೋಮವಾರ ಉತ್ತರಾಯಣ ಸಂಕ್ರಮಣ ವ್ಯತಿಪಾತ ಅಂದರೆ ಕ್ರಿ. ಶ. ೧೧೮೪ ಡಿಸೆಂಬರ ೨೪ ತಾರೀಖು ಸೋಮವಾರ. ಈ ಶಿಲಾಶಾಸನದಲ್ಲಿ "ಇಂತು ನೆಗಳ್ತೆವೆತ್ತ ಸಾಸಿರ್ವರ ಪ್ರಿಯಪುತ್ರ ವರತಳಘೋಗದ ಕೇಣಿಕಾರ ಬಸವರಸಂ ಸಿದ್ಧೈಯಂಗಳ ಗುಣಗಣ ಮಹಿಮೆಯೆಂತೆಂದಡೆಃ—

ಗಸಗೆಡೆಯಾಗದೊಳ್ಮಡಿ ಪವಿತ್ರವೆನಿಪ್ಪ ಚರಿತ್ರವೊಪ್ಪವೆ।
ತ್ತೆಸೆವ ಗುಣಸಮಭ್ಯುದಯಮುಂ ತಳೆದೂರ್ಜಿತಮತ್ತಮೆ ॥
ಣ್ದೆಸೆಗವುಳಂಕೆಗೊಂಡ ಜಸಮೆಂಬನನಾರ್ಜಿಸಿದಂ ನಿರಂತರ।
ಬಸವಣನಾಯಕಂ ಸುಜನ ಸಂಕುಳ ಮಸ್ತಕವಸ್ತುನಾಯಕಂ ॥
(ಚಂಪಕಮಾಲೆ)

ಆತನ ತಾತಯ್ಯನೇದು ಪರಿಪೂರ್ಣಗುಣೋದಯನೆಂದು ಹೃತ್ಸವು।
ದ್ಭೂತಸುರೂಪನೆಂದು ಬುಧಬಾಂಧವ ರಕ್ಷಕನೆಂದು ಸತ್ಕಳಾ।
ನೀತವಿವೇಕನೆಂದು ಪೊಗಳ್ಗಂ ನೆರೆದನ್ನುಗಿದಂಡನಾಥಜಾ।
ಮಾತೃವನಳಿಂ ನೆಗಳ್ದ ಸಿಂಧುಗಿ ದೇವನೀ ಜಗಜ್ಜನಂ ॥"
(ಉತ್ಪಲಮಾಲೆ)

---

೪೩. ಇವರ ಪುಸ್ತಕ ಪಾನ 562-564 (ಭಾಗ ೧) ತ್ರಿಭುವನಮಲ್ಲ ವೀರ ಸೋಮೇಶ್ವರ ನಂಬರ 2

ಎರಡನೇಯ ಪದ್ಯವು ಸರಿಯಾಗಿ ಓದಲ್ಪಟ್ಟಿದ್ದರೆ ಸಿಂಧುಗಿಯು ಈ ಬಸವರಸನ ತಾತನೆಂದೂ ಆತನು ದನ್ನುಗಿ ದಂಡನಾಯಕನ ಜಾಮಾತೃವೆಂದೂ ಗೊತ್ತಾಗುವುದು. ದನ್ನುಗಿ ಮತ್ತು ಸಿಂಧುಗಿ ದಂಡನಾಯಕರು ಕಲಚೂರಿ ವಂಶದ ಬಿಜ್ಜಳನ ಹೆಸರಾದ ಕಲಿಗಳೂ ದಂಡನಾಯಕರೂ ಆಗಿದ್ದರು. ಈ ಶಾಸನದಲ್ಲುಕ್ತನಾದ ಸಿಂಧುಗಿಯು ಮೇಲೆ ಹೇಳಿದ ಶ್ರೀಧರ ದಂಡನಾಯಕನೋ ಅಥವಾ ಆತನಿಂದ ಭಿನ್ನನೋ ಎಂಬುದು ವಿಚಾರಿಸಲ್ತಕ್ಕ ವಿಷಯವು. ಒಂದು ವೇಳೆ ಭಿನ್ನನಾಗಿರದಿದ್ದರೆ ಆತನಿಗೆ ಪದ್ಮನಾಭನಲ್ಲದೆ ಬಸವಯ್ಯನೆಂಬೊಬ್ಬ ಮಗನಿದ್ದನೆಂದೂ ಊಹಿಸಲವಕಾಶವಿದೆ. ಆದರೆ ದೊಡ್ಡ ಮನುಷ್ಯರ ಆಶ್ರಯದಲ್ಲಿದ್ದವರು ತಮ್ಮ ಕೃತಜ್ಞತೆಯನ್ನು ತೋರಿಸುವದಕ್ಕಾಗಿ ಅಂಥವರನ್ನು "ತಾತ' 'ತಂದೆ' ಗಳೆಂದು ಸಂಬೋಧಿಸುವದುಂಟು. ಇಂಥ ಅನೇಕ ಉದಾಹರಣೆಗಳನ್ನು ಶಿಲಾಶಾಸನಗಳಲ್ಲಿ ಕಾಣಬಹುದು. ಅದರಂತೆ ಬಸವಯ್ಯನು ಸಿಂಧುಗಿಯನ್ನು ತಾತನಂತೆ ಕಾಣುತ್ತಿರಬಹುದೇ? ಅದು ಎನೇ ಇರಲಿ ಈ ಬಸವರಸ ಸಿದ್ಧಪ್ಪಯ್ಯನು ನಮ್ಮ ಕಲ್ಯಾಣದ ಬಸವಣ್ಣನಗಿಂತ ೨೦-೨೫ ವರ್ಷಕ್ಕೆ ಕಿರಿಯನು.

೮. ಹಡವಳ ಬಸವಯ್ಯಃ— ಅಣ್ಣಿಗೇರಿ ಬನದಶಂಕರಿ ಗುಡಿಯ ಮುಂದೆ ಅಂಗಳದೊಳಗೊಂದು ಶಿಲಾಶಾಸನವಿತ್ತು. (೪೪) ಅದರಲ್ಲಿ ಏನಿಲ್ಲೇನೆಂದರೂ ಎರಡಾದರೂ ಶಾಸನಗಳಿವೆ. ಒಂದು ಚಾಲುಕ್ಯ ನಾಲ್ಕನೇಯ ವೀರಸೋಮೇಶ್ವರನ ರಾಜ್ಯದ ೫ನೇಯ ವರುಷ ಪರಾಭವ ಸಂವತ್ಸರ ಮಾಘ ಶುದ್ಧ ೧ ಸೋಮವ್ಯತಿಪಾತದಂದು ಅಂದರೆ ಕ್ರಿ. ಶ. ೧೧೪೭ ಜಾನೇವಾರಿ ೧೨ನೇ ತಾರೀಖು ಸೋಮವಾರವಂದು ಮತ್ತೊಂದು ಪ್ಲವಂಗ ಸಂವತ್ಸರ ವೈಶಾಖ ಶುದ್ಧ ೩ ಸೋಮವಾರದಂದು ಅಂದರೆ ಕ್ರಿ. ಶ. ೧೧೮೭ ಎಪ್ರಿಲ ೧೩ನೇ ತಾರೀಖು ಸೋಮವಾರದಂದು ಹುಟ್ಟಿವೆ. ಎರಡನೆಯ ಶಾಸನವನ್ನು "'ಶ್ರೀಮತು ಪಟ್ಟಣಾಧಿಪತಿ ಹಡವಳ ಬಸವಯ್ಯ" ಬ್ರಹ್ಮಪುರಿಯ ಬ್ರಾಹ್ಮಣರಿಗೆ ಧರ್ಮವನ್ನು ಬಿಟ್ಟಿದ್ದಾನೆ. ಈತನೂ ನಮ್ಮ ಕಲ್ಯಾಣದ ಬಸವಣ್ಣನಿಗೂ ಸುಮಾರು ೨೦--೨೫ ವರುಷ ಕಿರಿಯನು. ಮೇಲೆ ತೋರಿಸಿದ ಆಧಾರಗಳಿಂದ ಕ್ರಿ. ಶ. ೧೧೧೨ ಶತಮಾನಗಳಲ್ಲಿ

೪೪ ವೀರಶೈವ ಶಿವಪೂಜಾವಿಧಿ ಪಾನ ೧೧೭ ೧೨೦ ಗುರುಬಸವ ಅಂದು ಕಂಪನಿಯುವರಿಂದ ಪ್ರಸಿದ್ಧಿಸಲ್ಪಟ್ಟಿದ್ದು.

ಸವ" ನೇಂಬ ಶಬ್ದವು ಸಾಮಾನ್ಯವಾಗಿ ರೂಢಿಯಲ್ಲಿತ್ತೆಂದೂ ಬಸವ
ರೆಂಬವರು ಬಸವಣ್ಣನವರ ಸಮಕಾಲಿಕರಲ್ಲನೇಕರು ಇದ್ದರೆಂದೂ
ಕವರು ದೊಡ್ಡ ಅಧಿಕಾರಸ್ಥಾನಾಪನ್ನರಾಗಿದ್ದರೆಂದೂ ಕಂಡುಬರುವದು.
ಕ್ಷ್ಮವಾಗಿ ಶೋಧಿಸಿದರೆ ಸುಮಾರು ಅದೇ ಕಾಲದಲ್ಲಿ ಬಸವಣ್ಣನವ
ಂದು ಬಹಳ ಜನರಿದ್ದರೆಂಬ ಬಗ್ಗೆ ಲಿಂಗವಂತರಲ್ಲಿ ಕೂಡ ಪ್ರತೀತಿ
ತ್ತೆಂದು ತೋರುವದು. ಗಣ ಸಹಸ್ರನಾಮ ಸ್ತೋತ್ರದಲ್ಲಿ ಅನೇಕ ಬಸ
ಹೆಸರುಗಳು ಬಂದಿವೆ. ತ್ರಯೋದಶ ಗಣಂಗಳಲ್ಲಿ "ಬಸವರಾಜಾರ್ಯಃ"
ತ್ತು "ಪಡಿಯಾರಾಖ್ಯ ಬಸವಣಾರ್ಯಃ" ಎಂಬವರೂ ಇತರ ಗಣಂಗ
"ಪ್ರಸನ್ನ ಬಸವಃ" "ಗಂಗಾಪುರದ ಬಸವಣ್ಣ" "ಅವಗಡದ ಬಸ
ಖ್ಯ" "ಕಂಗಳ ಬಸವಃ" ಮೊದಲಾದವರ ಹೆಸರುಗಳಿವೆ. ಇದರಿಂದ
ಸ್ವಲ್ಪ ಹೆಚ್ಚುಕಡಿಮೆ ಬಸವಣ್ಣನವರ ಕಾಲ ಸುಮಾರಕ್ಕೆ ಬಸವ
ದ ಹೆಸರುಳ್ಳ ಅನೇಕ ಜನರಿದ್ದ ಹಾಗಾಯಿತು. ಬಸವಣ್ಣನವರ
ರಾಣಗಳು ಅನೇಕವಿವೆ. ಅವುಗಳಲ್ಲಿ ಬಸವಣ್ಣನವರ ಬಗ್ಗೆ ಅನೇಕ
ಗತಿಗಳಿವೆ. ಅವುಗಳಲ್ಲಿ ಎಷ್ಟೋ ಮೇಳು ಬೀಳುವದಿಲ್ಲ. ಇವಕ್ಕೆ ಕಾರ
ವ ಅವುಗಳನ್ನು ಬರೆದವರು ಬಸವಣ್ಣನವರ ನಂತರ ನೂರಾರು ವರು
ಳಾದ ಮೇಲೆ ಇದ್ದರು. ಆಗ ತಾವು ಕೇಳಿದ ಸಂಗತಿಗಳನ್ನು ತಮ್ಮ
ಥಗಳಲ್ಲಿ ಕಲೆ ಹಾಕಿರಬಹುದು. ಬೇರೆ ಬೇರೆಯವರಾದ ಬಸವರ ಬಗ್ಗೆ
ಸಂಗತಿಗಳು ಕಾಲಾನಂತರ ಒಬ್ಬ ಬಸವನಿಗೇ ಸಂಬಂಧಿಸಿದವೆಂದು
ಯುವ ಸಂಭವವೂ ಉಂಟು. ಆದುದರಿಂದ ಭಿನ್ನರಾದ ಬಸವರ
ಗತಿಗಳನ್ನು ಶತಮಾನಗಳ ನಂತರ ಬಂದ ಪುರಾಣಕಾರರು ಅವೆಲ್ಲವು
ಖ್ಯಾಣದ ಬಸವಣ್ಣನವರಿಗೇ ಸಂಬಂಧಿಸಿದವೆಂದು ಊಹಿಸಿ ಪುರಾಣ
ನ್ನು ಬರೆಯುವ ಸಂಭವವುಂಟು. ಮೇಲೆ ತೋರಿಸಿದಂತೆ ಬಿಜ್ಜಳನ
ಕಾರಿಗಳಲ್ಲಿ ಬಸವರಸರೆಂಬವರಿದ್ದರು. ಅವರೂ ಮತ್ತು ಉಳಿದ ಬಸ
ಲ್ಲಿ ಕೆಲವರೂ ಶಿವಭಕ್ತರಿದ್ದು ಶಿವಧರ್ಮವನ್ನನುಸರಿಸುತ್ತಿದ್ದರೆಂದು
ಸನಗಳಿಂದ ತಿಳಿದುಬರುವದು. ಆದುದರಿಂದ ಅಂಥವರೆಲ್ಲರ ಸಂಗ
ಗಳು ನಮ್ಮ ಬಸವಣ್ಣನವರ ಹೆಸರಿನಿಂದಲೇ ಪುರಾಣಗಳಲ್ಲಿ ಬಂದಿ
ವ ಸಂಭವವಾದರೂ ಉಂಟು. ಆದುದರಿಂದ ಬಹುತರವಾಗಿ ಬಸ
ಣ್ಣನವರ ಹೆಸರಿನ ಪುರಾಣಗಳೊಳಗಿನ ಸಂಗತಿಗಳಲ್ಲಿ ಮೇಳಬೀಳದೆ
ಉವುದಕ್ಕೆ ಇದೊಂದು ಕಾರಣವಿದ್ದರೂ ಇರಬಹುದು.



# ಶೈವಾಗಮ ಧರ್ಮಗಳ ನಿರೀಕ್ಷಣೆ.

(ಡಾ. ಎಸ್. ಸಿ. ನಂದೀಮಠ ಎಮ್. ಎ. ಪಿ. ಎಚ್. ಡಿ. ಇವರು ತಮ್ಮ ಪಿ. ಎಚ್. ಡಿ. ಪದವಿಯನ್ನು ಸಂಪಾದಿಸಲು ಆಗಮಧರ್ಮಗಳ ಮೇಲೆ ಬರೆದ ಲೇಖದ ವಿಮರ್ಶೆ. ಸಂಪಾದಕ.)

ಡಾ॥ ಎಸ್. ಸಿ. ನಂದಿಮಠ ಇವರು ನಮ್ಮ ಶಿವಾನುಭವ ಪತ್ರಿಕೆಯ ವಾಚಕರಿಗೆ ಅಪರಿಚಿತರೇನೂ ಅಲ್ಲ. ಅವರು ಈ ಪತ್ರಿಕೆಯಲ್ಲಿ ಸಂಶೋಧನಾತ್ಮಕವಾಗಿ ಅನೇಕ ಮಹತ್ವದ ಲೇಖಗಳನ್ನು ಆಗಾಗ್ಗೆ ಬರೆಯುತ್ತಿದ್ದು ಇದು ಅವರ ಪೂರ್ಣ ನೆನಪಿನಲ್ಲಿ ಇರಬಹುದು. ಡಾ॥ ನಂದೀಮಠ ಇವರು ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಎಮ್ ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಬಳಿಕ ಕೊಲ್ಹಾಪು[illegible]ರಾಮ ಕಾಲೇಜಿನಲ್ಲಿ ಸಂಸ್ಕೃತ ಪ್ರೊಫೆಸರರಾಗಿ ಅಲ್ಲಿ ೨ ವರ್ಷಗಳ ವರೆಗೆ ಕೆಲಸ ಮಾಡಿದರು. ಆದರೆ ಅವರ ಮನಸ್ಸಿನಲ್ಲಿ ಸಂಸ್ಕೃತ ಭಾಷೆಯನ್ನು ಸಂಶೋಧನಾತ್ಮಕ ರೀತಿಯಿಂದ ಹೆಚ್ಚಾಗಿ ಅಭ್ಯಾಸ ಮಾಡಬೇಕೆಂದು ಇದ್ದುದರಿಂದ ಅವರು ಶಿರಸಂಗೀ ಫಂಡಿನ ಸಹಾಯವನ್ನು ಹೊಂದಿ ತಮ್ಮ ಉದ್ದೇಶವನ್ನು ನೆರವೇರಿಸುವದಕ್ಕೋಸ್ಕರ ಇಂಗ್ಲಂಡಕ್ಕೆ ತೆರಳಿದರು. ಅಲ್ಲಿ ಅವರು ಲಂಡನ್ನ ಯುನಿವ್ಹರ್ಸಿಟಿಯಲ್ಲಿ ಸೇರ್ಪಡೆಯಾಗಿ ಪೌರ್ವಾತ್ಯ ವಾಙ್ಮಯದಲ್ಲಿ ಲೆಕ್ಚರರಾದ ಡಾ॥ ಬಾರ್ನೆಟ್ಟ ಇವರ ನಿರೀಕ್ಷಣೆಯಲ್ಲಿ ತಮ್ಮ ಅಭ್ಯಾಸಕ್ರಮವನ್ನು ಎರಡು ವರ್ಷಗಳ ವರೆಗೆ ಸಾಗಿಸಿದರು. ಮತ್ತು ಅದರಲ್ಲಿ ಉತ್ತೀರ್ಣರಾಗಿ ಪಿ. ಎಚ್. ಡಿ. ಪದವಿಯನ್ನು ಸಂಪಾದಿಸಿ ೫-೬ ತಿಂಗಳ ಹಿಂದೆ ನಮ್ಮ ದೇಶಕ್ಕೆ ಮರಳಿ ಬಂದರು. ಇವರು ತಾವು ಕೈಕೊಂಡ ಸಂಶೋಧನ ಕಾರ್ಯಗಳನ್ನು ಇನ್ನು ಮುಂದಾದರೂ ಹಾಗೆಯೇ ಸಾಗಿಸಬೇಕೆಂದು ತುಂಬಾ ಅಪೇಕ್ಷೆಯುಳ್ಳವರಾಗಿದ್ದಾರೆ. ಮತ್ತು ಅದರಂತೆ ಇವರು ಈಗ ಸದೋದಿತ ಕಾರ್ಯವನ್ನು ನಡಿಸಿಯೂ ಇರುವರು. ಇವರ ಅಪೇಕ್ಷೆಯು ಕೊನೆಗಾಣಲೆಂದು ನಾವು ತುಂಬಾ ಹಾರೈಸುತ್ತೇವೆ.

ಈ ಕಾಲಕ್ಕೆ ಅನೇಕ ಕರ್ನಾಟಕಸ್ಥರು ಇಂಗ್ಲಂಡಕ್ಕೆ ಆಯ್. ಸಿ. ಎಸ್. ಕಾಯ್ದೆ, ವೈದ್ಯಕೀ ಇಂಥ ವಿಷಯುಗಳನ್ನು ಅಭ್ಯಾಸ ಮಾಡಲೋಸುಗ ಹೋಗುತ್ತಿರುವದನ್ನೂ ಅವರಿಗೆ ನಮ್ಮಲ್ಲಿಯ ಸಾರ್ವಜನಿಕ

ು ಸಿಡಾಯು ಮಾಡುತ್ತಿರುವದನ್ನೂ ನಾವು ನೋಡುತ್ತೇವೆ.
ಮು ದೇಶದ ಏಳ್ಗೆಯ ಲಕ್ಷಣವೇ ಇರುತ್ತದೆ. ಆದರೆ ದೇಶದ ನಿಜವಾದ ತವನ್ನು ಹೆಚ್ಚು ಮಾಡಲು ಅವಶ್ಯಕವಾದ ವಿಷಯಗಳು ಅಂದರೆ ಜ್ಞಾನಿಕ ವಿಷಯಗಳು ಉದ್ಯೋಗಾಭಿವೃದ್ಧಿಯ ಅಭ್ಯಾಸಗಳು ಮತ್ತು ಙ್ಮಯ ಇವುಗಳ ಹೆಚ್ಚುಗೆಯನ್ನು ಬಲಪಡಿಸಲು ಅವಶ್ಯಕವಾಗಿರುವ ಾರ್ಗಗಳನ್ನು ಕಂಡುಹಿಡಿದು ಆ ರೀತಿ ನಮ್ಮಲ್ಲಿಯ ತರುಣರು ಮುಂದು ರಿಯುವದು ಬಹಳ ಮಹತ್ವದ್ದೆಂದು ನಮಗೆ ತೋರುತ್ತದೆ. ಕರ್ನಾಟ ರ ಸಂಸ್ಕೃತಿಯು ಬಹು ಪುರಾತನದ್ದೂ, ಮಹತ್ತರವಾದದ್ದೂ, ಎಂಬು ನ್ನೋ ಈಗ ಎಲ್ಲರೂ ಒಪ್ಪಿಕೊಂಡದ್ದಾಗಿದೆ. ಆದರೆ ಇಷ್ಟಕ್ಕೆ ನಾವು ಾಗಿ ಅದಕ್ಕೆ ಸಂಬಂಧಪಟ್ಟ ಮಹತ್ವದ ವಿಷಯಗಳನ್ನು ಸಂಶೋ ಇವೆ ಒರೇ ನ್ನಾಡು ಹೆಚ್ಚು ನಮ್ಮ ನಾಡು ಹೆಚ್ಚು ಎಂದು ಅಂದು ಂಡು ಕುಳಿತಿದ್ದರೆ ಅದರಿಂದೇನು ಪ್ರಯೋಜನ? ಇಷ್ಟೇ ಅಲ್ಲ ವು ಹಾಸ್ಯಕ್ಕೂ ಪಾತ್ರರಾಗುವೆವು. ಕರ್ನಾಟಕದಲ್ಲಿ ಕನ್ನಡ ವಾಙ್ಮಯ ಾಶಾಸನಗಳು ಪುರಾತನಗ್ರಂಥ ಸಂಶೋಧನ ಶಿಲ್ಪಶಾಸ್ತ್ರ ಇವೇ ಮೊದ ಾದ ಅಸಂಶೋಧಿತವಾದ ವಿಷಯಗಳು ಇನ್ನೂ ಅಸಂಖ್ಯಾತವಾಗಿವೆ. ವುಗಳ ನಿಜತ್ವವನ್ನು ಮತ್ತು ಶ್ರೇಷ್ಠತೆಯನ್ನು ಶಾಸ್ತ್ರೀಯ ದೃಷ್ಟಿಯಿಂದ ವು ಕಂಡುಹಿಡಿದು ಅವುಗಳನ್ನು ಇನ್ನೂ ಹೆಚ್ಚಾಗಿ ಮುಂದುವರಿಸುವ ಾರ್ಯಭಾರವನ್ನು ಹೊರದಿದ್ದರೆ ಕರ್ನಾಟಕದ ಏಳ್ಗೆಯಾದೀತೆಂದು ನಾವು ಗೆಯುವದು ಹೇಗೆ? ಈ ದೃಷ್ಟಿಯಿಂದ ಡಾ॥ ನಂದೀಮಠ ಇವರು ಙ್ಮಯ ವಿಷಯವನ್ನು ಕೈಕೊಂಡು ಅದರಲ್ಲಿ ಪಿ ಎಚ್. ಡಿ. ಪದವಿ ನ್ನು ಸಂಪಾದಿಸಿದ್ದಕ್ಕೆ ನಾವು ಅವರನ್ನು ಮನಃಪೂರ್ವಕವಾಗಿ ಅಭಿ ಂದಿಸುತ್ತೇವೆ.

ಹಿಂದುಸ್ತಾನವು ಸಂಸ್ಕೃತ ವಾಙ್ಮಯದ ತವರ್ಮನೆ ಎನಿಸಿಕೊಂಡಿದ್ದು ವಿಷಯದಲ್ಲಿ ಪ್ರಾವೀಣ್ಯತೆಯನ್ನು ಹೊಂದಲು ಡಾ॥ ನಂದೀಮಠ ಇವರು ಂಗ್ಲಂಡಕ್ಕೆ ಹೋದದ್ದು ಅರಿದಾದ ಸಂಗತಿ ಎಂದು ಅನೇಕರು ಭಾವಿಸ ಹುದು. ಆದರೆ ನಿಜಸ್ಥಿತಿಯು ಈ ಕಾಲಕ್ಕೆ ವಿಪರೀತವಾಗಿದೆ. ಸಂಶೋ ನ ದೃಷ್ಟಿಯಿಂದ ಕಾರ್ಯಮಾಡಲು ಇಂಗ್ಲಂಡದಲ್ಲಿ ಹ್ಯಾಗೆ ಅನುಕೂಲ ಗಳುಂಟೋ ಹಾಗೆ ಹಿಂದುಸ್ತಾನದಲ್ಲಿ ಇರುವದಿಲ್ಲ. ಅದರಲ್ಲಿ ಕರ್ನಾಟಕ ಲ್ಲಿಯಂತೂ ಏನೂ ಇಲ್ಲ. ಇಂಥ ಕಾರ್ಯಕ್ಕೋಸ್ಕರ ಅನೇಕ ವಿಷಯ

ಗಳನ್ನೊಳಕೊಂಡ ಬಹು ದೊಡ್ಡ ಲೈಬ್ರರಿಗಳ ಅವಶ್ಯವಿದ್ದು ಇವುಗಳ ವ್ಯವಸ್ಥೆಯು ಇಂಗ್ಲಂಡದಲ್ಲಿ ಬಹು ಅತ್ಯುತ್ಕೃಷ್ಟ ರೀತಿಯಿಂದ ಮಾಡಲ್ಪಟ್ಟಿದೆ. ಬ್ರಿಟಿಶ್ ಮ್ಯುಜಿಯಮ್ಮದ ಲೈಬ್ರರಿ, ಇಂಡಿಯಾ ಆಪೀಸು ಲೈಬ್ರರಿ, ಗ್ರೇಟಬ್ರಿಟನ್ ಮತ್ತು ಆಯರ್ಲಂಡದ ರೊಯಲ ಏಸಿಯಾಟಿಕ ಲೈಬ್ರರಿ, ಲೈಬ್ರರಿ ಆಫಸ್ಕೂಲ್ ಆಫ ಓರಿಎಂಟಲ್ಲ ಸ್ಟಡೀಜ, ಹೀಗೆ ಅತಿ ವಿಖ್ಯಾತವಾದ ಲಕ್ಷಾವಧಿ ಗ್ರಂಥಗಳುಳ್ಳ ಪುಸ್ತಕಾಲಯಗಳು ಲಂಡನ್ನಿನಲ್ಲಿ ಇದ್ದು ಅವುಗಳಲ್ಲಿ ನಮ್ಮ ದೇಶದಲ್ಲಿ ಪ್ರಚುರ ಹೊಂದುವ ಬಹುತರ ಯಾವತ್ತು ಮಹತ್ವದ ಗ್ರಂಥಗಳು ಶೇಖರಿಸಲ್ಪಟ್ಟಿವೆ. ಈ ವಿಷಯವಾಗಿ ಆ ಲೈಬ್ರರಿಯ ಚಾಲಕರು ಎಷ್ಟು ಜಾಗ್ರತೆ ಪಡುತ್ತಾರೆಂಬದನ್ನು ತಿಳಿಯ-ಬೇಕಾದರೆ, ನಮ್ಮ ಶಿವಾನುಭವ ಗ್ರಂಥಮಾಲೆಯ ಬಹುತರ ಎಲ್ಲ ಗ್ರಂಥಗಳೂ ಈ ಲೈಬ್ರರಿಗಳಿಗೆ ತರಿಸಲ್ಪಟ್ಟಿರುತ್ತವೆಂಬುದೊಂದೇ ಉದಾಹರಣೆಯು ಸಾಕು. ದೇಶವಲ್ಲಿ ಈ ಬಗೆಯ ಲೈಬ್ರರಿಗಳಿಲ್ಲದೇ ಹೋದರೆ ಸಂಶೋಧಕರ ಸಂಶೋಧನಗಳ ನಡೆಯುವದು ಹೇಗೆ? ವಾಙ್ಮಯವು ಬೆಳೆಯುವದು ಹೇಗೆ? ನಮ್ಮ ದೇಶದಲ್ಲಿ ಕೆಲವೆಡೆಗಳಲ್ಲಿ ದೊಡ್ಡ ಪುಸ್ತಕಾಲಯಗಳಿವೆಂಬದು ನಿಜವು. ಆದರೆ ಅವುಗಳಲ್ಲಿ ಒಂದು ವಿಷಯಕ್ಕೆ ಸಂಬಂಧಿಸಿದ ಎಲ್ಲ ಶಾಖೆಗಳ ಬಗ್ಗೆ ಗ್ರಂಥಗಳಿರುವದಿಲ್ಲ. ಗ್ರಂಥಗಳಿದ್ದರೂ, ಅವು ಅವ್ಯವಸ್ಥಿತವಾಗಿ ಇಡಲ್ಪಟ್ಟಿರುವವು. ಇದರಿಂದ ವೇಳೆಯೂ ಶ್ರಮವೂ ವ್ಯರ್ಥ ಹೋಗುತ್ತದೆ. ಮತ್ತು ಈ ಲೈಬ್ರರಿಯ ಗ್ರಂಥಗಳು ಎಂದೋ ಒಮ್ಮೆ ಕೂಡಹಾಕಲ್ಪಟ್ಟವುಗಳಿದ್ದು ಹೊಸ ಹೊಸ ಗ್ರಂಥಗಳ ಸಂಗ್ರಹವು ಅವುಗಳಲ್ಲಿ ಇರುವದಿಲ್ಲ. ಈ ಸ್ಥಿತಿಯ ಮೂಲಕ ನಮ್ಮಲ್ಲಿಯ ಲೈಬ್ರರಿಗಳು ಸಂಶೋಧಕರಿಗೆ ಸಹಾಯಕವಾಗಿರುವದಿಲ್ಲೆಂದು ಕಂಡು ಬಂದಿರುತ್ತದೆ. ಇದರಿಂದ ನಮ್ಮಲ್ಲಿಯ ವಿದ್ವಾಂಸರು ಇಂಗ್ಲಂಡ ಜರ್ಮನಿ ಇಂಥ ಪಾಶ್ಚಾತ್ಯ ದೇಶಗಳಿಗೆ ತೆರಳಬೇಕಾಗುತ್ತದೆ. ನಮ್ಮಲ್ಲಿ ಅನೇಕ ಸಾಧನಗಳಿದ್ದರೂ ಹೀಗೆ ಸ್ಥಿತಿಯು ಇರುವದು ಬಹು ದುರ್ದೈವದ ಸಂಗತಿಯು ಎಂದು ಯಾರು ಹೇಳದಿರಲಿಕ್ಕಿಲ್ಲ?

ಡಾ. ನಂದೀಮಠ ಇವರು ಇಂಗ್ಲಂಡಕ್ಕೆ ಹೋದಬಳಿಕ ಈ ವರೆಗೆ ಸಂಶೋಧನೆಗೆ ಒಳಗಾಗದೆ ಇದ್ದ "ಆಗಮಧರ್ಮ" ಈ ವಿಷಯವನ್ನು ಕೈಕೊಂಡು, ಅದರಲ್ಲಿ ಅವರು ಪಿ. ಎಚ್. ಡಿ. ಪದವಿಯನ್ನು ಸಂಪಾದಿಸುವದನ್ನು ನಿಶ್ಚಯಿಸಿದರು. ಈ ಪದವಿಯನ್ನು ಪಾಶ್ಚಾತ್ಯದೇಶಗಳಲ್ಲಿ

ಗಳನ್ನೊಳಕೊಂಡ ಒಂದು ಅಭ್ಯಾಸಕ್ರಮವಿರುವದಿಲ್ಲ. ಅವುಗಳಲ್ಲಿ
ೀಕ್ಷೆ ಇರುವದಿಲ್ಲ. ಆದರೆ ವಿದ್ಯಾರ್ಥಿಗಳು ಒಂದು ವಿಷಯವನ್ನು
ಸ್ವ ಇಚ್ಛಾನುಸಾರವಾಗಿ ತೆಗೆದುಕೊಂಡು, ಅದರಲ್ಲಿ ಈ ವರೆಗೆ ಪ್ರಕ
ಾದ ವಾಙ್ಮಯವನ್ನೆಲ್ಲ ಅಭ್ಯಾಸಿಸಿ, ಹೆಚ್ಚಿನ ವಿಚಾರಗಳನ್ನು ಕಂಡು
ಿದು ಆ ವಿಷಯದ ಜ್ಞಾನಭಾಂಡಾರವನ್ನು ಹೆಚ್ಚಿಸಲು ಯೋಗ್ಯ
ದ ಒಂದು ನಿಬಂಧವನ್ನು ಬರೆಯತಕ್ಕದ್ದು. ಇದನ್ನು ವಿಶ್ವವಿದ್ಯಾ
ುದವರು ಮನ್ನಿಸಿದ್ದಾದರೆ ಈ ಪದವಿಯು ದೊರಕುವದು. ಡಾ. ನಂದೀ
ರ ಇವರು ಕೈಕೊಂಡ ಆಗಮಧರ್ಮ ವಿಷಯದಲ್ಲಿ ಲಂಡನಿನಲ್ಲಿಯ
ೇಲೆ ಹೇಳಿದ ಲೈಬ್ರರಿಗಳಲ್ಲಿ ಅನೇಕ ಮಹತ್ವದ ಗ್ರಂಥಗಳು ಅವರಿಗೆ
ರೆದದ್ದಲ್ಲದೆ ರೋಯಲ್ಲ ಏಸಿಯಾಟಿಕ ಸೋಸಾಯಟಿ ಲೈಬ್ರರಿಯಲ್ಲಿ
ಫ್ಲೀಟ, ಈಲಿಎಟ್ ಮೊದಲಾದ ಶಿಲಾಶಾಸನ ಸಂಶೋಧಕರ
ುದಲಿನ ಸಂಗ್ರಹಗಳೂ ಅವರಿಗೆ ದೊರಿದವು. ಆಕ್ಸಫರ್ಡದಲ್ಲಿಯ
ೀಡ್ಲಿಯನ್ನ ಲೈಬ್ರರಿಯಲ್ಲಿಯ ಅನೇಕ ಪುಸ್ತಕಗಳೂ ಅವರಿಗೆ ಸಹಾ
ವಾದವು. ಹೀಗೆ ದೊರೆತ ಗ್ರಂಥಗಳ ಅಭ್ಯಾಸದಲ್ಲಿ ಅವರಿಗೆ ಡಾ.
ರ್ನೆಟ್ಟ ಇವರು ಮಾರ್ಗದರ್ಶಕರಾಗಿ ಸಹಾಯಮಾಡುತ್ತಿದ್ದು ಹೀಗೆ
ರು ಎರಡು ವರ್ಷ ಈ ಆಗಮ ವಾಙ್ಮಯವನ್ನು ಪರಿಶೀಲಿಸಿ ಟಾಯಪ
ಕಿದ ಸುಮಾರು ೫೦೦ ಪುಟಗಳುಳ್ಳ ಒಂದು ನಿಬಂಧ ಅಥವಾ ಗ್ರಂಥ
ನ್ನೀ ಅವರು ಬರೆದಿರುತ್ತಾರೆ. ಇದಕ್ಕೋಸ್ಕರ ಲಂಡನ್ನ ವಿಶ್ವವಿದ್ಯಾ
ುದವರು ಅವರಿಗೆ ಪಿ. ಎಚ್. ಡಿ. ಪದವಿಯನ್ನು ಕೊಟ್ಟಿರುವರು. ವಾಚ
ಗೆ ನಿಜಸ್ಥಿತಿಯು ತಿಳಿಯಬೇಕೆಂಬ ಉದ್ದೇಶದಿಂದ ನಾವು ಈ ವಿಷ
ವನ್ನು ಕುರಿತು ಸ್ವಲ್ಪ ವಿಸ್ತಾರವಾಗಿ ಬರೆಯಬೇಕಾಯಿತು. ಇದಕ್ಕೆ
ರು ನಮ್ಮನ್ನು ಕ್ಷಮಿಸುವರೆಂದು ಭಾವಿಸಿದ್ದೇವೆ.

ಡಾ. ನಂದಿಮಠ ಇವರು ಬರೆದ ನಿಂಬಂಧವು ಈಗ ನಮ್ಮ ಕಡೆಗೆ
ಿ. ಅದನ್ನು ನೋಡಿದರೆ ಅವರು ಈ ವಿಷಯದ ಬಗ್ಗೆ ಅತ್ಯಂತ ಪರಿ
ಮ ವಹಿಸಿರುವರೆಂಬುವು ನಮಗೆ ಕಂಡುಬರುತ್ತದೆ. ಇದರಲ್ಲಿಯ ವಿಷ
ಗಳಿಗೂ ವೀರಶೈವ ಧರ್ಮಕ್ಕೂ ಅತ್ಯಂತ ನಿಕಟ ಸಂಬಂಧವಿರುವ
ಿಂದ, ಅವುಗಳ ಮಹತ್ವದ ಭಾಗಗಳನ್ನು ಶಿವಾನುಭವ ವಾಚಕರ

ಎಮರಿಗೆ ಕಾಲಕಾಲಕ್ಕೆ ಇಡಲು ಎಣಿಸಿರುತ್ತೇವೆ. ಇದರಿಂದ ಈ ಮಹತ್ವದ ವಿಷಯಗಳು ಅವರಿಗೆ ತಿಳಿಯುವದಲ್ಲದೆ ಸಂಶೋಧನ ಕಾರ್ಯಗಳನ್ನು ಯಾವ ರೀತಿಯಿಂದ ಮಾಡಬೇಕು ಮತ್ತು ಈ ವರೆಗೆ ಈ ಸಂಬಂಧದ ಸಂಶೋಧನ ಕಾರ್ಯಗಳು ಎಲ್ಲಿಗೆ ಬಂದಿವೆ ಇವೇ ಮೊದಲಾದ ಸಂಗತಿಗಳು ತಿಳಿದು ನಮ್ಮಲ್ಲಿಯ ಸಂಶೋಧಕರಿಗೂ ಮಾರ್ಗದರ್ಶಕವಾಗುವದೆಂದು ನಾವು ಭಾವಿಸಿದ್ದೇವೆ. ಡಾ. ನಂದೀಮಠ ಇವರು ಬರೆದ ವಿಷಯದ ಹೆಸರು "ಶೈವಸಿದ್ಧಾಂತ ಮತ್ತು ವೀರಶೈವ ಧರ್ಮತತ್ವಗಳ ನಿರೀಕ್ಷಣೆಯನ್ನೊಳಕೊಂಡ ಶಿವಾಗಮಗಳಲ್ಲಿಯ ಧರ್ಮ (*Theology of the Shivagamas being a Survey of the doctrines of the Saiva Siddhant and Vira Saivism*) ಎಂದು ಇರುತ್ತದೆ. ಇವರು ಇದರಲ್ಲಿ ಮೂರು ಭಾಗಗಳನ್ನು ಮಾಡಿದ್ದು ಮೊದಲನೆಯದರಲ್ಲಿ ಶೈವಾಗಮಗಳ ಸಾಮಾನ್ಯ ನಿರೂಪಣೆ, ಎರಡನೆಯ ಭಾಗದಲ್ಲಿ ಶೈವಸಿದ್ಧಾಂತದ ತತ್ವಗಳ ವಿವರಣೆ ಮತ್ತು ಮೂರನೆಯ ಭಾಗದಲ್ಲಿ ವೀರಶೈವ ಧರ್ಮದ ವಿವೇಚನೆ ಇವು ಬಂದಿರುತ್ತವೆ. ಡಾ. ನಂದೀಮಠ ಇವರಿಗೆ ಶೈವಸಿದ್ಧಾಂತದ ಬಗ್ಗೆ ಕೆಲವು ತಮಿಳ ದೇಶದಲ್ಲಿಯ ಪಂಡಿತರು ಸಂಶೋಧನಾತ್ಮಕವಾಗಿ ಬರೆದ ಅನೇಕ ಗ್ರಂಥಗಳೂ ದೊರೆತದ್ದರಿಂದ ಅವರಿಗೆ ಈ ಭಾಗವನ್ನು ವಿಸ್ತಾರವಾಗಿ ನಿರೂಪಣೆ ಮಾಡಲಿಕ್ಕೆ ಶಕ್ಯವಾಯಿತು. ಆದರೆ ವೀರಶೈವ ಧರ್ಮಗ್ರಂಥಗಳ ಸಹಾಯವು ಅವರಿಗೆ ಸಾಕಷ್ಟು ದೊರೆಯದೆ ಹೋದದ್ದರಿಂದ ಈ ಭಾಗವು ಅಷ್ಟು ಪೂರ್ಣತೆಯನ್ನು ಹೊಂದಿಲ್ಲ. ಅವರು ಈ ಧರ್ಮದ ವಿವರಣೆಗಳನ್ನು ರಾ॥ ಬ॥ ಮಲ್ಲಪ್ಪಾ ವಾರದ ಇವರ ಮತ್ತು ಶಿವಾನುಭವ ಗ್ರಂಥಮಾಲೆಯ ಗ್ರಂಥಗಳ ಮೇಲಿಂದಲೇ ಬರೆಯಬೇಕಾಯಿತು. ಈ ಸ್ಥಿತಿಯು ವೀರಶೈವ ಸಮಾಜದಲ್ಲಿ ಇನ್ನೂ ಇರುವದು ಅತ್ಯಂತ ಶೋಚನೀಯವಿದ್ದು ಇದರಿಂದಲೇ ಅವರ ನಿಜಸ್ಥಿತಿಯ ಬಗ್ಗೆ ತಪ್ಪು ಅಭಿಪ್ರಾಯಗಳು ಉಂಟಾಗಲು ಕಾರಣವಾಗಿರುತ್ತದೆ. ಈ ಅಪೂರ್ಣತೆಯನ್ನು ತೀವ್ರವಾಗಿ ಪರಿಹರಿಸುವದು ನಮ್ಮ ಸಮಾಜದ ಈಗಿನ ಮುಖ್ಯ ಕರ್ತವ್ಯವಾಗಿದೆ.

ಸಂಸ್ಕೃತ ವಾಙ್ಮಯದಲ್ಲಿ ವೇದ, ಉಪನಿಷತ್ತು, ಸ್ಮೃತಿಗಳು, ಕಾವ್ಯ, ವ್ಯಾಕರಣ ಮೊದಲಾದ ಅನೇಕ ಭಾಗಗಳಿದ್ದು ಇವೆಲ್ಲವುಗಳನ್ನು ಪಾಶ್ಚಾತ್ಯ

ಮತ್ತು ಪೌರ್ವಾತ್ಯ ವಿದ್ವಾಂಸರು ಬಹು ಪರಿಶ್ರಮ ಪೂರ್ವಕವಾಗಿ ಅಭ್ಯಾಸ ಮಾಡಿ ಅವುಗಳ ಬಗ್ಗೆ ಮಹತ್ವದ ಗ್ರಂಥಗಳನ್ನು ಬರೆದಿರುವರು. ಆದರೆ ಸಂಸ್ಕೃತ ವಾಙ್ಮಯದಲ್ಲಿ ಆಗಮ ವಾಙ್ಮಯವಾದರೂ ಅತ್ಯಂತ ಮಹತ್ವದ್ದಿದ್ದರೂ ಈ ವಿಷಯವಾಗಿ ಮಾತ್ರ ಈ ವರೆಗೂ ವಿದ್ವಾಂಸರ ಲಕ್ಷವು ಹೋಗಿರುವದಿಲ್ಲ. ಮತ್ತು ಇವುಗಳು ಇನ್ನೂ ಅಪರಿಚಿತವಾಗಿಯೇ ಉಳಿದಿರುತ್ತವೆ ಇದಕ್ಕೆ ಡಾ॥ ನಂದೀ ಮಠ ಇವರು ಎರಡು ಕಾರಣಗಳನ್ನು ತೋರಿಸಿರುತ್ತಾರೆ. ಅವು ಯಾವವೆಂದರೆ ನಮ್ಮ ಪುರಾಣ ಮಾರ್ಗಾನುಯಾಯಿಗಳು ತಮ್ಮ ಧಾರ್ಮಿಕವಾಙ್ಮಯವನ್ನು ತಪ್ಪು ತಿಳುವಳಿಕೆಯಿಂದ ಗುಪ್ತವಾಗಿಡಬೇಕೆಂಬ ಅವರ ಭಾವ, ಮತ್ತೊಂದು ಈ ವಾಙ್ಮಯದ ಬಗ್ಗೆ ವೈದಿಕ ಪಂಡಿತರ ಸ್ವಾಭಾವಿಕ ದ್ವೇಷ ಇವುಗಳೇ ಇರುತ್ತವೆ. ಡಾ॥ ನಂದೀಮಠ ಇವರು ವಿವರಿಸಿದ ಈ ಕಾರಣಗಳು ನಿಜವಿವೆ. ಆದರೆ ಇವುಗಳೊಂದಿಗೆ ಈ ಧರ್ಮಕ್ಕೆ ಹೊಂದಿದ ಸುಶಿಕ್ಷಿತ ಮತ್ತು ಪಂಡಿತ ವರ್ಗದವರ ಉಪೇಕ್ಷಾ ವೃತ್ತಿಯಾದರೂ ಈ ಸ್ಥಿತಿಗೆ ಬಹುಮಟ್ಟಿಗೆ ಕಾರಣವಾಗಿದೆಂದು ನಾವು ಹೇಳದೆ ಇರಲಾರೆವು.

ಈ ವಾಙ್ಮಯಕ್ಕೆ ಆಗಮಗಳು ತಂತ್ರಗಳು ಅಥವಾ ಸಂಹಿತೆಗಳು ಎಂಬ ಹೆಸರುಗಳಿರುತ್ತವೆ. ಆಗಮದ ಮೂಲ ಶಬ್ದಾರ್ಥವು ಪರಮಾತ್ಮನ ಪ್ರೇರಣೆಯಿಂದ ಹೊರ ಹೊರಟಿದ್ದು ಎಂದು ಆಗುತ್ತದೆ. ತಂತ್ರದ ಮೂಲಾರ್ಥವು ಒಂದು ವಿಷಯದ ಬಗ್ಗೆ ವಿವೇಚನಾತ್ಮಕವಾದ ವಿವರಣೆ ಇಷ್ಟೇ ಇರುತ್ತದೆ. ವೇದಗಳ ಮೂಲ ಗ್ರಂಥಗಳಿಗೆ ಸಂಹಿತೆ ಎಂಬ ಹೆಸರಿದ್ದು ಇವುಗಳು ಹ್ಯಾಗೆ ಅತ್ಯಾದರವನ್ನು ಹೊಂದಿವೆಯೋ ಹಾಗೆಯೇ ಶೈವರಲ್ಲಿ ಈ ಆಗಮ ಗ್ರಂಥಗಳಾದರೂ ಅತ್ಯಾದರವನ್ನು ಹೊಂದಿವೆ.

ಆಗಮಗಳಲ್ಲಿ ಅನೇಕ ಶಾಖೆಗಳಿದ್ದು ಅವುಗಳಲ್ಲಿ ಶೈವ, ಶಾಕ್ತ, ಮತ್ತು ವೈಷ್ಣವ ಇವುಗಳೇ ಮಹತ್ವವಾದವುಗಳು. ಈ ಪ್ರತಿಯೊಂದು ಶಾಖೆಯಲ್ಲಿ ಪುನಃ ಅನೇಕ ಉಪಶಾಖೆಗಳು ಹೊರಟು ಇವೆಲ್ಲವುಗಳ ಬಗ್ಗೆ ಅಸಂಖ್ಯ ಗ್ರಂಥಗಳು ಉತ್ಪನ್ನವಾಗಿರುತ್ತವೆ. ಶಿವಸಂಬಂಧಿಯು ಆಗಮಗಳಲ್ಲಿ ಪಾಶುಪತ, ಲಕುಲ, ಸೋಮ ಎಂಬ ಭಾಗಗಳೂ ಶಾಕ್ತಾಗಮಗಳಲ್ಲಿ ವಾಮ, ದಕ್ಷಿಣ, ಮಿಶ್ರ, ಕೌಲ ಎಂಬ ಭಾಗಗಳೂ ಉಂಟಾಗಿರುತ್ತವೆ. ಹೀಗೆ ಆಗಮಗಳೆಂದು ಒಂದು ಮಹತ್ವದ ವಾಙ್ಮಯವೇ ಸಂಸ್ಕೃತ ಭಾಷೆಯಲ್ಲಿ ಉದ್ಘಾಟಿತವಾಗಿದ್ದು ಇವುಗಳ ವಿಚಾರಗಳ ಪ್ರಭಾ

ವವು ಒಂದು ಕಾಲಕ್ಕೆ ಹಿಂದೂ ಧರ್ಮದಲ್ಲಿ ಬಹು ಮಹತ್ವದ್ದಾಗಿತ್ತು. ಮಿ॥ ಪಿ. ಟಿ. ಶ್ರೀನಿವಾಸ ಅಯ್ಯಂಗಾರರೆಂಬ ವಿದ್ವಾಂಸರು ಆಗಮ ಧರ್ಮಗಳ ಮೂಲಕ ಹಿಂದೂಧರ್ಮದಲ್ಲಿ ಪಶುಬಲಿ ಕೊಡುವ ಸಾಂಪ್ರದಾಯವು ನಿಂತಿತೆಂದು ಅಭಿಪ್ರಾಯಪಟ್ಟಿರುವರು. ಆದರೆ ಈ ಧರ್ಮಗಳು ಬೌದ್ಧ ಮತ್ತು ಜೈನ ಧರ್ಮಗಳ ಪ್ರಸಾರವನ್ನು ಹಿಂದಕ್ಕೊತ್ತಿ ಯಾವ ಹಿಂದೂ ಧರ್ಮವು ಸೂತ್ರ ಗ್ರಂಥಗಳಲ್ಲಿ ಕಂಡುಬರುತ್ತದೋ ಅದರಲ್ಲಿ ತಕ್ಕ ಮಾರ್ಪಾಡುಗಳನ್ನು ಮಾಡಿ ಈಗಿನ ಹಿಂದೂ ಧರ್ಮವನ್ನು ಪ್ರಕಟಪಡಿಸುತ್ತದೆಂದು ಡಾ. ನಂದೀಮಠ ಇವರ ಅಭಿಪ್ರಾಯವಿರುತ್ತದೆ. ಇದು ನಿಜವಿರುತ್ತದೆ. ಯಾಕೆಂದರೆ ಈಗಿನ ಕಾಲಕ್ಕೆ ದೇವಾಲಯಗಳ ಸ್ಥಾಪನೆ, ಅವುಗಳ ಪೂಜಾದಿ ಕಾರ್ಯಗಳ ರೀತಿ ಮಂತ್ರ ಭಾಗಗಳು ಇವುಗಳಲ್ಲಿ ಆಗಮ ಧರ್ಮಗಳ ಚಿನ್ಹಗಳು ಪ್ರಚಾರದಲ್ಲಿದ್ದದ್ದು ತೋರಿಬರುತ್ತವೆ. ಮತ್ತು ಬೌದ್ಧ ಮತ್ತು ಜೈನರ ಅವೈದಿಕಧರ್ಮಗಳ ಪ್ರಸಾರವನ್ನು ಒಂದು ಕಾಲಕ್ಕೆ ಕುಗ್ಗಿಸಲು ಇವು ಮುಂದಾಗಿರುತ್ತವೆ.

ಈ ಶೈವಾಗಮಗಳಂತೆಯೇ ವೈಷ್ಣವಾಗಮಗಳೂ ತಾಂತ್ರಿಕ ಆಗಮಗಳೂ ಉಂಟು. ವೈಷ್ಣವಾಗಮಗಳಲ್ಲಿ ಶೈವಾಗಮಗಳಂತೆ ಕ್ರಿಯಾ, ಚರ್ಯೆ, ಯೋಗ ಜ್ಞಾನ ಎಂಬ ನಾಲ್ಕು ಭಾಗಗಳಿದ್ದು, ಅವುಗಳಲ್ಲಿ ಮೂಲ ವೇದಮಂತ್ರಗಳಲ್ಲದೆ ಇನ್ನೂ ಅನೇಕ ಬಗೆಯ ಮಂತ್ರಗಳು ಕಲ್ಪಿಸಲ್ಪಟ್ಟದ್ದು, ಕಂಡುಬರುತ್ತದೆ. ಈ ಗ್ರಂಥಗಳಲ್ಲಿ ಅಹಿಂಸಾತತ್ವ ಪ್ರತಿಪಾದನೆ ಮೂರ್ತಿಪೂಜೆಯ ನಿರೂಪಣೆಗಳು ಬಂದಿರುತ್ತವೆ. ಹೀಗೆಯೇ ಶಾಕ್ತ ಗ್ರಂಥಗಳಾದರೂ ಅನೇಕವಾಗಿದ್ದು ಅವು ಶಕ್ತಿಯ ಉಪಾಸನೆಯನ್ನು ಮುಖ್ಯವಾಗಿ ಇಟ್ಟುಕೊಂಡು ಮತವಿಷಯಗಳನ್ನು ಬೋಧಿಸುತ್ತವೆ. ಅವುಗಳಲ್ಲಿಯ ಸಿದ್ಧಾಂತವಿಷಯಗಳು ಶಿವಾಗಮಗಳಂತೆಯೇ ಇದ್ದು ಅದ್ವೈತಮಾರ್ಗವನ್ನು ಬೋಧಿಸುತ್ತವೆ. ಅವುಗಳಲ್ಲಿ ವಿವರಿಸಿದ ಸೃಷ್ಟಿರಚನೆ ಮತ್ತು ದೀಕ್ಷಾವಿಧಿ ಪದ್ಧತಿಗಳು ವೀರಶೈವರಂತೆಯೇ ಇವೆ. ಆದರೆ ಈ ಗ್ರಂಥಗಳಲ್ಲಿ ಕೆಲವುಗಳಲ್ಲಿ ನೀತಿಗೆ ಬಾಹಿರವಾದಂಥ ಅತ್ಯಂತ ನಿಂದ್ಯ ಅನಾಚಾರಪದ್ಧತಿಗಳು ವಿವರಿಸಲ್ಪಟ್ಟಿರುತ್ತವೆ. ಆದರೆ ಶಿವಾಗಮಗಳು ಹೀಗಿರದೆ, ಅವು ಬಹು ಅತ್ಯಂತ ನೀತಿಬೋಧಕವಾಗಿದ್ದು ಉಚ್ಚ ಶುದ್ಧ ಆಧ್ಯಾತ್ಮಿಕ ವಿಷಯಗಳನ್ನು ನಿರೂಪಿಸುತ್ತವೆ.

ಡಾ. ನಂದೀಮಠ ಇವರು ಮಾಡಿದ ಮೇಲ್ಕಂಡ ವಿವರಣೆಗಳ ಮೇ ಲಿಂದ ಹಿಂದೂಧರ್ಮದಲ್ಲಿ ಆಗಮಧರ್ಮಗಳು ಬಹು ಮಹತ್ವದ ಸ್ಥಾನ ವನ್ನು ಹೊಂದಿರುವವೆಂದು ತೋರಿಬರುತ್ತದೆ. ಇವುಗಳ ವರ್ಚಸ್ಸು ಮತ್ತು ಬೆಳವಣಿಗೆಯ ಮೂಲಕ ಹಿಂದುಸ್ತಾನದಲ್ಲಿ ಅದರಲ್ಲಿ ವಿಶೇಷ ವಾಗಿ ದಕ್ಷಿಣಹಿಂದುಸ್ತಾನದಲ್ಲಿ ಮಹತ್ವದ ಸಾಮಾಜಿಕ ಮತ್ತು ಧಾರ್ಮಿಕ ಬದಲಾವಣೆಗಳು ಉಂಟಾಗಿರುತ್ತವೆ. ಈ ಧರ್ಮಗಳ ತತ್ವಗಳು ಬಹು ಜನ ಸಮಾಜದಲ್ಲಿ ಪ್ರವೇಶಿಸಿ, ಕಾಲಕಾಲಕ್ಕೆ ಸಮಾಜ ಕ್ರಾಂತಿಗಳನ್ನೂ ಧರ್ಮಕ್ರಾಂತಿಗಳನ್ನೂ ಮಾಡುತ್ತಬಂದಿವೆ. ದಕ್ಷಿಣದೇಶದಲ್ಲಿ ಚೋಳ ಪಾಂಡ್ಯರ ರಾಜ್ಯದಲ್ಲಿ, ಹಿಂದುಗಡೆ ಕರ್ನಾಟಕ ದೇಶದಲ್ಲಿ ಇವುಗಳು ಅತ್ಯಂತ ಪ್ರಸಾರಹೊಂದಿ ತಮಿಳು ಕನ್ನಡಭಾಷೆಗಳಲ್ಲಿ ಮಹತ್ತರ ವಾಙ್ಮ ಯುವನ್ನು ಹುಟ್ಟಿಸಿರುತ್ತವೆಂದು ತೋರಿಬರುತ್ತದೆ.

ಇಂಥ ಮಹತ್ವದ ಆಗಮ ವಾಙ್ಮಯುವನ್ನು ಪ್ರಕಾಶಪಡಿಸಲು ಮಾಡಿದ ಪ್ರಯತ್ನಗಳನ್ನು ಡಾ. ನಂದೀಮಠ ಇವರು ತಮ್ಮ ಲೇಖದಲ್ಲಿ ಉಲ್ಲೇಖಿಸಿದ್ದು ಮದ್ರಾಸ ಇಲಾಖೆಯಲ್ಲಿ "ಸಿದ್ಧಾಂತದೀಪಿಕೆ" ಎಂಬ ಪತ್ರಿಕೆಯ ವಿಷಯುವನ್ನೂ ಷಣ್ಮುಖ ಸುಂದರ ಮೊದಲಿಯಾರರು ಕೆಲವು ಆಗಮುಗಳನ್ನು ಪ್ರಸಿದ್ಧಿಸಿದ್ದನ್ನೂ, ಮೃಗೇಂದ್ರಾಗಮುವನ್ನು ಇಂಗ್ಲಿಷದಲ್ಲಿ ಭಾಷಾಂತರಿಸಿದ್ದನ್ನೂ ವಿವರಿಸಿರುತ್ತಾರೆ. ಆದರೆ ಆಗಮ ಗ್ರಂಥಗಳು ನೇ ಪಾಳ ದರ್ಬಾರ ಲೈಬ್ರರಿಯಲ್ಲಿಯೂ ಸಿಗುತ್ತಿದ್ದು ಪ್ರೊ॥ ಬೆಂಡಾಲ ಮತ್ತು ಹರಪ್ರಸಾದ ಶಾಸ್ತ್ರಿಗಳು ಅವುಗಳಲ್ಲಿಯ ಅಸ್ತಿತ್ವನ್ನು ಹೊರಗೆಡವಿರುತ್ತಾರೆ. ಆದರೆ ಒಟ್ಟಿಗೆ ಆಗಮ ವಾಙ್ಮಯು ಶೋಧನೆಯ ಮತ್ತು ಆದರ ಪ್ರಸಾರದ ಬಗ್ಗೆ ಎಷ್ಟು ಅಲ್ಪವಾದ ಪ್ರಯತ್ನಗಳು ನಮ್ಮ ದೇಶದಲ್ಲಿ ಜರಗಿರುತ್ತ ವೆಂಬದು ವಾಚಕರ ನಿದರ್ಶನಕ್ಕೆ ಬರದೆ ಇರಲಾರದು.

ಮುಂದೆ ಡಾ॥ ನಂದೀಮಠ ಇವರು ತಮ್ಮ ಲೇಖದಲ್ಲಿ ಈ ಆಗಮ ಗಳ ಬಗ್ಗೆ ಪುರಾತನ ಕಾಲದಿಂದ ಐತಿಹ್ಯಾತ್ಮಕವಾಗಿ ಬಂದ ಸಂಗತಿಗಳನ್ನು ವಿವರಿಸಿರುವರು. ಆಗಮುಗಳ ಸಂಖ್ಯೆಯು ೨೮ ಇದ್ದು, ಅವು ಈಶ್ವರನ ಈಶಾನ ಮುಖದಿಂದ ಹೊರಟಿರುತ್ತವೆಂಬ ಐತಿಹ್ಯವಿದೆ. ಇವುಗಳಲ್ಲಿ ಶಿವಾಗಮ, ರುದ್ರಾಗಮುಗಳೆಂದು ಎರಡು ಭಾಗಗಳಾಗಿದ್ದು, ಶಿವಾಗಮ ಗಳು ೧೦ ರುದ್ರಾಗಮುಗಳು ೧೮ ಇರುತ್ತವೆ. ಮತ್ತು ಈ ಪ್ರತಿಯೊಂದು ಆಗ ಮಕ್ಕೆ ಸಂಬಂಧಿಸಿ ಅನೇಕ ಉಪಾಗಮುಗಳೂ ಉದ್ಭವಿಸಿರುತ್ತವೆ. ಅವು

ಗಳ ಹೆಸರುಗಳನ್ನು ಡಾ॥ ನಂದೀಮಠ ಇವರು ವಿವರಿಸಿದ್ದು ಈ ವಿವರಣೆಯಲ್ಲಿ ಬೇರೆ ಬೇರೆ ಗ್ರಂಥಕಾರರಲ್ಲಿ ಮತಭಿನ್ನತೆಗಳಿವೆಯೋ ಹ್ಯಾಗೆ ಎಂಬುದನ್ನು ಅನೇಕ ಗ್ರಂಥಗಳನ್ನು ಪರೀಕ್ಷಿಸಲಾಗಿ, ಹೀಗೆ ಅವುಗಳಲ್ಲಿ ಯಾವ ಭಿನ್ನತೆಗಳು ಕಂಡುಬಾರದೆ ಎಲ್ಲ ಗ್ರಂಥಕಾರರಲ್ಲಿ ಏಕವಾಕ್ಯತೆಯು ಇರುತ್ತದೆಂಬು ಡಾ॥ ನಂದೀಮಠ ಇವರು ಕಂಡುಹಿಡಿದಿರುತ್ತಾರೆ. ಇದರಿಂದ ಅವರು ಶಿವಾಗಮಗಳ ಗ್ರಾಂಥಿಕ ವಿವರಣೆಗಳು ಕೇವಲ ಕಾಲ್ಪನಿಕವಲ್ಲೆಂದು ಅಭಿಪ್ರಾಯಪಡುತ್ತಾರೆ. ಆದರೆ ಅವರು ಇಷ್ಟರಿಂದಲೇ ಈ ಬಗೆಯ ಊಹೆಯ ಸತ್ಯತೆಯನ್ನು ನಿರ್ಧಾರವಾಗಿ ಹೇಳಲು ಶಕ್ಯವಲ್ಲೆಂದು ನಮಗೆ ತೋರುತ್ತದೆ. ಮೂಲ ಗ್ರಂಥಗಳು ಎಲ್ಲಿಯ ವರೆಗೆ ಉಪಲಬ್ಧವಿಲ್ಲವೋ ಅಲ್ಲಿಯ ವರೆಗೆ ಈ ಬಗೆಯ ಊಹೆಗಳ ಸತ್ಯತೆಯು ನಿಶ್ಚಿತವಾಗಿ ಹೇಳಲಿಕ್ಕೆ ಬರಲಾರದು.

ಡಾ॥ ನಂದೀಮಠ ಇವರು ಆಗಮ ಗ್ರಂಥಗಳ ಬಗ್ಗೆ ಅನೇಕ ಗ್ರಂಥಗಳಲ್ಲಿಯ ಉಲ್ಲೇಖಗಳನ್ನು ಬಹು ಪರಿಶ್ರಮಪೂರ್ವಕವಾಗಿ ಪರೀಕ್ಷಿಸಿ, ಅವರು ಕೆಳಗೆ ಕಾಣಿಸಿದ ವಿಧಾನಗಳನ್ನು ಮಾಡಿರುವರು. ಇವು ಮಹತ್ವದ್ದಿದ್ದು ಅವುಗಳನ್ನು ವಾಚಕರು ಅವಶ್ಯವಾಗಿ ವಿಚಾರಮಾಡತಕ್ಕದ್ದಾಗಿದೆ.

೧. ಆಗಮಗಳಲ್ಲಿರುವ ಶ್ಲೋಕಗಳ ಸಂಖ್ಯೆ ಮತ್ತು ಅವುಗಳ ಹೆಸರು ಮೊದಲಾದವುಗಳು ಕಾಲ್ಪನಿಕವಿರಬಹುದೆಂಬು ಸಕೃದ್ದರ್ಶನಕ್ಕೆ ತೋರಿದರೂ, ಅವು ಕೇವಲ ಕಾಲ್ಪನಿಕವಲ್ಲೆಂದು ಡಾ. ನಂದೀಮಠ ಇವರ ಅಭಿಪ್ರಾಯ. ಅನೇಕ ಸಾರ್ವಜನಿಕ ಲೈಬ್ರರಿಗಳಲ್ಲಿ ಮತ್ತು ಅನೇಕ ಜನರಲ್ಲಿ ದೊರಕುವ ಕೈಬರಹದ ಗ್ರಂಥಗಳ ಮೇಲಿಂದ ಈ ವಿವರಣೆಗಳಲ್ಲಿ ಬಹು ಭಾಗಗಳು ನಿಜವಿರುತ್ತವೆಂದು ತಿಳಿಯಲಿಕ್ಕೆ ಕಾರಣವಿವೆಯೆಂದು ಅವರು ಅನ್ನುತ್ತಾರೆ.

೨. ಶಿವಾಗಮಗಳ ವಿಸ್ತಾರವು ಬಹಳ ದೊಡ್ಡದಾಗಿದ್ದು ಅವುಗಳ ಪ್ರಭಾವವಾದರೂ ಒಂದು ಕಾಲಕ್ಕೆ ದೇಶದಲ್ಲಿ ವಿಶೇಷವಾಗಿತ್ತು. ಇವುಗಳಲ್ಲಿರುವ ಶ್ಲೋಕಗಳ ಸಂಖ್ಯೆಯು ನಮಗೆ ಈಗ ಮಿತಿಮೀರಿ ತೋರಿದರೂ ನಿಶ್ವಾಸ, ಕಾಮಿಕ, ಕಾರಣ, ಶಿವಧರ್ಮ ಈ ಆಗಮಗಳು ಸದ್ಯ ನಮಗೆ ಉಪಲಬ್ಧವಿದ್ದು, ಅವುಗಳ ಮೇಲಿಂದ ಆಗಮಗಳಲ್ಲಿರುವ ಒಟ್ಟು ಶ್ಲೋಕಗಳು ಈಗಿನ ಪಾಶ್ಚಾತ್ಯ ಪಂಡಿತರು ನಂಬಿರುವ ಶ್ಲೋಕಗಳಸಂಖ್ಯೆ

ಗಳಿಗಿಂತಲೂ ಬಹಳ ಹೆಚ್ಚಿಗೆ ಇರುತ್ತವೆಂದು ತಿಳಿಯಲಿಕ್ಕೆ ಏನೂ ಪ್ರತ್ಯವಾಯುವಿಲ್ಲ. ಇದು ಡಾಕ್ಟರ ನಂದೀಮಠ ಇವರಿಗೆ ತೋರಿಬಂದ ಎರಡನೆಯ ಸಿದ್ಧಾಂತವು.

೩. ಶಿವಾಗಮಗಳಲ್ಲಿಯ ವಿವೇಚನೆಗಳು ಕೇವಲ ಶಿವಧರ್ಮಗಳಬಗ್ಗೆ ಇರದೆ ಬೇರೆ ಧರ್ಮಗಳ ಬಗ್ಗೆಯೂ ಇದ್ದ ಹಾಗೆ ತೋರುತ್ತದೆಂದು ಡಾಕ್ಟರರು ತಿಳಿಯುತ್ತಾರೆ. ಅವು ಶಾಕ್ತ ವಾಮಾಚಾರ ಭೈರವ ಮೊದಲಾದ ಮತಗಳ ಬಗ್ಗೆಯೂ ಉಲ್ಲೇಖಿಸುತ್ತವೆಂದು ಕಂಡು ಬಂದಿದೆ. ಕೆಲವು ಉಪಾಗಮಗಳ ಹೆಸರುಗಳು ಬುದ್ಧ, ನರಸಿಂಹ ಎಂದು ಇದ್ದದರ ಮೇಲಿಂದ ಇವುಗಳಲ್ಲಿ ಬೌದ್ಧ ಮತ್ತು ವೈಷ್ಣವ ಧರ್ಮತತ್ವಗಳ ನಿರೂಪಣೆಯೂ ಇರಬಹುದು. ಈ ಸಂಗತಿಗಳ ಮೇಲಿಂದ ಶಿವಧರ್ಮವೆಂಬುದು ಪುರಾತನ ಕಾಲದಲ್ಲಿ ಆಗಮಗಳನ್ನು ಮನ್ನಿಸತಕ್ಕ ಒಂದೇ ಒಂದು ಧರ್ಮವಾಗಿದ್ದರೂ ಹಿಂದುಗಡೆ ಅದರಲ್ಲಿ ಅನೇಕ ಪ್ರಭೇದಗಳು ಉಂಟಾಗಿರಬಹುದು. ಪಾಂಚರಾತ್ರರ ಅಹಿರ್ಬುಧ್ನ್ಯ ಸಂಹಿತೆಯ ಅಧ್ಯಾಯ ೧೧ ನೇದರ ಮೇಲಿಂದ ಹೀಗೆ ಊಹಿಸಲು ಶಕ್ಯವಾಗುತ್ತದೆಂದು ಡಾ॥ ನಂದೀಮಠ ಇವರ ಅಭಿಪ್ರಾಯವು. ಈ ಗ್ರಂಥದಲ್ಲಿ ಹೇಳಿರುವದೇನೆಂದರೆ ಮೊದಲಿಗೆ ಒಂದೇ ಒಂದು ಶಾಸ್ತ್ರವಿದ್ದು ಜನರ ಅಜ್ಞಾನದ ಮೂಲಕ ಅದರ ಈ ಸ್ವರೂಪವು ಹೊರಟುಹೋಯಿತು. ಈ ದುಃಸ್ಥಿತಿಯನ್ನು ದೂರ ಮಾಡಲೋಸುಗ ಸಾಂಖ್ಯ, ಯೋಗ, ಪಾಶುಪತ ಮತ್ತು ಪಾಂಚರಾತ್ರವೆಂಬ ಅನೇಕ ಶಾಸ್ತ್ರಗಳು ನಿರ್ಮಿಸಲ್ಪಟ್ಟವು. ಈ ಸಂಹಿತೆಯನ್ನು ರಚಿಸಿದವರು ತಮ್ಮ ಈ ಗ್ರಂಥದಲ್ಲಿ ಹಿಂದಕ್ಕೊಮ್ಮೆ ಇದ್ದ ಪುರಾತನ ಆಗಮಧರ್ಮವನ್ನು ಉಲ್ಲೇಖಿಸುತ್ತಿರಬಹುದೆಂದು ತೋರುತ್ತದೆ. ಆಗ ಈ ಧರ್ಮವು ಈಗಿನಂತೆ ಅಕುಂಚಿತವಾಗಿರದೆ ವ್ಯಾಪಕ ಸ್ವರೂಪನ್ನು ಹೊಂದಿತ್ತು. ಮುಂದೆ ಇದರಲ್ಲಿ ಭೇದಪ್ರಭೇದಗಳುಂಟಾಗಿ ಕೆಲವುಗಳು ನೀತಿ, ರೀತಿ, ಸುವ್ಯವಸ್ಥೆಯನ್ನೊಳಕೊಂಡವು ಮತ್ತೆ ಕೆಲವುಗಳು ನೈತಿಕ ಮತ್ತು ಸಾಮಾಜಿಕ ಅನಾಚಾರಕ್ಕೆ ಪ್ರವೃತ್ತವಾದವು. ಆದರೆ ಆವೆಲ್ಲವುಗಳೂ ಶಿವಾಗಮಗಳ ಮೂಲ ಸಾಮಾನ್ಯ ಮಹತ್ವದ ತತ್ವಗಳನ್ನು ಒಪ್ಪಿಕೊಂಡಿದ್ದವು. ಈ ಎಲ್ಲ ಭೇದಪ್ರಭೇದಗಳು ಮುಂದೆ ಆಗಮಗಳು ಅಥವಾ ತಂತ್ರಗಳು ಎಂಬ ತಮ್ಮ ತಮ್ಮ ಮತವಿಷಯಕ ಗ್ರಂಥಗಳನ್ನು ಏರ್ಪಡಿಸಿಕೊಂಡವು. ಆದುದರಿಂದಲೇ ಕೌಲಾಗಮ, ವಾಮ

ತಂತ್ರ, ಭೈರವತಂತ್ರ ಎಂದು ಮೊದಲಾದ ಅನೇಕ ತಂತ್ರಗಳೂ, ಆಗಮಗಳೂ, ಉತ್ಪನ್ನವಾಗಿ ಒಂದು ದೊಡ್ಡ ಆಗಮ ವಾಙ್ಮಯವೇ ಆಗಿರಬಹುದೆಂದು ಡಾ॥ ನಂದೀಮಠ ಇವರು ತರ್ಕಿಸಿರುತ್ತಾರೆ.

೪. ಆಗಮಗಳು ೨೮ ಇದ್ದರೂ, ಅವುಗಳಲ್ಲಿ ಕಾಲಮಾನದಿಂದ ೩ ಭಾಗಗಳನ್ನು ಮಾಡಬಹುದು. ಅವುಗಳಲ್ಲಿ ಮೊದಲನೆಯ ಹತ್ತು ಆಗಮಗಳು ಪುರಾತನಕಾಲದವಿದ್ದು ಅವು ಸಹ ಮೂರು ಸಾರೆ ಹೊಸ ಸ್ವರೂಪವನ್ನು ಹೊಂದಿರಬಹುದೆಂದು ಡಾ. ನಂದೀಮಠ ಇವರು ತರ್ಕಿಸುತ್ತಾರೆ. ಯಾಕಂದರೆ ಕಾಮಿಕಾಗಮದಲ್ಲಿ ಹೇಳಿರುವದೇನೆಂದರೆಃ ಈ ಆಗಮವು ಮೊದಲಿಗೆ ಪ್ರಣವನಿಗೆ ಹೇಳಲ್ಪಟ್ಟಿತು. ಆ ಮೇಲೆ ಅವನಿಂದ ತ್ರಿಕಾಲನಿಗೆ ಆ ಮೇಲೆ ತ್ರಿಕಾಲನಿಂದ ಹರನಿಗೆ ಹೇಳಲ್ಪಟ್ಟಿತೆಂದು ಇದರಲ್ಲಿ ಇರುವದರಿಂದ ಈ ಬಗೆಯ ತಿಳುವಳಿಕೆಗೆ ಕಾರಣವಾಗುತ್ತದೆ. ಈ ೧೦ ಆಗಮಗಳಿಗಿಂತಲೂ ತರುವಾಯದ ಕಾಲದವು ಉಳಿದ ೧೮ ಆಗಮಗಳು ಈ ೨೮ ಆಗಮಗಳೆಲ್ಲವೂ ಅನೇಕ ಸಾರೆ ಸಾರ ತೆಗೆದು ಪುನಃ ರಚಿಸಲ್ಪಟ್ಟಿರಬಹುದು. ಇವೇ ಉಪಾಗಮಗಳ ಸ್ವರೂಪವನ್ನು ಹೊಂದಿರಬಹುದು. ಈ ರೀತಿಯಾಗಿ ಆಗಮ ವಾಙ್ಮಯದಲ್ಲಿ ಕಾಲಭೇದದಿಂದ ಮೂರು ಭಾಗಗಳನ್ನು ಮಾಡಿ, ಮೊದಲನೆಯದರಲ್ಲಿ ಆರಂಭದ ೧೦ ಆಗಮಗಳನ್ನೂ ಎರಡನೆಯದರಲ್ಲಿ ಮುಂದಿನ ೧೮ ಆಗಮಗಳನ್ನೂ ಮೂರನೆಯದರಲ್ಲಿ ಉಪಾಗಮಗಳೆಲ್ಲವನ್ನು ಸೇರಿಸಬಹುದು. ಈಗ ದೊರೆಯುವ ಆಗಮ ಭಾಗಗಳನ್ನು ನೋಡಿದರೆ, ಇವು ಮೂಲ ಆಗಮಗಳಾಗಲಿ, ಅಥವಾ ಅವುಗಳಿಂದ ಹೊರತೆಗೆದ ಸಾರರೂಪವಾದ ಆಗಮಗಳಾಗಲಿ ಇರದೆ ಎಲ್ಲಕ್ಕೂ ಕಡೆಗೆ ರೂಪ ಹೊಂದಿದ ಆಗಮಗಳ ಸಾರವಾಗಿರಬಹುದೆಂದು ಡಾ. ನಂದೀಮಠ ಇವರ ಅಭಿಪ್ರಾಯ. ಇವು ಮೊದಲಿಗೆ ಅತ್ಯಂತ ವಿಸ್ತಾರವಾಗಿರುವ ಆಗಮಗ್ರಂಥಗಳ ಆಕುಂಚಿತ ಆವೃತ್ತಿಗಳು ಮತ್ತು ಈಚಿಗಿನವು ಆಗಿರಬೇಕು. ಈಗ ಉಪಲಬ್ಧವಿರುವ ಸುಪ್ರಭೇದಾಗಮದಲ್ಲಿ ಈ ಗ್ರಂಥವು ಮತ್ತೊಂದು ವಿಸ್ತಾರವಾದ ಗ್ರಂಥದಿಂದ ಮಾಡಿದ ಆಕಂಚಿತ ಆವೃತ್ತಿ ಎಂದು ಅನೇಕ ಬಾರಿ ಹೇಳಲ್ಪಟ್ಟಿದೆ. ನಮಗೆ ದೊರೆಯುವ ಆಗಮ ಗ್ರಂಥಗಳಲ್ಲಿ ಇದು "ಸಾರಾತ್ಸಾರತರ"ವೆಂಬ ಉಲ್ಲೇಖಗಳು ಮೇಲಿಂದ ಮೇಲೆ ಬರುತ್ತವೆ. ಹೀಗೆ ಈಗ ಪ್ರಚಲಿತವಿರುವ ಪ್ರತಿಗಳು ಇತ್ತೀಚಿನವಾಗಿರಬೇಕು. ಆದರೆ ಇವು ಇತ್ತೀಚಿ

ನವಾಗಿದ್ದರೂ ಅವು ಬಹು ಪುರಾತನ ಕಾಲದವೆಂಬುದರಲ್ಲಿ ಎನೂ ಸಂದೇಹವಿಲ್ಲೆಂದು ಲೇಖಕರ ಅಭಿಪ್ರಾಯ. ಇವುಗಳಲ್ಲಿ ಹಿಂದುಗಡೆ ಅನೇಕರು ಇಲ್ಲದ ಭಾಗಗಳನ್ನು ಜೋಡಿಸಿರಬಹುದು. ಅಥವಾ ಬೇಡಾದ ಭಾಗಗಳನ್ನು ತೆಗೆದುಹಾಕಿರಬಹುದು. ಆದರೆ ಟಿ. ಗೋಪಿನಾಥರಾವ ಇವರು ಶಿವಾಗಮುಗಳು ನೇ ಶತಮಾನದವೆಂದು ಳಿದ್ದು, ಇಷ್ಟ ಮಾತ್ರ ಇವು ಅರ್ವಾಚೀನದವಲ್ಲೆಂದು ಡಾ॥ ನಂದೀಮಠ ಇವರ ಅಭಿಪ್ರಾಯ. ಟಿ. ಗೊಪೀನಾಥರಾಯರು ಕಾರಣಾಗಮುದಲ್ಲಿ "ದ್ರಾವಿಡವೇದ" ಗಳೆಂದು ಹೇಳಿಸಿಕೊಳ್ಳುವ ತಮಿಳ ಭಾಷೆಯಲ್ಲಿಯ ದೇವರಂ ಎಂಬ ಕೃತಿಗಳ ಉಲ್ಲೇಖವಿರುತ್ತದೆಂದು ತಿಳಿದು ಅವರು ಹೀಗೆ ಅಭಿಪ್ರಾಯಪಟ್ಟಿರುವರು. ಹೀಗೆ ಈ ಆಗಮುದಲ್ಲಿ ಆದರೆ ಉಲ್ಲೇಖವಿಲ್ಲೆಂದು ಡಾ. ನಂದೀಮಠ ಇವರು ಅದನ್ನು ಶೋಧಿಸಿ ಅನ್ನುತ್ತಾರೆ. ಒಂದು ವೇಳೆ ಹೀಗೆ ಇವುಗಳ ಉಲ್ಲೇಖವಿದ್ದರೂ, ಈ "ದೇವರಂ" ಕೃತಿಗಳ ಮಹತ್ವವನ್ನು ಹೆಚ್ಚಿಸಲಿಕ್ಕೆ ಹೀಗೆ ಯಾರೋ ಹಿಂದುಗಡೆ ಅವರಲ್ಲಿ ಸೇರಿಸಿರಬಹುದು.

ಕ್ರಿ. ಶ. ೯೨೪ ರಲ್ಲಿ ಲಿಖಿಸಲ್ಪಟ್ಟ ಕಿರಣಾಗಮುದ ಪ್ರತಿಯೊಂದು ನೇಪಾಳದಬಾರಲೈಬ್ರರಿಯಲ್ಲಿದೆ. ಇದರಲ್ಲಿ ಶಿವಾಗಮುಗಳ ಪಟ್ಟಿಯು ಇದ್ದು ಇದರಲ್ಲಿ ಕಾರಣಾಗಮುದ ಉಲ್ಲೇಖವಿದೆ. ಇಂಥ ಪುರಾತನ ಆಗಮುದಲ್ಲಿ ಇದೇ ಶತಮಾನದಲ್ಲಿ ಹುಟ್ಟಿದ "ದೇವರಂ" ಕ್ರತಿಗಳ ಪ್ರಸಿದ್ಧಿಯು ನೇಪಾಳದ ವರೆಗೆ ಹೋಗಿರುವದು ಸಂಭವವಿಲ್ಲ. ಆದ್ದರಿಂದ "ದೇವರಂ" ಶಬ್ದಗಳ ಉಲ್ಲೇಖವು ಹಿಂದುಗಡೆ ಈ ಕಿರಣಾಗಮುದಲ್ಲಿ ಸೇರಿಸಿಂಬಹುದು. ಇದಲ್ಲದೆ ಈಗ ಅಚ್ಚುಹಾಕಲ್ಪಟ್ಟ ಆಗಮುಗ್ರಂಥಗಳು ಅಶುದ್ಧವಾಗಿವೆ. ಭಾಷೆಯಲ್ಲಿ ತಪ್ಪುಗಳು ಬಹಳ ಇದ್ದು ವ್ಯಾಕರಣಕ್ಕೆ ವಿರೋಧವಾಗಿರುತ್ತವೆ. ಆದ್ದರಿಂದ ಅಷ್ಟು ವಿಶ್ವಾಸಕ್ಕೆ ಪಾತ್ರವಾದವುಗಳೂ ಅಲ್ಲ.

ಈ ಪ್ರಕಾರ ಡಾ. ನಂದೀಮಠ ಇವರ ಅಭಿಪ್ರಾಯಗಳಿದ್ದು ಅವರು ಕಟ್ಟಕಡೆಗೆ ಅನ್ನುವದೇನೆಂದರೆ, ಶಿವಾಗಮುಗಳ ಹಸ್ತಲಿಖಿತ ಗ್ರಂಥಗಳು ಇನ್ನೂ ಕಾಶ್ಮೀರ, ನೇಪಾಳ, ಮತ್ತು ದಕ್ಷಿಣಹಿಂದುಸ್ತಾನದ ಬೇರೆ ಬೇರೆ ಭಾಗಗಳಲ್ಲಿ ಉಪಲಬ್ಧವಿದ್ದರೂ ಅವು ಬಹಿರಂಗಕ್ಕೆ ಬಂದಿಲ್ಲ. ಈ ಪ್ರತಿಗಳನ್ನೆಲ್ಲ ಸಂಗ್ರಹಿಸಿ ಅತ್ಯುತ್ತಮ ಮತ್ತು ವಿಶ್ವಾಸನೀಯವಾದ ಗ್ರಂಥಗಳನ್ನು ಸಿದ್ಧಗೊಳಿಸುವದು ಒಂದು ಮಹತ್ತರ ಕಾರ್ಯವಾಗಿದೆ. ಹೀಗೆ ಇವುಗಳು ಪ್ರಕಟವಾದಮೇಲೆ ಇವುಗಳಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯಗಳನ್ನು ವಿವೇಚನಾತ್ಮಕ ಪರೀತಿಯಿಂದ ಪರೀಕ್ಷಿಸಿದ ಹೊರತು ಈ ಆಗಮು

ಗಳ ಕಾಲ ಮತ್ತು ಇವುಗಳಿಗೂ ಇತರ ಮತಗಳಿಗೂ ಇರುವ ಸಂಬಂಧ ಇವುಗಳನ್ನು ನಿರ್ಧಾರವಾಗಿ ಹೇಳಲಿಕ್ಕೆ ಶಕ್ಯವಿಲ್ಲ. ಈ ಬಗೆಯು ವ್ಯವಸ್ಥೆಯಾಗುವ ವರೆಗೆ ಆಗಮಗಳ ಸಂಬಂಧವಾಗಿ ಹೇಳಿದ ಸಂಗತಿಗಳು ಬರೇ ಊಹೆಗಳೆಂತಲೇ ತಿಳಿಯಬೇಕೇ ಹೊರ್ತು ಸಿದ್ಧಾಂತಗಳೆಂದು ತಿಳಿಯಬಾರದು. ಡಾ. ನಂದೀಮಠ ಇವರು ಪಡುವ ಈ ಕಡೆಯ ಅಭಿಪ್ರಾಯವನ್ನು ನಾವು ಸಂಪೂರ್ಣ ಸಮರ್ಥಿಸುತ್ತೇವೆ.

ಆದರೂ ಡಾ ನಂದೀಮಠ ಇವರ ಅಭಿಪ್ರಾಯವೇನೆಂದರೆ, ಈಗ ದೊರೆಯುವ ಶಿವಾಗಮಗಳ ಶೇಷಗಳು ಮೂಲ ಆಗಮಗಳಿರವೆ, ಆಗಮಶಾಸ್ತ್ರದಲ್ಲಿಯ ಪುರಾತನ ತತ್ವಗಳನ್ನು ವಿವರಿಸುವಂಥ ಅಕುಂಚಿತ ಆವೃತ್ತಿಗಳು ಇರುತ್ತವೆ. ಮತ್ತು ಇವುಗಳಲ್ಲಿಯ ಅನೇಕ ಭಾಗಗಳು ಹಿಂದುಗಡೆ ಸೇರಿಸಲ್ಪಟ್ಟಿರಬಹುದು. ಅಥವಾ ಮೊದಲಿನ ಭಾಗಗಳು ತೆಗೆದು ಹಾಕಲ್ಪಟ್ಟಿರಬಹುದು.

ಈ ಪ್ರಕಾರ ಡಾಕ್ಟರ ನಂದೀಮಠ ಇವರ ಆಗಮಗ್ರಂಥಗಳ ಈಗಿನ ಸಾಮಾನ್ಯ ಸ್ವರೂಪನ್ನು ವರ್ಣಿಸಿ, ಮುಂದೆ ಅವುಗಳ ಕಾಲವನ್ನು ನಿರ್ಣಯಿಸಲಿಕ್ಕೆ ಪ್ರಯತ್ನಿಸಿರುವರು. ಈ ಬಗ್ಗೆ ಇರುವ ಅವರ ಅಭಿಪ್ರಾಯುವನ್ನು ನಾವು ಮುಂದಿನ ಶಿವಾನುಭವ ಸಂಚಿಕೆಯಲ್ಲಿ ಕೊಡುವೆವು.

ಡಾ. ನಂದೀಮಠ ಇವರು ಮಾಡಿದ ವಿವರಣೆಗಳು ಈಗ ಉಪಲಬ್ಧವಿರುವ ಆಗಮ ಗ್ರಂಥಗಳ ಸ್ವರೂಪಗಳ ಮೇಲೆ ಅವಲಂಬಿಸಿರುತ್ತವೆಂದು ಬೇರೆ ಹೇಳಬೇಕಾಗಿಲ್ಲ. ಅವರು ಹೇಳಿದಂತೆ ಈ ಗ್ರಂಥಗಳು ಮೂಲ ಆಗಮಗಳಂತೆ ನಮಗೆ ತೋಚುವದಿಲ್ಲ. ಸೂಕ್ಷ್ಮಾಗಮದ ಶ್ಲೋಕಗಳ ಸಂಖ್ಯೆಯು ಅಸಂಖ್ಯವಾಗಿದ್ದರೂ ಈಗ ಅಚ್ಚಾಗಿರುವ ಅದರ ಪ್ರತಿಯು ವ್ಯವಸ್ಥಿತವಾಗಿ ಬರೆದ ಒಂದು ಗ್ರಂಥದ ಸ್ವರೂಪುಳ್ಳದ್ದೂ ಚಿಕ್ಕದೂ ಇರುತ್ತದೆ. ಅಚ್ಚಾದ ಬೇರೆ ಗ್ರಂಥಗಳಾದ ಪಾರಮೇಶ್ವರಾಗಮ ಮತ್ತು ವಾತುಲಾಗಮ ಇವುಗಳಾದರೂ ಹೀಗೆಯೇ ಇವೆ. ತಮಿಳಾಕ್ಷರದಲ್ಲಿ ಪ್ರಕಟವಾದ ಆಗಮ ಗ್ರಂಥಗಳಲ್ಲಿ ಶಿವಸಿದ್ಧಾಂತದ ತತ್ವಗಳೂ ದೇವಾಲಯಗಳ ಸ್ಥಾಪನೆ ಮತ್ತು ಪೂಜಾದಿ ಕರ್ಮಗಳೂ ವಿವರಿಸಲ್ಪಟ್ಟಿವೆ. ಆದ್ದರಿಂದ ಈ ಆಗಮಗ್ರಂಥಗಳು ಶೈವ ಭೇದಗಳ ನಾನಾ ಸ್ವರೂಪವನ್ನು ಹೇಳುತ್ತಿದ್ದು ಅವುಗಳ ಅಭ್ಯಾಸವು ಮತ್ತು ನಿರೀಕ್ಷಣವು ಐತಿಹಾಸಿಕ ದೃಷ್ಟ್ಯಾ ಅತ್ಯಂತ ಮಹತ್ವವಾಗಿದ್ದರೂ ವೀರಶೈವ ಧರ್ಮತತ್ವಗಳ ಸಂಪೂರ್ಣ ಜ್ಞಾನಮಾಡಿಕೊಳ್ಳಲಿಕ್ಕೆ ಅವು ಮಾರ್ಗದರ್ಶಕವಾಗುವವೆಂದು ನಾವು

ಳಲಾರೆವು. ಅನೇಕರು ಆಗಮ ಗ್ರಂಥಗಳನ್ನು ಪ್ರಕಟನೆಗೆ ಅತ್ಯಂತ
ಹತ್ವ ಕೊಡುತ್ತಿದ್ದು ಅವರು ಡಾ. ನಂದೀಮಠ ಇವರು ಮಾಡಿರುವ
ೇಲ್ಕಂಡ ವಿವರಣೆಗಳನ್ನು ಚೆನ್ನಾಗಿ ಲಕ್ಷಿಸುವರೆಂದು ನಮ್ಮ ಸೂಚನೆ
ದೆ. ವೀರಶೈವ ಧರ್ಮತತ್ವಗಳ ಅಭ್ಯಾಸಮಾಡಲಿಚ್ಛಿಸುವವರು ಅದು
ತ್ಯಂತ ಉಜ್ವಲ ಸ್ಥಿತಿಯನ್ನು ಹೊಂದಿದ ಬಸವೇಶ್ವರನ ಕಾಲದಲ್ಲಿ
ಾದುರ್ಭೂತವಾದ ವೀರಶೈವ ವಾಙ್ಮಯವನ್ನು ಲಕ್ಷಿಸುವದು ಬಹಳ ಅವಶ್ಯ
ಂದು ನಮಗೆ ತೋರುತ್ತದೆ. ಈ ಕಾಲಕ್ಕೆ ವೀರಶೈವ ಪಂಡಿತರು
ತ್ತಟ್ಟಿಗೆ ಸಮ್ಮಿಲಿತರಾಗಿ ನಾನಾ ಬಗೆಯಾಗಿ ಇದ್ದ ಆಗಮ ವಾಙ್ಮಯ
ಲ್ಲಿಯ ವೀರಶೈವ ಭಾಗಗಳನ್ನು ಕಂಡುಹಿಡಿದು ಅವುಗಳನ್ನು ವ್ಯವಸ್ಥೆ
ಯಿಂದ ಏಕೀಕೃತಮಾಡಿ ದೇಶದಲ್ಲಿ ಹಬ್ಬಗೊಳಿಸಿದರೆಂದು ತೋರು
ದೆ. ಹೀಗೆ ಇವರು ಪ್ರತಿಪಾಲಿಸಿದ ವಿಷಯಗಳು ವಚನವಾಙ್ಮಯ
ಲ್ಲಿ ಅತಿ ಅತ್ಯಂತ ಸ್ಫುಟವಾದ ರೀತಿಯಿಂದ ವಿವರಿಸಲ್ಪಟ್ಟಿರುವದರಿಂದ
ವು ವೀರಶೈವ ಮತದ ತತ್ವಗಳನ್ನೂ ಅದರ ಆಚಾರವಿಚಾರಗಳನ್ನೂ
ಳಿದುಕೊಳ್ಳಲು ಅತ್ಯಂತ ಸಹಾಯಕಾರಿಯಾಗಿವೆ. ಆದ್ದರಿಂದಲೇ ನಾವು
ವಚನವಾಙ್ಮಯ ಪ್ರಕಟನೆಗೆ ಅತ್ಯಂತ ಮಹತ್ವದ ಸ್ಥಾನವನ್ನು
ೂಡತಕ್ಕದ್ದು. ಈ ವಚನವಾಙ್ಮಯದ ತತ್ವಗಳಾದರೂ ಮೂಲ ಶೈವ
ರ್ಮಗಳ ಮುಖ್ಯ ತತ್ವಗಳ ಮೇಲೆ ನಿಲ್ಲಿಸಲ್ಪಟ್ಟಿದ್ದು ಇದಕ್ಕೆ ಈ ಗ್ರಂಥ
ಳಲ್ಲಿ ಅಲ್ಲಲ್ಲಿ ಅನೇಕವಾಗಿ ತೋರಿಬರುವ ಆಗಮ ಗ್ರಂಥಗಳ ಆಧಾರ
ಶ್ಲೋಕಗಳೇ ಸಾಕ್ಷಿಯಾಗಿವೆ. ಆದ್ದರಿಂದ ನಮ್ಮ ಗ್ರಂಥ ಪ್ರಕಟನಾಕಾ
ರ್ಯದಲ್ಲಿ ಈಗ ವಚನವಾಙ್ಮಯ ಪ್ರಸಿದ್ಧಿಗೆ ಅತ್ಯಂತ ಮಹತ್ವದ ಸ್ಥಾನ
ನ್ನು ಕೊಟ್ಟಿದ್ದೇವೆ. ನಾವು ಈ ವಾಙ್ಮಯವನ್ನು ಪರಿಶೋಧಿಸಿ, ಅವು
ಳಲ್ಲಿಯ ಷಟ್‌ಸ್ಥಲದ ಸಿದ್ಧಾಂತ, ಅಷ್ಟಾವರಣಗಳು ಮತ್ತು ಧಾರ್ಮಿಕ
ಮೂಲತತ್ವಗಳು ಇವುಗಳನ್ನು ಗೊತ್ತುಹಿಡಿದದ್ದಾದರೆ, ಮೂಲ ಸಂಸ್ಕೃತ
ಗಮಗಳಲ್ಲಿ ನಿಜವಾದ ವೀರಶೈವ ತತ್ವಗಳಾವವು ಎಂಬುದನ್ನು ಕಂಡು
ಡಿಯಲು ಬಹು ಸಹಾಯಕವಾಗುತ್ತದೆ. ಹೀಗೆ ಈ ಕನ್ನಡವಾಙ್ಮ
ಯದ ಅಭ್ಯಾಸವು ಆಗಮಗಳನ್ನು ಅಭ್ಯಾಸಿಸಲಿಕ್ಕೆ ತಳಹದಿಯಾಗಿರುತ್ತ
ಂದು ನಮಗೆ ತೋರುತ್ತದೆ.

ಆಗಮಗಳ ಕಾಲದ ಬಗ್ಗೆ ಮುಂದಿನ ಸಂಚಿಕೆಯಲ್ಲಿ ವಿವರಿಸುವೆವು.

# ಕರ್ಮಯೋಗ.

(ಲೇಖಕ:— ರಾ॥ ರಾ॥ ಮಡಿವಾಳಪ್ಪ ಸಾಸನೂರ.)



ಯೋಗವೆಂದರೆ ಕರ್ಮದಲ್ಲಿ ಕೌಶಲ್ಯವೆಂಬುವದೊಂದು ಗೌರವದ ಅರ್ಥವದೆ. ಕೃ-ಮಾಡು ಎಂಬ ಸಂಸ್ಕೃತ ಧಾತುವಿನಿಂದ 'ಕರ್ಮ' ವು ಹುಟ್ಟಿದೆ. ಆದುದರಿಂದ ಕರ್ಮದ ಶಬ್ದಶಃ ಅರ್ಥವು ಕೆಲಸವೆಂದಾಗುವದು. ಅದರಲ್ಲಿ ಮಾನಸಿಕ ಹಾಗು ಶಾರೀರಿಕ ಕರ್ಮಗಳ ಸಮಾವೇಶವಾಗುವದು. ಯಾವದೊಂದು ರೀತಿಯ 'ಚಲನ ವಲನ' ಇದ್ದಲ್ಲೆಲ್ಲ ಕರ್ಮದ ಅಸ್ತಿತ್ವ ವಿರುತ್ತದೆ. ಈ ಅರ್ಥದಲ್ಲಿ ಭಕ್ತಿ, ಪ್ರೀತಿ, ಅರ್ಚನೆ, ಧ್ಯಾನ, ಧಾರಣೆ ಸದಸದ್ವಿವೇಕ ಬುದ್ಧಿ ಇವೆಲ್ಲವುಗಳೂ ಕರ್ಮಗಳೆ. ಅವರಂತೆ ತಿನ್ನುವದು ಉಣ್ಣುವದು ನಡೆಯುವದು ಮಾತಾಡುವದು ಇವುಗಳಾದರೂ ಕರ್ಮಗಳೇ.

ಪ್ರತಿಯೊಂದು ಕರ್ಮವು ತನ್ನ ಪ್ರತಿಕರ್ಮವನ್ನು ಒಡಗೂಡಿರುತ್ತದೆ. ಕಾರಣವು ಕಾರ್ಯದಿಂದ ಹೇಗೆ ತೀರ ಭಿನ್ನವಾಗಲರಿಯದೋ ಹಾಗೆಯೇ ಕರ್ಮವಾದರೂ ತನ್ನ ಪರಿಣಾಮದಿಂದ ಬೇರೆಯಾಗಲಾರದು. ಆದುದರಿಂದ ಕರ್ಮದ ಮತ್ತೊಂದು ಅರ್ಥವು ಕರ್ಮ ಹಾಗೂ ಅದರ ಪರಿಣಾಮವೆಂದಾಗುವದು. ಕಾರಣ ಕಾರ್ಯಗಳ ಶೃಂಖಲೆಗೆ ಕರ್ಮವೆನ್ನುತ್ತಾರೆ. ನಮ್ಮ ದೇಹದ ಪ್ರತಿಯೊಂದು ಕೆಲಸವು ಕರ್ಮದ ನಿಯಮಕ್ಕೊಳಪಟ್ಟಿದೆ. ಈ ಸೃಷ್ಟಿಯ ನಿಯಮಕ್ಕನುಸಾರವಾಗಿಯೇ ನಾವು ಅನಾದಿಕಾಲದಿಂದಲೂ ಕರ್ಮಗಳನ್ನು ಮಾಡುತ್ತ ಅವುಗಳ ದುಷ್ಟ ಅಥವಾ ಶಿಷ್ಟ ಪರಿಣಾಮಗಳನ್ನು ಅನುಭವಿಸುತ್ತ ಬಂದಿದ್ದೇವೆ.

ಪ್ರತಿಯೊಂದು ಕರ್ಮದ ಪರಿಣಾಮವು ಮನಸಿನ ಮೇಲೆ ತನ್ನದೊಂದು ಗುರುತನ್ನು ಬಿಡುತ್ತದೆ. ಈ ಗುರುತೇ ಸಂಸ್ಕಾರವು. ಈ ಸಂಸ್ಕಾರವೇ ಅಂತಹ ಮತ್ತೊಂದು ಕರ್ಮದ ಬೀಜವು. ಈ ಅರ್ಥದಲ್ಲಿ ಹೋದ ಕರ್ಮಗಳ ಒಟ್ಟಾರೆಯಾದ ಪರಿಣಾಮ ಅಥವಾ ಭವಿಷ್ಯತ್ಕರ್ಮಗಳ ಬೀಜರೂಪವೆಂದು ಕರ್ಮದ ಅರ್ಥವಾಗುವದು. ಆದುದರಿಂದ ಯಾವನೊಬ್ಬನು ಪೂರ್ವಜನ್ಮಗಳಲ್ಲಿ ಮಾಡಿದ ಕರ್ಮಗಳ ಸಮವಾಯಿ ಪರಿಣಾಮವೇ ಆ ವ್ಯಕ್ತಿಯ ಸ್ವಭಾವವಾದ ಕಾರಣ ಅದಕ್ಕೆ ನಾವು ಕರ್ಮವೆನ್ನಬಹುದು. ಅದರಂತೆಯೇ ನಮ್ಮ ಮುಂದಿನ ಜನ್ಮವಾದರೂ ನಮ್ಮ ಮಾನ

ೃ ಉುಗು ಶುುಲದ (ಈ ಜನ್ಮದ) ಕರ್ಮಗಳ ಒಟ್ಟು ಪರಿಣಾಮವಿರು
ದೆ. ಆದುದರಿಂದ ಕರ್ಮಯೋಗವೆಂದರೆ ಕರ್ಮವೆಂಬ ಶಬ್ದಕ್ಕಾಗುವ
ಾರೂ ವಿಚಾರಗಳನ್ನೊಳಗೊಂಡ ಯೋಗದ ಶಾಲೆಯು. ಆತ್ಮನ್ನು
ರ್ಯ-ಕಾರಣ ಚಕ್ರದಿಂದ ಹೇಗೆ ಬಿಡುಗಡೆ ಹೊಂದಬಲ್ಲನು ಬಿಡು
ಡೆ ಹೊಂದಿ ಪೂರ್ಣ ಸ್ವಾತಂತ್ರ್ಯವನ್ನು ಹೇಗೆ ಪಡೆಯಬಲ್ಲನು ಜೀವ
ದ ಅತ್ಯುಚ್ಚ ಧ್ಯೇಯವನ್ನು ಹೇಗೆ ಕೊನೆಗಾಣಿಸಬಲ್ಲನು ಮತ್ತು ಸರ್ವ
ರ್ಮಗಳ ಕಡೆಯ ಗುರಿಯನ್ನು ಹೇಗೆ ಮುಟ್ಟಬಲ್ಲನು ಎಂಬಿವೇ ಮೊದ
ಾದವುಗಳ ಸಮಾಲೋಚನೆಯನ್ನು ಕರ್ಮಯೋಗವು ಮಾಡುತ್ತದೆ.
ಾವದೊಂದು ಮತದಲ್ಲಿ ವಿಶ್ವಾಸವಿಲ್ಲದವರಿಗೂ ಪೂಜಿಸಲು ಮನಸಿಲ್ಲ
ವರಿಗೂ ವಿಶಿಷ್ಟ ದೇವರನ್ನು ಅರ್ಚಿಸಲೊಲ್ಲದವರಿಗೂ ಇದು ಉತ್ತಮ
ಾದ ಹಾದಿ.

ನಮ್ಮ ಜೀವನದಲ್ಲಿ ಅಡರುವ ಎಲ್ಲ ಬಗೆಯ ದುಃಖಗಳ ನಿಜವಾದ
ಾರಣವು, ನಮ್ಮ ಕರ್ಮಗಳಲ್ಲಿಯೇ ಇರುತ್ತದೆ ಎಂದು ಕರ್ಮಯೋಗವು
ಲಿಸುತ್ತದೆ. ನಾವು ಬಿತ್ತಿದ್ದರ ಫಲವನ್ನು ನಾವೇ ಉಣ್ಣುತ್ತೇವೆ. ನಮ್ಮ
ಃಖಕ್ಕೋಸುಗ ತಾಯಿತಂದೆಗಳನ್ನಾಗಲಿ, ದುಷ್ಟ ಗ್ರಹಗಳನ್ನಾಗಲಿ, ಹಳಿ
ುವ ಕಾರಣವಿಲ್ಲ. ಆದರೆ ಅವುಗಳ ಉಗಮಸ್ಥಾನವನ್ನು ಕಂಡುಹಿಡಿಯ
ಕ್ಕೆ ನಮ್ಮೊಳಗೆ ನಾವೇ ನೋಡಿಕೊಳ್ಳತಕ್ಕದ್ದು. ಯೋಗದ ಈ ಶಾಲೆಯು
ರ್ಮದ ರಹಸ್ಯವನ್ನು ತಿಳಿಸುತ್ತದೆ. ಅದನ್ನರಿತು ನಾವು ಬಂಧ ಹಾಗೂ ದುಃಖ
ಳ ಕಾರಣಗಳನ್ನು ಕಳೆದು ಸ್ವಾತಂತ್ರ್ಯ, ಶಾಂತತೆ, ಸೌಖ್ಯಗಳನ್ನು
ಲ್ಲಿಯೂ ಮರಣಾನಂತರದಲ್ಲಿಯೂ ಅನುಭವಿಸುವೆವು. ಯಾವದೊಂದು
ುದ್ದೇಶದಿಂದ ಪ್ರೇರಿತವಾದ ಕರ್ಮವು ಆತ್ಮನ ಬಂಧಕ್ಕೆ ಕಾರಣವಾ
ುತ್ತದೆ. ಫಲದ ಆಶೆಯಿಲ್ಲದೇ ಕರ್ಮ ಮಾಡುವದೇ ಕರ್ಮದ ರಹ
್ಯವು. ಈ ಸಿದ್ಧಾಂತವನ್ನೇ ನಮ್ಮ ದಿನದ ಜೀವನಕ್ಕೆ ಸರಿಪಡಿಸಿಕೊಂಡರೆ
ಾವು ಮಾಡುವ ಪ್ರತಿಯೊಂದು ಕೆಲಸವು ಆತ್ಮನ ಬಿಡುಗಡೆಯ ಕೆಲ
ದಲ್ಲಿ ಮುಂದುವರಿಯಲಿಕ್ಕೆ ನಮಗೆ ಸಹಾಯವಾಗುವದು. ಸ್ವಲ್ಪ ಫಲಾಶೆ
ದ್ದರು ಸಹ ಅದೇ ಮತ್ತೊಂದು ಕರ್ಮದ ಬೀಜವಾಗುವದು. ಅಲ್ಲದೆ
ತಿಯೊಂದು ಕರ್ಮವು ಅಂತಹದೇ ಪ್ರತಿಕರ್ಮವನ್ನು ಹುಟ್ಟಿಸುವದೆಂ
ದನ್ನು ಕರ್ಮಯೋಗಿಯು ಮನವರಿಕೆ ಮಾಡಿಕೊಳ್ಳತಕ್ಕದ್ದು. ಕರ್ಮದ
ಜವಾದ ರಹಸ್ಯವನ್ನರಿತು ತನ್ನ ಕರ್ತವ್ಯವನ್ನು ಮಾಡುವ ಪ್ರತಿಯೊ

ಮನುಷ್ಯನು ನಿಜವಾಗಿ ನಿಸ್ವಾರ್ಥಿಯಾಗಿ ಸ್ವಸ್ವರೂಪಜ್ಞಾನವನ್ನು ಪಡೆಯುತ್ತಾನೆ. ಅಂದರೆ ಆತ್ಮನು ಹುಟ್ಟುಸಾವುಗಳಿಲ್ಲದವನೆಂದು ಅರಿಯುತ್ತಾನೆ.

ಕರ್ಮಯೋಗಾನುಸಾರವಾಗಿ ನಿಜವಾದ ಆತ್ಮನು ಶಾರೀರಿಕ ಮಾನಸಿಕ ಆಕಾರಗಳಿಂದ ಮರ್ಯಾದಿತವಾಗಿ ಕರ್ತೃ, ಭೋಕ್ತೃ ರೂಪನಾಗಿ ಪರಿಣಮಿಸಿ ಅನೇಕ ಉದ್ದೇಶಗಳಿಂದ ಕರ್ಮ ಮಾಡುತ್ತ ಕೈಗೊಂಡ ಕಾರ್ಯಗಳ ಪರಿಣಾಮದಲ್ಲಿ ಆಸಕ್ತಿಯುಳ್ಳವನಾಗುವನು. ಈ ಪ್ರಕಾರ ಶರೀರವೇ ನಾವೆಂದು ತಿಳಿದು, ಈ ಮರ್ಯಾದಿತವಾದ 'ಅಹಂ' ಇದನ್ನು ಸುಖೋಪಭೋಗಕ್ಕೆ ಅಣಿ ಮಾಡಲು ಯತ್ನಿಸುತ್ತೇವೆ. ಇಂತಹ ಆತ್ಮನ ಅರ್ಥಜ್ಞಾನವು ಅಥವಾ ಆತ್ಮನ ನಿಜಸ್ವರೂಪದ ಅಜ್ಞಾನವು ಸ್ವಾರ್ಥತೆಯ ಮುಖ್ಯ ಕಾರಣವು. ಮುಂದೆ ಈ ಸ್ವಾರ್ಥತೆಯಿಂದಲೇ ಫಲಾಶೆ ಹುಟ್ಟುತ್ತದೆ. ಈ ಫಲಾಶೆಯು ನಮ್ಮನ್ನು ದಾಸ್ಯದಲ್ಲಿಡುತ್ತದೆ. ಕರ್ಮಯೋಗವು ನಮ್ಮ ನಿಜವಾದ ಸ್ವರೂಪಜ್ಞಾನವನ್ನು ಮಾಡಿಕೊಳ್ಳುವ ರೀತಿಯನ್ನು ತೋರಿಸುತ್ತದೆ. ಮತ್ತು ಮರ್ಯಾದಿತವೆಂದು ತಿಳಿದುಕೊಂಡ ಆತ್ಮನ ಸತ್ಯಸೀಮೆಯನ್ನು ನಿದರ್ಶನಕ್ಕೆ ತಂದುಕೊಡುತ್ತದೆ. ಆ ಮೇಲೆ ನಾವು ಯಾವದೊಂದು ಸ್ವಾರ್ಥವುಳ್ಳ ಉದ್ದೇಶದಿಂದ ಪ್ರೇರಿತರಾಗದೆ ಇಡೀ ಮಾನವ ವರ್ಗಕ್ಕೋಸುಗ ದುಡಿವರೂ ನಮ್ಮ ದೆಸೆಯಿಂದಲೆ ಕೆಲಸ ಮಾಡುತ್ತೇವೋ ಎನ್ನುವಂತೆ ಆಸ್ಥೆಯಿಂದಲೂ, ಎಚ್ಚರಿಕೆಯಿಂದಲೂ, ಮಾಡಹತ್ತುವೆವು. ನಮ್ಮ ಸುಖಸಂಪತ್ತುಗಳಿಗೆ ಮನಸು ಹಾಕದೆ ಎಲ್ಲರ ಹಿತಕ್ಕೋಸುಗ ಹೆಣಗಾಡಹತ್ತುವೆವು.

೧. ನಿಜವಾದ ಕರ್ಮಯೋಗಿಯಾಗಬೇಕೆನ್ನುವವನು ಕರ್ಮದ ನಿಜವಾದ ರಹಸ್ಯವನ್ನು ಅರಿತುಕೊಳ್ಳಬೇಕು. ಮತ್ತು ಶಾರೀರಿಕ ಮಾನಸಿಕ ಕರ್ಮಗಳೆಲ್ಲವೂ ಆ ಕರ್ತೃವಿನ ಮೇಲೆ ಏನಾದರೊಂದು ಪರಿಣಾಮವನ್ನು ಅವಶ್ಯವಾಗಿ ಮಾಡುವವೆಂಬದನ್ನು ನೆನಪಿನಲ್ಲಿಡತಕ್ಕದ್ದು. ಈ ತರದ ನಿಯಮಭಂಗವಾದರೆ ಆ ಕರ್ಮಗಳ ಪರಿಣಾಮವಾದರೂ ಕೆಟ್ಟದ್ದಾಗಿ ಅದರಿಂದ ಅವಿಶ್ರಾಂತಿ, ಸುಖಾಭಾವ, ಆಧಿವ್ಯಾಧಿಗಳುತ್ಪನ್ನವಾಗುವವು.

ಕರ್ಮಯೋಗಿಯಾಗಲಿಚ್ಛಿಸುವವನು ಎರಡನೆಯವರಿಗೆ ಕೇಡುಬಯಸಕೂಡದು. ಯಾಕಂದರೆ ಅದರಿಂದ ಪ್ರಥಮತಃ ಕೇಡುಬಗೆದವ

[illegible] ಪ್ರತಿಯೊಂದು ವಿಚಾರದಿಂದ ಮನಸ್ಸೊಂದು ಸ್ಥಿತಿಯನ್ನು ತಾಳುವದು ಮತ್ತು ಅದೇ ಸ್ಥಿತಿಯಲ್ಲಿಯು ಮನಸ್ಸಿನ ದ ಪ್ರೇರಿಸಲ್ಪಡಹತ್ತುವವು. ಆದ್ದರಿಂದ ನಾವು ಕೆಟ್ಟ ವಿಚಾರಗ ಮನಸ್ಸಿನಲ್ಲಿ ತಂದರೆ ಅದರಿಂದ ನಮಗೆ ಎರಡು ಬಗೆಯು ಕೇಡಾ ದು. ಎರಡನೆಯವರ ಮನಸಿನಮೇಲೆ ಪರಿಣಾಮವನ್ನುಂಟುಮಾ ದಲ್ಲದೆ, ಎಲ್ಲಿ ದುಷ್ಟವಿಚಾರಗಳುಳ್ಳ ಅಂತಹ ಸ್ಥಿತಿಯಲ್ಲಿಯು ಎರಡ ಮನಸ್ಸುಗಳಿಂದ ಪರಿಣಾಮವನ್ನುಂಟುಮಾಡಿಸಿಕೊಳ್ಳುವದು. ನಿಜ ಭೂತಕಾಲದಲ್ಲಿ ಮಾನಸಿಕ ಜಗತ್ತಿನಲ್ಲಿ ಸಂಗ್ರಹಿತವಾದ ಎಲ್ಲ ವಿಚಾರಗಳ ಪರಿಣಾಮಕ್ಕೆ ನಮ್ಮ ಮನಸ್ಸೀಡಾಗುವದು. ಉತ್ತಮ ಾರಗಳನ್ನೇ ಮನಃನಲ್ಲಿ ತರುವದರಿಂದ ಉತ್ತಮ ಪರಿಣಾಮಗಳೇ ಮೇಲಾಗುವವು. ಆದ್ದರಿಂದಲೇ ದುಷ್ಟರಾದವರು ದಿನದಿನಕ್ಕೆ ಹೆಚ್ಚು ದುಷ್ಟರಾಗುವರು. ಶಿಷ್ಟರಾದವರು ಹೆಚ್ಚುಹೆಚ್ಚಿಗೆ ಶಿಷ್ಟ ವರು.

ವಿಶ್ವದಲ್ಲಿ ಒಂದೇ ಒಂದು ಸತ್ಯ ವಸ್ತುವಿದೆ, ಈ ವಸ್ತುವೇ ಸರ್ವ ಗಳಲ್ಲಿದೆ, ಯೆಂದು ಕರ್ಮಯೋಗಿಯು ತಿಳಿದು ಎಲ್ಲರ ಅಧಿಕಾ ನ್ನು ಒಡಂಬಟ್ಟು ಯಾವನ್ನೂ ಮನಸಿನಿಂದಾಗಲೀ, ಶರೀರದಿಂದಾ ನೋಯಿಸಕೂಡದು. ಇಂತಹ ಯೋಗಿಯು ನಿಜವಾಗಿಯೇ ಸ್ವಾರ್ಥನಿರುವನು. ಸಕಲ ಜಗತ್ತಿಗೂ ಮಾನವ ವರ್ಗಕ್ಕೂ ಅವನು ಸ್ವರೂಪನಾಗುವನು.

ಕರ್ಮಯೋಗ ಸಾಧನೆ ಮಾಡಲಿಚ್ಛಿಸುವವನು ತನ್ನ ಕರ್ಮಗಳ ದಲ್ಲಿ ಆಶೆಯನ್ನು ಬಿಟ್ಟುಬಿಡಬೇಕು ಮತ್ತು ತನ್ನ ಕರ್ಮವನ್ನು ಡುವಾಗ ತಂದೆತಾಯಿಗಳಿಗೂ ಸಮಾಜಕ್ಕೂ ದೇಶಕ್ಕೂ ಎಲ್ಲ ಮಾನ ರ್ಗಕ್ಕೂ ತಾನು ಕೊಡಬೇಕಾದ ಸಾಲವನ್ನು ತೀರಿಸುತ್ತೇನೆಂಬ ವಿಚಾ ನ್ನು ಮನದಲ್ಲಿಟ್ಟು, ಕರ್ಮಕ್ಕಾಗಿಯೇ ಕರ್ಮವನ್ನು ಮಾಡತಕ್ಕದ್ದು. ಲಗಿತ್ತಿಯೋಪಾದಿಯಲ್ಲಿ ಮಕ್ಕಳು ತನ್ನವಲ್ಲವಾದರೂ ತನ್ನ ಕೈಯಲ್ಲಿ ಇಡಲ್ಪಟ್ಟದ್ದರಿಂದ ಅನುಭವಸಂಪಾದನೆಗಾಗಿಯೂ ಅವುಗಳ ಗುಪ್ತ ಭಾವನೆಗಳನ್ನು ಹೊರಗೆಡಹುವದಕ್ಕಾಗಿಯೂ ಅವುಗಳ ಜೋಪಾನ ಅವನು ಮಾಡತಕ್ಕದ್ದು.

ಮತ್ತೆ ಕರ್ಮಯೋಗಿಯಾದವನು ತಾನು ಯಾವ ಕರ್ಮದ ಕರ್ತೃನಲ್ಲದೆ ಶಾರೀರಿಕ ಮಾನಸಿಕ ಕರ್ಮಗಳೆಲ್ಲವು ಕೇವಲ ಪ್ರಕೃತಿಶಕ್ತಿಗಳ ಪರಿಣಾಮವಾಗಿವೆಯೆಂದು ತಿಳಿಯುವನು. ಆದ್ದರಿಂದಲೇ ಅವನು ಯಾವದೊಂದು ಕರ್ಮವು ದುಷ್ಟವಾಗಲಿ ಶಿಷ್ಟವಾಗಲಿ ತಾನು (ನಿಜವಾಗಿ) ಮಾಡಿರುವೆನೆಂದೆನ್ನುವದಿಲ್ಲ. ಅವನು ಯಾವಾಗಲೂ ಮನಃಬುದ್ಧಿ ಇಂದ್ರಿಯಗಳನ್ನು ನಿರಂತರ ಕಾರ್ಯದಲ್ಲಿ ತೊಡಗಿಸಿ ತಾನು ಎಲ್ಲವುಗಳ (ಶಾರೀರಿಕ ಅಥವಾ ಮಾನಸಿಕ ಕರ್ಮಗಳ) ಜ್ಞಾತೃವೆನ್ನುವಂತೆ ಪ್ರೇಕ್ಷಕನಾಗಿರುವೆನೆಂಬ ವಿಚಾರವನ್ನು ತನ್ನಲ್ಲಿ ಸ್ಥಿರೀಕರಿಸಿಕೊಳ್ಳುವನು. ಈ ರೀತಿಯಾಗಿ ಕರ್ಮಶೃಂಖಲೆಯಿಂದವನು ಬಿಡುಗಡೆ ಹೊಂದಿ ಸಾಧಾರಣ ಜನರನ್ನು ಬದ್ಧರನ್ನಾಗಿ ಮಾಡುವ ಕರ್ಮದ ಪರಿಣಾಮುಗಳಲ್ಲಿ ಆಸಕ್ತನಾಗಿರುವನು. ತನ್ನ ಪ್ರತಿದಿವಸ ಜೀವನದಲ್ಲಿಯಾಗುವ ಜಯಾಪಜಯುಗಳನ್ನು ಅವನು ಲೆಕ್ಕಿಸುವದಿಲ್ಲ. ತನ್ನ ಕೈಲಾದಷ್ಟು ಮನಮುಟ್ಟಿ ತಾನು ಕೈಕೊಂಡ ಕಾರ್ಯದಲ್ಲಿ ಶಕ್ತಿಯನ್ನೆಲ್ಲ ವೆಚ್ಚ ಮಾಡುವನು. ಇಷ್ಟಾಗಿಯು ಅವನಿಗೆ ಜಯ ದೊರೆಯದಿದ್ದರೆ ಅವನು ಅದಕ್ಕೋಸುಗ ದುಃಖಪಡುವದಿಲ್ಲ. ಪ್ರಕೃತಿ ಪರಿಸ್ಥಿತಿಯಲ್ಲಿ ತಾನು ಮಾಡತಕ್ಕದನ್ನೆಲ್ಲವನ್ನು ಮಾಡಿದ್ದೇನೆಂಬ ವಿಚಾರವನ್ನು ಮನದಲ್ಲಿ ತಂದುಕೊಂಡು ಮನಸ್ಸಿನಲ್ಲಿ ಶಾಂತತೆ ಸಮಾಧಾನಗಳನ್ನು (ಅಪಜಯುವು ಎದುರಿನಲ್ಲಿ ತೋರುತ್ತಿದ್ದರೂ) ಇಟ್ಟುಕೊಳ್ಳುವನು.

ಈ ಜಗತ್ತಿನಲ್ಲಿ ಗುಲಾಮನಂತಿರದೆ ಒಡೆಯನಂತೆ ಆಚರಿಸುವದೇ ಕರ್ಮಯೋಗಿಯ ಗುರಿ. ಸಾಧಾರಣ ಜನರು ಇಚ್ಛೆ ಮನೋವಿಕಾರಗಳ ಯುಜಮಾನತ್ವವನ್ನು ಸ್ವೀಕರಿಸಿ, ಏನೊಂದು ಸದಸದ್ವಿವೇಕ ಬುದ್ಧಿ ಶಕ್ತಿಯನ್ನುಪಯೋಗಿಸದೆ ಅವುಗಳನ್ನು ಅನುಸರಿಸುತ್ತಾರೆ. ಆದರೆ ಇಚ್ಛೆ ಮನೋವಿಕಾರಗಳನ್ನು ಕರ್ಮಯೋಗಿಯು ಪೂರ್ಣವಾಗಿ ನಿಗ್ರಹಿಸಿ ಈ ಶಕ್ತಿಗಳನ್ನು ಆತ್ಮನ ಬಿಡುಗಡೆಯ ಹಾದಿಯ ಕಡೆಗೆ (ಇದೇ ಜೀವನದ ಅತ್ಯುಚ್ಚಗುರಿ) ತಿರುಗಿಸುತ್ತಾನೆ.

ಜೀವನದ ಸರ್ವ ಕರ್ಮಗಳನ್ನು ಪೂರ್ತಿಗೊಳಿಸುವದಕ್ಕಾಗಿ ಕರ್ಮಯೋಗಿಯು ಪ್ರೀತಿಯ ಆಸನವನ್ನು ತೆಗೆದುಕೊಳ್ಳುತ್ತಾನೆ. ಶಾರೀರಿಕ ಮಾನಸಿಕ ಕರ್ಮಗಳಲ್ಲೆಲ್ಲ ಪ್ರೀತಿಯೇ ಅವನಿಗೆ ಮುಖ್ಯವಾಗಿರುತ್ತದೆ. ಯಾವದೊಂದು ಕರ್ಮವನ್ನು ಅವನು ಮಾಡಿದರೆ ಅದು ಪ್ರೇಮಮೂಲಕ

ಂದುಕೊಟ್ಟು ನಿರಂತರ ಬಾಳುವ ಸುಖವನ್ನಿತ್ತು ಆತ್ಮನನ್ನು ಬಂಧ ುಕ್ತನನ್ನಾಗಿ ಮಾಡಬಹುದೆಂಬರಿವು ಅವನಿಗಿರುವದು.

ಏಸೂಕ್ರಿಸ್ತ, ಬುದ್ಧನಂತಹ ಇಡೀ ಜಗತ್ತಿನಲ್ಲಿ ಆಗಿಹೋದ ಆಧ್ಯಾ ್ಮಕ ಮುಂದಾಳುಗಳೆಲ್ಲರೂ ಕರ್ಮಯೋಗಿಗಳಾಗಿದ್ದರು. ಅವರು ಪ್ರೀತಿ ೂಲಕವಾಗಿಯೇ ಮಾನವ ಜಾತಿಗೆ ಒಳಿತನ್ನುಂಟುಮಾಡಿದರು. ಮತ್ತು ಜವಾದ ಕಾರ್ಯಸಾಧನೆಯಿಂದ ಪೂರ್ಣಸ್ವಾತಂತ್ರ್ಯ ಲಾಭವು ಹೇಗಾ ಬಲ್ಲದೆಂಬದನ್ನು ತಮ್ಮ ಉದಾಹರಣೆಗಳಿಂದ ತೋರಿಸಿಕೊಟ್ಟರು. ಬುದ್ಧ ೀವರು ಯಾವನ್ನೊಬ್ಬ ವ್ಯಕ್ತಿ ಈಶ್ವರನನ್ನರ್ಚಿಸಿರೆಂದು ಹೇಳಲಿಲ್ಲ. ದರೆ ಭಕ್ತಿಯಿಲ್ಲದವರೂ ಈಶ್ವರನ ಅಸ್ತಿತ್ವವನ್ನೊಡಂಬಡದವರೂ ಕರ್ಮ ಥದಿಂದ ತಾಟ್ಟತೂರಲು ಗುರಿಯನ್ನು ಮಾನವರು ಮುಟ್ಟಬಲ್ಲರೆಂಬುವ ತ್ಯಸಿದ್ಧಾಂತವನ್ನು ಅವನು ಸಾರಿ ಸಾರಿ ಬೋಧಿಸಿದನು.

---

## ಶ್ರೀಶೈಲಪರ್ವತದ ಸಂಕ್ಷಿಪ್ತ ಇತಿಹಾಸ.

(ಲೇಖಕ:— ವಿರಕ್ತಪ್ಪ ಮುಧೋಳಕರ ಎಲ್. ಎಲ್. ಬಿ)

ಕ್ಷೇತ್ರ ಸ್ಥಳಗಳು ಸಮಾಜದ ಏಳ್ಗೆ ಮತ್ತು ಅದರ ಇತಿಹಾಸ ನ್ನು ವ್ಯಕ್ತಪಡಿಸುವ ಮಹತ್ವದ ಸ್ಥಾನಗಳಾಗಿರುತ್ತವೆ. ಒಬ್ಬ ಮಹಾ ರುಷನು ಅಥವಾ ಅನೇಕ ಮಹಾನುಭಾವರು ಆ ಸ್ಥಾನಗಳಲ್ಲಿ ವಾಸಿಸಿ ್ಲಿ ತಮ್ಮ ಧರ್ಮಶೋಧನವನ್ನೋ ಅಥವಾ ಇನ್ನಾವ ಬಗೆಯ ಸಮಾಜ ್ಗಣ ಕಾರ್ಯವನ್ನೋ ಮಾಡಿರುವರು. ಆದ್ದರಿಂದಲೇ ಈ ಸ್ಥಾನಗಳು ಷ್ಟು ಪ್ರಸಿದ್ಧಿಗೆ ಬಂದಿರುವವು. ಈ ಸ್ಥಾನಗಳನ್ನು ಸಂದರ್ಶಿಸಿದ ಕೂಡಲೆ ರ್ವದ ವೈಭವವು ಕಣ್ಣೆದುರಿಗೆ ಬಂದು ಮನಸಿನ ಕಿಲ್ಮಿಷವು ಮತ್ತು ಸಾರ ದುಃಖವು ತೊಲಗಿ ಹೋಗಿ ಮನುಷ್ಯನು ಉತ್ಸಾಹಭರಿತನಾಗಿ ೂಸ ಚೈತನ್ಯವುಳ್ಳವನಾಗುತ್ತಾನೆ. ವೀರಶೈವರಿಗೆ ಹೀಗೆ ಪೂಜ್ಯವಾದ ೇಕ ಸ್ಥಳಗಳು ಬಹು ಕಡೆಗೆ ಉಂಟು. ಇವುಗಳಲ್ಲಿ ಅತ್ಯಂತ ಮಹ ವ ಸ್ಥಳವೆಂದರೆ ಶ್ರೀ ಶೈಲವೇ ಇರುತ್ತದೆ.

ಶ್ರೀ ಶೈಲವು ಹಿಂದುಸ್ಥಾನದಲ್ಲಿ ಇರುವ ೧೨ ಜ್ಯೋತಿರ್ಲಿಂಗಗಳಲ್ಲಿ
ಒಂದಾಗಿರುತ್ತದೆ. ಹೀಗೆ ಇದು ಹಿಂದೂ ಜನಸಾಮಾನ್ಯಕ್ಕೆ ಆದರಣೀಯ
ವಾದಂತೆ ವೀರಶೈವರಿಗೂ ವಿಶೇಷ ಆದರಣೀಯವಾಗಿರುತ್ತದೆ. ಬಸವೇ
ಶ್ವರನ ಕಾಲದಲ್ಲಿ ಶಿವಶರಣರಿಗೆ ಭಯಂಕರ ಉಪಟಳವು ಪ್ರಾಪ್ತವಾಗಲು
ಅವರಲ್ಲಿ ಬಹು ಜನರು ಈ ಶ್ರೀಶೈಲ ಪರ್ವತವನ್ನು ಆಶ್ರಯಿಸಿದರು.
ಇಂಥವರಲ್ಲಿ ಶ್ರೀ ಅಲ್ಲಮಪ್ರಭು, ಮಹಾದೇವಿಯಕ್ಕ ಇವರೇ ಮುಖ್ಯರಾ
ಗಿದ್ದರು. ಅಲ್ಲಿಯೇ ಅವರು ಮುಂದೆ ಮುಕ್ತರಾದರು.. ಇದಲ್ಲದೆ ವೀರ
ಶೈವರಲ್ಲಿ ಮಹತ್ವದ ಪಂಚಸಿಂಹಾಸನಗಳಿದ್ದು ಅವುಗಳಲ್ಲಿ ಒಂದು ಈ
ಪರ್ವತದಲ್ಲಿಯೇ ಸ್ಥಾಪಿಸಲ್ಪಟ್ಟಿರುವದುಂಟು. ಹೀಗೆ ಈ ಶ್ರೀಶೈಲಪರ್ವ
ತವು ವೀರಶೈವ ಶಿವಶರಣ ಶಿವಶರಣೆಯರ ಶ್ರೇಷ್ಠ ಧಾರ್ಮಿಕ ಪುರುಷರ
ನಿವಾಸಸ್ಥಾನವಾಗಿ ಅವರಿಗೆ ಅತ್ಯಂತ ಪೂಜ್ಯವೆನಿಸಿಕೊಂಡಿರುವದು.

ಈ ಶ್ರೀಶೈಲಕ್ಷೇತ್ರದ ಉಲ್ಲೇಖವು ಶ್ರೀ ಸ್ಕಂದಪುರಾಣದಲ್ಲಿಯೂ
ಶ್ರೀ ಮಹಾಭಾರತದಲ್ಲಿಯೂ ಇರುತ್ತದೆ. ಇದರ ಮೇಲಿಂದ ಇದು
ಪುರಾತನಕಾಲದಿಂದಲೂ ಮಹತ್ವದ ಸ್ಥಾನವಾಗಿತ್ತೆಂದು ತೋರುತ್ತದೆ.
೧ನೇ ಶತಮಾನದಲ್ಲಿ ಚೀನ ದೇಶದ ಪ್ರವಾಸಿಗಳು ಹಿಂದುಸ್ಥಾನಕ್ಕೆ ಬಂ
ದಿದ್ದು ಅವರು ಈ ಕ್ಷೇತ್ರವನ್ನು ತಮ್ಮ ಲೇಖಗಳಲ್ಲಿ ಬಹುವಾಗಿ ವರ್ಣಿ
ಸಿರುವರು. ಆ ಕಾಲಕ್ಕೆ ಈ ಸ್ಥಳವನ್ನು ಬೌದ್ಧಯತಿಗಳು ಆಶ್ರಯಿಸಿದ್ದ
ಹಾಗೆ ತೋರುತ್ತದೆ. ಯಾಕೆಂದರೆ ಇಲ್ಲಿ ನಾಗಾರ್ಜುನ ಸ್ವಾಮಿ ಎಂಬ
ಯತಿಯು ವಾಸವಾಗಿದ್ದು ಅವನು ಅಲ್ಲಿಯೇ ಸಮಾಧಿಸ್ಥನಾದನೆಂಬು
ದನ್ನು ಈ ಚೀನ ಪ್ರವಾಸಿಗಳು ವರ್ಣಿಸಿರುತ್ತಾರೆ.

ಸರಕಾರದ ಪ್ರಾಚ್ಯ ಸಂಶೋಧನ ಶಾಲೆಯ ಮುಖ್ಯಾಧಿಪತಿಗಳಾದ
ಶ್ರೀಕೃಷ್ಣಶಾಸ್ತ್ರಿಗಳು ಪ್ರಸಿದ್ಧಿಸಿದ ವಿವರಣೆಯಿಂದ ತಿಳಿಯುವದೇನೆಂದರೆ
೬ನೇ ಶತಮಾನದಲ್ಲಿ ಕರ್ನಾಟಕ ರಾಜ್ಯವನ್ನು ಆಳಿದ ಕದಂಬವಂಶೀ
ಯನಾದ ಮಯೂರವರ್ಮನು ಈ ಭಾಗವನ್ನೆಲ್ಲ ಆಕ್ರಮಿಸಿ ಸುತ್ತಮುತ್ತ
ಲಿನ ಅರಣ್ಯ ಪ್ರದೇಶಗಳನ್ನು ಆಳುತ್ತಿದ್ದನು ಈ ಭಾಗದಲ್ಲಿ ಅನೇಕ
ಶಿಲಾಶಾಸನಗಳು ಇವೆ. ಅವುಗಳ ಮೇಲಿಂದ ಅನೇಕ ಜಮೀನುದಾ
ರರೂ ಅರಸರೂ ತಮ್ಮ ಕುಟುಂಬದೊಡನೆ ಇಲ್ಲಿ ಇದ್ದು ತಮ್ಮ ಮನ
ಶ್ಯಾಂತಿಯನ್ನು ಮಾಡಿಕೊಂಡು ಅನೇಕ ದೇಣಿಗೆಗಳನ್ನು ಶ್ರೀಮಲ್ಲಿಕಾ
ರ್ಜುನ ದೇವಾಲಯಕ್ಕೆ ಕೊಟ್ಟಿದ್ದು ತಿಳಿದುಬರುತ್ತದೆ.

ಮುಂದೆ ೧೪ನೇ ಶತಮಾನದಲ್ಲಿ ಪ್ರತಾಪರುದ್ರ ಮಹಾರಾಜನು
ಪ್ರದೇಶದ ಚಕ್ರವರ್ತಿಯಾಗಿ ರಾಜ್ಯವಾಳುತ್ತಿದ್ದು, ಅವನು ಅತ್ಯಂತ
ರ್ನಿಷ್ಠನಾಗಿದ್ದನು. ಅವನ ಅನೇಕ ಶಿಲಾಶಾಸನಗಳು ಇಲ್ಲಿ ಇದ್ದು
ಗಳ ಮೇಲಿಂದ ಅವನ ರಾಜ್ಯವ್ಯವಸ್ಥೆಯನ್ನು ತಿಳಿಯಬಹುದಾಗಿದೆ.
ಕಾಲಕ್ಕೆ ೭೦ ಇನಾಮು ಗ್ರಾಮುಗಳ ಉತ್ಪನ್ನವು ಈ ದೇವಾಲಯಕ್ಕೆ
ತ್ತಿದ್ದು ಅದರ ಲೆಕ್ಕವನ್ನು ಈಶ್ವರ ಶಿವಾಚಾರ್ಯ ಮತ್ತು ಇನ್ನು
ವರು ಇಟ್ಟಿದ್ದು ಈ ಶಿಲಾಶಾಸನಗಳಿಂದ ತಿಳಿದುಬರುತ್ತದೆ.

ಮುಂದೆ ಇದೇ ಕಾಲಕ್ಕೆ ಪಾತಾಳಗಂಗೆಗೆ ಹೋಗಲಿಕ್ಕೆ ದಾರಿ
ಲ್ಲಿಯ ಮೆಟ್ಟಿಲುಗಳನ್ನು ವೇಮರೆಡ್ಡಿ ಎಂಬವನು ಮಾಡಿಸಿದನು.
ತ್ತು ಅವು ಗೀಳಾಗಲು ಕದಂಬವಂಶದ ಮಹಾರಾಣಿಯಾದ ವಿಟ್ಟ
ಬೆಯು ಅವುಗಳನ್ನು ಸರಿಪಡಿಸಿದಳು. ವೇಮರೆಡ್ಡಿಯ ಮಗನಾದ
ವೇಮರೆಡ್ಡಿಯು ಶ್ರೀಮಲ್ಲಿಕಾರ್ಜುನಸ್ವಾಮಿ ದೇವಾಲಯದ ಮುಂದಿನ
ಮಂಟಪವನ್ನು ಕಟ್ಟಿಸಿದನು.

ಮುಂದೆ ೧೪೦೫ ನೇ ಇಸ್ವಿಯಲ್ಲಿ ವಿಜಯನಗರದ ಪ್ರಸಿದ್ಧ ರಾಜ
ನ ಹರಿಹರನು ದೇವಾಲಯದ ಮಗ್ಗುಲಲ್ಲಿ ಕೆಲ ಕೆರೆಗಳನ್ನು ಅಗಿ
ನು.

ಕೃಷ್ಣರಾಜನ ಅಣ್ಣನಾದ ವೀರನರಸಿಂಹನ ಶಿಲಾಶಾಸನಗಳು
ವೆ. ಅವುಗಳ ಮೇಲಿಂದ ಆತನು ಮಲ್ಲಿಕಾರ್ಜುನ ಸ್ವಾಮಿಯನ್ನು
ರ್ಶಿಸಿ ಅನೇಕ ದೇಣಿಗೆಗಳನ್ನು ಕೊಟ್ಟಿದ್ದು ತಿಳಿದುಬರುತ್ತದೆ.

ಕೃಷ್ಣರಾಜನಾದರೂ ಈ ದೇವಾಲಯವನ್ನು ಬಹು ಭಕ್ತಿಯಿಂದ
ವವನಾಗಿದ್ದನು. ಅವನು ದಕ್ಷಿಣದೇಶದ ದಿಗ್ವಿಜಯಮಾಡಿ ಹಿಂದಿ
ವ ಕಾಲಕ್ಕೆ ಈ ದೇವಾಲಯದ ದರ್ಶನವನ್ನು ತೆಗೆದುಕೊಂಡು
ತಾಳಗಂಗೆಯ ದಾರಿಗುಂಟ ಉಭಯ ಪಾರ್ಶ್ವಗಳಲ್ಲಿರುವ ಮಂಟ
ಳನ್ನು ಕಟ್ಟಿಸಿದನು. ಅವು ಇನ್ನೂ ಅಲ್ಲಿ ಇವೆ. ಇಷ್ಟೇ ಅಲ್ಲ
ನು ದೇವಾಲಯದ ಪೂರ್ವ ದಕ್ಷಿಣ ಮತ್ತು ಉತ್ತರಭಾಗದ ಗೋಡೆ
ಮೇಲೆ ಅತ್ಯಂತ ಸುಂದರವಾದ ಕೆತ್ತಿಗೆಯ ಕೆಲಸಗಳನ್ನು ಮಾಡಿ
ನು. ಈ ಕೆಲಸಗಳು ಹಂಪಿಯಲ್ಲಿಯ ಗುಡಿಗಳ ಮೇಲೆ ಇದ್ದಂಥವು
ಇರುವದರಿಂದ ಯಾವ ಪ್ರಸಿದ್ಧ ಶಿಲ್ಪಿಗರು ಅವನ ಬಳಿಯಲ್ಲಿದ್ದರೋ

ಅವರೇ ಈ ಮಲ್ಲಿಕಾರ್ಜುನ ದೇವಾಲಯದ ಕೆತ್ತಿಗೆಯ ಕೆಲಸಗಳನ್ನು ಮಾಡಿರಬಹುದೆಂದು ತೋರುತ್ತದೆ. ಈ ಕೃಷ್ಣರಾಜನು ನಂದಿ ಮತ್ತು ಬಂಗಾರದ ವಾಹನಗಳನ್ನು ಈ ದೇವಾಲಯಕ್ಕೆ ಕೊಟ್ಟು ಅವುಗಳ ಭವ್ಯತೆಯನ್ನು ಹೆಚ್ಚಿಸಿದನು. ಮತ್ತು ಶ್ರೀಶೈಲವು ಈ ಕಾಲಕ್ಕೆ ಒಂದು ದೊಡ್ಡ ಪಟ್ಟಣವಾಗಿದ್ದು ಅದನ್ನು ಚಂದ್ರಶೇಖರರಾಯ ಎಂಬ ಸರ್ವಾಧಿಪತಿಯು ಕೃಷ್ಣರಾಜನ ಮಾಂಡಲಿಕನಾಗಿ ಆಳುತ್ತಿದ್ದನು. ಈ ಪಟ್ಟಣದ ಪೂರ್ವದ ಬೀದಿಗಳೂ ದೊಡ್ಡ ದೊಡ್ಡ ಕಟ್ಟಡಗಳೂ ಇಲ್ಲಿದ್ದದ್ದನ್ನು ಅಲ್ಲಲ್ಲಿ ಕಾಣುವ ಅವಶೇಷಗಳಿಂದ ಇನ್ನೂ ಕಂಡುಹಿಡಿಯಬಹುದಾಗಿದೆ.

ಮುಂದೆ ಈ ರಾಜ್ಯವನ್ನು ಶಾಂತಲಿಂಗರಾಜನೆಂಬವನು ವಿಜಯನಗರದ ಅರಸರ ಕೈಕೆಳಗಿದ್ದುಕೊಂಡು ಆಳುತ್ತಿದ್ದನು. ಈತನು ದೇವಾಲಯದ ಪ್ರವೇಶದ್ವಾರದ ಗೋಪುರ, ದೇವಾಲಯದ ಮ... ಗೋಪುರ, ಇನ್ನೂ ಬೇರೆ ಕಟ್ಟಡಗಳನ್ನು ಗಟ್ಟಿಮಾಡಿಸಿದನು. ಮತ್ತು ಗುಡಿಗಳಿಗೂ, ಗೋಪುರಗಳಿಗೂ ವಾಹನಗಳಿಗೂ ಬಂಗಾರದ ಗಿಲೀಟನ್ನು ಹಚ್ಚಿಸಿದನು.

ವಿಜಯನಗರವು ಹಾಳಾದ ಬಳಿಕ ಇದು ಮುಸಲ್ಮಾನರಾಜರ ಕೈವಶವಾಗಿ ಉಳಿಯಿತು. ಅಂದಿನಿಂದ ಪಟ್ಟಣವೂ ದೇವಾಲಯದ ವೈಭವವೂ ಶೀಘ್ರವಾಗಿ ಕುಂದಹತ್ತಿದವು. ಮುನಾವರಖಾನನೆಂಬವನು ದೇವಾಲಯವನ್ನು ಲೂಟಿಮಾಡಿದನು ಮತ್ತು ಕಳ್ಳಕಾಕರು ಅದರ ಜೀನಸುಗಳನ್ನು ಅಪಹರಿಸಹತ್ತಿದರು. ಆಗ ಈ ಸ್ಥಾನವು ಕೇವಲ ಚಂಚು ಜನರ ಮತ್ತು ಗುಡ್ಡಗಾಡ ಜನರ ಬೀಡಾಯಿತು. ರೋಹಿಲರ ಗುಂಪುಗಳು ಈ ಸ್ಥಳವನ್ನು ನೋಲೆಂದವರೋಲೆ ಆಕ್ರಮಿಸಿ ಲೂಟಿ ಮಾಡುವರು. ಸಮೀಪವಾಗಿದ್ದ ಚಂಚರೂ ಸಹ ಇಂಗ್ಲಿಷರ ರಾಜ್ಯಭಾರದಲ್ಲಿ ಗುಡಿಗಳಲ್ಲಿಯ ಬಂಗಾರದ ಗಿಲೀಟಿನ ತುಣುಕುಗಳನ್ನು ಕೆತ್ತಿಕೊಂಡು ಹೋದರು. ಆಗ ಸರಕಾರದವರು ಅವನ್ನು ಜಪ್ತ ಮಾಡಿ ಕರ್ನೂಲಿನಲ್ಲಿ ಲಿಲಾವು ಮಾಡಲು ಸರಕಾರದವರೇ ಅದನ್ನು ತೆಗೆದುಕೊಂಡು ಮದ್ರಾಸ ವಸ್ತುಪ್ರದರ್ಶನ ಶಾಲೆಯಲ್ಲಿ ಈಗ ಇಟ್ಟಿರುವರು.

ಸಮೀಪವಾಗಿರುವ ಸಿದ್ದಾಪುರಂ ಗ್ರಾಮವು ಈ ದೇವಾಲಯದ ಪೋಷಣಕ್ಕಾಗಿ ಸರ್ವಾಗ್ರಹಾರವಾಗಿ ಕೊಡಲ್ಪಟ್ಟಿತ್ತು.

**ಈ ಪ್ರಕಾರ ಶ್ರೀಶೈಲದ ವೃತ್ತಾಂತವಿದೆ. ಇದು ಬಹು ಕಾಲದಿಂದಲೂ ರಾಜಮಹಾರಾಜರಿಂದ ಪೂಜಿತವಾಗಿದ್ದು ಅತಿ ವೈಭವದಿಂದ**

ತ್ತುಮುತ್ತಲಿನ ಛನಸಿರಿಯು ಮಿಗಿಲಾದದ್ದು. ಅದನ್ನು ಪ್ರವೇಶಿಸಿದ ಡಲೇ ಮನೋವಿಕಾಸತೆಯು ಸ್ವಾಭಾವಿಕವಾಗಿಯೇ ಬೆಳಗಹತ್ತುತ್ತದೆ. ದರೆ ಈ ಪ್ರದೇಶವು ಮುಂದೆ ಮುಸಲ್ಮಾನರ ಉಪಟಳಕ್ಕೆ ಒಳಗಾಗಿ ನೇಕ ಆಘಾತಗಳನ್ನು ಹೊಂದಿ ಈಗ ಜೀರ್ಣ ಸ್ಥಿತಿಗೆ ಬಂದಂತೆ ೀರುತ್ತಿದೆ. ಆದರೆ ಯಾವಲ್ಲಿ ಮಹತ್ವದ ಐತಿಹಾಸಿಕ ವೈಭವಗಳು ದಿದಿರುತ್ತವೋ ಯಾವಲ್ಲಿ ಮಹಾಸಾಧು ಶ್ರೇಷ್ಠರ ವಿಚಾರವೈಖರಿಗಳು ಕಸಿತವಾದವೋ ಆ ಸ್ಥಳವು ಸಮಾಜದ ಸ್ಮರಣೆಯಲ್ಲಿ ಚಿರಕಾಲ ಉಳಿ ದೆ ಇರಲಾರದು.

---

# ಶಿವಯೋಗದ ಸಾಮಾನ್ಯ ಸ್ವರೂಪ.

## (ಸಿದ್ಧಿಗಳಸಾಧನೆ ಮತ್ತು ನೈತಿಕಾಚಾರ)

ಲೇಖಾಂಕ ೧.

ಲೇಖಕ— ಡಾ. ಸಾ. ಫ. ಗು ಹಳಕಟ್ಟಿ ಬಿ. ಎ. ಎಲ್. ಎಲ್ ಬಿ.

ನಾವು ಶಿವಾನುಭವ ಪತ್ರಿಕೆಯ ಕೆಲವು ಸಂಚಿಕೆಗಳಲ್ಲಿ ರಾ॥ ರಾ॥ ುಡಿವಾಳಪ್ಪ ಸಾಸನೂರು ಇವರು ಭಕ್ತಿಯೋಗ, ಕರ್ಮಯೋಗ, ಜ್ಞಾನ ೋಗ, ರಾಜಯೋಗ ಈ ವಿಷಯಗಳ ಮೇಲೆ ಲಿಖಿಸಿದ ನಿಬಂಧಗ ನ್ನು ಪ್ರಸಿದ್ಧಿಸಿರುತ್ತೇವೆ. ಅವುಗಳಲ್ಲಿ ಯೋಗಾಭ್ಯಾಸದಲ್ಲಿ ಪ್ರಚಲಿತ ರುವ ನಿಜತತ್ವಗಳು ಬಹು ವಿಶದವಾಗಿ ಮತ್ತು ಸಂಕ್ಷೇಪವಾಗಿ ವಿವ ಸಲ್ಪಟ್ಟಿವೆ. ಯೋಗದ ತತ್ವಗಳು ಮತ್ತು ಅದರ ಅಭ್ಯಾಸವು ಹಿಂದೂ ರ್ಮಶಾಸ್ತ್ರದಲ್ಲಿ ಒಂದು ಮಹತ್ವದ ವಿಶಿಷ್ಟ ಭಾಗವಾಗಿದ್ದು ಅದರ ಉದ್ದೇ ವು ಚಂಚಲವಾದ ಚಿತ್ತವೃತ್ತಿಯನ್ನು ಸ್ಥಿರಗೊಳಿಸಿ ಮನುಷ್ಯನ ಅಧ್ಯಾ ್ಮಿಕ ಹಾದಿಯಲ್ಲಿರುವ ಆತಂಕಗಳನ್ನು ದೂರಪಡಿಸಿ ಅವನಲ್ಲಿ ಶುದ್ಧಸಾ ್ವಿಕವೃತ್ತಿಯನ್ನು ಹುಟ್ಟಿಸಿ ಅವನಿಗೆ ಮೋಕ್ಷಸ್ಥಿತಿಯನ್ನು ಶೀಘ್ರವಾಗಿ ಂದುಕೊಡುವದೇ ಇರುತ್ತದೆ. ಇದರ ತತ್ವಗಳು ಮಾನಸಿಕ ಶಕ್ತಿಯ

ವಿಕಾಸವನ್ನು ಮೇಲ್ಮಂಡ ದೃಷ್ಟಿಯಿಂದ ಹ್ಯಾಗೆ ಮಾಡಬೇಕೆಂಬುದನ್ನು ಅರುಹುತ್ತವೆ. ಈ ಮಹತ್ತರವಾದ ವಿಷಯವನ್ನು ನಮ್ಮ ಪೂರ್ವಜರು ಚನ್ನಾಗಿ ಪರೀಶೋಧಿಸಿ ಅನೇಕ ಗೂಢ ವಿಷಯಗಳನ್ನು ಕಂಡುಹಿಡಿದದ್ದನ್ನು ಈಗಿನ ಪಾಶ್ಚಿಮಾತ್ಯ ಮಾನಸಿಕ ಶಾಸ್ತ್ರಾಭ್ಯಾಸಿಗಳನ್ನು ಸಹ ಒಪ್ಪಿಕೊಳ್ಳಹತ್ತಿದ್ದಾರೆ. ಮತ್ತು ಈಗಿನವರು ಮಾಡುತ್ತಿದ್ದ ಅನೇಕ ಅದ್ಭುತ ಕೌಶಲ್ಯಗಳು ಈ ತತ್ವಗಳ ವ್ಯವಹಾರಿಕ ಪ್ರಯೋಗಗಳೇ ಎಂದು ಹೇಳಬಹುದು.

ವೀರಶೈವ ಪುರಾತನರು ಹಿಂದೂ ಧರ್ಮದ ತತ್ವಗಳನ್ನೇ ಅನುಸರಿಸಿ ಅವುಗಳನ್ನೊಳಕೊಂಡ ತಮ್ಮ ಒಂದು ವಿಶಿಷ್ಟ ಮಾರ್ಗವನ್ನು ಹುಡುಕಿರುವರು. ಇದಕ್ಕೆ ಷಟ್‌ಸ್ಥಲಮಾರ್ಗವೆಂತಲೇ ಹೆಸರು. ಇದರಲ್ಲಿ ಅವರು ಯೋಗಾಭ್ಯಾಸದ ತತ್ವಗಳನ್ನು ಸಂಪೂರ್ಣವಾಗಿ ಹೆಣೆದಿರುತ್ತಾರೆ. ಇದೇ ಶಿವಯೋಗವೆನಿಸಿಕೊಳ್ಳುವದು. ಷಟ್‌ಸ್ಥಲದಲ್ಲಿ ಆರು ಭಾಗಗಳಿದ್ದು ಭಕ್ತಿಯೋಗ ಮತ್ತು ಕರ್ಮಯೋಗಗಳು ಭಕ್ತ ಮತ್ತು ಮಹೇಶ್ವರಸ್ಥಲಗಳಲ್ಲಿ ಒಳಕೊಂಡಿರುವವೆಂದು ಹೇಳಬಹುದು. ಈ ಎರಡು ಸ್ಥಲಗಳ ವಿಶಿಷ್ಟತ್ವವೆಂದರೆ ಭಕ್ತಿಭಾವ ಮತ್ತು ಆಚರಣೆಯ ಶುದ್ಧತೆ ಇವುಗಳೇ ಇರುತ್ತವೆ. ಇವೆರಡೂ ಸ್ಥಲಗಳಿಗೆ ಸಂಬಂಧಿಸಿದ ಏಕೋತ್ತರ ಶತಸ್ಥಲಗಳಲ್ಲಿಯ ಸ್ಥಲಗಳನ್ನು ತೆಗೆದುಕೊಂಡರೆ, ಅವೆಲ್ಲವೂ ಭಕ್ತಿ ಮತ್ತು ಕರ್ಮಗಳನ್ನು ವಿಶೇಷವಾಗಿ ಅನುಸರಿಸುತ್ತವೆಂಬದನ್ನು ನಾವು ಬಹು ಸ್ಪಷ್ಟವಾಗಿ ಕಂಡುಹಿಡಿಯಬಹುದು. ಈ ಸ್ಥಲಗಳು ಯಾವವೆಂದರೆಃ—ಭಕ್ತಸ್ಥಲದಲ್ಲಿ ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಸಂಸಾರಹ್ಯೇಯಸ್ಥಲ, ಗುರುಕರುಣಸ್ಥಲ, ಲಿಂಗಧಾರಣಸ್ಥಲ, ವಿಭೂತಿಯಸ್ಥಲ, ರುದ್ರಾಕ್ಷಿಯಸ್ಥಲ, ಪಂಚಾಕ್ಷರಿಯಸ್ಥಲ, ಭಕ್ತಸ್ಥಲ ಆ ಮೇಲೆ ಉಭಯಸ್ಥಲ, ತ್ರಿವಿಧಸಂಪತ್ತುಸ್ಥಲ, ಚತುರ್ವಿಧಸಾರಾಯಸ್ಥಲ, ಉಪಾಧಿಮಾಟಸ್ಥಲ, ನಿರುಪಾಧಿಮಾಟಸ್ಥಲ, ಮತ್ತು ಸಹಜಮಾಟಸ್ಥಲವೆಂದು ೧೫ ಸ್ಥಲಗಳಿದ್ದು, ಇವುಗಳಲ್ಲಿ ಮೊದಲನೆಯ ಒಂಭತ್ತು ಭಕ್ತಸ್ಥಲಕ್ಕೆ ಯೋಗ್ಯನನ್ನಾಗಿಮಾಡಲು ಅವಶ್ಯವಾದ ಸ್ಥಲಗಳಿದ್ದು, ಅವುಗಳ ಮುಂದಿನ ಸ್ಥಲಗಳು ಭಕ್ತನು ಹ್ಯಾಗೆ ಆಚರಿಸಬೇಕೆಂಬುದನ್ನು ವಿವರಿಸುತ್ತವೆ. ಇವುಗಳಲ್ಲಿ ಕರ್ಮಯೋಗದ ತತ್ವಗಳಿರುತ್ತವೆ. ಮನುಷ್ಯನಲ್ಲಿ ಶ್ರೇಷ್ಠ ಪ್ರವೃತ್ತಿಗಳನ್ನು ಇವು ಹೆಚ್ಚಿಸಲು ಕಾರಣವಾಗುತ್ತವೆ. ಮಹೇಶ್ವರಸ್ಥಲಕ್ಕೆ ಸಂಬಂಧಪಟ್ಟ ಸ್ಥಲಗಳು ಒಂಭತ್ತು ಇವೆ. ಅವು ಯಾವವೆಂದರೆಃ— ಮಹೇಶ್ವರಸ್ಥಲ,

ಲಿಂಗನಿಷ್ಠಾಸ್ಥಲ, ಪೂರ್ವಾಶ್ರಯನಿರಸನಸ್ಥಲ, ವಾಗದ್ವೈತನಿರಸನಸ್ಥಲ, ಅಷ್ಟತನುಮೂರ್ತಿ ನಿರಸನಸ್ಥಲ, ಶಿವಜಗನ್ಮಯಸ್ಥಲ, ಭಕ್ತದೇಹಿಕಲಿಂಗ ಸ್ಥಲ, ಎಂದು ಇರುತ್ತವೆ. ಇವುಗಳು ಲಿಂಗನಿಷ್ಠೆಯನ್ನು ಭಕ್ತಿಪುರಸ್ಸರ ವಾಗಿ ಹ್ಯಾಗೆ ಮಾಡಬೇಕೆಂಬುದನ್ನು ವಿವರವಾಗಿ ಹೇಳುತ್ತಾರೆ. ಹೀಗೆ ವಿವರಿಸುವಲ್ಲಿ ಜಗತ್ತು ತಾನು ಮತ್ತು ಇತರರು ಇವೆಲ್ಲವರೊಡನೆ ಭಕ್ತನು ಹ್ಯಾಗೆ ವ್ಯವಹರಿಸಬೇಕೆಂಬುದನ್ನು ಈ ಸ್ಥಲಗಳು ಸ್ಪಷ್ಟೀಕರಿಸುತ್ತವೆ. ಹಠಯೋಗದ ವಿಷಯುಗಳು ಪ್ರಾಣಲಿಂಗಿ ಸ್ಥಲದಲ್ಲಿ ಬರುತ್ತವೆ. ಪ್ರಾಣ ಲಿಂಗಿಸ್ಥಲದ ಉದ್ದೇಶವು ಆತ್ಮಲಿಂಗವನ್ನು ಕಂಡುಹಿಡಿಯುವದೇ ಇದ್ದು ಇದರಲ್ಲಿ ಮನುಷ್ಯನ ಅಂತರಂಗದ ವಿಕಾಸತೆಯ ಮಾರ್ಗವನ್ನು ಮತ್ತು ಅದರ ಶಕ್ತಿಯ ಹೆಚ್ಚುಗೆಯನ್ನು ವೀರಶೈವ ಷಟ್‌ಸ್ಥಲಶಾಸ್ತ್ರಕಾರರು ಬಹು ಚನ್ನಾಗಿ ವಿವರಿಸುತ್ತಾರೆ. ಇದರಲ್ಲಿ ಮನುಷ್ಯನು ತನ್ನ ಲಿಂಗಧ್ಯಾನವನ್ನು ಹ್ಯಾಗೆ ಮಾಡಬೇಕು, ಈ ಧ್ಯಾನದ ಮೂಲಕ ತನ್ನ ಅಂತರಂಗಶಕ್ತಿ ಗಳನ್ನು ಹ್ಯಾಗೆ ಹೆಚ್ಚಿಸಬೇಕು, ಇವೇ ಮೊದಲಾದ ಮಹತ್ವದ ಗೂಢ ವಿಷಯುಗಳು ಈ ಸ್ಥಲದಲ್ಲಿ ಬರುತ್ತವೆ. ಜ್ಞಾನಯೋಗ ಮತ್ತು ರಾಜ ಯೋಗದ ತತ್ವಗಳು ಶರಣ ಮತ್ತು ಐಕ್ಯಸ್ಥಲಗಳಲ್ಲಿ ಬರುತ್ತವೆಂದು ಹೇಳಬಹುದು. ಈ ಪ್ರಕಾರ ಈ ಎಲ್ಲ ಯೋಗಮಾರ್ಗಗಳನ್ನು ಷಟ್‌ಸ್ಥಲ ಶಾಸ್ತ್ರದ ತತ್ವಗಳ ಪ್ರಕಾರ ಬೇರೆ ಬೇರೆ ಭಾಗಗಳಲ್ಲಿ ಸಂಬಂಧಪಡಿಸಬಹುದು ಮತ್ತು ಈ ಷಟ್‌ಸ್ಥಲದ ಮೂಲಕ ಇವೆಲ್ಲವುಗಳು ಪರಸ್ಪರಸಹಾಯ ಕಾರಿಗಳಾಗಿ ಮನುಷ್ಯನ ಬಹಿರಂಗ ಮತ್ತು ಅಂತರಂಗಿಕ ಎಲ್ಲ ಬಗೆಯ ಗುಣಗಳನ್ನು ವಿಕಾಸಪಡಿಸುವದರಲ್ಲಿ ಹ್ಯಾಗೆ ಪರಿಣಮಿಸುತ್ತವೆಂಬುದನ್ನು ಬಹು ಸ್ಫುಟವಾಗಿ ವೀರಶೈವ ಧರ್ಮಗ್ರಂಥಕಾರರು ಆಯಾ ಸ್ಥಲಗಳಲ್ಲಿ ವಿವರಿಸುವದುಂಟು.

ಈ ಮೇರೆಗೆ ಈ ಎಲ್ಲ ಯೋಗಮಾರ್ಗಗಳು ಅಂದರೆ ಭಕ್ತಿ, ಕ್ರಿಯಾ, ಜ್ಞಾನ ಮತ್ತು ರಾಜಯೋಗ ಇವುಗಳ ತತ್ವಗಳನ್ನು ವೀರಶೈವ ಧರ್ಮ ಶಾಸ್ತ್ರಕಾರರು ಅಂಗೀಕರಿಸಿದರೂ ಅವರು ಇವುಗಳೆಲ್ಲವೂ ಭವಿಮಾರ್ಗಗ ಳೆಂದು ಭಾವಿಸಿ ಭಕ್ತಮಾರ್ಗಕ್ಕೆ ಉಚಿತವಾದ ಬೇರೊಂದು ಶಿವಯೋಗಮಾ ರ್ಗವನ್ನು ಪ್ರಚುರಗೊಳಿಸಿದ್ದಾರೆ. ಭವಿಮಾರ್ಗವೆಂದರೆ 'ಭವಕ್ಕೆ ಅಂದರೆ ಪ್ರಪಂಚಕ್ಕೆ ಎಳಿಸತಕ್ಕವುಗಳೆಂತಲೇ ಇದರ ಅರ್ಥವು. ಮೇಲ್ಕಂಡ ಯೋಗ ಮಾರ್ಗಗಳ ಉದ್ದೇಶವು ಮೋಕ್ಷಮಾರ್ಗಕ್ಕೆ ಸಹಾಯಕಾರಿಯಾದವುಗ

ಳೆಂದು ಆಯಾ ಮಾರ್ಗಪ್ರಚಾರಕರಿಂದ ನಿರೂಪಿಸಲ್ಪಟ್ಟರೂ ಅವುಗಳೆಲ್ಲವು ಲಿಂಗವಿರಹಿತವಾಗಿ ಆಚರಿಸಲ್ಪಡುವದರಿಂದ ವ್ಯವಹಾರಕ್ಕೆ ಮಗ್ನ ಮಾಡುವದರಲ್ಲಿ ಅವು ಜರಗುವವೆಂದು ವೀರಶೈವ ಗ್ರಂಥಕಾರರ ಮತವಿದೆ. ಆದ್ದರಿಂದ ಅವರು ಈ ಸ್ಥಿತಿಯು ಉಂಟಾಗಬಾರದೆಂದು ಲಿಂಗಾಂಗ ಸಾಮರಸ್ಯಭಾವವನ್ನು ತಂದುಕೊಡುವ ಶಿವಯೋಗಾಚರಣೆಯನ್ನು ಪ್ರಚಾರಕ್ಕೆ ತಂದಿದ್ದಾರೆ. ಅವರು ಈ ಆಚರಣೆಯನ್ನೇ ತಮ್ಮ ಗ್ರಂಥಗಳಲ್ಲಿ ಬೋಧಿಸಿ ಉಳಿದ ಯೋಗಮಾರ್ಗಗಳನ್ನು ಅವರು ತಮ್ಮ ವಚನಗಳಲ್ಲಿ ಟೀಕಿಸಿರುತ್ತಾರೆ. ಒಬ್ಬ ವಚನಕಾರನು ಈ ಯೋಗಗಳನ್ನು ಕುರಿತು ಹೀಗೆ ಆಕ್ಷೇಪಿಸಿರುವನು, ಏನೆಂದರೆ:—

"ಲಂಬಿಕಾಯೋಗಗಳ ಡೊಂಬರಿಗೆ ಸರಿ ಎಂಬೆ. ಹಠಯೋಗಿಗಳಿಗೆ ಆಟಮಾಟಕಾರರೆಂದೆಂಬೆ. ಅಷ್ಟಾಂಗಯೋಗಿಗಳ ಕಷ್ಟಕರ್ಮಿಗಳೆಂಬೆ. ಪವನಯೋಗಿಗಳ ಪ್ರಪಂಚಿಗಳೆಂದೆಂಬೆ. ಲಯಯೋಗಿಗಳ ಕಷ್ಟಕರ್ಮಿಗಳೆಂದೆಂಬೆ. ಪವನಯೋಗಿಗಳ ಪ್ರಪಂಚಿಗಳೆಂದೆಂಬೆ. ಲಯಯೋಗಿಗಳ ನಾಯಿಗಿಂತ ಕಡೆ ಎಂಬೆ. ಅದೇನು ಕಾರಣವೆಂದರೆ ಲಯಯೋಗವೆಂಬುದು ನಾನಾ ದರ್ಶನದಲ್ಲಿ ವರ್ತಿಸುವುದಾಗಿ ಅದನ್ನು ಶಿವಯೋಗಿಗಳು ಒಲ್ಲರು. ಮಂತ್ರಯೋಗವೆಂಬುದು ಸರ್ವರ ಸಂದೇಹಕ್ಕಿಕ್ಕಿ ಕೊಲ್ಲುತಿಪ್ಪದು. ಅದೇನು ಕಾರಣವೆಂದಡೆ ಮಂತ್ರವೇ ಲಿಂಗ, ಲಿಂಗವೇ ಮಂತ್ರವೆಂದರಿದು ಲಿಂಗ ನೆನಹು ಸಂಬಂಧಿಸಿಕೊಳಲರಿಯದೆ ಲಿಂಗ ವಿರಹಿತರಾಗಿ ಮಾಡುತಿರ್ಪರಾಗಿ ಅದನು ಅಂಗಲಿಂಗ ಸಂಬಂಧಿಗಳು ಮೆಚ್ಚರು ನೋಡಾ. ರಾಜಯೋಗವೆಂಬುದು ಗಾಜುಗೋಜು ನೋಡಾ. ಅದನು ಲಿಂಗವಿರಹಿತರಾದ ಜ್ಞಾತೃ ಜ್ಞೇಯ ಜ್ಞಾನ ಒಂದಾದಲ್ಲಿ ಯೋಗವೆನುತಿಪ್ಪರಾಗಿ ಇವು ಒಂದು ಲಿಂಗಾಂಗದ ಹೆಜ್ಜೆಯಲ್ಲ. ಅದು ಕಾರಣ ಲಿಂಗನಿಷ್ಠರು ಮೆಚ್ಚರು. ಅದೇನುಕಾರಣವೆಂದರೆ, ಲಿಂಗವ ತೆಗೆದರೆ ಲಿಂಗದೊಡನೆ ಪ್ರಾಣ ಹೋಗದಾಗಿ, ಅದೆಲ್ಲಿಯ ಯೋಗವಯ್ಯ ಭ್ರಾಂತುಯೋಗ? ಇದುಕಾರಣ ನಿಮ್ಮ ಶರಣರು ಲಿಂಗಪ್ರಾಣಿಗಳು, ಪ್ರಾಣಲಿಂಗ ಸಂಬಂಧಿಗಳು ಪ್ರಸಾದ ಮುಕ್ತರು. ಈ ಮೂರು ಪ್ರಕಾರದಲ್ಲಿ ಕೂಡುತಿಪ್ಪರು ಶಿವಯೋಗಿಗಳು. ಅದು ಕಾರಣ ನಿಮ್ಮ ಶರಣರು ಸ್ವಾನುಭಾವ ಜ್ಞಾನ ಶುದ್ಧ ಶಿವಯೋಗದಲ್ಲಿ ಸ್ವರೂಪ ಜ್ಞಾನಿಗಳು ಕಾಣಾ ಮಹಾಲಿಂಗ ಗುರುಶಿವ ಸಿದ್ಧೇಶ್ವರ ಪ್ರಭುವೇ.

ಈ ವಚನಕಾರನ ಅಭಿಪ್ರಾಯವೇನೆಂದರೆ, ಈ ಅನೇಕ ಯೋಗಗಳು ಮನುಷ್ಯನ ಶಕ್ತಿಯ ವಿಕಾಸತೆಯನ್ನು ಕೇವಲ ಪ್ರಪಂಚ ದೃಷ್ಟ್ಯಾ ಯಾವದು ಶ್ರೇಷ್ಠವೋ ಅತ್ತ ಕಡೆಗೆ ಎಳೆಯುತ್ತವಾದ್ದರಿಂದ ಅವುಗಳು ಶಿವಯೋಗಕ್ಕೆ ಹೊರತಾದವು. ಆದರೆ ಶಿವಯೋಗದ ಮುಖ್ಯ ಧ್ಯೇಯವು ಲಿಂಗಾನುಭವವು. ಅಂದರೆ ಲಿಂಗದ ಶಕ್ತಿ ಮತ್ತು ಅದರ ಪ್ರಭಾವವನ್ನು ಮನುಷ್ಯನ ಒಳಗೂ ಹೊರಗೂ ಬೀರಿ ಅದರಲ್ಲಿಯೇ ಅವನು ಕಡೆಗೆ ಲಯವಾಗುವದು ಇರುತ್ತದೆ. ಇದರ ಮುಖ್ಯ ಸಾಧನೆಗಳ ಉದ್ದೇಶವು ಲಿಂಗದ ಕಳೆಯನ್ನು ತನ್ನ ಆಯಾ ಶಾರೀರಿಕ ಶಕ್ತಿಗಳಲ್ಲಿ ಬೆರಿಸುವದೇ ಇರುತ್ತದೆ. ಆದರೆ ಈ ಮಾರ್ಗವನ್ನು ಮೇಲ್ಕಂಡ ಯೋಗಸಾಧನೆಗಳು ಅರುಹಿ ಕೊಡುವದಿಲ್ಲ. ಇದರ ಬದಲು ಅವು ಲಿಂಗ ವಿರಹಿತವಾಗಿ ಮನುಷ್ಯನನ್ನು ಸಂದೇಹಕ್ಕಿಕ್ಕುತ್ತವೆ. ಮತ್ತು ಭವದಲ್ಲಿ ಬೀಳಿಸುತ್ತವೆ ಎಂದು ನಾವು ಮೇಲೆ ಉದಹರಿಸಿದ ವಚನಕಾರನ ಭಾವವಿರುತ್ತದೆ.

ಈ ದೃಷ್ಟಿಯಿಂದ ಯೋಗಾಭ್ಯಾಸವನ್ನು ಖಂಡಿಸಿದ ಉಕ್ತಿಗಳು ವಚನಕಾರರಲ್ಲಿ ಅನೇಕ ವಿರುತ್ತವೆ. ಆದರೆ ಈ ಪ್ರಕಾರ ಈ ಅಭ್ಯಾಸವನ್ನು ನಿರಾಕರಿಸಿದವರು ವೀರಶೈವರು ಮಾತ್ರವಲ್ಲದೆ ಇನ್ನೂ ಅನೇಕರುಂಟು. ಉದಾ:—ಬುದ್ಧ ದೇವನು ಪ್ರಪಂಚವನ್ನು ಉಪೇಕ್ಷಿಸಿ, ಪರಮಾತ್ಮನ ಮಾರ್ಗವನ್ನು ಶೋಧಿಸಬೇಕೆಂದು ಅನೇಕ ವರ್ಷ ತಪಸ್ಸು ಮಾಡಿದನು. ಆದರೆ ಅವನಿಗೆ ಅದರಲ್ಲಿ ಶಾಂತತೆಯು ದೊರೆಯಲಿಲ್ಲ. ಮತ್ತು ಕಡೆಗ ಅವನು ಆ ಮಾರ್ಗವನ್ನುತ್ಯಜಿಸಿ ಕಡೆಗೆ ತನ್ನ ಬೌದ್ಧ ಧರ್ಮವನ್ನು ನೈತಿಕ ವಿಶಾಲ ತತ್ವಗಳನ್ನು ಅವಲಂಬಿಸಿ ಪ್ರಸ್ಥಾಪಿಸಿದನು., ಆಗ ಅದು ಬಹು ಜನ ಸಮಾಜದಲ್ಲಿ ಬಹು ನಿಬಿಡವಾಗಿ ಹಬ್ಬಿತು. ಇದರಂತೆ ವೀರಶೈವರು ಯೋಗಾಭ್ಯಾಸದ ತಪ್ಪು ಪ್ರವೃತ್ತಿಗಳ ಮೂಲಕ ಅದನ್ನು ನಿರಾಕರಿಸಿದರೂ, ಅದರಲ್ಲಿ ಅಡಕವಾದ ಶ್ರೇಷ್ಠ ಮಾನಸಿಕ ಅಭ್ಯುದಯಕ್ಕೆ ಕಾರಣವಾಗುವ ಸಾಧನೆಗಳನ್ನು ಮಾತ್ರ ಅವರು ತೊರೆದುಬಿಟ್ಟಿಲ್ಲ. ಅವರು ಹೀಗೆ ತೊರೆಯುವದರ ಬದಲು ಅವುಗಳು ಶಿವಾನುಭವಕ್ಕೆ ಹ್ಯಾಗೆ ಸಹಾಯಕಾರಿಯಾಗುವವೆಂಬದನ್ನು ಕಂಡು ಹಿಡಿದು ಆ ರೀತಿ—ಷಟ್‌ಸ್ಥಲ ಮಾರ್ಗದ ರಚನೆಯನ್ನು ಮಾಡಿರುವರು. ವೀರಶೈವ ಧರ್ಮ ತತ್ವಶೋಧ ಮಾಡಲಪೇಕ್ಷಿಸುವವರು ಶಿವಶರಣರು ಈ ರೀತಿಯಾಗಿ ಹ್ಯಾಗೆ ತಮ್ಮ ಆಚರಣೆಗಳ ಸ್ವರೂಪವನ್ನು ಕಲ್ಪಿಟಿಸಿರುವರು ಎಂಬುದನ್ನು ಕಂಡುಹಿಡಿಯುವದು ಅತ್ಯಂತ ಮಹತ್ವದ್ದಾಗಿದೆ.

ಯೋಗ ಸಾಧನೆಗಳು ಮನುಷ್ಯನ ಶಕ್ತಿಗಳನ್ನು ಪ್ರಬಲಗೊಳಿಸಿ ಅವನಲ್ಲಿ ಅದ್ಭುತ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಉಂಟು ಮಾಡುವವೆಂದು ತೋರಿಬರುತ್ತದೆ. ಪಾಶ್ಚಿಮಾತ್ಯ ಮಾನಸ ಶಾಸ್ತ್ರಜ್ಞರು ಈ ಕಡೆಗೆ ತಮ್ಮ ಲಕ್ಷವನ್ನು ಇತ್ತಿತ್ತ ಹೊರಳಿಸಿ ಅವರೂ ಕೂಡ ತಮ್ಮ ಮನಸ್ಸಿನ ಪ್ರಾಬಲ್ಯದಿಂದ ಅನೇಕ ಅದ್ಭುತಗಳನ್ನು ಮಾಡುವದುಂಟು. ಆದರೆ ಯೋಗಾಭ್ಯಾಸದ ಈ ಪ್ರಯೋಗಗಳನ್ನು ಶಿವಶರಣರು ತಮ್ಮ ಉಕ್ತಿಗಳಲ್ಲಿ ಶೀಘ್ರವಾಗಿ ಖಂಡಿಸಿರುವರು. ಈ ಬಗೆಯ ಅಮಾನುಷ ಶಕ್ತಿಗಳ ವಿಕಾಸಕ್ಕೆ ಬಹು ಜನರು ಒಲಿದವರಾಗಿ ಅವುಗಳನ್ನು ಸಾಧಿಸಲಿಕ್ಕೆ ಪ್ರವೃತ್ತರಾಗುವದುಂಟು. ಇವರು ಈ ಉದ್ದಿಶ್ಯವಾಗಿ ತಮ್ಮ ಶರೀರವನ್ನು ಅನೇಕ ಬಾಧೆಗಳಿಗೆ ಒಳಗು ಮಾಡುತ್ತಾರೆ. ಮತ್ತು ಅನೇಕ ವರ್ಷ ನಿರ್ಜನ ಪ್ರದೇಶದಲ್ಲಿದ್ದು ತಪಸ್ಸೆಂದು ಆಚರಿಸುವರು. ಆದರೆ ಈ ಬಗೆಯ ಮಾರ್ಗವನ್ನು ಮತ್ತು ರೀತಿಯನ್ನು ವೀರಶೈವ ವಚನಕಾರರು ಬಹು ಸ್ಪಷ್ಟ ರೀತಿಯಿಂದ ನಿರಾಕರಿಸಿರುವರು. ಗೋರಕ್ಷನು ಮೊದಲು ಈ ಮಾರ್ಗವನ್ನು ಆಚರಿಸಿ, ಅನೇಕ ಸಿದ್ಧಿಗಳನ್ನು ಮಾಡಿಕೊಂಡು ಕಡೆಗೆ ಅಲ್ಲಮ ಪ್ರಭುವಿನಿಂದ ಉಪದೇಶವನ್ನು ಹೊಂದಿ ಶಿವಯೋಗ ಮಾರ್ಗವನ್ನು ಅವಲಂಬಿಸಿದನೆಂಬ ಐತಿಹ್ಯವದೆ. ಅವನ ವಚನಗಳೂ ಉಪಲಬ್ಧವಿದ್ದು ಅವುಗಳೊಂದರಲ್ಲಿ ಅವನು ಅನ್ನುವದೇನೆಂದರೆ:—

"ರಸವಾದಂಗಳು ಕಲಿತಲ್ಲಿ ಲೋಹ ಸಿದ್ಧಿಯಿಲ್ಲದೆ, ರಸಸಿದ್ಧಿಯಾದುವಿಲ್ಲ. ನಾನಾಕಲ್ಪಯೋಗ ಅದೃಶ್ಯ ಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ, ಆತ್ಮಸಿದ್ಧಿಯಾದುದುಂಟೇ? ನಾನಾ ವಾಗ್ವಾದಂಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ, ಆತ್ಮವಿಹಿತವಾದುದಿಲ್ಲ. ನೀ, ನಾ, ಎಂದಲ್ಲಿ, ನೀನು ನಾನಾದೆಯಲ್ಲದೆ, ನಾನು ನೀನಾದುದಿಲ್ಲ. ಗೋರಕ್ಷಪಾಲಕ ಮಹಾ ಪ್ರಭುಸಿದ್ಧ ಸೋಮನಾಥಲಿಂಗ ನೀ ನಾನಾದೆಯಲ್ಲದೆ ಲೀಯ್ಯವಾಗಿ ನಾ ಆ ಲಿಂಗವೆಯಾದುದಿಲ್ಲ"

ಈ ವಚನವು ಯೋಗಶಾಸ್ತ್ರ ಮತ್ತು ಶಿವಯೋಗ ಇವುಗಳಲ್ಲಿಯ ಮಹದಂತರವನ್ನು ಬಹು ಚನ್ನಾಗಿ ವಿವರಿಸುತ್ತದೆ. ಯೋಗಶಾಸ್ತ್ರದ ಅಭ್ಯಾಸದ ಮೂಲಕ ಕಾಯದ ಗುಣಗಳು ಪ್ರಕಟವಾಗಬಹುದು, ಅದರ ಮೂಲಕ ಅನೇಕ ಶಕ್ತಿಗಳು ಬಲಗೊಳ್ಳಬಹುದು. ಆದರೆ ಇವೆಲ್ಲಕ್ಕೂ ಸ್ಥಾನವಾದ ಯಾವ ಆತ್ಮವೋ ಅದರ ಸಿದ್ಧಿಯು ಮಾತ್ರ ದೊರೆಯಲಾರದು.

ಮತ್ತು ಯೋಗಾಭ್ಯಾಸದ ಮೂಲಕ "ನೀನು ನಾನಾದೆಯಲ್ಲದೆ, ನಾನು ನೀನಾದುದಿಲ್ಲ" ಎಂದು ಭಾವ ಗರ್ಭಿತವಾಗಿ ಗೋರಕ್ಷನು ನುಡಿದು ಈ ಬಗೆಯ ಯೋಗಾಭ್ಯಾಸದ ದುರುಪಯೋಗವನ್ನು ವರ್ಣಿಸಿರುತ್ತಾನೆ.

ಶಿವಯೋಗಾಭ್ಯಾಸವನ್ನು ನಡಿಸುವ ರೀತಿಯನ್ನು ವೀರಶೈವ ವಚನಕಾರರು ತಮ್ಮ ಅಸಂಖ್ಯ ವಚನಗಳಲ್ಲಿ ವಿವರಿಸಿರುವರು. ಮನುಷ್ಯನ ಪ್ರತಿಕ್ಷಣದ ನಡೆ, ನುಡಿ, ಕ್ರಿಯೆಯಲ್ಲಿ ಆಚರ ಪ್ರಕಾಶವನ್ನು ಹೊರಗೆಡವುತ ಅವನು ವ್ಯವಹರಿಸುವದೇ ನಿಜವಾದ ಯೋಗವು. ಇದೇ ಶಿವಯೋಗವು ಎಂದು ಅವರ ಮುಖ್ಯ ವಿಚಾರವು. ಬಾಹ್ಯ ಲೌಕಿಕ ಅದ್ಭುತ ಕ್ರಿಯೆಗಳಿಗೆ ಅವರು ಮಹತ್ವವನ್ನಿತ್ತಿಲ್ಲ. ಬ್ರಾಹ್ಮಣ ಧರ್ಮಶಾಸ್ತ್ರಗಳು ಷೋಡಶ ಸಂಸ್ಕಾರಗಳು, ಯಜ್ಞ ಕರ್ಮಾದಿಗಳು, ಹೋಮಹವನಾದಿಗಳು ಈ ಬಗೆಯ ಅಸಂಖ್ಯ ಕರ್ಮಗಳಿಗೆ ಮಹತ್ವವನ್ನು ಕೊಟ್ಟು ಧರ್ಮ ಗ್ರಂಥಗಳ ಸಂಖ್ಯೆಯನ್ನು ಅಪಾರವಾಗಿ ಹೆಚ್ಚಿಸಿರುವವು. ಯೋಗಾಭ್ಯಾಸವು ಅಲೌಕಿಕ ಸಾಧನೆಗಳಿಗೆ ಮನುಷ್ಯನ ಮನಸ್ಸನ್ನು ಎಳಿಸಿರುತ್ತದೆ. ಆಗಮ ಗ್ರಂಥಗಳಾದರೂ ಮೂರ್ತಿಸ್ಥಾಪನೆ, ಅವುಗಳ ಪೂಜಾದಿ ಕರ್ಮಗಳು, ಇನ್ನೂ ಇತರೇ ಅನೇಕ ಆಚಾರ ವಿಚಾರಗಳನ್ನು ಬಹುವಾಗಿ ಬೆಳಿಸಿವೆ. ಈ ಎಲ್ಲ ಪ್ರವೃತ್ತಿಗಳು ಧರ್ಮದ ಹೆಚ್ಚುಗೆ ಎಂದು ಅನ್ನಲಿಕ್ಕೆ ಬರಲಾರದು. ಆದರೆ ಬಸವಾದಿ ಪ್ರಮಥರ ಕಾಲಕ್ಕೆ ಈ ಬಗೆಯ ಬಾಹ್ಯ ವರ್ತನೆಗಳಿಗೆ ಮಹತ್ವವಿರಲಿಲ್ಲ. ಆಗ ನಿಜವಾದ ಉಚ್ಚ ಧಾರ್ಮಿಕ ಭಾವವು ಉಕ್ಕುಗೊಂಡಿತು. ಮತ್ತು ಮನುಷ್ಯನ ಮಾನಸಿಕ ಮತ್ತು ನೈತಿಕ ಜಾಗ್ರತೆಗೆ ಕಾರಣವಾದ ಧರ್ಮಾಚರಣೆ ಯಾವುದೆಂಬದರ ಬಗ್ಗೆ ಸಮಾಜದಲ್ಲಿ ಚರ್ಚೆಯು ಹುಟ್ಟಿತು. ಇದಕ್ಕೋಸ್ಕರವೇ ಶಿವಾನುಭವ ಮಂಟಪ ಸ್ಥಾಪನೆಯು ಆಯಿತು. ಆ ಕಾಲಕ್ಕೆ ಪೂರ್ವದ ಆಗಮ ಶಾಸ್ತ್ರ ಮತ್ತು ವೈದಿಕ ಶಾಸ್ತ್ರ ಇವುಗಳಲ್ಲಿಯ ಶ್ರೇಷ್ಠ ತತ್ವಗಳಾವವೆಂಬುದು ಶೋಧಿತವಾಗಿ ಅವುಗಳ ಮೇಲೆ ಶಿವಾನುಭವವು ನಿಲ್ಲಿಸಲ್ಪಟ್ಟಿತು.

ಈ ಶಿವಯೋಗವು ಷಟ್‌ಸ್ಥಲಾತ್ಮಕವಾಗಿದೆ. ಇದರ ಪ್ರಕಾರ ದೇಹವನ್ನು ಕ್ಲೇಶಬಡಿಸುವ ಕಾರಣವಿಲ್ಲ. ಇಂದ್ರಿಯಗಳನ್ನು ಕಷ್ಟಬಡಿಸುವದನ್ನು ವಚನಕಾರರು ಬಹಳ ಹಳಿದಿರುವರು. ಆದರೆ ನೈತಿಕಾಚಾರಕ್ಕೆ ಬಹಳ ಮಹತ್ವಕೊಟ್ಟಿರುವರು. ಬಸವೇಶ್ವರನು ಒಂದುಕಡೆಗೆ ಅನ್ನುವದೇನೆಂದರೆ:—

"ಇಂದ್ರಿಯನಿಗ್ರಹಮಾಡಿದರೆ ಹೊಂದುವವು ದೋಷಂಗಳು. ಮುಂದೆ ಬಂದು ಕಾಡುವವು ಪಂಚೇಂದ್ರಿಯಂಗಳು. ಸತಿ ಪತಿ ರತಿ ಸುಖವ ಬಿಟ್ಟರೆ ಸಿರಿಯಾಳ ಚಂಗಳೆಯರು? ಸತಿ ಪತಿ ರತಿ ಸುಖಭೋಗೋಪಭೋಗವ ಬಿಟ್ಟರೆ ಸಿಂಧುಬಲ್ಲಾಳರು? ನಿಮ್ಮ ಮುಟ್ಟಿ ಪರಧನ ಪರಸ್ತ್ರೀಗೆಳಸಿದಡೆ ನಿಮ್ಮ ಚರಣಕ್ಕೆ ದೂರ ಕೂಡಲಸಂಗಮದೇವಾ"

ಹೀಗೆ ಶಿವಯೋಗ ಸಂಪನ್ನರು ಇಂದ್ರಿಯ ದಮನ ಮಾಡಬೇಕೆಂದು ಅವುಗಳನ್ನು ಹಿಂಸೆ ಮಾಡದೆ ಪ್ರಸಾದ ರೂಪವಾಗಿ ಅವುಗಳ ಕಾರ್ಯಗಳನ್ನು ಪ್ರವೃತ್ತಗೊಳಿಸಿ "ಲಿಂಗ ಭೋಗೋಪಭೋಗಿಗಳಾಗಿರತಕ್ಕದ್ದು" ವೀರಶೈವರು ಕಂಡು ಹಿಡಿದಿರುವ ಇದರ ವಿವರಗಳು ಬಹು ಮಹತ್ತರವಾಗಿವೆ. ಈ ತತ್ವ ಅಥವಾ ಮಾರ್ಗವನ್ನು ಅನುಸರಿಸಿದ್ದರ ಮೂಲಕ ಅವರು ನೀತಿ, ನಡತೆ ಎಂಬದಕ್ಕೆ ಬಹಳ ಮಹತ್ವ ಕೊಟ್ಟಿದ್ದಾರೆ. ಜನರೊಡನೆ ಹ್ಯಾಗೆ ವರ್ತಿಸಬೇಕು, ಇಂದ್ರಿಯಗಳ ವ್ಯಾಪಾರವನ್ನು ಹ್ಯಾಗೆ ಸಾಗಿಸಬೇಕು ಎಂಬುದನ್ನು ಅವರು ನಿರ್ಧರಿಸಬೇಕಾಯಿತು. ಆದ್ದರಿಂದ ವಚನಕಾರರಲ್ಲಿ ನೀತಿಯ ವಚನಗಳಿಗೆ ಬಹು ಮಹತ್ವದ ಸ್ಥಾನವು ಕೊಡಲ್ಪಟ್ಟಿದೆ. ಈ ಬಗ್ಗೆ ಒಂದು ಮಹತ್ವದ ವಾಙ್ಮಯವೇ ಹುಟ್ಟಿದೆಂದು ಹೇಳಬಹುದು.

ನೈತಿಕಾಚಾರಯುಕ್ತ ಶಿವಯೋಗದ ಮೂಲಕ ಮನುಷ್ಯನ ಶಕ್ತಿಗಳು ತಾವಾಗಿಯೇ ಪ್ರಕಟವಾಗುತ್ತವೆಂದು ವಚನಕಾರರ ತಿಳುವಳಿಕೆ ಇದೆ. ಆದ್ದರಿಂದ ಪ್ರಪಂಚವನ್ನು ಬಿಟ್ಟುಕೊಟ್ಟು ಸಾಧಕನು ಅರಣ್ಯವಾಸಿಯಾಗಿ ಕಠಿಣ ತಪಸ್ಸನ್ನು ಆಚರಿಸುವದು ಅವಶ್ಯವಿಲ್ಲ. ಮನುಷ್ಯನು ಜಗತ್ತಿನಲ್ಲಿದ್ದು ತನ್ನ ಕಾಯಕವನ್ನು ಸರಿಯಾಗಿ ಜರಗಿಸುತ್ತ ಹೋದಲ್ಲಿ ಯಾವ ಪ್ರತ್ಯವಾಯವಿಲ್ಲ. ಇದರಲ್ಲಿಯೇ ಶಿವಯೋಗವಿದೆಂದು ಅವರು ತಿಳಿಯುತ್ತಾರೆ. ಮಹಾಜ್ಞಾನಿಯಾದ ಕಾಡಸಿದ್ಧೇಶ್ವರರು ಈ ಬಗ್ಗೆ ಹೇಳಿರುವದೇನೆಂದರೆ:—

"ಇಂತಪ್ಪ ಭೇದವ ತಿಳಿಯದೆ ಪುರಾತನರ ವಚನವ ನೋಡಿ, ಕೇಳಿ ಹೊನ್ನು ಹೆಣ್ಣು ಮಣ್ಣನು ಬಿಟ್ಟು ಪ್ರಪಂಚ ಬಿಟ್ಟೆವು ಎಂಬಿರಿ. ಬಿಟ್ಟ ಪರಿಯ ಪೇಳಿರಯ್ಯ. ಹೊನ್ನಲ್ಲವೇ ಆತ್ಮನು? ಹೆಣ್ಣಲ್ಲವೇ ಮನಸ್ಸು? ಮಣ್ಣಲ್ಲವೇ ಪೃಥ್ವಿ ತತ್ವಂಶಿಕವಾದ ದೇಹವು? ಇಂತಪ್ಪ ತ್ರಿವಿಧ ಹೊನ್ನು, ಹೆಣ್ಣು, ಮಣ್ಣು, ಮಣ್ಣನೆ ಒಳಗಿಟ್ಟುಕೊಂಡು ಬಾಹ್ಯದ ಹೊನ್ನು, ಹೆಣ್ಣು, ಮಣ್ಣನೆ ಬಿಟ್ಟರೆ ಬಿಟ್ಟಂತಾಯಿತ್ತೆ ಎಲಾ ಮರುಳು ಮಾನವರಿರಾ? ದೇಹವ

ದಗ್ಧವ ಮಾಡಬೇಕೆಂದು ಅನ್ನ ಉದಕವ ಬಿಟ್ಟು ಅರಣ್ಯದಲ್ಲಿಗೆ ಹೋಗಿ ಕಂದಮೂಲ ಪರ್ಣಾಹಾರವ ಭಕ್ಷಿಸಿ ತನುವ ಒಣಗಿಸಿದರೇನು? ದೇಹ ದಗ್ಧವಾದಂತಾಯಿತ್ತೆ? ಆಗದು. ಹುತ್ತದ ಮೇಲೆ ಬಡಿದು ಸರ್ಪವ ಕೊಂದಂತಾಯಿತಲ್ಲದೆ ದೇಹ ದಗ್ಧವಾಗಲರಿಯದು. ಎಲೆ ಮರುಳು ಮಾನವರಿರಾ, ಅದೆಂತೆಂದೊಡೆ ಶಿವಜ್ಞಾನೋದಯವಾಗಿ ಗುರುಕಾರುಣ್ಯವ ಪಡೆದು ಲಿಂಗಾಂಗ ಸಂಬಂಧಿಯಾದ ಶಿವಶರಣರ ದೇಹವು ಜ್ಞಾನಾಗ್ನಿಯಲ್ಲಿ ದಗ್ಧವಾಯಿತ್ತಲ್ಲದೆ ಉಳಿದ ಜೀವಾತ್ಮರ ದೇಹವು ದಗ್ಧವಾಗಲರಿಯದು. ದೇಹದ ಗುಣವ ಬಿಡಬೇಕೆಂಬರಿ. ಬಿಡಲಿಕ್ಕೇನು ಕಟ್ಟಿದ ಪಶುಗಳೇ? ಬಿಡಲಿಕ್ಕೇನು ಹಟ್ಟಿಯ ಕುರಿಗಳೇ? ಕಣ್ಣಿಗೆ ಕಾಣಿಸದ ಕೈಗೆ ಸಿಕ್ಕದ ಗುಣಂಗಳಂ ಬಿಡಬೇಕೆಂಬರಿ. ಇದಕ್ಕೆ ದೃಷ್ಟ. ಸೂರ್ಯನ ಬಿಂಬ ಜಲದಲ್ಲಿ ಕಾಣುವದು. ಆ ಬಿಂಬ ಹಿಡಿಯಬಲ್ಲರೆ ಗುಣಬಿಟ್ಟರೆಂಬೆ. ಜ್ಯೋತಿಯ ಪ್ರಭೆಯ ಕಡೆಯಕ್ಕೆ ತೆಗೆದು ಹಿಡಿಯಬಲ್ಲರೆ ಗುಣಬಿಟ್ಟರೆಂಬೆ. ದೇಹದೊಳಗಣ ಪ್ರಾಣವ ಬಹಿಷ್ಕರಿಸಿ ಹಿಡಿಯಬಲ್ಲರೆ, ಗುಣಬಿಟ್ಟರೆಂಬೆ. ಇಂತೀ ಭೇದವ ತಿಳಿಯದೆ ತನು ಮನವ ಬಳಲಿಸಿ ಭವದತ್ತ ಮುಖವಾಗಿ ಹೋಗುವ ಹೇಸಿ ಮೂಳರ ಕಂಡು ನಾಚಿತ್ತಯ್ಯ ಎನ್ನ ಮನವು ಕಾಡಿನೊಳಗಾದ ಶಂಕರ ಪ್ರಿಯ ಚನ್ನಕದಂಬಲಿಂಗ ನಿರ್ವಾಯ ಪ್ರಭುವೇ”

ಇದರಲ್ಲಿ ಕಾಡಸಿದ್ಧೇಶ್ವರರು ಅತ್ಯಂತ ಸ್ಪಷ್ಟ ಶಬ್ದಗಳಿಂದ ಶಿವಯೋಗದ ಮರ್ಮವನ್ನು ವಿಸ್ತರಿಸಿರುವರು. ಹೀಗೆ ಶಿವಶರಣರು ಶಿವಯೋಗದಲ್ಲಿ ಆತ್ಮಜ್ಞಾನ ಸಾಧನೆ ಎಂಬದನ್ನು ಮುಖ್ಯವಾಗಿಟ್ಟುಕೊಂಡು ಷಟ್‌ಸ್ಥಲ ಅಷ್ಟಾವರಣ, ಏಕೋತ್ತರ, ನೈತಿಕಾಚಾರ ಮೊದಲಾದ ವಿಷಯಗಳನ್ನು ಜಗತ್ತಿನಲ್ಲಿ ಸ್ಫುಟವಾದ ಶಬ್ದಗಳಿಂದ ಬೋಧಿಸಿರುವರು. ಮತ್ತು ಅದರಂತೆ ಆಚರಿಸಿ ತೋರಿಸಿರುವರು. ಇವುಗಳ ಮರ್ಮವನ್ನು ಕಂಡುಹಿಡಿಯುವದೇ ವೀರಶೈವರ ಈಗಿನ ಮುಖ್ಯ ಕಾರ್ಯವಾಗಿರುತ್ತದೆ.

# ಕೆಳದಿಯ ಸದಾಶಿವರಾಯನು.

(ಲೇಖಕ:— ಫ. ಗು. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ.)



ಕೆಳದಿ, ಇಕ್ಕೇರಿ ಅಥವಾ ಬಿದನೂರು ಅರಸರ ರಾಜವಂಶವು ಕರ್ನಾಟಕದ ಇತಿಹಾಸದಲ್ಲಿ ಎಷ್ಟು ಮಹತ್ವದ ಕಾರ್ಯಗಳನ್ನು ಮಾಡಿರುತ್ತಾರೆಂಬದರ ಅರಿಕೆಯು ಇತ್ತೀಚಿಗೆ ನಮ್ಮ ಕನ್ನಡಿಗರಿಗಾಗಹತ್ತಿದ್ದು ಸಮಾಧಾನಕರವಾಗಿದೆ. ಇದರ ವಿಷಯದಲ್ಲಿ ಇರುವ ಚಿಕ್ಕ ಚಿಕ್ಕ ಸ್ಥಳೀಯ ಇತಿಹಾಸಗಳು ಅಥವಾ ಕೈಫಿಯತ್ತುಗಳು ಅಲ್ಲಲ್ಲಿ ಪ್ರಸಿದ್ಧವಾಗಹತ್ತಿವೆ. ಅವುಗಳ ಮೇಲಿಂದ ಈ ರಾಜರು ಅತ್ಯಂತ ವೈಭವ ಸಂಪನ್ನರಾಗಿ ದಕ್ಷತೆಯಿಂದಲೂ ಚಾತುರ್ಯದಿಂದಲೂ ರಾಜ್ಯಭಾರ ನಡಿಸಿದ್ದಲ್ಲದೆ ಕನ್ನಡಿಗರ ಸರ್ವಸ್ವವಾದ ಅವರ ವಾಙ್ಮಯ, ಅವರ ಸಂಸ್ಕೃತಿಯನ್ನು ಅತ್ಯಂತ ಕಠಿಣ ಕಾಲದಲ್ಲಿ ಸಹ ರಕ್ಷಿಸಿದ್ದು ತೋರಿಬರುತ್ತದೆ. ಹೀಗೆ ಮಹತ್ತರ ಕಾರ್ಯ ಮಾಡಿದ ಈ ರಾಜರುಗಳ ಚರಿತ್ರಗಳನ್ನು ಸಂಶೋಧಿಸುವದೂ ಪ್ರಕಟಿಸುವದೂ ಈಗಿನ ಕಾಲಕ್ಕೆ ಬಹಳ ಅವಶ್ಯವಾಗಿದೆ.

ಈ ಕೆಳದೀ ರಾಜ್ಯವಂಶದಲ್ಲಿ ಒಟ್ಟಿಗೆ ೧೮ ರಾಜರು ೨೬೫ ವರುಷಗಳ ವರೆಗೆ ಅವ್ಯಾಹತವಾಗಿ ರಾಜ್ಯಭಾರ ನಡಿಸಿದರು. ಇವರಲ್ಲಿ ಚೌಡಪ್ಪನಾಯಕನೇ ಈ ರಾಜ್ಯ ಸಂಸ್ಥಾಪಕನಾಗಿದ್ದು ಅವನ ಮಗ ಸದಾಶಿವರಾಯನು ಅತ್ಯಂತ ಪ್ರತಾಪಶಾಲಿಯಾಗಿ ತನ್ನ ಆಡಳಿತೆಯ ವಿಸ್ತಾರವನ್ನು ಬಹಳ ಹೆಚ್ಚಿಸಿದನು. ಅವನು ೧೫೨೩ ರಿಂದ ೧೫೪೫ ರ ವರೆಗೆ ಆಳಿದ್ದು ಈ ಅವಧಿಯಲ್ಲಿ ಅವನು ವಿಜಯನಗರದ ಸಾರ್ವಭೌಮರಾದ ಕೃಷ್ಣರಾಜ (೧೫೦೯-೧೫೩೦) ಅಚ್ಯುತರಾಯ (೧೫೩೦-೧೫೩೫) ಮತ್ತು ಕಡೆಯವನಾದ ರಾಮರಾಜ (೧೫೩೬-೧೫೬೪) ಇವರಿಗೆ ಬಲಾಢ್ಯ ಮಾಂಡಲೀಕನಾಗಿ ರಾಜ್ಯವಾಳಿದನು. ಈ ಕೆಳದಿಯ ವಂಶದವರಿಗೆ ಎಡವಮುರಾರಿ, ಕೋಟಿಕೋಲಾಹಲ, ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ, ಶಿವಗುರು ಭಕ್ತಿಪರಾಯಣ, ಅರಿದಲೆ ಮೇಘಾಡಂಬರ, ದಿವಾಪ್ರದೀಪ, ಬರೀದ ಸಪ್ತಾಂಗಹರಣ, ಏಕಾಂಗವೀರ, ಬಲವಂತ ಮೊದಲಾದ ಬಿರುದುಗಳಿದ್ದು ಇವುಗಳಲ್ಲಿ ಬಹುತರ ಎಲ್ಲವುಗಳನ್ನು ಈ ಸದಾಶಿವರಾಯನೇ ತನ್ನ ಸಾಮ

ರ್ಯದ ಬಲದಿಂದ ದೊರಕಿಸಿದ್ದು ತಿಳಿದುಬರುತ್ತದೆ. ಇದರಿಂದ ಈತನು ಎಷ್ಟು ಶೂರನಾಗಿದ್ದನೆಂಬುದು ತಿಳಿದುಬರುತ್ತಿದೆ. ಅವನ ಸಂಕ್ಷಿಪ್ತ ವೃತ್ತಾಂತವನ್ನು ನಾವು ಇಲ್ಲಿ ಕೊಡಲೆಣಿಸಿದ್ದೇವೆ.

ಸದಾಶಿವರಾಯನು ವಿಜಯನಗರದ ಕೃಷ್ಣರಾಜ, ಅಚ್ಯುತರಾಯ ಮತ್ತು ರಾಮರಾಜ ಇವರ ಮಹತ್ವದ ಆಳಿಕೆಗಳಿಗೆ ಒಳಪಟ್ಟು ಸಾಮಂತ ಭೂಪತಿಯಾಗಿ ಆಳುತ್ತಿದ್ದನಾದ್ದರಿಂದ ಈ ರಾಜರು ಮುಸಲ್ಮಾನರ ಕೂಡ ಹೂಡಿದ ಅನೇಕ ಯುದ್ಧಗಳಲ್ಲಿ ಸದಾಶಿವರಾಯನು ಬಹು ಖ್ಯಾತಿಯನ್ನು ಪಡೆದನು. ರಾಮರಾಜನ ಆಳಿಕೆಯಲ್ಲಿ ಅಹಮ್ಮದನಗರ ಮತ್ತು ವಿಜಾಪುರ ಬಾದಶಹರ ಸಂಯುಕ್ತ ಸೇನೆಯೊಡನೆ ಯುದ್ಧ ಹೂಡುವ ಪ್ರಸಂಗವು ಒದಗಿತು. ಆಗ ಸದಾಶಿವರಾಯನ ಸೇನೆಯು ಜಮಖಂಡಿಯ ನೆರೆಯಲ್ಲಿ ಅಹಮದನಗರದ ನಿಜಾಮಶಹನ ದಂಡನ್ನು ಎದುರಿಸಿತು. ಆಗ ಮಹತ್ತಾದ ಯುದ್ಧವು ಅಲ್ಲಿ ಜರಗಲು ವಿಜಯನಗರದ ದಂಡು ಹಿಂದೆಗೆಯುವದರಲ್ಲಿ ಇರಲು ಸದಾಶಿವರಾಯನು ಬಹು ಪರಾಕ್ರಮವನ್ನು ತೋರಿಸಿ ತುರುಷ್ಕರ ಸೇನೆಯನ್ನು ಚದರಿಸಿ ನಿಜಾಮಶಹನ ದಂಡಿನ ಸೇನಾಪತಿಗಳಲ್ಲಿ ಮುಖ್ಯನಾದ ಜೊಕ್ಯಸಿಂಗನೆಂಬವನನ್ನು ಹಿಡಿದು ಅರಸನಿಗೆ ಒಪ್ಪಿಸಿದನು. ಹೀಗೆ ಜಯವನ್ನು ಸಂಪಾದಿಸಿ, ವೈರಿ ರಾಜ್ಯದಲ್ಲಿ ಮುಂದೆ ಸಾಗಿ ಹೋಗಿ ಬಲವಾದ ಕಲ್ಯಾಣ ಪಟ್ಟಣವನ್ನು ಮುತ್ತಿದನು. ಆ ಕಾಲಕ್ಕೆ ವಿಜಯನಗರದ ರಾಜನು ಸ್ವತಃ ಈ ಮುತ್ತಿಗೆಯ ಕಾರ್ಯವನ್ನು ನಿರೀಕ್ಷಿಸುತ್ತಿದ್ದನು. ಆಗ ಸದಾಶಿವರಾಯನು ಕೋಟೆಗೆ ಲಗ್ಗೆ ಏರಿ ಒಳಹೊಕ್ಕು ವೈರಿಗಳನ್ನು ಹಿಂದಕ್ಕಟ್ಟಿ ಈ ಕೋಟೆಯ ಹೆಬ್ಬಾಗಿಲನ್ನು ತೆಗೆದು ದಂಡಿನ ಪ್ರವೇಶಕ್ಕೆ ಇಂಬುಗೊಡಲು ಈ ಕೋಟೆಯು ರಾಯನ ವಶವಾಯಿತು. ಆ ಮೇಲೆ ಕಲಬುರಿಗೆ ಕೋಟೆಗೆ ಸಾಗಿಹೋಗಿ ಆ ಕೋಟೆಯನ್ನೂ ತೆಗೆದುಕೊಂಡನು. ಈ ಕಾಲದಲ್ಲಿ ಸದಾಶಿವರಾಯನು ತೋರಿಸಿದ ಮಹತ್ತರ ಪರಾಕ್ರಮಕ್ಕೋಸ್ಕರ ವಿಜಯನಗರದ ಅರಸನು ಆತನಿಗೆ ಪ್ರೀತನಾಗಿ ಕೋಂಟೆ ಕೋಲಾಹಲ ಮತ್ತು ರಾಯನಾಯಕ ಎಂಬ ಬಿರುದುಗಳನ್ನು ಕೊಟ್ಟನು. ಮತ್ತು ಗುತ್ತಿ ಬಾರ್ಕೂರು ಮತ್ತು ಮಂಗಳೂರು ಪ್ರಾಂತಗಳನ್ನೂ ಕೊಟ್ಟನು. ಈ ಪ್ರಾಂತಗಳನ್ನು ಕೊಟ್ಟದ್ದು ಶಿವತತ್ವರತ್ನಾಕರದಲ್ಲಿ ಮಾತ್ರ ಉಲ್ಲೇಖವಿದೆ. ಕೆಳದೀನೃಪ ವಿಜಯದಲ್ಲಿ ಈ ಯುದ್ಧವು ಕೃಷ್ಣರಾಜನ ಕಾಲದಲ್ಲಿ ಆಯಿತೆಂದು ಹೇಳಲ್ಪಟ್ಟಿದೆ. ಆದರೆ

ಕೆಳದಿಯ ಅರಸನಾದ ಬಸವರಾಜನು ರಚಿಸಿದ ಶಿವತತ್ವರತ್ನಾಕರದಲ್ಲಿ ಇದು ರಾಮರಾಜನ ಕಾಲದಲ್ಲಿ ಸಂಭವಿಸಿತೆಂದು ಹೇಳಲ್ಪಟ್ಟಿದೆ. ಶಿವತತ್ವರತ್ನಾಕರವು ಕೆಳದಿಯ ನೃಪವಿಜಯದಕಿಂತಲೂ ಹಿಂದಿನದು, ಮತ್ತು ಹೆಚ್ಚಿಗೆ ಆಧಾರವನ್ನಿಟ್ಟುಕೊಂಡು ಬರೆದದ್ದಿರುವದರಿಂದ ಹೆಚ್ಚಿಗೆ ವಿಶ್ವಾಸನೀಯವೆಂದು ಹೇಳಬಹುದು. ಮತ್ತು ಈ ವರೆಗೆ ಉಪಲಬ್ಧವಾದ ಇತಿಹಾಸ ಗ್ರಂಥಗಳ ಮೇಲಿಂದ ಕೃಷ್ಣರಾಜನು ಅಹಮುದನಗರದ ಬಾದಶಹರ ಕೂಡ ಯುದ್ಧ ಹೂಡಿದ್ದು ತಿಳಿದು ಬಂದಿಲ್ಲ. ಆದರೆ ರಾಮರಾಜನು ಅಹಮುದನಗರ, ವಿಜಾಪುರ ಮೊದಲಾದ ಬಾದಶಹರೊಡನೆ ಅನೇಕ ಸಾರೆ ಯುದ್ಧಗಳನ್ನು ಹೂಡಿರುವನು. ಆದ್ದರಿಂದ ಸದಾಶಿವರಾಯನ ಮೇಲಿನ ಯುದ್ಧಗಳೆಲ್ಲ ರಾಮರಾಜನ ಆಳಿಕೆಯಲ್ಲಿ ಆಗಿರುತ್ತವೆಂದು ತಿಳಿಯುವದರಲ್ಲಿ ಹೆಚ್ಚಿಗೆ ಸತ್ಯಾಂಶವಿದೆಂದು ತೋರುತ್ತದೆ.

ವಿಜಯನಗರದ ರಾಯನಿಗೆ ಬೀದರದ ಬರೀದಪಾತಹನಕೂಡ ಯುದ್ಧಮಾಡುವ ಪ್ರಸಂಗವು ಪ್ರಾಪ್ತವಾಗಲು ಅರಸನು ಸದಾಶಿವರಾಯನಕೂಡ ದೊಡ್ಡ ದಂಡನ್ನು ಕೊಟ್ಟುಕಳಿಸಿದನು. ಈ ಸಂಗತಿಯು ಕೆಳದಿಯ ನೃಪವಿಜಯ ಮತ್ತು ಶಿವತತ್ವರತ್ನಾಕರದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಅರಸನು ವಿಶ್ವಾಸವಿಟ್ಟಪ್ರಕಾರ, ಸದಾಶಿವರಾಯನು ಮುಸಲ್ಮಾನರ ಸೇನೆಯನ್ನು ಸಂಪೂರ್ಣವಾಗಿ ಸದೆಬಡೆದು ಬಾದಶಹನನ್ನು ಕೈಸೆರೆ ಹಿಡಿದು ಅರಸನಿಗೆ ತಂದೊಪ್ಪಿಸಿದನು. ಆಗ ಅರಸನು ಹರ್ಷಿತನಾಗಿ ಸದಾಶಿವರಾಯನಿಗೆ ರತ್ನಾಭರಣ ತಾಂಬೂಲವನ್ನಿತ್ತು ಸತ್ಕರಿಸಿ ಅವನಿಗೆ "ಅರಿದಲೆ ಮೇಘಾಡಂಬರ ದಿವಾಪ್ರತಾಪ ಬರೀದಸಪ್ತಾಂಗಹರಣ" ಎಂಬ ಬಿರುದುಗಳನ್ನು ಕೊಟ್ಟನು.

ಆಮೇಲೆ ನಿಜಾಮಶಹನ ಕೂಡ ೨ನೇ ಯುದ್ಧವು ಪ್ರಾರಂಭವಾಯಿತು. ಆಗಲೂ ಈ ಕಾರ್ಯವು ಸದಾಶಿವರಾಯನಿಗೆ ವಹಿಸಲ್ಪಟ್ಟಿತು. ಅದರಲ್ಲಿಯೂ ಅವನಿಗೆ ಜಯವು ಒದಗಿದ್ದರಿಂದ ರಾಜನಿಂದ ಅವನಿಗೆ "ಏಕಾಂಗವೀರ" ಎಂಬ ಬಿರಿದು ಕೊಡಲ್ಪಟ್ಟಿತು.

ಮುಸಲ್ಮಾನರೊಡನೆ ಕೃಷ್ಣರಾಜ ಮತ್ತು ರಾಮರಾಯ ಇವರು ಹೂಡಿದ ಯುದ್ಧಗಳ ವಿವರಣೆಗಳನ್ನು ನೋಡಿದರೆ, ಮೇಲ್ಕಂಡ ಸಂಗತಿಗಳೆಲ್ಲ ಶಿವತತ್ವರತ್ನಾಕರದಲ್ಲಿ ಹೇಳಿದಂತೆ ರಾಮರಾಜನ ಆಳಿಕೆಯಲ್ಲಿ ಸಂಭವಿಸಿರಬಹುದೆಂದು ತಿಳಿಯುವದು ಹೆಚ್ಚಿಗೆ ವಿಶ್ವಾಸನೀಯವೆಂದು ತೋರುತ್ತದೆ.

ಆದರೆ ಸದಾಶಿವರಾಯನು ಬಹುಕಾಲ ಕೃಷ್ಣರಾಯನ ಕಾಲದಲ್ಲಿ ಆಳಿದ್ದರಿಂದ ಅವನಿಗೂ ಅತ್ಯಂತ ಸಹಾಯಕನಾಗಿ ವರ್ತಿಸಿರಲಿಕ್ಕೆಬೇಕು. ಆದುದರಿಂದಲೇ ಕೆಳದೀನೃಪವಿಜಯಕಾರನು ಅವನಿಗೆ ಕೃಷ್ಣರಾಜನ ಸಂಬಂಧವನ್ನು ಬಹಳ ತೋರಿಸಿರಬಹುದು. ಕೃಷ್ಣರಾಯನ ಇತಿಹಾಸವನ್ನು ನೋಡಿದರೆ, ಅವನು ಸಿಂಹಾಸನವನ್ನೇರುವ ಪೂರ್ವದಲ್ಲಿ ವಿಜಯನಗರದ ಆಡಳಿತೆಯ ಪ್ರಾಬಲ್ಯವು ದಕ್ಷಿಣದೇಶವಲ್ಲಿ ಬಹು ಶಿಥಿಲತೆಯನ್ನು ಹೊಂದಿತ್ತೆಂದು ತೋರುತ್ತದೆ. ಆದರೆ ಅವನು ರಾಜ್ಯಭಾರ ವಹಿಸಿದ ತರುವಾಯ ಅವನಿಗೆ ಇದಿರು ನಿಂತ ಪಾಳೆಯಗಾರರನ್ನು ಮುರಿದಿಕ್ಕುವ ಪ್ರಸಂಗಗಳು ಅವನಿಗೆ ಮೇಲಿಂದಮೇಲೆ ಬರುತ್ತಿದ್ದವು. ಈ ಕಾರ್ಯದಲ್ಲಿ ಅವನಿಗೆ ಸದಾಶಿವರಾಯನು ಬಹಳ ಸಹಾಯವಾದಂತೆ ತಿಳಿಯುತ್ತದೆ.

ಸದಾಶಿವರಾಯನು ಕೃಷ್ಣರಾಜನ ಅಪ್ಪಣೆಯ ಪ್ರಕಾರ ದಕ್ಷಿಣ ಕನ್ನಡ ಮತ್ತು ಮಲಬಾರ ಪ್ರಾಂತಗಳನ್ನು ಅಭಿಯೋಗಿಸಿದನು. ಅಲ್ಲಿ ತಿರುಗಿ ನಿಂತ ತುಳುವ ಅರಸರನ್ನು ಹಣ್ಣಿಗೆ ತಂದು ತಾನು ಸಂಪಾದಿಸಿದ ಜಯಕುರುಹಿಗಾಗಿ ಕಾಸರಗೋಡೆಯಲ್ಲಿ ಒಂದು ಜಯಸ್ತಂಭವನ್ನು ನಿಲ್ಲಿಸಿದನು.

ಕೆಳದಿಯ ರಾಜ್ಯದ ಸಮೀಪವಾಗಿ ಚಂದ್ರಗುತ್ತಿಎಂಬ ಬಹು ಬಲವಾದ ದುರ್ಗವಿದ್ದು ಅದನ್ನು ಸಾಳುನಾಯಕೇಂದ್ರನೆಂಬುವನು ಆಳುತ್ತಿದ್ದನು. ಅದನ್ನು ಸದಾಶಿವನಾಯಕನು ಲಗ್ಗೆ ಏರಿ ಸಾಧಿಸಿಕೊಂಡು ವಿಜಯನಗರದ ರಾಜ್ಯಕ್ಕೆ ಸೇರಿಸಿದನು. ಅದೇ ಪ್ರಕಾರ ಆ ಕಾಲಕ್ಕೆ ಜಿಂಜಿ ಮತ್ತು ಬಂಕಾಪುರ ಕೋಟೆಗಳು ಬಹು ಭದ್ರವಾದವುಗಳಾಗಿದ್ದವು. ಜಿಂಜಿಯಲ್ಲಿ ಕೃಷ್ಣಪ್ಪನಾಯಕನೆಂಬವನೂ ಬಂಕಾಪುರದಲ್ಲಿ ಮಾವಣ ಒಡೆಯನೆಂಬವನೂ ಅಧಿಕಾರಿಗಳಿದ್ದು ಅವರು ಸ್ವತಂತ್ರರಾಗಿದ್ದರು. ಆಗ ಸದಾಶಿವರಾಯನಾಯಕನು ವಿಜಯನಗರದ ಕೃಷ್ಣರಾಜನ ಆಜ್ಞಾನುಸಾರವಾಗಿ ಈ ಉಭಯ ಕೋಟೆಗಳನ್ನು ಸಾಧಿಸಿದನು. ಜಿಂಜಿಯ ಕೋಟೆಯನ್ನು ಸಾಧಿಸಿದ್ದಕ್ಕೆ ಬಲವಂತನೆಂಬ ಬಿರುದನ್ನು ಮತ್ತು ಬಂಕಾಪುರವನ್ನು ತೆಗೆದುಕೊಂಡದ್ದಕ್ಕೆ ೧೮ ಕಂಪಣ ವಿಸ್ತಾರವಾದ ಪ್ರಾಂತವನ್ನು ಕೃಷ್ಣರಾಜನಿಂದ ಬಹುಮಾನವನ್ನು ಹೊಂದಿದನು. ಇದಲ್ಲದೆ ಮತ್ತಿಯ ತಿಮ್ಮನೆಂಬವನನ್ನು ಅವನು ನಿಗ್ರಹಿಸಿದ್ದು ತಿಳಿದುಬರುತ್ತದೆ.

(ಪ್ರತಿಯೊಬ್ಬ ಕೆಳದಿಯ ಅರಸನು ಎಡವಮುರಾರಿ ಎಂಬ ಬಿರುದನ್ನು ಉಪಯೋಗಿಸುತ್ತಿದ್ದದ್ದು ಅನೇಕ ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಈ ಬಿರುದನ್ನಾದರೂ ಈ ಸದಾಶಿವರಾಯನೇ ಸಂಪಾದಿಸಿದನು. ಶಿವತತ್ವರತ್ನಾಕರದಲ್ಲಿ ಹೇಳಿರುವದೇನೆಂದರೆ, ಜಾಲೀಹಾಳವೆಂಬ ಪ್ರಾಂತವಿದ್ದು ಅಲ್ಲಿ ಎಡವ ಮತ್ತು ಮುರಾರಿ ಎಂಬ ಬಹು ಪರಾಕ್ರಮಿಗಳಿದ್ದು ಯಾವ ರಾಜನಿಗೂ ಬಗ್ಗದೆ ಅವರು ನಿರಾತಂಕವಾಗಿ ಆಳುತ್ತಿದ್ದರು. ಆಗ ಅವರನ್ನು ಜಯಿಸುವ ಕಾರ್ಯವನ್ನು ಸದಾಶಿವರಾಯನಿಗೆ ಒಪ್ಪಿಸಲಾಗಿ ಅವನು ಅವರ ಕೋಟೆಯನ್ನು ತೆಗೆದುಕೊಂಡನು. ಈ ಕಾರ್ಯಕ್ಕೋಸ್ಕರ ಅವನಿಗೆ ಎಡವಮುರಾರಿ ಎಂಬ ಬಿರುದು ಕೊಡಲ್ಪಟ್ಟಿತು.) ಈ ಜಾಲೀಹಾಳು ಕೆಳದಿ ನೃಪವಿಜಯದಲ್ಲಿ ಜಾಲೆ ಎಂದು ಕರೆಯಲ್ಪಟ್ಟಿದೆ. ಈ ಜಾಲೀಹಾಳು ಸೀಮೆಯು ಸುರಪುರದ ಸಮೀಪವಾಗಿತ್ತು. ಇವರು ಬೇಡರರಸರು ಇದ್ದು ಇವರ ರಾಜ್ಯವು ಸುರಪುರದ ರಾಜ್ಯದೊಡನೆ ಬ್ರಿಟಿಶರಿಂದ ಖಾಲಸಾತ ಮಾಡಲ್ಪಟ್ಟಿತು. ಸದಾಶಿವರಾಯನು ತೆಗೆದುಕೊಂಡ ಸೀಮೆಯು ಇದೇ ಇರಬಹುದು.

ಈ ಮೇರೆಗೆ ಸದಾಶಿವರಾಯನು ವಿಜಯನಗರದ ನರಪತಿಗಳಿಗೆ ಕಾಲಕಾಲಕ್ಕೆ ಮಹತ್ತರವಾದ ಸಹಾಯಮಾಡಿದ್ದು ಕಂಡುಬರುತ್ತದೆ. ಇದರಿಂದ ಅವನು ಇಡೀ ದಕ್ಷಿಣಕನ್ನಡಜಿಲ್ಲೆ ಶಿವಮೊಗ್ಗೆಯ ಜಿಲ್ಲೆ ಮತ್ತು ಬಂಕಾಪುರದ ನೆರೆಸೀಮೆ ಇವುಗಳಿಗೆ ಅಧಿಪತಿಯಾಗಿ ರಾಜ್ಯಭಾರ ನಡಿಸುತ್ತಿದ್ದನು. ಕೆಳದಿಯ ಅರಸರ ಭಾವೀ ಸಾಮ್ರಾಜ್ಯಾಭಿವೃದ್ಧಿಗೆ ಸದಾಶಿವರಾಯನ ಶೌರ್ಯ ಸಾಹಸಾದಿಗಳೇ ಕಾರಣವಾದವೆಂದು ಹೇಳಬಹುದು.

ಸದಾಶಿವರಾಯನು ಹೀಗೆ ಕೇವಲ ಸಮರಾಂಗಣದಲ್ಲಿ ತನ್ನ ಕೌಶಲವನ್ನು ತೋರಿಸಿದನಷ್ಟೇ ಅಲ್ಲ, ಅವನು ಅತ್ಯಂತ ಧರ್ಮನಿಷ್ಠನಾಗಿ ಅನೇಕ ಧಾರ್ಮಿಕ ಕೃತ್ಯಗಳನ್ನೂ ನೆರವೇರಿಸಿದನು.

ಕೆಳದಿಯ ಪ್ರಸಿದ್ಧ ರಾಮೇಶ್ವರ ದೇವಾಲಯದ ನಂದೀಮಂಟಪವನ್ನು ಅಧಿಕ ಮನೋಹರವಾಗಿ ಮತ್ತು ಶಿಲಾಮಯವಾಗಿ ಕಟ್ಟಿಸಿದನು. ಹಾಗೆಯೇ ಅಲ್ಲಿಯ ಪಾರ್ವತೀ ಮೂರ್ತಿಯನ್ನು ಆಗಮವಿಧಿಯಿಂದ ಪ್ರತಿಷ್ಠಾಪನ ಮಾಡಿದನು. ಅದಕ್ಕೆ ಅನೇಕ ಗ್ರಾಮಗಳನ್ನು ಉಂಬಳೀ ಹಾಕಿ ಕೊಟ್ಟನು.

ಅದರಂತೆಯೇ ಅವನು ಕೆಳದಿಯಲ್ಲಿ ಅತ್ಯಂತ ಪ್ರಸಿದ್ಧವಾಗಿರುವ ಮಹತ್ತಿನ ಮಠ ಅಂದರೆ ಹಿರಿಯ ಮಠವನ್ನು ಸ್ಥಾಪಿಸಿ ಜಂಗಮರಿಗೆ ಉತ್ತಮತರದ ದಾನಗಳು ನಡೆಯುವಂತೆ ನಿಯೋಜಿಸಿದನು.

ಅವನು ಕುಶಾವತೀ ನದೀತೀರದಲ್ಲಿ ಸದಾಶಿವಪುರನೆಂಬ ಅಗ್ರಹಾರವನ್ನು ಕಟ್ಟಿಸಿ ಭೂಸುರರಿಗೆ ವೃತ್ತಿ ಕ್ಷೇತ್ರಗಳನ್ನು ಕಲ್ಪಿಸಿದನು. ಅಲ್ಲಿ ತನ್ನ ಹೆಸರಿನಿಂದ ಸದಾಶಿವೇಶ್ವರನೆಂಬ ಶಿವಲಿಂಗವನ್ನು ಆಗಮೋಕ್ತವಿಧಾನದಿಂದ ಸ್ಥಾಪಿಸಿ ಅಲ್ಲಿ ಒಂದು ದೇವಾಲಯವನ್ನು ನಿರ್ಮಾಣಮಾಡಿ ಅದಕ್ಕೆ ಭೂಸ್ವಾಸ್ಥ್ಯೆಯನ್ನು ವ್ಯವಸ್ಥೆಗೊಳಿಸಿದನು. ಮತ್ತು ಸದಾಶಿವಸಾಗರವೆಂಬ ನಗರವನ್ನು ಅಲ್ಲಿ ರಚಿಸಿದನು.

ಮದಗಮಾಸೂರೆಂಬ ಬಹು ಪ್ರಸಿದ್ಧವಾದ ಕೆರೆಯು ಕೋಡ ತಾಲೂಕಿನಲ್ಲಿ ಇರುವದಷ್ಟೇ. ಇದು ಪುರಾತನ ಕೆರೆಯಾಗಿದ್ದು ಬಹು ವಿಸ್ತಾರವಾದ ಭೂಮಿಯು ಇದರಿಂದ ತೊಯ್ಯುತ್ತದೆ. ಸದಾಶಿವರಾಯ ನಾಯಕನು ವಿಜಯನಗರದ ಅರಸನ ಅನುಮತಿಯನ್ನು ಹೊಂದಿ ಈ ಕೆರೆಯ ಅಪೂರ್ಣವಾದ ಕೆಲಸವನ್ನು ಪೂರ್ತಿಗೊಳಿಸಿದನು. ಆಗ ಆ ಸ್ಥಳಕ್ಕೆ ಶ್ರೀಂಗೇರೀ ಸ್ವಾಮಿಗಳೂ ರಾಜನೂ ಅಲ್ಲಿಗೆ ಬಂದು ಸದಾಶಿವರಾಯನನ್ನು ಬಹಳ ಸತ್ಕರಿಸಿದರು. ಈ ಕೆರೆಯನ್ನು ಪೂರ್ತಿಗೊಳಿಸುವ ಕಾರ್ಯದಲ್ಲಿ ಬಂಕಾಪುರದ ಮಾದಣ ಒಡೆಯನು ಸದಾಶಿವರಾಯನಿಗೆ ಸಹಾಯ ಮಾಡಿದನೆಂದು ಕೆಳದೀ ನೃಪವಿಜಯದಲ್ಲಿ ಉಲ್ಲೇಖಿಸಲ್ಪಟ್ಟದೆ.

ಈ ಮೇರೆಗೆ ಸದಾಶಿವರಾಯನು ೩೩ ವರ್ಷ ರಾಜ್ಯಭಾರ ಮಾಡಿ ಜಗ್ಗುಪಾಳ್ಯವೆಂಬ ಸ್ಥಳದಲ್ಲಿ ಮರಣ ಹೊಂದಿದನು. ಮತ್ತು ಅಲ್ಲಿಯೇ ಅವನ ಸಮಾಧಿಯು ಆಯಿತು.

ವಿಜಯನಗರದ ಅರಸರ ಇತಿಹಾಸವನ್ನು ಸಂಶೋಧಿಸುವದು ಎಷ್ಟು ಮಹತ್ವದ್ದೆಂಬದನ್ನು ನಾವು ವಿವರಿಸುವ ಅವಶ್ಯವಿಲ್ಲ. ಈ ಅರಸರು ತಮ್ಮ ರಾಜ್ಯ ವಿಸ್ತಾರವನ್ನು ಹ್ಯಾಗೆ ಮಾಡಿದರು, ಅವರಿಗೆ ಅದರಲ್ಲಿ ಬಂದ ಆತಂಕಗಳಾವವು ಮತ್ತು ಅವರಿಗೆ ಈ ಮಹತ್ಕಾರ್ಯದಲ್ಲಿ ಸಹಾಯಕರಾದವರು ಯಾರು ಎಂಬುದನ್ನು ಗೊತ್ತುಪಡಿಸುವದು ಅತ್ಯಂತ ಮಹತ್ವವದೆ. ಈ ದೃಷ್ಟಿಯಿಂದ ಅವರ ಮಾಂಡಲಿಕ ಅರಸರ ಚರಿತ್ರೆಶೋಧವು ಬಹಳ ಅವಶ್ಯವಿದ್ದು ಇದರಿಂದ ಅವರ ಇತಿಹಾಸದ ಮೇಲೆ ವಿಶೇಷ

ಪ್ರಕಾಶವು ಬೀಳುವಂತೆ ಇದೆ ಈ ಸಂಗತಿಯು ಸದಾಶಿವರಾಯನ ಚರಿತ್ರೆಯಿಂದ ವಾಚಕರಿಗೆ ಗೊತ್ತಾಗದೆ ಇರದು.

ಸದಾಶಿವರಾಯನು ಈ ಪ್ರಕಾರ ಸ್ವಪರಾಕ್ರಮದಿಂದ ವಿಜಯನಗರದ ರಾಜ್ಯದಲ್ಲಿ ಮುಂದಕ್ಕೆ ಬಂದು ಒಂದು ದೊಡ್ಡ ಸೀಮೆಯ ಬಲಾಢ್ಯ ಮಾಂಡಲಿಕ ಭೂಪತಿಯಾದನು. ಕೆಳದಿಯ ರಾಜವಂಶದ ಅಭ್ಯುದಯಕ್ಕೆ ಇವನೇ ಕಾರಣವೆಂದು ಹೇಳಲು ಏನೂ ಪ್ರತ್ಯವಾಯವಿಲ್ಲ. ಇವನು ಮುಸಲ್ಮಾನ ಮತ್ತು ಇತರ ರಾಜರೊಡನೆ ಸಂಗ್ರಾಮ ಭೂಮಿಯಲ್ಲಿ ತನ್ನ ಶೌರ್ಯ ಧೈರ್ಯಾದಿಗಳನ್ನು ತೋರಿಸಿ, ಅನೇಕ ಸೀಮೆಗಳನ್ನು ಸಂಪಾದಿಸಿದನು. ಇವನಿಗೆ ಕೊಟ್ಟ ಬಿರುದುಗಳಲ್ಲನೇಕವುಗಳನ್ನು ಮುಂದಿನ ರಾಜವಂಶದವರು ಇವನ ಸ್ಮರಣಾರ್ಥವಾಗಿ ಹಾಗೆಯೇ ಉಪಯೋಗಿಸಿಕೊಳ್ಳುತ್ತಿದ್ದರು. ಸದಾಶಿವರಾಯನು ತೀರಿಕೊಂಡ ಬಳಿಕ ಸ್ವಲ್ಪ ಕಾಲದಲ್ಲಿ ವಿಜಯನಗರವು ಹಾಳಾಗಲು, ಇವನು ಸಂಪಾದಿಸಿದ ಸೀಮೆಗೆ ಇವನ ವಂಶದವರೇ ಸಂಪೂರ್ಣ ಅಧಿಪತಿಗಳಾಗಿ ಎರಡು ಶತಮಾನಗಳ ಕಾಲ ಕರ್ನಾಟಕದಲ್ಲಿ ಅತ್ಯಂತ ವೈಭವದಿಂದ ರಾಜ್ಯವಾಳಿದರು.

---

## ಚೆನ್ನಮಲ್ಲನ ಎರಡನೆಯ ನಿವೇದನ.

ಶಿವಾನುಭವದ ಈ ವರ್ಷದ ಸಂಯುಕ್ತ ಸಂಚಿಕೆ (೯-೧೦) ರಲ್ಲಿ ನನ್ನ "ಲಿಂಗ" ವೆಂಬ ಲೇಖನದ ಮೇಲೆ ಮತ್ತೊಂದು ಆಕ್ಷೇಪಣ ಲೇಖ ಬಂದಿದೆ. ಅದರ ಆರಂಭದ ಉಪಕ್ರಮವು ಹಿಂದಿನ ಹೂಲಿಯ ಶಾಸ್ತ್ರಿಗಳ ಲೇಖನದ ಉಪಕ್ರಮಕ್ಕೆ ತುಂಬಾ ಹೋಲುವದರಿಂದ ಪುನಃ ಅವರೇ ಈ ಲೇಖನವನ್ನು ಬರೆದಿರಬಹುದೆಂದು ನನಗೆ ತೋಚುತ್ತದೆ. ಹಿಂದಿನ ಲೇಖನದಲ್ಲಿ ಈ ವಿಷಯದಲ್ಲಿ ಬೇರೊಂದು ಸವಿಸ್ತಾರ ಲೇಖನವನ್ನು ತಾವು ಬರೆಯುವವರಿದ್ದುದಾಗಿ ಸೂಚಿಸಿಯೂ ಇದ್ದರು. ಅದರಂತೆ ಈಗ ಬರೆದಿರಬಹುದು. ಹೆಸರೇಕೆ ಬೇರೆ ಇಟ್ಟುಕೊಂಡರೋ ತಿಳಿಯದು. ಇದೇನೇ ಇರಲಿ. ನನಗೆ ಈ ವಿಷಯದಲ್ಲಿ ಹೆಚ್ಚಿಗೆ ಕೆಲಸವಿಲ್ಲ.

ಈಗ ಅವರು ಅನ್ನುವದೇನೆಂಬುದನ್ನು ನೋಡೋಣ. ಲೇಖನದ ಅರ್ಧಕ್ಕರ್ಧ ಭಾಗವೆಲ್ಲಾ ನನಗೆ ಪರ್ಯಾಯದ ಉಪದೇಶವೇ ಇದೆ. ನಾನೇನೋ ಪೂರ್ವ ಗ್ರಹಿಕೆಗಳಿಗೆ ಭ್ರಾಂತನಾಗಿ ದೂಷಿತ ದೃಷ್ಟಿಯಿಂದ ಸಂಶೋಧನವನ್ನು ನಡೆಸಿರುವೆನೆಂದು ಆಕ್ಷೇಪಕ ಮಹಾಶಯರು ತಿಳಿದುಕೊಂಡಿದ್ದಾರೆ. ಇದಕ್ಕೇನು ಹೇಳಬೇಕು? ನಾನು ಸತ್ಯದ ಭಕ್ತನು; ಗ್ರಹಿಕೆಯ ದಾಸನಲ್ಲ. ನಾನು ತಪ್ಪುಮಾಡುತ್ತಿರಬಹುದು; ಆದರೆ ಬೇಕೆಂತಲೇ ತಪ್ಪು ವಿಚಾರಗಳಿಗೆ ಬೆನ್ನುಕಟ್ಟುವವನಲ್ಲ. ಸಪ್ರಮಾಣವಾಗಿ ನನ್ನ ತಪ್ಪು ತೋರಿಸಿಕೊಟ್ಟರೆ ಅಂಥವರನ್ನು ನಾನು ತುಂಬಾ ವಂದಿಸಿ ನನ್ನ ತಪ್ಪನ್ನೊಪ್ಪಿಕೊಳ್ಳುವೆನು. ಇಲ್ಲದಿದ್ದರೆ ಬರಿ ಜಗಿದಾಟಕ್ಕೆ ನಾನು ಒಪ್ಪಲಾರೆನು. ಇದು ನನ್ನ ಸತ್ಯದ ಭಕ್ತಿ.

ಇನ್ನೇನು? ಇಡೀ ಲೇಖನದಲ್ಲೆಲ್ಲ ನೋಡಿದರೆ ಹೊರಡುವ ಮಾತುಗಳು ಎರಡು. ಅವು ಯಾವವೆಂದರೆ--

೧. ಯಜ್ಞಸ್ತಂಭವು ಲಿಂಗಸ್ವರೂಪಕ್ಕೆ ಬಂತು.
೨. ಮುಖಲಿಂಗಗಳು ಪ್ರಚಾರದಲ್ಲಿದ್ದವು.

ಹೌದು; ನಾನೆಲ್ಲಿ ಇಲ್ಲವೆನ್ನುತ್ತೇನೆ? ನನ್ನ ಲೇಖನೆಗಳಲ್ಲಿ ಈ ಮಾತನ್ನು ಮೊದಲೇ ಹೇಳಿದ್ದೇನೆ. ಒಂದೊಂದು ಕಾಲದಲ್ಲಿ ಲಿಂಗಕ್ಕೆ ಒಂದೊಂದು ರೂಪ ಬರುತ್ತ ನಡೆಯಿತೆಂದು ತೋರಿಸಿಯೇ ಇದ್ದೇನೆ. ಆಕ್ಷೇಪಕ ಮಹಾಶಯರು ಇಷ್ಟು ಹೇಳಿದ ಮಟ್ಟಿಗೆ ಲಿಂಗಕ್ಕೆ ಒಂದು ಕಾಲದಲ್ಲಿ ಶಿಶ್ನಾಕಾರವಿರಲಿಲ್ಲವೆಂದು ಹೇಗೆ ಸಿದ್ಧಮಾಡಿದಹಾಗಾಯಿತೋ ನನಗಂತೂ ತಿಳಿಯಲಿಲ್ಲ. ನಾನು ಕಂಡ ಲಿಂಗಗಳನ್ನೇ ಅನ್ಯರು ಕಂಡಿದ್ದರೆ ಬೇರೆ ತತ್ವವು ಸ್ಫುರಿಸಬಹುದಾಗಿತ್ತೆಂದು ಆಕ್ಷೇಪಕರೆನ್ನುತ್ತಾರೆ. ಅದೂ ಆಗಬಹುದಾಗಿತ್ತು. ಅವುಗಳ ಚಿತ್ರಗಳೆಲ್ಲಾ ನನ್ನ ಕಡೆಗಿವೆ. ಅವುಗಳನ್ನು ಪ್ರಸಿದ್ಧಿಸುವದು ವೆಚ್ಚದ ಕೆಲಸವಾದುದರಿಂದ ಇದರ ಜೊತೆಗೆ ಸೇರಿಸಲಿಲ್ಲ.

ಇನ್ನೇನು? ನಾನು ನನ್ನ ಲೇಖನಗಳನ್ನು ಪ್ರಸಿದ್ಧಿಸುವಾಗ ಮುಂದೆ ಇಂಥ ಆಕ್ಷೇಪಗಳು ಬಂದೇ ಬರುವವೆಂದೆನಿಸಿದ್ದಿತು. ಆದರೂ ನನಗೆ ಸತ್ಯವೆನಿಸಿದ್ದನ್ನು ಇತಿಹಾಸ ಸಂಶೋಧಕರಿಗೆ ಉಪಯೋಗವಾಗಲೆಂದು ಪ್ರಕಟಿಸಿದೆನು. ಸಾಮಾನ್ಯವಾಗಿ ಎಲ್ಲರೂ ಕ್ಷೋಭೆಗೊಳ್ಳುವುದು "ಶಿಶ್ನವೆಂಬ ಶಬ್ದಕ್ಕಾಗಿ ಸರಿ. ಆದರೆ ಒಂದಾನೊಂದು ಅತಿ ಪುರಾತನಕಾ

ಲದಲ್ಲಿ ಆ ಶಬ್ದವೂ ಆಕಾರವೂ ಈಗಿನಂತೆ ಬೀಭತ್ಸವೆನಿಸುತ್ತಿರಲಿಕ್ಕಿಲ್ಲವೆಂಬ ಊಹೆಯನ್ನೂ ನನ್ನ ಆ ಲೇಖನದಲ್ಲಿ ಕಾಣಿಸಿಯೇ ಇದ್ದೇನೆ. ಭಗವದ್ಗೀತೆಯಲ್ಲಿ:—

ಮಮಯೋನಿರ್ಮಹದ್ಬ್ರಹ್ಮ ।
ತಸ್ಮಿನ್ ಗರ್ಭಂ ದದಾಮ್ಯಹಮ್ ॥
ಸಂಭವಃ ಸರ್ವಭೂತಾನಾಮ್ ।
ತತೋಭವತಿ ಭಾರತ ॥

(೧೪—೩)

ಎಂಬ ಶ್ಲೋಕದಲ್ಲಿ "ಯೋನಿ" ಎಂಬ ಶಬ್ದವು ಇಂಥ ವಿಶೇಷಾರ್ಥದಲ್ಲಿಯೇ ಬಂದಿಲ್ಲವೇ? ಶಬ್ದಕ್ಕೆ ವಿಶೇಷಾರ್ಥವಿರುವಂತೆ ಆಕಾರಕ್ಕಾದರೂ ಇರಬಲ್ಲದು. "ಲಿಂಗ" ವೆಂಬ ಶಬ್ದವು ರೂಢಾರ್ಥ ಹಾಗು ರೂಢ ಆಕಾರಗಳಿಂದ ಕೂಡಿದ್ದರೂ ಪುರಾತನರು ಅದರಲ್ಲಿ ಗೂಢಾರ್ಥವನ್ನು ಭಾವಿಸಿದ್ದರೆಂದು ನಾನು ಬರೆದಿದ್ದೇನೆ. ಹೀಗಿದ್ದರೂ ಆಕ್ಷೇಪಕ ಮಹಾಶಯರು ಉದ್ಬುದ್ಧ ಲೇಖನಗಳನ್ನು ಬರೆದು ನನ್ನನ್ನು ಯಾಕೆ ಎಳೆದಾಡುವರೋ ತಿಳಿಯದು.

ಹೂಲಿಯ ಶಾಸ್ತ್ರಿ ಮಹಾಶಯರು ನನ್ನ ಮೇಲೆ ಇಷ್ಟೊಂದು ನಿಷ್ಠುರರಾಗಿರುವುದರಿಂದ ಮುಂದೆ ವಾಚಕರು ನನ್ನಲ್ಲಿಯೂ ಶಾಸ್ತ್ರಿಗಳ ವಿಷಯದಲ್ಲಿ ನಿಷ್ಠುರತೆಯನ್ನು ಕಲ್ಪಿಸಿ ನಾನೇನಾದರೂ ಹೂಲಿಯ ಮಠದ ಠಿಕಾಣಿನ ವಿಷಯದಲ್ಲಿ ಎಂದಾದರೂ ಬರೆದಾಗ ವಿಪರೀತವಾಗಿ ತಿಳಿದುಕೊಂಡಾರೆಂದು ಸಂದೇಹವುಂಟಾಗಹತ್ತಿದೆ. ಆದುದರಿಂದ ಆ ಠಿಕಾಣಿನ ವಿಷಯದಲ್ಲಿರುವ ನನ್ನ ನಿರ್ದುಷ್ಟ ಅಭಿಪ್ರಾಯವನ್ನು ಈವಾಗಲೇ ಪ್ರಕಟಿಸುವುದು ಸರಿಯೆಂದು ಭಾವಿಸುತ್ತೇನೆ.

೧. ಹೂಲಿಯ ಮಠದ ಪೂರ್ವ ಪರಂಪರೆಯು ನಿಜವಾಗಿಯೂ ಪುರಾತನವಾದದ್ದು.

೨. ಅವರ ಪಟ್ಟಾವಳೀ ಕಾಗದಗಳಲ್ಲಿ ಬರೀ ಪಟ್ಟಪರಂಪರೆಯ ಹೆಸರುಗಳನ್ನೂ ಕಾಲವನ್ನೂ ತೋರಿಸುವ ಕೋರೀಕಾಗದದ ಪ್ರತಿಯು ಮಾತ್ರ ನಿಜವಾದ (ಸುಮಾರು ೭೦ ವರ್ಷದ ಹಿಂದಿನ) ಪ್ರತಿಯೇ ಹೌದು

ಆವರೆ ಸಂಸ್ಕೃತ ಶ್ಲೋಕಗಳಿಂದ ಕೂಡಿದ ಪಟ್ಟಾವಲೀ ಚರಿತ್ರವು "ಶಿವಾದ್ವೈತದರ್ಪಣ" ದಂತೆ ಅರ್ವಾಚೀನ ನಿರ್ಮಿತವು.

೩. ಹೂಲಿಯಲ್ಲಿ ದೇವಾಲಯಗಳಲ್ಲಿರುವ ಶಿಲಾಲಿಪಿಗಳಲ್ಲಿ ಸಂಜೀಶನ ಮಠದ ಹೊರತಾಗಿ ಉಳಿದವುಗಳಿಲ್ಲ ಪುರಾತನದವುಗಳೇ ಹೌದು. ಆದರೆ ಅದೊಂದು ಮಾತ್ರ ಪುರಾತನದ್ದೆಂದು ಭ್ರಮೆಗೊಳಿಸುವುದಕ್ಕಾಗಿ ಒಂದೆರಡು ನೂರು ವರುಷಗಳ ಹಿಂದೆ ಬರೆಯಿಸಿದ್ದು. ಈ ವಿಷಯವನ್ನು ನಾನು ಶಿವಾನುಭವದ ತ್ರೈಮಾಸಿಕದ ಏಳನೇ ಸಂಚಿಕೆಯಲ್ಲಿ ಬರೆದೇ ಇದ್ದೇನೆ.

೪. ಹೂಲಿಯ ಪಂಚವಣ್ಣಿಗೆಯ ಮಠವು ಹದಿನಾಲ್ಕು ಹದಿನೈದನೇ ಶತಮಾನಗಳ ವರೆಗೆ ಮಾಹೇಶ್ವರ ಕಾಳಾಮುಖಶೈವ ಮಠವಾಗಿದ್ದು ಮುಂದೆ ಬಸವನ ಸಂಪ್ರದಾಯಕ್ಕೆ ಸೇರಿತು. ಬಹುತರ ಕಾಳಾಮುಖರೆಲ್ಲಾ ಅದೇ ಕಾಲಕ್ಕೆ ಲಿಂಗವಂತರಲ್ಲಿ ಸೇರಿ ಹೋದರೆಂದು "ಲಿಂಗಿಗಳು" ಎಂಬ ನನ್ನ ಲೇಖನದಲ್ಲಿ ಹೇಳಿಯೇ ಇದ್ದೇನೆ.

೫. ಹೂಲಿಯ ಮಠದಲ್ಲಿರುವ ಹಳೇ ಗ್ರಂಥಗಳಲ್ಲಿ "ಗುರುರಾಜ ಚರಿತ್ರ" "ರಾಘವಾಂಕ ಪುರಾಣ" ಇವು ಪ್ರಾಚೀನ ಪ್ರತಿಗಳೇ ಹೌದು.

೬. ಛಪ್ಪನ್ನ ಪಟ್ಟಿಯಲ್ಲಿ ರಟ್ಟರಾಜರ ವಿಷಯವು ಬಂದಿದೆಯಂತೆ ಅದನ್ನು ನಾನು ಕಣ್ಣಾರೆ ನೋಡಿಲ್ಲ. ಅದರ ಬಗ್ಗೆ ನಿಶ್ಚಿತವಾಗಿ ಹೇಳಲಾರೆ.

೭. ಶಿವಾದ್ವೈತದರ್ಪಣದ ಪ್ರಾಚೀನ ಪ್ರತಿ ಅವರಲ್ಲಿ ಇಲ್ಲವೆ ಇಲ್ಲ. ಅಲ್ಲದೆ ಆ ಗ್ರಂಥವು ಎಂದಿಗೂ ಮೂರನೇ ಶತಮಾನದ್ದಲ್ಲ. ತೀರ ಅರ್ವಾಚೀನಕಾಲದ್ದು.

೮. ಅದ್ಭುತ ಕಾಲಜ್ಞಾನವನ್ನು ರಚಿಸಿದವರು ಇನ್ನೂ ಜೀವಿಸಿದ್ದರೂ ಇರಬಹುದು. ಅದು ಸಾವಿರ ವರುಷಗಳಿಗಿಂತ ಮುಂಚಿನದಂತೂ ಅಲ್ಲವೇ ಅಲ್ಲ.

ಮುಂದಿನ ಸಂಶೋಧಕರಿಗಾಗಿ ಇಷ್ಟೊಂದು ವಿಚಾರಗಳನ್ನೆಲ್ಲಾ ಉಲ್ಲೇಖಿಸಿದೆನಲ್ಲದೆ ನನ್ನಲ್ಲಿ ಇನ್ನಾವ ದುರ್ಹೇತುವೂ ಇಲ್ಲ.

---

[ಲೇಖಕರು ತಿಳಿದಂತೆ 'ಶಿವಸುತರು' ಹೂಲಿಯ ಶಾಸ್ತ್ರಿಗಳಲ್ಲ. ಅವರು ಸಂಶೋಧನ ಕಾರ್ಯದಲ್ಲಿ ಪ್ರೀತಿ ವಹಿಸಿದ ಒಬ್ಬ ವೀರಶೈವ ವಿದ್ಯಾವಂತರು ಇರುವರು. **ಸಂಪಾದಕ.**]

